# ಆಧುನಿಕ ಸಂವಹನ ಮಾಧ್ಯಮಗಳು
# ಮತ್ತು
# ಕನ್ನಡದ ಅಭಿವೃದ್ಧಿ

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ

ಸಂಶೋಧನೆ
ಟಿ.ಸಿ. ಪೂರ್ಣಿಮಾ




ಸಾಹಿತ್ಯ ಮತ್ತು ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೦೧

07

# ಆಧುನಿಕ ಸಂವಹನ ಮಾಧ್ಯಮಗಳು
# ಮತ್ತು
# ಕನ್ನಡದ ಅಭಿವೃದ್ಧಿ

**ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ**


ಸಂಶೋಧನೆ

**ಟಿ.ಸಿ. ಪೂರ್ಣಿಮಾ**

ಮಾರ್ಗದರ್ಶಕರು

**ಡಾ. ಕರೀಗೌಡ ಬೀಚನಹಳ್ಳಿ**






ಸಾಹಿತ್ಯ ಮತ್ತು ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬

೨೦೦೧

07

## ಮಾರ್ಗದರ್ಶಕರ ದೃಢೀಕರಣ ಪತ್ರ

ಶ್ರೀಮತಿ ಟಿ.ಸಿ. ಪೂರ್ಣಿಮಾ ಇವರು ಆಧುನಿಕ ಸಂವಹನ ಮಾಧ್ಯಮಗಳು ಮತ್ತು ಕನ್ನಡದ ಅಭಿವೃದ್ಧಿ ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ.

ಇವರು ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಜುಲೈ ೨೦೦೧
ವಿದ್ಯಾರಣ್ಯ

ಡಾ. ಕರೀಗೌಡ ಬೀಚನಹಳ್ಳಿ
ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು
ಭಾಷಾಂತರ ವಿಭಾಗ
ಸಾಹಿತ್ಯ ಮತ್ತು ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ
ಹಂಪಿ

07

## ಪ್ರಮಾಣ ಪತ್ರ

ಆಧುನಿಕ ಸಂವಹನ ಮಾಧ್ಯಮಗಳು ಮತ್ತು ಕನ್ನಡದ ಅಭಿವೃದ್ಧಿ ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಲು ಡಾ.ಕರೀಗೌಡ ಬೀಚನಹಳ್ಳಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಬಳಸಿಕೊಂಡಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಜುಲೈ ೨೦೦೧
ಬೆಂಗಳೂರು

**ಟಿ.ಸಿ. ಪೂರ್ಣಿಮಾ**
ಭಾರತೀಯ ವಾರ್ತಾ ಸೇವೆ
ವಾರ್ತಾ ಮತ್ತು ಪ್ರಸಾರ ಸಚಿವಾಲಯ
ಬೆಂಗಳೂರು



ದಾರಿ ಮುಗಿಯುವ ಮೊದಲೇ
ನಂದಿಹೋದ ಬೆಳಕು
**ಡಾ. ವಿ. ಶಿವಾನಂದ** ಅವರಿಗೆ

# ಕೃತಜ್ಞತೆಗಳು

ಬಹಳ ಪ್ರೀತಿಯಿಂದ ಈ ಅಧ್ಯಯನ ಮಾಡಿದ್ದೇನೆ.

ಇಂತಹುದೊಂದನ್ನು ಮಾಡಬೇಕೆನ್ನುವ ನನ್ನ ತಹತಹಕ್ಕೆ ಕಣ್ತೆರೆದ ಡಾ. ವಿ. ಶಿವಾನಂದ ಅರ್ಧಕ್ಕೇ ಕಣ್ಮುಚ್ಚಿಕೊಂಡಾಗ ಸ್ವಲ್ಪಕಾಲ ದಿಕ್ಕೆಟ್ಟೆ. ಬಟ್ಟ ಬಯಲಲ್ಲಿ ಒಬ್ಬಂಟಿಯೇನೋ ಅನ್ನಿಸಿಬಿಟ್ಟಿತು. ಕಂಗೆಟ್ಟ ಕಾಲಕ್ಕೆ ಬೆಳಕಾಗಿ ಹೊಳೆದವರು ಆದಿಚುಂಚನಗಿರಿಯ ಮಠಾಧೀಶರಾದ ಪೂಜ್ಯ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿ ಮತ್ತು ಸುತ್ತೂರು ಮಠಾಧೀಶರಾದ ಪೂಜ್ಯ ಶ್ರೀ ಶಿವರಾತ್ರಿ ದೇಶಿಕೇಂದ್ರ ಸ್ವಾಮೀಜಿಯವರು. "ಇಂತಹದೊಂದು ದಾಖಲೆಯಾಗಿ ಉಳಿಯುವ ಕೆಲಸ ಮಾಡಿ" ಎಂದು ಆಶೀರ್ವದಿಸಿ ಕಳೆದುಕೊಂಡಿದ್ದ ಆತ್ಮವಿಶ್ವಾಸವನ್ನು ಮತ್ತೆ ನನ್ನಲ್ಲಿ ತುಂಬಿದ ಗುರುದ್ವಯರಿಗೆ ನನ್ನ ಭಕ್ತಿ, ಪ್ರೀತಿ, ವಿನಯ ತುಂಬಿದ ಪ್ರಣಾಮಗಳು.

ರಾಜ್ಯದಲ್ಲಿ ಮೊದಲ ಬಾರಿಗೆ ಕನ್ನಡತಿಯೊಬ್ಬಳನ್ನು ಗುರುತಿಸಿ, ಮುಖ್ಯಮಂತ್ರಿಯವರ ಸಚಿವಾಲಯದಲ್ಲಿ ವಿಶೇಷಾಧಿಕಾರಿಯಾಗಿ ನೇಮಿಸಿಕೊಂಡು ವೃತ್ತಿ ಹಾಗೂ ಪ್ರವೃತ್ತಿ ಜೀವನವೆರಡರಲ್ಲೂ ನನ್ನ ಆತ್ಮವಿಶ್ವಾಸವನ್ನು ಇಮ್ಮಡಿಗೊಳಿಸಿದವರು ಸನ್ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಎಸ್.ಎಂ. ಕೃಷ್ಣ ಹಾಗೂ ಮೇಡಂ ಶ್ರೀಮತಿ ಪ್ರೇಮಾ ಕೃಷ್ಣ. ಈ ಸಂದರ್ಭದಲ್ಲಿ ಅವರಿಬ್ಬರನ್ನೂ ಸ್ಮರಿಸಲೇಬೇಕು.

ಡಾ. ಶಿವಾನಂದ ಅವರ ನಿಧನದಿಂದ ದಾರಿಗೆಟ್ಟಿದ್ದ ನನ್ನ ಅಧ್ಯಯನಕ್ಕೆ ಮತ್ತೆ ದೀಪದೋರಿದವರು ಡಾ. ಕರೀಗೌಡ ಬೀಚನಹಳ್ಳಿ. ನನಗೆ ಮಾರ್ಗದರ್ಶನ ಮಾಡುವಲ್ಲಿ ಅವರು ತೋರಿದ ಉತ್ಸಾಹ, ಕಾಳಜಿ, ನೀಡಿದ ಸಲಹೆ, ಮಹಾಪ್ರಬಂಧವನ್ನು ಓದಿ, ತಿದ್ದಿ ಕೊಟ್ಟ ಸಹಕಾರಕ್ಕೆ ನಾನು ಋಣಿ. ಮಾರ್ಗದರ್ಶಕರಾಗಿ ಅವರು ಆ ಜವಾಬ್ದಾರಿ ಹೊರಬೇಕಾಗುತ್ತದೆಯಾದರೂ ಗುರುಪತ್ನಿಗೆ ಅಂತಹ ಬಾಧ್ಯತೆಗಳಿರಬೇಕಾಗಿಲ್ಲ. ಆದರೂ ಶ್ರೀಮತಿ ಕುಸುಮಾ ನೀಡಿದ ಬೆಂಬಲ ಹಾಗೂ ಸಹಕಾರವನ್ನು ನಾನು ಮರೆಯಲಾರೆ. ಡಾ. ಕರೀಗೌಡ ಬೀಚನಹಳ್ಳಿ ಮತ್ತು ಮನೆಯವರಿಗೆ ನನ್ನ ಕೃತಜ್ಞತೆಗಳು.

ಮೊದಲ ಮಾರ್ಗದರ್ಶಕರು ದಿವಂಗತರಾದ ಹಿನ್ನಲೆಯಲ್ಲಿ ಉದ್ಭವಿಸಿದ ಆಡಳಿತಾತ್ಮಕ ತೊಡಕನ್ನು ಬಿಡಿಸಿಕೊಟ್ಟವರು ಉನ್ನತ ಶಿಕ್ಷಣ ಸಚಿವರಾದ ಮಾನ್ಯ ಡಾ. ಜಿ. ಪರಮೇಶ್ವರ್, ಕನ್ನಡ ಸಂಸ್ಕೃತಿ ಸಚಿವೆ ಮಾನ್ಯ ಶ್ರೀಮತಿ ರಾಣಿ ಸತೀಶ್ ಹಾಗೂ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾದ ಪ್ರೊ. ಬರಗೂರು ರಾಮಚಂದ್ರಪ್ಪನವರು. ಮೂವರೂ ಇದನ್ನು ಮನಸಾರೆ ಮಾಡಿಕೊಟ್ಟಿದ್ದಾರೆ. ಇವರ ನೆರವಿರದೇ ಹೋಗಿದ್ದರೆ ಬಹುಶಃ ನನ್ನ ಅಧ್ಯಯನವೇ ನಿಂತು ಹೋಗುತ್ತಿತ್ತು. ಇವರಿಗೆ ನನ್ನ ಅನನ್ಯ ಆಭಾರಗಳು.

ನನ್ನ ಅಧ್ಯಯನಾವಧಿಯಲ್ಲಿ ಕನ್ನಡ ವಿಶ್ವವಿದ್ಯಾಲಯ ಇಬ್ಬರು ಕುಲಪತಿಗಳನ್ನು, ಇಬ್ಬರು ಕುಲಸಚಿವರನ್ನು ಕಂಡಿದೆ. ಕುಲಪತಿಗಳಾಗಿ ಡಾ. ಎಂ.ಎಂ. ಕಲಬುರ್ಗಿ ಹಾಗೂ ಡಾ. ಹೆಚ್.ಜೆ. ಲಕ್ಕಪ್ಪಗೌಡರೂ, ಕುಲಸಚಿವರಾಗಿ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್ ಹಾಗೂ ಡಾ. ಕೆ.ವಿ. ನಾರಾಯಣ ಅವರು ಪ್ರೋತ್ಸಾಹ ನೀಡಿ ಸಹಕರಿಸಿದ್ದಾರೆ. ಡಾ. ಲಕ್ಕಪ್ಪಗೌಡರಂತೂ ನನ್ನ ಅಧ್ಯಯನದ ಬಗ್ಗೆ ವಿಶೇಷ ಆಸಕ್ತಿ ತೋರಿದ್ದಾರೆ. ಇವರೆಲ್ಲರ ಸಹಾಯ, ಸಹಕಾರಗಳಿಗೆ ನಾನು ನಮ್ರಳಾಗಿದ್ದೇನೆ.

ನಾನು ಈ ಅಧ್ಯಯನವನ್ನು ಪೂರೈಸಲೇಬೇಕು ಎಂದು ಸಮಯ ನಿಗದಿಪಡಿಸಿ ಕುಳಿತವರೆಂದರೆ, ನನ್ನ ಆತ್ಮೀಯರೂ, ಕನ್ನಡದ ಹೆಸರಾಂತ ಕವಿಗಳೂ ಆದ ಡಾ. ಸಾ.ಶಿ. ಮರುಳಯ್ಯನವರು. ಅದೇ ರೀತಿ ಕನ್ನಡದ ಮತ್ತೊಬ್ಬ ಮಹತ್ವದ ಕವಿ, ಚಿಂತಕರೂ ಪ್ರೊ. ಕೆ.ಎಸ್. ನಿಸ್ಸಾರ್ ಅಹಮದ್ ಅವರೂ ನನ್ನ ಚಟುವಟಿಕೆಗಳ ಬಗ್ಗೆ ಹೆಮ್ಮೆ ವ್ಯಕ್ತಪಡಿಸುತ್ತಾರೆ. ಇವರಿಗೆ ವಿನಮ್ರ ನಮನಗಳನ್ನು ಸಲ್ಲಿಸುತ್ತೇನೆ.

ಈ ಮಹಾಪ್ರಬಂಧವನ್ನು ಸಿದ್ಧಪಡಿಸುವ ಹೊತ್ತಿನಲ್ಲಿ ನಾನು ಹಲಮಂದಿ ಭಾಷಾತಜ್ಞರು, ವಿದ್ವಾಂಸರು, ಕನ್ನಡಪರ ಚಿಂತಕರು, ಮಾಧ್ಯಮತಜ್ಞರನ್ನು ಕಂಡು ಚರ್ಚಿಸಿ, ವಿಚಾರ ವಿನಿಮಯ ನಡೆಸಿದ್ದೇನೆ. ಸಂದರ್ಶನಗಳನ್ನು ಪಡೆದಿದ್ದೇನೆ. ಪ್ರೊ. ಜಿ. ವೆಂಕಟಸುಬ್ಬಯ್ಯ, ಪ್ರೊ ದೇ. ಜವರೇಗೌಡ, ಪ್ರೊ. ಎಂ. ಚಿದಾನಂದಮೂರ್ತಿ, ಶ್ರೀ ಜಿ. ನಾರಾಯಣ, ಪ್ರೊ. ಬರಗೂರು ರಾಮಚಂದ್ರಪ್ಪ, ಶ್ರೀ ವಿ.ಎಚ್. ದೇಸಾಯಿ, ಶ್ರೀ ಎ.ಆರ್. ಚಂದ್ರಮೌಳಿ ಹಾಗೂ ಶ್ರೀ ಗಂಗಾಧರ ಮೊದಲಿಯಾರ್ ಅವರು ಪ್ರೀತಿ ವಿಶ್ವಾಸಗಳಿಂದ ನನ್ನೊಂದಿಗೆ ಮುಕ್ತ ಮನಸ್ಕರಾಗಿ ಚರ್ಚಿಸಿದ್ದಾರೆ. ಅವರೆಲ್ಲರಿಗೂ ನನ್ನ ತುಂಬು ಹೃದಯದ ಕೃತಜ್ಞತೆಗಳು.

ಅಧ್ಯಯನಕ್ಕಾಗಿ ಮಾಹಿತಿ ಸಂಗ್ರಹಿಸುವ ಹೊತ್ತಿನಲ್ಲಿ ತಮಗೆ ತೋಚಿದ್ದು, ಸಿಕ್ಕದ್ದನ್ನೆಲ್ಲ "ಇದು ನಿಮ್ಮ ಅಧ್ಯಯನಕ್ಕೆ ಆಗಬಹುದೇ?" ಎಂದು ನನ್ನ ಮುಂದೆ ಇರಿಸುತ್ತಿದ್ದವರಲ್ಲಿ ಪಿ.ಐ.ಬಿ.ಯ ನಿವೃತ್ತ ನಿರ್ದೇಶಕ ಶ್ರೀ ಹುಸೇನ್ ಅಲಿ ಅಹ್ಮದ್, ಶ್ರೀ ರಾ.ನಂ. ಚಂದ್ರಶೇಖರ್, ಶ್ರೀ ತೊ.ಸು. ನಂಜುಂಡಸ್ವಾಮಿ ಸ್ಮರಣಾರ್ಹರು. ಇವರಿಗೂ ನನ್ನ ವಿಶ್ವಾಸಪೂರ್ಣ ಕೃತಜ್ಞತೆಗಳು.

ನಾನು ಅಧ್ಯಯನ ಮಾಡುವ ಸಂದರ್ಭದಲ್ಲಿ ಹೆಚ್ಚು ತೊಂದರೆಕೊಟ್ಟಿದ್ದು ನಮ್ಮ ಕುಟುಂಬ ಮಿತ್ರ, ಆತ್ಮೀಯ ಗೆಳೆಯ ಶ್ರೀ ಅಗ್ರಹಾರ ಕೃಷ್ಣಮೂರ್ತಿಯವರಿಗೆ. ಮಹಾಪ್ರಬಂಧದ ವಸ್ತುವಿಗೆ ಸಂಬಂಧಿಸಿದಂತೆ ಮನಬಿಚ್ಚಿ ವಿಚಾರ ವಿನಿಮಯ ನಡೆಸುವ ಕೆಲಸವನ್ನು ಅವರು ಮಾಡಿದ್ದಾರೆ. ಅಧ್ಯಯನದ ವಿವಿಧ ಹಂತಗಳಲ್ಲಿ ನೆರವಾದ ಶ್ರೀ ಎಸ್.ಪಿ. ಮಹಾಲಿಂಗೇಶ್ವರ ಭಟ್‌ರಿಗೂ ಮನಪೂರ್ವಕ ಧನ್ಯವಾದಗಳನ್ನು ಅರ್ಪಿಸುತ್ತೇನೆ.

ಡಿ.ಟಿ.ಪಿ. ಮಾಡಿದ ಎಕ್ಸಲೆಂಟ್ ಗ್ರಾಫಿಕ್ಸ್‌ನ ಶ್ರೀ ಆರ್. ನಾಗರಾಜ್ ಮತ್ತು ಅವರ ಸಹೋದ್ಯೋಗಿಗಳಿಗೂ ನನ್ನ ಧನ್ಯವಾದಗಳು.

ನಂಬಿಕೆ ವಿಶ್ವಾಸಗಳಿಗೆ ಅರ್ಹರಾದ, ನಮ್ಮ ಕುಟುಂಬದ ಆತ್ಮೀಯ ಮಿತ್ರ, ಲೇಖಕ ಶ್ರೀ ಆರ್.ಟಿ. ವಿಠ್ಠಲಮೂರ್ತಿಯವರನ್ನು ಈ ಸಂದರ್ಭದಲ್ಲಿ ನೆನೆಯದಿದ್ದರೆ ಅಪರಾಧವಾದೀತು. ಅಧ್ಯಯನಕ್ಕೆ ಪೂರಕ ಪರಿಕರಗಳನ್ನು ತಂದು ಒದಗಿಸುವಲ್ಲಿಂದ ಹಿಡಿದು ನನ್ನ ಇಡೀ ಮಹಾಪ್ರಬಂಧವನ್ನು ಅಕ್ಷರವೂ ಬಿಡದೆ ಓದಿ ತಮ್ಮ ವಾದ, ವಿಚಾರ ಮಂಡಿಸುತ್ತ ಇದಕ್ಕೆ ಪುಷ್ಟಿ ತುಂಬಿದವರು ಅವರು. ನೀಡಿದ ಬೆಂಬಲ, ಸಹಕಾರಕ್ಕಾಗಿ ಶ್ರೀ ವಿಠ್ಠಲಮೂರ್ತಿಯವರಿಗೆ ಮನಃಪೂರ್ವಕ ಧನ್ಯವಾದಗಳನ್ನು ಅರ್ಪಿಸುತ್ತೇನೆ.

ನನ್ನ ಅಧ್ಯಯನದ ಸಂದರ್ಭದ ಎಲ್ಲ ಒತ್ತಡಗಳನ್ನೂ ನನ್ನ ಕಿರಿಕಿರಿ ಸಿಟ್ಟು ಸಿಡುಕುಗಳನ್ನು ಸಹಿಸಿಕೊಂಡೂ "ಗಟ್ಟಿಯಾದುದನ್ನು ಬರಿ" ಎಂದು ಉತ್ತೇಜಿಸಿದ, ಮಾಹಿತಿ ಸಂಗ್ರಹಕ್ಕೆ, ಗಣ್ಯರ ಸಂದರ್ಶನಕ್ಕೆ ಜೊತೆಗೂಡುತ್ತಿದ್ದ ಬಾಳ ಸಂಗಾತಿ ಶ್ರೀ ಕೆ.ಎಸ್. ಪ್ರಸಾದ್ ಅವರಿಗೆ ನನ್ನ ಕೃತಜ್ಞತೆಗಳನ್ನು ಯಾವ ರೀತಿಯಲ್ಲಿ ತಿಳಿಸಬೇಕೋ ತಿಳಿಯುತ್ತಿಲ್ಲ. ಅವರಿಗೆ ನೀಡಿದ ತೊಂದರೆಗಳಿಗಾಗಿ ಈಗ ನಾಚುತ್ತ, ಮರುಗುತ್ತಾ ಅವರ ಸಹನೆಯನ್ನು ಮೆಚ್ಚುತ್ತ ಅವರಿಗೆ ನನ್ನ ಪ್ರೇಮಪೂರ್ವಕ ಧನ್ಯವಾದಗಳನ್ನು ಅರ್ಪಿಸುತ್ತೇನೆ.

ಇನ್ನು ನನ್ನ ಮಗ ಟಿ. ಶಶಾಂಕ ಕೆ. ಪ್ರಸಾದ್ "ನಿಮ್ಮ ಥೀಸೀಸ್ ಬರವಣಿಗೆ ಚೆನ್ನಾಗಿ ಆಗಲಿ" ಎಂದು ಹೇಳಿ ಬೋರ್ಡಿಂಗ್ ಸ್ಕೂಲಿಗೆ ಹೊರಡುವಾಗಲೆಲ್ಲ ಅವನೂ ನಾನೂ ಹನಿಗಣ್ಣಾದದ್ದು ಸತ್ಯ. ಮಗನನ್ನು ದೂರ ಕಳಿಸುವ ಈ ಥೀಸೀಸ್‌ನ ನೆಪ ಯಾಕೆ ಬೇಕಿತ್ತು ಎಂದು ನಾನು ನೊಂದ ದಿನಗಳೂ ಇವೆ. ಅದೇ ರೀತಿ ನನ್ನ ಸಮೀಪಬಂಧು ಟಿ. ಕೆ.ಎಸ್. ಸುಬ್ರಮಣ್ಯ ತನ್ನ ಇಂಜಿನಿಯರಿಂಗ್ ಸ್ಕಿಲ್ ಬಳಸಿ ಮಹಾಪ್ರಬಂಧಕ್ಕೆ ಚಿತ್ರ ವಿನ್ಯಾಸ ಮಾಡಿದ್ದಾನೆ. ಇವರಿಗೆ ನನ್ನ ತುಂಬು ಹೃದಯದ ಥ್ಯಾಂಕ್ಸ್.

ನನ್ನನ್ನು ರೂಪಿಸುವಲ್ಲಿ ಅತ್ಯಂತ ಮಹತ್ವದ ಪಾತ್ರ ವಹಿಸಿದ ನನ್ನ ತಾಯಿ ದಿವಂಗತ ಛಾಯಾ ಹಾಗೂ ತಂದೆ ಶ್ರೀ ಟಿ.ಎ. ಚಿಕ್ಕರಾಜ್ ಅವರನ್ನು ನೆನೆಯದೇ ಹೋದರೆ ನನ್ನದು ತಪ್ಪಾದೀತು. ಅಪಘಾತದಿಂದ ತಲೆಗೆ ಪೆಟ್ಟಾಗಿ ನರಳುತ್ತಲೇ "ನಿನ್ನ ಅಧ್ಯಯನ ಇನ್ನೂ ಮುಗಿಯಲಿಲ್ಲವಾ?" ಎಂದೇ ಕೇಳುತ್ತ "ಬೇಗ ಮುಗಿಸು, ಅದು ನನ್ನ ಮಹದಾಸೆ" ಎಂದೂ ಹೇಳುತ್ತ ನನ್ನ ಅಧ್ಯಯನಕ್ಕೆ ಕುಮ್ಮಕ್ಕು ನೀಡಿದ ನನ್ನ ತಂದೆಗೆ ಪ್ರೀತಿಭಾವದ ನಮನಗಳು.

**ಟಿ.ಸಿ. ಪೂರ್ಣಿಮಾ**

# ಪರಿವಿಡಿ

# ಅಧ್ಯಯನದ ಸ್ವರೂಪ, ಉದ್ದೇಶ ಮತ್ತು ವ್ಯಾಪ್ತಿ

ಮನುಷ್ಯನ ಮನಸ್ಸು ನವನವೋನ್ಮೇಷಶಾಲಿನಿ. ಹೊಸ ಹೊಸದನ್ನು ಆವಿಷ್ಕರಿಸುವ ಅತೀವ ಕುತೂಹಲಿ. ಚಂದ್ರಲೋಕಕ್ಕೆ ಚೈತ್ರಯಾತ್ರೆ ಹೋಗುವ, ಚಿಕ್ಕೆಗಳ ಕೂಡೆ ಚಕ್ಕಂದ ಆಡುವ, ಸಮಸ್ತ ಸೌರವ್ಯೂಹವನ್ನೂ ಕ್ಷಣಾರ್ಧದಲ್ಲಿ ವಿಹರಿಸಿ ನೀಹಾರಿಕೆಯನ್ನೂ ಮುಟ್ಟಿಬರುವ ಸಾಹಸ ಪ್ರವೃತ್ತಿ ಅದರದು. ನಿರ್ಗುಣ ನಿರಾಕಾರವಾದದ್ದನ್ನು ಸಗುಣ ಸಾಕಾರಗೊಳಿಸುವ ಶಕ್ತಿ ಅದಕ್ಕಿದೆ. ಅಚಿಂತ್ಯ, ಅನೂಹ್ಯ, ಅಗೋಚರ ಎನಿಸಿದ್ದನ್ನು ಸಚಿಂತ್ಯ, ಸದ್ರೂಪ, ಸಗೋಚರಗೊಳಿಸುವ ಸಾಮರ್ಥ್ಯವೂ ಚಾತುರ್ಯವೂ ಮಾನವ ಮನಸ್ಸಿಗಿದೆ. ನಿರಂತರವಾಗಿ ಪರಿಸರದೊಡನೆ ಸ್ಪಂದಿಸುತ್ತಾ ತನ್ನ ಅನುಭವದ ಕಕ್ಷೆಯಲ್ಲಿ ಬಂದದ್ದೆಲ್ಲವನ್ನು ಕಲೆ ಅಥವಾ ವಿಜ್ಞಾನಗಳ ಮೂಲಕ ಅಭಿವ್ಯಕ್ತಗೊಳಿಸುವ ಯೋಗ್ಯತೆಯನ್ನು ಅದು ಗಳಿಸಿಕೊಂಡಿದೆ.

ಇಂತೆಲ್ಲ ಸಾಹಸಗಳಿಗೆ ಕೇಂದ್ರಬಿಂದುವಾದ ಮನಸ್ಸು ಆತ್ಮಾನುಸಂಧಾನದಿಂದಷ್ಟೇ ತೃಪ್ತವಾಗಲಾರದು. ಸ್ವಾಹಾರಾಧನೆ ಅದರ ಗತಿಗಮ್ಯ ಅಲ್ಲ. ಸುಖ ದುಃಖವೇನೇ ಇರಲಿ ತನಗಾದ ಅನುಭವವನ್ನು ಇತರರೊಂದಿಗೆ ಹಂಚಿಕೊಳ್ಳುವ ಹಂಬಲ ಅದಕ್ಕೆ. ಅದರಿಂದಾಗಿ ಹಲವು ಅಭಿವ್ಯಕ್ತಿ ಮಾಧ್ಯಮಗಳನ್ನು ಅದು ತಾನೇ ಸೃಷ್ಟಿಸಿಕೊಂಡಿದೆ. ಮುಖ್ಯವಾಗಿ ಚಿತ್ರ, ಶಿಲ್ಪ, ನೃತ್ಯ, ಸಂಗೀತ ಮತ್ತು ಸಾಹಿತ್ಯ ಎಂಬ ಐದು ಲಲಿತಕಲೆಗಳು ಅದರ ನಿರ್ಮಿತಿಗಳು. ಇವುಗಳಿಗೆ ಸೂಕ್ತ ಹಾಗೂ ಔಚಿತ್ಯಪೂರ್ಣ ಅಭಿವ್ಯಕ್ತಿ ಮಾಧ್ಯಮಗಳನ್ನೂ ಅದು ರೂಪಿಸಿಕೊಟ್ಟಿದೆ. ಚಿತ್ರಕ್ಕೆ ಬಣ್ಣ, ಶಿಲ್ಪಕ್ಕೆ ಶಿಲೆ, ಮಣ್ಣು ಅಥವಾ ಮರ, ನೃತ್ಯಕ್ಕೆ ಅಭಿನಯ, ಸಂಗೀತಕ್ಕೆ ನಾದ ಮತ್ತು ಸಾಹಿತ್ಯಕ್ಕೆ ಭಾಷೆ. ಆದರೆ ಸಾಹಿತ್ಯವನ್ನು ಹೊರತುಪಡಿಸಿ ಯಾವ ಮಾಧ್ಯಮವೂ ಸಮರ್ಥವಲ್ಲ. ಪರಿಪೂರ್ಣವೂ ಅಲ್ಲ; ಪ್ರತಿಯೊಂದಕ್ಕೂ ಅದರದೇ ಆದ ಇತಿಮಿತಿಗಳಿವೆ. ಈ ಇತಿಮಿತಿಗಳನ್ನು ಅತಿಕ್ರಮಿಸುವ ಕಸುವು ಯಾವ ಕಲಾಮಾಧ್ಯಮಕ್ಕೂ ಇಲ್ಲ. ಚಿತ್ರ, ಶಿಲ್ಪ, ನೃತ್ಯ ಕಲೆಗಳು ಸ್ಥೂಲಾರ್ಥದಲ್ಲಿ ಮೂರ್ತಕಲೆಗಳೆನಿಸಿದರೂ ಅವಕ್ಕೆ ನುಡಿವ ಬಾಯಿಲ್ಲ. ತಮಗೆ ಹೇಳುವುದಕ್ಕಾಗುವಷ್ಟನ್ನೇ ಹೇಳಿ ಉಳಿದಿದ್ದನ್ನು ಪ್ರೇಕ್ಷಕನ ಊಹೆಗೇ ಬಿಟ್ಟು ಬಿಡುತ್ತವೆ. ಸಂಗೀತವಂತೂ ಕೇವಲ ಶ್ರವಣ ಮಾಧ್ಯಮವಾದ್ದರಿಂದ ಮಾನಸಿಕ ಹಿಗ್ಗು, ಒಳತೋಟಿಗಳನ್ನು ಮಾತಿನಷ್ಟು ಪರಿಣಾಮಕಾರಿಯಾಗಿ ನಿವೇದಿಸಿಕೊಳ್ಳಲಾರದು. ಆದರೆ ಭಾಷೆಯನ್ನು ತನ್ನ ಸಾಧನವಾಗಿ ಹೊಂದಿರುವ ಸಾಹಿತ್ಯ ನಮ್ಮೊಡನೆ ಮಾತನಾಡುತ್ತೆ, ಸಂಭಾಷಿಸುವ ಮೂಲಕವೇ ಓದುಗ ಅಥವಾ ಪ್ರೇಕ್ಷಕನನ್ನು ಒಲಿಸುತ್ತೆ, ನಲಿಸುತ್ತೆ, ಅಳಿಸುತ್ತೆ ಹಾಗೂ ಅಚ್ಚರಿಗೊಳಿಸುತ್ತೆ. ಆದ್ದರಿಂದ ಸಾಹಿತ್ಯವನ್ನು ಬಿಟ್ಟು ಉಳಿದ ಮಾಧ್ಯಮಗಳು ಯಾವುದೋ ಒಂದು ಘಟ್ಟದವರೆಗೆ ಏರಿ, ಅಲ್ಲಿಯೇ ನಿಂತುಬಿಡುತ್ತವೆ.

ಆದರೆ ಭಾಷೆಯ ಮೂಲಕವೇ ಸಂಪಾದಿಸುವ ಸಾಹಿತ್ಯ ಶಬ್ದಾಂತರಾಳಕ್ಕಿಳಿದು ಅಲ್ಲಿ ಸ್ಫುರಿಸುವ ಅರ್ಥದ ಒಗಟೆಯನ್ನೊಡೆದು ಮನಂಬುಗುವ ರೀತಿಯಲ್ಲಿ ಸಂವಹಿಸಿ ಗೆಲ್ಲುತ್ತದೆ. ಆ ಕಾರಣ ಅಭಿವ್ಯಕ್ತಿ ಸಿದ್ಧಿಗೆ ಭಾಷೆಯಂತಹ ಸಮರ್ಥ ಸಾಧನ ಬೇರೊಂದಿಲ್ಲ. ನಿಜ; ಆದರೆ ಕವಿ ಮನದ ಭಾವ ಭಾವನೆಗಳು ಚಿಂತನೋನ್ನತಿಯ ಆಕಾರ ತಳೆವಲ್ಲಿ ಹಲವು ವೇಳೆ ಭಾಷೆಯ ಬಡತನ ವೇದ್ಯವಾಗದಿರದು. ಭಾವಗಳ ಸಂವಾಹಕವಾದ ಭಾಷೆ ಸಮರ್ಥ ರೀತಿಯಲ್ಲಿ ಕವಿ ಮನಸ್ಸನ್ನು ಅನಾವರಣಗೊಳಿಸಲಾಗದೆ ಕೆಲವು ವೇಳೆ ಕೀಲು ಮುರಿದು ಕೂರಬಹುದು. ಅಂದರೆ ಕವಿಯೆದೆಯ ತೀವ್ರ ಭಾವಗಳನ್ನು ಸಂವಹಿಸುವಲ್ಲಿ ಅದು ಸೋಲಬಹುದು. ಮಾತು ಸೋತೆಡೆಯಲ್ಲಿ ಮೌನ ಗೆಲ್ಲುತ್ತದೆ. ಮೂಕಾಭಿನಯವು ಮಾತಿನ ಮೂಲಕ ಮುಟ್ಟಿಸಲಾರದ್ದನ್ನು ಆಂಗಿಕ ಅಭಿನಯದ ಮೂಲಕ ಪರಿಣಾಮಕಾರಿಯಾಗಿ ಮುಟ್ಟಿಸಲು ಸಾಧ್ಯವಿದೆ. ಈ ಅರ್ಥದಲ್ಲಿ ಭರತ ಮುನಿ ತನ್ನ ನಾಟ್ಯಶಾಸ್ತ್ರದಲ್ಲಿ ವಾಚಿಕ, ಆಂಗಿಕ, ಸಾತ್ವಿಕ ಮತ್ತು ಆಹಾರ್ಯಗಳೆಂಬ ನಾಲ್ಕು ಅಭಿನಯಗಳನ್ನು ಹೇಳುತ್ತಾನೆ. ಅವುಗಳಲ್ಲಿ ವಾಚಿಕ ಮತ್ತು ಆಂಗಿಕ ಅಭಿನಯಗಳ ಪ್ರಾಧಾನ್ಯವನ್ನು ಗುರುತಿಸಬಹುದು. ತೀವ್ರ ಭಾವಗಳ ಅಭಿವ್ಯಕ್ತಿ ಸಂದರ್ಭದಲ್ಲಿ ಮಾತು ಸೋತಾಗ ಅಭಿನಯದ ಭಾಷೆ ಅಂದರೆ ಹಾವಭಾವ ವಿನ್ಯಾಸಗಳ ಮೂಲಕ ಅಭಿವ್ಯಕ್ತವಾಗುವ 'ಆಂಗಿಕ ಭಾಷೆ' ತನ್ನ ಗೆಲುವನ್ನು ಸಾಧಿಸಿಕೊಳ್ಳಬಲ್ಲುದು. ಶೋಕ ಅಥವಾ ಔತ್ಸುಕ್ಯಗಳನ್ನು ಅಭಿವ್ಯಕ್ತಿಸುವಲ್ಲಿ ನಾದಮಾಧ್ಯಮವಾಗಿ 'ಸಂಗೀತ ಭಾಷೆ' ಯಶಸ್ವಿಯಾಗಲು ಸಾಧ್ಯ. ಏನೇ ಆದರೂ ವಾಚಿಕದಷ್ಟು ಅರ್ಥವತ್ತಾಗಿ ಸಂವಹಿಸುವ ಶಕ್ತಿ ಬೇರೆ ಯಾವುದೇ ಮಾಧ್ಯಮಕ್ಕೂ ಇಲ್ಲ. ಎಲ್ಲೆಡೆಯೂ ಮಾತು ತುಂಬಾ ಮಹತ್ವದ ಪಾತ್ರ ವಹಿಸುತ್ತದೆ. ಆದ್ದರಿಂದಲೇ ಭರತ ತನ್ನ ನಾಟ್ಯಶಾಸ್ತ್ರದಲ್ಲಿ ಹೀಗೆ ಹೇಳುತ್ತಾನೆ :

*ವಾಚಿಯತ್ನಸ್ತು ಕರ್ತವ್ಯೋ ನಾಟ್ಯಸ್ಯೇಷಾತನುಃ ಸ್ಮೃತಾ||*
*ಅಂಗ-ನೇಪಥ್ಯ ಸತ್ತ್ವಾನಿ ವಾಕ್ಯಾರ್ಥಂ ವ್ಯಜಯಂತಿ: ||*
*ವಾಙ್ಮಯಾನೀಹ ಶಾಸ್ತ್ರಾಣಿ ವಾಚನಿಷ್ಠಾನಿ ತಥೈವ ಚ||*
*ತಸ್ಮಾದ್ವಾಚಃ ಪರಂ ನಾಸ್ತಿ ವಾಗ್ಘಿ ಸರ್ವಸ್ಯಕಾರಣಂ||*

'ವಾಚಿಕಾಭಿನಯಕ್ಕಾಗಿ ಯತ್ನಿಸಬೇಕು. ಅದು ನಾಟಕದ ಶರೀರ ಇದ್ದ ಹಾಗೆ. ಆಂಗಿಕ, ಆಹಾರ್ಯ ಸಾತ್ತ್ವಿಕ ವಾಚಿಕವನ್ನೇ ಪೋಷಿಸುತ್ತವೆ. ಶಾಸ್ತ್ರಗಳ ಅಸ್ತಿತ್ವವಿರುವುದು ವಾಕ್‌ನಲ್ಲಿ; ಶಬ್ದವೇ ಅವುಗಳಿಗೆ ಬುನಾದಿ. ಆದುದರಿಂದ ವಾಕ್‌ಗಿಂತ ಶ್ರೇಷ್ಠವಾದುದು ಬೇರೊಂದಿಲ್ಲ. ವಾಕ್ ಒಂದೇ ಎಲ್ಲದರ ಮೂಲ ಕಾರಣ' ಎಂದಿದ್ದಾನೆ.

ಭರತ ಮುಂದುವರಿದು ತನ್ನ ಕೃತಿಯ ೧೭ನೇ ಅಧ್ಯಾಯದಲ್ಲಿ ಪಾಠ್ಯಗುಣಗಳನ್ನು ವಿವರಿಸುತ್ತಾನೆ: ಅವು ಏಳು ಸ್ವರಗಳು, ಮೂರು ಸ್ಥಾನಗಳು, ನಾಲ್ಕು ವರ್ಣಗಳು, ಎರಡು ವಿಧದ ಕಾಕುಗಳು, ಆರು ಅಲಂಕಾರಗಳು ಮತ್ತು ಆರು ಅಂಗಗಳು. ಅನುಕ್ರಮವಾಗಿ, ಷಡ್ಜಾದಿ ಏಳು ಸ್ವರಗಳು; ಉರ, ಕಂಠ, ಶಿರಸ್ಸುಗಳೆಂಬ ಮೂರು ಸ್ಥಾನಗಳು; ಉದಾತ್ತ, ಅನುದಾತ್ತ, ಸ್ವರಿತ, ಕಂಪಿತ ಎಂಬ ನಾಲ್ಕು ವರ್ಣಗಳು; ಸಾಕಾಂಕ್ಷ, ನಿರಾಕಾಂಕ್ಷ ಎಂಬ ಎರಡು ಕಾಕುಗಳು; ಉಚ್ಚ, ದೀಪ್ತ, ಮಂದ್ರ, ನೀಚ, ದ್ರುತ, ವಿಲಂಬಿತಗಳೆಂಬ ಆರು ಅಲಂಕಾರಗಳು; ವಿಚ್ಛೇದಸ್, ಅರ್ಪಣಾ, ವಿಸರ್ಗ, ಅನುಬಂಧ, ದೀಪನ, ಪ್ರಶಮನಗಳೆಂಬ ಆರು ಅಂಗಗಳು. ಸ್ವರದ ಏರಿಳಿತಗಳನ್ನು ಕೇವಲ ಭಾವನೆಗಳಲ್ಲಷ್ಟೇ ಅಲ್ಲ, ರಂಗಸ್ಥಳದಲ್ಲಿ ನಟರ ಪರಸ್ಪರ ಅಂತರ ಹಾಗೂ ಸಂಭಾಷಣಾ ಸಂಬಂಧ ಇವುಗಳನ್ನು ಸೂಚಿಸುವಂತಿರಬೇಕು ಎನ್ನುತ್ತಾನೆ. ಹಾಸ್ಯ, ಶೃಂಗಾರಗಳಲ್ಲಿ ಪಂಚಮ, ಮಧ್ಯಮ ಸ್ವರಗಳು; ವೀರ, ರೌದ್ರ, ಅದ್ಭುತಗಳಲ್ಲಿ ಷಡ್ಜ, ರಿಷಭ ಸ್ವರಗಳು; ಕರುಣದಲ್ಲಿ ಗಾಂಧಾರ, ನಿಷಾದ ಸ್ವರಗಳು; ಬೀಭತ್ಸ, ಭಯಾನಕ ರಸಗಳಲ್ಲಿ ದೈವತ ಸ್ವರ; ದೂರದಲ್ಲಿದ್ದವರೊಡನೆ ಮಾತನಾಡುವಾಗ ಶಿರಃಸ್ಥಾನದ ಸ್ವರ,

ಅಷ್ಟು ದೂರದಲ್ಲಿಲ್ಲದವನ ಸಂಗಡ ಕಂಠಸ್ವರ, ಹತ್ತಿರದವನ ಬಳಿ ಉರಃಸ್ಥಾನದ ಸ್ವರ; ಹಾಸ್ಯ - ಶೃಂಗಾರಗಳಲ್ಲಿ ಸ್ವರಿತ - ಉದಾತ್ತ ವರ್ಣಗಳು ಬಳಕೆಯಾಗುತ್ತಿವೆ.

ಈ ರೀತಿಯಲ್ಲಿ ಮಾತಿನ ಮಹತ್ವವನ್ನು ಕ್ರೋಢೀಕರಿಸಿದ್ದಾನೆ ಭರತ ಮುನಿ. ಆ ಕಾರಣ ಅಭಿವ್ಯಕ್ತಿ ಸಿದ್ಧಿಗೆ ಭಾಷೆಯಂತಹ ಸಮರ್ಥಸಾಧನ ಬೇರೊಂದಿಲ್ಲ ಎನ್ನಬಹುದು. ಸಾಹಿತ್ಯ ಕೃತಿ ಮೈದಾಳುವುದು ಭಾಷೆಯಲ್ಲೇ. ಹಾಗಾಗಿ ಸಾಹಿತ್ಯ ಕೃತಿಗೆ ಬಹುಮುಖತೆ ಲಭ್ಯವಾಗಿದೆ. ಅದು ಬಹು ಶಿಸ್ತೀಯತೆಗಳನ್ನೊಳಗೊಂಡ ಒಂದು ಪ್ರತಿಭಾಶಾಲಿಯ ಅಭಿವ್ಯಕ್ತಿ.

ನಮ್ಮ ಅಧ್ಯಯನದ ಒಂದು ಮಗ್ಗುಲು ಭಾಷೆಯಾದರೆ ಮತ್ತೊಂದು ಸಂವಹನ ಮಾಧ್ಯಮಗಳನ್ನು ಕುರಿತದ್ದು. ಸಂವಹನ ಮಾಧ್ಯಮಗಳು ಮನುಷ್ಯನ ಜ್ಞಾನದ, ವಿಜ್ಞಾನದ ಫಲವೇ. ಅವನು ಅಭಿವ್ಯಕ್ತಿಸುವ ಮೊದಲ ಮಾಧ್ಯಮ ಭಾಷೆಯಾದರೆ ಅದನ್ನು ಗುರಿ ಸೇರಿಸುವ ಎರಡನೆ ಮಾಧ್ಯಮ ಆಧುನಿಕ ಸಂವಹನ ಸಾಧನ. ಮಾತೇ ಇರದಿದ್ದರೇ ಲೋಕವೇ ಕತ್ತಲಲ್ಲಿ ಇರುತ್ತಿತ್ತು ಎನ್ನುವ ಹಾಗೆ ಸಂಪರ್ಕ ಮಾಧ್ಯಮಗಳೇ ಜನ್ಮ ತಳೆಯದಿದ್ದಿದರೆ ಲೋಕ ಇಷ್ಟು ಪ್ರಮಾಣದ ಪ್ರಖರ ಬೆಳಕಿಗೆ ಬರುತ್ತಿತ್ತೆಂದೂ ಹೇಳಲಾಗದು. ಇದಕ್ಕೆ ನಿದರ್ಶನವಾಗಿ ಮಾಧ್ಯಮರಹಿತವಾಗಿದ್ದ ಯುಗವನ್ನು ನೆನಪಿಸಿಕೊಳ್ಳಬಹುದು. ಆಗ ಚಿಕ್ಕಚಿಕ್ಕ ಗ್ರಾಮಗಳಂತಹ ಸಾವಿರಾರು ಪ್ರಪಂಚಗಳಿದ್ದವು. ಈಗ ಎಲ್ಲವೂ ಏಕತ್ರಗೊಂಡು ಇಂದು ಇಡೀ ಪ್ರಪಂಚವೇ ಒಂದು ಗ್ರಾಮವೆನಿಸಿಕೊಳ್ಳುವುದಕ್ಕೆ ಅಸೀಮವಾದ ಸಂವಹನ, ಸಂಪರ್ಕ ಸಾಧನಗಳೇ ಕಾರಣವೆನ್ನಬಹುದು.

ಸಂವಹನೆಯ ಹಾದಿಯಲ್ಲಿ ಅನೇಕ ಅವಸ್ಥೆಗಳನ್ನು ಗುರುತಿಸಬಹುದಾಗಿದೆ. ಪ್ರಾಚೀನ ಕಾಲದ ಪಾರಂಪರಿಕ ಸಂವಹನ ವಿಧಾನಗಳಿಂದ ಮೊದಲುಗೊಂಡು ಇವತ್ತಿನ ಭೂಮ್ಯಾಕಾಶಗಳ ನಡುವೆ ತಂತಿರಹಿತ ಸಂದೇಶ ಹರಿಯುವುದರವರೆಗೂ ವಿವಿಧ ಮಜಲುಗಳಿವೆ. ಉನ್ನತ ತಂತ್ರಜ್ಞಾನದ ಸಾರ್ಥಕ ಫಲವಾಗಿ ಆಧುನಿಕ ಸಂವಹನ ಮಾಧ್ಯಮಗಳು ಮೂರ್ತಗೊಂಡಿವೆ. ಈ ಸಂವಹನ ಮಾಧ್ಯಮದ ವಿವಿಧ ಪ್ರಕಾರಗಳಲ್ಲಿ ಕನ್ನಡ ಭಾಷಾಭಿವೃದ್ಧಿಯ ಬಗ್ಗೆ ನಡೆದಿರುವ ಚರ್ಚೆ, ವಾಗ್ವಾದ, ಚಿಂತನೆಗಳನ್ನು ವಿಶ್ಲೇಷಣೆಗೆ ಒಳಗುಮಾಡುವುದು ಸಹ ಪ್ರಸ್ತುತ ಮಹಾಪ್ರಬಂಧದ ಬಹು ಮುಖ್ಯ ಉದ್ದೇಶವಾಗಿದೆ.

ಪ್ರಾಚೀನ ಕಾಲಕ್ಕಿಂತ ಆಧುನಿಕ ಯುಗದಲ್ಲಿ ಸಂವಹನ ಮಾಧ್ಯಮಗಳ ಪರಿಣಾಮ ಮತ್ತು ಬಳಕೆ ವಿಪುಲ ಮತ್ತು ವೈವಿಧ್ಯಮಯ. ಅವಿಲ್ಲದೆ ದೈನಂದಿನ ಚಟುವಟಿಕೆಗಳು ನಡೆಯುವುದೇ ಕಷ್ಟ. ಈ ಅನಿವಾರ್ಯತೆಗೆ ಅವು ನೀಡುವ ಮಾಹಿತಿ, ಕೊಡುವ ಪ್ರೇರಣೆ, ಪ್ರಭಾವ ಹಾಗೂ ಪ್ರಚೋದನೆಗಳು ಕಾರಣ. ಬದುಕಿನ ಬಹುಮುಖದರ್ಶನ ಮಾಡಿಸುವಲ್ಲಿ ಸಂವಹನ ಮಾಧ್ಯಮಗಳು ತುಂಬಾ ಯಶಸ್ವಿಯಾಗಿವೆ. ಇದು ವಿಜ್ಞಾನ ಯುಗ. ವೈಜ್ಞಾನಿಕ ಸಾಧನೆಗಳ ನೆರವಿನಿಂದ ಕುಳಿತೆಡೆಯಲ್ಲೇ ವಿಶ್ವದ ಎಲ್ಲ ಮೂಲೆಗಳ ಎಲ್ಲ ಕ್ರಿಯೆಗಳನ್ನೂ ಚಲನವಲನಗಳನ್ನೂ ವೀಕ್ಷಿಸುವ ಅನುಕೂಲಗಳು, ಸಹಸ್ರೋಪಸಹಸ್ರ ಯೋಜನೆಗಳಾಚೆಗೂ ಇದ್ದೆಡೆಯಿಂದಲೇ ಸಂಭಾಷಿಸುವ ಸೌಲಭ್ಯಗಳೂ ಉಂಟು. ಇಂತಹ ಮಾಧ್ಯಮಗಳಲ್ಲಿ ದೂರದರ್ಶನ, ಚಲನಚಿತ್ರ, ಆಕಾಶವಾಣಿ, ವರ್ತಮಾನ ಪತ್ರಿಕೆಗಳು, ಸಾಹಿತ್ಯ ಕೃತಿಗಳು ಪ್ರಮುಖವಾದವುಗಳು. ಪ್ರಾಚೀನ ಯುಗಗಳ ಶಿಲ್ಪ, ವಾಸ್ತುಶಿಲ್ಪ, ಚಿತ್ರ, ಸಾಹಿತ್ಯಗಳಷ್ಟೇ ಸಂವಹನ ಸಾಧನಗಳಾಗಿದ್ದವು. ಆದರೆ ಇಂದು, ಮೇಲೆ ಹೇಳಿದ ಪ್ರತಿಯೊಂದು ಸಂವಹನ ಮಾಧ್ಯಮವೂ ಸಂಪರ್ಕಿಯ ನೇಹಿಗನಾಗಿ ಬಿಟ್ಟಿದೆ. ಈ ಆತ್ಮೀಯತೆಯ ಮಡಿಲಲ್ಲಿ ಮಾತು ಅಥವಾ ಭಾಷೆ ಯಾವ ರೂಪದಲ್ಲಿ, ಯಾವ ಮಟ್ಟದಲ್ಲಿ ಅಭಿವೃದ್ಧಿ ಸಾಧಿಸಿದೆ ಎಂಬುದರ ವಿಶ್ಲೇಷಣೆಯನ್ನೂ ಪ್ರಸ್ತುತ ತನ್ನ ತೆಕ್ಕೆಗೆ ತೆಗೆದುಕೊಳ್ಳುವುದು.

ಈ ಸಂವಹನ ಮಾಧ್ಯಮಗಳಲ್ಲಿ ದೂರದರ್ಶನ ದೃಶ್ಯ-ಶ್ರವ್ಯ ಮಾಧ್ಯಮವೆಂತಲೂ ಆಕಾಶವಾಣಿಯನ್ನು ಶ್ರವ್ಯ ಮಾಧ್ಯಮವೆಂತಲೂ ವೃತ್ತಪತ್ರಿಕೆಯನ್ನು ಸಂಕೀರ್ಣ ಮಾಧ್ಯಮವೆಂತಲೂ ಪ್ರಸ್ತುತದಲ್ಲಿ ವರ್ಗೀಕರಿಸಿ ವಿಶ್ಲೇಷಣೆಗೆ

ಗುರಿಪಡಿಸಲಾಗುವುದು. ದೃಶ್ಯ ಮಾಧ್ಯಮಗಳ ಭಾಷೆ ಪ್ರಧಾನವಾಗಿ ಕ್ಯಾಮೆರಾ ಭಾಷೆ. ಇಲ್ಲಿ ಮಾತು ಮತ್ತು ದೃಶ್ಯಾವಳಿಗಳ ಮೂಲಕ ನಡೆಯುವ ಸಂವಹನ ಕಾರ್ಯ ಪ್ರಮುಖ. ಶ್ರವ್ಯ ಮಾಧ್ಯಮದ್ದು ಶ್ರವಣ ಭಾಷೆ. ಇಲ್ಲಿ ಸಂವಹನಕ್ಕೆ ಧ್ವನಿಯೊಂದೇ ದಾರಿ. ಸಂಕೀರ್ಣ ಮಾಧ್ಯಮದ್ದು ಔಚಿತ್ಯದಿಂದ ಕೂಡಿದ ಸರಳ ಹಾಗೂ ಗಂಭೀರ ಭಾಷೆ. ಇದು ಅಧ್ಯಯನಕ್ಕಾಗಿ ಸ್ಥೂಲವಿಂಗಡಣೆ ಮಾತ್ರ. ಈ ಪ್ರಕಾರಗಳಲ್ಲಿ ಭಾಷಾಭಿವೃದ್ಧಿಯನ್ನು ಗುರುತಿಸಿ ದಾಖಲಿಸುವುದು ಸದ್ಯದ ಅಧ್ಯಯನದ ಮೂಲೋದ್ದೇಶಗಳಲ್ಲಿ ಒಂದು ಪ್ರಮುಖವಾದ ಅಂಶವಾಗಿದೆ.

ಮೇಲೆ ಕಾಣಿಸಿದ ಸಂವಹನ ಮಾಧ್ಯಮಗಳಲ್ಲಿ ವಿಚಾರವೈವಿಧ್ಯ, ಭಾಷಾಬೆಳವಣಿಗೆ ಕುರಿತಂತೆ ವಿವರವಾದ ಚರ್ಚೆ ನಡೆಸಲಾಗುವುದು. ಜೊತೆಗೆ ಈ ಮಾಧ್ಯಮಗಳ ಹುಟ್ಟು, ಬೆಳವಣಿಗೆ, ವ್ಯಾಪಕತೆಗಳ ಬಗೆಯೂ ಪ್ರಸ್ತಾಪಿಸಲಾಗುವುದು. ಕನ್ನಡ ಭಾಷೆಯ ಅಭಿವೃದ್ಧಿಯ ಹಾದಿಯನ್ನು ಸ್ಥೂಲವಾಗಿ ಅವಲೋಕಿಸಿ ಮಾಧ್ಯಮಗಳ ಮೂಲಕ ಭಾಷೆ ಬೆಳೆಯುವ ವಿಧಿ ವಿಧಾನಗಳನ್ನು ಪರಿಶೀಲಿಸಲಾಗುವುದು. ಏಕೆಂದರೆ ಭಾಷೆಯೇ ಸಂವಹನ ಮಾಧ್ಯಮಗಳ ಮುಖ್ಯ ಅಭಿವ್ಯಕ್ತಿ ಮಾಧ್ಯಮ: ಅದನ್ನು ಅಭಿವೃದ್ಧಿಗೊಳಿಸುವ ಅನಿವಾರ್ಯತೆ ಅದಕ್ಕೆ ಇದ್ದೇ ಇದೆ; ಅದು ಆ ಕಾರ್ಯದಲ್ಲಿ ನಿರತವಾಗಿದೆ ಕೂಡ. ಆ ಕುರಿತ ಅಧ್ಯಯನ ವಿಸ್ತೃತ ಕಾರ್ಯವೇ ಆಗುವುದರಿಂದ ಪ್ರಮುಖ ಸಂವಹನ ಮಾಧ್ಯಮಗಳಾದ ದೂರದರ್ಶನ, ಆಕಾಶವಾಣಿ ಮತ್ತು ವರ್ತಮಾನ ಪತ್ರಿಕೆಗಳ ಮೂಲಕ ಆದ ಮತ್ತು ಆಗುತ್ತಿರುವ ಕನ್ನಡ ಭಾಷಾಭಿವೃದ್ಧಿಗೆ ಮಾತ್ರ ಈ ಅಧ್ಯಯನವನ್ನು ಸೀಮಿತಗೊಳಿಸಿಕೊಳ್ಳಲಾಗಿದೆ.

ಈ ಕುರಿತ ಸಮಗ್ರ ಅಧ್ಯಯನ ಈವರೆಗೆ ಕನ್ನಡದಲ್ಲಿ ನಡೆದಿಲ್ಲ. ಅಲ್ಲಿ ಇಲ್ಲಿ ಕೆಲವು ವಿದ್ವಾಂಸರು ಬರೆದ ಸಂಕ್ಷಿಪ್ತ, ಬೆರಳೆಣಿಕೆಯಷ್ಟು ಕೃತಿಗಳ ಪರಿಚಯಾತ್ಮಕ ಲೇಖನಗಳು, ವಿಚಾರಸಂಕಿರಣಗಳಲ್ಲಿ ಮಂಡಿಸಿದ ಕೆಲವು ಪ್ರಬಂಧಗಳು ಮಾತ್ರ ಸಿಗಬಹುದು. ಆದರೆ ಈ ದಿಸೆಯಲ್ಲಿ ಕನ್ನಡದಲ್ಲಿ ಹೆಚ್ಚು ಪ್ರಮಾಣದ ಅಧ್ಯಯನ ನಡೆದಿಲ್ಲ. ಈ ಕೊರತೆಯನ್ನು ತುಂಬಲು ಕೆಲವು ನಿರ್ದಿಷ್ಟ ಸಂವಹನ ಮಾಧ್ಯಮಗಳಲ್ಲಿ ಭಾಷಾಭಿವೃದ್ಧಿ ಕುರಿತ ಶಾಸ್ತ್ರೀಯ ಅಧ್ಯಯನ ನಡೆಸಲು ಪ್ರಸ್ತುತದ ವ್ಯಾಪ್ತಿಯನ್ನು ಸೀಮಿತಗೊಳಿಸಿಕೊಳ್ಳಲಾಗಿದೆ. ಇದಕ್ಕೆ ಮತ್ತೊಂದು ಕಾರಣವೆಂದರೆ ಈ ಕ್ಷೇತ್ರಗಳಲ್ಲಿ ಅಧ್ಯಯನಾರ್ಥಿಗೆ ದೀರ್ಘವಾದ ಪ್ರಯೋಗಾನುಭವವಿರುವುದು.

ಈ ಹಿನ್ನೆಲೆಯಲ್ಲಿ ಸಮಕಾಲೀನ ಸಂವಹನ ಮಾಧ್ಯಮಗಳ ಭಾಷಿಕ ಕೊಡುಗೆಯನ್ನೂ ಪರಿಶೀಲಿಸಲಾಗುವುದು. ಇದರ ಸಂಕ್ಷಿಪ್ತ ಸೂಚಿ ಹೀಗಿದೆ: ದೂರದರ್ಶನದಲ್ಲಿ ಮನೋರಂಜನ ಕಾರ್ಯಕ್ರಮ, ವಾರ್ತೆ, ಕ್ರೀಡೆ, ಜಾಹೀರಾತು ಮೊದಲಾದ ವಿಶೇಷ ಪ್ರಕಟಣೆಗಳನ್ನೂ; ಅವುಗಳ ಕನ್ನಡಪರ ಕಾರ್ಯಕ್ರಮಗಳ ವೈಖರಿ, ಅಲ್ಲಿ ಸೃಷ್ಟಿಯಾಗುವ ನೂತನ ಪದ, ಪದಪುಂಜ, ನವನಾಗರೀಕತೆ ಮೇಲೆ ಅವು ಬೀರಿದ ಪ್ರಭಾವ, ಪ್ರೇರಣೆ, ಪ್ರಯೋಜನಗಳನ್ನೂ ಚರ್ಚೆಗೆ ಒಳಗುಪಡಿಸಿ ದಾಖಲಿಸುವುದು ಈ ಮಹಾಪ್ರಬಂಧದ ಮತ್ತೊಂದು ಉದ್ದೇಶವಾಗಿದೆ. ಶುದ್ಧ ಶ್ರವಣ ಮಾಧ್ಯಮವಾದ ಆಕಾಶವಾಣಿಯ ಮನೋರಂಜನೆ, ವಾರ್ತೆ, ಕ್ರೀಡೆ, ನಾಟಕ ಮೊದಲಾದ ಸಾಂಸ್ಕೃತಿಕ ಕಾರ್ಯಕ್ರಮಗಳ ಜೊತೆಯಲ್ಲಿ ನಡೆವ ಬಹು ಮೌಲಿಕವಾದ ಆತ್ಮ - ಆಧ್ಯಾತ್ಮಪರವಾದ ಹಲವು ಗಂಭೀರ ಸ್ವಭಾವದ ಭಾಷಣಗಳು, ಶ್ರೇಷ್ಠ ಶಾಸ್ತ್ರೀಯ ಸಂಗೀತ ಮೊದಲಾದ ಕಾರ್ಯಕ್ರಮಗಳು ಎಷ್ಟರಮಟ್ಟಿಗೆ ಕನ್ನಡ ಭಾಷೆಗೆ ತಮ್ಮದಾದ ಭಾಷಾಕಾಣಿಕೆ ನೀಡಿವೆ ಎಂಬುದನ್ನೂ ಸೋದಾಹರಣವಾಗಿ ವಿವರಿಸಲಾಗುವುದು. ವರ್ತಮಾನ ಪತ್ರಿಕೆಗಳಲ್ಲಿ ಪ್ರಧಾನವಾಗಿ ದೈನಿಕ, ಸಾಪ್ತಾಹಿಕ, ಪಾಕ್ಷಿಕ ಹಾಗೂ ಮಾಸಿಕಗಳನ್ನು ಅಭ್ಯಸಿಸಿ, ಅಲ್ಲಿ ಕಾಣಸಿಗುವ ಕನ್ನಡ ಭಾಷಾ ವೈವಿಧ್ಯ - ವೈಶಿಷ್ಟ್ಯ - ವೈಚಿತ್ರ್ಯಗಳನ್ನೂ ತನ್ಮೂಲಕ ಆದ ಕನ್ನಡ ನುಡಿಯ ಪ್ರಗತಿಯ ಹೆಜ್ಜೆಗಳನ್ನೂ ಗುರುತಿಸಲಾಗುವುದು.

ಕನ್ನಡ ಭಾಷೆಯ ಅಭಿವೃದ್ಧಿಗೆ ಸೃಜನಾತ್ಮಕ ಸಾಹಿತ್ಯದ ಸಾಧ್ಯತೆ ವಿಸ್ತಾರವೂ ವೈವಿಧ್ಯವೂ ಆದುದಾಗಿದೆ. ದೂರದರ್ಶನ, ಆಕಾಶವಾಣಿ, ವರ್ತಮಾನ ಪತ್ರಿಕೆಗಳೆಂಬ ಈ ಮೂರು ಪ್ರಮುಖ ಸಂವಹನ ಮಾಧ್ಯಮಗಳ ಅಭಿವ್ಯಕ್ತಿಯಲ್ಲಿ ಕನ್ನಡ ಭಾಷೆಯ ವಾಚ್ಯ, ವ್ಯಂಗ್ಯ, ಧ್ವನಿತ ಮೊದಲಾದ ಭಾಷಾ ಹೊಳಹು, ಹೊರಚಾಚುಗಳನ್ನೂ ವೈಶಿಷ್ಟ್ಯಗಳನ್ನೂ, ಅವುಗಳ ಭಾಷಾ ಸಿದ್ಧಿ, ಶುದ್ಧಿ ಸಾಧನಗಳನ್ನೂ, ಬಳಕೆಯ ಸಂದರ್ಭದಲ್ಲಿ ಬನಿ ತುಂಬಿದ ಕನ್ನಡನುಡಿಯ ಸೊಗಡು ಸೊಬಗುಗಳನ್ನೂ, ಈ ಮಾಧ್ಯಮಗಳು ಕ್ರಮಿಸಿದ ಮಾರ್ಗಗಳನ್ನೂ, ಆ ಎಡೆಗಳಲ್ಲಿ ಕಾಣಿಸಿದ ಕನ್ನಡ ನುಡಿಯ ಬೆಡಗು ಬಿನ್ನಾಣಗಳನ್ನು ರಕ್ಷಿಸಿಕೊಂಡು ಬಂದಿರುವ ವೈಶಿಷ್ಟ್ಯಗಳನ್ನೂ ವಿವರಣೆಗೆ, ವಿಶ್ಲೇಷಣೆಗೆ ಗುರಿಪಡಿಸಲಾಗುವುದು. ಆಧುನಿಕ ಶೈಲಿಶಾಸ್ತ್ರದ ಅನ್ವಯ ಕನ್ನಡ ಭಾಷೆಯ ರಚನಾ ವಿಜ್ಞಾನ, ಸಮಾನಾಂತರತೆ ಮತ್ತು ಮಾರ್ಗಾಂತರತೆ ಮುಂತಾದವನ್ನು ಇಂದಿನ ಸಂವಹನ ಮಾಧ್ಯಮಗಳು ಯಾವ ಯಾವ ಪ್ರಮಾಣದಲ್ಲಿ ಕನ್ನಡ ನುಡಿಯ ಸೌಂದರ್ಯಾಭಿವೃದ್ಧಿಗೆ ಬಳಸಿಕೊಳ್ಳುವಲ್ಲಿ ಯಶಸ್ವಿಯಾಗಿವೆ ಎಂಬುದನ್ನೂ ನಿರ್ವಚಿಸಿಕೊಳ್ಳಲಾಗುವುದು. ಹೀಗೆ ಒಂದೊಂದು ಮಾಧ್ಯಮವೂ ತನ್ನದಾದ ವಿಶಿಷ್ಟ ಭಾಷಾವೈಖರಿಯನ್ನು ಮೆರೆದು ಕನ್ನಡ ಭಾಷೆಯ ಪುರೋಭಿವೃದ್ಧಿಗೆ ಕಾರಣವಾಗಿದೆ ಎಂಬುದನ್ನು ಈ ಅಧ್ಯಯನದಲ್ಲಿ ತೋರಿಸಿಕೊಡಲಾಗುವುದು ಮತ್ತು ಈ ಮಾಧ್ಯಮಗಳು ಕನ್ನಡ ಭಾಷೆಯನ್ನು ಬೆಳೆಸುವಲ್ಲಿ ಎದುರಿಸುತ್ತಿರುವ ಸಮಸ್ಯೆಗಳನ್ನು ಕುರಿತು ವಿವೇಚಿಸಲಾಗುವುದು. ಕನ್ನಡ ಭಾಷಾಭಿವೃದ್ಧಿಗೆ ಸಂವಹನ ಮಾಧ್ಯಮಗಳು ನೀಡಿರುವ ಸಾಧ್ಯತೆಗಳ, ಅನನ್ಯತೆಗಳ ವಿಶ್ಲೇಷಣೆ ಹಾಗೂ ಶೋಧನೆಗಳನ್ನು ಕುರಿತು ಅಧ್ಯಯನ ಮಾಡುವುದು ಪ್ರಸ್ತುತ ಮಹಾಪ್ರಬಂಧದ ಮುಖ್ಯ ಉದ್ದೇಶವಾಗಿದೆ.

ಅಧ್ಯಾಯ : ಒಂದು

# ಸಂವಹನೆ

೧. ಸಂವಹನದ ಅರ್ಥ, ವ್ಯಾಖ್ಯೆ ಮತ್ತು ಇತಿಮಿತಿಗಳು

೨. ಸಂವಹನದ ಪ್ರಕ್ರಿಯೆಗಳು

೩. ಪ್ರಾಚೀನ ಭಾರತದಲ್ಲಿ ಸಂವಹನ ವಿಧಾನಗಳು

೪. ಸಂವಹನೆ ಮತ್ತು ಭಾಷೆ

## ೧. ಸಂವಹನದ ಅರ್ಥ, ವ್ಯಾಖ್ಯೆ ಮತ್ತು ಇತಿಮಿತಿಗಳು

ಹೃದಯಸ್ಥವಾದ ಭಾವ-ಭಾವನೆಗಳನ್ನು ಇನ್ನೊಬ್ಬರಲ್ಲಿ ಹಂಚಿಕೊಳ್ಳಬೇಕೆಂಬ ಕಾತರ, ಹಂಬಲ ಪ್ರತಿಯೊಬ್ಬರಿಗೂ ಇರುತ್ತದೆ. ತಾನು ಮಾಡಿದ ಸಾಹಸವಿರಬಹುದು, ತನಗೊದಗಿದ ಆಪತ್ತಿರಬಹುದು, ನಿಧಿ ದೊರೆತಂಥ ಸಂತಸವಿರಬಹುದು, ಬದುಕೇ ಸಾಕೆನಿಸುವಷ್ಟು ನೋವಿರಬಹುದು, ತನ್ನ ಕಿವಿಗೆ ಬಿದ್ದ ಕುತೂಹಲ ಕೆರಳಿಸುವ ಮತ್ತಾವುದೋ, ಮತ್ತಾರದೋ ಘಟನೆಯಿರಬಹುದು... ಒಟ್ಟಿನಲ್ಲಿ ತನ್ನ ಹೃದಯವನ್ನು ತನ್ನ ಜೀವಕ್ಕೆ ಹತ್ತಿರವಾದವರ ಹತ್ತಿರ ತೆರೆದಿಡಬೇಕೆಂದೆನಿಸುವುದು ಸ್ವಾಭಾವಿಕ. ಮನದಲ್ಲುರಳುವ ಕಾತರ, ಕೌತುಕ, ಕೆರಳುವ ಆಸೆ - ಆಸಕ್ತಿ, ಅಳಲು, ಅನಿಸಿಕೆ ಎಲ್ಲವನ್ನೂ ಅನುಭವಿಸುವುದು ಎಷ್ಟು ಸ್ವಾಭಾವಿಕವೋ ಅದನ್ನು ಮತ್ತೊಂದೆಡೆ ಹೇಳಿಕೊಂಡು ಮನ ಹಗುರ ಮಾಡಿಕೊಳ್ಳುವ ಪ್ರವೃತ್ತಿಯೂ ಅಷ್ಟೇ ಸಹಜ. ಅದೇ ರೀತಿ ಮತ್ತೊಬ್ಬರ ಹೃದಯದ ತುಡಿತ-ಮಿಡಿತಗಳನ್ನೂ ಕೇಳಿ ತಿಳಿಯುವ ವಿಶಾಲ ಹೃದಯವೂ ಮನುಷ್ಯನದು. ಈ 'ಹೇಳುವ-ಕೇಳುವ' ಕೆಲಸವೇ ಒಂದು ವಿಚಾರದ ಸಂವಹನೆಯ ಸರಳ ಮಾರ್ಗ. ಹೀಗೆ ಒಬ್ಬರಿಂದ ಇನ್ನೊಬ್ಬರಿಗೆ, ಇನ್ನೊಬ್ಬರಿಂದ ಮತ್ತೊಬ್ಬರಿಗೆ ವಿಷಯಗಳು ಹರಡಿಕೊಳ್ಳುತ್ತಾ ಹಬ್ಬುತ್ತಾ ಪ್ರವಹಿಸುತ್ತಾ ಹೋಗುತ್ತವೆ. ಇದು ಒಬ್ಬರಿಂದ - ಒಬ್ಬರಿಗೆ ಮಾತ್ರ ನಡೆಯುವ ವಿಚಾರ ವಿನಿಮಯವೇ ಆದರೂ, ಹತ್ತು ಜನರ ಬಾಯಿಂದ ಬಾಯಿಗೆ ಹರಿದು ಪ್ರಚಾರವಾಗಬಹುದು.

ಈ ಪ್ರಚಾರ ಕ್ರಿಯೆಯ ಮೂಲ ಸ್ವರೂಪವೇ **ಸಂವಹನ.** ಮನುಷ್ಯನ ಉಗಮದೊಂದಿಗೇ ಸಂವಹನಕ್ರಿಯೆಯೂ ಪ್ರಾರಂಭವಾಯಿತು. ಆಗಷ್ಟೇ ಕಣ್ತೆರೆದು ಅಳುವ ಮಗು ತನ್ನ ಸುತ್ತಲಿನ ಪರಿಸರದೊಂದಿಗೆ ಅಳುವಿನ ಮೂಲಕವೇ ಸ್ಪಂದಿಸುವುದು ಸಂವಹನ ಕ್ರಿಯೆಯ ಮೊದಲ ಹೆಜ್ಜೆ. ಮನುಷ್ಯ ಮನುಷ್ಯನ ನಡುವೆ 'ಹೇಳಿಕೆ-ಕೇಳಿಕೆ'ಗಳು ಸೇತುವಾಗುವುದರಿಂದ ಇದಕ್ಕೆ 'ಸಂಪರ್ಕ' ಎಂಬ ಶಬ್ದ ಮೊದಲು ಚಾಲ್ತಿಯಲ್ಲಿತ್ತು. 'ಸೇರಿಸು', 'ಸಂಬಂಧವನ್ನು ಏರ್ಪಡಿಸು', 'ಮಿಳಿತಗೊಳ್ಳು', 'ಸ್ಪರ್ಶಿಸು' ಎನ್ನುವ ಅರ್ಥಗಳಿಗೇ ಸಂಪರ್ಕ ಪದ ಸೀಮಿತಗೊಳ್ಳುವುದರಿಂದಲೂ ಹೊಸ ತಾಂತ್ರಿಕ ಸಾಧನಗಳ ಆವಿಷ್ಕಾರದ ಫಲವಾಗಿಯೂ ಆ ಪದವನ್ನು ಚ್ಯುತಿಗೊಳಿಸಿ **ಸಂವಹನ** ಎಂಬ ಶಬ್ದ ಸ್ಥಾಪಿತವಾಯಿತು. 'ಕಮ್ಯುನಿಕೇಷನ್' (Communication) ಎಂಬ ಇಂಗ್ಲಿಷ್ ಪದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ 'ಸಂವಹನ' ಎಂಬ ಶಬ್ದ ಬಳಕೆಗೆ ಬಂದಿದೆ. 'ಕನ್ನಡ ರತ್ನಕೋಶ'ದ ಪ್ರಕಾರ 'ವಾಹಕ', 'ವಾಹನ' ಎನ್ನುವ ಪದಗಳು 'ಸಾಗಿಸುವ ಸಾಧನ', 'ಒಯ್ಯುವ ಸಾಧನ' ಎಂಬರ್ಥಗಳನ್ನು ಹೊಂದಿವೆ. ಹಾಗೆ ವಾಹಿನಿ = ನದಿ = ಹರಿಯುವಂಥದ್ದು ಎನ್ನುವ ಅರ್ಥವ್ಯಾಪ್ತಿಯಲ್ಲಿ, ವಿಚಾರ ಒಂದೆಡೆಯಿಂದ ಮತ್ತೊಂದೆಡೆಗೆ ಹರಿಯುತ್ತದೆ ಎನ್ನುವ ಹಿನ್ನೆಲೆಯಲ್ಲಿ 'ಸಂವಹನ' ಶಬ್ದದ ಬಳಕೆಯಿದೆ. 'ಸಂಕ್ಷಿಪ್ತ ಕನ್ನಡ ನಿಂಘಟು'ವಿನ ಪ್ರಕಾರ 'ವಹಿಸು' ಎಂಬ ಕ್ರಿಯಾಪದಕ್ಕೆ 'ಹರಿ', 'ಒಪ್ಪಿಸು' ಎಂಬರ್ಥಗಳೂ, 'ವಾಹ' ಪದಕ್ಕೆ 'ಪ್ರವಹಿಸು',

'ಹರಿ' ಎಂಬರ್ಥವೂ, 'ವಾಹಕ', 'ವಾಹನ' ಪದಗಳಿಗೆ 'ಒಯ್ಯುವ ಮಾಧ್ಯಮ', 'ಸಾಗಿಸುವ ಮಾಧ್ಯಮ' ಎಂಬರ್ಥಗಳು ಇವೆ. 'ವಾಹಿನಿ' ಎಂಬ ಪದಕ್ಕೆ 'ಹರಿಯುವುದು', 'ನದಿ', 'ಪ್ರವಾಹ' ಅರ್ಥಗಳ ಜೊತೆಗೆ 'ಗುಂಪು', 'ಸಮೂಹ' ಎಂಬರ್ಥಗಳೂ ಇವೆ. ಇದೇ ನಿಘಂಟುವಿನಲ್ಲಿ 'ಸಂವಾಹ' ಎಂಬ ಪದಕ್ಕೆ 'ಹಳ್ಳಿ', 'ಗ್ರಾಮ' ಎಂಬರ್ಥಗಳನ್ನು ನೀಡಲಾಗಿದೆ. ಈ ಪದಗಳು 'ಜನ ಸಮುದಾಯ', 'ಸಮೂಹ', 'ಗುಂಪು' ಎಂಬುವುದನ್ನು ಸಂಕೇತಿಸುವುದರಿಂದಲೂ, ವಿಚಾರಗಳು ಹರಿದು ಹೋಗಬೇಕಾದ್ದು ಜನ-ಜನರ ನಡುವೆ, ಜನ ಸಮುದಾಯಕ್ಕೆ, ಜನರ ಗುಂಪಿಗೆ ಎಂಬ ಮೂಲಕಲ್ಪನೆ ಇರುವುದರಿಂದಲೂ 'ಸಂವಹನ' ಎನ್ನುವ ಪದ 'ಸಂಪರ್ಕ' ಪದಕ್ಕಿಂತ ಹೆಚ್ಚು ವಿಸ್ತಾರವಾದ ಅರ್ಥವನ್ನು ಸ್ಫುರಿಸುವುದರಿಂದಲೂ ಅದು ವ್ಯಾಪಕ ಬಳಕೆಗೆ ಒಳಗಾಗಿದೆ.

ಕಿಟ್ಟೆಲ್ ಅವರ 'ಕನ್ನಡ-ಇಂಗ್ಲಿಷ್ ನಿಘಂಟು'ವಿನಲ್ಲಿ 'ವಹನ' ಎಂಬ ಪದಕ್ಕೇ ಅರ್ಥ ನೀಡಲಾಗಿದೆ. 'ವಹನ' 'ವಯಿನ' ಎಂಬ ಪದಕ್ಕೆ ಇಂಗ್ಲಿಷಿನಲ್ಲಿ Bearing, Carrying, Conveying, Being carried, Flowing, Moving, Proceeding ಮೊದಲಾದ ಅರ್ಥಗಳನ್ನು ನೀಡಲಾಗಿದೆ. 'ವಹ', 'ವಹಿಸು' (ಕ್ರಿಯಾಪದ), 'ವಾಹ' ಎಂಬ ಪದಗಳಿಗೂ ಇದೇ ಅರ್ಥಗಳನ್ನು ಕೊಡಲಾಗಿದೆ. 'ವಾಹನ', 'ವಾಹಕ' ಪದಗಳನ್ನು Carrier, Carriage ಮುಂತಾಗಿ ಅರ್ಥೈಸಲಾಗಿದೆ. ಇವೆಲ್ಲವನ್ನೂ ಗಮನದಲ್ಲಿರಿಸಿಕೊಂಡು ನೋಡಿದಾಗ 'ಸಂವಹನ' (ಸಂ = ಸಮ್ಯಕ್) ಎನ್ನುವುದು ಚಲನಶೀಲತೆಯನ್ನು ಅಥವಾ ಗತಿಶೀಲತೆಯನ್ನು ಹೊಂದಿರುವಂಥದ್ದು ಎಂಬುದು ಸ್ಪಷ್ಟವಾಗುತ್ತದೆ. ಆದ್ದರಿಂದಲೇ ಸಂವಹನ ಎನ್ನುವುದು ವಿವಿಧ ಮಾಧ್ಯಮ ಸಂಕೇತಗಳ ಮೂಲಕ ಒಬ್ಬರಿಂದ ಮತ್ತೊಬ್ಬರಿಗೆ ವಿಷಯಗಳು ತಿಳಿಯಪಡಿಸುವ ಕ್ರಿಯೆ ಎನ್ನಬಹುದು. ಡಿ.ವಿ. ಪರಮಶಿವಮೂರ್ತಿ ಅವರು ಹೇಳುವ ಹಾಗೆ

> *ಒಂದು ಕಡೆಯಿಂದ ಮತ್ತೊಂದು ಕಡೆಗೆ ಅಥವಾ ಒಬ್ಬರಿಂದ ಮತ್ತೊಬ್ಬರಿಗೆ ವಿವಿಧ ರೀತಿಯ ಸಂಕೇತಗಳ ಮೂಲಕ ವಿಚಾರಗಳು ಹರಡುವ ರೀತಿ - ಸಂವಹನ.*[೧]

ಈ ವ್ಯಾಖ್ಯೆಯ ಪ್ರಕಾರ ವಿಚಾರ ಒಂದೆಡೆಯಿಂದ ಮತ್ತೊಂದೆಡೆಗೆ ಪ್ರವಹಿಸುತ್ತದೆ; ಅದು ಸಂಕೇತಗಳ ಮೂಲಕ. ಇದು ಧ್ವನಿ ಸಂಕೇತವಾಗಿರಬಹುದು, ಆಂಗಿಕ ಸಂಕೇತವಾಗಬಹುದು. ಚಿತ್ರ, ಶಿಲ್ಪಕಲೆಗಳಂತಹ ದೃಗ್ಗೋಚರ ಸಂಕೇತವಾಗಬಹುದು. ಸಾಹಿತ್ಯ, ಸಂಗೀತ ಧ್ವನಿ ಅಥವಾ ಶ್ರವ್ಯ ಸಂಕೇತವಾದರೆ, ನೃತ್ಯ, ಹಾವಭಾವಭಂಗಿಗಳು, ಆಂಗಿಕ ಸಂಕೇತವಾಗಬಹುದು. ಹಾಗೆ ದೃಷ್ಟಿಗೊದಗುವ ಚಿತ್ರ, ಶಿಲ್ಪ ಕಲೆಗಳೂ ಸಂವಹನೆಗೆ ಬಳಸುವ ಸಂಕೇತಗಳೇ ಆಗುತ್ತವೆ. ಈ ಸಂಕೇತಗಳ ವಿನಃ ಸಂವಹನೆ ಸಾಧ್ಯವೇ ಇಲ್ಲ. ಹಾಗಾಗಿ ಈ ಸಂಕೇತಗಳು ಅಭಿವ್ಯಕ್ತಿ ಮಾಧ್ಯಮಗಳೆನಿಸಿಕೊಳ್ಳುತ್ತವೆ; ಸಂವಹನ ಕ್ರಿಯೆಯ ಪ್ರಮುಖ ಕೀಲಿಕೈಯಾಗುತ್ತವೆ. ಇದೇ ಅರ್ಥದಲ್ಲಿ ಇನ್ನೊಬ್ಬ ವಿದ್ವಾಂಸರು

> *Communication is the act of transmitting information, ideas and attitudes from one person to another.*[೨]

ಎಂದು ಅಭಿಪ್ರಾಯಪಟ್ಟಿದ್ದಾರೆ. ಇಲ್ಲಿ ಹೇಳಿರುವಂತೆ 'Act of transmitting' ಎಂದರೆ 'ರವಾನಿಸುವ ಕ್ರಿಯೆ' ಎನ್ನುವುದನ್ನೂ ಸಂಕೇತಗಳ ಮೂಲಕವೇ ನಡೆಸಬೇಕೆಂಬ ಒಳಅರ್ಥವಿದೆ. ರವಾನಿಸುವ ಅಥವಾ ಒಬ್ಬರಿಂದ ಮತ್ತೊಬ್ಬರಿಗೆ ಸಾಗಿಸುವ ಸಂವಹನ ಕ್ರಿಯೆಯ ಸಂದರ್ಭದಲ್ಲಿ ಬಳಕೆಗೆ ಬರುವ ಸಂಕೇತ ಅಥವಾ ಅಭಿವ್ಯಕ್ತಿ ಕ್ರಮಗಳ ಬೆಳವಣಿಗೆಯನ್ನು ಮೂರು ಹಂತಗಳಲ್ಲಿ ಗುರುತಿಸಬಹುದು :

- ಚಿತ್ರ ಲಿಪಿ - Pictographic Writing
- ಭಾವ ಲಿಪಿ - Ideographic Writing
- ಅಕ್ಷರ ಲಿಪಿ - Alphabetic Writing

ಪ್ರಾಚೀನ ಮಾನವ ನಾಗರಿಕತೆಯ ಮೊದಲ ಹೆಜ್ಜೆಗಳನ್ನು ಇಡುತ್ತಿರುವಾಗಲೇ ತನಗನಿಸಿದ್ದನ್ನು ತನ್ನವರ ಜೊತೆ ಹೇಳಿಕೊಳ್ಳುವ ತವಕ ತೋರುತ್ತಿದ್ದ. ಅದಕ್ಕಾಗಿ ಕೆಲವು ನಿರ್ದಿಷ್ಟ ಆಂಗಿಕ ಚಲನೆ ಹಾಗೂ ನಿರ್ದಿಷ್ಟ ಶಬ್ದಗಳನ್ನು ಮಾಡುತ್ತಿದ್ದ. ಆ ಶಬ್ದಗಳೇ ರೂಢಿಗತವಾದಂತೆ ಸಾಕಷ್ಟು ಮಾರ್ಪಾಡುಗಳೊಂದಿಗೆ ಮಾತಿನ ರೂಪ ಪಡೆದವು. ನಂತರ ಅವನು ಈ ಮಾತುಗಳಿಗೊಂದು ಆಕಾರ ನೀಡಬಯಸಿದ. ಹೇಳಬೇಕೆನಿಸಿದ್ದನ್ನು ಗೆರೆ, ಚುಕ್ಕೆ, ಕಣ್ಣಿಗೆ ಕಂಡ ವಸ್ತುಗಳ ಚಿತ್ರಗಳನ್ನು ಬರೆದು ತೋರಿಸತೊಡಗಿದ. ತನ್ನೆದೆಯ ಅನಿಸಿಕೆಗಳಿಗೊಂದು ಚಿನ್ಹೆ / ಆಕೃತಿ ನೀಡಿದ. ಈ ಚಿನ್ಹೆ - ಚಿತ್ತಾರಗಳೇ ಲಿಪಿ / ಚಿತ್ರ ಲಿಪಿಯ ಉಗಮಕ್ಕೆ ಮೂಲವಾದವು. ನಾಗರಿಕತೆಯ ಮೊದಲ ಸ್ವರೂಪದ ದಾಖಲೆಗಳಾದವು. ಮಾನವ ಜನಾಂಗದ ಮುನ್ನಡೆಗೆ ದಾರಿಯಾದವು.

ಹೀಗೆ ಇದ್ದುದ್ದನ್ನು ಇದ್ದ ಹಾಗೆ ಹೇಳಲೆಂದೇ ಚಿತ್ರಗಳನ್ನು ರಚಿಸುತ್ತಿದ್ದ ಮನುಷ್ಯ ಇದ್ದಕ್ಕಿದ್ದಂತೆ ಅದಕ್ಕೆ ತನ್ನ ಕಲ್ಪನಾಶಕ್ತಿಯ ಸಾಮರ್ಥ್ಯದಿಂದ ಭಾವನೆಗಳನ್ನು ತುಂಬತೊಡಗಿದ. ಭಾವನೆಗಳಿಂದ ಕೂಡಿದ ಈ ಮಾದರಿಯ ಚಿತ್ರಗಳಲ್ಲಿ ವಿಶೇಷ ಒಳಅರ್ಥಗಳು ವ್ಯಕ್ತವಾಗತೊಡಗಿದವು. ಚಿತ್ರಲಿಪಿಯಲ್ಲಿ ಸೂರ್ಯನಂತೆ ಕಂಡುಬರುತ್ತಿದ್ದ ಒಂದು ದೊಡ್ಡ ಸೊನ್ನೆ ಇಂತಹ ಲಿಪಿಯಲ್ಲಿ ಒಂದು ಇಡೀ ದಿನವನ್ನೇ ಸಂಕೇತಿಸುತ್ತಿತ್ತು, ಭಾವನಾತ್ಮಕ ಅರ್ಥಗಳನ್ನು ಹೊಮ್ಮಿಸುತ್ತಿತ್ತು. ಹಾಗೇ ಇದು ಭಾವ ಲಿಪಿ ಎಂಬ ಹೆಸರು ಪಡೆಯಿತು.

ತದನಂತರದ ಹಂತವೇ ಅಕ್ಷರ ಲಿಪಿ ಚುಕ್ಕಿ, ಚಿತ್ತಾರ, ಗೆರೆಗಳೆಲ್ಲ ಭಾವನೆಗಳನ್ನು ತುಂಬಿಕೊಂಡು ಬೇರೆ ಬೇರೆ ಅಕ್ಷರಗಳಾಗಿ ಮೈದಳೆದವು. ಅಕ್ಷರ ಅಕ್ಷರವನ್ನು ಜೋಡಿಸಿ ಬರೆದಾಗ ಆಡು ಮಾತಿನಂತಹ ಪದಗಳು ಸೃಷ್ಟಿಯಾದವು. ಒಂದು ಹಸುವಿನ ಚಿತ್ರ ಬರೆದು ಇದು ಹಸು ಎಂದು ಸಂಕೇತಿಸುವುದಕ್ಕಿಂತ ಅಕ್ಷರಗಳ ಮೂಲಕ ತಿಳಿಸುವುದು ಸುಲಭವಾಯಿತು. ಅಕ್ಷರಜ್ಞಾನಕ್ಕೆ ನಾಂದಿಯಾಯಿತು.

ಅಕ್ಷರ ಲಿಪಿಗಳಲ್ಲೂ ಮೂರು ಬಗೆಯ ಲಿಪಿಗಳು ಭಾರತದಲ್ಲಿ ಬೆಳೆದು ಬಂದಿವೆ :

- ಸಿಂಧೂ ಲಿಪಿ
- ಬ್ರಾಹ್ಮಿ ಲಿಪಿ
- ಖರೋಷ್ಠಿ ಲಿಪಿ

ಅತೀ ಪ್ರಾಚೀನವೆನಿಸಿದ ಸಿಂಧೂಲಿಪಿ ಹೆಚ್ಚಾಗಿ ಬಳಕೆಗೆ ಬಂದಿರಲಿಲ್ಲವೆನಿಸುತ್ತದೆ. ಇದೇ ಪ್ರಾರಂಭಿಕ ಹಂತದ ಲಿಪಿಯಾದ್ದರಿಂದ ಅದನ್ನು ಸಮರ್ಥವಾಗಿ ಓದಿ ಅರಿಯುವುದೂ ಸಾಧ್ಯವಾಗಿಲ್ಲ. ನಂತರ ಬಂದ ಬ್ರಾಹ್ಮಿ ಹಾಗೂ ಖರೋಷ್ಠಿ ಲಿಪಿಗಳು ಹೇರಳವಾಗಿ ಲಭ್ಯವಾಗಿವೆ. ಕ್ರಿಸ್ತಪೂರ್ವ ೩ನೇ ಶತಮಾನದ ವೇಳೆಗೇ ಬ್ರಾಹ್ಮಿ ಹಾಗೂ ಖರೋಷ್ಠಿಲಿಪಿಗಳು ಭರತಖಂಡದಲ್ಲಿ ಬಳಕೆಯಲ್ಲಿದ್ದವು. ಕ್ರಿಸ್ತಶಕ ೨ ಅಥವಾ ೩ನೇ ಶತಮಾನದ ನಂತರ ಬ್ರಾಹ್ಮಿಲಿಪಿ ಬೇರೆ ಬೇರೆ ರೂಪಗಳನ್ನು ಪಡೆಯತೊಡಗಿತು. ಇಂದು ನಾವು ಬಳಸುತ್ತಿರುವ ಲಿಪಿಗೆ ಬ್ರಾಹ್ಮಿಲಿಪಿಯೇ ಮೂಲವೆನಿಸಿದೆ.

ಹೀಗೆ ಸಂವಹನ ಕ್ರಿಯೆಯ ಹಲವು ಮಜಲುಗಳು ಮನುಕುಲ ಕಂಡ ನಾಗರಿಕತೆಯ ಬೆಳವಣಿಗೆಯ ಜೊತೆಗೇ ಸಂಬಂಧ ಪಡೆಯುತ್ತವೆ. ಸಂವಹನ ಕ್ರಿಯೆಯ ಮಜಬೂತಾದ ಮೆಟ್ಟಿಲುಗಳ ಮೇಲೆ ನಾಗರಿಕ ಮನುಷ್ಯ ಹೆಜ್ಜೆಯೂರಿ ಮೇಲೆ ಬಂದಿದ್ದಾನೆ. ಕೆಳಸ್ತರದ ಪ್ರಾಣಿಗಳಿಗಿಂತ ಬಹಳ ಎತ್ತರದಲ್ಲಿ ನಿಂತ ಚತುರ ಪ್ರಾಣಿ ಎನಿಸಿದ್ದಾನೆ.

**ಇಹ ಶಿಷ್ಟಾನುಶಿಷ್ಟಾನಾಂ ಶಿಷ್ಟಾನಾಮಪಿ ಸರ್ವಥಾ |**
**ವಾಚಾಮೇವ ಪ್ರಸಾದೇನ ಲೋಕಯಾತ್ರಾ ಪ್ರವರ್ತತೆ ||೩||**

*ಪ್ರಪಂಚದ ವ್ಯವಹಾರಕ್ಕೆಲ್ಲ ಮಾತುಗಳೇ ಮೂಲ. ಅವು ವೈಯಾಕರಣರು ಸಾಧುವೆಂದು ನಿರ್ಣಯಿಸಿರತಕ್ಕುವಾಗಿರಬಹುದು. ಇಲ್ಲವೆ ಹಾಗೆ ನಿರ್ಣಯಿಸದೆ ಇರುವಂತಹವಾಗಿರಬಹುದು.*

**ಇದಮಂಧಂ ತಮಂಕೃತ್ಸ್ನಂ ಜಾಯೇತ ಭುವನತ್ರಯಂ |**
**ಯದಿ ಶಬ್ದಾಹ್ವಯಂ ಜ್ಯೋತಿರಾಸಂಸಾರಾನ್ನ ದೀಪ್ಯತೇ ||೪||**

*ಶಬ್ದವೆಂಬ ಜ್ಯೋತಿ ಸೃಷ್ಟಿ ಕಾಲದಿಂದಲೂ ಹಿಡಿದು ಇಲ್ಲಿಯವರೆಗೂ ಬೆಳಗದೆ ಇದ್ದಿದ್ದರೆ ಈ ಮೂಜಗವೆಲ್ಲವೂ ಕತ್ತಲಲ್ಲೇ ಮುಳುಗಿರುತ್ತಿತ್ತು*

ಎಂದು ದಂಡಿ ತನ್ನ '*ಕಾವ್ಯದರ್ಶ*'ದ ಮೊದಲ ಪರಿಚ್ಛೇದದಲ್ಲಿ ಈ ರೀತಿ ವರ್ಣಿಸಿ ಭಾಷೆ ಲೋಕದ ಬೆಳಕು ಎಂದು ಸಾರಿದ್ದಾನೆ.

ಜಗತ್ತಿಗೆ ಬೆಳಕಾಗುವುದಕ್ಕೆ ಭಾಷೆಯೇ ಮೂಲ; 'ಮಾತು ಮಾತಲ್ಲ, ಮಾತೆಂಬುದು ಜ್ಯೋತಿರ್ಲಿಂಗ' ಎಂದಿದ್ದಾರೆ ಶರಣರು. ಮನುಷ್ಯ ಭಾವುಕನಾಗಿರುವುದರಿಂದಲೂ ಸಮಾಜವೆನ್ನುವ ಒಂದು ವ್ಯಾಪಕ ವ್ಯವಸ್ಥೆಗೆ ಬದ್ಧನಾಗಿರುವುದರಿಂದಲೂ ಮಾತು ಅವನ ಮೂಲಭೂತ ಅವಶ್ಯಕತೆಗಳ ಸಾಲಿಗೆ ಸೇರಿಕೊಳ್ಳುತ್ತದೆ.

ತನಗನಿಸಿದ್ದನ್ನು ಇನ್ನೊಬ್ಬರ ಜೊತೆ ಹೇಳಿಕೊಳ್ಳುವುದೇ 'ಸಂವಹನೆ.' ನಾಗರಿಕತೆಯ ವಿಕಾಸದೊಂದಿಗೆ ಅಭಿವೃದ್ಧಿಯ ಹಾದಿ ಹಿಡಿದ ಭಾಷೆ ಸಂವಹನೆಯ ಪ್ರಧಾನ ಭಾಗವಾಗಿ ಹಂತ ಹಂತವಾಗಿ ಬೆಳೆಯತೊಡಗಿತು. ಮನುಷ್ಯ ತನ್ನನ್ನು ತಾನು ಅಭಿವ್ಯಕ್ತಿಸಿಕೊಳ್ಳಲು, ತನ್ನ ಅನಿಸಿಕೆ, ಸಂದೇಶಗಳನ್ನು ಮತ್ತೊಬ್ಬರಿಗೆ ಮುಟ್ಟಿಸಲು, ಒಂದು ಸಮುದಾಯದ ಆಗುಹೋಗುಗಳನ್ನು ಇನ್ನೊಂದೆಡೆಗೆ ರವಾನಿಸಲು ಹಲವಾರು ಮಾರ್ಗಗಳನ್ನು ಕಂಡುಕೊಂಡ. ಈ ಬಗೆಯ ಸಂಪರ್ಕ ಕಲ್ಪಿಸುವ ಸಂವಹನ ಶಬ್ದದ ವ್ಯಾಪ್ತಿಯಲ್ಲೇ ಮಾನವ ಸಂಬಂಧದ ಹುಟ್ಟು, ಬೆಳವಣಿಗೆ : ಅನುಭವ, ಅನಿಸಿಕೆ, ಅಭಿಪ್ರಾಯ ವಿನಿಮಯದ ಎಲ್ಲ ವಿಧಿವಿಧಾನಗಳೂ ಸೇರಿಕೊಂಡಿವೆ. ಮನುಷ್ಯ-ಮನುಷ್ಯನ ನಡುವೆ ಸಂವಹನ ಏರ್ಪಟ್ಟಿದ್ದೇ ಸಾಮಾಜಿಕ ಬಾಂಧವ್ಯದ ತಳಹದಿಯಾಗಿದೆ.

ಸಂಪರ್ಕದಿಂದ ಸಮಾಜ ಮುಂದುವರೆಯುತ್ತದೆ; ಸಮಾಜ ಇರುವುದೇ ಮಾನವ - ಮಾನವರ ನಡುವಿನ ಸಂಪರ್ಕದಿಂದ. ಆತನಿಗೆ ಸಂಪರ್ಕ ಸಾಮರ್ಥ್ಯ ಇರದಿದ್ದಲ್ಲಿ ಆತನೂ ಇತರ ಪ್ರಾಣಿಗಳಂತೆ ಉಳಿದಿರುತ್ತಿದ್ದ ಎಂದು ಪ್ರಸಿದ್ಧ ಸಮಾಜ ಶಾಸ್ತ್ರಜ್ಞ ಜಾನ್‌ಡ್ಯೂಯಿ ಹೇಳಿದ್ದಾನೆ.

ಸಮಾಜದಲ್ಲಿ ಅಭಿಪ್ರಾಯ, ವಿಚಾರ, ಸಂದೇಶ, ಸಮಾಚಾರಗಳು ವಿನಿಮಯವಾಗುವುದನ್ನೇ ನಾವು ಸಂವಹನೆ ಎನ್ನುತ್ತೇವೆ. ಯಾವುದೇ ಹೊತ್ತಿನಲ್ಲಿ ಜಗತ್ತಿನ ಯಾವುದೋ ಮೂಲೆಯಲ್ಲಿ ಏನೋ ಒಂದು ಘಟನೆ ಯಾವುದೋ ಒಂದು ನಿರ್ದಿಷ್ಟ ಕಾರಣಕ್ಕಾಗಿ ಅಥವಾ ಆಕಸ್ಮಿಕವಾಗಿ, ವಿನಾಕಾರಣ ಸಂಭವಿಸಬಹುದು. ಇಂತಹ ಆಗುಹೋಗುಗಳ ಮೇಲೆ ಗಮನವಿರಿಸಿಕೊಂಡು

ಆ ಮೂಲಕ ನಮ್ಮ ಸುತ್ತಲಿನ ಪರಿಸರದ ಬಗ್ಗೆ ಅರಿವು ಮೂಡಿಸಿಕೊಂಡು ಸಾಮಾಜಿಕ ಸಂಸ್ಕೃತಿಯನ್ನು ಉಳಿಸಿಕೊಂಡೂ ಹೋಗಲು ಈ ಸಂವಹನ ಕ್ರಿಯೆ ಅತ್ಯವಶ್ಯಕ ಎನಿಸಿಕೊಳ್ಳುತ್ತದೆ. ಯಾರಿಗೂ ಏನನ್ನೂ ಹೇಳಿಕೊಳ್ಳದೆ ಹೋದರೆ ಅರ್ಥಾತ್ ಸಂವಹನವೇ ನಡೆಯದಿದ್ದರೆ ವಿಚಾರ ವಿನಿಮಯವಾಗುವುದಾದರೂ ಹೇಗೆ? ಸಂಸ್ಕೃತಿ, ಸಮಾಜ ಬೆಳೆಯುವುದಾದರೂ ಹೇಗೆ? ಸಂಸ್ಕೃತಿಯ ಅವಿಭಾಜ್ಯ ಅಂಗವೂ, ಸಂಪರ್ಕ ಅಥವಾ ಸಂವಹನ ಕ್ರಿಯೆಯ ಪ್ರಮುಖ ಅಂಶವೂ ಆದ ಭಾಷೆ ಬೆಳೆಯುವುದಾಗಲೀ ಅಭಿವೃದ್ಧಿ ಹೊಂದುವುದಾಗಲೀ ಹೇಗೆ ಸಾಧ್ಯ? ಹೀಗೆ ಸಂವಹನ ಕ್ರಿಯೆ ನೇರವಾಗಿ ಒಂದು ಭಾಷೆಯ ಬೆಳವಣಿಗೆಗೆ ಪೂರಕವಾಗುತ್ತದೆ. ಹಾಗೆಯೇ ಭಾಷೆ ಸಂವಹನ ಕ್ರಿಯೆಗೆ, ಸಾಮಾಜಿಕ ಸಂಪರ್ಕಕ್ಕೆ ಸೇತುವೆಯಾಗುತ್ತದೆ. ಭಾಷೆ ಮತ್ತು ಸಂವಹನೆ ಹೀಗೆ ಪರಸ್ಪರ ಅವಲಂಬನೆಗೆ ಒಳಗಾಗುತ್ತವೆ. ಸಂವಹನೆ ಅಥವಾ ಸಂಪರ್ಕ ಕಡಿದು ಹೋದ ವ್ಯಕ್ತಿ ಒಂದು ಬಗೆಯ ಭಾವನಾತ್ಮಕ ಆಘಾತದಲ್ಲಿರುತ್ತಾನೆ ಎನ್ನುವುದು ಕರಿಯ ಮುಸ್ಲಿಂ ನಾಯಕ ಮಾಲ್ಕಮ್ X ಅವರ ಅಭಿಪ್ರಾಯ.

ಸಂವಹನ ಕ್ರಿಯೆ ಸಮಾಜದ ಮೂಲಭೂತ ಅಗತ್ಯಗಳಲ್ಲಿ ಒಂದು. ಉಸಿರಾಡಲು ಗಾಳಿ, ದಾಹ ಅಡಗಿಸಲು ನೀರು, ಚೈತನ್ಯಕ್ಕೆ ಆಹಾರ ಹೇಗೆ ಮುಖ್ಯವೋ ಹಾಗೆ ಮನಸ್ಸಿನ ಅನಿಸಿಕೆ, ಅನುಭವಗಳನ್ನು ಹೊರಹಾಕಿ ನಿರಾಳರಾಗಲು ಸಂವಹನೆ ಅಥವಾ ಅಭಿವ್ಯಕ್ತಿ ನಡೆಯಲೇಬೇಕು. ಅದೇ ವಿಚಾರಧಾರೆಯ ಹರಿವು. ಸಂವಹನೆ ಎಂದರೇನೆಂಬುದನ್ನು ಹಲವಾರು ವಿದ್ವಾಂಸರು ಹಲವಾರು ರೀತಿಗಳಲ್ಲಿ ಬಣ್ಣಿಸಿದ್ದಾರೆ.

ಸಂವಹನ ಕ್ರಿಯೆಯ ಕಾರಣದಿಂದಲೇ ಸಮಾಜ ಉಳಿಯುವುದಲ್ಲದೆ ಒಂದು ರೀತಿಯಲ್ಲಿ ಅದು ಹುಟ್ಟಿದ್ದೇ ಸಂವಹನೆಯಿಂದ; ಸಮಾಜದಲ್ಲಿ ಜನಜನರ ನಡುವೆ ಬಾಂಧವ್ಯ ಬೆಸುಗೆಯಾದದ್ದೇ ಸಂವಹನೆಯಿಂದ. ದಿನದಿಂದ ದಿನಕ್ಕೆ ಮಾತ್ರವಲ್ಲದೆ ಪೀಳಿಗೆಯಿಂದ ಪೀಳಿಗೆಗೆ ಸಾಮಾಜಿಕ ಮೌಲ್ಯಗಳು ಹರಿದು ಬರಲು ಸಂವಹನವೇ ಕಾರಣ ಎಂದು ಜಾನ್ ಡ್ಯೂಯಿ ಹೇಳಿದ್ದಾರೆ.

ಸಂಪರ್ಕ ಪದಕ್ಕೆ ಪರ್ಯಾಯವಾಗಿ ಬಂದ ಸಂವಹನ (Communication) ಶಬ್ದ ಇಂದು ವ್ಯಾಪಕ ಬಳಕೆಗೆ ಒಳಗಾಗಿದೆ. ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಅತ್ಯಂತ ಪ್ರಭಾವಿ ಶಬ್ದವಾದ Communication ಹುಟ್ಟಿದ್ದು ಲ್ಯಾಟಿನ್ ಭಾಷೆಯ Communis ಪದದಿಂದ. ಲ್ಯಾಟಿನ್‌ನಲ್ಲಿ Communis ಎಂದರೆ Common ಅರ್ಥಾತ್ ಸಾಧಾರಣ, ಸಾಮಾನ್ಯ ಎಂದು. ಸಂವಹನೆಯ ವಿಷಯ ಮಾತನಾಡುವಾಗಲೆಲ್ಲ ಸಾಧಾರಣತೆ ಮತ್ತು ಸಮುದಾಯದ ಬಗ್ಗೆ ಒತ್ತಿ ಹೇಳುವುದನ್ನು ಗಮನಿಸಬೇಕು.

> *Interaction, interchange, dialogue, sharing, communion and commonness are ideas that crop up in any attempt to define the term 'communication' derived from the latin communis which means 'common', the notions of commonalities and community are frequently stressed in talking about communication.*[೩]

ಡೆನಿಸ್ ಮಾಕ್ವೈಲ್ ಅವರ ಪ್ರಕಾರ

> *Communication is a process which increases commonality - but also requires elements of commonaltiy for it to occur at all.*[೪]

ಸಂವಹನೆ ಸಾಮಾನ್ಯತೆಯನ್ನು ಹೆಚ್ಚಿಸುವ ಪ್ರಕ್ರಿಯೆ. ಹಾಗೆಯೇ ಈ ಕ್ರಿಯೆ ನಡೆಯಲು ಸಾಮಾನ್ಯತೆಯ ಅಂಶಗಳು ಅಗತ್ಯವಾಗುತ್ತವೆ.

ಆಶ್ಲೆ ಮಾಂಟಗೂ ಮತ್ತು ಫ್ಲಾಯಿಡ್ ಮ್ಯಾಟ್‌ಸನ್ ಅವರು ವಿವರಿಸುವಂತೆ

> *Communication is the name we give to the countless ways that humans have of keeping in touch - not just words and music, pictures and print, nods and becks, postures and plumages; to every move that catches some one's eye and every sound that resonates up on another ear.*[೫]

ಸಂಪರ್ಕ ಹೊಂದಲು ಮಾನವ ಇರಿಸಿಕೊಂಡಿರಬಹುದಾದ ಅಸಂಖ್ಯಾತ ಮಾರ್ಗಗಳನ್ನೇ ನಾವು 'ಸಂವಹನ' ಎಂದು ಹೆಸರಿಸುತ್ತೇವೆ. ಇದು ಬರೀ ಪದಗಳು ಮತ್ತು ಸಂಗೀತ, ಚಿತ್ರಗಳು ಮತ್ತು ಮುದ್ರಣ, ಸೂಚನೆ ಮತ್ತು ಸಂಜ್ಞೆಗಳು, ಭಂಗಿಗಳಲ್ಲ. ಪ್ರತಿಯೊಬ್ಬರ ಕಣ್ಣನ್ನೂ ಆಕರ್ಷಿಸುವ ಪ್ರತಿ ಚಲನೆ ಹಾಗೂ ಮತ್ತೊಂದು ಕಿವಿಯಲ್ಲಿ ಪ್ರತಿಧ್ವನಿಸುವ ಪ್ರತಿ ಶಬ್ದವೂ ಆಗಿದೆ. ಹೀಗೆ ಜನಸಾಮಾನ್ಯರ ಸ್ವತ್ತೆನಿಸುವ ಭಾಷೆ ಸ್ವತಃ ತಾನೂ ಸಾಮಾನ್ಯೀಕರಣಗೊಳ್ಳುತ್ತದೆ. ಸಂವಹನೆಯ ಉದ್ದೇಶವೇ ಒಂದು ವಿಚಾರದ ಸಾಧಾರಣೀಕರಣ ಅಥವಾ ಸಾಮಾನ್ಯೀಕರಣ ಎನ್ನಬಹುದು. ಅಂದರೆ ಎಲ್ಲರಿಗೂ ತಿಳಿಯಪಡಿಸುವುದು, ತಿಳಿಯುವಂತೆ ಪ್ರಚುರ ಪಡಿಸುವುದು, ಸಾರ್ವತ್ರಿಕಗೊಳಿಸುವುದು, ಜಾಹೀರು ಮಾಡುವುದು, ಪ್ರಚಾರ ನೀಡುವುದು. ಇಂಗ್ಲಿಷ್‌ನ 'Communication' ಪದಕ್ಕೆ ನೀಡಲಾಗುವ ಸಾಮಾನ್ಯೀಕರಣದ ಅರ್ಥವನ್ನೇ ಭರತ 'ಸಾಧಾರಣೀಕರಣ'ಕ್ಕೂ ನೀಡುತ್ತಾನೆ.

> *The sanskrit term sadharanikaran in Bharatha's natyashastra comes closest to the sense of 'common or commoness' usually associated with communication. 'Sadharanikarana is a social process which can be achieved only among sahridayas - people with a capacity to receive messages. this is an innate ability required through culture, adaption and learning.*[೬]

ಭರತನ ನಾಟ್ಯಶಾಸ್ತ್ರದಲ್ಲಿ ಹೇಳಿರುವಂತೆ 'ಸಾಧಾರಣೀಕರಣ' ಕ್ರಿಯೆ ಅಂದರೆ 'ಸಂವಹನ' ಕ್ರಿಯೆ ಸಹೃದಯರ ಅಥವಾ ಶ್ರೋತೃಗಳ ಗ್ರಹಣಶಕ್ತಿಯನ್ನು ಅವಲಂಬಿಸಿರುತ್ತದೆ ಎನ್ನುವುದು ಗಮನಾರ್ಹ ಅಂಶ. ಅಂದರೆ ಹೇಳುವುದನ್ನು ಕೇಳಿ ಗ್ರಹಿಸುವ ಕ್ರಿಯೆ ಇದು.

ಸಾಧಾರಣೀಕರಣ ಎನ್ನುವ ಶಬ್ದವನ್ನು ೧೦ನೇ ಶತಮಾನದಲ್ಲಿ ಮೊದಲು ಉಪಯೋಗಿಸಲಾಯಿತು. ನಾಟ್ಯಶಾಸ್ತ್ರದಲ್ಲಿ ರಸಗಳಿಗೆ ಸಂಬಂಧಿಸಿದ ಸೂತ್ರಗಳನ್ನು ವಿವರಿಸುವಾಗ ಭಟ್ಟನಾಯಕ ಈ ಪದವನ್ನು ಬಳಸಿ ಸಂವಹನೆಯ ಸಾರವಿರುವುದು ಸಾಧಾರಣೀಕರಣ ಮತ್ತು ಏಕೀಕರಣವನ್ನು ಸಾಧಿಸುವುದರಲ್ಲಿ ಎಂದಿದ್ದಾನೆ.

*The term sadharanikarana was first used in 10th century by Bhattanayaka in a commentary on the Natyashastra to explain the sutras related to rasas. Bhattanayaka stressed that the essance ot communication lay in achieving commonness and one ness.* [೭]

ಅದನ್ನೇ ಡಾ. ಎಚ್. ತಿಪ್ಪೇರುದ್ರಸ್ವಾಮಿಯವರು ತಮ್ಮ *ತೌಲನಿಕ ಕಾವ್ಯ ಮೀಮಾಂಸೆಯಲ್ಲಿ* ಒಂದೊಂದು ಮನಸ್ಸು ಬೇರೆ ಬೇರೆಯಾದರೂ ಕೆಲವು ನಿರ್ದಿಷ್ಟ ಸನ್ನಿವೇಶಗಳಲ್ಲಿ ಮತ್ತು ಪರಿಸರಗಳಲ್ಲಿ ಒಂದೇ ರೀತಿಯ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸುತ್ತದೆ ಅನುಭವಗಳನ್ನು ಪಡೆಯುತ್ತದೆ. ಅನುಭವಗಳಿಗಿರುವ ಈ ಸಮಾನತೆಯೇ ಸಂವಹನ ಸಿದ್ಧಾಂತದ ಹಿಂದಿರುವ ತಳಹದಿ ಎಂದಿದ್ದಾರೆ.

ಡೆನಿಸ್ ಮ್ಯಾಕ್‌ವೆಲ್ ಮುಂದುವರೆದು ಅರ್ಥಪೂರ್ಣವಾದ ಸಂದೇಶಗಳನ್ನು ಮೌಖಿಕವಾಗಿ ಇಲ್ಲವೆ ಲಿಖಿತ ರೂಪದಲ್ಲಿ, ನೋಟಕ್ಕೆ ಅಥವಾ ಘ್ರಾಣಶಕ್ತಿಗೆ ಸಿಕ್ಕುವಂತೆ ವ್ಯಕ್ತಿಯಿಂದ ವ್ಯಕ್ತಿಗೆ ರವಾನಿಸುವುದೇ 'ಸಂವಹನೆ' ಎಂದಿದ್ದಾರೆ. ಹಾಗೆಯೇ ಇದನ್ನು ಸ್ವೀಕರಿಸುವ ವ್ಯಕ್ತಿ ಅಂದರೆ ಶ್ರೋತೃ ಅರ್ಥಾತ್ ಸಹೃದಯನ ಸ್ವೀಕರಣಶಕ್ತಿಯೂ ಸಹ ಪರಿಣಾಮಕಾರಿ ಸಂವಹನೆಯ ದ್ಯೋತಕವಾಗುತ್ತದೆ. ಕಾವ್ಯದ ಸಂದರ್ಭದಲ್ಲಿ ವಿವರಿಸುವ

**ಕಟ್ಟಿಯುಮೇನೊ? ಮಾಲೆಗಾಱನ ಪೊಸಬಾಸಿಗಂ**

**ಮುಡಿವ ಭೋಗಿಗಳಿಲ್ಲದೆ ಬಾಡಿ ಪೋಗದೇ!** [೮]

ಎಂಬಂತೆ ಹೇಳುವ ವಿಚಾರವನ್ನು ಸ್ವೀಕರಿಸಿ ಅನುಭವಿಸುವ ಸಮಾನ ಹೃದಯರೂ ಸಂವಹನೆಯ ಕಾರ್ಯಕ್ಕೆ ಬೇಕು.

ಅಭಿನವಗುಪ್ತ ಹೇಳಿರುವಂತೆ ಕವಿ (ಹೇಳುವವನು) ಸಹೃದಯ (ಕೇಳುವವನು) ಒಂದೇ ಸಾರಸ್ವತ ತತ್ತ್ವದ ಎರಡು ಅಂಗಗಳೆನಿಸುತ್ತಾರೆ. ಇಬ್ಬರೂ ಒಂದುಗೂಡಿದರೇ ಕಾವ್ಯ ಸಾರ್ಥಕವಾಗುತ್ತದೆ ಎನ್ನುತ್ತಾನೆ. 'ಸರಸ್ವತ್ಯಾಸ್ತತ್ತ್ವಂ ಕವಿ ಹೃದಯಾಖ್ಯಂ ವಿಜಯತೇ' ಹೀಗೆ ವಕ್ತೃ ಮತ್ತು ಶ್ರೋತೃ ಇಬ್ಬರೂ ಸಂವಹನೆಯ ಕಾರ್ಯದ ಪ್ರಮುಖ ಪಾಲುದಾರರಾಗುತ್ತಾರೆ. ಆದ್ದರಿಂದಲೇ ತಿಪ್ಪೇರುದ್ರಸ್ವಾಮಿಯವರ ಪ್ರಕಾರ ಸಂವಹನ ಎನ್ನುವುದು ಒಂದು ಜೇಬಿನಿಂದ ಇನ್ನೊಂದು ಜೇಬಿಗೆ ದುಡ್ಡನ್ನು ಬದಲಾಯಿಸುವಂತಹ ಸರಳ ಕ್ರಿಯೆಯಲ್ಲ. ಒಬ್ಬರ ಅನುಭವವನ್ನು ಇನ್ನೊಬ್ಬರು ಗ್ರಹಿಸಬೇಕಾದ ಸಂಕೀರ್ಣ ಮಾನಸಿಕ ಕ್ರಿಯೆ ಎನಿಸಿಕೊಳ್ಳುತ್ತದೆ. ಕ್ರಿಯೆ ಹಾಗೂ ಪ್ರತಿಕ್ರಿಯೆ ಎರಡನ್ನೂ ಒಳಗೊಂಡು ಚಲನಶೀಲತೆಯನ್ನು ಪ್ರದರ್ಶಿಸುವ ಪ್ರಕ್ರಿಯೆಯೇ ಸಂವಹನ.

ಸಂವಹನೆ ನಿರಂತರವಾಗಿ ನಡೆಯುವ ಒಂದು ಸಾಮಾಜಿಕ ಕ್ರಿಯೆ. ಭಾಷೆಯ ಅಥವಾ ಇನ್ನಾವುದೇ ಸಂಕೇತದ ಮೂಲಕ ನಡೆಯುವ ಈ ಕ್ರಿಯೆಯ ಉದ್ದೇಶ ಒಂದು ವಿಚಾರವನ್ನು ಒಂದೆಡೆಯಿಂದ ಮತ್ತೊಂದೆಡೆಗೆ ಒಯ್ಯುವುದು ಹಾಗೂ ವಿಚಾರಗ್ರಹಣವಾಗುವುದೂ ಆಗಿದೆ. ಇದು ಎಲ್ಲಿಂದ ಪ್ರಾರಂಭವಾಗುತ್ತದೆ ಎಂದರೆ ತಾಯ ಉದರದಿಂದ ಭೂಮಿಗಿಳಿದು ಆಗಷ್ಟೇ ಕಣ್ತೆರೆಯುವ ಮಗು ತನ್ನ ಸುತ್ತಲಿನ ಪರಿಸರದೊಂದಿಗೆ ಅಳುವಿನ ಮೂಲಕವೇ ಸ್ಪಂದಿಸುತ್ತದೆ. ಆಗ ಹಸಿವಿಗೋ, ಹೊಟ್ಟೆನೋವಿಗೋ, ಸೊಳ್ಳೆ ಕಡಿದದ್ದಕ್ಕೊ ಅತ್ತರೆ ತಾಯಿ ಕೂಡಲೇ ಸ್ಪಂದಿಸುತ್ತಾಳೆ. ಅದನ್ನು ಸಂತೈಸುವ ಮೂಲಕ ಪ್ರತಿಕ್ರಿಯಿಸುತ್ತಾಳೆ. ಇಲ್ಲಿ 'ಹೇಳಿಕೊಳ್ಳುವ' (ಮಗುವಿನ ಅಳು) ಒಂದು ಸಾಂಕೇತಿಕ ಕ್ರಿಯೆಗೆ ಅದನ್ನು 'ಕೇಳಿ' ಸಂತೈಸುವ ಪ್ರತಿಕ್ರಿಯೆ ನಡೆದಿದೆ. ಅಂದ ಮೇಲೆ ಸಂವಹನ ಎನ್ನುವುದು ಬರೀ ಒಬ್ಬರಿಂದ ಮತ್ತೊಬ್ಬರಿಗೆ ವಿಚಾರವನ್ನು ತಲುಪಿಸುವ

ಪ್ರಕ್ರಿಯೆಯಲ್ಲ. ಒಬ್ಬರು ಹೇಳಿದ್ದನ್ನು ಮತ್ತೊಬ್ಬರು ಗ್ರಹಿಸಬೇಕಾದದ್ದೂ ಇಲ್ಲಿ ಅವಶ್ಯಕ ಎಂಬುದನ್ನು ನಾವು ಮನಗಾಣಬಹುದು. ಈ 'ಮಗು-ತಾಯಿ'ಯ ಸಂಬಂಧದಂತೆಯೇ 'ವಕ್ತೃ-ಶ್ರೋತೃ'ವಿನ ಸಂಬಂಧ ಸಹ.

ಇಲ್ಲಿ ಹೇಳಿರುವಂತೆ ಸಂವಹನೆಯ ಕಾರ್ಯಕ್ಕೆ ಒಂದು ಉದ್ದೇಶವಿದೆ. ಮಗು ಅಳುವುದರಲ್ಲಿ ಒಂದು ವೈಯಕ್ತಿಕ ಬೇಡಿಕೆಯಿದೆ, ಒಂದು ಅಗತ್ಯವಿದೆ. ಅದನ್ನೇ ಬೆಲ್ಮನ್ *ಎ ಫೇರ್‌ವೆಲ್ ಟು ಅರಿಸ್ಟಾಟಲ್* ಎನ್ನುವ ಲೇಖನದಲ್ಲಿ

> *Communication is both a natural individual demand and a requirement of social existance to use communication resources in order to engage in the sharing of experiences, through symbol mediated interaction.*[೯]

ಎನ್ನುತ್ತಾರೆ. ಮಾನವ ಸಂಪರ್ಕದ ಅವಶ್ಯಕತೆಯನ್ನು ಕುರಿತು ಮ್ಯಾಂಟಗೂ ಮತ್ತು ಮ್ಯಾಟ್‌ಸನ್ ಹೀಗೊಂದು ವ್ಯಾಖ್ಯೆ ನೀಡಿದ್ದಾರೆ.

> *Human communication is a clash of symbols, and it covers a multitude of signs. But it is more than media and message, information and persuation; it also meets a deeper need and serves a higher purpose..... Communication is the ground of meeting and the foundation of community. It is in short the essential human connection.*[೧೦]

> *ಸಂವಹನೆ ಸಾಮಾಜಿಕ ಪ್ರಕ್ರಿಯೆಯ ವಾಹಕ. ಜ್ಞಾನದ ಸಂಗ್ರಹಣೆ, ವಿನಿಮಯ ಹಾಗೂ ರವಾನೆಯನ್ನೇ ಇದು ಅವಲಂಬಿಸಿದೆ. ಜ್ಞಾನದ ಮಹಾಪೂರವೇ ಆಗಿ ಹರಿಯುವ ಸಂವಹನೆ ಇರದಿದ್ದಲ್ಲಿ ಮಾನವ ಸಮಾಜವೂ ಪ್ರಾಣಿಲೋಕದಂತೆ ಅತ್ಯಂತ ಕೆಳಸ್ತರದ ಜ್ಞಾನವನ್ನು ಹೊಂದಿರುತ್ತಿತ್ತು. ಸಂವಹನ ಕ್ರಿಯೆ ನಡೆಯದ ಸಮಾಜ ಚಲನರಹಿತವೂ ಏಕರೀತಿಯ ವರ್ತನೆಯಿಂದ ಕೂಡಿದ್ದೂ ಕ್ರಿಯಾಶೀಲತೆ ಕಳೆದುಕೊಂಡದ್ದೂ ಆಗಿರುತ್ತದೆ.*[೧೧]

ಎನ್ನುವುದು ವಿಲಿಯಂ ರಿವರ್ಸ್ ಹೇಳಿಕೆ.

> *A loss of sensation - the inability to hear predators, for instance - can mean loss of life. Similarly to be lost from primitive social communication - from the pack, from the herd or the tribe - is to be condemned to death.*[೧೨]

ಎನ್ನುತ್ತಾರೆ ಕ್ಲಾರ್ಕ್ ಮತ್ತು ಬ್ಲಾಂಕನ್ ಬರ್ಗ್. ಶರಾಫತ್ ಯಾರ್ ಖಾನ್ ಅವರ ಪ್ರಕಾರ ಸಂವಹನೆ ಎನ್ನುವುದು ಸಾಮಾಜಿಕ, ಆರ್ಥಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಅಗತ್ಯ.

> *Communication means transmission of thought, an instruction, an idea, a feeling from one person to another to establish common understanding. This can be established through verbal, written or visual symbols. Thus communication has truly been identified as a basic instinct of human beings. In fact, it is a social, economic, political and cultural need.*[೧೩]

ಅರ್ಜೆಂಟೀನಾದ ವಿದ್ವಾಂಸ ರಿಕಾರ್ಡೋ

> Communication is not an act but a process by which an individuality enters into mental co-operation with another individuality until they come to constitute a common conscience[೧೪]

ಎಂದಿದ್ದಾರೆ. ಮಾಹಿತಿ, ಅಭಿಪ್ರಾಯ ಅಥವಾ ಮನೋಭಾವಗಳನ್ನು ಹಂಚಿಕೊಳ್ಳುವುದೇ ಸಂವಹನೆ ಎನ್ನುತ್ತಾರೆ ವಿಲ್ಬರ್ ಶ್ರಾಮ್.

> Communication - the sharing of information, ideas or attitudes.[೧೫]

*ಮೆನಿ ವಾಯ್ಸಸ್ ಅಂಡ್ ಒನ್ ವರ್ಲ್ಡ್* ಎನ್ನುವ ಕೃತಿಯಲ್ಲಿ ಸಿಯಾನ್ ಮ್ಯಾಕ್‌ಬ್ರೈಡ್ ಸಂವಹನೆ ಎನ್ನುವುದನ್ನು ಹೀಗೆ ವ್ಯಾಖ್ಯಾನಿಸಿದ್ದಾರೆ.

> *Communication integrates knowledge, Organisation and power and runs as a thread linking the earliest memory of man to his noblest aspiration through constant striving for a better life.*[೧೬]

ಫಿಷರ್ ಮತ್ತು ಹಾರ್ಮ್ಸ್ ಅವರ ಪ್ರಕಾರ

> *The right to communicate is not seen as a fundamental human right, much more comprehensive than existing freedom of speech, freedom of the press etc. It is the basic right of the individual and it extends in some degree at least, to groups, Nations, and international community, and to have important legal, economic and technological implications. It needs to be included in national and international instruments guaranteeing communication freedoms. It is closely related to the*

> *democratisation of communication within and between countries and to concepts of 'access', 'participation', and the 'two-way' flow.*[೧೭]

ರಾಜಕೀಯ ಶಾಸ್ತ್ರಜ್ಞ ಪ್ರೊ. ಹೆರಾಲ್ಡ್ ಡಿ. ಲಾಸ್‌ವೆಲ್ ಅವರ ದೃಷ್ಟಿಯಲ್ಲಿ ಸಂವಹನೆಯ ಪ್ರಕ್ರಿಯೆಯನ್ನು ವಿವರಿಸುವ ಅತ್ಯಂತ ಸರಳ ವಿಧಾನವೆಂದರೆ ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸುವುದು.

- ಯಾರು - Who
- ಏನು ಹೇಳಿದರು - Says what
- ಯಾವ ಮಾಧ್ಯಮದಲ್ಲಿ - In which channel
- ಯಾರಿಗೆ - To whom
- ಎಷ್ಟು ಪರಿಣಾಮಕಾರಿಯಾಗಿ - With what effect

೧೯೪೮ರಲ್ಲಿ ಲಾಸ್‌ವೆಲ್ ಸಂವಹನೆಯ ಮಾದರಿಯನ್ನು ಹೀಗೆ ರಚಿಸಿದ್ದಾರೆ.




**ಲಾಸ್‌ವೆಲ್ ಮಾದರಿ**

ಲಾಸ್‌ವೆಲ್ ಅವರ ಕಲ್ಪನೆಗೂ ೨೦೦೦ ವರ್ಷಗಳಷ್ಟು ಮೊದಲೇ ಅರಿಸ್ಟಾಟಲ್ ಸಂವಹನೆಯ ಸ್ವರೂಪವನ್ನು ಮೂರು ಅಂಶಗಳ ಜೊತೆ ವಿವರಿಸಿದ್ದಾನೆ. ಅರಿಸ್ಟಾಟಲ್‌ನ ತತ್ವದ ಆಧಾರದ ಮೇಲೆ ಲಾಸ್‌ವೆಲ್ ಮಾದರಿ ಸಹ ರೂಪುಗೊಂಡಿದ್ದರೂ ಇಲ್ಲಿ ಮಾಧ್ಯಮ ಹಾಗೂ ಪರಿಣಾಮ ಎನ್ನುವ ಹೊಸ ಸೇರ್ಪಡೆಯನ್ನು ಗಮನಿಸಬೇಕು.

ಸಂವಹನೆಯ ಸ್ವರೂಪವನ್ನು ಅರಿಸ್ಟಾಟಲ್ ಮೂರು ಅಂಶಗಳೊಂದಿಗೆ ಹೀಗೆ ವಿವರಿಸಿದ್ದಾನೆ.

- ವಕ್ತೃ - The Speaker
- ವಾರ್ತೆ (ಹೇಳಿಕೆ) - The Speech
- ಶ್ರೋತೃ - The Listener

೧೯೫೪ರಲ್ಲಿ ಆಧುನಿಕ ಸಂವಹನೆಯ ಪಿತಾಮಹ ವಿಲ್ಬರ್ ಶ್ರಾಮ್ ಪ್ರಕಟಿಸಿದ 'ಹೌ ಕಮ್ಯೂನಿಕೇಷನ್ ವರ್ಕ್ಸ್' ಲೇಖನದಲ್ಲಿ ಹೀಗೆ ವರ್ಣಿಸಲಾಗಿದೆ : 'Communication as a purposeful effort to establish a

commonness between a source and receiver.' ಇವರೂ ಸಹ ಲ್ಯಾಟಿನ್ ಪದವಾದ Communisನಿಂದಲೇ Communication ಬಂದಿದೆ ಎಂದು ಒಪ್ಪುತ್ತಾರೆ. ಇವರು ವಿವರಿಸುವ ಮಾದರಿ ಹೀಗಿದೆ :




**ಶ್ರಾಮ್ ಮಾದರಿ**

ಶ್ಯಾನನ್ ಮತ್ತು ವೀವರ್ ಅವರ 'ಸಂವಹನೆ'ಯ ಮಾದರಿ ಹೀಗಿದೆ. ಸಹಜ ಪರಿಸರದ ಸದ್ದಿನ (Ambiance sound) ಜೊತೆಗೆ ೫ ಅಗತ್ಯ ಭಾಗಗಳನ್ನು ಈ ಮಾದರಿಯಲ್ಲಿ ವಿವರಿಸಲಾಗಿದೆ.

- ಮಾಹಿತಿಯ ಮೂಲ - An information source
- ವಾಹಕ - A transmitter
- ಮಾಧ್ಯಮ - A channel
- ಗ್ರಾಹಕ - The receiver
- ಗುರಿ - The destination

ಹೀಗೆ ಒಂದು ಮೂಲದಿಂದ ಹುಟ್ಟಿದ 'ವಿಚಾರ' ವಾಹಕ ಮತ್ತು ಮಾಧ್ಯಮ ಎನ್ನುವ ಎರಡು ಭೂಮಿಕೆಗಳ ಮೂಲಕ ಹರಿದು ಗ್ರಾಹಕನ ಗ್ರಹಣಶಕ್ತಿಯನ್ನವಲಂಬಿಸಿ 'ಗುರಿ' ಸೇರುತ್ತದೆ. ಇದು ಸಂವಹನೆಯ ಸೂತ್ರ. ಇಂದು ಈ ಸೂತ್ರದ ಆಧಾರದ ಮೇಲೇ ಸಕಲ ಮಾನವಕುಲ ತನ್ನ ದೈನಂದಿನ ವ್ಯವಹಾರಗಳನ್ನು ಸುಗಮವಾಗಿ ಸಾಗಿಸುವಂತಾಗಿದೆ; 'ಸಂವಹನೆ' ಎನ್ನುವುದು ಜಾಗತಿಕ ಸಂಸ್ಕೃತಿಯ ಅಭಿನ್ನ ಅಂಗವೆನಿಸಿದೆ.

## ೨. ಸಂವಹನದ ಪ್ರಕ್ರಿಯೆಗಳು

ವಕ್ತೃ ಮತ್ತು ಶ್ರೋತೃವಿನ ನಡುವೆ ನಡೆಯುವ 'ಹೇಳುವ-ಕೇಳುವ' ಕ್ರಿಯೆಯೇ ಸಂವಹನೆ ಎನ್ನುವುದು ವಿದ್ವಾಂಸರ ವ್ಯಾಖ್ಯೆಗಳ ಹಾಗೂ ಅದರ ಪ್ರಾಯೋಗಿಕ ಉದಾಹರಣೆಗಳ ಮೂಲಕ ದೃಢಪಟ್ಟಿದೆ. ಸಂವಹನಕ್ರಿಯೆ ನಡೆಯುವ ಸಾಮಾಜಿಕ ಸಂದರ್ಭವನ್ನು ಅನುಸರಿಸಿ ಹಾಗೂ ಇದಕ್ಕೆ ಬಳಸುವ ತಾಂತ್ರಿಕ ಸಾಧನಗಳನ್ನವಲಂಬಿಸಿ ಸಂವಹನೆ ಎನ್ನುವುದನ್ನು ವಿವಿಧ ರೀತಿಗಳಲ್ಲಿ ವಿಂಗಡಿಸಲಾಗಿದೆ.

- ಅಂತಃಸಂವಹನೆ - Intrapersonal communication.
- ಅಂತರ್ ಸಂವಹನೆ - Interpersonal communication.
- ಗುಂಪು ಸಂವಹನೆ - Group communication.
- ಸಮೂಹ ಸಂವಹನೆ - Mass communication.
- ಪ್ರತಿಕ್ರಿಯಾತ್ಮಕ ಸಂವಹನೆ - Feed back.

## ಅಂತಃಸಂವಹನೆ

ಸಂವಹನೆಯ ಮೂಲಸ್ಥಾನ ಮನಸ್ಸು. ಚಿಂತನೆ, ಆಲೋಚನೆ, ಕಲ್ಪನೆ ಹೀಗೆ ಎಲ್ಲ ಬಗೆಯ ಅನಿಸಿಕೆಗಳ ಉಗಮಸ್ಥಾನ. ಈ ಮನಸ್ಸಿನೊಳಗೆ ನಡೆಯುವ ಎಲ್ಲ ಕ್ರಿಯೆಗೂ ನಮ್ಮ ಸುತ್ತಲಿನ ಪರಿಸರವೇ ಮೂಲಪ್ರೇರಣೆ. ಕಾರ್ಲ್ ಮಾರ್ಕ್ಸ್ ತನ್ನ 'ಜರ್ಮನ್ ಐಡಿಯಾಲಜಿ' ಎಂಬ ಗ್ರಂಥದಲ್ಲಿ ಹೇಳಿರುವಂತೆ ನಮ್ಮ ಮನಸ್ಸಿನಲ್ಲಿ ಆಗುವುದೆಲ್ಲ ಸಾಮಾಜಿಕ ಸಂಗತಿಗಳ ಪರಿಣಾಮ. ಈ ಮಾತು ಹಿಂದಿನ ಮತ್ತು ಮುಂದಿನ ಎಲ್ಲ ಕಾಲಕ್ಕೂ ಸತ್ಯ. ಸಾಮಾಜಿಕ ಪ್ರೇರಣೆಗಳಿಂದ ಹುಟ್ಟಿ ಸಂಕೇತಗಳ ಮೂಲಕ ಅಭಿವ್ಯಕ್ತಿ ಪಡೆದು ಮತ್ತೊಂದೆಡೆಗೆ ವರ್ಗಾವಣೆಯಾಗುವ, ಮನಸ್ಸಿನೊಳಗೇ ನಡೆಯುವ ವೈಚಾರಿಕ ಮಂಥನವೇ **ಅಂತಃಸಂವಹನೆ.** ಜರ್ಮನಿಯ ಪ್ರಸಿದ್ಧ ಕವಿ, ಚಿಂತಕ ಹ್ಯಾನ್ಸ್‌ಮ್ಯಾಗ್ನಸ್ ಎಂಜೆನ್ಸ್‌ಬರ್ಗರ್ ಇದನ್ನು 'ಮೆದುಳಿನ ಕೈಗಾರಿಕೀಕರಣ' ಎನ್ನುತ್ತಾರೆ. ಅಂತಃಸಂವಹನ ಎನ್ನುವುದು ವ್ಯಕ್ತಿಯ ಅಂತರ್ಗತವಾಗಿ ನಡೆಯುವ ಬೌದ್ಧಿಕ, ಮಾನಸಿಕ ಕ್ರಿಯೆ - ಮನನ, ಚಿಂತನ, ಧ್ಯಾನ ಇಂದ್ರಿಯಗಳಿಗೆ ಅತೀತವಾದ ಏಕಾಗ್ರಚಿತ್ತತೆಯೂ, ಆ ಮೂಲಕ ನಡೆಯುವ ಆಂತರಿಕ ವಿಚಾರ ಸ್ಪಂದನವೂ ಅಂತಃಸಂವಹನೆ ಎನಿಸಿಕೊಳ್ಳುತ್ತದೆ. ಧ್ಯಾನದ ಮೂಲಕ ಸಾಧಿಸಿದ ತಪೋಬಲದಿಂದ ದೈವತ್ವದೊಂದಿಗೆ ನಡೆಸುವ ಅಶ್ರೋತ ಸಂಭಾಷಣೆಯೂ ಅಂತಃಸಂವಹನದ ಮತ್ತೊಂದು ಸ್ವರೂಪವಾದ 'ಅಲೌಕಿಕ ಅಥವಾ ಪಾರಮಾರ್ಥಿಕ ಸಂವಹನೆ' (Transpersonal Communication) ಎನಿಸಿಕೊಳ್ಳುತ್ತದೆ.

**ಶ್ರೋತವ್ಯೋ ಮಂಥವ್ಯೋ ನಿಧಿಧ್ಯಾಸಿತವ್ಯಃ** ಎನ್ನುವ ಉಪನಿಷತ್ತಿನ ಈ ಸೂತ್ರದಲ್ಲಿ, ಗಮನವಿಟ್ಟು ಕೇಳುವುದು, ಮನನ ಮಾಡುವುದು, ಧ್ಯಾನದಲ್ಲಿ ಮನಸ್ಸನ್ನು ತೊಡಗಿಸಿಕೊಳ್ಳುವುದು ಮುಖ್ಯವೆಂದು ಹೇಳಲಾಗಿದೆ. ಹೀಗೆ ಮಾಡುವುದರಿಂದ ಪ್ರೌಢ ಚಿಂತನೆಗಳು, ಅನಿಸಿಕೆಗಳಿಗೆ ಮನಸ್ಸು ನೆಲೆಯಾಗುತ್ತದೆ; ಪ್ರಬುದ್ಧ ವಿಚಾರಗಳು ಮನಸಿನಂಗಣದಲ್ಲಿ ಪುಟಿಯುತ್ತವೆ.

## ಅಂತರ್‌ಸಂವಹನೆ

ಮನದಲ್ಲರಳಿದ ಭಾವಭಾವನೆಗಳಿಗೆ ಇರುವ ಒಂದೇ ಹೊರದಾರಿ - ಅಭಿವ್ಯಕ್ತಿ. ಅನಿಸಿದ್ದನ್ನು ಮತ್ತೊಬ್ಬರೊಂದಿಗೆ ತಮಗೆ ತೋರಿದ ರೀತಿಯಲ್ಲಿ, ಮಾರ್ಗದಲ್ಲಿ ಹೇಳಿಕೊಳ್ಳುವುದು. ಅಂದರೆ ಇಬ್ಬರು ವ್ಯಕ್ತಿಗಳ ನಡುವೆ ನಡೆಯುವ ಪರಸ್ಪರ 'ಹೇಳುವ-ಕೇಳುವ' ಕ್ರಿಯೆ. ಇದು ಮುಖಾಮುಖಿ ವಿನಿಮಯ. ಇದೇ **ಅಂತರ್‌ಸಂವಹನೆ.** ಯಾವುದೇ ಒಂದು ಸಾಧನ ಅಥವಾ ಯಂತ್ರದ ನೆರವಿಲ್ಲದೆ ವ್ಯಕ್ತಿಯಿಂದ ವ್ಯಕ್ತಿಗೆ ನೇರವಾಗಿ ನಡೆಯುವ ಮಾತು, ಸಂಭಾಷಣೆ ಅಥವಾ ವಿಚಾರ ವಿನಿಮಯ. ಇದು ವೈಯಕ್ತಿಕ, ನೇರ, ನಿಕಟವಾದ ಮಾತು, ಹಾವಭಾವ ಭಂಗಿಗಳ ಮೂಲಕ ಅತಿಹೆಚ್ಚು ಒಡನಾಟಕ್ಕೆ ಅನುವು ಮಾಡಿಕೊಡುವ ವಿಚಾರ ವಿನಿಮಯ ಕ್ರಿಯೆ. ಈ ಕ್ರಿಯೆಗೊಳಪಡುವ ಇಬ್ಬರೂ ವ್ಯಕ್ತಿಗಳ ನಡುವಿನ ಸಂಬಂಧ, ಸಮಾನತೆ ಹಾಗೂ ಈ ಕ್ರಿಯೆ ನಡೆಯುವ ಸಮಾಜೋ ಸಾಂಸ್ಕೃತಿಕ ಸಂದರ್ಭ ಸನ್ನಿವೇಶಗಳನ್ನು ಇದು ಅವಲಂಬಿಸುತ್ತದೆ. ಮನೆಯಲ್ಲಿ, ಶಾಲೆಯಲ್ಲಿ, ಅಂಗಡಿಯಲ್ಲಿ, ಬಸ್ಸಿನಲ್ಲಿ ಯಾರಾದರೂ ಇಬ್ಬರು ವ್ಯಕ್ತಿಗಳ ನಡುವೆ ಮುಖತಃ ನಡೆಯುವ ಮಾತುಗಾರಿಕೆಯೇ ಅಂತರ್‌ಸಂವಹನೆ. ಇದು ಮಾತೇ ಆಗಿರಬೇಕೆಂದೇನೂ ಇಲ್ಲ. ಒಬ್ಬರನ್ನೊಬ್ಬರು ನೋಡಿ ಚೆಲ್ಲುವ ಮುಗುಳ್ನಗು, ಕೈಬೀಸಿ ಹೇಳುವ ವಿದಾಯ, ಪ್ರೀತಿಯ ಅಪ್ಪುಗೆ, ಬರೆದು ತಿಳಿಸುವ ಸಂದೇಶ - ಹೀಗೆ ಮೌಖಿಕ, ಲಿಖಿತ, ಸಂಜ್ಞಾರೂಪದ ವಿಚಾರ ವಿನಿಮಯವೂ ಅಂತರ್‌ಸಂವಹನೆಯಾಗುತ್ತದೆ. ಅಂತಃಸಂವಹನೆ, ಅಂತರ್‌ಸಂವಹನೆ ಮತ್ತು ಗುಂಪು ಸಂವಹನೆಯಲ್ಲಿ ವಕ್ತೃ ಹಾಗೂ ಶ್ರೋತೃವಿನ ನಡುವೆ ಯಾವುದೇ ತಾಂತ್ರಿಕ ಸಾಧನದ ಮಧ್ಯಸ್ಥಿಕೆ ಅಥವಾ ಬಳಕೆ ಇರುವುದಿಲ್ಲ

ಎಂಬಂಶ ಗಮನಾರ್ಹ. ಈ ಕ್ರಿಯೆ ಮುಖಾಮುಖಿ ನಡೆಯುವುದರಿಂದ 'ಕ್ರಿಯೆ-ಪ್ರತಿಕ್ರಿಯೆ' ಎರಡೂ ಒಂದಾದ ನಂತರ ಒಂದು ಅಥವಾ ಒಟ್ಟಿಗೆ ನಡೆಯುತ್ತವೆ. ಹೇಗೆಂದರೆ :




**ಗುಂಪು ಸಂವಹನೆ**

ಸಮಕಾಲೀನ ಸಾಮಾಜಿಕ ಸಂದರ್ಭ ತೀರಾ ಸಂಕೀರ್ಣವಾಗಿದ್ದು ಅಂತರ್‌ಸಂವಹನೆಯ ಮೂಲಕ ವಿಚಾರ ವಿನಿಮಯವನ್ನು ನಡೆಸುವುದು ಸುಲಭವಲ್ಲ. ಏಕಕಾಲಕ್ಕೆ ಒಂದು ದೊಡ್ಡ ಜನವರ್ಗಕ್ಕೆ ನೇರವಾಗಿ ವಿಷಯಗಳನ್ನು ತಲುಪಿಸಲು ಸಾಧ್ಯವಾಗುವ ಕ್ರಿಯೆಯೇ **ಗುಂಪು ಸಂವಹನೆ**. ಇಲ್ಲಿ ಒಬ್ಬ ವ್ಯಕ್ತಿ ಜನರ ಒಂದು ಗುಂಪಿಗೆ ನೇರವಾಗಿ, ಮುಖತಃ ವಿಷಯಗಳನ್ನು ಸರಬರಾಜು ಮಾಡಬಲ್ಲ. 'ಸಮಾಜ' ಎನ್ನುವುದೇ ಜನರ ಗುಂಪು, ಸಮುದಾಯ, ಸಮೂಹ, ತಂಡ ಎನ್ನುವುದನ್ನು ಸೂಚಿಸುತ್ತದೆ. ಒಬ್ಬ ವ್ಯಕ್ತಿ ಹಾಗೂ ಒಂದು ತಂಡದ ನಡುವೆ ನಡೆಯುವ ಸಂವಹನೆಯೇ **ಗುಂಪು ಸಂವಹನೆ** ಎನಿಸಿಕೊಳ್ಳುತ್ತದೆ. ಉದಾಹರಣೆಗೆ ಒಂದು ತರಗತಿಯಲ್ಲಿ ಉಪಾಧ್ಯಾಯರು ವಿದ್ಯಾರ್ಥಿಗಳಿಗೆ ಪಾಠ ಹೇಳಿಕೊಡುವ ಸಂದರ್ಭದಲ್ಲಿ ಶಿಷ್ಯರು ಒಂದು ಗುಂಪಿನಲ್ಲಿ ಕುಳಿತು ಉಪಾಧ್ಯಾಯರು ತಿಳಿಸಿಕೊಡುವ ಪಾಠವನ್ನು ಆಲಿಸುತ್ತಾರೆ.

ಆದರೆ ಅಂತರ್‌ಸಂವಹನೆಯ ಪರಿಣಾಮಗಳಿಗಿಂತ ಗುಂಪು ಸಂವಹನೆಯ ಪರಿಣಾಮಗಳು ಭಿನ್ನವೂ, ಜಟಿಲವೂ ಆಗಿರುತ್ತವೆ. ಏಕೆಂದರೆ ಗುಂಪು ದೊಡ್ಡದಾದಂತೆಲ್ಲ ವಕ್ತೃ-ಶ್ರೋತೃವಿನ ನಡುವಿನ ನಿಕಟತೆ ಕಡಿಮೆಯಾಗುತ್ತದೆ. ಉದಾಹರಣೆಗೆ ತರಗತಿಯಲ್ಲಿ ಕುಳಿತ ಎಲ್ಲ ಮಕ್ಕಳೂ ಉಪಾಧ್ಯಾಯರು ಹೇಳುವುದನ್ನು ಒಂದೇ ತೆರನಾಗಿ ಗ್ರಹಿಸುವುದಿಲ್ಲ. ಹಾಗೆಯೇ ಒಬ್ಬ ವ್ಯಕ್ತಿ ಭಾಷಣ ಮಾಡುವಾಗ ಪ್ರೇಕ್ಷಕವರ್ಗದಲ್ಲಿ ಕುಳಿತ ಎಲ್ಲರೂ ಅದನ್ನು ಒಂದೇ ರೀತಿಯಲ್ಲಿ ಗ್ರಹಿಸುವುದು ಸಾಧ್ಯವಾಗದು. ಈ ಎರಡೂ ಸಂದರ್ಭಗಳಲ್ಲಿ ಪ್ರೇಕ್ಷಕರ ಬುದ್ಧಿಮತ್ತೆ, ವಿಚಾರಾಸಕ್ತಿ, ಸಂದರ್ಭ, ಮನಃಸ್ಥಿತಿ, ಭಾಷಣಕಾರರು ಅಥವಾ ಉಪಾಧ್ಯಾಯರೊಂದಿಗಿನ ನಿಕಟತೆ ಇವೂ ಮುಖ್ಯವಾಗುತ್ತವೆ. ಹಾಗೆಯೇ ಪ್ರೇಕ್ಷಕರನ್ನು ಹಿಡಿದಿಟ್ಟುಕೊಳ್ಳುವಂತಹ ಸಂವಹನ ಕಲೆಯೂ ಸಂವಾಹಕ ಅಥವಾ ವಕ್ತೃವಿಗೆ ಕರಗತವಾಗಿರಬೇಕಾದ ಅಗತ್ಯವಿದೆ. ಹಾಗಾಗದಿದ್ದಲ್ಲಿ ಕ್ರಿಯೆಗೆ ತಕ್ಕ ಪ್ರತಿಕ್ರಿಯೆ ಸಾಧ್ಯವಾಗದೆ ಸಂವಹನೆಯ ಉದ್ದೇಶ ಸೋಲಬಹುದು. ಆದ್ದರಿಂದಲೇ ಗುಂಪು ಸಂವಹನೆ, ಅಂತರ್ ಸಂವಹನೆಗಿಂತಲೂ ಜಟಿಲ ಹಾಗೂ ಸಂಕೀರ್ಣ ಕ್ರಿಯೆ ಆಗುತ್ತದೆ. ಪರಿಣಾಮವಾಗಿ ವಕ್ತೃ-ಶ್ರೋತೃವಿನ ಪರಸ್ಪರ ಸಹಭಾಗಿತ್ವ ಹಾಗೂ ಸಾಮರಸ್ಯ ವಿಫಲವಾಗುತ್ತದೆ. ಆದರೂ ಗುಂಪು ಸಂವಹನೆಯ ಮೂಲಕ ಗುಂಪಿನಲ್ಲಿರುವ ಎಲ್ಲ ಶ್ರೋತೃಗಳನ್ನು ತಲುಪುವುದು ಸಾಧ್ಯವಾಗದೇ ಹೋದರೂ ಅಂತರ್‌ಸಂವಹನೆಗಿಂತ ಹೆಚ್ಚಾಗಿ ಅಂದರೆ ಒಬ್ಬರಿಗಿಂತ ಹೆಚ್ಚು ಜನರನ್ನು ಪರಿಣಾಮಕಾರಿಯಾಗಿ ತಲುಪಬಹುದು.



### ಸಮೂಹ ಸಂವಹನೆ

ಗುಂಪು ಸಂವಹನೆಯಂತೆಯೇ ಒಬ್ಬ ವಕ್ತೃವಿನಿಂದ ಒಂದು ಜನಸಮುದಾಯಕ್ಕೆ ವಿಚಾರ ವಿನಿಮಯವಾಗುವಂತಹ ಕ್ರಿಯೆ **ಸಮೂಹ ಸಂವಹನ** ಕ್ರಿಯೆ ಎಂದೂ ಆಗುತ್ತದೆ. ಆದರೆ ಇಲ್ಲಿ ಈ ಕ್ರಿಯೆ ನಡೆಯುವುದು ಒಂದು ತಾಂತ್ರಿಕ ಸಾಧನದ ಮೂಲಕ. ಇಲ್ಲಿಯೂ ವಕ್ತೃ - ಶ್ರೋತೃವಿನ ನಡುವೆ ಅರ್ಥಾತ್ ಸಂವಾಹಕ (Communicator) ಸಂವಹಿತ (Receiver)ರ ನಡುವೆ ಮಾಹಿತಿ ಹಂಚಿಕೆಯಾಗುವಂತಹ ಅಂತರ್‌ಸಂವಹನ ಕ್ರಿಯೆ ನಡೆಯುತ್ತದೆಯಾದರೂ ಇವೆರಡರ ನಡುವೆ ಇರುವ ಒಂದು ಸಣ್ಣ ಆದರೆ ಅತ್ಯಂತ ಪ್ರಭಾವಶಾಲಿ ಅಂತರವನ್ನು ಗಮನಿಸಬೇಕು. ಅದೇ ಒಂದು ತಾಂತ್ರಿಕ ಸಾಧನ ಅಥವ **ಮಾಧ್ಯಮ**. ಸಮೂಹ ಸಂವಹನ ಕ್ರಿಯೆ ಅತಿ ದೊಡ್ಡ ಹಾಗೂ ವೈವಿಧ್ಯಮಯ ಪ್ರೇಕ್ಷಕವರ್ಗವನ್ನು ಹಲಬಗೆಯಲ್ಲಿ ಪ್ರಭಾವಿತರನ್ನಾಗಿ ಮಾಡಲು ಪರಿಣತ ಸಂವಾಹಕರು ಮಾಧ್ಯಮಗಳನ್ನು ಬಳಸಿ ಸಂದೇಶಗಳನ್ನು ರವಾನಿಸುವ ಕ್ರಿಯೆ.

> *Mass communication is a process in which professional communicators use mechanical media to disseminate message / meanings in large and diverse audience in an attempt to influence them widely in a variety of ways.* [೧೮]

ಸಮೂಹ ಸಂವಹನೆ ತಾಂತ್ರಿಕ ಸಾಧನದ ಮೂಲಕ ನಡೆಯುತ್ತದೆ. ವ್ಯಕ್ತಿ-ವ್ಯಕ್ತಿಯ ನಡುವೆ ನೇರವಾಗಿ ಅಲ್ಲ. ಹಾಗಾಗಿ ಅಂತರ್‌ಸಂವಹನೆಯಂತೆ ಸಂಪೂರ್ಣವಾಗಿ ಹಾಗೂ ಗುಂಪು ಸಂವಹನೆಯಂತೆ ಭಾಗಶಃ ಪ್ರತಿಕ್ರಿಯೆ ಅಥವಾ ಪ್ರತಿಸ್ಪಂದನೆ ಸಮೂಹ ಸಂವಹನೆಯ ಸಂದರ್ಭದಲ್ಲಿ ಆ ಕೂಡಲೇ ವ್ಯಕ್ತವಾಗುವ ಪ್ರಮಾಣ ಕಡಿಮೆಯೂ ಗೌಣವೂ ಆಗಿರುತ್ತದೆ. ಇಲ್ಲಿ ವಕ್ತೃ - ಶ್ರೋತೃ ಮುಖಾಮುಖಿ ಭೇಟಿಯಾಗುವುದಿಲ್ಲ. ಮಧ್ಯದಲ್ಲಿ ವಕ್ತೃ ಬಳಸಬಹುದಾದಂತಹ ಸಾಧನವಿರುತ್ತದೆ. ಆದರೆ ಶ್ರೋತೃವಿಗೆ ತನ್ನ ಪ್ರತಿಕ್ರಿಯೆ ತಿಳಿಸಲು ಅಂತಹ ಸಾಧನ ಲಭ್ಯವಿರುವುದಿಲ್ಲ. ಅಂತಹ ಸಾಧನವೊಂದನ್ನು ಹೊಂದಿ ಪ್ರತಿಕ್ರಿಯೆ ವ್ಯಕ್ತಪಡಿಸಲು ಆತನಿಗೆ ಕಾಲಾವಕಾಶವೂ ವ್ಯವಧಾನವೂ ಆಸಕ್ತಿಯೂ ಬೇಕಾಗುತ್ತದೆ. ಅಂತಹ ಸಾಧನದ ಅನುಕೂಲತೆಯುಳ್ಳವರು ತಮ್ಮ ಪ್ರತಿಕ್ರಿಯೆ ತಿಳಿಸುವ ಸಂದರ್ಭಗಳೂ ಇದ್ದು, ಮಾಹಿತಿ ರವಾನೆಯಾದ ಜನಸಮೂಹಕ್ಕೆ ಹೋಲಿಸಿದರೆ ಅಂತಹವರ (ಪ್ರತಿಕ್ರಿಯಿಸುವವರ) ಪ್ರಮಾಣ ಅತೀ ಕಡಿಮೆ ಇರುವುದನ್ನು ಗಮನಿಸಬೇಕು.

ಅಂತರ್‌ಸಂವಹನ, ಗುಂಪು ಸಂವಹನ ಹಾಗೂ ಸಮೂಹ ಸಂವಹನ ಕ್ರಿಯೆಗಳಲ್ಲಿ ವಕ್ತೃ-ಶ್ರೋತೃವಿನ ಸಂಬಂಧ ಹಾಗೂ ಸಂವಹನೆಯ ಪರಿಣಾಮವನ್ನು ಚಿತ್ರದ ಮೂಲಕ ಹೀಗೆ ಸೂಚಿಸಬಹುದು.

**ವಿಲ್ಬರ್ ಶ್ರಾಮ್ ಮಾದರಿ** [೧೯]



ಇಲ್ಲಿ ತೋರಿಸಿರುವ ಚಿತ್ರದಂತೆ ಮೊದಲ ಸಂದರ್ಭದಲ್ಲಿ ವಕ್ತೃ-ಶ್ರೋತೃವಿನ ಪರಸ್ಪರ ಗ್ರಹಿಕೆಯ ಮಟ್ಟ ಅತಿ ಹೆಚ್ಚಿನದು. ಉದಾಹರಣೆಗೆ ತರಕಾರಿ ಅಂಗಡಿಯಲ್ಲಿ ಗ್ರಾಹಕ ತರಕಾರಿ ಬೆಲೆಯನ್ನು ನೇರವಾಗಿ ಅಂಗಡಿಯವನೊಂದಿಗೆ ಸಂಭಾಷಿಸುವುದರ ಮೂಲಕ ತಿಳಿದುಕೊಂಡು ಚೌಕಾಸಿ ಮಾಡಿ ಕೊಂಡುಕೊಳ್ಳಬಹುದು ಅಥವಾ ಬಿಡಬಹುದು. ಗ್ರಾಹಕ ಮಾರುವವನ ನಡುವೆ ಸಂವಹನೆಯ ಸಾಮರಸ್ಯ ಹೆಚ್ಚಾಗಿರುತ್ತದೆ. ಎರಡನೇ ಸಂದರ್ಭದಲ್ಲಿ ಹತ್ತಾರು ಮನೆಗಳಿರುವ ರಸ್ತೆಯಲ್ಲಿ ಒಬ್ಬ ತರಕಾರಿ ಮಾರುವವನು ಕೂಗುತ್ತಾ ಬಂದರೆ ಅದು ಎಷ್ಟು ಮಂದಿಗೆ ತಲುಪುತ್ತದೆ? ಅಂತಹವರಲ್ಲಿ ಎಷ್ಟು ಮಂದಿ ಮನೆಯಿಂದ ಹೊರಬಂದು ತರಕಾರಿ ಖರೀದಿಸುತ್ತಾರೆ? ಎಷ್ಟು ಮಂದಿಗೆ ಅದರ ಅವಶ್ಯಕತೆ ಇರುವುದಿಲ್ಲ? ಹಾಗೂ ಇನ್ನೆಷ್ಟು ಮಂದಿಗೆ, ಮಾರುವವನ ಕೂಗು ಕೇಳದೇ ಇರಬಹುದು? ಕೇಳಿಸಿದ್ದರೂ ಹೊರಬರುವ ಸನ್ನಿವೇಶದಲ್ಲಿ ಅವರಿಲ್ಲದೆ ಇರಬಹುದು. ಆದ್ದರಿಂದ ಈ ಸಂದರ್ಭದಲ್ಲಿ ತರಕಾರಿ ಮಾರುವವನ ಕೂಗಿಗೆ ಎಷ್ಟರಮಟ್ಟಿನ ಪ್ರತಿಕ್ರಿಯೆ ಸಿಕ್ಕೀತು? ಎಂಬುದನ್ನು ನೋಡಬಹುದು. ಖಂಡಿತವಾಗಿಯೂ ಅಂತರ್‌ಸಂವಹನೆಯ ಸಂದರ್ಭಕ್ಕಿಂತಲೂ ಇಲ್ಲಿ ಸಂವಹನ ಹೊಂದಾಣಿಕೆ ಕುಗ್ಗಿರುತ್ತದೆ. ಆದರೆ ಸಮೂಹ ಸಂವಹನೆಗಿಂತಲೂ ಹೆಚ್ಚಾಗಿರುತ್ತದೆ. ಹೇಗೆಂದರೆ ಮೂರನೆ ಸಂದರ್ಭದಲ್ಲಿ ದಿನಪತ್ರಿಕೆ, ರೇಡಿಯೊ ಅಥವಾ ದೂರದರ್ಶನದ ಮೂಲಕ ತರಕಾರಿ ಬೆಲೆಗಳು ಪ್ರಕಟಗೊಂಡರೆ ಅದು ಶ್ರೋತೃವಿನ ಅರಿವಿಗೆ ಬರುತ್ತದೆ. ಆದರೆ ಆ ಕೂಡಲೇ ಮಾರುಕಟ್ಟೆಗೆ ಹೋಗಿ ತರಕಾರಿಗಳನ್ನು ಖರೀದಿಸಲು ಅವರು ಮುಂದಾಗುವುದಿಲ್ಲ. ವಿಷಯವನ್ನು ತಿಳಿದುಕೊಂಡಿದ್ದು ಮಾರುಕಟ್ಟೆ ಕಡೆಗೆ ಹೋದಾಗ ಖರೀದಿಸಿ ಬರುತ್ತಾರೆ, ಅಥವಾ ಮಾರುಕಟ್ಟೆಗೆ ಹೋಗುವ ಸಂದರ್ಭ ಬಂದಾಗ ದಿನಪತ್ರಿಕೆ ತೆಗೆದು ತರಕಾರಿ ಬೆಲೆಗಳನ್ನು ತಿಳಿದುಕೊಂಡು ಹೋಗುತ್ತಾರೆ. ಅಥವಾ ಅದನ್ನು ಅವರು ಅವಲಂಬಿಸುವುದೂ ಇಲ್ಲ. ಇಲ್ಲಿ ಸಂವಹನೆ ನಡೆದ ಎಷ್ಟೋ ಸಮಯದ ನಂತರ ಪ್ರತಿಕ್ರಿಯೆ ವ್ಯಕ್ತವಾಗುತ್ತದೆ. ಅಥವಾ ಆಗದೆಯೂ ಇರಬಹುದು. ಇಷ್ಟಾದರೂ ಸಮೂಹ ಸಂವಹನೆಯ ಪ್ರಭಾವ ಜನ ಸಮೂಹದ ಮೇಲೆ ಅತೀ ಹೆಚ್ಚಾಗಿರಲು ಇರುವ ಕಾರಣಗಳನ್ನು ನಾವು ಹುಡುಕಬಹುದು.

ಸಮೂಹ ಸಂವಹನೆಯ ಸಂದರ್ಭದಲ್ಲಿ

✣ ಶ್ರೋತೃವಿನ ಪ್ರತಿಕ್ರಿಯೆ ತ್ವರಿತವಾಗಿ ತಿಳಿದು ಬರುವುದಿಲ್ಲ.

✣ ಮಾಧ್ಯಮವನ್ನು ಬಳಸಿಕೊಳ್ಳುವ ಕಲೆ / ವಿಧಾನದ ಬಗ್ಗೆ ಹೆಚ್ಚಿನ ಜ್ಞಾನದ ಅಗತ್ಯವಿರುತ್ತದೆ.

✣ ವಕ್ತೃವಿಗೂ ಈ ಸಾಧನಗಳ ಲಭ್ಯತೆ ಇರಬೇಕು.

✣ ಇದು ಅತೀ ಜಟಿಲವೂ ಸಂಕೀರ್ಣವೂ ಆದಂತಹ ಕ್ರಿಯೆ ಎನಿಸಿಕೊಂಡರೂ ಸಹ ಇದು ಅತ್ಯಂತ ಪ್ರಭಾವಶಾಲಿ, ಬಲಿಷ್ಠ, ಜನಪ್ರಿಯ ಸಂವಹನ ಮಾರ್ಗ ಎನಿಸಿದೆ. ಇದಕ್ಕೆ ಕೆಲವು ಮುಖ್ಯ ಕಾರಣಗಳು

  ★ ಅತೀ ಬೃಹತ್ತಾದ ವೈವಿಧ್ಯಮಯ ಪ್ರೇಕ್ಷಕ ವರ್ಗಕ್ಕೆ ಮಾಹಿತಿಯನ್ನು ಕನಿಷ್ಠ ಸಮಯದಲ್ಲಿ ಏಕಕಾಲಕ್ಕೆ ತಲುಪಿಸುವ ಸಾಮರ್ಥ್ಯ.

  ★ ಗ್ರಾಹಕ / ವಕ್ತೃವಿಗೆ ಮನದಟ್ಟಾಗುವಂತೆ ತಿಳಿಸಿ ಹೇಳಬಹುದಾದ ಹಾಗೂ ಮೇಲಿಂದ ಮೇಲೆ ತಿಳಿಸಬಹುದಾದ ಶಕ್ತಿ.

  ★ ವಿವಿಧ ವಯೋವರ್ಗ, ಲಿಂಗ, ವೃತ್ತಿಪರ ಜನ ಸಮೂಹಕ್ಕೆ ತಿಳುವಳಿಕೆ.

  ★ ಸುದೀರ್ಘ ಕಾಲಾವಧಿವರೆಗೆ ಉಳಿಯುವ ಅದರ ಪ್ರಭಾವ ಹಾಗೂ ಗ್ರಾಹಕ ಪ್ರತಿಕ್ರಿಯೆ.

*If an idea is communicated to hundreds of others in a fraction of the time it would take to visit them individually. This is mass communication - the process of delivering information, ideas & attitudes to a sizable and diversified audience through use of media developed for that purpose.*[೨೦]

ವಿಶಾಲ ಭೌಗೋಳಿಕ ಪ್ರದೇಶಕ್ಕೆ ವ್ಯಾಪಿಸಿಕೊಂಡ ಅಧಿಕ ಸಂಖ್ಯೆಯ ಸಂವಹಿತ (receivers)ರಿಗೆ ಏಕಕಾಲಕ್ಕೆ ಮಾಧ್ಯಮಗಳ ಮೂಲಕ ಮಾಹಿತಿ ರವಾನಿಸುವ ಕ್ರಮವನ್ನು ಹೀಗೆ ತೋರಿಸಬಹುದು.

**ಸಮೂಹ ಸಂವಹನ ಪ್ರಕ್ರಿಯೆ**




ವಿಜ್ಞಾನ ಮತ್ತು ತಂತ್ರಜ್ಞಾನದ ಆವಿಷ್ಕಾರ ಹೆಚ್ಚಾದಂತೆ ತಾಂತ್ರಿಕ ಸಾಧನಗಳು ಸಂವಹನ ಪ್ರಪಂಚವನ್ನು ಆವರಿಸಿಕೊಂಡಿವೆ. ಉದಾಹರಣೆಗೆ ಮುದ್ರಣಯಂತ್ರಗಳು, ಕ್ಯಾಮರಾಗಳು, ಸಿನೆಮಾ, ರೇಡಿಯೊ, ದೂರದರ್ಶನ, ಉಪಗ್ರಹಗಳು, ಸಂಚಾರಿ ದೂರವಾಣಿಗಳು, ಫ್ಯಾಕ್ಸ್, ಕಂಪ್ಯೂಟರ್ ಮುಂತಾದವು. ಸಮೂಹ ಸಂವಹನೆಯ ಸಂದರ್ಭದಲ್ಲಿ ಒಂದು ಮಾಹಿತಿ ಮೂಲದಿಂದ ಏಕಕಾಲದಲ್ಲಿ ಅಸಂಖ್ಯಾತ ಮಂದಿಗೆ ಮಾಹಿತಿ ತಲುಪಿಸುವ ವ್ಯವಸ್ಥೆ ಇರುವುದರ ಜೊತೆಗೆ, ಸಮಾಜವನ್ನು ನಿರಂತರವಾಗಿ ಪರಿವೀಕ್ಷಿಸಿ ವಿಮರ್ಶಿಸುವ ಸ್ವಾತಂತ್ರ್ಯ ಹೊಂದಿರುವುದೂ ಈ ಮಾಧ್ಯಮಗಳ ಶಕ್ತಿಯಾಗಿದೆ. ಇದನ್ನು ಡೇನಿಯಲ್ ಲರ್ನರ್ 'Mobility multipliers' ಎಂದೂ ವಿಲ್ಬರ್ ಶ್ರಾಮ್ 'Magic multipliers' ಎಂದೂ ಬಣ್ಣಿಸಿದರೆ ಮ್ಯಾಕ್ ಲ್ಯೂಹೆನ್ 'ಮಾಧ್ಯಮವೇ ಸಂದೇಶ' ಎಂದಿದ್ದಾರೆ. ಜನ ಸಮುದಾಯ ಹಾಗೂ ಜನ ಸಮುದಾಯದ ನಡುವೆ ಸಂಪರ್ಕ ಏರ್ಪಟ್ಟಾಗ ಜಗತ್ತು ಚಿಕ್ಕದಾಗುತ್ತಾ ಬರುತ್ತದೆ. ವಿಶ್ವದ ಯಾವುದೋ ಒಂದು ಮೂಲೆಯಲ್ಲಿರುವ ವ್ಯಕ್ತಿ ಮತ್ತೊಂದು ಮೂಲೆಯಲ್ಲಿರುವ ವ್ಯಕ್ತಿಯೊಂದಿಗೆ ದೂರದರ್ಶನ, ಬಾನುಲಿ, ದೂರವಾಣಿ ಅಥವಾ ಕಂಪ್ಯೂಟರ್ ಮೂಲಕ ಸಂಪರ್ಕ ಸಾಧಿಸುವುದು ಸಾಧ್ಯವಾದರೆ, ಆ ವ್ಯಕ್ತಿಯಿರುವ ಪ್ರದೇಶವನ್ನು ಈ ವ್ಯಕ್ತಿಯಿರುವ ಪ್ರದೇಶದಿಂದ ಗೌಪ್ಯವಾಗಿಯೂ, ಅಲ್ಲಿನ ಪರಿಸರ, ಸನ್ನಿವೇಶಗಳನ್ನೇ ತಿಳಿಸದಂತೆಯೂ ಇರಿಸುವುದು ಸಾಧ್ಯವಿಲ್ಲ. ಶಕ್ತಿಶಾಲಿ ಮಾಧ್ಯಮಗಳ ಮೂಲಕ ಸಂವಹನೆಯ ಪ್ರಕ್ರಿಯೆ ತೀವ್ರತೆಯನ್ನು ಪಡೆಯುವುದರ ಜೊತೆಗೆ ವಿಶ್ವದ ಜನ ಸಮುದಾಯವನ್ನು ಒತ್ತೊಟ್ಟಿಗೆ ತರುತ್ತದೆ. ಜಗತ್ತಿನ ಪ್ರತಿಯೊಂದು ಪ್ರದೇಶವೂ ಅನಾವರಣಗೊಳ್ಳುತ್ತವೆ. ವಿಶ್ವಗ್ರಾಮದ ಪರಿಕಲ್ಪನೆ ಒಡಮೂಡುತ್ತದೆ.

ವಿಲ್ಬರ್ ಶ್ರಾಮ್ ಸಮೂಹ ಸಂವಹನೆ ಹಾಗೂ ಮಾಹಿತಿ ವ್ಯವಸ್ಥೆ ಎನ್ನುವುದು ಸಂತಸಮಯ ರಾಷ್ಟ್ರ ನಿರ್ಮಾಣಕ್ಕಾಗಿ ಹಾಗೂ ಜಗತ್ತಿನ ಇತರ ಜನವರ್ಗದೊಂದಿಗೆ ಸೌಹಾರ್ದಪೂರ್ಣ ಬಾಂಧವ್ಯ ಬೆಳೆಸಿಕೊಳ್ಳುವುದಕ್ಕಾಗಿ ಮಾಹಿತಿ, ಜ್ಞಾನ, ಶಕ್ತಿ ಹಾಗೂ ಶ್ರಮವನ್ನು ಬಳಸಿಕೊಳ್ಳುವ ಪ್ರಕ್ರಿಯೆ ಎಂದು ವರ್ಣಿಸಿದ್ದಾನೆ.

ಭಾರತದ ಮೊದಲ ಪ್ರಧಾನ ಮಂತ್ರಿ ಪಂಡಿತ್ ಜವಹರಲಾಲ್ ನೆಹರೂ ಅವರ ದೃಷ್ಟಿಯಲ್ಲಿ ಸಮೂಹ ಸಂವಹನೆ 'ಒಂದುಗೂಡಿ ಮಾತನಾಡುವ ಕ್ರಿಯೆ'- 'Talking together ' or involving people in a participatory dialogue or communication' ರಾಷ್ಟ್ರಪಿತ ಮಹಾತ್ಮಾಗಾಂಧೀಜಿಯವರು ಹೇಳಿರುವಂತೆ ಇದು 'ಶ್ರೋತೃವಿನೊಂದಿಗಿನ ತದನುಭೂತಿ' (empathy with the receiver). ದಿವಂಗತ ಪ್ರಧಾನಿ ಇಂದಿರಾಗಾಂದಿ ಆಧುನಿಕ ಮಾದರಿಯ ಸಮೂಹ ಸಂವಹನೆ ಮುಂದುವರೆದ ಪ್ರದೇಶಗಳಿಗೆ ಮಾತ್ರ ಸೀಮಿತವಾಗಿದೆ. ಇದು ಕುಗ್ರಾಮ, ಹಿಂದುಳಿದ ಪ್ರದೇಶ, ಕೊಳಚೆ ನಿವಾಸಿಗಳಿಗೂ, ಬಡ, ಅನಕ್ಷರಸ್ಥ, ಅವಕಾಶಗಳಿಂದ ವಂಚಿತರಾದ ಜನರಿಗೂ ತಲುಪಬೇಕು ಎಂದು ಆಶಿಸಿದ್ದಾರೆ. ಸಮಾಜದ ಎಲ್ಲ ವರ್ಗಗಳ ಜನ ಆಧುನಿಕ ಸಮೂಹ ಮಾಧ್ಯಮ ಸಾಧನಗಳನ್ನು ಹೊಂದುವುದು ಸಾಧ್ಯವಾದರೆ ಸಮೂಹ ಸಂವಹನೆಯ ಮೂಲ ಉದ್ದೇಶ ಸಾರ್ಥಕವಾಗುತ್ತದೆ. ಸಮೂಹ ಸಂವಹನದಿಂದ ಜಾತಿ, ಮತ, ಬಡವ, ಶ್ರೀಮಂತ ಎಂಬ ಭೇದವಿಲ್ಲದೆ ಎಲ್ಲರಿಗೂ ಸರಿಸಮಾನವಾದ ಕಾರ್ಯಕ್ರಮಗಳನ್ನು, ಆ ಮೂಲಕ ಜ್ಞಾನವನ್ನು, ಪ್ರಪಂಚದ ಆಗು ಹೋಗುಗಳನ್ನು ಶೀಘ್ರವಾಗಿ ನೀಡಬಹುದು. ಇದರಿಂದ ವ್ಯಕ್ತಿ-ವ್ಯಕ್ತಿಗಳ ನಡುವೆ, ಸಮಾಜ-ಸಮಾಜಗಳ ನಡುವೆ, ದೇಶ-ದೇಶಗಳ ನಡುವೆ ಅಂತರ ಕಡಿಮೆಯಾಗುತ್ತದೆ.

### ಲ್ಯಾಸ್‌ವೆಲ್ ಸಂವಹನ ಸಿದ್ಧಾಂತ

ಅಮೆರಿಕದ ರಾಜಕೀಯ ಶಾಸ್ತ್ರಜ್ಞ ಹೆರಾಲ್ಡ್ ಡಿ. ಲ್ಯಾಸ್‌ವೆಲ್ ೧೯೪೮ರಲ್ಲಿ ಸಮೂಹ ಸಂವಹನ ಎನ್ನುವುದನ್ನು ಮೊದಲು ಹೀಗೆ ವಿವರಿಸಿದರು.

| | | | | |
|---|---|---|---|---|
| ಯಾರು → | ಏನು ಹೇಳಿದರು → | ಯಾವ ಮಾಧ್ಯಮದಲ್ಲಿ → | ಯಾರಿಗೆ → | ಎಷ್ಟು ಪರಿಣಾಮಕಾರಿಯಾಗಿ |
| (ಸಂವಾಹಕ) | (ಸಂದೇಶ) | (ಮಾಧ್ಯಮ) | (ಸಂವಹಿತ) | (ಪ್ರತಿಕ್ರಿಯೆ) |

ಈ ಮಾದರಿಯನ್ನು ಲ್ಯಾಸ್‌ವೆಲ್ ಮತ್ತೆ ಸುಧಾರಣೆಗೊಳಪಡಿಸಿದರು.

| | | | | |
|---|---|---|---|---|
| ಯಾರು → | ಏನು ಹೇಳಿದರು → | ಯಾವ ಮಾಧ್ಯಮದಲ್ಲಿ → | ಯಾರಿಗೆ → | ಎಷ್ಟು ಪರಿಣಾಮಕಾರಿಯಾಗಿ |
| (ನಿಯಂತ್ರಿತ ಅಧ್ಯಯನ) | (ಸಂದರ್ಭ ವಿಶ್ಲೇಷಣೆ) | (ಮಾಧ್ಯಮ ಅಧ್ಯಯನ) | (ಶ್ರೋತೃ ಸಂಶೋಧನೆ) | (ಪರಿಣಾಮದ ವಿಶ್ಲೇಷಣೆ) |

### ಬ್ರಾಡೋಕ್ ಸಿದ್ಧಾಂತ (Broaddock's modification Theory)

ಲ್ಯಾಸ್‌ವೆಲ್‌ರ ಸಂವಹನ ಪ್ರಕ್ರಿಯೆಯ ಮಾದರಿಗೆ 'ಸಂದರ್ಭ' ಹಾಗೂ 'ಉದ್ದೇಶ'ವನ್ನು ಸೇರಿಸುವ ಬ್ರಾಡೋಕ್‌ರ ಸಿದ್ಧಾಂತ ಚರ್ಚೆಗೆ ಹೆಚ್ಚು ಗ್ರಾಸವಾಯಿತಾದರೂ ಸಂವಹನ ಸ್ವರೂಪವನ್ನು ಅರಿತುಕೊಳ್ಳುವಲ್ಲಿ ಸರಳವೂ ಉಪಯುಕ್ತವೂ ಎನಿಸಿತು.

| | | | |
|---|---|---|---|
| ಯಾರು → | ಏನು ಹೇಳಿದರು → | ಯಾವ ಮಾಧ್ಯಮದಲ್ಲಿ<br>ಯಾವ ಸಂದರ್ಭದಲ್ಲಿ<br>ಯಾವ ಉದ್ದೇಶದಿಂದ<br>ಎಷ್ಟು ಪರಿಣಾಮಕಾರಿಯಾಗಿ → | ಯಾರಿಗೆ ಹೇಳಿದರು |

ಇಷ್ಟಾದರೂ ಇನ್ನೂ ಅಭಿವೃದ್ಧಿ ಹೊಂದದ ಪ್ರದೇಶಗಳಲ್ಲಿ ಆಧುನಿಕ ಸಮೂಹ ಮಾಧ್ಯಮಗಳ ಮೂಲಕ ಸಮೂಹ ಸಂವಹನೆ ಕಷ್ಟತರವಾಗುತ್ತಿದೆ. ಅನಕ್ಷರತೆ, ಬಡತನ, ಜ್ಞಾನದ ಕೊರತೆ ಮುಂತಾದ ಪಿಡುಗುಗಳೂ ಆಧುನಿಕ ಸಮೂಹ ಮಾಧ್ಯಮಗಳ ಬಳಕೆಗೆ ತಡೆಯೊಡ್ಡುತ್ತವೆ. ಅಂತಹ ಪ್ರದೇಶಗಳಲ್ಲಿ ಪಾರಂಪರಿಕ ಸಮೂಹ ಮಾಧ್ಯಮಗಳು ಯಶಸ್ವಿಯಾಗುತ್ತವೆ.

**ಪ್ರತಿಕ್ರಿಯಾತ್ಮಕ ಸಂವಹನೆ**

ಇದು ಸಂವಹನ ಪ್ರಕ್ರಿಯೆಯ ಕೊನೆಯ ಹಂತ. ಸಂವಾಹಕನು ನೀಡುವ ಸಂದೇಶವನ್ನು ಗ್ರಹಿಸಿದ ಸಂವಹಿತನು ಅದಕ್ಕೆ ನೀಡುವ ಪ್ರತಿಕ್ರಿಯೆ, ಸ್ಪಂದನೆ ಇದು. ಶ್ರೋತೃವಿನ ಗ್ರಹಿಕಾ ಸಾಮರ್ಥ್ಯದ ಪ್ರದರ್ಶನ. ಅಂತರ್‌ಸಂವಹನೆಯ ಸಂದರ್ಭದಲ್ಲಿ ಈ ಪ್ರತಿಕ್ರಿಯೆ ಶ್ರೋತೃವಿನಿಂದ ವಕ್ತೃವಿಗೆ ನೇರವಾಗಿ, ತತ್‌ಕ್ಷಣದಲ್ಲಿ ಹರಿದುಬರುತ್ತದೆ. ಇದು ಭಾಷೆಯಷ್ಟೇ ಅಲ್ಲದೆ ದೈಹಿಕ ಚಲನವಲನಗಳು, ಮುಖಭಾವ, ದೃಷ್ಟಿ ಸಂಪರ್ಕ, ನಡೆ-ನುಡಿ ಎಲ್ಲ ಬಗೆಯ ಆಂಗಿಕ ಸಂಜ್ಞೆಗಳ ಮೂಲಕ ಪ್ರದರ್ಶಿತವಾಗುತ್ತದೆ. ಉದಾಹರಣೆಗೆ ಒಬ್ಬ ವ್ಯಕ್ತಿ ಮಾತನಾಡುತ್ತಿರುವಾಗ ಕೇಳಿಸಿಕೊಳ್ಳುತ್ತಿರುವಾತ ಅತ್ತಿತ್ತ ಲಕ್ಷ್ಯ ಹರಿಸಿದರೆ ಆತನಿಗೆ ವಕ್ತೃ ಹೇಳುತ್ತಿರುವ ವಿಚಾರದಲ್ಲಿ ಆಸಕ್ತಿ ಇಲ್ಲ ಎಂದರ್ಥ ಮೂಡುತ್ತದೆ. ಹಾಗೆ ಒಬ್ಬ ವ್ಯಕ್ತಿ ಮತ್ತೊಬ್ಬನನ್ನು ಬಯ್ಯುವಾಗ, ಬಯ್ಯಿಸಿಕೊಂಡ ವ್ಯಕ್ತಿಯೂ ಆ ಕೂಡಲೇ ಹಿಂದಿರುಗಿ ಮಾತನಾಡುವ ಮೂಲಕ ಅಥವಾ ಏನನ್ನೂ ಆಡದೆ ನಿರ್ಲಕ್ಷ್ಯ ತೋರುವ ಮೂಲಕ ತನ್ನ ಪ್ರತಿಕ್ರಿಯೆ ವ್ಯಕ್ತಪಡಿಸಬಹುದು. ಒಟ್ಟಿನಲ್ಲಿ ಒಂದು ಕ್ರಿಯೆಗೆ ಒದಗಿಬರುವ ಪ್ರತಿಕ್ರಿಯಾತ್ಮಕ ಅಥವಾ ಪ್ರತಿಸ್ಪಂದನೀಯ ಸಂವಹನೆಯೇ (Feed back) ಇದಾಗಿದೆ. ಗುಂಪು ಸಂವಹನೆಯಲ್ಲಿ ಇಂತಹ ಪ್ರತಿಕ್ರಿಯಾತ್ಮಕ ಸಂವಹನೆ ಸಂಪೂರ್ಣವಾಗಿ ನಡೆಯುವುದಿಲ್ಲ. ಏಕೆಂದರೆ ಗುಂಪಿನಲ್ಲಿರುವ ಎಷ್ಟೋ ಮಂದಿ ಹೇಳಿದ್ದನ್ನು ಕೇಳಿಸಿಕೊಳ್ಳದೆಯೋ ಅಥವಾ ಕೇಳಿಸಿಕೊಂಡದ್ದನ್ನು ಅರ್ಥಮಾಡಿಕೊಳ್ಳದೆಯೂ ಇರಬಹುದು. ಸಮೂಹ ಸಂವಹನೆಯಲ್ಲಂತೂ ಶ್ರೋತೃವಿನ ಪ್ರತಿಕ್ರಿಯೆ ಆ ಕೂಡಲೇ ಸಿಗುವ ಸಂಭವ ಅತೀ ಕಡಿಮೆ ಹಾಗೂ ಗೌಣ. ಆಧುನಿಕ ಸಮೂಹ ಮಾಧ್ಯಮಗಳನ್ನು ಬಳಸಿ ನಡೆಸುವ ಸಮೂಹ ಸಂವಹನೆಯ ಸಂದರ್ಭದಲ್ಲಿ ಕೇಳುಗ-ಹೇಳುಗನ ಜೊತೆ ನೇರವಾಗಿ ಸಂಪರ್ಕ ಹೊಂದದೆ ಹೋಗುವುದೇ ಇದಕ್ಕೆ ಮುಖ್ಯಕಾರಣ. ಇಂತಹ ಸಂದರ್ಭಗಳಲ್ಲಿ ಶ್ರೋತೃ ಸಮೀಕ್ಷೆ ಮೂಲಕ ಪ್ರತಿಕ್ರಿಯೆಗಳನ್ನು ಸಂಗ್ರಹಿಸಲಾಗುತ್ತದೆ. ಆಗಲೂ ಸಹ ಸಂಪೂರ್ಣ ಶ್ರೋತೃಗಣದ ಅಭಿಪ್ರಾಯ ಸಂಗ್ರಹ ಸಾಧ್ಯವಾಗುವುದಿಲ್ಲ. ಆಧುನಿಕ ಸಮೂಹ ಮಾಧ್ಯಮಗಳ ಬಳಕೆಯಿಂದ ವಕ್ತೃ-ಶ್ರೋತೃವಿನ ನಡುವೆ ದ್ವಿಮುಖ ಸಂವಹನೆ ಕಷ್ಟಕರವಾದದ್ದೆಂದೇ ಹೇಳಬಹುದು. ಆದರೂ ಏಕಕಾಲಕ್ಕೆ ಅಪಾರ ಸಂಖ್ಯೆಯ ಶ್ರೋತೃವರ್ಗವನ್ನು ನೇರವಾಗಿ ತಲುಪುವುದರಿಂದ ಈ ಸಮೂಹ ಮಾಧ್ಯಮಗಳು ಅತ್ಯಂತ ಬಲಿಷ್ಠವಾದ ಸಂವಹನ ಮಾಧ್ಯಮಗಳೆನಿಸಿವೆ.

## ೩. ಪ್ರಾಚೀನ ಭಾರತದಲ್ಲಿ ಸಂವಹನ ವಿಧಾನಗಳು

ವೈವಿಧ್ಯಮಯ ಧರ್ಮ, ಸಂಸ್ಕೃತಿ, ಹವಾಗುಣಗಳಿಗೆ ತೊಟ್ಟಿಲಾದಂತೆ ಭರತವರ್ಷ ಹಲವು ಬಗೆಯ ಭಾಷೆ, ಉಪಭಾಷೆಗಳಿಗೂ ಮಡಿಲಾಗಿದೆ. ಸಮೃದ್ಧವಾದ ನೈಸರ್ಗಿಕ ಹಾಗೂ ಮಾನವ ಸಂಪನ್ಮೂಲದೊಂದಿಗೆ ಬೀಗುತ್ತಿರುವ ಈ ನೆಲ ತನ್ನ ಪ್ರಾಚೀನತೆಗೂ ಅದರ ಜೊತೆ ಬೆಳೆದುನಿಂತ ನಾಗರಿಕತೆಗೂ ಅದರಾಚೆಗೂ ಮೀರಿನಿಂತ ಆಧುನಿಕತೆಗೂ ಮೈದೆರೆದುಕೊಂಡಿದೆ. ಹೀಗೆ ನಾಡು ಸಾರೋದ್ಧಾರವಾಗಿ ಬೆಳೆಯಲು ಮುಖ್ಯವಾಗಿ ನೆರವಾದದ್ದು ಅದರ ಸಂವಹನಶೀಲತೆ. ಮುಂಚಿನಿಂದಲೂ, ಇತ್ತೀಚಿನ ದಿನಗಳಲ್ಲೂ ಭಾರತ ಸಂವಹನೆಯ ಒಂದು ಪ್ರಯೋಗಶಾಲೆಯಂತೆ ಸಂವಹನ ತತ್ವ

ಸಿದ್ಧಾಂತಗಳನ್ನು, ತಂತ್ರಗಳನ್ನು, ಮಾದರಿಗಳನ್ನು, ಪ್ರಯೋಗ-ಆವಿಷ್ಕಾರಗಳನ್ನು ಬಳಕೆಗೆ ತಂದಿದೆ. ಜಗತ್ತಿನ ಅತ್ಯಂತ ಸಮರ್ಥ ಸಂವಾಹಕರೂ ಈ ನೆಲದಲ್ಲಿ ಹುಟ್ಟಿ ಬಂದಿದ್ದಾರೆ.

ಹಲವು ನಾಗರಿಕತೆಗಳಿಗೆ ನೆಲೆಯಾದ ಭಾರತದಲ್ಲಿ ಸಮೂಹ ಸಂವಹನೆ ಅತಿ ಪ್ರಾಚೀನವಾದದ್ದು. ಕ್ರಿ.ಪೂ. ೩೫೦೦೦ - ೨೦೦೦೦ದ ಸುಮಾರಿನ ಪುರಾತನ ಶಿಲಾಯುಗದಲ್ಲಿ ನಾಗರಿಕತೆಯ ಮೊದಮೊದಲ ಹೆಜ್ಜೆಗಳು ಕಾಣಬರುತ್ತಿದ್ದು ಆ ಯುಗದ ಸಂಸ್ಕೃತಿಯ ಸಂಕೇತಗಳಾಗಿ ಈಟಿ, ಕೊಡಲಿ, ಕತ್ತಿ, ಸುತ್ತಿಗೆಯಂತಹ ಭೌತಿಕ ವಸ್ತುಗಳಿದ್ದವೆಂದು ಹೇಳಲಾಗುತ್ತದೆ. ಕಲ್ಲುಗಳ ಘರ್ಷಣೆಯಿಂದ ಬೆಂಕಿ ಉತ್ಪಾದಿಸಿದ್ದು ಆ ಯುಗದಲ್ಲೇ. ಭಾಷೆಬರದ ಸ್ಥಿತಿಯಲ್ಲಿ ಪ್ರಾಣಿಗಳಂತೆ ಕೂಗಿ ಕರೆಯುವ ಮೂಲಕ ಸಂವಹನೆ ನಡೆಯುತ್ತಿತ್ತು. ಕ್ರಿ.ಪೂ. ೨೦೦೦೦ - ೧೦೦೦೦ದವರೆಗಿನ ಮಧ್ಯ ಶಿಲಾಯುಗದಲ್ಲಿ ಶಿಲಾಯುಧಗಳು, ಸರಳ ವಿನ್ಯಾಸದ ಮಡಕೆಗಳು, ಬೆಣಚುಕಲ್ಲಿನ ಆಯುಧಗಳು, ಕುದುರೆ, ಜಿಂಕೆ, ದನ, ನಾಯಿ, ಕುರಿಯ ಮೂಳೆಗಳಂತಹ ಅವಶೇಷಗಳು ಆಗಿನ ಸಂಸ್ಕೃತಿಯ ಪ್ರತೀಕಗಳಾಗಿ ದೊರೆತಿವೆ. ಕ್ರಿ.ಪೂ. ೧೦೦೦೦ - ೩೦೦೦ದವರೆಗಿನ ನೂತನ ಶಿಲಾಯುಗದಲ್ಲಿ ಸಾಂಸ್ಕೃತಿಕ ಪ್ರಗತಿಯಾದದ್ದು ಗೋಚರವಾಗುತ್ತದೆ. ಸಂಘಜೀವನ ಅಥವಾ ಗ್ರಾಮಜೀವನ ಪ್ರಾರಂಭವಾದದ್ದೇ ಇಲ್ಲಿಂದ. ಕಪ್ಪುಕಲ್ಲಿನ ನಯವಾದ ಆಯುಧಗಳು, ಮಡಿಕೆ, ವ್ಯವಸಾಯದ - ಪಶುಪಾಲನೆಯ ಸಾಧನ ಸಲಕರಣೆಗಳು, ಬಟ್ಟೆಬರೆಯೂ ಈ ಕಾಲದಲ್ಲಿ ಬಳಕೆಗೆ ಬಂದಿವೆ.

ಅನೇಕ ನಂಬಿಕೆ, ಆಚರಣೆ, ಸಂಪ್ರದಾಯಗಳೂ ಆ ಕಾಲದಲ್ಲಿ ಚಾಲ್ತಿಗೆ ಬಂದಿವೆ. ಅದೇ ಕಾಲಘಟ್ಟದಲ್ಲಿ 'ಮಾತು' ಎನ್ನುವುದು 'ಭಾಷೆ'ಯ ಸ್ವರೂಪ ಪಡೆದಿರುವಂತಿದೆ. ಮದ್ರಾಸಿನ ಕಾಡು ನಿವಾಸಿಗಳ 'ಮುಂಡಾ' ಭಾಷೆ, ಕಾಳಿಬೆಟ್ಟಗಳ ಜನರ 'ಮಾನ್ ಬಿಮರ್' ಭಾಷೆ, ಆ ಕಾಲದಲ್ಲಿ ಭಾರತದವರೆಗೆ ಹಬ್ಬಿದ್ದ ಆಸ್ಟ್ರೇಲಿಯಾ ನಿವಾಸಿಗಳಾದ ಪ್ರೋಟೋ ಆಸ್ಟ್ರೋಲಾಯಿಡರು ಬಳಸುತ್ತಿದ್ದ ಭಾಷೆ ಇವೆಲ್ಲ ಆಸ್ಟ್ರಿಕ್ ಗುಂಪಿಗೆ ಸೇರಿದ್ದ ಭಾಷೆಗಳಾಗಿದ್ದವು. ಚಿತ್ರಲಿಪಿ ಮತ್ತಿತರ ಮುದ್ರೆಗಳು ಆ ಕಾಲದ ಸಂವಹನ ವೈಶಿಷ್ಟ್ಯಗಳೆನಿಸಿವೆ.

ಒಟ್ಟಿನಲ್ಲಿ ನೂತನ ಶಿಲಾಯುಗದ ಸಂದರ್ಭದಲ್ಲೇ ಸಂವಹನೆಯ ವಿವಿಧ ಪ್ರಕಾರಗಳನ್ನು ಗುರುತಿಸುವುದಕ್ಕೆ ಸಾಕಷ್ಟು ಪುರಾವೆಗಳಿವೆ. ವೈದಿಕ ಸಂಸ್ಕೃತಿಯ ಕಾಲ ಅಂದರೆ ಕ್ರಿ.ಪೂ. ೨೦೦೦ - ೧೦೦೦ದ ಅವಧಿಯಂತೂ ವೇದ ಸಂಸ್ಕೃತಿ ಅಥವಾ ಆರ್ಯ ಸಂಸ್ಕೃತಿಯ ಕಾಲವೇ. ನಾಗರಿಕತೆ ತ್ವರಿತಗತಿಯಲ್ಲಿ ಬೆಳೆಯುತ್ತಿದ್ದದ್ದೂ ಇದೇ ಸಮಯದಲ್ಲಿ. ಜರ್ಮನಿಯ ಖ್ಯಾತ ಭಾಷಾಶಾಸ್ತ್ರಜ್ಞ ಪ್ರೊ. ಮ್ಯಾಕ್ಸ್ ಮುಲ್ಲರ್ ಅವರ ಪ್ರಕಾರ ಆರ್ಯರು ಅನೇಕ ಭಾಷೆಗಳನ್ನು ಬಲ್ಲವರಾಗಿದ್ದರು. ನಾಲ್ಕು ವೇದಗಳು, ಹತ್ತು ಉಪನಿಷತ್ತುಗಳು, ಸಂಗೀತ, ನೃತ್ಯ, ನಾಟಕಗಳಂತಹ ಕಲೆಗಳು, ರಥ, ಕುದುರೆ ಓಟದ ಕ್ರೀಡೆಗಳು, ಸುಸಂಸ್ಕೃತ ಸಾಮಾಜಿಕ ವ್ಯವಸ್ಥೆ, ಹೋಮ-ಹವನ, ವಿವಾಹ-ಪಾಣಿಗ್ರಹಣದ ಸಂಪ್ರದಾಯಗಳು, ದೇವ-ದೇವತೆಗಳ ಆರಾಧನೆ, ಆಡಳಿತ ವ್ಯವಸ್ಥೆ - ಹೀಗೆ ವ್ಯವಸ್ಥಿತ ಸಂಘಜೀವನ ಹಾಗೂ ಸಂವಹನ ಜೀವನ ಉದ್ಭವಿಸಿದ್ದನ್ನು ಚರಿತ್ರೆ ಸೂಚಿಸುತ್ತದೆ.

ನಾಗರಿಕತೆಯ ಚಿತ್ರ ಅನಾವರಣಗೊಳ್ಳುತ್ತಿದ್ದಂತೆಯೇ ಸಂವಹನೆಯ ಪರಿಚಲನೆಗೆ ಒಳಪಟ್ಟವು ಭಾರತೀಯ ಮಹಾಕಾವ್ಯಗಳು, ಪುರಾಣೇತಿಹ್ಯಗಳು. ನಾರದ ಮುನಿಯಂತಹ ಒಬ್ಬ ಬ್ರಹ್ಮಚಾರಿ ಸಂತ ವೀಣೆಯಂತಹ ವಾದ್ಯವೊಂದನ್ನು ಮೀಟುತ್ತಾ ಒಬ್ಬ ವರದಿಗಾರನಂತೆ ಒಂದೆಡೆಯಿಂದ ಮತ್ತೊಂದೆಡೆಗೆ ತ್ರಿಲೋಕಗಳಲ್ಲೂ ಸಂಚರಿಸಿ ಮೌಖಿಕವಾಗಿ ಸುದ್ದಿ ಪ್ರಸರಣ ಮಾಡುತ್ತಿದ್ದನು ಎಂದು ಪುರಾಣ ಹೇಳುತ್ತದೆ.

ಇದೇ ರೀತಿ ಮಹಾಭಾರತದ ಒಂದು ಪ್ರಮುಖ ಪಾತ್ರ ಸಂಜಯ. ಕುರುಕ್ಷೇತ್ರದಲ್ಲಿ ನಡೆದ ಮಹಾಯುದ್ಧದ ಸಂದರ್ಭದಲ್ಲಿ ಕೃಷ್ಣಾರ್ಜುನರ ನಡುವೆ ನಡೆವ ಮಹಾಸಂವಾದವನ್ನು ಅಂಧದೊರೆ ಧೃತರಾಷ್ಟ್ರನಿಗೆ ವೀಕ್ಷಕ ವಿವರಣೆಯಂತೆ

ಪ್ರತ್ಯಕ್ಷ, ನೇರ ವರದಿ ಮಾಡುತ್ತಾನೆ. ವಿಶೇಷವೆಂದರೆ ವಿದ್ಯುನ್ಮಾನ ಸಾಧನಗಳ ಗಂಧಗಾಳಿಯೂ ಇರದಿದ್ದ ಆ ಯುಗದಲ್ಲೇ ಸಂಜಯ ತನ್ನ ದೂರದರ್ಶಕತ್ವ ಹಾಗೂ ಧ್ವನಿಗ್ರಹಣ ಶಕ್ತಿಯಿಂದ ಎಲ್ಲೋ ರಣರಂಗದಲ್ಲಿ ನಡೆಯುವ ಘಟನಾವಳಿಗಳನ್ನು ಅರಮನೆಯಲ್ಲಿ ಕುಳಿತು ವರ್ಣಿಸುವುದು, ಈ ಯುಗದಲ್ಲೂ ಅಚ್ಚರಿ ಮೂಡಿಸುವ ವಿಚಾರ. ಅಂದರೆ ದೃಶ್ಯ-ಶ್ರವ್ಯ ಮಾಧ್ಯಮದ ಕಲ್ಪನೆ ಮಹಾಭಾರತದ ಕೃತಿ ರಚನಾಕಾರನಿಗೆ ಇತ್ತು ಎನ್ನುವುದನ್ನು ಮನಗಾಣಬಹುದು.

ಮಹಾಗ್ರಂಥ ರಾಮಾಯಣದಲ್ಲಂತೂ ಸಂಪರ್ಕ ಸಂವಹನೆಯ ಹಲವಾರು ಅಂಶಗಳನ್ನು ಸ್ಪಷ್ಟವಾಗಿ ಗುರುತಿಸಬಹುದು. ನಗರವನ್ನು ಸಂಚರಿಸಿ ಸುದ್ದಿ ತರುವ ಭಟರನ್ನು, ಅಶೋಕವನದಲ್ಲಿ ಸೀತೆಯನ್ನು ಕಂಡುಬಂದು ವರದಿ ನೀಡುವ ಹನುಮಂತನನ್ನು, ಸೀತೆಯೆಸೆದ ಆಭರಣಗಳ ಆಧಾರದ ಮೇಲೆ ಅವಳನ್ನು ರಾವಣ ಹೊತ್ತುಒಯ್ದ ಜಾಡು ಕಂಡು ಹಿಡಿಯುವ ಬಗೆಯನ್ನು, ಸಾರಿಗೆಯಂತೆ ಬಳಸುವ ಗುಹನ ದೋಣಿ, ಪುಷ್ಪಕ ವಿಮಾನ, ಕ್ಷಿಪಣಿಯಂತೆ ಆಂಜನೇಯನ ಸಮುದ್ರೋಲ್ಲಂಘನ, ವಾನರ ಸೇನೆ ಲಂಕೆಯವರೆಗೆ ಸಮುದ್ರದ ಮೇಲೆ ನಿರ್ಮಿಸುವ ಸಂಪರ್ಕ ಸೇತುವೆ ಇವೆಲ್ಲ ಸಂವಹನೆಯ ಹಲವು ಮಗ್ಗುಲುಗಳನ್ನು ತೆರೆದಿಡುತ್ತವೆ.

ಸಂಸ್ಕೃತದ ಪ್ರಾಚೀನ ಕೃತಿಗಳಲ್ಲೂ ಮೋಡ, ತಂಗಾಳಿಯ ಮೂಲಕ, ಹಂಸ, ಕಾಗೆಯಂತಹ ಪಕ್ಷಿಗಳ ಮೂಲಕ ಸಂದೇಶ ರವಾನೆ ಮಾಡಿದ್ದರ ಪ್ರಸ್ತಾಪವಿದೆ. ಉದಾಹರಣೆಗೆ ಮೇಘ ಸಂದೇಶ, ಹಂಸ-ದಮಯಂತಿ ಕಥೆ. 'ಹಂಸ' ಶಬ್ದದ ತತ್ಸಮ ರೂಪವೇ 'ಅಂಚೆ' ಎಂದಾಗಿರುವುದೂ ಗಮನಾರ್ಹ. ತಾವರೆ ಎಲೆಯ ಮೇಲೆ ನವಿಲುಗರಿಯಲ್ಲಿ ಅಥವಾ ಉಗುರಿನಲ್ಲಿ ಬರೆದು ಕಳಿಸುವಂತಹ ಲಿಖಿತರೂಪದ ಸಂದೇಶಗಳ ಬಗ್ಗೆಯೂ ಸಾಹಿತ್ಯ ಕೃತಿಗಳಲ್ಲಿ ಪ್ರಸ್ತಾಪಿಸಲಾಗಿದೆ. 'ಪತ್ರ' ಎಂದರೆ 'ಎಲೆ' ಎನ್ನುವ ಅರ್ಥವೇ ಮೂಲವಾಗಿರುವುದನ್ನು ಇಲ್ಲಿ ಉಲ್ಲೇಖಿಸುವುದು ಸಮಂಜಸ.

ಪುರಾಣಗಳ ನಂತರ ಇತಿಹಾಸವನ್ನು ಗಮನಿಸಿದರೆ, ಭಾರತದಲ್ಲಿ ಸಂವಹನೆ ವಿವಿಧ ಹಂತಗಳಲ್ಲಿ, ಮಾದರಿಗಳಲ್ಲಿ ನಿರಂತರವಾಗಿ ಬೆಳೆದಿರುವುದು ಕಾಣಬರುತ್ತದೆ. ಕ್ರಿ.ಪೂ. ೩೫೦ - ೨೭೦ರ ಅವಧಿಯಲ್ಲಿ ರಚಿತವಾಗಿರಬಹುದು ಎನ್ನಲಾಗುವ ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಸಂವಹನ ಕಲೆಯ ವಿಸ್ತೃತ ಛಾಪು ಒಡಮೂಡಿದೆ. ಪ್ರಜೆಗಳ ಸುಖವೇ ಅರಸನ ಸುಖ, ಪ್ರಜೆಗಳ ಹಿತವೇ ಅವನ ಹಿತ ಎನ್ನುವ ಸಿದ್ಧಾಂತವನ್ನು ಸಾದರಪಡಿಸುವ ಕೌಟಿಲ್ಯ, ಪ್ರಜೆಗಳ ಕಷ್ಟ ಸುಖಗಳನ್ನು ತಿಳಿದುಕೊಳ್ಳುವ ಸಲುವಾಗಿಯೇ ಛದ್ಮವೇಷದ ಭಟರು, ಚಾರರನ್ನು ಮಾಹಿತಿ ಸಂಗ್ರಹದ ಕಾರ್ಯಕ್ಕೆ ಬಳಸುವಂತೆ ಸೂಚಿಸಿದ್ದಾನೆ. ರಾಜ, ರಾಜ್ಯದ ರಕ್ಷಣೆಗಾಗಿ ನೌಕರರ ಕರ್ತವ್ಯ ನಿಷ್ಠೆ, ಆಸ್ಥಾನದ ಒಳಸಂಚು, ಶತ್ರು ವೈಷಮ್ಯ ಇವುಗಳನ್ನು ತಿಳಿಯುವುದಕ್ಕಾಗಿಯೇ ವ್ಯವಸ್ಥಿತವಾದ ಗೂಢಚಾರ ಪಡೆ ಇತ್ತು. ಲೋಕವಾರ್ತೆಯನ್ನು ರಾಜನೂ, ರಾಜವಾರ್ತೆಯನ್ನು ಪ್ರಜೆಗಳು ತಿಳಿದುಕೊಳ್ಳುವುದು ಅವಶ್ಯಕವೆಂದು ನಮ್ಮ ಪೂರ್ವಿಕರು ಕಂಡುಕೊಂಡಿದ್ದರು. ಅದಕ್ಕಾಗಿ ಪುರಾತನ ಹಿಂದೂ ರಾಜ್ಯಗಳಲ್ಲಿ ಬೇಹುಗಾರರು ರಾಜರಿಗೋಸ್ಕರವಾಗಿಯೂ, ಡಂಗುರಿಗರು ಪ್ರಜೆಗಳಿಗೋಸ್ಕರವಾಗಿಯೂ ನೇಮಕವಾಗಿರುತ್ತಿದ್ದರು. ಗ್ರೀಕ್ ವಿದ್ವಾಂಸ ಸ್ಟ್ರಾಬೋ ಸಹ ಮೌರ್ಯರ ಕಾಲದ ಗೂಢಚಾರ ಪದ್ಧತಿಯನ್ನು ಪ್ರಸ್ತಾಪಿಸಿದ್ದಾನೆ. ಅಶೋಕನಂತೂ ಗೂಢಚಾರರ ಮೂಲಕ ತಾನು ಪಡೆವ ಮಾಹಿತಿ ತೃಪ್ತಿಕರವಾಗಿಲ್ಲವೆಂದು ತಾನೇ ವೇಷ ಮರೆಸಿಕೊಂಡು ಮಾಹಿತಿ ಸಂಗ್ರಹಕ್ಕೆ ಹೋದ ವಿಚಾರವಿದೆ. ಆ ಕಾಲದಲ್ಲಿ ಗೂಢಚಾರರು ನಿರ್ವಹಿಸಬೇಕಾಗಿದ್ದ ಮಾಹಿತಿ ಸಂಗ್ರಹದ ಕಾರ್ಯವೂ ಸುಲಭವಾದದ್ದಾಗಿರಲಿಲ್ಲ. ಜನಗಣತಿಯಂತಹ ಮಾಹಿತಿ ಶೇಖರಣೆಯ ಕೆಲಸವೂ ಆವಾಗ ನಡೆದಿತ್ತೆಂದು ಇತಿಹಾಸದಲ್ಲಿದೆ. ಮಾಹಿತಿ ಸಂಗ್ರಹಣೆಯ ಕೆಲಸಕಾರ್ಯಗಳಿಗಾಗಿ ಸನ್ಯಾಸಿಗಳು, ವಣಿಕರು, ವೇಶ್ಯೆಯರು, ಹಾವಾಡಿಗರು, ಹೂವಾಡಗಿತ್ತಿಯರು, ಹಸ್ತ ಸಾಮುದ್ರಿಕೆಯವರು, ಸಂಗೀತಗಾರರು, ಕಣಿ ಹೇಳುವವರನ್ನು ಬಳಸಿಕೊಳ್ಳಲಾಗುತ್ತಿತ್ತೆಂದೂ ತಿಳಿದು ಬರುತ್ತದೆ.

ಧರ್ಮ ಪ್ರಸರಣದ ದೃಷ್ಟಿಯಿಂದಲೂ ಸಂವಹನ ವಲಯದಲ್ಲಿ ಲಿಖಿತರೂಪದ ಸಂವಹನೆಗೆ ಹೆಚ್ಚು ಪ್ರಾಶಸ್ತ್ಯ ಸಿಕ್ಕಿದ್ದೂ ಅಶೋಕನ ಕಾಲದಲ್ಲೇ ಎಂದು ಗುರುತಿಸಬಹುದು. ಬೌದ್ಧ ಧರ್ಮಾನುಯಾಯಿಯಾದ ಅಶೋಕ ಆ ಧರ್ಮದ ಪ್ರಸರಣೆಗೆ ಶಿಲಾಶಾಸನ, ಶಿಲಾಲಿಪಿ, ಲಘು ಶಿಲಾಲಿಪಿ, ಸ್ತಂಭಲಿಪಿ, ಲಘು ಸ್ತಂಭಲಿಪಿ, ಗವಿಶಾಸನ, ಅರೇಬಿಕ್ ಮತ್ತು ಗ್ರೀಕ್ ಶಾಸನಗಳನ್ನು ಬರೆಸಿರುವನೆಂದು ಚರಿತ್ರೆ ಹೇಳುತ್ತದೆ. ಕರ್ನಾಟಕದಲ್ಲಿ ಮಸ್ಕಿ, ಪಾಲ್ಕಿಗುಂಡ, ಕೊಪ್ಪಳ, ಬ್ರಹ್ಮಗಿರಿ, ಜಟಿಂಗ ರಾಮೇಶ್ವರ, ಸಿದ್ದಾಪುರಗಳಲ್ಲೂ ಅಶೋಕನ ಶಾಸನಗಳು ಲಭ್ಯವಾಗಿವೆ. ಈ ಶಾಸನಗಳ ಮೂಲರೂಪವನ್ನು ಇಂಗ್ಲಿಷ್ ಭಾಷಾಂತರವನ್ನೂ ಡಾ. ಹುಲ್ಷ್ ಅವರು ೧೯೨೫ರ 'ಎಪಿಗ್ರಾಫಿಯಾ ಇಂಡಿಕ'ದಲ್ಲಿ ಪ್ರಕಟಿಸಿದ್ದಾರೆ. ಶಾಸನಗಳ ಮೂಲರೂಪವನ್ನು ಬಿ.ಎಲ್. ರೈಸ್ ಅವರು ಸಂಗ್ರಹಿಸಿದ್ದಾರೆ. ಧಾರ್ಮಿಕ ನೀತಿ ನಿಯಮಗಳನ್ನು ಶಾಶ್ವತವಾಗಿ ಪ್ರಕಟಿಸುವ ದೃಷ್ಟಿಯಿಂದ ಅಶೋಕ ಬಂಡೆಗಳ ಮೇಲೆ ಕಲ್ಲು ಕಂಬಗಳ ಮೇಲೆ ಕೆತ್ತಿಸಿರುವುದು ಇಂದಿಗೂ ಪ್ರಮಾಣೀಕೃತ ಪುರಾವೆಗಳೆನಿಸಿವೆ.

ಅಶೋಕನ ಶಾಸನಗಳು ಧಾರ್ಮಿಕ ವಿಚಾರಗಳನ್ನು ಮಾತ್ರ ಹೇಳದೆ ಸಾಮಾಜಿಕ, ರಾಜಕೀಯ ಹಾಗೂ ನೀತಿ ಪ್ರಸರಣದ ಘನ ಉದ್ದೇಶಗಳನ್ನೂ ಒಳಗೊಂಡಿರುವುದನ್ನು ಗಮನಿಸಿದಾಗ ಪ್ರಜೆಗಳಿಗೆ ಹಲಬಗೆಯ ಮಾಹಿತಿ, ವಿಚಾರ, ಜ್ಞಾನ ಪ್ರಸರಣೆಯ ದೃಷ್ಟಿಯಿಂದ ಲಿಖಿತರೂಪದಲ್ಲಿ ಸಂವಹನೆ ನಡೆಯುತ್ತಿತ್ತೆಂದು ತಿಳಿದುಬರುತ್ತದೆ. ಅದರಲ್ಲೂ ಬ್ರಾಹ್ಮೀಲಿಪಿ, ಪಾಲೀ, ಪ್ರಾಕೃತ, ಅರೇಬಿಕ್, ಗ್ರೀಕ್ ಮುಂತಾದ ಸ್ಥಳೀಯ ಭಾಷೆಗಳಲ್ಲೇ ಶಾಸನಗಳನ್ನು ಕೆತ್ತಿಸಿರುವುದು ಪ್ರಸ್ತಾಪಯೋಗ್ಯ ವಿಚಾರ. ಅವನ ಕಾಲದ ರಾಜಾಜ್ಞೆಗಳನ್ನು ತಿಳಿಸುವ ೧೫೪ ಶಾಸನಗಳು ಈವರೆಗೂ ಸಿಕ್ಕಿವೆ. ಸಂಚಾರ, ಧರ್ಮಯಾತ್ರೆ, ಗುಂಪು ಚರ್ಚೆಯ ಮೂಲಕವೂ ಸಂವಹನೆ ನಡೆಯುತ್ತಿದ್ದದ್ದು ಉಲ್ಲೇಖನೀಯ.

ಬೌದ್ಧ ಧರ್ಮ ಪ್ರಚಾರಕ್ಕಾಗಿ ಪ್ರತಿದಿನವೂ ದೇವಸ್ಥಾನಗಳ ಭಿತ್ತಿಯ ಮೇಲೆ ಸುಲಭವಾಗಿ ತೆಗೆಯಬಹುದಾದ ಶಾಯಿ ಅಥವಾ ಬಣ್ಣದಿಂದ ಚಿತ್ರರೂಪದ ಸಂದೇಶಗಳನ್ನು ಬರೆಸಲಾಗುತ್ತಿತ್ತು. ಹರಪ್ಪ-ಮಹೆಂಜುದಾರೊ ಸಂಸ್ಕೃತಿಯನ್ನು ಬಿಟ್ಟರೆ ಮೌರ್ಯರ ಕಾಲದಲ್ಲಿ ದೊರೆತಿರುವ ವಾಸ್ತುಶಿಲ್ಪ ಹಾಗೂ ಶಿಲ್ಪಕಲಾ ಕೆತ್ತನೆಗಳೇ ಪ್ರಮುಖವಾದುವು. ಸಾರನಾಥದ ಶಿಲಾಸ್ತಂಭದ ಮೇಲಿರುವ ಚಕ್ರ, ತ್ರಿಮುಖ ಸಿಂಹದ ಚಿನ್ಹೆಗಳು ಭಾರತದ ರಾಷ್ಟ್ರಧ್ವಜ ಹಾಗೂ ರಾಷ್ಟ್ರ ಲಾಂಛನದಲ್ಲಿ ಬಳಕೆಯಾಗಿರುವುದು ಅಶೋಕನ ಕಾಲದ ಶಿಲ್ಪಕಲಾ ವೈಶಿಷ್ಟ್ಯಕ್ಕೆ ಸಾಕ್ಷಿ.

ಅಷ್ಟೇ ಅಲ್ಲದೆ, ಸಮೂಹ ಸಂವಹನೆಯ ಪ್ರಮುಖ ಭಾಗವಾಗಿ ಕ್ರಿ.ಪೂ. ೨೪೦ರಲ್ಲೇ ಪಾಟಲೀಪುತ್ರದಲ್ಲಿ ಮೂರನೇ ಬೌದ್ಧ ಮಹಾಸಭೆ ನಡೆದಿದ್ದು, ಧರ್ಮ ಪ್ರಚಾರಕ ನಿಯೋಗಗಳನ್ನು ಅಶೋಕನ ಸಾಮ್ರಾಜ್ಯದ ವಿವಿಧ ಭಾಗಗಳಿಗೂ, ಸಿರಿಯಾ, ಈಜಿಪ್ಟ್, ಮೆಸೆಡೋನಿಯಾ, ಸಿಲೋನ್‌ಗಳಿಗೂ ಕಳಿಸಿದ್ದು ಚಾರಿತ್ರಿಕ ನಿದರ್ಶನಗಳೆನಿಸಿವೆ.

ಮೌರ್ಯರ ಕಾಲದಲ್ಲಿ ಅತ್ಯಂತ ಪ್ರಾಬಲ್ಯ ಪಡೆದ ಸಂವಹನ ಕಲೆ ಮಧ್ಯಕಾಲೀನ ಭಾರತದಲ್ಲಿ ಅದರಲ್ಲೂ ಮೊಘಲರ ಕಾಲದಲ್ಲಿ ಇನ್ನಷ್ಟು ಮಾರ್ಪಾಡುಗಳನ್ನು ಪಡೆಯಿತು ಎಂದು ಇತಿಹಾಸದ ಮೂಲಕ ಗಮನಿಸಬಹುದು. ಸುದ್ದಿ ಎನ್ನುವುದಕ್ಕೆ ಒಂದು ಕಾಲದ ಚೌಕಟ್ಟು ಇದೆ ಎನ್ನುವುದು ಕಲ್ಪನೆಗೆ ಸಿಕ್ಕಿದ್ದು ೧೫೬೯ರಲ್ಲಿ ಸಲೀಮನ ಜನನವಾದಾಗ. ಅವನ ಹುಟ್ಟಿನ ವಾರ್ತೆಯನ್ನು ಆಗ್ರಾದಿಂದ ಅಲಹಾಬಾದಿನವರೆಗೆ ಸುಮಾರು ೫೦೦ ಕಿ.ಮೀಟರ್ ವ್ಯಾಪ್ತಿಗೆ ಆಗ ಕೇವಲ ೨ ಗಂಟೆ ೨೦ ನಿಮಿಷಗಳಲ್ಲಿ ಬಿತ್ತರಿಸಲಾಯಿತು. ಅದಕ್ಕೆ ಬಳಸಿದ ತಂತ್ರ, ಪ್ರತಿ ಒಂದು ಮೈಲಿ ಅಂತರದಲ್ಲಿ ಒಬ್ಬ ನಗಾರಿ ಬಾರಿಸುವವನನ್ನು ನೇಮಿಸುವುದು.

ಪ್ರಜೆಗಳಿಂದ ದೂರು ಸ್ವೀಕರಿಸುವುದು, 'ದರ್ಬಾರ್' ನಡೆಸಿ ಸಾರ್ವಜನಿಕರೊಂದಿಗೆ ವ್ಯವಹರಿಸುವುದು, ರಾಯಸ, ಓಲೆ-ಸುತ್ತೋಲೆಗಳನ್ನು ಬರೆಸುವುದು, ಗುಪ್ತವಾರ್ತೆ ರವಾನೆಯಂತಹ ಸುದ್ದಿಗಾರಿಕೆಯ ಮೊದಲ ಹೆಜ್ಜೆ ಇರಿಸಿದ್ದೇ ಮುಸ್ಲಿಂ ಅರಸರು.

ಮೊಘಲರ ಕಾಲದಲ್ಲಿ ಮೂರು ಬಗೆಯ ಸುದ್ದಿ ಬರಹಗಾರರು, ಒಂದು ಬಗೆಯ ಮೌಖಿಕ ವರದಿಗಾರರೂ ಇದ್ದರು.

- ವಾಕಿಯಾ ನ್ಯಾವಿಸ್ (Vaquia Navis) - ಸಾರ್ವಜನಿಕ ಸುದ್ದಿ ಬರಹಗಾರ
- ಸ್ವಾನಿಹ ನ್ಯಾವಿಸ್ (Swaniha Navis) - ಮೊದಲ ವರ್ಗದ ಸುದ್ದಿಗಾರರ ಮೇಲೆ ನಿಗಾ ಇಡುವವರು
- ಖುಫಿಯಾ ನ್ಯಾವಿಸ್ (Khufia Navis) - ಗೂಢಚಾರಿಕೆ ವರದಿ ಬರೆಯುವವರು

ಮೌಖಿಕ ವರದಿಗಾರರನ್ನು ಹರಿಕಾರರೆಂದು ಕರೆಯಲಾಗುತ್ತಿತ್ತು. ಅಕ್ಬರ್ ತನ್ನ ಆಸ್ಥಾನದ ದಿನಚರಿಗಳನ್ನು ನಿರ್ವಹಿಸುವುದಕ್ಕಾಗಿಯೇ ವಾಕಿಯಾ ನಿಗಾರ್ (Vaquia nigar) ಎನ್ನುವ ಬರಹಗಾರರನ್ನು ನೇಮಿಸಿಕೊಂಡಿದ್ದರು. ಅಂಚೆ ಹಾಗೂ ಗೂಢಚರ್ಯ ವಿಭಾಗದ ಮೇಲ್ವಿಚಾರಕ (ಡರೋಘ - ಇ - ಡಾಕ್ ಚೌಕಿ)ನ ಹುದ್ದೆಯೇ ಇತ್ತು. ಔರಂಗಜೇಬನಂತೂ ವರದಿಗಾರಿಕೆಗೆ ಅತಿ ಪ್ರಾಮುಖ್ಯತೆ ನೀಡಿದ್ದೇ ಅಲ್ಲದೆ ಆಡಳಿತ ವ್ಯವಸ್ಥೆಯಲ್ಲಿ ಅದು ಪ್ರಮುಖ ಆಧಾರಸ್ತಂಭ ಎಂದೇ ಭಾವಿಸಿದ್ದನು. ಓಟಗಾರರು, ದೂತರು, ಸಂದೇಶ ವಾಹಕರು, ರಾಹುತರು ಸುದ್ದಿ ಸಂದೇಶಗಳನ್ನು ಒಯ್ಯುತ್ತಿದ್ದರು. ಪಾರಿವಾಳದ ಮೂಲಕ ಸಂದೇಶ ರವಾನಿಸುವುದೂ ಚಾಲ್ತಿಯಲ್ಲಿತ್ತು.

ನಾಗರಿಕತೆ ಬೆಳೆದು ಲಿಖಿತ ರೂಪದ ಸಂವಹನೆ ಪ್ರಾರಂಭವಾಗುವ ಮುನ್ನ ವೇದಮಂತ್ರಗಳನ್ನು ಮೌಖಿಕವಾಗಿಯೇ ಸಂವಹಿಸುತ್ತಿದ್ದ ಕಾಲದಲ್ಲಿ ಬೆಟ್ಟದ ತುದಿಯಲ್ಲಿ ನಿಂತು ಕೂಗುವ, ಕೂಗಿ ಹೇಳುವ ಮೂಲಕವೂ ಸಂವಹನೆ ನಡೆಯುತ್ತಿತ್ತು.

ಬುದ್ಧ, ಮಹಾವೀರ, ಶಂಕರಾಚಾರ್ಯ, ಗುರುನಾನಕ್, ರಾಮದಾಸ್, ಗಾಂಧಿ, ವಿನೋಬಾ ತಮ್ಮ ಉಪದೇಶ, ತತ್ವ ಪ್ರಸಾರದ ಸಲುವಾಗಿ ಪಾದಯಾತ್ರೆಯ ಮೂಲಕ ಸಂವಹನೆ ನಡೆಸುತ್ತಿದ್ದದ್ದೂ ಚರಿತ್ರೆಯ ಪುಟಗಳಲ್ಲಿ ಕಂಡುಬರುತ್ತದೆ. ಕರ್ನಾಟಕದಲ್ಲಿ ಹಲ್ಮಿಡಿ ಶಾಸನ ಮೊದಲ್ಗೊಂಡು ಅನೇಕ ಶಾಸನಗಳು, ಮಾಸ್ತಿ ಹಾಗೂ ವೀರಕಲ್ಲುಗಳು, ದೇವಸ್ಥಾನಗಳ ಭಿತ್ತಿಚಿತ್ರಗಳು, ತಾಳೆಯೋಲೆಗಳು ಲಿಖಿತ ಮಾಧ್ಯಮಗಳಾಗಿವೆ. ಬಸವಣ್ಣ, ಅಕ್ಕಮಹಾದೇವಿ ಮತ್ತಿತರ ಶರಣ - ಶರಣೆಯರು, ಕನಕ, ಪುರಂದರದಾಸರಂತಹ ವಾಗ್ಗೇಯಕಾರರು, ಕೀರ್ತನಕಾರರು, ಹರಿಕಥಾ ವಿದ್ವಾಂಸರು, ಭಾಗವತರು ಸಮಾಜಕ್ಕೆ ಸಂದೇಶಗಳನ್ನು ಸಾರುತ್ತಿದ್ದರು. ಚರ್ಚಾಕೂಟಗಳು, ಸಂವಾದಗಳು ನಡೆಯುತ್ತಿದ್ದದ್ದಕ್ಕೆ ಬಸವಣ್ಣನವರ ಕಲ್ಪನೆಯ ಅನುಭವ ಮಂಟಪ ಉಲ್ಲೇಖನೀಯ. ಜಾತ್ರೆ, ಉತ್ಸವ, ಪರಿಸೆ, ಸಂತೆ, ದೇವಸ್ಥಾನ, ಹಬ್ಬ ಹರಿದಿನಗಳು, ಆಚರಣೆಗಳು, ಮದುವೆ ಮುಂಜಿ, ಸಾವು-ನೋವು ಹೀಗೆ ಜನ ಗುಂಪು ಸೇರುವ ಕಡೆಗಳಲ್ಲಿ ಅಂತರ್‌ಸಂವಹನೆ, ಗುಂಪು ಸಂವಹನೆ, ಸಮೂಹ ಸಂವಹನೆ ನಡೆಯುತ್ತಿತ್ತು, ಇಂದಿಗೂ ನಡೆಯುತ್ತಿದೆ.

ಭಾರತದ ಶೇಕಡಾ ೭೭ರಷ್ಟು ಗ್ರಾಮೀಣ ಜನಸಮುದಾಯ ಜಾನಪದ ಕಲಾಮಾಧ್ಯಮಗಳ ಮೂಲಕ ಸಂವಹನೆಯ ಕಾರ್ಯವನ್ನು ನಿರಂತರವಾಗಿ ನಡೆಸಿಕೊಂಡು ಬಂದಿರುವುದು ವಿಶೇಷ. ಆದಿವಾಸಿಗಳಿಗೂ ಬುಡಕಟ್ಟು - ಗುಡ್ಡಗಾಡು ಜನಾಂಗದವರಿಗೂ ಜಾನಪದ ಪ್ರಕಾರಗಳೇ ಸಮೂಹ ಸಂವಹನೆಯ ಪ್ರಮುಖ ಮಾರ್ಗಗಳು. ಮುಷಾಯಿರಾ, ಖವ್ವಾಲಿ, ಗಜಲ್‌ನಂತಹ ಪಾರಂಪರಿಕ ಸಾಂಪ್ರದಾಯಿಕ ಕಲೆಗಳನ್ನೇ ಮುಸ್ಲಿಂ ಜನಾಂಗವೂ ಸಂವಹನೆಗೆ ಬಳಸಿಕೊಂಡಿರುವುದನ್ನು

ಗಮನಿಸಿದಾಗ ಪರಂಪರಾಗತವಾಗಿ ಬಂದ ಜಾನಪದ ಸಂವಹನ ಮಾಧ್ಯಮಗಳೇ ಸಂಪರ್ಕದ ಮೂಲ ಮಾಧ್ಯಮವಾಗಿರುವುದನ್ನು ಖಚಿತಪಡಿಸಿಕೊಳ್ಳಬಹುದು.

## ೪. ಸಂವಹನೆ ಮತ್ತು ಭಾಷೆ

ಮಾನವಾವತಾರದ ಮೊದಮೊದಲ ದಿನಗಳಲ್ಲಿ ಅಭಿವ್ಯಕ್ತಿ ಸಾಧ್ಯತೆಗಳು ಸಾಕಷ್ಟಿರಲಿಲ್ಲ. ಅವುಗಳ ಅಗತ್ಯವೂ ಇರಲಿಲ್ಲ. ಅಂದಿನ ಮಾನವನ ಬೇಕುಗಳು ಕಡಿಮೆ ಇತ್ತೆನ್ನುವುದಕ್ಕಿಂತ ಇರಲೇ ಇಲ್ಲ ಎಂದು ಹೇಳಬಹುದು. ಭಾಷೆ ಎನ್ನುವುದು ಯಾವಾಗ ಮೊಳೆಯಿತೋ ಬೆಳೆಯಿತೋ ಎನ್ನುವ ಬಗ್ಗೆ ಅನೇಕ ವಾದ, ವಿವಾದ, ಚರ್ಚೆಗಳಾಗಿವೆಯೇ ವಿನಃ ಅದರ ಹುಟ್ಟನ್ನು ನಿಖರವಾಗಿ ಹೇಳುವುದು ಈವರೆಗೂ ಸಾಧ್ಯವಾಗಿಲ್ಲ. ಇಷ್ಟು ಮಾತ್ರ ಹೇಳಬಹುದು - ಮನುಷ್ಯ ತನ್ನ ಅಗತ್ಯಗಳನ್ನು ಪೂರೈಸಿಕೊಳ್ಳಲು ಕಾಲಾಂತರದಿಂದಲೂ ರೂಪಿಸಿಕೊಳ್ಳುತ್ತಾ ಬಂದ ಅಭಿವ್ಯಕ್ತಿಕ್ರಮ ಇದು. ನಾನಾ ಕಾರಣಕ್ಕಾಗಿ, ನಾನಾ ರೀತಿಯಾಗಿ ಭಾಷೆ ಹುಟ್ಟಿದೆ ಎಂದು ಹೇಳಲಾಗುತ್ತದೆ.

✤ **ಅನುಕರಣ ವಾದ :** ಶಾಬ್ದಿಕ ಪ್ರವೃತ್ತಿ ಎಲ್ಲ ಪ್ರಾಣಿಗಳಲ್ಲಿಯೂ ಸಾಮಾನ್ಯ. ನೋವು - ನಲಿವುಗಳಿಗೆ, ಹಸಿವು - ಕಸುವುಗಳಿಗೆ ಅವು ಪ್ರತಿಕ್ರಿಯಿಸುತ್ತವೆ. ಅದೂ ಉದ್ಗಾರದ ಮೂಲಕ. ನವಿಲ ಕೇಕೆ, ಕುದುರೆ ಕೆನೆತ, ಕೋಗಿಲೆಯ ಕೂಜನ, ಗೂಗೆಯ ಗೂಕ, ಸಿಂಹದ ಗರ್ಜನೆ ಎಲ್ಲವೂ ಒಂದರ್ಥದಲ್ಲಿ ಭಾಷೆಯ ಕಕ್ಷೆಗೆ ಬರುತ್ತವೆ. ಪ್ರಾಣಿ ಪಕ್ಷಿಗಳ ನಡುವೆಯೇ ಒಡನಾಟ ಹೊಂದುವ ಸಹಜ ಅನಿವಾರ್ಯತೆಯಿದ್ದ ಮನುಷ್ಯ ಅವುಗಳನ್ನು ಅನುಕರಿಸುವ ಸಹಜ ಸಂವಹನ ಕಲೆ ರೂಢಿಸಿಕೊಂಡಿದ್ದ ಎನ್ನುವ ವಾದವಿದು. ಲೀಬ್ನಿಜ್ ಈ ವಾದವನ್ನು ಪ್ರತಿಪಾದಿಸಿದವನಾದರೂ ಭಾಷೆ ಎನ್ನುವುದು ಆತ್ಮವಿರುವ ಯಾವುದೇ ಪ್ರಾಣಿಯ ಅನುಭವದ ಅಭಿವ್ಯಕ್ತಿ ಎಂದು ಈಸ್ಲರ್ ಇದನ್ನು ಸ್ಪಷ್ಟೀಕರಿಸುತ್ತಾನೆ.

✤ **ಉದ್ಗಾರ ವಾದ :** ಆದಿ ಮಾನವ ಭಾವೋದ್ರಿಕ್ತನಾಗಿ ಉದ್ಗರಿಸಿದ ಶಬ್ದಗಳೇ ಮುಂದೆ ಭಾಷೆ ಎನ್ನುವುದು ಹುಟ್ಟಲು ಕಾರಣವಾಯಿತು ಎನ್ನುವ ವಾದವಿದು. ಭಾವೋದ್ಗಾರಗಳು ಮನುಷ್ಯನಿಗೆ ಮಾತ್ರ ಸೀಮಿತವಾದುದಲ್ಲ. ಪ್ರಾಣಿ ಪಕ್ಷಿಗಳೂ ಇದನ್ನು ವ್ಯಕ್ತಪಡಿಸುತ್ತವೆ. ಆದರೆ ಪ್ರಾಣಿಗಳ ಭಾವೋದ್ಗಾರ ಇನ್ನೂ ಏಕೆ ಭಾಷೆಯಾಗಿಲ್ಲ ಎನ್ನುವುದು ಭಾಷೆಯನ್ನು ವಿಭಿನ್ನ ನೆಲೆಯಲ್ಲಿ ನಿಲ್ಲುವಂತೆ ಮಾಡುತ್ತದೆ. ಈ ಮೂಲಕವೇ ಈ ವಾದ ತನ್ನ ಇತಿಮಿತಿಗಳನ್ನು ಪ್ರದರ್ಶಿಸಿಕೊಳ್ಳುತ್ತದೆ.

✤ **ಅನುರಣನ ವಾದ :** ನಾದ ಹೊರಡಿಸುವ ಶಕ್ತಿ ಪ್ರತಿಯೊಂದು ವಸ್ತುವಿಗೂ ಸಹಜ, ಸ್ವಾಭಾವಿಕ. ಆ ನಾದಗಳ ಅನುರಣನವೇ ಭಾಷೆಯಾಯಿತು ಎಂದು ಮೊದಮೊದಲು ವಾದಿಸಲಾಯಿತಾದರೂ ಈ ವಾದವನ್ನು ಪ್ರತಿಪಾದಿಸಿದ ಮ್ಯಾಕ್ಸ್‌ಮುಲ್ಲರ್ ನಂತರ ಇದನ್ನು ತಾನೇ ಒಪ್ಪಲಿಲ್ಲ ಎನ್ನುವುದು ಗಮನಾರ್ಹ.

✤ **ಶ್ರಮ ಪರಿಹಾರ ವಾದ :** ನೋರಿ ಎನ್ನುವವ ಪ್ರತಿಪಾದಿಸಿದ ಈ ವಾದ ಸಹ ಸಕಾರಾತ್ಮಕ ಪ್ರತಿಕ್ರಿಯೆ ಪಡೆಯಲಿಲ್ಲ. ದೈಹಿಕ ಶ್ರಮದ ಕಾರಣದಿಂದಾಗಿ ಮನುಷ್ಯ ಅನೈಚ್ಛಿಕವಾಗಿ ಉಸಿರುಬಿಡುತ್ತಾ ಹೊರಡಿಸುವ ಧ್ವನಿ ನಂತರ ಭಾಷಾ ಸ್ವರೂಪ ಪಡೆಯಿತು ಎನ್ನುವುದೇ ಈ ವಾದ. ಇದೂ ಸಹ ಹೆಚ್ಚೂ ಕಡಿಮೆ ಉದ್ಗಾರವಾದದಂತೆಯೇ ಇದ್ದು, ಅದು ಹೊಂದಿದ್ದ ಮಿತಿಗಳನ್ನೇ ಇದೂ ಹೊಂದಿತ್ತೆಂದು ಹೇಳಬಹುದು.

✤ **ಸಂಜ್ಞಾ ಭಾಷೆ :** ಭಾಷೆ ಮೂಲತಃ ಸಂಜ್ಞಾರೂಪಿಯಾಗಿತ್ತು ಎನ್ನುವುದೇ ಈ ವಾದದ ಒಳದನಿ. ಆದಿ ಮಾನವರು ಮೊದಲು ಆಂಗಿಕ ಸಂಜ್ಞೆಗಳ ಮೂಲಕ ಅಭಿವ್ಯಕ್ತಿ ಸಾಧಿಸುತ್ತಿದ್ದಿರಬೇಕು. ಈಗಲೂ ಸಂಜ್ಞೆ ಅಭಿವ್ಯಕ್ತಿಸುವ ಒಂದು ವಿಧಾನವಾಗಿ

ಬಳಕೆಯಾಗುತ್ತಿದ್ದರೂ ಇದು ಆಂಗಿಕ ಅಭಿವ್ಯಕ್ತಿ ಮಾತ್ರವಾಗಿದೆ. ಆದರೆ ಭಾಷೆ ಬೌದ್ಧಿಕವಾದದ್ದು ಎಂಬ ಕಾರಣಕ್ಕಾಗಿಯೇ ಈ ವಾದವೂ ಬಿದ್ದು ಹೋಗಿದೆ. ಈ ಎಲ್ಲ ವಾದಗಳೂ ಭಾಷೆಯ ಹುಟ್ಟಿನ ಒಂದೊಂದು ಕಾರಣಗಳನ್ನು ಪ್ರತಿಬಿಂಬಿಸುತ್ತವೆಯೇ ಹೊರತು ನಿಖರವಾಗಿ ಭಾಷೆ ಹೀಗೇ ಹುಟ್ಟಿತು ಎಂದು ಹೇಳುವ ಧೈರ್ಯ ಮಾಡುವುದಿಲ್ಲ. ಒಂದು ಭಾಷೆ ಭಾಷೆಯಾಗಬೇಕಾದರೆ ಅದು ಅನೇಕ ಲಕ್ಷಣಗಳನ್ನು ಒಳಗೊಂಡಿರಬೇಕಾಗುತ್ತದೆ. ಮಾನವ ಭಾಷೆಯ ಏಳು ಲಕ್ಷಣಗಳನ್ನು ಸಿ.ಎಫ್. ಹಾಕೆಟ್ ಗುರುತಿಸಿದ್ದಾನೆ :

- ದ್ವಿರೂಪ (Duality)
- ಉತ್ಪಾದಕತೆ (Productivity)
- ಯಾದೃಚ್ಛಿಕತೆ (Arbitrariness)
- ಅಂತರ್‌ವಿನಿಮಯ ಕ್ಷಮತೆ (Interchangeability)
- ವಿಶಿಷ್ಟತೆ (Specialization)
- ಪರ್ಯಾಯ ಬಳಕೆ (Displacement)
- ಸಾಂಸ್ಕೃತಿಕ ಪ್ರಸರಣ (Cultaral Transmission)

ಈ ಎಲ್ಲಾ ಏಳು ಲಕ್ಷಣಗಳನ್ನು ಒಳಗೊಂಡಿದ್ದಾರೆ ಮಾತ್ರ ಅದು ಮನುಷ್ಯ ಭಾಷೆಯಾಗುತ್ತದೆ ಎನ್ನಲಾಗುತ್ತದೆ. ಇಂತಹ ಭಾಷೆ ಮಾನವನ ಅತ್ಯಂತ ಮೂಲಭೂತ ಅಗತ್ಯಗಳಲ್ಲೊಂದಾದ ಅಭಿವ್ಯಕ್ತಿ ಅಥವಾ ಸಂಹವನೆಯ ಭದ್ರಬುನಾದಿಯಾಗುತ್ತದೆ. ಸಮಾಜದ, ಸಂಸ್ಕೃತಿಯ, ಮನುಷ್ಯನ ಸಮಸ್ತ ಚಿಂತನ ಶಕ್ತಿಗೂ ವ್ಯವಹಾರಕ್ಕೂ ಅನಿವಾರ್ಯವಾಗಿದೆ. ಆದ್ದರಿಂದಲೇ ಭಾಷೆಯನ್ನು ಬಲ್ಲ ಮಾನವ ಅತ್ಯಂತ ಮುಂದುವರೆದ ಪ್ರಾಣಿ ಎನಿಸಿದ್ದಾನೆ.

'ಭಾಷ್' ಎನ್ನುವ ಸಂಸ್ಕೃತ ಪದ 'ಮಾತನಾಡು' ಎಂಬ ಅರ್ಥವನ್ನು ಹೊಂದಿದೆ. ಹಾಗಾಗಿ ಭಾಷೆ ಎನ್ನುವುದು ಮಾತನಾಡುವ ಕ್ರಿಯೆಯನ್ನು ಸೂಚಿಸುತ್ತದೆ. ಭಾಷೆಯನ್ನು ಮನಃಸ್ಥಿತಿಯನ್ನು ತಿಳಿಸಲು ಉದ್ದೇಶಪೂರ್ವಕವಾಗಿ ಮಾಡುವ ಉಚ್ಚಾರಣೆ ಎಂದು ಮಾರ್ಟಿ ಹೇಳಿದರೆ, ಸಿ.ಎಲ್. ಬಾರ್ಬರ್ ಇದನ್ನು ಸಂಕೇತಗಳ ವ್ಯವಸ್ಥೆ ಎಂದಿದ್ದಾನೆ. ಭಾಷೆಯೆನ್ನುವುದನ್ನು ಧ್ವನಿಯ ಉತ್ಪಾದನಾಂಗಗಳಿಂದ ಉತ್ಪತ್ತಿಯಾದ ಧ್ವನಿಗಳ ಮೂಲಕ ಜನರ ನಡುವೆ ನಡೆಯುವ ಸಂವಹನ ಕ್ರಿಯೆ ಎಂಬುದು ಫ್ರಾಂಜ್ ಬೋಸ್ ಅಭಿಪ್ರಾಯಪಟ್ಟರೆ ಇದು ಸಮಾಜದ ಸಂಪರ್ಕಕ್ಕಾಗಿ ಇರುವ ಯಾದೃಚ್ಛಿಕ ಮೌಖಿಕ ಧ್ವನಿ ಸಂಕೇತಗಳ ವ್ಯವಸ್ಥೆ ಎಂದು ಬ್ಲಾಕ್ ಮತ್ತು ಟ್ರೇಗರ್ ಹೇಳುತ್ತಾರೆ.

ಸ್ಟುರ್ಟ್‌ವಾಂಟ್ ಹೇಳುವಂತೆ ಭಾಷೆಯನ್ನು ಐದು ಅಂಗಗಳಲ್ಲಿ ವ್ಯಾಖ್ಯಾನಿಸುವುದು ಹೆಚ್ಚು ಸೂಕ್ತ ಹಾಗೂ ಸಮರ್ಪಕ ಎನಿಸುತ್ತದೆ.

- ಭಾಷೆ ಒಂದು ವ್ಯವಸ್ಥೆ
- ಭಾಷೆ ಸಂಕೇತಗಳ ವ್ಯವಸ್ಥೆ
- ಇವು ಮೌಖಿಕ ಧ್ವನಿ ಸಂಕೇತಗಳು
- ಯಾದೃಚ್ಛಿಕವಾಗಿರುತ್ತವೆ
- ಸಾಮಾಜಿಕ ಸಂಪರ್ಕವೇ ಇದರ ಉದ್ದೇಶ

ಒಂದು ನಿರ್ದಿಷ್ಟ ಸಮಾಜ ಅಥವಾ ಸಮುದಾಯ ಒಪ್ಪಿಕೊಂಡ, ತನ್ನ ನಿತ್ಯ ವ್ಯವಹಾರದಲ್ಲಿ ಅದನ್ನು ಅರ್ಥವತ್ತಾಗಿ ದುಡಿಸಿಕೊಂಡ, ಯಾದೃಚ್ಛಿಕ ಧ್ವನಿ ಸಂಕೇತಗಳ ಮೊತ್ತವೇ ಭಾಷೆ ಎನ್ನಬಹುದಾದರೆ, ಅದರ ಸಮಾಜಪರತೆಯನ್ನು ನಿಖರವಾಗಿ ಗುರುತಿಸಬಹುದು. ಈ ಶಬ್ದ ವ್ಯಾಪಾರ ಸಮಾಜದ ಮುನ್ನಡೆಗೆ ಹೇಗೆ ಅಗತ್ಯವೋ ಹಾಗೆ ಭಾಷೆಯ ಉದ್ಧಾರಕ್ಕೂ ಸಮಾಜದ ಶ್ರಮ ಅಗತ್ಯ. ಭಾಷೆಯ ಮೂಲ ಉದ್ದೇಶವೇ ಸಂವಹನೆಯಾಗಿರುವುದು, ಸಂವಹನ ಮಾಧ್ಯಮಗಳೂ ಭಾಷೆಯ ಬೆಳವಣಿಗೆಯನ್ನು ಉತ್ತೇಜಿಸುವುದು ಪರಸ್ಪರ ಪೂರಕ ಅಂಶವಾಗಿರುವುದರಿಂದ ಈ ಮಹಾಪ್ರಬಂಧ ವಿಶೇಷ ವಿಸ್ತಾರವನ್ನು ಪಡೆಯುತ್ತದೆ ಎಂದು ಹೇಳಬಹುದು.

**ಅಡಿಟಿಪ್ಪಣಿ**


೧. ಡಾ. ಡಿ.ವಿ. ಪರಮಶಿವಮೂರ್ತಿ, ಸಂವಹನ ಕನ್ನಡ, ೧೯೯೭, ಪು - ೬

೨. ವಾರೆನ್ ಕೆ. ಅಗಿ, Introduction to mass communication, ೧೯೮೮, ಪು - ೧೨

೩. ಕೇವಲ್ ಜೆ. ಕುಮಾರ್, Mass Communication in India, ೧೯೯೧, ಪು - ೧

೪. ಡೆನಿಸ್ ಮಾಕ್ವೆಲ್, Towards a Sociology of Communication, ೧೯೭೫, ಪು - ೯

೫. ಆಶ್ಲೆ ಮಾಂಟಗೂ ಮತ್ತು ಫ್ಲಾಯಿಡ್ ಮ್ಯಾಟ್‌ಸನ್
ಉಲ್ಲೇಖ : Mass Communication in India, ಲೇ : ಕೇವಲ್ ಜೆ. ಕುಮಾರ್, ೧೯೯೧, ಪು - ೧

೬. ಐ.ಪಿ. ತೇವರಿ
ಉಲ್ಲೇಖ : Mass Communication in India, ಲೇ : ಕೇವಲ್ ಜೆ. ಕುಮಾರ್, ೧೯೯೧, ಪು - ೨

೭. ಜೆ.ಎಸ್. ಯಾದವ್, Trends in Communication recent, ೧೯೮೪
ನವದೆಹಲಿಯಲ್ಲಿ ನಡೆದ ರಾಷ್ಟ್ರೀಯ ವಿಚಾರಗೋಷ್ಠಿಯಲ್ಲಿ ಮಂಡಿಸಿದ ಪ್ರಬಂಧ

೮. ಜನ್ನ, ಅನಂತನಾಥ ಪುರಾಣ, ೧-೪೫

೯. ಬೆಲ್ಸನ್
ಉಲ್ಲೇಖ : Mass Communication in India : ಲೇ : ಕೇವಲ್ ಜೆ. ಕುಮಾರ್, ೧೯೯೧, ಪು - ೨

೧೦. ಮಾಂಟಗೂ ಮತ್ತು ಮ್ಯಾಟ್‌ಸನ್
ಉಲ್ಲೇಖ : Mass Communication in India, ಲೇ : ಕೇವಲ್ ಜೆ. ಕುಮಾರ್, ೧೯೯೧, ಪು - ೩

೧೧. ವಿಲಿಯಂ ಎಲ್. ರಿವರ್ಸ್, Mass Media and the modern society, ೧೯೭೧, ಪು - ೨೮

೧೨. ಕ್ಲಾರ್ಕ್ ಮತ್ತು ಬ್ಲಾಂಕನ್‌ಬರ್ಗ್, You and Media : Mass Communication and Society, ೧೯೭೩, ಪು - ೨೦

೧೩. ಶರಾಫತ್ ಯಾರ್ ಖಾನ್, Fundamentals of Broadcasting, ೧೯೯೩, ಪು - ೨

೧೪. ರಿಕಾರ್ಡೊ ಸಿ. ನೊಸೆಡಾ
ಉಲ್ಲೇಖ : Mass Communication in India, ಲೇ : ಕೇವಲ್ ಜೆ. ಕುಮಾರ್, ೧೯೯೧, ಪು - ೫

೧೫. ವಿಲ್ಬರ್ ಶ್ರಾಮ್, Mass media and National Development, ೧೯೬೪, ಪು - ೯

೧೬. ಸಿಯಾನ್ ಮ್ಯಾಕ್‌ಬ್ರೈಡ್, Many Voices and one world, ೧೯೮೨, ಪು - ೩

೧೭. ಪಿಷರ್ ಮತ್ತು ಹಾರ್ಮ್ಸ್
ಉಲ್ಲೇಖ : Mass communication in India, ಲೇ : ಕೇವಲ್ ಜೆ. ಕುಮಾರ್, ೧೯೯೧, ಪು - ೫

೧೮. ಶರಾಫತ್ ಯಾರ್ ಖಾನ್, Fundamentals of Broadcasting, ೧೯೯೩, ಪು - ೫

೧೯. ವಿಲ್ಬರ್ ಶ್ರಾಮ್, (ಮಾದರಿ) Men, message and Media, ೧೯೭೩, ಪು - ೪೩

೨೦. ವಾರೆನ್ ಕೆ. ಅಗಿ ಮತ್ತಿತರರು, Introduction to Mass media, ೧೯೮೮, ಪು - ೨೩

ಅಧ್ಯಾಯ : ಎರಡು

# ಸಮೂಹ ಸಂವಹನ ಮಾಧ್ಯಮಗಳು

೧. ಸಮೂಹ ಸಂವಹನ ಮಾಧ್ಯಮಗಳು - ಅರ್ಥ, ವ್ಯಾಖ್ಯೆ ಮತ್ತು ಉದ್ದೇಶ

೨. ಸಮೂಹ ಸಂವಹನ ಮಾಧ್ಯಮಗಳ ವರ್ಗೀಕರಣ

೩. ಪಾರಂಪರಿಕ ಮತ್ತು ಆಧುನಿಕ ಮಾಧ್ಯಮಗಳಿಗೆ ಇರುವ ಅಂತರ - ಸಂಬಂಧ

೪. ಆಧುನಿಕ ಸಂವಹನ ಮಾಧ್ಯಮಗಳ ಉಗಮ - ವಿಕಾಸ

೪.೧. ರಂಗಭೂಮಿ

೪.೨. ಚಲನಚಿತ್ರ

೪.೩. ಪತ್ರಿಕೆ

೪.೪. ರೇಡಿಯೊ

೪.೫. ದೂರದರ್ಶನ

## ಸಮೂಹ ಸಂವಹನ ಮಾಧ್ಯಮಗಳು - ಅರ್ಥ, ವ್ಯಾಖ್ಯೆ ಮತ್ತು ಉದ್ದೇಶ

ಆಧುನಿಕ ಸಂಪರ್ಕ ವ್ಯವಸ್ಥೆಯಲ್ಲಿ 'ಮಾಧ್ಯಮ' ಎನ್ನುವುದು ಕೇವಲ ಒಂದು ಭೌತಿಕ ಸಾಧನವಲ್ಲ, ಅದು ಇಡೀ ವ್ಯವಸ್ಥೆಯೇ ಆಗಿದೆ ಎನ್ನುವ ಅಂಶವನ್ನು ಗಮನಿಸಬೇಕು. ಅಭಿವ್ಯಕ್ತಿ ಕ್ರಮ ಸಕಲ ಜೀವಚರಗಳಿಗೆ ನಿಸರ್ಗದತ್ತ ಕೊಡುಗೆ. ಪ್ರಥಮತಃ ತನ್ನಂತರಂಗದ ಅನಿಸಿಕೆಯನ್ನು, ತನ್ನ ಬದುಕಿನ ಬೇಡಿಕೆಯನ್ನು ಸುತ್ತಲಿನ ಸಮಾಜ/ಜಗತ್ತಿನೊಂದಿಗೆ ತನಗೆ ಪ್ರಕೃತಿಯಿಂದ ಸಿದ್ಧವಾಗಿರುವ ರೀತಿಯಲ್ಲಿ, ಅಂದರೆ ಭಾಷೆ; ಹಾವ ಭಾವ ಭಂಗಿ; ಕೂಗು, ಅಳು, ನಗು, ಮುಂತಾದ ಭಾವನಾತ್ಮಕ ಅಭಿವ್ಯಕ್ತಿ; ಹೀಗೆ ತನಗೆ ತೋಚಿದ ರೀತಿಯಲ್ಲಿ ಹೊರಹಾಕಿ ಅದಕ್ಕೆ ತಕ್ಕ ಪ್ರತಿಕ್ರಿಯೆ, ಪ್ರತಿಸ್ಪಂದನೆಯನ್ನು ಪಡೆಯುವುದು ಜೀವ ಜಗತ್ತಿನ ಮೊದಲ ಸಂಪರ್ಕ ಕೊಂಡಿ. ಇದೇ ಮೂಲ ಅರ್ಥದಲ್ಲಿ 'ಸಂವಹನೆ'. ಈ ಸಂವಹನ ಕ್ರಿಯೆಗೆ, ಅಂದರೆ ಒಬ್ಬನ ಅನಿಸಿಕೆ ಮತ್ತೊಬ್ಬನಿಗೆ/ಇತರರಿಗೆ ತಲುಪಲು ಬಳಕೆಯಾಗುವ ಕ್ರಮವೇ "ಮಾಧ್ಯಮ". ಇದನ್ನು "ಪ್ರಾಥಮಿಕ ಮಾಧ್ಯಮ" ಎಂತಲೂ ಅನ್ನಬಹುದು. ಈ ಮಾಧ್ಯಮಕ್ಕೆ ಉದಾಹರಣೆಯಾಗಿ ಮಾತು, ಅಂಗಚೇಷ್ಟೆಗಳು, ಹಾವ-ಭಾವ-ಭಂಗಿಗಳು, ನೃತ್ಯ-ಮುದ್ರೆಗಳು, ಪ್ರಾಣಿ ಪಕ್ಷಿಗಳ ಕೂಗು-ಕಲರವ, ಹಾರಾಟ-ಚೀರಾಟಗಳು, ಸಂಜ್ಞೆ-ಚಿನ್ಹೆಗಳು, ಭಾವನಾತ್ಮಕ ಉದ್ಗಾರಗಳನ್ನು ಹೆಸರಿಸಬಹುದು. ಪ್ರಾಥಮಿಕ ಮಾಧ್ಯಮಗಳು 'ಅಭಿವ್ಯಕ್ತಿ ಮಾಧ್ಯಮ'ಗಳು ಎನಿಸಿಕೊಳ್ಳುತ್ತವೆ.

ಹೀಗೆ ಅಭಿವ್ಯಕ್ತವಾದ ಮಾಧ್ಯಮ ಮತ್ತೊಬ್ಬನನ್ನು ಅಥವಾ ಮತ್ತೊಂದು ಗುಂಪನ್ನು ತಲುಪಿ ಅಲ್ಲಿಂದ ಪ್ರತಿಕ್ರಿಯಾತ್ಮಕ ಅಭಿವ್ಯಕ್ತಿಯನ್ನು ನಿರೀಕ್ಷಿಸುತ್ತದೆ. ಉದಾಹರಣೆಗೆ, 'ಅ' ವ್ಯಕ್ತಿ ತನಗೆ ಹಸಿವಾಗಿದೆ ಎಂದು 'ಬ' ವ್ಯಕ್ತಿಗೆ ಮಾತು, ಸಂಜ್ಞೆ ಮುಂತಾದ ಸಂಕೇತದ ಮೂಲಕ ಹೇಳಿಕೊಳ್ಳುವುದು ಅಥವಾ ಸಂದೇಶ ರವಾನಿಸುವುದು 'ಅ' ವ್ಯಕ್ತಿಯ ಅಭಿವ್ಯಕ್ತಿಯಾದರೆ, ಆ ಕೂಡಲೇ ಎಲೆ ಹಾಕಿ, ನೀರಿಟ್ಟು ಊಟ ಬಡಿಸುವ ಕ್ರಿಯೆ 'ಬ' ವ್ಯಕ್ತಿಯ ಪ್ರತಿಕ್ರಿಯಾತ್ಮಕ ಅಭಿವ್ಯಕ್ತಿ. ಇಲ್ಲಿ 'ಅ' ಮತ್ತು 'ಬ' ನ ನಡುವೆ ನಡೆದದ್ದು ಅಂತರ್‌ಸಂವಹನೆ (Interpersonal Communication).

ಇನ್ನೊಂದು ಉದಾಹರಣೆ ಎಂದರೆ 'ಅ' ವ್ಯಕ್ತಿ 'ದೇವರನ್ನು ನಂಬಿ' ಎಂದು 'ಹತ್ತು ಬ' ಗಳಿಗೆ ತಿಳಿಸುವುದು ಅವನ ಅಭಿವ್ಯಕ್ತಿಯಾದರೆ 'ಹೌದು' ಅಥವಾ 'ಅಲ್ಲ' ಎಂದು ಮಾರುತ್ತರ ನೀಡುವುದು 'ಹತ್ತು ಬ' ಗಳ ವೈಯಕ್ತಿಕ ಅಭಿವ್ಯಕ್ತಿ. ಈ ಸಂದರ್ಭದಲ್ಲಿ ನಡೆದದ್ದು ಗುಂಪು ಸಂವಹನೆ (Group Communication).

ಮೇಲಿನ ಎರಡೂ ಸಂದರ್ಭಗಳಲ್ಲಿ ವ್ಯಕ್ತಿಯಿಂದ ವ್ಯಕ್ತಿ ಅಥವಾ ವ್ಯಕ್ತಿಗಳಿಗೆ ನೇರ ಸಂವಹನೆ ನಡೆದಿದೆ. ಅಂದರೆ ಇಲ್ಲಿ ನಡೆದದ್ದು ಪ್ರಾಥಮಿಕ ಅಭಿವ್ಯಕ್ತಿ/ಸಂವಹನೆ ಮಾತ್ರ. ಕ್ರಿಯೆ-ಪ್ರತಿಕ್ರಿಯೆಗಳೆರಡೂ ನೇರವಾಗಿವೆ. ಹೇಳಬೇಕಾದ ಅಥವಾ

ಮಾಡಬೇಕಾದ ಸಂದೇಶಗಳು ವ್ಯಕ್ತಿಯಿಂದ ವ್ಯಕ್ತಿಗೆ ಮಾತು, ಸಂಜ್ಞೆಗಳಂತಹ ಪ್ರಾಥಮಿಕ ಮಾಧ್ಯಮಗಳ ಮೂಲಕ ಹರಿದಿವೆ. ಅಂದರೆ ಇಲ್ಲಿ ಸಂದೇಶವೇ ಮಾಧ್ಯಮವೂ ಆಯಿತು.

೧. ಮಾತು, ಸಂಜ್ಞೆ,
ಕೂಗು ಮುಂತಾದವು = ಅಭಿವ್ಯಕ್ತಿ ಮಾಧ್ಯಮಗಳು
ಹಾಗೇ

೨. ಮಾತು, ಸಂಜ್ಞೆ,
ಕೂಗು ಮುಂತಾದವು = ಸಂದೇಶ

ಈ ಹಿನ್ನೆಲೆಯಲ್ಲಿ 'ಮಾಧ್ಯಮವೇ ಸಂದೇಶ'ವೂ ಅಗುತ್ತದೆ.

ಅಂತರ್ ಸಂವಹನೆ, ಗುಂಪು ಸಂವಹನೆಯ ಸಂದರ್ಭಗಳಲ್ಲಿ ನಡೆಯುವ ಪ್ರಾಥಮಿಕ ಮಾಧ್ಯಮದ ಬಳಕೆಯ ಜೊತೆಗೆ ಸಮೂಹ ಸಂವಹನೆಯ (Mass communication) ಸಂದರ್ಭದಲ್ಲಿ ಮತ್ತೊಂದು ಬಗೆಯ 'ಮಾಧ್ಯಮ' ಬಳಕೆಯಾಗುವುದನ್ನು ಗಮನಿಸಬೇಕು. 'ಅ' ವ್ಯಕ್ತಿ ಕೆಲವೊಂದು ವಿಚಾರಗಳನ್ನು 'ಬ' ಗಳ ಹತ್ತು ತಂಡಗಳಿಗೆ ಏಕಕಾಲದಲ್ಲಿ ತಲುಪಿಸಬೇಕು. ಆದರೆ ಆ ಹತ್ತೂ ತಂಡಗಳು ಬೇರೆ ಬೇರೆ ಸ್ಥಳಗಳಲ್ಲಿ ಹರಡಿಕೊಂಡಿವೆ. 'ಅ' ವ್ಯಕ್ತಿ ಅವುಗಳಲ್ಲಿ ಯಾವ ಒಂದು ತಂಡವನ್ನುದ್ದೇಶಿಸಿ ಮಾತನಾಡಿದರೂ, ಆ ವಿಚಾರ ಇತರ ತಂಡಗಳಿಗೆ ಏಕಕಾಲಕ್ಕೆ ತಲುಪುವ ಸಾಧ್ಯತೆಯೇ ಇಲ್ಲ. ಅಂದರೆ ಈ ಸಂದರ್ಭದಲ್ಲಿ ಒಬ್ಬ ಸಂವಾಹಕ (ಅ) ನಿದ್ದಾನೆ, ರವಾನಿಸಬೇಕಾಗಿರುವ ಸಂದೇಶವಿದೆ, ಸಂವಹಿತ (ಹತ್ತು ತಂಡಗಳು)ರೂ ಇದ್ದಾರೆ. ಆದರೂ ವಿಚಾರ ಪ್ರವಹಿಸಲು ಬೇಕಾಗಿರುವ ಮತ್ತೊಂದು ಕೊಂಡಿ, ಮಧ್ಯವರ್ತಿ ಅಗತ್ಯವಿದೆ. ಈ ಮಧ್ಯವರ್ತಿಯೇ ಒಂದು ತಾಂತ್ರಿಕ ಸಾಧನ/ಮಾಧ್ಯಮ. ಈ ಮಾಧ್ಯಮದ ತಂತು ಇರದೇ ಹೋದಲ್ಲಿ ಸಂದೇಶವಿದ್ದೂ ಪ್ರಯೋಜನವಿಲ್ಲ. ಸಂವಹನಕ್ರಿಯೆ ಸಂಭವಿಸುವುದಿಲ್ಲ. ಅಥವಾ ಮಾಧ್ಯಮವಿದ್ದೂ ಸಂದೇಶವಿರದೇ ಹೋದರೂ ಸಂವಹನಕ್ರಿಯೆ ಘಟಿಸುವುದಿಲ್ಲ. ಹೀಗೆ ಸಂದೇಶ ಹಾಗೂ ಮಾಧ್ಯಮ ಪರಸ್ಪರ ಪೂರಕವೆನಿಸುತ್ತವೆ. ಇಲ್ಲಿ ತಿಳಿಸಿರುವ 'ಸಂದೇಶ' ವ್ಯಕ್ತಿಯ ಪ್ರಾಥಮಿಕ ಮಾಧ್ಯಮವಾಗಿದ್ದು, 'ಮಾಧ್ಯಮ' ಎನ್ನುವುದು ತಾಂತ್ರಿಕ ಸಾಧನ ಅಥವಾ ಎರಡನೆ ಮಾಧ್ಯಮ ಎನಿಸಿಕೊಳ್ಳುತ್ತದೆ. ಸಂವಾಹಕನಿಂದ ಹುಟ್ಟುವ ಮೊದಲ ಮಾಧ್ಯಮ (ಮಾತು) ಎರಡನೆ ಮಾಧ್ಯಮ (ತಾಂತ್ರಿಕ ಸಾಧನ) ದ ಮೂಲಕ ಅಥವಾ ಹಾಗೆ ಮಾರ್ಪಟ್ಟು ಸಂವಹಿತನನ್ನು ತಲುಪುತ್ತದೆ. ಸಂದೇಶವೇ ಮಾಧ್ಯಮವಾಗುತ್ತದೆ. ಸಮೂಹದೊಂದಿಗೆ ಸಂವಹನೆ ನಡೆಸಲು ಬಳಸುವ ಸಾಧನ ಸಮೂಹ ಮಾಧ್ಯಮ ಎನಿಸಿಕೊಳ್ಳುತ್ತದೆ.




ಸಂದೇಶವೇ ಮಾಧ್ಯಮ ಎನ್ನುವ ಮ್ಯಾಕ್ ಲ್ಯೂಹೆನ್ ಹೇಳಿಕೆಯನ್ನು ಒಪ್ಪದ ವಿದ್ವಾಂಸರೂ ಇದ್ದಾರೆ. ಅವರ ಹೇಳಿಕೆಯಂತೆ

> *McLuhan's theory, however provocative is more significant for what it omits than what it includes. the medium is not the message, although there is little doubt that the mass media, by the very act of*

*transmission, do have considerable effect on the message and consequently on society. we live on a constant flow of communications stimuli, for the mass media impinge on every aspect of our existence. there is something to be said for McLuhan's basic thesis, if one doesn't push it too far. many are convinced that he does.*[೧]

ಇಲ್ಲಿ ಉಲ್ಲೇಖಿಸಿದ ಸಂದರ್ಭದಲ್ಲಿ ನಡೆದದ್ದು ಸಂವಹನೆ (Communication). ಅದಕ್ಕಾಗಿ ಬಳಸಿದ್ದು ಸಂವಹನ ಮಾಧ್ಯಮ (Communications). ಇದನ್ನು ವಿಲಿಯಮ್. ಐ. ರಿವರ್ಸ್ ಮತ್ತಿತರರು ಹೀಗೆ ವಿವರಿಸುತ್ತಾರೆ.

*Communication is the process of communicating; communications is the technical means used to carry out the Process.*[೨]

ಈ ವ್ಯಾಖ್ಯೆಯನ್ನಯ ಏಕವಚನದಲ್ಲಿ ಹೇಳುವ Communication ಎನ್ನುವುದು ಸಂವಹನ ಪ್ರಕ್ರಿಯೆ; ಅದಕ್ಕೆ 'S' ಸೇರಿಸಿ ಬಹುವಚನದಂತೆ ತೋರುವ Communications ಎನ್ನುವುದು ಸಂವಹನ ಪ್ರಕ್ರಿಯೆ ನಡೆಸಲು ಬಳಸುವ "ಮಾಧ್ಯಮ." ಇದನ್ನೇ ಎಡ್ವರ್ಡ್ ಸಪೀರ್ ಸಹ ಒಪ್ಪುತ್ತಾನೆ.

*Singular form (Communication) Covers the primary Processes - Conscious and Unconscious behaviour that communicates. The plural form (Communications) Cover the Secondary techniques.*[೩]

ಸಮೂಹ ಎಂದರೆ ಜನರ ಗುಂಪು, ತಂಡ, ಸಮುದಾಯ ಎಂದರ್ಥ. ಕನ್ನಡ ರತ್ನಕೋಶದಲ್ಲಿ ಸಮೂಹ = ಗುಂಪು, ರಾಶಿ ಎಂದೂ, ಸಂಕ್ಷಿಪ್ತ ಕನ್ನಡ ನಿಘಂಟುವಿನಲ್ಲಿ ಸಮೂಹ = ಸಮುದಾಯ, ಗುಂಪು, ರಾಶಿ, ಒಟ್ಟಲು ಎಂದೂ, ಕಿಟ್ಟೆಲ್ಲರ ಕನ್ನಡ-ಇಂಗ್ಲಿಷ್ ನಿಘಂಟುವಿನಲ್ಲಿ ಸಮೂಹ = a collection, an assemblage, an aggregate, a heap, a number, a quantity ಎಂತಲೂ, ಸಮುಹ್ಯ, ಸಮೂಹ್ಯ = To be brought together, ಸಮೂಹ್ಯ = assembled ಅಥವಾ collected ಎಂತಲೂ ಅರ್ಥೈಸಲಾಗಿದೆ. ಹೀಗೆ ಜನರಿಗಾಗಿ, ಜನರ ಮಧ್ಯೆ, ಮಾಧ್ಯಮಗಳ ಮೂಲಕ ಸಂದೇಶ ರವಾನೆಯಾಗುವುದನ್ನೇ ಸಮೂಹ ಸಂವಹನೆ (Mass communication) ಎನ್ನಲಾಗಿದೆ. ವಿದ್ವಾಂಸರು ಅದನ್ನು ಹೀಗೆ ಹೇಳುತ್ತಾರೆ.

*Communication by the media and communication for the masses.*[೪]

ಕನ್ನಡ ರತ್ನಕೋಶದ ಪ್ರಕಾರ 'ಮಾಧ್ಯಮ' ಎನ್ನುವುದಕ್ಕೆ ಎರಡು ಅರ್ಥಗಳಿವೆ. "ಮತ್ತೊಬ್ಬರಿಗೆ ತಿಳಿಸಲು ಉಪಯೋಗಿಸುವ ಭಾಷೆ ಮೊದಲಾದ ಸಾಧನ" ಎನ್ನುವ ಮೊದಲ ಅರ್ಥ ಪ್ರಾಥಮಿಕ ಸಂವಹನ ಮಾಧ್ಯಮವನ್ನು ಉಲ್ಲೇಖಿಸಿದೆ. ಎರಡನೆಯದಾಗಿ 'ನಡುವಿನ' ಎಂಬರ್ಥವಿದೆ. ಈ 'ನಡುವೆ' ಎನ್ನುವುದಕ್ಕೆ ರತ್ನಕೋಶದಲ್ಲಿ "ಮಧ್ಯದಲ್ಲಿ" ಎಂಬರ್ಥವಿದ್ದು, 'ನಡುವಿನ' ಎನ್ನುವುದನ್ನು 'ಮಧ್ಯದ' ಎಂದು ಒಪ್ಪಬಹುದಾಗಿದೆ.

'ಮಧ್ಯದ್ದು', 'ಮಧ್ಯಮ'ವಾದದ್ದು ಎನ್ನುವ ಪ್ರತಿಪಾದನೆಯ ಆಧಾರದ ಮೇಲೆ ಪುರುಷೋತ್ತಮ ಬಿಳಿಮಲೆಯವರು ಜಾನಪದೀಯ ನೆಲೆಯಲ್ಲಿ ವಿಭಿನ್ನ ವ್ಯಾಖ್ಯೆ ನೀಡಿದ್ದಾರೆ.

> *'ಸಂವಹನ ಮಾಧ್ಯಮಗಳು' ಎಂಬುದು ಬಹಳ ಜನಪ್ರಿಯವಾದ ಪ್ರಯೋಗ.... ಮಾಧ್ಯಮ ಪದದ ಆಚೆ ಈಚೆ ಇನ್ನೆರಡು ಪದಗಳು, ಕ್ರಿಯಾಶೀಲವಾಗುತ್ತಿರುವುದನ್ನು ಗಮನಿಸಬೇಕು. ಒಂದು 'ಉತ್ತಮ' ಇನ್ನೊಂದು 'ಅಧಮ', 'ಕನಿಷ್ಠ', ಅಥವಾ 'ಸಾಮಾನ್ಯ.' ಉತ್ತಮ ಮತ್ತು ಅಧಮದ ಮಧ್ಯೆ 'ಮಧ್ಯಮ' ಇದೆ. ಇದೇ ಮಧ್ಯಮದಿಂದ 'ಮಾಧ್ಯಮ' ಹುಟ್ಟಿಕೊಂಡಿದೆ. ನಿಘಂಟುಗಳ ಅರ್ಥವೂ ಇದನ್ನು ಸಮರ್ಥಿಸುತ್ತದೆ..... ಪತ್ರಿಕಾ ಮಾಲೀಕ ಮತ್ತು ಸಂಪಾದಕ ವರ್ಗ "ಉತ್ತಮ" ಎಂಬ ಅಭಿದಾನಕ್ಕೂ ಓದುಗ ವರ್ಗ 'ಅಧಮ' ಅಥವಾ 'ಕನಿಷ್ಠ' ಎಂಬ ಅಭಿದಾನಕ್ಕೂ ಪಾತ್ರವಾಗುತ್ತದೆ.*[೫]

ಈ ಒಟ್ಟು ಪ್ರಕ್ರಿಯೆಯನ್ನು ಅವರು ಈ ಕೆಳಗಿನಂತೆ ಚಿತ್ರಿಸುತ್ತಾರೆ;




**ಆಧುನಿಕ ಮಾಧ್ಯಮಗಳ ಸಂವಹನ ವಿಧಾನ**

ಇಲ್ಲಿ 'ಉತ್ತಮ' ಎನ್ನುವುದು ಸಮೃದ್ಧ ಮಾಹಿತಿ ಕೇಂದ್ರವನ್ನೂ, 'ಕನಿಷ್ಠ' ಎನ್ನುವುದು ಮಾಹಿತಿ ಅಭಾವವಿರುವ ವರ್ಗವನ್ನೂ, ಇವೆರಡರ ನಡುವಿನ 'ಮಾಧ್ಯಮ' ಎನ್ನುವುದು ಮಧ್ಯವರ್ತಿ ಅಥವಾ ಉತ್ತಮದಿಂದ ಅಧಮದ ಕಡೆಗೆ ಮಾಹಿತಿಯನ್ನು ಹೊತ್ತೊಯ್ಯುವ ವಾಹಕವನ್ನೂ ಸೂಚಿಸುತ್ತದೆ. ಆದರೆ ಮಧ್ಯದ ಅಚ್ಚನೀಲಿ ಭಾಗವನ್ನು ವಿವರಿಸದೆ ಬಿಡಲಾಗಿದೆ. ಅದನ್ನು ಉತ್ತಮ - ಅಧಮಗಳ ಚೌಕಟ್ಟಿನೊಳಗೇ ಇರುವ, ಮಾಧ್ಯಮದ ನೆರವಿದ್ದೂ ಅದನ್ನು ಬಳಸಿಕೊಳ್ಳದೇ ಉಳಿದ ವರ್ಗ ಎನ್ನಬಹುದೇ?

ಸಮೂಹ ಮಾಧ್ಯಮಗಳನ್ನು ಲರ್ನರ್ Great multipliers 'ಮಹಾವರ್ಧಕ ಶಕ್ತಿ' ಎನ್ನುತ್ತಾರೆ. ವಿಲ್ಬರ್ ಶ್ರಾಮ್

> *A mass medium is essentially a working group Organized round some device for circulating the same message at about the same time to large numbers of people.*[೬]

ಎಂದಿದ್ದಾರೆ.

ಹೀಗೆ ಸಮೂಹ ಸಂವಹನ ಮಾಧ್ಯಮ ಎನ್ನುವುದು, ಪ್ರಾಥಮಿಕ ಅಭಿವ್ಯಕ್ತಿ ಮಾಧ್ಯಮ (ಭಾಷೆ, ಕೂಗು..)ಗಳನ್ನು ಒಂದೆಡೆಯಿಂದ ಮತ್ತೊಂದೆಡೆಗೆ ಏಕಕಾಲಕ್ಕೆ ಹೊತ್ತೊಯ್ಯುವ "ತಾಂತ್ರಿಕ ವ್ಯವಸ್ಥೆ." ಉದಾಹರಣೆಗೆ ಆಕಾಶವಾಣಿ, ದೂರದರ್ಶನ, ಪತ್ರಿಕಾ ಮಾಧ್ಯಮ, ಸಿನೆಮಾ ಮುಂತಾದವನ್ನು ಹೆಸರಿಸಬಹುದು. ನವನಾಗರಿಕತೆಯ ಆವಿಷ್ಕಾರದ ಫಲವೇ ಆಧುನಿಕ ಸಮೂಹ ಸಂವಹನ ಮಾಧ್ಯಮಗಳು.

### ಆಧುನಿಕ ಸಮೂಹ ಮಾಧ್ಯಮಗಳ ಕಾರ್ಯ

ಸಮಾಜ ರಕ್ಷಕ, ಆಡಳಿತ ವ್ಯವಸ್ಥೆಯ 'ಕಾವಲು ನಾಯಿ' ಎಂಬ ಖ್ಯಾತಿಗೆ ಪಾತ್ರವಾದ ಸಂವಹನ ಮಾಧ್ಯಮಗಳು ಆ ಹೆಸರಿಗೆ ತಕ್ಕಂತೆ ಸಮಾಜವನ್ನು ಹಗಲಿರುಳೂ ಕಾಯುವ ಮುಖ್ಯ ಕರ್ತವ್ಯವನ್ನು ನಿರ್ವಹಿಸುವುದರ ಜೊತೆಗೆ ಸಂಸ್ಕೃತಿ ಸಂರಕ್ಷಣೆ, ಮಾಹಿತಿ ವಿನಿಮಯ, ಮನರಂಜನೆಯಂತಹ ಕೆಲಸಗಳನ್ನು ಮಾಡುತ್ತಿವೆ. ರಾಜಕೀಯ ವಿಜ್ಞಾನಿ ಹೆರಾಲ್ಡ್ ಲಾಸ್‌ವೆಲ್ ಸಂವಹನ ಮಾಧ್ಯಮಗಳ ಕೆಲಸಗಳನ್ನು ಮೂರು ವಿಧವಾಗಿ ವಿಂಗಡಿಸಿದ್ದಾರೆ.

**(೧) ಪರಿಸರದ ಕಣ್ಗಾವಲು :** ಇದು ಮುಖ್ಯವಾಗಿ ಒಂದು ಪರಿಸರದ, ಒಂದು ಸಮಾಜದ ಒಳಹೊರಗೆ ಎಂತಹ ಘಟನೆಗಳು ಸಂಭವಿಸುತ್ತವೆ ಎನ್ನುವುದರ ಮೇಲೆ ನಿರಂತರ ನಿಗಾ ಇಡುವುದು. ಅವುಗಳಿಗೆ ಸಂಬಂಧಪಟ್ಟ ಮಾಹಿತಿ ಸಂಗ್ರಹಿಸಿ ಎಲ್ಲರಿಗೂ ತಿಳಿಯುವಂತೆ ಪ್ರಕಟಪಡಿಸುವುದೇ ಮಾಧ್ಯಮಗಳ ಮೊದಲ ಕೆಲಸ. ಸರ್ಕಾರದ ಕಾರ್ಯವೈಖರಿಯೇ ಇರಲಿ, ಸಮುದಾಯದೊಳಗೆ ಜರುಗುವ ಆಕಸ್ಮಿಕ, ಅಪಘಾತ, ಅಥವಾ ಇನ್ನಾವುದೇ ಘಟನೆ ಇರಲಿ, 'ಜನಜೀವನದ ಮೇಲೆ ಪರಿಣಾಮ ಬೀರಬಹುದಾದ ಯಾವುದೇ ವಿಚಾರ/ವಿಷಯವನ್ನು ಗುರುತಿಸಿ, ಏನು, ಎಲ್ಲಿ, ಏಕೆ, ಯಾವಾಗ, ಯಾರಿಂದ, ಹೇಗೆ ಘಟಿಸಿತು ಎಂಬುದನ್ನು ತಿಳಿದು ಸತ್ಯವನ್ನು ಮಾತ್ರ ಜನರೆಡೆಗೆ ಕೊಂಡೊಯ್ಯಬೇಕಾದ್ದು ಮುಖ್ಯ.

ಇದನ್ನೇ ಲಾಸ್‌ವೆಲ್

> *Surveillane of the environment, which means collection and distribution of information concerning events in the environment, both outside and within a particular Society. To some extent, it corresponds to what is popularly conceived as the handling of news.*[2]

ಎಂದಿದ್ದಾರೆ. ಮಾಹಿತಿ ಅಥವಾ information ಒದಗಿಸುವುದು ಸುದ್ದಿ/ಸಮಾಚಾರದ ಸ್ವರೂಪವೂ ಆಗುತ್ತದೆ ಎನ್ನುವುದು ಗಮನಾರ್ಹ.

**(೨) ಪರಿಸರಕ್ಕೆ ಸಮಾಜದ ಪ್ರತಿಕ್ರಿಯೆಯ ಸಂಪಾದಕೀಯತೆ :** ಗುರುತಿಸಿ, ಸಂಗ್ರಹಿಸಿದ ಮಾಹಿತಿಯನ್ನು ಅದು ಸಮಾಜದ ಮೇಲೆ ಬೀರಬಹುದಾದ ಪರಿಣಾಮ ಹಾಗೂ ಅದಕ್ಕೆ ಸಮಾಜದಿಂದ ದೊರೆಯಬಹುದಾದ ಪ್ರತಿಕ್ರಿಯೆ/ಪ್ರತಿಸ್ಪಂದನೆಯನ್ನೂ ಸಂಗ್ರಹಿಸಿ, ವಿಚಾರ, ವಿಮರ್ಶೆ, ಚರ್ಚೆ ನಡೆಸಿ, ಕ್ರೋಢೀಕೃತ ಸುದ್ದಿಯನ್ನು ಜನತೆಗೆ ನೀಡುವುದು ಮಾಧ್ಯಮಗಳ ಹೊಣೆಗಾರಿಕೆಯಾಗಿದೆ. ಸಂವಹನ ಮಾಧ್ಯಮಗಳು ನಡೆಸುವ ಈ ಕೆಲಸವನ್ನು ವಿಶ್ಲೇಷಣೆ ಅಥವಾ ಸಂಪಾದಕೀಯ ಕಾರ್ಯ ಎನ್ನಬಹುದು. ಲಾಸ್‌ವೆಲ್ ಇದನ್ನು ಹೀಗೆ ಹೇಳಿದ್ದಾರೆ.

> *The Correlation of the part of Society in responding to the Environment. Correlation here includes*

*interpretation of information about the environment and prescription for conduct in reaction to these events. In part, this activity is popularly identified as editorial or propaganda.*[೮]

**(೩) ಪೀಳಿಗೆಯಿಂದ ಪೀಳಿಗೆಗೆ ಪರಂಪರೆಯ ಸಾಗಾಟ :** ಒಂದು ಜನಾಂಗದ ಸಾಮಾಜಿಕ, ಸಾಂಸ್ಕೃತಿಕ ಪರಂಪರೆಯನ್ನು ಕಾಯ್ದುಕೊಳ್ಳುವುದು, ಅದನ್ನು ಮುಂದಿನ ತಲೆಮಾರಿಗೆ ಸಾಗಿಸುವುದು ಮತ್ತು ಹೊಸ ಪೀಳಿಗೆಯನ್ನು ಅಂತಹ ಪಾರಂಪರಿಕ ವ್ಯವಸ್ಥೆಗೆ ಅಳವಡಿಸುವುದು ಸಂವಹನ ಮಾಧ್ಯಮಗಳ ಕೆಲಸವಾಗಿದೆ. ಮೊದಲ ಪಾಠಶಾಲೆಯಾದ ಮನೆ, ಶೈಕ್ಷಣಿಕ ದೇವಾಲಯ ಶಾಲೆ, ನೈಸರ್ಗಿಕ ಕಲಿಕಾ ಕೇಂದ್ರವಾದ ಪರಿಸರಗಳ ಸಹಕಾರದೊಂದಿಗೆ ಬೆಳೆಯುವ ಒಂದು ಪೀಳಿಗೆ ತನ್ನ ಸಂಸ್ಕೃತಿ ಸದಾಚಾರ, ಒಳಿತು ಕೆಡಕು, ವರ್ತಮಾನ ಹಾಗೂ ಭವಿಷ್ಯತ್ತಿನ ಬೆಳವಣಿಗೆಗಳನ್ನೂ ಅರಿತುಕೊಳ್ಳಲು ಸಂವಹನ ಮಾಧ್ಯಮಗಳು ಊರುಗೋಲಾಗಬೇಕು. ಹೀಗೆ ಸಂವಹನ ಮಾಧ್ಯಮಗಳು ಶಿಕ್ಷಣ ಮಾಧ್ಯಮಗಳಾಗಿಯೂ ಕೆಲಸ ಮಾಡಬೇಕು.

ಲಾಸ್‌ವೆಲ್ ಪ್ರಕಾರ ಅದು....

*The transmission of social heritage from one generation to another. The transmission of culture focusses on the communicating of information, values and social norms from one generation to another or from members of a group to new comers. commonly it is identified as educational activity.*[೯]

ಮಾಧ್ಯಮಗಳು ವಹಿಸುತ್ತಿರುವ ಆದರೆ, ಹೆರಾಲ್ಡ್ ಲಾಸ್‌ವೆಲ್ ಹೇಳದೇ ಉಳಿದ ಮತ್ತೊಂದು ಮುಖ್ಯ ಕೆಲಸವೆಂದರೆ 'ಮನರಂಜನೆ.' ಜನಮನವನ್ನು ಉಲ್ಲಾಸಗೊಳಿಸುವುದರ ಜೊತೆಗೆ ಆ ಮೂಲಕವೂ ಸಂದೇಶವನ್ನು ರವಾನಿಸಬಹುದಾದ ಶಕ್ತಿ ಮಾಧ್ಯಮಗಳಿಗಿದೆ. ಅದರಲ್ಲೂ ಚಲನಚಿತ್ರ ಮಾಧ್ಯಮ 'ಮನರಂಜನೆಯ ಚಕ್ರವರ್ತಿ' ಎನಿಸಿಕೊಳ್ಳುತ್ತದೆ. ಮನರಂಜನೆಯ ಅಂಶ ಪಾರಂಪರಿಕ ಸಂವಹನ ಮಾಧ್ಯಮಗಳಿಂದ ಹಿಡಿದು ಆಧುನಿಕ ಸಂವಹನ ಮಾಧ್ಯಮಗಳವರೆಗೆ ವ್ಯಾಪಕವಾಗಿರುವುದೂ, ಹಲವು ವೇಳೆ ಅವೇ ಪ್ರಧಾನವಾಗಿ ಇತರ ಕೆಲಸಗಳು ಕುಗ್ಗುವುದೂ ಕಾಣಬರುತ್ತದೆ. ಆದ್ದರಿಂದ ಮಾಧ್ಯಮಗಳು ನಿರ್ವಹಿಸುತ್ತಿರುವ ಕೆಲಸ ಕಾರ್ಯಗಳಲ್ಲಿ 'ಮನರಂಜನೆ'ಯ ಕೈಂಕರ್ಯವನ್ನು ನಿರ್ಲಕ್ಷಿಸುವಂತಿಲ್ಲ. ಇದಲ್ಲದೆ ಜಾಹೀರಾತುಗಳ ಮೂಲಕ ವ್ಯಾಪಾರ-ವ್ಯವಹಾರಕ್ಕೆ ಪ್ರೋತ್ಸಾಹ ನೀಡುವ ರಾಷ್ಟ್ರೀಯ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಸಹಕಾರ ಸೂಚಿಸುವ ಕೆಲಸವನ್ನು ಮಾಧ್ಯಮಗಳು ಮಾಡಬೇಕಾಗಿದೆ, ಮಾಡುತ್ತಿವೆ.

ಇದನ್ನೆಲ್ಲಾ ಒಗ್ಗೂಡಿಸಿ ೧೯೭೦ ರಲ್ಲಿ ವಿಲ್ಬರ್ ಶ್ರಾಮ್ ಮಾಧ್ಯಮದ ಕೆಲಸಗಳನ್ನು ಹೀಗೆ ಗುರುತಿಸಿದ್ದಾರೆ. (೧) ಪಹರೆಯವ (Watcher) (೨) ವೇದಿಕೆ (Forum) (೩) ಶಿಕ್ಷಕ (Teacher)

ವಿಲ್ಬರ್ ಶ್ರಾಮ್ ಪ್ರಕಾರ ಪ್ರತಿಯೊಂದು ಸಮಾಜದಲ್ಲೂ ಇತರ ಸದಸ್ಯರಿಗೆ ಘಟನಾವಳಿಗಳ ಮಾಹಿತಿ ಮತ್ತು ಸುದ್ದಿ ವಿಶ್ಲೇಷಿಸುವ ಪಹರೆಯವನ ಕಾರ್ಯವನ್ನು ಮಾಧ್ಯಮಗಳು ನಿರ್ವಹಿಸುತ್ತವೆ. ಪರಿಸರದ ಸಮೀಕ್ಷೆ ನಡೆಸಿ, ಅಲ್ಲಿನ ಆತಂಕ ಅಪಾಯಗಳನ್ನು, ಅವಕಾಶಗಳ ಒಳಿತು ಕೆಡಕುಗಳನ್ನು ಚರ್ಚಿಸಿ ವರದಿ ಮಾಡುವ ವೇದಿಕೆಯ ಕೆಲಸವನ್ನು ಮಾಡುತ್ತವೆ. ಪಾರಂಪರಿಕವಾದ ಸಾಮಾಜಿಕ ವಿಷಯಗಳನ್ನು ಮುಂದಿನ ತಲೆಮಾರುಗಳಿಗೆ ತಿಳಿಸಿ ಹೇಳಿಕೊಡುವ ಶಿಕ್ಷಕನ ಕೆಲಸವನ್ನೂ

ಸಂವಹನ ಮಾಧ್ಯಮಗಳು ಮಾಡುತ್ತವೆ. ಶ್ರಾಮ್ ಮತ್ತಿತರರು ಸಂವಹನ ಮಾಧ್ಯಮಗಳು ಒದಗಿಸುವ ಮನೋರಂಜನೆಯು ಅವುಗಳ ನಾಲ್ಕನೆ ಕೆಲಸವಾಗಿದೆ ಎಂದಿದ್ದಾರೆ.

೧೯೬೬ರಲ್ಲಿ ಪೀಟರ್‌ಸನ್ ಮತ್ತಿತರರು ಮಾಧ್ಯಮಗಳು ಕೆಲವು ನಿರ್ದಿಷ್ಟ ಸಾಮಾಜಿಕ ಕೆಲಸಗಳನ್ನು ನಿರ್ವಹಿಸಬೇಕಾದ ಗುರುತರ ಜವಾಬ್ದಾರಿ ಹೊತ್ತಿವೆ ಎಂದರು.ಸೀಬರ್ಟ್‌ನ ಪ್ರಕಾರ ಸಮೂಹ ಮಾಧ್ಯಮಗಳಿಗೆ ಎರಡು ಮುಖ್ಯವಾದ ಕೆಲಸಗಳಿವೆ. ಒಂದು - ಮಾಹಿತಿ ನೀಡುವುದು, ಎರಡು - ಮನರಂಜನೆ ಒದಗಿಸುವುದು. ಗ್ಯಾರಿ ಸ್ಟೇನರ್ ದೂರದರ್ಶನ ಸಂದರ್ಭದಲ್ಲಿ ಮನರಂಜನೆ ಎನ್ನುವುದು ವಿಸ್ಮಯಗಳನ್ನು ಒದಗಿಸುವ ಅಗತ್ಯ ಅಂಶವಷ್ಟೇ ಅಲ್ಲ, ಆ ಮೂಲಕ ಕಲಿಕೆಯನ್ನು ಪ್ರೋತ್ಸಾಹಿಸುವ ಅಂಶವೂ ಆಗಿದೆ ಎಂದಿದ್ದಾರೆ.

ಮೂಲತಃ ಸತ್ಯಶೋಧನೆಯೇ ಮಾಧ್ಯಮಗಳ ಕೆಲಸ. ಸಾಮಾಜಿಕ ಹಾಗೂ ರಾಜಕೀಯ ಸಂದರ್ಭಗಳನ್ನು ಸರ್ಕಾರದ ಗಮನಕ್ಕೆ ತಂದು, ಸರ್ಕಾರ ಪೌರ ಹಕ್ಕುಗಳಿಗೆ ತಡೆಯೊಡ್ಡದಂತೆ ನೋಡಿಕೊಳಬೇಕಾದ್ದು ಮುಖ್ಯ. ಆದರೂ ಮಾಧ್ಯಮಗಳು ಸರ್ಕಾರದ ಕಾರ್ಯನಿರ್ವಹಣೆಯ ವಿಚಾರದಲ್ಲಿ ಹಸ್ತಕ್ಷೇಪ ಮಾಡದೆ, ಆದಷ್ಟೂ ದೂರದಿಂದಲೇ ಎಚ್ಚರಿಸುವ ಕರಗಂಟೆಯಾಗಬೇಕು. ಇದನ್ನೇ ದಿವಂಗತ ಪ್ರಧಾನಿ ಇಂದಿರಾಗಾಂಧಿ ಕೊಚ್ಚಿನ್‌ನಲ್ಲಿ ನಡೆದ ಮಾತೃಭೂಮಿ ಪತ್ರಿಕೆಯ ಸುವರ್ಣ ಮಹೋತ್ಸವ ಸಂದರ್ಭದಲ್ಲಿ “ಸರ್ಕಾರಕ್ಕೆ ಸಲಹೆ ಮಾಡುವುದಲ್ಲ, ಜನತೆಗೆ ವರದಿ ಮಾಡಿ” ಎಂದು ಪತ್ರಿಕೆಗಳಿಗೆ ಹೇಳಿರುವುದು ಉಲ್ಲೇಖನೀಯ.

ಹೀಗೆ ಒಳ್ಳೆಯದನ್ನು ಎತ್ತಿ ಹಿಡಿಯುವ, ಕೆಟ್ಟದ್ದನ್ನು ಹೀಗಳೆಯುವ “ಲೇಖನಿಯ ಶಕ್ತಿ” ಸದ್ಬಳಕೆಯಾಗಬೇಕು ಎನ್ನುವುದನ್ನು ಲಜರ್ಸ್ ಫೆಲ್ಡ್ ಮತ್ತು ಮರ್ಟನ್ ಗುರುತಿಸಿದ್ದಾರೆ. ಮಾಧ್ಯಮಗಳಿಗೂ ನೀತಿ ನಿಯಮಗಳಿರಬೇಕು. ಅವು ಸತ್ಯಕ್ಕೆ ಹತ್ತಿರವಾಗಬೇಕು, ಸಮಾಜವನ್ನು, ಸರ್ಕಾರವನ್ನು ನಿರಂತರವಾಗಿ ಶುಚಿಗೊಳಿಸುವ ಕೆಲಸ ಮಾಡಬೇಕು ಎನ್ನುವುದು ಹಲವಾರು ವಿದ್ವಾಂಸರ ಒಮ್ಮತವಾಗಿದೆ. ಆಸೆ-ಆಮಿಷಗಳಿಗೆ ದುರ್ಬಲವಾಗದೆ, ಜಾತಿ, ಮತ, ಭಾಷೆ, ಅಂತಸ್ತು, ಪ್ರಾದೇಶಿಕತೆಯಂತಹ ಗುಂಪುಗಾರಿಕೆಯಲ್ಲಿ ತೊಡಗದೆ, ಪಕ್ಷಪಾತವಿಲ್ಲದೆ ಒಳಿತು - ಕೆಡಕುಗಳನ್ನು ಬೌದ್ಧಿಕ ತಕ್ಕಡಿಯಲ್ಲಿ ತೂಗಿ ಜನತೆಗೆ ಅನುಕೂಲವಾಗುವ, ಹಿತ ನೀಡುವ ಹಾಗೂ ಬೇಕಾದ ರೀತಿಯಲ್ಲಿ ಸಂವಹನ ಮಾಧ್ಯಮಗಳು ತಮ್ಮ ಕರ್ತವ್ಯ ನಿರ್ವಹಿಸಬೇಕಾದದ್ದು ಅತ್ಯಂತ ಮುಖ್ಯವಾದ ವಿಚಾರ. ಹಾಗಾದಾಗ ಮಾತ್ರ ಮಾಧ್ಯಮಗಳನ್ನು ನಾಲ್ಕನೇ ಆಯಾಮ (Fourth Estate) ಎಂದು ಕರೆಯುವುದು ಸಾರ್ಥಕವಾಗುತ್ತದೆ.

## ಸಮೂಹ ಸಂವಹನ ಮಾಧ್ಯಮಗಳ ಗುಣಲಕ್ಷಣಗಳು

ಆಧುನಿಕ ಸಮೂಹ ಸಂವಹನ ಮಾಧ್ಯಮಗಳು ಸಾಧಾರಣವಾಗಿ ತತ್ಕಾಲಿಕವಾಗಿ ಏಕಮುಖವಾಗಿರುತ್ತದೆ. ಓದುಗ, ಕೇಳುಗ ಅಥವಾ ನೋಡುಗನಿಗೆ ಆ ಕೂಡಲೇ ತನ್ನ ಪ್ರತಿಕ್ರಿಯೆ ತಿಳಿಸುವ, ಪ್ರಶ್ನೆ ಕೇಳುವ ಅಥವಾ ಅಗತ್ಯಬಿದ್ದರೆ ಸ್ಪಷ್ಟನೆ ಕೇಳುವ ಅವಕಾಶ ಕಡಿಮೆ. ಹೇಗೆಂದರೆ, ರೇಡಿಯೊದಲ್ಲಿ ಪ್ರಸಾರವಾಗುವ ಕಾರ್ಯಕ್ರಮವೊಂದನ್ನು ಕೇಳುತ್ತಾ ಕುಳಿತ ಶ್ರೋತೃವಿಗೆ ಹುಟ್ಟಬಹುದಾದ ಸಂದೇಹವನ್ನು ಆ ಕೂಡಲೆ ಆಕಾಶವಾಣಿಯಲ್ಲಿ ಕೇಳಿ ತಿಳಿಯುವುದು ಸಾಧ್ಯವೇ? ಬದಲಿಗೆ ಆಕಾಶವಾಣಿಗೆ ಪತ್ರಬರೆದು ಸ್ಪಷ್ಟೀಕರಣ ನೀಡುವಂತೆ ಮನವಿ ಮಾಡಿಕೊಂಡಲ್ಲಿ ಮುಂದಿನ ಪ್ರಶ್ನೋತ್ತರ ಕಾರ್ಯಕ್ರಮದಲ್ಲಿ ಮಾತ್ರ ಉತ್ತರ ಸಿಗಬಹುದು. ಹಲವೊಮ್ಮೆ ಸಮಯದ ಅಭಾವದಿಂದ, ಕೇಳಿದ ಪ್ರಶ್ನೆಯ ಮಹತ್ವದ ಆಧಾರದ ಮೇಲೂ ಉತ್ತರ ಸಿಗದೆಯೂ ಹೋಗಬಹುದು. ಇದೇ ಸ್ಥಿತಿ ದೂರದರ್ಶನ ಹಾಗೂ ಪತ್ರಿಕೆಗಳ ಸಂದರ್ಭದಲ್ಲೂ ಸಾಧ್ಯ. ಆದ್ದರಿಂದ ಆಧುನಿಕ ಮಾಧ್ಯಮಗಳ ಮೂಲಕ ಸಮೂಹ ಸಂವಹನ ಏಕಮುಖ ವ್ಯವಸ್ಥೆ ಎನ್ನಬಹುದು.

ಎರಡು ಬಗೆಯ ಆಯ್ಕೆಯ ಸಾಧ್ಯತೆ ಇರುವುದು ಈ ಮಾಧ್ಯಮಗಳ ಎರಡನೆ ಗುಣಲಕ್ಷಣ. (೧) ಮಾಧ್ಯಮಗಳೂ ತಮ್ಮ ಗುರಿಯನ್ನು ಹುಡುಕಿಕೊಳ್ಳುತ್ತವೆ. (೨) ಶ್ರೋತೃ/ಪ್ರೇಕ್ಷಕ/ಓದುಗರೂ ತಮ್ಮ ಮಾಧ್ಯಮಗಳನ್ನು ಆರಿಸಿಕೊಳ್ಳುತ್ತಾರೆ. ಉದಾಹರಣೆಗೆ ದೂರದರ್ಶನದಂತಹ ಮಾಧ್ಯಮ ಗ್ರಾಮೀಣ ಹಾಗೂ ನಗರ ಪ್ರದೇಶದ ನಿವಾಸಿಗಳಿಬ್ಬರಿಗೂ ಒಂದೇ ಬಗೆಯ ಕಾರ್ಯಕ್ರಮಗಳನ್ನು ಬಿತ್ತರಿಸಿದರೆ ಯಶಸ್ವಿಯಾಗುವುದಿಲ್ಲ. ಗ್ರಾಮೀಣ ಜನರ ಶೈಕ್ಷಣಿಕ, ಬೌದ್ಧಿಕ, ಮಾನಸಿಕ ಮತ್ತು ಮನೋವೈಜ್ಞಾನಿಕ ಸ್ಥಿತಿಗತಿಗಳಿಗನುಗುಣವಾಗಿ ಕಾರ್ಯಕ್ರಮ ರೂಪಿಸಬೇಕಾಗುತ್ತದೆ. ಹಳ್ಳಿ ರೈತನಿಗೆ ಮನರಂಜನೆಯಂತಹ ಲಘು ಕಾರ್ಯಕ್ರಮಗಳ ಮೂಲಕ ತಿಳಿಸಿಕೊಡಬೇಕೇ ಹೊರತು ಗಂಭೀರ ಸಾಕ್ಷ್ಯಚಿತ್ರಗಳ ಮೂಲಕ ಅಲ್ಲ. ಒಂದು ದೂರದರ್ಶನ ಚಾನೆಲ್ ಗಂಭೀರ ಚಿಂತನೆಗಳಿರುವ ಕಾರ್ಯಕ್ರಮವನ್ನು ಪ್ರಸಾರ ಮಾಡುತ್ತದೆ ಎಂದರೆ ಆ ಚಾನೆಲ್ ಬುದ್ಧಿಜೀವಿಗಳ, ಚಿಂತಕರ ಒಂದು ವರ್ಗವನ್ನು ಮಾತ್ರ ಬಯಸುತ್ತಿದೆ ಎಂದರ್ಥ. ಸಿನೆಮಾಗಳಲ್ಲೂ ಹಾಗೆ, ಸೀರಿಯಸ್ ಎನಿಸುವ ಹೊಸ ಅಲೆಯ ಚಿತ್ರಗಳು ಗ್ರಾಮೀಣ ಹಾಗೂ ಅರೆಪಟ್ಟಣದ ಜನತೆಗೆ ರುಚಿಸದಿರುವ ಸಾಧ್ಯತೆಯೇ ಹೆಚ್ಚು. ಬಣ್ಣಬಣ್ಣದ ಉಡುಗೆ ತೊಡುಗೆ, ಹಾಸ್ಯಭರಿತ ಲಘು ಸಂಭಾಷಣೆ, ಹಾಡುಗಳಿಗೆ ಅವರು ಮನಸೋಲುತ್ತಾರೆ. ಅಂತಹ ಸಿನೆಮಾಗಳು ಹಳ್ಳಿಗಳಲ್ಲಿ 'ಹಿಟ್' ಆಗುತ್ತವೆ.

ಅದೇ ರೀತಿ ಪ್ರೇಕ್ಷಕನೂ ತನಗೇನು ಬೇಕೋ ಅದನ್ನೇ ಆರಿಸಿಕೊಳ್ಳುತ್ತಾನೆ. ನೂರಾರು ಚಾನೆಲ್‌ಗಳ ಹಾವಳಿಯ ಮಧ್ಯೆಯೂ ಸ್ಟಾರ್‌ಪ್ಲಸ್‌ನಲ್ಲಿ ಪ್ರಸಾರವಾಗುತ್ತಿರುವ ಕ್ವಿಜ್ ಕ್ರೀಡಾ ಕಾರ್ಯಕ್ರಮ "ಕೌನ್ ಬನೇಗಾ ಕರೋಡ್‌ಪತಿ" ನಗರ ನಿವಾಸಿಗಳ ಮನಗೆದ್ದಿರುವುದು ಉಲ್ಲೇಖನೀಯ.

ಮೂರನೆಯದಾಗಿ, ಮಾಧ್ಯಮಗಳ ವ್ಯಾಪಕತೆ. ಆಧುನಿಕ ಸಂವಹನ ಮಾಧ್ಯಮಗಳ ವ್ಯಾಪಕತೆ ಅಸೀಮವಾಗಿರುವುದರಿಂದ, ಹೆಚ್ಚು ಹೆಚ್ಚು ಮಾಧ್ಯಮಗಳ ಅಗತ್ಯವಿರುವುದಿಲ್ಲ. ಇಡೀ ಭಾರತ ದೇಶಕ್ಕೆ ಮಾಹಿತಿ ಒದಗಿಸಲು ಒಂದು ಆಕಾಶವಾಣಿ ಸಾಲದೇ? ಇದೇ ಆಕಾಶವಾಣಿ ಡಾ. ರಾಜ್‌ಕುಮಾರ್ ಅಪಹರಣದ ಸಂದರ್ಭದಲ್ಲಿ ಅಪಹರಣಕಾರ ವೀರಪ್ಪನ್‌ಗೂ, ಅಪಹೃತರಾದವರಿಗೂ, ಸಂದೇಶ ರವಾನೆ ಮಾಡಿದ್ದು ಅದರ ವ್ಯಾಪಕತೆಗೆ ಒಂದು ನಿದರ್ಶನ. ಆದರೂ ಮೊದಲೇ ಹೇಳಿರುವ ಹಾಗೆ ಆ ತಕ್ಷಣದ ಪ್ರತಿಕ್ರಿಯೆಗೆ ಈ ಮಾಧ್ಯಮ ಬಳಕೆಯಾಗದೆ ಸುದ್ದಿಯ ಏಕಮುಖ ಸಂಚಾರವನ್ನು ಪ್ರತಿಪಾದಿಸಿದೆ.

ನಾಲ್ಕನೆಯದಾಗಿ ಮಾಧ್ಯಮಗಳ ಸಾರ್ವತ್ರಿಕತೆ. ಲಕ್ಷಾಂತರ ಜನರ ನಡುವೆ ಆವರ್ತನೆ ಹೊಂದಿದ ಪತ್ರಿಕೆಗಳು ನಿರ್ದಿಷ್ಟವಾಗಿ ಯಾವುದೇ ಒಬ್ಬ ವ್ಯಕ್ತಿಯನ್ನು ಸಂಬೋಧಿಸಿ ಮಾಹಿತಿ ನೀಡುವುದಿಲ್ಲ. ಅಂತರ್-ವ್ಯಕ್ತೀಯ ಸಂವಹನೆಯ ಸಂದರ್ಭದಲ್ಲಿ ನಡೆಯುವಂತೆ 'ಒಬ್ಬರಿಗೊಬ್ಬರ' (One to One) ನಡುವೆ ಸಂವಹನೆ ನಡೆಯುವುದಿಲ್ಲ. ಇಲ್ಲಿ ಅಚ್ಚಾಗುವುದು ಒಂದೇ ಪತ್ರಿಕೆ. ಅದನ್ನು ಓದುವ ಲಕ್ಷಾಂತರ ಜನ - ಒಬ್ಬನೇ ಓದುಗ.

ಆಧುನಿಕ ಸಮೂಹ ಮಾಧ್ಯಮಗಳು ಸಂವಹನಶೀಲ ಹಾಗೂ ಪರಿಸರಕ್ಕೆ ಸ್ಪಂದಿಸುವ ಸಾಮಾಜಿಕ ಸಂಸ್ಥೆಗಳು. ಮಾಧ್ಯಮಗಳು ಹಾಗೂ ಸಮಾಜದ ನಡುವೆ ನೇರ, ಆತ್ಮೀಯ, ಅವಿನಾಶಿ ಸಂಬಂಧ, ಸಂಪರ್ಕ ಇದ್ದೇ ಇರುತ್ತದೆ. ತಾವು ಕಾರ್ಯನಿರ್ವಹಿಸುವ ಸಮಾಜದ ಸಾಮಾಜಿಕ, ಆರ್ಥಿಕ, ರಾಜಕೀಯ ವ್ಯವಸ್ಥೆಯ ಮೇಲೆ ಮಾಧ್ಯಮಗಳು ಪ್ರಭಾವ ಬೀರುವುದಷ್ಟೇ ಅಲ್ಲ, ತಾವೂ ಅದರಿಂದ ಪ್ರಭಾವಿತವಾಗುತ್ತವೆ ಎನ್ನುವುದು ಮುಖ್ಯ. ಒಂದರ್ಥದಲ್ಲಿ ಒಂದು ಸಮಾಜವನ್ನು ಅರ್ಥ ಮಾಡಿಕೊಳ್ಳಲು ಮೊದಲು ಅಲ್ಲಿನ ಮಾಧ್ಯಮಗಳನ್ನು ಅರ್ಥಮಾಡಿಕೊಳ್ಳಬೇಕು; ಮಾಧ್ಯಮಗಳನ್ನು ಅರಿತುಕೊಳ್ಳಲು ಮೊದಲು ಅಲ್ಲಿನ ಸಮಾಜವನ್ನು ಅರಿತುಕೊಳ್ಳಬೇಕು.

## ೨. ಸಮೂಹ ಸಂವಹನ ಮಾಧ್ಯಮಗಳ ವರ್ಗೀಕರಣ

ಸಮಕಾಲೀನ ಸಾಮಾಜಿಕ ಸಂದರ್ಭದಲ್ಲಿ ಸಂವಹನ ರಂಗ ಅತ್ಯಂತ ಪ್ರಬಲ ಹಾಗೂ ಪ್ರಭಾವಿ ವಲಯವೆನಿಸಿದೆ. ಜೀವಜಗತ್ತಿನ ಉಗಮದೊಂದಿಗೇ ಪ್ರಾರಂಭವಾದ ಸಂವಹನದ ಕಲೆ ಕ್ರಮೇಣ ಹಂತ ಹಂತವಾಗಿ ಬೆಳೆದು, ಮಾರ್ಪಟ್ಟು, ವಿಸ್ತೃತಗೊಂಡು ಇಂದು ವಿಜ್ಞಾನದ ಸ್ವರೂಪ ಪಡೆದಿದೆ. ಸಂವಹನ ವಿಧಾನ ಕಲೆ. ಅದರ ಮಾರ್ಗ ವಿಜ್ಞಾನ. ಈ ವೈಜ್ಞಾನಿಕ ಮಾರ್ಗ ಕಲಾತ್ಮಕವಾಗಿರದೇ ಹೋದರೆ ಸಂವಹನೆ ಆಕರ್ಷಕವಾಗಿರುವುದಿಲ್ಲ, ಅದರ ಉದ್ದೇಶಿತ ಗುರಿ ಸಾಧಿತವಾಗುವುದೂ ಇಲ್ಲ. ರಸಋಷಿಗಳು ತೇಲುವ ಮೋಡ, ಸುಳಿವ ತಂಗಾಳಿ, ಹರಿವ ನೀರು, ಹೂ-ಎಲೆ, ಶುಕ-ಪಿಕಗಳನ್ನು ಸಂದೇಶ ವಾಹಕಗಳಾಗಿ, ಸಂದೇಶವೇ ಆಗಿ ಮನೋಜ್ಞವಾಗಿ ಬಣ್ಣಿಸಿ, ಅದಕ್ಕೊಂದು ಕಾಲ್ಪನಿಕ ಆಯಾಮ ನೀಡಿದ್ದಾರೆ. ದಮಯಂತಿಯ ಸಂದೇಶವಾಹಕನ ಕಾರ್ಯ ನಿರ್ವಹಿಸುವ 'ಹಂಸ' ಶಬ್ದದ ತದ್ಭವರೂಪ 'ಅಂಚೆ' ಎಂಬುದಂತೂ ಇಂದು ಇಡೀ ಸಂವಹನ ವ್ಯವಸ್ಥೆಯ ಭಾಗವೇ ಆಗಿ ರೂಪುಗೊಂಡಿರುವುದು ಸ್ಮರಣಾರ್ಹ. ಇಂದಿನ ದಿನಗಳಲ್ಲಂತೂ ವಿಜ್ಞಾನದ ಜ್ಞಾನ ಹಿಂದೆಂದೂ ಕಂಡರಿಯದಷ್ಟು ವಿಕಾಸಗೊಂಡು ಶೀಘ್ರ, ನಿಖರ, ವ್ಯಾಪಕ ಸಂವಹನೆ ದಿನನಿತ್ಯದ ಮಾತಾಗಿದೆ. ನೀಲನಭಕ್ಕೆ ಹಾರಿದ ಉಪಗ್ರಹಗಳು ಸಂದೇಶ ರವಾನೆಯ ತಾಂತ್ರಿಕ ಮಾಧ್ಯಮಗಳಾಗಿವೆ. ೧೯೫೭ ರಿಂದ ೧೯೭೪ರ ಅವಧಿಯಲ್ಲೆ ಸುಮಾರು ೨೧೦೦ ಉಪಗ್ರಹಗಳು, ಅವುಗಳಲ್ಲಿ ೩೩ ಸಂವಹನ ಉಪಗ್ರಹಗಳೇ (Communication Satellite Sytem) ಆಗಿದ್ದು, ಅವೆಲ್ಲ ಕಕ್ಷೆಯಲ್ಲಿ ಸ್ಥಿರಗೊಂಡು ಅಸಂಖ್ಯಾತ ಸಂದೇಶಗಳನ್ನು ರವಾನಿಸಿವೆ, ರವಾನಿಸುತ್ತಿವೆ. ರೇಡಿಯೊ, ದೂರದರ್ಶನ ಪ್ರಸಾರ, ದೂರವಾಣಿ ಮತ್ತು ದೂರಸಂಪರ್ಕ, ವಾಣಿಜ್ಯ - ವ್ಯವಹಾರ ಸಂಪರ್ಕ, ವಿಮಾನಯಾನ ಮೊದಲ್ಗೊಂಡು ವಿವಿಧ ಸಾರಿಗೆ ಸಂಪರ್ಕ, ಶಿಕ್ಷಣ, ಮನರಂಜನೆ ಪ್ರತಿಯೊಂದು ಕ್ಷೇತ್ರದಲ್ಲೂ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ತಮ್ಮ ಪ್ರಭಾವ ಸೃಷ್ಟಿಸಿ, ವಿದ್ಯುನ್ಮಾನ ಜಗತ್ತಿನ ಅವಿಭಾಜ್ಯ ಅಂಗವಾಗಿವೆ, ಸಂವಹನದ ಪ್ರಮುಖ ಕೊಂಡಿಯಾಗಿವೆ.

> *With their amazing capacity, rapid increase in number and, most important, their combined use with television and computers, communication Satellites have opened vast new areas of activities and their potential is enormous.*[೧೦]

ಎಂದಿದ್ದಾರೆ ಸಿಯಾನ್ ಮ್ಯಾಕ್‌ಬ್ರೈಡ್. ಹೀಗೆ ಕಲೆಯೂ ಆದ, ವಿಜ್ಞಾನವೂ ಆದ ಸಂವಹನ ಕಾರ್ಯಕ್ಕೆ ಬಳಕೆಯಾಗುವ ಸಕಲ ಸಾಧನಗಳನ್ನೂ ಅಧ್ಯಯನದ ದೃಷ್ಟಿಯಿಂದ ವಿಂಗಡಿಸಿಕೊಳ್ಳಬೇಕಾದ ಅಗತ್ಯವಿದೆ.

ಸಮಾಜಕ್ಕೆ ಮಾಹಿತಿ, ಮನರಂಜನೆ, ಶಿಕ್ಷಣ ಒದಗಿಸುವ ವೇದಿಕೆಗಳಾಗಿ ಕೆಲಸ ಮಾಡುವ ಸಮೂಹ ಸಂವಹನ ಮಾಧ್ಯಮಗಳನ್ನು ಎರಡು ಪ್ರಮುಖ ನೆಲೆಗಳಲ್ಲಿ ವರ್ಗೀಕರಿಸಿಕೊಳ್ಳಬಹುದು.

೧. ಪಾರಂಪರಿಕ ಸಂವಹನ ಮಾಧ್ಯಮಗಳು

೨. ಆಧುನಿಕ ಸಂವಹನ ಮಾಧ್ಯಮಗಳು

ಪಾರಂಪರಿಕ ಸಮೂಹ ಸಂವಹನ ಮಾಧ್ಯಮಗಳು ಮತ್ತು ಆಧುನಿಕ ಸಮೂಹ ಸಂವಹನ ಮಾಧ್ಯಮಗಳ ನಡುವಿನ ಅಂತರ ಸಂಬಂಧಗಳನ್ನು, ಪರಸ್ಪರ ಪೂರಕತೆಯನ್ನು ಈ ಮಹಾಪ್ರಬಂಧದ ಮುಂದಿನ ಭಾಗದಲ್ಲಿ ವಿವರಿಸಲಾಗಿದೆ. ನಮ್ಮ

ಅಧ್ಯಯನದ ವ್ಯಾಪ್ತಿ ಆಧುನಿಕ ಸಂವಹನ ಮಾಧ್ಯಮಗಳನ್ನು ಕುರಿತದ್ದಾಗಿದೆ. ಈ ವಿಷಯವೂ ಅಗಾಧ ವ್ಯಾಪಕತೆಯನ್ನು ಹೊಂದಿರುವುದರಿಂದ ಇವುಗಳ ಸ್ಥೂಲ ವರ್ಗೀಕರಣವನ್ನು ಮಾತ್ರ ಇಲ್ಲಿ ಮಾಡಲಾಗಿದೆ.

### ಆಧುನಿಕ ಸಂವಹನ ಮಾಧ್ಯಮಗಳು

ಆಧುನಿಕ ಸಂವಹನ ಮಾಧ್ಯಮಗಳನ್ನು ವರ್ಗೀಕರಿಸುವಾಗ ಎರಡು ಮಾರ್ಗಗಳನ್ನು ಅನುಸರಿಸಬಹುದು. ಆಧುನಿಕ ಸಂವಹನ ಮಾಧ್ಯಮಗಳು ಸಮೂಹ ಸಂವಹನೆಗೂ, ಅಂತರ್ -ವ್ಯಕ್ತೀಯ ಸಂವಹನೆಗೂ, ಬಳಕೆಯಾಗುತ್ತವೆ. ಸಾಧಾರಣವಾಗಿ ಅಂತರ್‌ಸಂವಹನೆ ಮುಖಾಮುಖಿ ನಡೆಯುತ್ತದೆ. ಕ್ರಿಯೆ-ಪ್ರತಿಕ್ರಿಯೆಗಳು ತತ್‌ಕ್ಷಣದಲ್ಲಿ ವ್ಯಕ್ತವಾಗುತ್ತವೆ. ಇದಕ್ಕೆ ಸಾಮಾನ್ಯವಾಗಿ ಯಾವುದೇ 'ಮಧ್ಯವರ್ತಿ ಸಾಧನ'ದ ಅಗತ್ಯ ಇರುವುದಿಲ್ಲವಾದರೂ ಹಲವು ಸಂದರ್ಭಗಳಲ್ಲಿ ಕಾಲ, ದೇಶ, ಅಂತರಗಳಿಗನುಸಾರವಾಗಿ ವೈಯಕ್ತಿಕ - ಅಂತರ್‌ಸಂವಹನ ಮಾಧ್ಯಮಗಳನ್ನು ಬಳಸಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಅಂದರೆ ಸಂವಹನೆ ನಡೆಯುವುದು ಒಂದು ಸಮೂಹಕ್ಕೋ ಅಥವಾ ಒಬ್ಬ ವ್ಯಕ್ತಿಗೋ ಎನ್ನುವುದರ ಆಧಾರದ ಮೇಲೆ ಸಂವಹನ ಮಾಧ್ಯಮಗಳನ್ನು ವರ್ಗೀಕರಿಸುವುದು ಒಂದು ಬಗೆ.

ಇನ್ನೊಂದು ಬಗೆಯೆಂದರೆ, ಸಂವಹನೆ ನಡೆಸುವ ಸಾಧನದ ಗುಣಸ್ವರೂಪದ ಆಧಾರದ ಮೇಲೆ ಮಾಡುವ ವರ್ಗೀಕರಣ. ಇಲ್ಲಿ ಸಂವಹನೆ ನೋಡುವ ಮೂಲಕ, ಕೇಳುವ ಮೂಲಕ, ಇಲ್ಲವೆ ಏಕಕಾಲಕ್ಕೆ ನೋಡುವ - ಕೇಳುವ ಮೂಲಕ ನಡೆಸಲು ಅನುಕೂಲವಾಗುವ ಉಪಕರಣಗಳನ್ನಾಧರಿಸಿ ವಿಭಜನೆ ಮಾಡಬಹುದಾಗಿದೆ.

### ಸಂವಹನ ವಿಧಾನದ ಆಧಾರದ ಮೇಲೆ ಆಧುನಿಕ ಸಂವಹನ ಮಾಧ್ಯಮಗಳ ವರ್ಗೀಕರಣ

ಈ ವರ್ಗೀಕರಣ ಮಾದರಿಯಲ್ಲಿ, ಸಂವಹನ ಮಾಧ್ಯಮಗಳನ್ನು ಸಮೂಹ ಮಾಧ್ಯಮಗಳು ಮತ್ತು ಅಂತರ್‌ಸಂವಹನ ಮಾಧ್ಯಮಗಳು ಎಂದು ಪ್ರತ್ಯೇಕಿಸಿಕೊಳ್ಳುವುದು ಮೊದಲ ಹಂತ. ನಂತರ ಈ ಎರಡೂ ವಿಭಾಗಗಳನ್ನೂ ವಿದ್ಯುನ್ಮಾನ ಹಾಗೂ ವಿದ್ಯುನ್ಮಾನೇತರ ಮಾಧ್ಯಮಗಳೆಂದು ವಿಭಜಿಸಿಕೊಳ್ಳಬೇಕು. ವಿದ್ಯುನ್ಮಾನ ಮಾಧ್ಯಮಗಳು (Electronic Media) ಉನ್ನತ ತಂತ್ರಜ್ಞಾನದ ಆವಿಷ್ಕಾರದ ಫಲ. ದೂರದರ್ಶನ, ರೇಡಿಯೊ, ಸಿನೆಮಾ, ವೀಡಿಯೋ ಮುಂತಾದವು ವಿದ್ಯುನ್ಮಾನ ಮಾಧ್ಯಮಗಳೆನಿಸಿಕೊಳ್ಳುತ್ತವೆ. ವಿದ್ಯುನ್ಮಾನೇತರ (Non-Electronic) ಮಾಧ್ಯಮಗಳಲ್ಲಿ ತಾಂತ್ರಿಕ ನೈಪುಣ್ಯ ಈಗ ಬಳಕೆಯಾಗುತ್ತಿದೆಯಾದರೂ, ಇವೇ ವಿದ್ಯುನ್ಮಾನ ವಲಯದ ಕೊಡುಗೆಗಳಲ್ಲ. ಉದಾಹರಣೆಗೆ, ರಂಗಭೂಮಿ - ಮೂಲತಃ ಪಾರಂಪರಿಕ ಸಂವಹನ ಪದ್ಧತಿಯ ಆಧಾರದಲ್ಲಿ ಬೆಳೆದು ಬಂದು ಈಗೀಗ ಉನ್ನತ ತಾಂತ್ರಿಕ, ವಿದ್ಯುನ್ಮಾನ ಸಾಧನಗಳನ್ನು ಇದಕ್ಕೆ ಅಳವಡಿಸಿಕೊಳ್ಳುತ್ತಿದ್ದರೂ, ಅಂತಿಮವಾಗಿ ಇದರ ಸ್ವರೂಪ ಅಂತರ್‌ಸಂವಹನೆಯೇ ಹೊರತು ದೂರದರ್ಶನದಂತಹ ವಿದ್ಯುನ್ಮಾನ ಮಾಧ್ಯಮವಲ್ಲ.

ಸಮೂಹ ಸಂವಹನ ಮಾಧ್ಯಮಗಳ ಹಾಗೆಯೇ ಅಂತರ್‌ಸಂವಹನ ಮಾಧ್ಯಮಗಳನ್ನೂ ವಿದ್ಯುನ್ಮಾನ ಹಾಗೂ ವಿದ್ಯುನ್ಮಾನೇತರ ಮಾಧ್ಯಮಗಳೆಂದು ಗುರುತಿಸಬಹುದು. ಕಂಪ್ಯೂಟರ್, ಇಂಟರ್‌ನೆಟ್, ಸಂಚಾರಿ ಟೆಲಿಫೋನ್, ಫ್ಯಾಕ್ಸ್ ಇವು ಅಂತರ್‌ಸಂವಹನೆಗೆ ಉಪಯೋಗಿಸಬಹುದಾದ ಸವಲತ್ತುಗಳು. ತಂತ್ರಜ್ಞಾನದ ಹೊಸ ಹೊಸ ಸಂಶೋಧನೆಯ ಪರಿಣಾಮವಾಗಿ ಕಂಪ್ಯೂಟರ್‌ನಂತಹ ಸಾಧನಗಳು ಸಮೂಹ ಸಂವಹನೆಯಲ್ಲೂ ವ್ಯಾಪಕವಾಗಿ ಬಳಕೆಯಾಗುತ್ತಿರುವುದು ಗಮನಾರ್ಹ. ಅಂತರ್‌ಸಂವಹನೆಗೆ ದಾರಿ ಮಾಡಿಕೊಡುವ ಟೆಲಿಪ್ರಿಂಟರ್, ಅಂಚೆ ಮತ್ತು ತಂತಿ, ಸಾರಿಗೆ ಸಂಪರ್ಕ ಇವೆಲ್ಲ ವಿದ್ಯುನ್ಮಾನೇತರ ಸಾಧನಗಳೆನಿಸಿಕೊಳ್ಳುತ್ತವೆ.

ಸಂವಹನ ವಿಧಾನದ ಆಧಾರದ ಮೇಲೆ ಆಧುನಿಕ ಸಂವಹನ ಮಾಧ್ಯಮಗಳ ವರ್ಗೀಕರಣವನ್ನು ಹೀಗೆ ಚಿತ್ರಿಸಬಹುದು.

**ಪಟ್ಟಿ - ೧**




**ಸಾಧನಗಳ ಗುಣ ಸ್ವರೂಪದ ಆಧಾರದ ಮೇಲೆ ಆಧುನಿಕ ಸಂವಹನ ಮಾಧ್ಯಮಗಳ ವರ್ಗೀಕರಣ**

ಈ ಮಾದರಿಯ ವರ್ಗೀಕರಣದಲ್ಲಿ ಸಂವಹನ ಸಾಧನಗಳನ್ನು ಮೂರು ವಿಭಾಗಗಳನ್ನಾಗಿ ಮಾಡಿಕೊಳ್ಳಬೇಕು. ಕಿವಿಯಿಂದ ಕೇಳಲ್ಪಟ್ಟು ವಿಷಯಗ್ರಹಣ ಮಾಡುವುದು. ಇವು ಶ್ರವ್ಯ ಮಾಧ್ಯಮಗಳು. ಉದಾಹರಣೆಗೆ ರೇಡಿಯೊ, ಆಡಿಯೋಟೇಪ್, ಟೆಲಿಫೋನ್ ಮುಂತಾದವು; ಕೇವಲ ನೋಟಕ್ಕೆ ಲಭ್ಯವಾಗುವಂಥವು ದೃಶ್ಯ ಮಾಧ್ಯಮಗಳು. ಉದಾಹರಣೆಗೆ ಮುದ್ರಿತ ಸಾಮಗ್ರಿಗಳು, ಚಿತ್ರ ಶಿಲ್ಪಕಲೆಗಳಂತಹ ಅವಾಚಿಕ ಮಾಧ್ಯಮಗಳು; ಕಿವಿಗೂ ಕೇಳಿಸಿ ಕಣ್ಣಿಗೂ ಗೋಚರಿಸುವ ಮೂರನೇ ವರ್ಗ ಶ್ರವ್ಯ-ದೃಶ್ಯ ಮಾಧ್ಯಮ. ಇವುಗಳಲ್ಲಿ ದೂರದರ್ಶನ, ಸಿನೆಮಾ ಮುಂತಾದವು ಸೇರುತ್ತವೆ.

ಈ ರೀತಿಯ ವರ್ಗೀಕರಣದ ಮಾದರಿಯನ್ನು ಪಟ್ಟಿ - ೨ರಲ್ಲಿ ನೋಡಬಹುದು :

ಆಧುನಿಕ ಸಂವಹನ ಮಾಧ್ಯಮಗಳ ಜಗತ್ತು ತೀರಾ ವಿಸ್ತೃತವೂ ಅಗಾಧವೂ ಆಗಿದೆ. ನಮ್ಮ ಮಹಾಪ್ರಬಂಧದಲ್ಲಿ ಸಂವಹನ ಮಾಧ್ಯಮಗಳ ಪೈಕಿ ಮೂರು ಮಾಧ್ಯಮಗಳು, ಅವುಗಳ ಕಾರ್ಯವೈಖರಿ, ಕನ್ನಡದ ಅಭಿವೃದ್ಧಿ ಕಾರ್ಯದಲ್ಲಿ ಅವುಗಳ ಪಾತ್ರದ ಬಗ್ಗೆ ಮಾತ್ರ ಚರ್ಚಿಸಲಾಗುವುದು. ಈ ಉದ್ದೇಶಕ್ಕಾಗಿ ಒಂದು ಶ್ರವ್ಯಮಾಧ್ಯಮ-ಆಕಾಶವಾಣಿ, ಒಂದು ದೃಶ್ಯ ಮಾಧ್ಯಮ - ಪತ್ರಿಕೆ, ಒಂದು ಶ್ರವ್ಯ - ದೃಶ್ಯ ಮಾಧ್ಯಮ - ದೂರದರ್ಶನವನ್ನು ಮಾದರಿಯನ್ನಾಗಿ ಆರಿಸಿಕೊಳ್ಳಲಾಗಿದೆ. ಮಾಧ್ಯಮ ಮತ್ತು ಕನ್ನಡ ಅಭಿವೃದ್ಧಿ ಕ್ಷೇತ್ರದಲ್ಲಿ ಇದು ಮೊದಮೊದಲ ಅಧ್ಯಯನವಾಗಿದ್ದು, ಇನ್ನೂ ಹೆಚ್ಚಿನ ಸಂಶೋಧನೆಗೆ ವಿಪುಲ ಅವಕಾಶಗಳಿವೆ ಎಂದು ಹೇಳಬಹುದಾಗಿದೆ.

## ಸಾಧನಗಳ ಗುಣ ಸ್ವರೂಪದ ಆಧಾರದ ಮೇಲೆ ಆಧುನಿಕ ಸಂವಹನ ಮಾಧ್ಯಮಗಳ ವರ್ಗೀಕರಣ

### ಪಟ್ಟಿ - ೨




## ೩. ಪಾರಂಪರಿಕ ಮತ್ತು ಆಧುನಿಕ ಸಮೂಹ ಮಾಧ್ಯಮಗಳಿಗೆ ಇರುವ ಅಂತರ - ಸಂಬಂಧ

ಒಂದು ಸಣ್ಣ ಬುಗ್ಗೆಯಾಗಿ ಹುಟ್ಟಿ ನದಿಯಾಗಿ ಹರಿದು ಧಾರೆಯಾಗಿ ಸುರಿದು ಮಹಾಸಾಗರವನ್ನು ಸೇರುವ ನೀರಿನ ಒರತೆಯಂತೆ ಒಂದು ವಿಚಾರ ಸಹ ಮನದ ಮೂಲೆಯಲ್ಲಿ ಉಗಮಿಸಿ ಅಲ್ಲೇ ಬೆಳೆದು ಆಚೀಚಿನ ಪರಿಸರ, ಪರಿಸ್ಥಿತಿಗಳಿಗೆ ತೆರೆದುಕೊಂಡು ಸುತ್ತಲಿನ ಸಮುದಾಯವನ್ನು ತಲುಪುತ್ತದೆ. ವಿಚಾರ ಪ್ರವಹನೆಯ ಈ ಕ್ರಿಯೆ ನಾಗರಿಕತೆಯು ನಿಟ್ಟಿನಲ್ಲಿ ಮನುಷ್ಯ ಹೆಜ್ಜೆಯಿರಿಸಿದ ದಿನದಿಂದಲೂ ಹಂತ ಹಂತವಾಗಿ ವಿವಿಧ ಸ್ವರೂಪಗಳನ್ನು ಪಡೆದು ಬೆಳೆದಿದೆ. ಅಭಿವ್ಯಕ್ತಿಯ ಅಗತ್ಯ ಹೆಚ್ಚಿದಂತೆಲ್ಲಾ ವೈವಿಧ್ಯಮಯ ಸಂವಹನ ಕ್ರಿಯೆ ಒಂದು ವೈಯಕ್ತಿಕ ಬೇಡಿಕೆಯ ಮಂಡನೆಯ ಉದ್ದೇಶ ಹೊಂದಿದ್ದರೂ ತಲೆಮಾರಿನಿಂದ ತಲೆಮಾರಿಗೆ ಸಂಸ್ಕೃತಿ ವರ್ಗಾವಣೆಯ ಕರ್ತವ್ಯವನ್ನೂ ನಿರ್ವಹಿಸಿದೆ.

ಪೀಳಿಗೆಯಿಂದ ಪೀಳಿಗೆಗೆ ಹರಿದುಬಂದ 'ಸಂಸ್ಕೃತಿ'ಯೇ ಜಾನಪದದ ಸಾರಸರ್ವಸ್ವ. ಇದು ಮೌಖಿಕ ಸಂಪ್ರದಾಯ, ಮೌಖಿಕ ಅಭಿವ್ಯಕ್ತಿ ಕ್ರಮ. ಈ ಸಂಪ್ರದಾಯಕ್ಕೆ 'ಜಾನಪದ' ಎಂಬ ಶಬ್ದವನ್ನು ೧೮೪೬ರಲ್ಲಿ ಮೊದಲ ಬಾರಿಗೆ ಪ್ರಯೋಗಿಸಿದ

ಹಾ.ಮಾ. ನಾಯಕರು ಇದನ್ನು Folklore ಪದಕ್ಕೆ ಕನ್ನಡದ ಸಂವಾದಿ ಪದವಾಗಿ ಬಳಕೆಗೆ ಕೊಟ್ಟರು. ನಂತರವೇ ಜನಪದ ಗೀತೆ (Folk song), ಜನಪದ ಸಾಹಿತ್ಯ (Folk literature), ಐತಿಹ್ಯ (Legend), ಪುರಾಣ (Myth), ಕಟ್ಟುಕಥೆ (Merchen), ಲಾವಣಿ (Ballad), ಜನಪದ ನೃತ್ಯ (Folk dance) ಹೀಗೆ ಜಾನಪದ ಕಲೆಯ ಹತ್ತಾರು ಶಾಖೆಗಳು ನಿರ್ದಿಷ್ಟ ಕಲ್ಪನೆ ಹಾಗೂ ಖಚಿತ ಹೆಸರುಗಳನ್ನು ಪಡೆದುಕೊಂಡಿರುವಂತಿದೆ. ಆದರೆ ಕಲಾಪ್ರಕಾರಗಳು ತಲೆತಲಾಂತರದಿಂದಲೂ ಜೀವಂತವಾಗಿದ್ದು ಸಮಾಜ, ಸಂಸ್ಕೃತಿಯನ್ನು ಉಳಿಸಿಕೊಂಡಿವೆ.

ಜಾನಪದದ ಮೂಲಭೂತ ಗುಣವೇ ಅದರ ಮೌಖಿಕ ಶಕ್ತಿ. ಅದನ್ನು ಗುರುತಿಸಿಯೇ ಜಾನ್‌ಬ್ರಾಂಡ್ ಅದನ್ನು Oral tradition ಎಂದು ಕರೆದ. ಜನ ಜೀವನದ ಎಲ್ಲ ದಿಕ್ಕುಗಳಿಗೂ ವ್ಯಾಪಿಸಿಕೊಳ್ಳುತ್ತಾ ಸಾಂಪ್ರದಾಯಿಕ ಜೀವನದ ಸಮಸ್ತ ವ್ಯವಹಾರವನ್ನು ಜಾನಪದ ತನ್ನ ವ್ಯಾಪ್ತಿಗೆ ತೆಗೆದುಕೊಂಡಿತು. ಮೌಖಿಕ ಕಲೆಗೇ ಸೀಮಿತಗೊಳ್ಳದೆ ಭೌತಿಕ ವಸ್ತು ವಿಷಯಗಳಿಗೂ ಹರಡಿಕೊಂಡಿತು. ರಿಚರ್ಡ್ ಎಂ. ಡೋರ್ಸನ್ ತಮ್ಮ *ಫೋಕ್‌ಲೋರ್ ಅಂಡ್ ಫೋಕ್ ಲೈಫ್* ಪುಸ್ತಕದಲ್ಲಿ

> *The total rural folk life, including the physical objects produced by household artisans; folklore usually suggests the oral tradition channelled across the centuries through human mouths.*[೧೧]

ಎಂದು ಹೇಳಿದ್ದಾರೆ. ಸಿ.ಎಫ್. ಪಾಟರ್ ಅವರು

> *Folklore is a living fossil which refuses to die*[೧೨]

ಎಂದು ಹೇಳುವ ಮೂಲಕ ಜಾನಪದ ಪರಂಪರಾನುಗತ ಹಳೆಯ ವಿಷಯಗಳ ಮೊತ್ತ ಮಾತ್ರವಲ್ಲ ಸದಾ ಜೀವಂತಿಕೆಯಿಂದ ಕೂಡಿದ್ದು ಸಾಯಲೊಲ್ಲದ್ದು ಎಂದು ಸಾದರಪಡಿಸಿದ್ದಾರೆ.

> *Folklore is an echo of the past, but at the same time it is also the vigorous voice of the present*[೧೩]

ಎಂದು ಹೇಳುವ ವಿದ್ವಾಂಸರ ಅಭಿಪ್ರಾಯ ಜಾನಪದದ ಸಾರ್ವಕಾಲಿಕತೆಯನ್ನು ಪ್ರತಿಪಾದಿಸುತ್ತದೆ.

ಮೌಖಿಕ ಸಂಪ್ರದಾಯದಲ್ಲಿ ಸಾಗಿ ಬಂದ ಯಾವುದೇ ಪರಂಪರಾನುಗತ ವಿಷಯವಾಗಿರಲೀ, ಸಾಂಪ್ರದಾಯಿಕ ಗದ್ಯ - ಪದ್ಯವಾಗಿರಲೀ ಅದು ಜಾನಪದ ಎಂಬುದು ಇ.ಡಬ್ಲ್ಯೂ. ವೋಗಲೀನ್ ಅವರ ಅಭಿಪ್ರಾಯ.

> *This or that fact or theory transmitted orally or in popular source, as well as traditional prose and verse material is folklore.*[೧೪]

ಅಕ್ಷರಜ್ಞಾನವೇ ಇಲ್ಲದಿದ್ದ ಕಾಲದಲ್ಲೂ ಜನ-ಜನರ ನಡುವೆ ಸಂವಹನೆಯ ಕ್ರಿಯೆ ಮುಖ್ಯವಾಗಿ ಮಾತಿನ ಮೂಲಕ ನಡೆಯುತ್ತಿತ್ತು. ಬಿ.ಎ. ಬಾಟ್ಕಿನ್ ಹೇಳುವಂತೆ ಪರಿಶುದ್ಧವಾದ ಮೌಖಿಕ ಪರಂಪರೆಯಲ್ಲಿ ಎಲ್ಲವೂ ಜಾನಪದವೇ. ಇದನ್ನೆಲ್ಲ ಗಮನಿಸಿದಾಗ ಆಧುನಿಕತೆಯ ಗಂಧವೇ ಇರದಿದ್ದಾಗಲೂ ಮನುಷ್ಯ ತನ್ನ ಅಭಿವ್ಯಕ್ತಿಗಾಗಿ ಮಾತು ಅಥವಾ ಭಾಷೆಯನ್ನೇ ಯಶಸ್ವಿಯಾಗಿ ಬಳಸುತ್ತಿದ್ದ ಎನ್ನುವುದು ಸ್ಪಷ್ಟವಾಗುತ್ತದೆ. ಈಗಲೂ ಇರುವ ಆದಿವಾಸಿ ಜನರು, ಸೋಲಿಗರು, ಜೇನು

ಕುರುಬರು, ಲಂಬಾಣಿಗರು ಮುಂತಾದ ಗುಡ್ಡಗಾಡು ಜನ ಸಮುದಾಯಿಗರು ತಮ್ಮ ವ್ಯವಹಾರಗಳಿಗೆ ಜಾನಪದ ಮಾರ್ಗವನ್ನೇ ಅನುಸರಿಸಿದ್ದಾರೆ. ಒಂದು ತಲೆಮಾರಿನವರು ಕಿರಿಯ ಪೀಳಿಗೆಯವರಿಗೆ ತಮ್ಮ ಆಚಾರ - ವಿಚಾರಗಳನ್ನು, ಸುತ್ತಲಿನ ನಿಸರ್ಗದ ಜೊತೆ ಹೊಂದಾಣಿಕೆಯ ಬಾಳು ಸಾಗಿಸುವ ಪರಿಯನ್ನು ಮೌಖಿಕವಾಗಿಯೇ ವರ್ಗಾಯಿಸುತ್ತಾ ಬಂದರು. ಮನುಷ್ಯ ಸಮಾಜದ ಒಳಿತು ಕೆಡಕುಗಳನ್ನು ಮನುಷ್ಯ ಅಭಿವೃದ್ಧಿಗಾಗಿಯೇ, ಮನುಷ್ಯರೇ ತಿಳಿಸಿಕೊಡುವ ಸಾಮಾಜಿಕ ಅಂತರ್‌ಕ್ರಿಯೆ ನಡೆಯುತ್ತಿತ್ತು. ಆದ್ದರಿಂದಲೇ ಟಿ.ಹೆಚ್. ಗ್ಯಾಸ್ಟರ್

*folklore is essentially of the people, by the people and for the people*[೧೫]

ಎಂದಿದ್ದಾರೆ. ವಾಙ್ಮಯ ಜಗತ್ತಿನಿಂದ ಭೌತಿಕ ವಸ್ತು ವಿಶೇಷಗಳವರೆಗೂ ಹಬ್ಬಿರುವ ಜಾನಪದ, ಸಮಾಜದ ತಳಹದಿಯಾಗಿದೆ. ಪ್ರಾರಂಭದ ದಿನಗಳಿಂದಲೂ ಮನುಷ್ಯ ತನ್ನ ಭಾವ - ಭಾವನೆಗಳನ್ನು, ಆಸೆ - ಆಸಕ್ತಿಗಳನ್ನು, ನೋವು - ನಲಿವುಗಳನ್ನು ಇತರರೊಂದಿಗೆ ಅಭಿವ್ಯಕ್ತಿಸಿಕೊಳ್ಳಲು ಬಳಸಿದ ಪ್ರಬಲ ಸಾಧನ ಮಾತೇ ಆದರೂ ಜನರ ಆಚಾರ - ವಿಚಾರ - ವ್ಯವಹಾರ, ನಡೆ - ನುಡಿ - ನಡಾವಳಿ ಪ್ರತಿಯೊಂದು ವರ್ತನೆಯೂ ಕಾರ್ಯವೈಖರಿಯೂ ಸಾಂಕೇತಿಕವಾಗಿ ಸಂವಹನ ಕ್ರಿಯೆಯ ತಂತುಗಳಾಗುತ್ತಿದ್ದವು.

ಡೋರ್ಸನ್ ಅವರು ಗುರುತಿಸುವಂತೆ ಜಾನಪದವನ್ನು ನಾಲ್ಕು ಪ್ರಮುಖ ಗುಂಪುಗಳಾಗಿ ವಿಂಗಡಿಸಬಹುದು. ಪಟ್ಟಿ - ೩

- ಮೌಖಿಕ ಸಾಹಿತ್ಯ ರೂಪಗಳು (Oral literature)
- ಭೌತಿಕ ವಸ್ತು ವಿಶೇಷಗಳು (Material culture)
- ಆಚರಣೆಗಳು (Social folk custom)
- ಪ್ರದರ್ಶಕ ಕಲೆಗಳು (Performing folk arts)

**ಮೌಖಿಕ ಸಾಹಿತ್ಯ ರೂಪಗಳು :** ವಿಚಾರ ವಿನಿಮಯ, ತಿಳಿವಳಿಕೆ, ಮನರಂಜನೆಯ ಕೆಲಸಗಳಿಗೆ ಜನ ಬಳಸುವ ಸರಳ, ಸುಲಭ ವಿಧಾನ ಮಾತು ಅಥವಾ ಭಾಷಿಕ ರೂಪದ ಸಂವಹನ ಕಲೆ. ಅದೇ ಮೌಖಿಕ ಸಂಸ್ಕೃತಿಯ ತಾಯಿಬೇರು. 'ಮೌಖಿಕ ಸಾಹಿತ್ಯ'ದ ಅಥವಾ 'ಶಾಬ್ದಿಕ ಕಲೆ'ಯ ವೈವಿಧ್ಯಮಯ ರೂಪಗಳಲ್ಲಿ ಜಾನಪದ ಗೀತೆ, ಕತೆ, ಪುರಾಣ, ಗಾದೆ, ಐತಿಹ್ಯ, ಲಾವಣಿ, ಒಗಟು, ಕಥನಕಾವ್ಯ, ಶಿಶುಪ್ರಾಸ, ಸಂಗೀತ ಎಲ್ಲವೂ ಸೇರುತ್ತವೆ. ಅವಿಭಕ್ತ ಕುಟುಂಬಕ್ಕೆ ಸೇರಿದ ಹಿರಿಯಜ್ಜ ಮನೆಯ ಮಕ್ಕಳನ್ನೆಲ್ಲ ಒಗ್ಗೂಡಿಸಿಕೊಂಡು 'ಪುಣ್ಯಕೋಟಿ'ಯ ಕಥೆಯನ್ನೋ, 'ಕೆರೆಗೆ ಹಾರ'ವನ್ನೋ ಬಣ್ಣಿಸಿಹೇಳುವ ಮೂಲಕ ಸತ್ಯ, ಧರ್ಮ, ತ್ಯಾಗದ ಆಶಯವನ್ನು ತನ್ನ ನಂತರದ ಎರಡನೆ ತಲೆಮಾರಿಗೆ ತಲುಪಿಸಬಹುದು. ಹಾಗೇ ತಾನು ತನ್ನ ಅಜ್ಜನಿಂದ ಚಿಕ್ಕಂದಿನಲ್ಲಿ ಕಲಿತ ಒಗಟುಗಳನ್ನು ಕೇಳಿ - ಹೇಳಿ ವಿನೋದ-ಆಮೋದಗಳನ್ನು ನೀಡಬಹುದು. ಹಾಗೇ ಯಾವ ಖಾಯಿಲೆಗೆ ಯಾವ ಮದ್ದು, ಮದುವೆ, ತಿಥಿಕಾರ್ಯಗಳನ್ನು ಮಾಡುವ ರೀತಿ ರಿವಾಜು, ಗದ್ದೆಯ ಪೈರಿಗೆ ಅಗತೆ ತೆಗೆಯಬೇಕಾದ ಕಾಲ ಹೀಗೆ ತಮ್ಮ ಬದುಕು ನಡೆಸಲು ಬೇಕಾದ ಅಗತ್ಯಸೂತ್ರಗಳನ್ನೂ ತಿಳಿಸಿಕೊಡಬಹುದು. ಈ ರೀತಿ ಮೌಖಿಕ ನೆಲೆಯಲ್ಲಿ ಹತ್ತು ಹಲವು ವಿಚಾರಗಳು ಸಂವಹನೆಗೊಳ್ಳುತ್ತವೆ.

ಕರ್ನಾಟಕದಲ್ಲಿ ಜನಪದ ಸಾಹಿತ್ಯದ ವಿಸ್ತಾರ, ವ್ಯಾಪ್ತಿಗಳು ಮನವರಿಕೆಯಾದದ್ದು ಸ್ವಾತಂತ್ರ್ಯೋತ್ತರ ಕಾಲದಲ್ಲಿ. ಅದರಲ್ಲೂ ೧೯೫೦ರಿಂದ ೧೯೬೫ರವರೆಗೆ ಸುಮಾರು ಒಂದೂವರೆ ದಶಕಗಳ ಕಾಲ ಜಾನಪದ ಸಾಹಿತ್ಯ ಶೇಖರಣಾ ಕಾರ್ಯ

ಪಟ್ಟಿ - ೩

## ಜಾನಪದ ಸಂವಹನ ಮಾರ್ಗಗಳು

- **ಮೌಖಿಕ ಸಾಹಿತ್ಯ**
  - ಕಥೆಗಳು
  - ಗೀತೆ, ಲಾವಣಿ, ಕಾವ್ಯ
  - ನಾಟಕ, ನೃತ್ಯ, ಸಾಹಿತ್ಯ
  - ಗಾದೆ, ಒಗಟು, ಒಡಪು
  - ನಂಬಿಕೆ, ಆಚರಣೆ, ಸಂಪ್ರದಾಯದ ಸಾಹಿತ್ಯ
  - ವಿಮರ್ಶಾತ್ಮಕ ಸಾಹಿತ್ಯ
- **ಭೌತಿಕ ವಸ್ತುಗಳು**
  - ಪಾಕ ಪಾತ್ರೆಗಳು
  - ಕೃಷಿ ಪರಿಕರಗಳು
  - ಆಯುಧಗಳು, ಬೇಟೆಯ ಆಯುಧಗಳು
  - ಆಭರಣ, ಪೋಷಾಕು
  - ಗೃಹ ವಿನ್ಯಾಸ, ಗೃಹಾಲಂಕರಣ
  - ವಿಗ್ರಹಗಳು, ಪೂಜಾ ಸಾಮಗ್ರಿಗಳು
  - ಮನರಂಜನಾ ವಸ್ತುಗಳು
  - ಮತ್ತಿತರ ದಿನೋಪಯೋಗಿ ವಸ್ತುಗಳು
- **ಸಾಮಾಜಿಕ ಸಂಪ್ರದಾಯ**
  - ಶರೀರ ಸಂಬಂಧಿ, ನಂಬಿಕೆ, ಆಚರಣೆ, ಸಂಪ್ರದಾಯ
    ↓
    ಹುಟ್ಟು - ಸಾವು, ಕಾಯಿಲೆ, ಮುಟ್ಟು - ಮದುವೆ, ಸೀಮಂತ
  - ಋತುಮಾನ / ನಿಸರ್ಗ ಸಂಬಂಧಿ ನಂಬಿಕೆ ಆಚರಣೆ, ಸಂಪ್ರದಾಯ
    ↓
    ಹುಣ್ಣಿಮೆ, ಅಮಾವಾಸ್ಯೆ, ಸಂಕ್ರಾಂತಿ, ದೀಪಾವಳಿ, ಯುಗಾದಿ ಮುಂತಾದ ಹಬ್ಬ ಹರಿದಿನಗಳು
  - ಪರಿಸರ ಸಂಬಂಧಿ ನಂಬಿಕೆ, ಆಚರಣೆ, ಸಂಪ್ರದಾಯ
    ↓
    ಆಹಾರ, ವೈದ್ಯ, ಜಾನುವಾರು ಸಾಕಣೆ, ಮಾಟ ಮಂತ್ರ, ತಂತ್ರ, ಮದ್ದು ಭೂತಾರಾಧನೆಯಂತಹ ನಂಬಿಕೆಗಳು
- **ಪ್ರದರ್ಶನಾತ್ಮಕ ಕಲೆಗಳು**
  - ಯಕ್ಷಗಾನ, ಬಯಲಾಟ
  - ಸಾಮಗಾನ ನಾಟಕ
  - ಸಣ್ಣಾಟ
  - ವೇಷಗಾರರ ಕಲೆಗಳು
  - ಸೂತ್ರದ ಗೊಂಬೆಯಾಟ
  - ತೊಗಲು ಗೊಂಬೆಯಾಟ
  - ಕೀಲು ಗೊಂಬೆಯಾಟ
  - ನೃತ್ಯಗಳು
  - ಮೇಳಗಳು
  - ಮನರಂಜಕರು
  - ಮಲ್ಲಗಾಳಗ
  - ಮೋಡಿ
  - ಕ್ರೀಡೆಗಳು

ನಡೆದಿದೆ. ಮುಂಚೂಣಿಯ ವಿದ್ವಾಂಸರೆನಿಸಿದ ಗದ್ಗೀಮಠ, ಜೀಶಂಪ, ಕರಾಕೃ, ತಿಪ್ಪೇಸ್ವಾಮಿ, ಮತಿಘಟ್ಟ ಕೃಷ್ಣಮೂರ್ತಿ ಮೊದಲಾದವರ ಶ್ರಮದ ಫಲವಾಗಿ ಕನ್ನಡದ ಅಗಾಧ ಜಾನಪದ ಸಾಹಿತ್ಯರಾಶಿ ಸಂಗ್ರಹಗೊಂಡಿದೆ. ಈ ಸಮೃದ್ಧ ಸಾಹಿತ್ಯವನ್ನು ಈ ಕೆಳಕಂಡಂತೆ ವಿವಿಧ ಪ್ರಕಾರಗಳಲ್ಲಿ ಗುರುತಿಸಲಾಗಿದೆ.

- ಜನಪದ ಕಥೆ
- ಜನಪದ ಗೀತೆ, ಲಾವಣಿ, ಕಾವ್ಯ
- ಜನಪದ ನಾಟಕ, ನೃತ್ಯ ರೂಪಕ
- ಗಾದೆ, ಒಗಟು, ಒಡಪು
- ನಂಬಿಕೆ ಸಂಪ್ರದಾಯಗಳು
- ವಿಮರ್ಶೆ

ಕಲಾತ್ಮಕ ಮೌಲ್ಯಗಳಿಂದ ಕೂಡಿದ ಜಾನಪದ ಸಾಹಿತ್ಯ ಮನಃಶಾಸ್ತ್ರೀಯ, ಭಾಷಾಶಾಸ್ತ್ರೀಯ, ಮಾನವ ಶಾಸ್ತ್ರೀಯ ಮೌಲ್ಯಗಳನ್ನು ಹೊಂದಿರುವುದರ ಜೊತೆ ಇಡೀ ಸಮಾಜದೊಂದಿಗೆ ಸಂವಹನ ಸಾಧ್ಯತೆಯನ್ನು ನಿರ್ವಹಿಸುವ ಸಾಮರ್ಥ್ಯವನ್ನೂ ಹೊಂದಿರುತ್ತದೆ.



**ಮೌಖಿಕ ಸಾಹಿತ್ಯ ರೂಪ : ಜನಪದ ಗೀತ ಗಾಯನ**

**ಭೌತಿಕ ವಸ್ತು ವಿಶೇಷಗಳು :** ದೇವಸ್ಥಾನದಲ್ಲಿ ಮೊಳಗುವ ಶಂಖನಾದ, ಘಂಟಾಧ್ವನಿ, ಜಾಗಟೆರವ, ಯುದ್ಧಕಾಲದ ಕಹಳೆ, ರಣ ಹಲಗೆ, ಸಾವಿನ ಮನೆಯ ತಮ್ಮಟೆ ಬಡಿತ ಇಂಥವೂ ಸಹ ಹಲವು ವಿಷಯಗಳನ್ನು ಶಬ್ದದ ಮೂಲಕ ಜನಸಮೂಹಕ್ಕೆ ಕೊಂಡೊಯ್ಯುತ್ತವೆ. ವಿಚಾರ ಸಂವಹನೆಗಾಗಿಯೇ ಡಂಗುರ ಸಾರುವ ಪದ್ಧತಿ ಗ್ರಾಮೀಣ ಪ್ರದೇಶಗಳಲ್ಲಿ ವ್ಯಾಪಕವಾಗಿ ಚಾಲ್ತಿಯಲ್ಲಿದೆ. ಜನಪದ ಸಾಹಿತ್ಯ ಮೌಖಿಕ ಸಂಪ್ರದಾಯವನ್ನಾಧರಿಸಿದರೆ, ಭೌತಿಕ ಜಾನಪದ ಪರಂಪರಾನುಗತವಾಗಿ ಬಳಕೆಗೆ ಬಂದ ವಸ್ತುಗಳನ್ನು ಆಧರಿಸಿರುತ್ತದೆ. ಒಂದು ಜನ ಸಮುದಾಯದ ಆಹಾರ ಪದ್ಧತಿ, ಬಳಸುವ ಪರಿಕರಗಳು, ಗೃಹ ವಿನ್ಯಾಸ ಹಾಗೂ ಗೃಹಾಲಂಕಾರ, ಆಯುಧಗಳು, ವೇಷಭೂಷಣ, ಆಭರಣಗಳು ಇವು ಸಹ

ಸಂಸ್ಕೃತಿಯ ಹರಿವಿಗೆ, ತಲೆತಲಾಂತರದ ಸಂವಹನೆಗೆ ಪೂರಕವಾಗುತ್ತವೆ. ಸಂವಹನ ಪ್ರಕ್ರಿಯೆಯಲ್ಲಿ ಪಾಲ್ಗೊಳ್ಳುವ ಭೌತಿಕ ವಸ್ತುಗಳೆಲ್ಲ ಕಾಲ ಮತ್ತು ಸ್ಥಳಕ್ಕೆ ಬದ್ಧವಾದ ಗುಣ ಲಕ್ಷಣಗಳನ್ನು ಹೊಂದಿದ್ದು ಆಯಾ ಭೌಗೋಳಿಕ ಪ್ರದೇಶದಲ್ಲಿ ನೆಲೆಸಿದ ಜನಸಮುದಾಯವನ್ನು ನೇರವಾಗಿ ತಲುಪುತ್ತವೆ. ವಿವಿಧ ಪ್ರಾದೇಶಿಕ ವಲಯಗಳಲ್ಲಿರುವ ಜನಜೀವನ ಕ್ರಮವನ್ನನುಸರಿಸಿ ಅಲ್ಲಿ ನಿರ್ದಿಷ್ಟ ಪರಿಕರ, ಸಾಮಗ್ರಿ, ಸಾಧನ - ಸಲಕರಣೆಗಳನ್ನು ಬಳಸಲಾಗುತ್ತದೆ. ಈ ವಸ್ತುಗಳ ಅಧ್ಯಯನ ನಡೆಸುವ ಮೂಲಕ ಒಂದು ಜನಸಮುದಾಯದ ಸಾಂಸ್ಕೃತಿಕ, ಭೌಗೋಳಿಕ, ಸಾಮಾಜಿಕ, ಆರ್ಥಿಕ ಲಕ್ಷಣಗಳನ್ನು ತಿಳಿದುಕೊಳ್ಳಬಹುದು. ಒಂದು 'ಸಂಸ್ಕೃತಿ'ಯನ್ನೇ ಅಧ್ಯಯನ ಮಾಡಬಹುದು. ನಾಗರಿಕತೆ ಬೆಳೆದು ಆಧುನಿಕತೆಯ ತೀಕ್ಷ್ಣ ಬೆಳಕಿನಲ್ಲಿ ನಿಂತ ಈ ಸಂದರ್ಭದಲ್ಲಿ ಗತ ಸಮಾಜದ ಅತ್ಯಪೂರ್ವ ವಸ್ತುಗಳು ಕಣ್ಮರೆಯಾಗುತ್ತಿರುವುದನ್ನು ಗಮನಿಸಿದಾಗ, ಇಂತಹ ಅಧ್ಯಯನ ಹಾಗೂ ಅಂತಹ ವಸ್ತುಗಳ ಸಂಗ್ರಹಣೆ ಮಹತ್ವದ್ದೂ, ಅತ್ಯವಶ್ಯಕವಾದದ್ದೂ ಆಯಿತು. ಇದೇ 'ಜಾನಪದ ವಸ್ತು ಸಂಗ್ರಹಾಲಯ'ಗಳ ಹುಟ್ಟಿಗೆ ನಾಂದಿಯೂ ಆಯಿತು. ಭಾರತದ ಮೊಟ್ಟ ಮೊದಲ ಜಾನಪದ ವಸ್ತುಸಂಗ್ರಹಾಲಯ ಎಂಬ ಹೆಗ್ಗಳಿಕೆಗೆ ಪಾತ್ರವಾದ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿರುವ ಸಂಗ್ರಹಾಲಯ ಹಾಗೂ ವಿದ್ವಾಂಸ ಎಚ್.ಎಲ್. ನಾಗೇಗೌಡರು ಬೆಂಗಳೂರು - ಮೈಸೂರು ಮಾರ್ಗದಲ್ಲಿ ರಾಮನಗರದ ಸಮೀಪ ನಿರ್ಮಿಸಿರುವ 'ಜಾನಪದ ಲೋಕ' ಎನ್ನುವ ಬೃಹತ್ ಸಂಗ್ರಹಾಲಯದ ಉದಾಹರಣೀಯ.

**ಭೌತಿಕ ವಸ್ತು ವಿಶೇಷ : ವೇಷಭೂಷಣ**



**ಸಾಮಾಜಿಕ ಜನಪದ ಸಂಪ್ರದಾಯ :** ಒಂದು 'ಸಂಸ್ಕೃತಿ'ಯ ಒಳತುಡಿತಗಳೇ ನಂಬಿಕೆ, ಸಂಪ್ರದಾಯ, ಆಚರಣೆಗಳು. ಒಂದು ಸಮಾಜ ನಂಬುವ ದೈವ, ಅದರ ಪೂಜಾರಾಧನೆ ; ಹಾಗೆಯೇ ದೆವ್ವ - ಭೂತ - ಅವುಗಳ ಆರಾಧನೆ ಇವೆಲ್ಲ ನಂಬಿಕೆಗಳನ್ನು, ಅದಕ್ಕಂಟಿದ ಆಚರಣೆಗಳನ್ನು ಆ ಮೂಲಕ ಸಮಾಜವನ್ನೇ ಪ್ರತಿಫಲಿಸುವ ಸಂಪ್ರದಾಯವನ್ನು ಎತ್ತಿ

ಹಿಡಿಯುತ್ತವೆ. ಜನನದಿಂದ ಮರಣದವರೆಗೆ ೧. ಮಾನವ ಬದುಕಿನಲ್ಲಿ ಘಟಿಸುವ ಸ್ವಾಭಾವಿಕ, ಶಾರೀರಿಕ ಅವಸ್ಥೆಗಳನ್ನು ಸಾಂಪ್ರದಾಯಿಕ ಆಚರಣೆಗಳಿಗೆ ಒಳಪಡಿಸುವುದು ಒಂದು ಬಗೆಯ ನಂಬಿಕೆ. ೨. ಇನ್ನೊಂದು, ಸುತ್ತಲಿನ ನಿಸರ್ಗದಲ್ಲಿ ನಡೆಯುವ ಸ್ವಾಭಾವಿಕ, ಪ್ರಾಕೃತಿಕ ಅವಸ್ಥಾಂತರಗಳಿಗೂ ಆಚರಣೆಯ ಸ್ವರೂಪ ನೀಡುವುದು. ೩. ಪರಿಸರ, ಪರಿಸ್ಥಿತಿ, ಪರಿಣಾಮಗಳಿಗನುಗುಣವಾಗಿ ರೂಪುಗೊಳ್ಳುವ ನಂಬಿಕೆ, ಅಂಧನಂಬಿಕೆಗಳ ಕಾರಣದಿಂದ ನಡೆಯುವ ಆಚರಣೆಗಳದೇ ಮತ್ತೊಂದು ಸ್ವರೂಪ.

ಹುಟ್ಟು, ಸಾವು, ಮದುವೆ, ನಿಷೇಕ, ಸೀಮಂತ, ಮುಂತಾದುವೆಲ್ಲ ಶಾರೀರಿಕ ಸ್ಥಿತಿಗತಿಗಳಿಗೆ ಅನುಗುಣವಾಗಿ ನಡೆಸಲಾಗುವ ಆಚರಣೆ ಸಂಪ್ರದಾಯಗಳು ; ಅಮಾವಾಸ್ಯೆ, ಹುಣ್ಣಿಮೆಯೂ ಸೇರಿ ಹಬ್ಬ - ಹರಿದಿನಗಳನ್ನು, ಪೂಜೆ - ಪುನಸ್ಕಾರಗಳನ್ನು ಕೆಲವು ಮನರಂಜನಾ ಕ್ರೀಡೆ, ಸಾಂಸ್ಕೃತಿಕ ಕಾರ್ಯಕ್ರಮ, ಕಲಾಪಗಳನ್ನು ಏರ್ಪಡಿಸುವುದು ಋತುಮಾನದ ನಿಸರ್ಗದ ಅವಸ್ಥೆಗಳಿಗನುಸಾರ ನಡೆಯುವ ಆಚರಣೆಗಳು ; ಉದಾಹರಣೆಗೆ ಸಂಕ್ರಾಂತಿಯಲ್ಲಿ ದನ - ಕರುಗಳಿಗೆ ವಿಶೇಷ ಅಲಂಕಾರ ಮಾಡಿ ಕಿಚ್ಚು ಹಾಯಿಸುವ ಸಂಪ್ರದಾಯ, ಗೋಪೂಜೆ, ರಾಶಿ ಪೂಜೆ, ಮನೆ ತುಂಬಿಕೊಳ್ಳುವ ಕಲಾಪ ಇವೆಲ್ಲ ಸುಗ್ಗಿಕಾಲದ ಸಂಭ್ರಮಕ್ಕೆ ಸಾಕ್ಷಿಯಾದರೆ, ದೀಪಾವಳಿಯಲ್ಲಿ ನೀರು ತುಂಬುವ ಕಾರ್ಯ, ಪಟಾಕಿ ಸಿಡಿಸಿ, ಬಾಗಿಲಿಗೆ ಹಣತೆ ದೀಪ ಹೊತ್ತಿಸಿ, ಹೊಸ ಅಳಿಯನಿಗೆ ಸಂತಸ ಉಂಟು ಮಾಡುವ ಪರಿಕಲ್ಪನೆ ಹೊಸ ಸಂಬಂಧಗಳನ್ನು ದೃಢವಾಗಿ ಬೆಸೆಯುವ ಬಗೆ ಎನ್ನಬಹುದು. ಪಟ ಹಾರಿಸುವುದೂ ಗಾಳಿಕಾಲದ ಹಬ್ಬದ ಸಂದರ್ಭದ ಕ್ರೀಡೆ. ಆಹಾರ ತಯಾರಿಕೆ, ಭೋಜನ, ಆರೋಗ್ಯ ಸುಧಾರಣೆ ಕ್ರಮಗಳು, ನಾಟಿ ವೈದ್ಯ, ಜನ - ಜಾನುವಾರು ರಕ್ಷಣೆಯ ಸೂತ್ರಗಳು, ದೆವ್ವ - ಭೂತಗಳ ನಂಬಿಕೆ ಇರುವುದರಿಂದ ಮಾಟ, ಮಂತ್ರ, ತಂತ್ರ, ದೈವಾರಾಧನೆಗಳು ಇವೆಲ್ಲ ಪರಿಸರ ಸಂಬಂಧಿ ಆಚರಣೆಗಳು. ಒಂದು ಜನಸಮೂಹದ ಹೊಂದಾಣಿಕೆ, ಒಗ್ಗೂಡಿಕೆಗೆ, ಸುಗಮ ಜನಜೀವನಕ್ಕೆ ಬೇಕಾದ ಮೂಲ ಸಾಮಗ್ರಿಗಳು ಸಾಮಾಜಿಕ ಸಂಪ್ರದಾಯದ ಹೆಸರಿನಲ್ಲಿ ಒಡಮೂಡುತ್ತವೆ. ವಿಶೇಷವೇನೆಂದರೆ ಈ ಎಲ್ಲಾ ಸಾಂಪ್ರದಾಯಿಕ ಕ್ರಿಯೆಗಳು ಜನಸಮೂಹದ ಒಳಗೆ, ಜನ - ಜನರ ನಡುವೆ ಸರಳವಾಗಿ ಸಂವಹನೆಯ ಕಾರ್ಯ ನಡೆಸುತ್ತಿರುತ್ತವೆ. ಈ ಮೂಲಕ ಸಮುದಾಯ ತನಗೆ ಬೇಕಾದ ಅಥವಾ ತನಗೆ ಅರ್ಥವಾಗುವ ಸಂಕೇತ ವ್ಯವಸ್ಥೆಯನ್ನು ರೂಢಿಸಿಕೊಂಡಿರುತ್ತದೆ.

ಇಷ್ಟಾದರೂ, ಪ್ರಮುಖ ಸಾಂಪ್ರದಾಯಿಕ ಸಂವಹನ ವಿಧಾನವೆನಿಸುವ ಸಾಮಾಜಿಕ ಆಚರಣೆಗಳ ಬಗ್ಗೆ ಇನ್ನೂ ಹೆಚ್ಚಿನ ಅಧ್ಯಯನ ನಡೆಯಬೇಕಾಗಿದೆ ಎನ್ನುವುದು ವಿದ್ವಾಂಸರ ಅನಿಸಿಕೆ. ೧೯೮೯ರಲ್ಲಿ ಜೀ.ಶಂ. ಪರಮಶಿವಯ್ಯನವರು ನೀಡಿರುವ ಒಂದು ಹೇಳಿಕೆ ಗಮನಾರ್ಹ

> *ಈ ಜಾನಪದ ಪ್ರಕಾರಗಳ ಮೇಲೆ ವ್ಯವಸ್ಥಿತವಾದ, ವ್ಯಾಪಕವಾದ, ಅಧ್ಯಯನ ನಡೆಯಬೇಕಾಗಿದೆ. ಪ್ರಾದೇಶಿಕ ಹಿನ್ನೆಲೆಯಲ್ಲಿ, ಹಬ್ಬಗಳ ವ್ಯವಸ್ಥಿತ ಅಧ್ಯಯನ ಇನ್ನೂ ನಡೆಯಬೇಕಾಗಿದೆ. ಜನಪದ ವೈದ್ಯ ಮತ್ತು ಅಡಿಗೆ ಪದ್ಧತಿಗೆ ಸಂಬಂಧಿಸಿದಂತೆ, ಮಾಟ - ಮಂತ್ರ - ಶೂನ್ಯಗಳಿಗೆ ಸಂಬಂಧಿಸಿದಂತೆ ನಡೆಯುತ್ತಿರುವ ಕೆಲಸದ ತೀವ್ರತೆ ಇನ್ನೂ ಹೆಚ್ಚಬೇಕಾಗಿದೆ.* [೧೬]

> *ಏನಿದ್ದರೂ ತಂತ್ರಜ್ಞಾನದಲ್ಲಾದ ಪ್ರಗತಿಯ ಪರಿಣಾಮವಾಗಿ ಮಾಧ್ಯಮಗಳು ಹೆಚ್ಚಿ, ಮಾನವ ಸಂಬಂಧಗಳು ಶಿಥಿಲವಾಗಿರುವ ಈ*

*ಹೊತ್ತಿನಲ್ಲಿ ಜಾನಪದ ಸಂವಹನ ವಿಧಾನಗಳ ಬಗ್ಗೆ ಹೆಚ್ಚು ಚರ್ಚೆ ನಡೆಸುವುದು ಉಪಯುಕ್ತ*[೧೭]

ಎಂದಿದ್ದಾರೆ ಪುರುಷೋತ್ತಮ ಬಿಳಿಮಲೆ.



**ಸಾಮಾಜಿಕ ಜನಪದ ಸಂಪ್ರದಾಯ : ದನಗಳ ಓಟ**

**ಪ್ರದರ್ಶನಾತ್ಮಕ ಕಲೆಗಳು :** ಸಂವಾಹಕ ಮತ್ತು ಸಂವಹಿತನ ನಡುವೆ ನೇರ ಸಂವಹನವನ್ನು ಸಾಧಿಸುವ ಜಾನಪದ ಪ್ರಕಾರವೇ ಪ್ರದರ್ಶನಾತ್ಮಕ ಕಲೆಗಳು. ಇವೇ ಅತ್ಯಂತ ಪ್ರಮುಖವೆನಿಸುವ ಪಾರಂಪರಿಕ ಅಥವಾ ಸಾಂಪ್ರದಾಯಿಕ ಸಮೂಹ ಸಂವಹನ ಮಾಧ್ಯಮಗಳು. ಜಾನಪದ ವಿದ್ವಾಂಸ ಜೀ.ಶಂ. ಪರಮಶಿವಯ್ಯನವರು ಕರ್ನಾಟಕದ ಪ್ರದರ್ಶನಾತ್ಮಕ ಜಾನಪದ ಕಲೆಗಳನ್ನು ೧೩ ಪ್ರಮುಖ ಗುಂಪುಗಳಾಗಿ ವಿಂಗಡಿಸಿದ್ದಾರೆ.

- ಯಕ್ಷಗಾನ ಬಯಲಾಟಗಳು
- ಸಾಮಗಾನ ನಾಟಕಗಳು
- ಸಣ್ಣಾಟಗಳು
- ವೇಷಗಾರರ ಕಲೆಗಳು
- ಸೂತ್ರದ ಗೊಂಬೆಯಾಟ
- ತೊಗಲ ಗೊಂಬೆಯಾಟ

- ಕೀಲು ಗೊಂಬೆಯಾಟ
- ಜನಪದ ನೃತ್ಯಗಳು
- ಜನಪದ ಮೇಳಗಳು
- ಜನಪದ ಮನರಂಜಕರು
- ಮಲ್ಲಗಾಳಗ
- ಜನಪದ ಮೋಡಿ
- ಜನಪದ ಕ್ರೀಡೆಗಳು

ಪ್ರದರ್ಶನಾತ್ಮಕ ಜಾನಪದ ಕಲೆಗಳು ಇತರ ಜಾನಪದ ಪ್ರಕಾರಗಳಿಗಿಂತಲೂ ಭಿನ್ನವಾಗುವುದೇ ಅವುಗಳು ಪ್ರೇಕ್ಷಕರೊಡನೆ ನೇರ ಸಂಪರ್ಕ ಸಾಧಿಸುವುದರಿಂದ. ಹೇಳಬೇಕಾದ್ದನ್ನು ಸಂವಾಹಕ ಅಂದರೆ ನಾಟಕದ ಪಾತ್ರಧಾರಿ, ಸಣ್ಣಾಟ, ಬಯಲಾಟಗಳ ವೇಷಧಾರಿ, ಹಾಡುಗಾರ, ಮೋಡಿಗಾರ ಯಾರೇ ಆಗಿರಬಹುದು ಅವರು ನೇರವಾಗಿ, ಪ್ರತ್ಯಕ್ಷವಾಗಿ, ಶ್ರೋತೃ, ಪ್ರೇಕ್ಷಕ ಸಹೃದಯನೊಂದಿಗೆ ಸಂವಹನ ಕ್ರಿಯೆ - ಪ್ರತಿಕ್ರಿಯೆಗೆ ತೊಡಗುತ್ತಾರೆ. ಇಲ್ಲಿ ಸಂವಾಹಕ ಸಂವಹಿಸುವ ನಡುವೆ ಮತ್ತ್ಯಾವ ಸಾಧನವೂ ಇರದಿರುವುದರಿಂದ ಈ ಕಲೆಗಳು ಅತ್ಯಂತ ಯಶಸ್ವೀ 'ಸಂವಹನ ಕಲೆ'ಗಳೆನಿಸುತ್ತವೆ. ಆದರೂ ಇವಕ್ಕೆ ದೇಶ, ಕಾಲದ ಮಿತಿ ಇದ್ದೇ ಇದೆ. ಯಕ್ಷಗಾನ ಬಯಲಾಟಗಳಿಗೂ ಪ್ರಾಚೀನವೆಂದು ಹೇಳಲಾಗುವ ಸೂತ್ರದ ಗೊಂಬೆಯಾಟ, ಕಿಳ್ಳೇಕ್ಯಾತರು ಅಥವಾ ಗೊಂಬೆರಾಮರು ಎನ್ನುವ ಬುಡಕಟ್ಟಿನವರ ಕಲೆಯಾದ ತೊಗಲುಗೊಂಬೆಯಾಟ, ಕ್ಷೀಣಾವಸ್ಥೆ ತಲುಪಿರುವ ಕೀಲುಗೊಂಬೆಯಾಟದ ಕಲೆಗಳ ಮೂಲಕ ಮನರಂಜನೆಯ ಜೊತೆಗೆ ವಿಚಾರ ಪ್ರಸರಣದ ಕಾರ್ಯವೂ ನಡೆಯುತ್ತದೆ. ಅದರಲ್ಲೂ ತೊಗಲುಗೊಂಬೆಯಾಟವಂತೂ 'ಪ್ರಾಚೀನ ಸಿನಿಮಾ' ಎಂದೇ ಕರೆಸಿಕೊಂಡಿದೆ.



**ಪ್ರದರ್ಶನಾತ್ಮಕ ಕಲೆ : ಯಕ್ಷಗಾನ**

ಪುರುಷೋತ್ತಮ ಬಿಳಿಮಲೆಯವರು ಹೇಳಿರುವಂತೆ

> *ಈ ಮೊದಲು ತಿಳಿಸಿದ ನಾಲ್ಕು ರೀತಿಗಳಲ್ಲಿಯೂ ಮನುಷ್ಯರೇ ಪ್ರಧಾನವಾದ ಸಂವಹನ ವಿಧಾನವೊಂದು ರೂಪುಗೊಂಡಿದೆ. ಇಲ್ಲಿ ನಿಜವಾಗಿಯೂ ಮಾಧ್ಯಮಗಳಿಲ್ಲ; ಬದಲು ಪ್ರಕಾರಗಳಿವೆ ಅಥವಾ ಕೆಲವು ರೂಪಗಳಿವೆ. ನೋಡುವವರ ಮೇಲೆ ಅಥವಾ ಕೇಳುವವರ ಮೇಲೆ ಇಲ್ಲಿ ಆಕ್ರಮಣ ಇಲ್ಲ. ನಿಷ್ಕ್ರಿಯ ಪ್ರೇಕ್ಷಕರೂ ಇಲ್ಲಿ ಇರುವುದಕ್ಕೆ ಸಾಧ್ಯವಿಲ್ಲ.*[೨೮]

ಅಂದಮೇಲೆ ಜಾನಪದ ಸಂವಹನ ಪ್ರಕಾರಗಳು ವಕ್ತೃವಿನಿಂದ ಶ್ರೋತೃವಿಗೆ ಯಾವುದೇ ಸಾಧನ - ಸಲಕರಣೆಯ ನೆರವಿಲ್ಲದೆ ನೇರವಾಗಿ ಸಂವಹನಗೊಂಡು, ಅಷ್ಟೇ ನೇರವಾಗಿ ಅದಕ್ಕೆ ಆ ಕೂಡಲೆ ಪ್ರತಿಕ್ರಿಯೆಯನ್ನೂ ನೀಡಿಬಿಡುವ ವಿಧಾನ, ಇದೇ ಯಶಸ್ವೀ ಸಂವಹನ ಕ್ರಿಯೆ ಎಂದು ತರ್ಕಬದ್ಧವಾಗಿ ಒಪ್ಪಲೂ ಬೇಕಾಗುತ್ತದೆ.

ನಮ್ಮ ಹಳ್ಳಿಗಳಲ್ಲಿ ಇಂದಿಗೂ ಮಾಧ್ಯಮಗಳಿಲ್ಲ. ಮೌಖಿಕ ರೂಪದ ಸಂವಹನೆ ಅಲ್ಲಿ ಅಂತಿಮ ಎಂದು ಹೇಳಿರುವ ಬಿಳಿಮಲೆಯವರು ಪ್ರದರ್ಶನಾತ್ಮಕ ಜಾನಪದ ಕಲೆಯಲ್ಲಿ ಎಲ್ಲಿಯೂ ಏಕಮುಖ ಚಲನೆಯಿಲ್ಲ. ಬದಲು ದ್ವಿಮುಖ ಸಂಚಾರವಿದೆ ಎಂದು ಸಾಬೀತುಪಡಿಸುವ ಮೂಲಕ ಸಂವಹನೆಯ ಉದ್ದೇಶ ಹಾಗೂ ಕ್ರಿಯೆ ಸಂಪೂರ್ಣಗೊಂಡ ಬಗೆಯನ್ನು ಹೀಗೆ ವಿವರಿಸುತ್ತಾರೆ.

ಬಯಲಾಟದ ಸಂದರ್ಭದಲ್ಲಿ ಕಲಾವಿದ, ಪ್ರೇಕ್ಷಕ ಎರಡೂ ಸಮಾನ ನೆಲೆಗಟ್ಟಿನಲ್ಲಿದ್ದು, ಯಾವುದೇ ಮಾಧ್ಯಮಗಳ 'ಮಧ್ಯಸ್ಥಿಕೆ'ಯಿಲ್ಲದೆ ದ್ವಿಮುಖ ಚಲನೆ ಇರುವುದನ್ನು ಹೀಗೆ ಕಾಣಬಹುದು.




(ಸಮಾನ ನೆಲೆಗಳಲ್ಲಿ)

ಹಾಗೆ, ಎರಡು ಅಸಮಾನ ನೆಲೆಗಳಲ್ಲೂ ದ್ವಿಮುಖ ಚಲನೆಯನ್ನು ಗಮನಿಸಬಹುದು.




(ಅಸಮಾನ ನೆಲೆಗಳಲ್ಲಿ)

ಈ ಎರಡೂ ಸಂದರ್ಭಗಳಲ್ಲಿ ವಿವರಿಸಿರುವಂತೆ ಸಂವಾಹಕ ಹಾಗೂ ಸಂವಹಿತನ ನಡುವೆ ನೇರ ಸಂಪರ್ಕ ಏರ್ಪಟ್ಟಿದ್ದು, ಸಂವಹನೆಯ ಉದ್ದೇಶ ಹಾಗೂ ಪರಿಣಾಮ ಈ ರೀತಿ ಯಶಸ್ವಿಯಾಗಿದೆ.




ಸಂವಹನ ಕ್ರಿಯೆಯ ದೃಷ್ಟಿಯಿಂದ ಮೇಲೆ ತಿಳಿಸಿದ ಹೇಳಿಕೆ ಸೂಕ್ತವೆನಿಸಿದರೆ, ಭಾಷಾ ವಿಜ್ಞಾನದ ದೃಷ್ಟಿಯಿಂದ ವಿಲಿಯಂ ಮಾಡ್ತಾ ಜನಪದರ ಅಭಿವ್ಯಕ್ತಿ ಕ್ರಮವನ್ನು ಎರಡು ಬಗೆಯಲ್ಲಿ ಕಾಣುತ್ತಾರೆ.

> *ಜನಪದರು ತಮ್ಮ ಬದುಕನ್ನು ಕುರಿತಾದ ವ್ಯಷ್ಟಿ ಪ್ರಜ್ಞೆಯನ್ನು ವೈಯಕ್ತಿಕವಾದ ರೀತಿಯಲ್ಲಿ ಅಭಿವ್ಯಕ್ತಪಡಿಸಿದರೆ, ಅದು ಜಾನಪದ ಅಭಿವ್ಯಕ್ತಿ ಅಥವಾ ಪರಂಪರೆಯ ಅಭಿವ್ಯಕ್ತಿಯಾಗಲಾರದು. ಅದು ಕೇವಲ ವೈಯಕ್ತಿಕ ಮಟ್ಟದ ಸೃಜನಶೀಲ ಅಭಿವ್ಯಕ್ತಿ ಎಂದೆನಿಸಿಕೊಳ್ಳುವುದು. ಆದರೆ ಜನಪದ ಬದುಕಿನ ಸಮಷ್ಟಿ ಪ್ರಜ್ಞೆ ಸಾಮೂಹಿಕವಾಗಿ, ಸಾಮುದಾಯಿಕವಾಗಿ ಅಭಿವ್ಯಕ್ತಗೊಂಡಾಗ ಅದು ಆ ಜನಪದದ ಜನಪದರ ಸಂಪ್ರದಾಯ ಅರ್ಥಾತ್ ಒಟ್ಟು ಬದುಕಿನ ಅಭಿವ್ಯಕ್ತಿ ಅಥವಾ 'ಜಾನಪದ ಕಲೆ' ಎಂದೆನಿಸಿಕೊಳ್ಳುತ್ತದೆ.*[೧೯]

ಭಾಷಾ ವಿಜ್ಞಾನದ ನೆಲೆಯಲ್ಲಿ ಜಾನಪದ ಪ್ರಕಾರಗಳನ್ನು ಅವರು ಹೀಗೆ ವರ್ಗೀಕರಿಸಿದ್ದಾರೆ.

## ಪಟ್ಟಿ - ೪




ಸಂವಹನ ಕ್ರಿಯೆ 'ಕಲೆ' ಎನ್ನುವುದು ಜಾನಪದ ಸಂವಹನ ವಿಧಾನಗಳನ್ನು ಅಭ್ಯಸಿಸಿದಾಗ ತೋರಿಬರುವ ಹಾಗೆ ಅದು 'ವಿಜ್ಞಾನ' ಎಂಬ ಅಂಶ ಆಧುನಿಕ ಸಮೂಹ ಮಾಧ್ಯಮಗಳನ್ನು ಬಳಸಿ ಸಂವಹನೆ ನಡೆಸಿದಾಗ ಕಾಣಬರುತ್ತದೆ. ಹೀಗೆ

ಸಂವಹನ ಕ್ರಿಯೆ ಕಲೆಯೂ ಹೌದು, ವಿಜ್ಞಾನವೂ ಹೌದು. ಜಾನಪದ ಸಂವಹನ ವಿಧಾನಗಳ ಆಧಾರದ ಮೇಲೆ ಆಧುನಿಕ ಸಂವಹನ ವಿಧಾನಗಳೂ ಬೆಳೆದು ನಿಂತಿರುವುದರಿಂದ, ಅವುಗಳ ನಡುವೆ ಹೆಚ್ಚಿನ ಅಂತರ ಅಥವಾ ವ್ಯತ್ಯಾಸ ಕಾಣದಿದ್ದರೂ, ಸಮಾಜದ ಮೇಲೆ ಈ ಎರಡೂ ವಿಧಾನಗಳು ಬೀರುವ 'ಪರಿಣಾಮ'ದಲ್ಲಿ ಮಾತ್ರ ಅಂತರವಿದ್ದೇ ಇರುತ್ತದೆ. ಮೂಲತಃ ಪಾರಂಪರಿಕ ಸಮೂಹ ಮಾಧ್ಯಮಗಳು ಅಂದರೆ ಜಾನಪದ ಕಲಾಪ್ರಕಾರಗಳು ನೇರ, ಪ್ರತ್ಯಕ್ಷ ಹಾಗೂ ಮಧ್ಯವರ್ತಿರಹಿತ ವಿಧಾನವಾಗಿರುವುದರಿಂದ ಅಲ್ಲಿ ಭಾವನಾತ್ಮಕ ಕ್ರಿಯೆ - ಪ್ರತಿಕ್ರಿಯೆಗಳಿಗೆ, ಮನಃಶಾಸ್ತ್ರೀಯ ಸ್ಪಂದನೆಗೆ ವಿಪುಲ ಅವಕಾಶವಿದೆ. ಸಮಾಜದ ಎಲ್ಲ ಸ್ತರದ ಜನರ ನಡುವೆ ಬಾಂಧವ್ಯ ಬೆಸೆಯುವಲ್ಲಿ ಜನಪದ ಸಮೂಹಗಳು ಹೆಚ್ಚು ಪರಿಣಾಮಕಾರಿಯೂ ಮಹತ್ವದವೂ ಎನಿಸುತ್ತವೆ.

> *The folk media are close to the hearts and minds of the people; so their appeal is at a personal, intimate level. Further their familiar format and content, as also the collequial dialects used, make for clarity in communication.* [೨೦]



ಹೀಗೆ ಜನಪದ ಕಲೆಗಳು ಒಂದು ನಿರ್ದಿಷ್ಟ ಪ್ರದೇಶದ ಪರಿಚಿತ ಪ್ರಚಲಿತ ಆಡುಭಾಷೆಯಲ್ಲಿ, ಶೈಲಿಯಲ್ಲಿ ನಡೆಯುವುದರಿಂದ ಜನರಿಗೆ ಮನವರಿಕೆಯಾಗುವುದು ಸುಲಭವೂ, ಸರಳವೂ ಆಗಿರುತ್ತದೆ.

ಜಾನಪದ ಸಂವಹನ ವಿಧಾನಗಳನ್ನು ಹಂ.ಪ. ನಾಗರಾಜಯ್ಯನವರು ಸಾಹಿತ್ಯಕ, ಭಾಷಿಕ, ವಿಜ್ಞಾನಿಕ ಹಾಗೂ ಕಲಾತ್ಮಕ ಎನ್ನುವ ವಿಧಗಳಲ್ಲಿ ಗುರುತಿಸುತ್ತಾರೆ.

**ಪಟ್ಟಿ - ೫**



**ಜಾನಪದ ಸಂವಹನ ವಿಧಾನಗಳು**






ಕಲೆ, ಪರಿವರ್ತನಾಶೀಲವಾದದ್ದು. ಹಾಗಾಗಿ ಜನಪದ ಕಲೆಗಳ ಮೂಲ ತಳಹದಿಯ ಮೇಲೆ ಆಧುನಿಕ ಸಮೂಹ ಮಾಧ್ಯಮಗಳು ನೆಲೆನಿಂತು ವಿಜ್ಞಾನವಾಗಿ ಮಾರ್ಪಟ್ಟು, ಜನ ಸಮುದಾಯದ ಮೇಲೆ ತನ್ನ ತಾಂತ್ರಿಕ ಶಕ್ತಿಯಿಂದಾಗಿ ಹಿಡಿತ ಸಾಧಿಸುತ್ತಿರುವುದು ಗಮನಾರ್ಹ.

*ಮಾತು, ಕ್ರಿಯೆ, ಸಂಜ್ಞೆ, ಸಂಕೇತಗಳು ಜಾನಪದ ಸಮೂಹ ಮಾಧ್ಯಮದ ಪ್ರಮುಖ ಆಕರಗಳು. ಯಾವುದೇ ಜನಾಂಗದ ಬದುಕಿನ ಎಲ್ಲ ಚಟುವಟಿಕೆಗಳೂ ಈ ಆಕರಗಳ ಮೂಲಕವೇ ಸಂವಹನಗೊಳ್ಳುತ್ತವೆ. ಕಾಲ, ದೇಶ, ಪರಿಸರಕ್ಕೆ ತಕ್ಕಂತೆ ವ್ಯಕ್ತಿಯಿಂದ ವ್ಯಕ್ತಿಗೂ, ಸಮಾಜದಿಂದ ಸಮಾಜಕ್ಕೂ ಈ ಆಕರಗಳಲ್ಲಿ ಮಾರ್ಪಾಟು ಕಾಣಿಸಿಕೊಳ್ಳುವುದುಂಟು. ಜಾನಪದ ದೃಷ್ಟಿ, ನಿಷ್ಠವಾದರೂ ಅದರ ಅನೇಕ ವಿಷಯಗಳು ಸಮಷ್ಟಿಯಾಗಿ ಮುಂದುವರೆದುಕೊಂಡು ಹೋಗುತ್ತವೆ. ಹೀಗೆ ಒಟ್ಟಾರೆ ಜಾನಪದ ಸಂಸ್ಕೃತಿಯ ಸಂವಹನ ಕ್ರಿಯೆ ನಿರಂತರವಾಗಿ ನಡೆಯುತ್ತಿದ್ದು ಜನಕೋಟಿಯ ಆಶೋತ್ತರಗಳಿಗೆ ತಕ್ಕಂತೆ ನಾನಾ ರೀತಿಯ ವಿಶಿಷ್ಟ ಜಾನಪದ ಮಾಧ್ಯಮಗಳಿಗೂ ಹೊಳಹುದೋರುವುದುಂಟು.* ೨೧

ಎನ್ನುವ ಹೇಳಿಕೆಯಲ್ಲಿ 'ಸಂವಹನ'ದ ಪರಿಕಲ್ಪನೆಯ ತಾಯಿಬೇರೇ ಜಾನಪದ ಎಂಬ ಸ್ಪಷ್ಟ ಧ್ವನಿಯನ್ನು ಗುರುತಿಸಬಹುದು. ಈ ಮೂಲಕ ಗಮನಿಸಬಹುದಾದದ್ದೇನೆಂದರೆ ವಕ್ತೃ - ಶ್ರೋತೃವಿನ ನಡುವೆ ನೇರ ಸಂಪರ್ಕ ಏರ್ಪಡದೆ, ಆಧುನಿಕ ಸಮೂಹ ಮಾಧ್ಯಮದಂತಹ ಸಾಧನವೊಂದರ 'ಮಧ್ಯಸ್ಥಿಕೆ' ಏರ್ಪಡುವ ಕಾರಣ ಅವರಿಬ್ಬರ ನಡುವಿನ ಕೊಂಡಿ ಕಳಚಿಕೊಂಡು 'ಕ್ರಿಯೆ - ಪ್ರತಿಕ್ರಿಯೆ'ಯ ದಾರಿ ದುರ್ಗಮವಾಗುತ್ತದೆ. ಅಂದರೆ 'ಸಂವಹನ ಕ್ರಿಯೆ' ಅಪೂರ್ಣವೆನಿಸುತ್ತದೆ.

ಶಾಮ್ ಪರಮಾರ್ ಅವರು ತಮ್ಮ *ಟ್ರೆಡಿಷನಲ್ ಫೋಕ್ ಮೀಡಿಯಾ ಇನ್ ಇಂಡಿಯಾ* ಎನ್ನುವ ಪುಸ್ತಕದಲ್ಲಿ ಜನಪದ ಮಾಧ್ಯಮಗಳಿಂದ ಆಗುವ ಪ್ರಯೋಜನಗಳನ್ನು ವಿವರಿಸಿದ್ದಾರೆ. ಆಧುನಿಕ ಮಾಧ್ಯಮಗಳ ಸಂದರ್ಭಕ್ಕಿಂತ ಭಿನ್ನವಾದದ್ದನ್ನು ನಾವು ಈ ಅಂಶಗಳಲ್ಲಿ ಕಾಣಬಹುದು. ಅವೆಂದರೆ :

- ಜನತೆಯೊಂದಿಗೆ ನಿಕಟ ಸಂಪರ್ಕ ಪಡೆದಿದ್ದು, ಅವು ವೈಚಾರಿಕತೆಗಿಂತ ಅವರ ಭಾವಪರವಶತೆಯನ್ನು ಸೆಳೆಯುತ್ತವೆ.
- ವೈವಿಧ್ಯಮಯ ಪ್ರಕಾರಗಳಿದ್ದು, ಜನರ ಭಾವನೆಗಳಿಗೆ ಹೊಂದುವ ಹಾಗೆ ಭಾವಪ್ರಸರಣ ಮಾಡುತ್ತವೆ.
- ಸ್ಥಳೀಯವಾಗಿ, ಪ್ರತ್ಯಕ್ಷವಾಗಿ, ನೇರವಾಗಿ ಪ್ರೇಕ್ಷಕರನ್ನು ತಲುಪುತ್ತವೆ.
- ಅವುಗಳದು ಸರಳ, ಸಹಜ, ನಿರೂಪಿತ ಶೈಲಿ
- ಹೊಸ ವಸ್ತುಗಳಿಗೆ ಹೊಂದಿಕೊಳ್ಳುವ ಸ್ಥಿತಿಸ್ಥಾಪಕತ್ವ ಗುಣ ಹೊಂದಿರುತ್ತವೆ.
- ಎಲ್ಲ ವಯೋಮಾನದವರಿಗೂ ಸರಿಹೊಂದುವ ಮನೋರಂಜನ ಸಾಧನವಾಗಿರುತ್ತವೆ.
- ಸುಶಿಕ್ಷಿತ ವರ್ಗದ ಮಾಧ್ಯಮಗಳೆನಿಸದೆ, ಸಾಮಾನ್ಯರಿಗೂ ಒಪ್ಪುವ ಕೆಳವರ್ಗದ ಮಾಧ್ಯಮಗಳೆನಿಸಿಕೊಳ್ಳುತ್ತವೆ.

ಪ್ರದರ್ಶನಾತ್ಮಕ ಜಾನಪದ ಕಲೆಗಳೇ ಕಾಲಾಂತರದಲ್ಲಿ ರಂಗಭೂಮಿಯಂತಹ ಪ್ರಕಾರಕ್ಕೂ ನೆಲೆಯಾಗಿರುವುದನ್ನು ಒಪ್ಪಬೇಕಾಗುತ್ತದೆ. ನಾಟಕ ರಂಗದ ಆಧಾರದ ಮೇಲೆ ಚಲನಚಿತ್ರ, ಆಕಾಶವಾಣಿ, ದೂರದರ್ಶನದಂತಹ ವಿದ್ಯುನ್ಮಾನ ಮಾಧ್ಯಮಗಳೂ ಬೆಳೆದಿರುವ ಹಿನ್ನೆಲೆಯಲ್ಲಿ ಗಮನಿಸಿದಾಗ, ಆಧುನಿಕ ಸಮೂಹ ಮಾಧ್ಯಮಗಳಿಗೂ, ಪಾರಂಪರಿಕ ಸಮೂಹ ಮಾಧ್ಯಮಗಳಿಗೂ ಪರಸ್ಪರ ಪೂರಕ ಸಂಬಂಧವಿರುವುದು ಗೋಚರವಾಗುತ್ತದೆ. ಆಧುನಿಕ ಸಮೂಹ ಮಾಧ್ಯಮಗಳು ಜಾನಪದ ಗೀತೆ, ಕಥೆ, ಲಾವಣಿ, ನಾಟಕ, ಮತ್ತಿತರ ಕಲೆಗಳನ್ನಂತೂ ಯಥೇಚ್ಛವಾಗಿ, ಯಶಸ್ವಿಯಾಗಿ ಬಳಸುತ್ತಿವೆ. ವರದಕ್ಷಿಣೆ, ನಿರಕ್ಷರತೆ, ಲಿಂಗಭೇದದಂತಹ ಸಾಮಾಜಿಕ ದೌರ್ಬಲ್ಯಗಳನ್ನು ನಿವಾರಿಸುವಲ್ಲೂ, ಜನಪರ ಪ್ರಗತಿ, ಅಭಿವೃದ್ಧಿ ಕಾರ್ಯಕ್ರಮಗಳನ್ನು

ಪ್ರಸಾರ / ಪ್ರಚಾರ ಮಾಡುವಲ್ಲೂ ಆಧುನಿಕ ಮಾಧ್ಯಮಗಳು ಸಾಂಪ್ರದಾಯಿಕ ಕಲೆಗಳನ್ನು ಸಮರ್ಥವಾಗಿ ಬಳಸಿಕೊಂಡಿರುವುದನ್ನು ಕಾಣಬಹುದು. ಆಧುನಿಕ ಯುಗದಲ್ಲೂ ಜಾನಪದ ಸಮೂಹ ಮಾಧ್ಯಮಗಳು ಪ್ರಸ್ತುತ ಎನ್ನುವುದನ್ನು ಸ್ಪಷ್ಟಪಡಿಸುವಲ್ಲಿ ಯುನೆಸ್ಕೋದ ೧೯೭೨ರ ಲಂಡನ್ ಸಭೆಯ ವರದಿಯನ್ನು ನೋಡಬಹುದು.

> *ಪ್ರಾಯೋಗಿಕವಾಗಿ ಜನಪದ ಸಮೂಹ ಮಾಧ್ಯಮಗಳು ಅಭಿವೃದ್ಧಿ ಯೋಜನೆಗಳಿಗೆ ಪೂರಕ ಸಾಮಗ್ರಿ ಒದಗಿಸುತ್ತವೆ.* [೨೨]

ಇಷ್ಟಾದರೂ, ಆಧುನಿಕ ಸಂವಹನ ಮಾಧ್ಯಮಗಳಿಗೆ ಜಾನಪದ ಸಮೂಹ ಕಲೆಗಳನ್ನು ಅಳವಡಿಸುವುದು ಸುಲಭವೂ ಆಗುವುದಿಲ್ಲ. ಆಧುನಿಕ ಮಾಧ್ಯಮಗಳಿಗೆ ಅವು ಹೊಂದಿಕೊಳ್ಳುವ ಬಗೆ ಮತ್ತು ಹಾಗೆ ಹೊಂದಿಸುವ ಸೃಜನಶಕ್ತಿಯೂ ವಿಚಾರಾರ್ಹ ಸಂಗತಿಗಳೇ. ಹಾಗೆಯೇ ಆಧುನಿಕ ಮಾಧ್ಯಮಗಳದೇ ಒಂದು ವಿಶಿಷ್ಟ ಸಂಸ್ಕೃತಿಯಿದ್ದು, ಹಲವು ಸಂದರ್ಭಗಳಲ್ಲಿ ಜಾನಪದ ನೆಲೆಯಿಂದ ಬಹಳ ದೂರವೇ ನಿಲ್ಲುವುದನ್ನು ಗಮನಿಸಬಹುದು. ಎಷ್ಟೋ ವೇಳೆ ಈ ಜಾನಪದ ಕಲೆಗಳೇ ಆಧುನಿಕತೆಯ ರಭಸಕ್ಕೆ ಸಿಕ್ಕಿ ಅದರ ಸ್ವರೂಪದಲ್ಲಿ ತೀವ್ರತರ ಮಾರ್ಪಾಡು ಕಾಣಬಹುದು. ಇಂತಹ ಮಾರ್ಪಾಡೂ ಸಹ ಜಾನಪದ ಕಲೆಯ ಬಾಹ್ಯ ಸ್ವರೂಪದಲ್ಲಾಗುತ್ತದೆಯೇ ಹೊರತು ಅದರ ಅಂತಃಸತ್ವದಲ್ಲಲ್ಲ.

ವಿಶಿಷ್ಟ ಬಗೆಯ ರೂಪುರೋಷೆಗಳನ್ನು ವಿಶೇಷ ನಂಬಿಕೆಗಳನ್ನು ಉಳಿಸಿಕೊಂಡು ಬಂದಿರುವ ಜಾನಪದ ಮಾಧ್ಯಮ, ಸಹಜ ಮಾಧ್ಯಮ, ಮನುಷ್ಯ-ಮನುಷ್ಯರ ನಡುವೆ ಬೆಸುಗೆ ನಿರ್ಮಿಸುವ ನೇರ ಮಾಧ್ಯಮ. ಪರಂಪರಾನುಗತ ಸಂವಹನ ಮಾಧ್ಯಮಗಳಿಗೆ ಕಾಲ-ದೇಶಗಳ ಮಿತಿ ಇದ್ದರೂ, ಧರ್ಮ-ಭಾಷೆಗಳನ್ನು ಮೀರಿ ಹರಡುವ ಸಾಧ್ಯತೆಯೂ ಇರುತ್ತದೆ. ಆಧುನಿಕ ಮಾಧ್ಯಮಗಳಿಗೆ ಕಾಲ, ಸೀಮೆ, ಧರ್ಮ, ಭಾಷೆ ಯಾವುದರ ಅಡೆತಡೆಯೂ ಇರದಿದ್ದರೂ ಪರಿಣಾಮ ಶೂನ್ಯವಾಗಬಹುದಾದ ಆತಂಕವಿರುತ್ತದೆ. ಇಲ್ಲಿ ಏಕಮುಖ ಚಲನೆ ಮಾತ್ರ ಸಾಧ್ಯ. ಪ್ರೇಕ್ಷಕನ ಪ್ರತಿಕ್ರಿಯೆ ಸಾಧ್ಯವಾಗದೇ ಸಂವಹನೆಯ ಮೂಲ ಉದ್ದೇಶ ಸೋತಂತಾಗುತ್ತದೆ. ಇದನ್ನೇ ಜಾನಪದ ವಿದ್ವಾಂಸ ಸೋಮಶೇಖರ ಇಮ್ರಾಪುರ ಹೀಗೆ ಹೇಳುತ್ತಾರೆ.

> *ಜಾನಪದ ಮಾಧ್ಯಮಗಳಿಗೆ ಏನಿಲ್ಲವೆಂದರೂ ನಿರ್ದಿಷ್ಟ ಮತ್ತು ಪ್ರತ್ಯಕ್ಷ ಪ್ರೇಕ್ಷಕವರ್ಗ, ಶ್ರೋತೃವರ್ಗ ಇದ್ದೇಇರುತ್ತದೆ. ಆದರೆ ಶಿಷ್ಟ, ಮಾಧ್ಯಮಗಳಿಗೆ ನಿರ್ದಿಷ್ಟಪಡಿಸಿದ ಪ್ರೇಕ್ಷಕರಿರುವುದಿಲ್ಲ. ಆದರೆ ಪ್ರೇಕ್ಷಕ ವರ್ಗಕ್ಕೆ ಕಾಲ, ಧರ್ಮ, ಭಾಷೆ, ಭೌಗೋಳಿಕ ಸೀಮೆಗಳನ್ನು ಮೀರಿದ ವ್ಯಾಪ್ತಿಯುಂಟು.* [೨೩]

ಜಾನಪದ ಮತ್ತು ಆಧುನಿಕ ಸಂವಹನ ಮಾಧ್ಯಮಗಳ ನಡುವೆ ಅಂತರ ಭಾಸವಾಗುವುದು ಎರಡು ವಿಚಾರಗಳಲ್ಲಿ. ಒಂದು ಅವುಗಳ ವ್ಯಾಪಕತೆ, ಎರಡು ಅವುಗಳ ಸಾರ್ಥಕತೆ. ಜಾನಪದ ಮಾಧ್ಯಮಗಳು ಸೀಮೆ, ಕಾಲ, ಭಾಷೆ, ಧರ್ಮಗಳ ಚೌಕಟ್ಟಿನೊಳಗೇ ಕೆಲಸ ಮಾಡಬೇಕಾದುದರಿಂದ ಅದರ ವ್ಯಾಪ್ತಿಯೂ ಸೀಮಿತಗೊಳ್ಳುತ್ತದೆ. ಉದಾಹರಣೆಗೆ ಒಂದು ಹಳ್ಳಿಯ ಹಬ್ಬದ ಸಂದರ್ಭದಲ್ಲಿ ನಡೆಯುವ ಯಕ್ಷಗಾನ ಬಯಲಾಟವನ್ನು ನೋಡಲು ಅದಕ್ಕೆ ಒಂದು ನಿರ್ದಿಷ್ಟವಾದ ಪ್ರೇಕ್ಷಕಗಣ ಮಾತ್ರ ಇರುತ್ತದೆ. ಪರಊರುಗಳಿಂದ ಬಂದ ಅತಿಥಿಗಳ ಸಂಸ್ಕೃತಿ, ಭಾಷೆ, ಧರ್ಮಗಳು ಭಿನ್ನವಾಗಿದ್ದು, ಆಟ ನೋಡಿ ಹೋಗಲು ಸಾಕಷ್ಟು ಸಮಯಾವಕಾಶವಿಲ್ಲದೆಯೂ ಇರಬಹುದು. ಅಂತಹ ಸಂದರ್ಭಗಳಲ್ಲಿ ಪಕ್ಕದ ಊರಿನವರೆಗೂ ಹರಡಿಕೊಳ್ಳುವ ವ್ಯಾಪಕತೆ ಈ ಮಾಧ್ಯಮಕ್ಕಿಲ್ಲ. ಅದೇ ಯಕ್ಷಗಾನ ಬಯಲಾಟವನ್ನು ಒಂದು ಆಧುನಿಕ ಸಂವಹನ ಮಾಧ್ಯಮ

ಉದಾಹರಣೆಗೆ ಟೆಲಿವಿಷನ್ ಮೂಲಕ ಪ್ರಸಾರ ಮಾಡಿದರೆ ಹಳ್ಳಿಗಳಲ್ಲೂ, ಪ್ರಯಾಣ ಮಾಡುವ ಕಾರು, ಬಸ್ಸುಗಳಲ್ಲೂ ಅಂದರೆ ಸೀಮೆ, ಧರ್ಮ, ಭಾಷೆ, ಸಂಸ್ಕೃತಿಯ ವ್ಯಾಪ್ತಿಯನ್ನೂ ಮೀರಿ, ಮರುಪ್ರಸಾರಗಳ ಮೂಲಕ ಕಾಲವನ್ನೂ ಮೀರಿ ಹರಿಯುವ ಅಗಾಧ ವ್ಯಾಪಕತೆ ಸಿಕ್ಕುತ್ತದೆ. ಇನ್ನೊಂದು ಅವುಗಳ ಸಾರ್ಥಕತೆ. ಒಂದು ಕಲೆಯನ್ನು ಮತ್ತೊಬ್ಬರು ನೋಡಿ, ಆನಂದಪಟ್ಟಾಗಲೇ ಅಂದರೆ ಸಂವಹನಗೊಂಡು ಅದಕ್ಕೆ ಸೂಕ್ತ ಮೆಚ್ಚುಗೆ ಮತ್ತು ಪ್ರತಿಕ್ರಿಯೆ ವ್ಯಕ್ತವಾದಾಗಲೇ ಆ ಕಲೆ ಸಾರ್ಥಕವೂ ಆಗುತ್ತದೆ. ಸಂವಹನೆಯ ಉದ್ದೇಶ ಗೆದ್ದಂತೆಯೂ ಆಗುತ್ತದೆ. ಟೆಲಿವಿಷನ್‌ನಲ್ಲಿ ಪ್ರಸಾರವಾಗುವ ಕಾರ್ಯಕ್ರಮ ಎಲ್ಲ ಕಡೆಯೂ ಲಭ್ಯವಾಗುತ್ತದೆಯಾದರೂ ಆಸಕ್ತಿ, ಅಭಿರುಚಿ, ಸಮಯ, ಪ್ರಾದೇಶಿಕತೆ ಅಥವಾ ಸೀಮೆ, ಕಾರ್ಯಕ್ರಮವನ್ನು ಸಿದ್ಧಪಡಿಸುವುದರ ಹಿಂದಿರುವ ಸೃಜನಶೀಲತೆ, ಮೊದಲಾದ ಆಕರ್ಷಣೆಗಳಿಲ್ಲದೆ ಹೋದರೆ ಟಿ.ವಿ. ನೋಡದೆ ಆರಿಸಿಬಿಡುವುದೂ ಸಾಧ್ಯ. ಅದನ್ನು ನೋಡುವ ಅಥವಾ ನೋಡದೇ ಇರುವ ಸ್ವಾತಂತ್ರ್ಯ ಪ್ರೇಕ್ಷಕನದ್ದಾಗಿರುವುದರಿಂದ, ಅದನ್ನು ನಿಲ್ಲಿಸುವ ರಿಮೋಟ್ ಶಕ್ತಿಯೂ ಅವನ ಕೈಯಲ್ಲೇ ಇರುವುದರಿಂದ, ಆಧುನಿಕ ಮಾಧ್ಯಮಗಳ ವ್ಯಾಪ್ತಿ ಎಷ್ಟೇ ವಿಸ್ತಾರವಾಗಿದ್ದರೂ ಸಾರ್ಥಕತೆ ಹಾಗೂ ಪರಿಣಾಮದ ದೃಷ್ಟಿಯಿಂದ ಯಾವಾಗಲೂ ಯಶಸ್ವಿಯೆಂದೇ ಹೇಳಲಾಗುವುದಿಲ್ಲ.

ಸಾಂಪ್ರದಾಯಿಕ ಕಲೆಗಳಾದ ಜಾನಪದ ಕಲಾ ಮಾಧ್ಯಮಗಳ ಭದ್ರಬುನಾದಿಯ ಮೇಲೇ ಆಧುನಿಕ ಸಮೂಹ ಮಾಧ್ಯಮಗಳು ಮೈದಳೆದು ನಿಂತಿದ್ದರೂ, ಹೊಸ ಪ್ರಯೋಗಗಳ ಕಾರಣ, ಭಿನ್ನ ಸಂಸ್ಕೃತಿಗಳ ಮಿಶ್ರಣದ ಕಾರಣ ಮೂಲ ಜಾನಪದ ಸಂಸ್ಕೃತಿಗೇ ಕೊಡಲಿಯಾಗುವ ಆತಂಕವನ್ನೂ ಅಲ್ಲಗಳೆಯಲಾಗುವುದಿಲ್ಲ.

## ೪. ಆಧುನಿಕ ಸಂವಹನ ಮಾಧ್ಯಮಗಳ ಉಗಮ - ವಿಕಾಸ

ಮನುಷ್ಯನ ಭಾವ - ಭಾವನೆಗಳೇ ಸಂವಹನೆಗೆ ಮೂಲ. ಅವನಲ್ಲಿ ಭಾವನೆಗಳೇ ಮೂಡದಿದ್ದರೆ ಇಡೀ ಜಗತ್ತು ಮೌನವಾಗಿರುತ್ತಿತ್ತು. ಮನುಷ್ಯ ಮನಸ್ಸು ಹೊಂದಿದ್ದಾನೆ, ಜಗತ್ತು ಧ್ವನಿಪೂರ್ಣವಾಗಿದೆ.

ಅನ್ನಿಸಿದ್ದನ್ನು ಸಂಜ್ಞೆಯ ಮೂಲಕ, ಚಿತ್ರದ ಮೂಲಕ ತೋರಿಸಿ ಸಂವಹನೆಯ ಮೂಲಛಾಯೆಗಳನ್ನು ಇರಿಸತೊಡಗಿದ ಮಾನವ ಅದಕ್ಕೊಂದಿಷ್ಟು ಭಾವ ಬೆರೆಸಿ, ದೇಹ ಭಾಷೆ ಭಂಗಿ ಸೇರಿಸಿ, ಪ್ರಕೃತಿ ಸಹಜವಾದ ಸ್ಥಾಯಿಭಾವಗಳಿಗೆ ಚಾಲನೆ ನೀಡಿದ್ದರ ಫಲವಿರಬೇಕು ಅವನಲ್ಲಿ ಸೃಜನಶಕ್ತಿ, ಕಲಾತ್ಮಕ ನೈಪುಣ್ಯ ಹುಟ್ಟಿಕೊಂಡಿದೆ. ಕಣ್ಣು, ಮುಖ, ಮೈ ಕೈ ಆಡಿಸುವ ಮೂಲಕ, ನಡೆ, ಕುಣಿತ, ಜಿಗಿತ, ನೆಗೆತಗಳ ಮೂಲಕವೂ ಅವನು ತನ್ನನ್ನು ತಾನು ಅಭಿವ್ಯಕ್ತಿಸಿಕೊಂಡಿರುವ ಸಾಧ್ಯತೆಯಿದೆ. ಅದರೊಂದಿಗೆ ತನ್ನ ಜನಪದೀಯ ನಂಬಿಕೆ, ಅಂಬೋಣಗಳು, ಇಟ್ಟ ಸಾಂಸ್ಕೃತಿಕ ಹೆಜ್ಜೆಗಳು, ಸ್ಫುರಿಸಿದ ನವಭಾವಗಳೂ ಮಿಳಿತಗೊಳ್ಳುವ ಮೂಲಕ ಅಸಾಂಪ್ರದಾಯಿಕ ನೃತ್ಯದ ಪ್ರಾರಂಭವಾಗಿದೆ ಎನ್ನಲಡ್ಡಿಯಿಲ್ಲ. ಆ ಹೊತ್ತಿಗೆ ಮಾನವ ಉದ್ಗಾರಗಳನ್ನು ಮಾತಾಗಿಸಿಕೊಂಡಿದ್ದ, ಮನೋಭಾವದೊಂದಿಗೆ ಹಾಡಾಗಿಸಿಕೊಂಡಿದ್ದ.

ಹೀಗೆ ಒಂದು ಬಿಂದುವಿನ ಸುತ್ತ ಎದ್ದ ತರಂಗ ತರಂಗಗಳಂತೆ, ಸಂವಹನೆಯ ಅಲೆ ಭೂಮ್ಯಾಕಾಶಗಳನ್ನೂ ವ್ಯಾಪಿಸಿದೆ. ಜನಪದೀಯ ಭದ್ರಬುನಾದಿಯ ಮೇಲೆ ಈ ಶಿಷ್ಟಕಲೆಯ ಮಹಾಸೌಧ ವಿಜೃಂಭಿಸುತ್ತಿದೆ. ಒರಟು ಒರಟಾಗಿ, ಹರಕು ಮುರುಕಾಗಿ ಹುಟ್ಟಿಕೊಂಡ ಪ್ರದರ್ಶಕ ಕಲೆಗಳು ಅತ್ಯಂತ ನಯ-ನಾಜೂಕಿನ, ನವನಾಗರಿಕತೆಯ 'ಪಾಲಿಷ್' ಹಚ್ಚಿದ ಶಕ್ತಿಶಾಲಿ ವೇದಿಕೆಗಳಾಗಿವೆ.

ಪರಂಪರಾಗತ ಪ್ರದರ್ಶಕ ಕಲೆಗಳು, ಆಧುನಿಕ ಸಮೂಹ ಸಂವಹನೆಯ ಮೂಲಸ್ವರೂಪ. ಮನೋರಂಜನೆಗಾಗಿ, ಮೈಮನದ ನೋವುಗಳನ್ನು ಮರೆಯುವುದಕ್ಕಾಗಿ ಗ್ರಾಮೀಣ ಜನರು ಮಾಡುತ್ತಿದ್ದ ಕುಣಿತ, ಕೇಕೆ, ಹಾಡುಗಳೇ ಅಥವಾ ಸಾಮೂಹಿಕ /

ಗುಂಪು ನೃತ್ಯಗಳೇ ಮುಂದೆ ನಾಟಕದ ಸ್ವರೂಪ ಪಡೆದಂತಿದೆ. ನಟನಾ ಚಾತುರ್ಯದೊಂದಿಗೆ ಆಡುಮಾತೂ ಸೇರಿದ ನಾಟಕ ಅತ್ಯಂತ ಪ್ರಭಾವೀ ಅಂತರ್‌ಸಂವಹನೆಯ ಮತ್ತು ಸಮೂಹ ಸಂವಹನೆಯ ಮಾಧ್ಯಮವಾಗಿದೆ.

## ೪.೧. ರಂಗಭೂಮಿ

'ಒಂದು ಪುಸ್ತಕ ಮಾಡುವುದಕ್ಕಿಂತ ನೂರುಪಾಲು ಹೆಚ್ಚಿನ ಸಾಧನೆಯನ್ನು ನಾಟಕ ಮಾಡಬಲ್ಲುದಾಗಿದೆ' ಎನ್ನುವ ಹೆನ್ರಿ ಅರ್ವಿಂಗ್ ಮಾತು ಉಲ್ಲೇಖಾರ್ಹ. ಅದು ಪ್ರತಿಕ್ರಿಯಾತ್ಮಕ ಸಂವಹನೆಯ ದೃಷ್ಟಿಯಿಂದ ನಿಜವೂ ಹೌದು. ನಾಟಕ ವ್ಯಕ್ತಿ-ವ್ಯಕ್ತಿಗಳ ನಡುವಿನ ನೇರ ಸಂವಹನೆ ವೇಟಕೆಯ ಮೇಲೆ ನಟ ನುಡಿಯುವ ಸಂಭಾಷಣೆಗೆ ವೇದಿಕೆ ಕೆಳಗೆ ಕುಳಿತ ಪ್ರೇಕ್ಷಕ ಕೂಡಲೇ ಚಪ್ಪಾಳೆ ತಟ್ಟಿ, ಸೀಟಿ ಹೊಡೆದು, ತನ್ನ ಸಂತಸ ವ್ಯಕ್ತಪಡಿಸುತ್ತಾನೆ. ಅದರಿಂದ ಹುರಿದುಂಬಿತನಾದ ನಟ ಮತ್ತೂ ಉತ್ಸಾಹದಿಂದ ನಟಿಸುತ್ತಾನೆ. ಪ್ರದರ್ಶಕ ಗುಣದ ಆಸ್ವಾದನೀಯ ಅಂಶಗಳಿಂದಾಗಿ ಕಾವ್ಯೇಷು ನಾಟಕಂ ರಮ್ಯಂ ಎನಿಸಿಕೊಳ್ಳುತ್ತದೆ. ಅತೀ ಸ್ವಾಭಾವಿಕ ನೆಲೆಯಿಂದ ಮೂಡಿ ಬಂದಿರುವುದರಿಂದಲೇ ರಂಗಭೂಮಿ ಸಂಪೂರ್ಣ ಸ್ವಂತಿಕೆಯನ್ನು ಮೆರೆಯಬಲ್ಲ ಮಾಧ್ಯಮವಾಗಿದೆ. ಹಾ.ಮಾ. ನಾಯಕ

*ಸಿನಿಮಾ, ರೇಡಿಯೊ, ದೂರದರ್ಶನ ಮುಂತಾದ ಆಧುನಿಕ ಮಾಧ್ಯಮಗಳು*
*ಯಾವುವೇ ಬರಲಿ, ಅವುಗಳು ಒಡ್ಡುವ ಆಕರ್ಷಣೆ ಎಷ್ಟೇ*
*ಉತ್ಕಟವಾಗಿರಲಿ, ರಂಗಭೂಮಿಗೆ ಇರುವ ತನ್ನತನಕ್ಕೆ ಚ್ಯುತಿಯಿಲ್ಲ* [೨೪]

ಎಂದಿದ್ದಾರೆ. ದೃಶ್ಯಕಾವ್ಯ ಎಂಬ ಹೆಗ್ಗಳಿಕೆಗೆ ಪಾತ್ರವಾದ ನಾಟಕ ಕಲೆ ಒಂದರ್ಥದಲ್ಲಿ ಪಾರಂಪರಿಕ ಹಾಗೂ ಆಧುನಿಕ ಸಂವಹನ ಮಾಧ್ಯಮಗಳ ನಡುವಿನ ಕೊಂಡಿ. ಪಾರಂಪರಿಕ ಮಾಧ್ಯಮಗಳ ವಿಕಾಸದ ತುತ್ತತುದಿಯಾಗಿಯೂ, ಚಲನಚಿತ್ರ ತದನಂತರದ ಆಧುನಿಕ ಮಾಧ್ಯಮಗಳ ಮೂಲ ಸೋಪಾನವಾಗಿಯೂ ನಾವು ನಾಟಕವನ್ನು ಗುರುತಿಸಬಹುದು. ಈ ಹಿನ್ನೆಲೆಯಿಂದಾಗಿಯೇ ಈ ಮಹಾಪ್ರಬಂಧದಲ್ಲಿ ರಂಗಭೂಮಿಯ ಉಗಮದ ಸ್ಥೂಲ ಚಿತ್ರಣವನ್ನು ನೀಡಬಯಸಿದ್ದೇನೆ.

ಜಾನಪದ ಲೋಕದ ಸಾರವತ್ತತೆಯನ್ನು ಮೈಗೂಡಿಸಿಕೊಂಡು ಬೆಳೆದ ನಾಟಕ/ರಂಗಭೂಮಿಯ ಹುಟ್ಟನ್ನು ನಿರ್ದಿಷ್ಟ ಕಾಲಮಾನಕ್ಕೆ ಹಚ್ಚಿ ವಿವರಿಸುವುದು ಸಾಧ್ಯವಿಲ್ಲ. ಆದರೂ ಒಂದು ಪ್ರದರ್ಶಕ ಕಲೆಯ ಅಧಿಕೃತ ಠಸ್ಸೆ, ಐದನೆಯ ವೇದವೆಂದು ಪರಿಗಣಿತವಾದ ಭರತನ ನಾಟ್ಯಶಾಸ್ತ್ರದ ಹುಟ್ಟಿನೊಂದಿಗೇ ಬಿದ್ದಿದೆ; **ಪ್ರಯೋಗ ಪ್ರಧಾನಂ ಹಿ ನಾಟಕಂ** ಎನಿಸಿಕೊಂಡಿದೆ. ಆರ್ಯ ಸಂಪ್ರದಾಯ, ನಂಬಿಕೆಯಂತೆ ನಾಟ್ಯ 'ಸಮೂಹ ಶಾಸ್ತ್ರ'. ಬೇರೆ ಬೇರೆ ರುಚಿಗಳನ್ನು ಏಕಕಾಲದಲ್ಲಿ ತಣಿಸಬಲ್ಲುದು; ಎಲ್ಲ ಬಗೆಯ ಜನರನ್ನೂ ಒಮ್ಮೆಗೇ ಸೆರೆ ಹಿಡಿಯಬಲ್ಲುದು ಎಂಬ ಕಾರಣದಿಂದಲೇ 'ಬಹು ಜನ ಹಿತಾಯ - ಬಹುಜನ ಸುಖಾಯ' ಎಂಬ ಧ್ಯೇಯ ವಾಕ್ಯ ಇದಕ್ಕೆ ಅನ್ವಯಿಕವಾಗುತ್ತದೆ.

ರಂಗಭೂಮಿಯ ವಿಮರ್ಶಕ ಅಲಾರ್ಡಿಸ್ ನಿಕಲ್ *ದಿ ಥಿಯರೀ ಆಫ್ ಡ್ರಾಮಾ* ಕೃತಿಯಲ್ಲಿ ನಾಟಕದಲ್ಲಿ ಸಾಮೂಹಿಕ ರಂಜನಾ ಸಾಮರ್ಥ್ಯವಿದೆ; ಒಂದು ನಾಡಿನ ಬಾಹ್ಯ ಜೀವನ ಹಾಗೂ ಅಂತಃಸತ್ವದ ಚಿತ್ರವಿದೆ; ಸಮಾಜ, ಧರ್ಮದ ವಿವೇಚನೆಯಿದೆ ಸಮಾಜದಲ್ಲಿನ ವಿಷಮತೆಯನ್ನೂ ನಿವಾರಿಸುವ ಮಾರ್ಗದ ನಿರೂಪಣೆಯಿದೆ ಎಂದಿದ್ದಾರೆ.

ಜಾನಪದ ರಂಗಭೂಮಿ ಎನ್ನುವುದು ಸಾಮಾನ್ಯ ಜನರ ಮನೋಲ್ಲಾಸ, ಮನೋವಿಕಾಸಕ್ಕೆಂದೇ ಹುಟ್ಟಿಬಂದ ಗ್ರಾಮೀಣ ರಂಗಭೂಮಿ. ಹಳ್ಳಿಗರ ರಂಗಭೂಮಿ. ವಿಶ್ವದ ಎಲ್ಲ ದೇಶಗಳಲ್ಲೂ ಜನತಾರಂಗಭೂಮಿಯೇ ಅತ್ಯಂತ ಪ್ರಾಚೀನವಾದುದೆಂದು

ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ತಾವು ನಂಬಿದ ದೈವ, ದೆವ್ವ-ಭೂತಗಳನ್ನು ಒಲಿಸಿಕೊಳ್ಳುವ ಸಲುವಾಗಿ ಮಾಡುತ್ತಿದ್ದ ನಂಬಿಕೆ ಆಚರಣೆಗಳ ಅನುಕರಣವೂ ಆಗಿ ನಾಟಕ ಉಗಮಿಸಿದೆ.

ಮತ್ತೊಂದೆಡೆ ಶಿಷ್ಟ ಸಮಾಜದ ಪ್ರಭಾವದಿಂದಾಗಿ ಭಾಸ, ಭವಭೂತಿ, ಕಾಳಿದಾಸನಂತಹ ಮಹಾಕವಿಗಳ ನಾಟಕಗಳೂ ರಚಯಿತವಾಗಿರುವುದು ಗಮನಾರ್ಹ. ಶಿಷ್ಟ ಕವಿಗಳಿಗೆ ರಾಜಾಶ್ರಯ ದೊರೆಯುತ್ತಿತ್ತು ಎನ್ನುವುದೂ ಉಲ್ಲೇಖಾರ್ಹ. ಕನ್ನಡದಲ್ಲಿ ನಾಟಕ ಎಂಬ ಪ್ರಕಾರದ ಉಲ್ಲೇಖ ಕ್ರಿ.ಶ. ೮೫೦ರಲ್ಲಿ ರಚಿತವಾಗಿದೆ ಎನ್ನಲಾಗುವ ಕವಿರಾಜಮಾರ್ಗದ ಮೊದಲ ಆಶ್ವಾಸದ ಆರನೇ ಪದ್ಯದಲ್ಲಿ ಬಂದಿದೆ.

*ವ್ಯಾಕರಣ ಕಾವ್ಯ ನಾಟಕ*
*ಲೋಕ ಕಳಾಸಮಯಮಾದಳಂ ಕೃತಿಗಳೊಳಂ*
*ವ್ಯಾಕುಳ ಸಲ್ಲದನೇಕ ವಿ*
*ವೇಕ ಬೃಹಸ್ಪತಿಯ ನಗರಮಂ ಪುಗುತರ್ಪ್ಪಂ ||*

ಇದರಿಂದ ಸ್ಪಷ್ಟವಾಗುವ ಒಂದಂಶವೇನೆಂದರೆ ನೃಪತುಂಗನ ವೇಳೆಗಾಗಲೇ 'ನಾಟಕ', 'ನಾಟಕ ಶಾಲೆ' ಎಂಬ ಶಬ್ದ ಪ್ರಯೋಗಗಳಿರುವುದು, ನಾಟಕ ಎನ್ನುವ ಒಂದು ಪ್ರಕಾರದ ಅರಿವು ಜನರಿಗಿತ್ತು ಎನ್ನುವುದು.

ಇದುವರೆಗೆ ಲಭ್ಯವಿರುವ ಕನ್ನಡ ನಾಟಕಗಳಲ್ಲಿ ತುಂಬ ಪುರಾತನವಾದುದೆಂದರೆ ಸಿಂಗರಾರ್ಯನ ಮಿತ್ರವಿಂದಾ ಗೋವಿಂದ. ಶ್ರೀಹರ್ಷನ ರತ್ನಾವಳೀ ಸಂಸ್ಕೃತ ನಾಟಕದ ಕನ್ನಡ ರೂಪವಾದ ಇದು, ೧೬೮೦ರಲ್ಲಿ ರಚಿತವಾಗಿದೆ. ಇದು ಕನ್ನಡ ಸಾಹಿತ್ಯದ ದೃಷ್ಟಿಯಿಂದ ಮೊದಲ ನಾಟಕ ಕೃತಿ ಎನಿಸಿಕೊಳ್ಳುತ್ತದೆಯೇ ಹೊರತು ಕನ್ನಡ ನಾಟಕ ಪ್ರದರ್ಶನದ ದೃಷ್ಟಿಯಿಂದಲ್ಲ. ಎ.ಆರ್. ಕೃಷ್ಣಶಾಸ್ತ್ರಿಗಳು *ಸಂಸ್ಕೃತ ನಾಟಕ* ಕೃತಿಯಲ್ಲಿ ಹೇಳುವಂತೆ ಕನ್ನಡ ಜನಪದ ರಂಗಭೂಮಿಯ ಮೂಲ ಪ್ರದರ್ಶನಗಳು ಕ್ರಿಸ್ತಶಕೆಯ ಮೊದಲ ವರ್ಷಗಳಿಂದಲೂ ಪ್ರಚಲಿತವಾಗಿರುವುದು ಕಂಡು ಬರುತ್ತದೆ. ನೃತ್ಯ, ಗೀತ ಪ್ರಧಾನವಾದ ಒಂದು ಶುದ್ಧ ದೇಶೀಯ ಕಲೆ ಅದು. ಇಷ್ಟು ಪ್ರಾಚೀನವೂ, ಜೀವಂತವೂ ವೈಭವಯುಕ್ತವೂ ಆದ ನಮ್ಮ (ದ್ರಾವಿಡರ) ಜಾನಪದ ರಂಗಭೂಮಿಯ ವರ್ಚಸ್ಸು ಸಂಸ್ಕೃತ ನಾಟಕದ ಮೇಲೆ ಮಾತ್ರವಲ್ಲದೆ, ಭರತನ ನಾಟ್ಯಶಾಸ್ತ್ರದ ಮೇಲೆ ಕೂಡ ಬಿದ್ದಿರುವುದು ಅನಿವಾರ್ಯ.

ಜಾನಪದ ರಂಗಭೂಮಿಯ ತಳಹದಿಯ ಮೇಲೆ ಹುಟ್ಟಿಕೊಂಡವು ವೃತ್ತಿರಂಗಭೂಮಿ ಹಾಗೂ ಹವ್ಯಾಸಿ / ವಿಲಾಸೀ ರಂಗಭೂಮಿ. ನಾಟಕವನ್ನೇ ವೃತ್ತಿಯಾಗಿಸಿಕೊಂಡು, ತಂಡ-ಮಂಡಳಿಗಳನ್ನು ರಚಿಸಿಕೊಂಡು ಜೀವನೋಪಾಯಕ್ಕಾಗಿ ಅದನ್ನೇ ಅವಲಂಬಿಸಿದ ಪ್ರದರ್ಶಕ ಕಲೆ ವೃತ್ತಿರಂಗಭೂಮಿ. ಇದು ವ್ಯಾಪಾರೀ ರಂಗಭೂಮಿ. ಇದನ್ನು ಮಾಡರ್ನ್ ಥಿಯೇಟರ್ ಎಂದೂ ಕರೆಯುವುದುಂಟು. ಹಾಗೆ ಇದು ಮಧ್ಯಮವರ್ಗದ ಜನತೆಯ ಮನೋಲ್ಲಾಸದ ಸುಲಭ ಮಾಧ್ಯಮ ಸಹ.

## ವೃತ್ತಿರಂಗಭೂಮಿ

ಹಾಗೆ ನೋಡಿದರೆ ವೃತ್ತಿರಂಗಕಲೆ ತೀರಾ ಹಳೆಯದಲ್ಲ. ಭಾರತದಲ್ಲಿ ವೃತ್ತಿಪರ ನಾಟಕ ಮಂಡಳಿ ಮೊದಲು ಚಿಗುರಿದ್ದು ಕಲ್ಕತ್ತಾದಲ್ಲಿ. ೧೮ನೇ ಶತಮಾನದ ಉತ್ತರಭಾಗದಲ್ಲಿ. ೧೭೭೫-೭೬ರಲ್ಲಿ ಇಂಗ್ಲಿಷ್ ನಾಟಕಗಳ ಪ್ರಭಾವಕ್ಕೊಳಗಾದ ಕಲ್ಕತ್ತಾದ ಶ್ರೀಮಂತ ಜಮೀನ್ದಾರರು ಹಣ ಕೂಡಿಸಿ ರಂಗಮಂದಿರವನ್ನು ಪುನರ್ರೂಪಿಸಿದುದರೊಂದಿಗೆ ವೃತ್ತಿನಾಟಕ ರಂಗಮಂದಿರ

ಉದಿಸಿತು. ನಂತರ ಬಾಂಗ್ಲಾ ನಾಟಕಗಳನ್ನಾಡುವ ಸಲುವಾಗಿ ೧೮೩೫ರಲ್ಲಿ ಮತ್ತೊಂದು ರಂಗಮಂಚ ನಿರ್ಮಾಣಗೊಂಡಿದ್ದು ಮಹತ್ವದ ಹೆಜ್ಜೆ ಎಂದು ಗುರುತಿಸಲಾಗಿದೆ. ಇತ್ತ ಮಹಾರಾಷ್ಟ್ರದಲ್ಲಿ, ೧೮೪೨ರ ವೇಳೆಗೆ ಮರಾಠಿ ನಾಟಕಗಳಿಗೆ ಹೊಸ ಕಳೆ ಬಂದಿತ್ತು. ಭಾರತದಲ್ಲಿ ವೃತ್ತಿ ರಂಗಭೂಮಿಗೆ ಒಂದು ನಿರ್ದಿಷ್ಟ ದಿಕ್ಕು ಸಿಕ್ಕಿತು.

ಇದಾದ ಸುಮಾರು ಮೂರು ದಶಕಗಳ ನಂತರ ಕರ್ನಾಟಕದಲ್ಲಿ ವೃತ್ತಿರಂಗಭೂಮಿಯ ಅವತರಿಸಿ ಬಂತು. ಉತ್ತರ ಕರ್ನಾಟಕದ ಭಾಗದಲ್ಲಿ ಮರಾಠಿ ನಾಟಕಗಳ ಪ್ರಭಾವ ಹೆಚ್ಚಾಗಿತ್ತು. ೧೮೫೦ರ ನಂತರದ ಮೂವತ್ತು ವರ್ಷಗಳ ಕಾಲ ಮರಾಠಿ ರಂಗಕ್ಕೆ ಮಾರುಹೋಗಿದ್ದ ಕನ್ನಡಿಗರನ್ನು ಮತ್ತೆ ಕನ್ನಡತನದ ಕಡೆಗೆ ಸೆಳೆದುಕೊಳ್ಳಲು ಶ್ರಮಿಸಿದವರು 'ಶಾಂತಕವಿ' ಎಂದೇ ಹೆಸರಾದ ಸಕ್ಕರಿ ಬಾಳಾಚಾರ್ಯರು. ೧೮೭೭ರಲ್ಲಿ ಅವರ ಪ್ರೋತ್ಸಾಹದೊಂದಿಗೆ 'ಶ್ರೀ ವೀರನಾರಾಯಣ ಪ್ರಾಸಾದಿತ ಕೃತಪುರ ನಾಟಕ ಮಂಡಳಿ' ಅಸ್ತಿತ್ವಕ್ಕೆ ಬಂದಿತು. ಶಾಂತಕವಿಗಳೇ ರಚಿಸಿ ನಿರ್ದೇಶಿಸಿದ 'ಉಷಾಹರಣ' ನಾಟಕವೇ ಕನ್ನಡ ವೃತ್ತಿರಂಗಭೂಮಿಯ ಪ್ರಥಮನಾಟಕ, ಶಾಂತಕವಿಗಳೇ ಕನ್ನಡ ನಾಟಕದ ಪ್ರಥಮಗುರು ಎಂಬ ಹಿರಿಮೆ ದೊರೆತಿದೆ.

ಕರ್ನಾಟಕ ನಾಟಕ ಪಿತಾಮಹರೆನಿಸಿದ ಶಾಂತಕವಿಗಳ ಮೊದಲ ನಾಟಕ ಸಿದ್ಧವಾಗುವುದಕ್ಕಿಂತ ಸುಮಾರು ಐದು ವರ್ಷಗಳಿಗೂ ಮೊದಲೇ (೧೮೬೯) ಧಾರವಾಡದಲ್ಲಿ ಚುರಮುರಿ ಶೇಷಗಿರಿರಾಯರು, ಕಾಳಿದಾಸನ 'ಶಾಕುಂತಲಾ' ನಾಟಕವನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ ಎನ್ನಲಾಗಿದೆ. ಆದರೂ ಇದು ಕನ್ನಡದ ಮೂಲ ನಾಟಕವೆನಿಸಿಕೊಳ್ಳುವುದಿಲ್ಲ. ಜೊತೆಗೆ ಇದರ ಕೆಲವು ದೃಶ್ಯಗಳು ಮಾತ್ರ ೧೮೭೫ರಲ್ಲಿ ರಂಗದ ಮೇಲೆ ಬಂದಿತ್ತಾದರೂ, ಸಂಪೂರ್ಣ ಪ್ರದರ್ಶನಗೊಂಡದ್ದು ೧೯೦೫ರಲ್ಲಿ. ಅದೂ, ಒಂದೊಂದು ಸಂಜೆಗೆ ಒಂದೊಂದು ಅಂಕ ಮಾತ್ರ. ಇದಕ್ಕಿಂತ ಮೊದಲೇ ಶಾಂತಕವಿಗಳ ಎಂಟು ಕನ್ನಡ ನಾಟಕಗಳು ಪ್ರದರ್ಶಿತಗೊಂಡಿದ್ದವು. ಇತ್ತ ಮೈಸೂರು ಬಸವಪ್ಪ ಶಾಸ್ತ್ರಿಗಳು ಅನುವಾದಿಸಿದ ಕನ್ನಡ ಶಾಕುಂತಲ ನಾಟಕ ಮೈಸೂರು ಅರಮನೆಯಲ್ಲಿ ಪ್ರದರ್ಶನಗೊಂಡಿದ್ದೂ ೧೮೮೧ರಲ್ಲಿ.

ಮತ್ತೊಂದೆಡೆ 'ಹಲಸಿಗಿ ಮಂಡಳಿ'ಯೇ ಮೊದಲ ವೃತ್ತಿ ನಾಟಕ ಸಂಸ್ಥೆಯೆಂದೂ, ವೆಂಕಣ್ಣಾಚಾರ್ಯ ಅಗಳಗಟ್ಟಿ 'ಶ್ರೀನಿವಾಸ ಕವಿ'ಯೇ 'ಶ್ರೀಮತಿ ಪರಿಣಯ' ಮುಂತಾದ ನಾಟಕಗಳನ್ನೂ ರಚಿಸಿಕೊಟ್ಟು, ಶಾಂತಕವಿಗಳಿಗಿಂತಲೂ ಮೊದಲೇ ಕನ್ನಡ ನಾಟಕ ಪ್ರದರ್ಶನಕ್ಕೆ ಚಾಲನೆ ನೀಡಲಾಗಿದೆ ಎಂಬ ವಾದವಿದ್ದರೂ, ಅದರ ಖಚಿತಕಾಲ ನಿರ್ಣಯವಾಗಿಲ್ಲ. ಆದ್ದರಿಂದ ಈವರೆಗೂ ಶಾಂತಕವಿಯನ್ನೇ ಕನ್ನಡ ವೃತ್ತಿರಂಗಭೂಮಿಯ ಹರಿಕಾರ ಎನ್ನಬಹುದಾಗಿದೆ.

ಶಾಂತಕವಿಯ ಕೃತಪುರ ನಾಟಕ ಮಂಡಳಿ (೧೮೭೭)ಯ ನಂತರ ಹಲಸಿಗಿ ಮಂಡಳಿ (೧೮೭೮-೭೯) ತಂತುಪುರಸ್ಥ ನಾಟಕ ಮಂಡಳಿ (೧೮೮೬), ಹಿಂದೂ ಯೂನಿಯನ್ ಕ್ಲಬ್, ಭರತ ಕಲೋತ್ತೇಜಕ ಸಂಗೀತ ಸಮಾಜ, ಶಿರಹಟ್ಟಿ ನಾಟಕ ಮಂಡಳಿ, ಕೊಣ್ಣೂರಕರ ಕಾಡಸಿದ್ಧೇಶ್ವರ ಸಂಗೀತ ನಾಟಕ ಮಂಡಳಿ, ವಿಶ್ವಗುಣಾದರ್ಶ ಮಂಡಳಿ, ಹಲಗೇರಿ ಕಂಪೆನಿ, ಮೈಸೂರು ಅರಸರ ಕೃಪಾಪೋಷಣೆಯೊಂದಿಗೆ ಅರಮನೆ ಕಂಪೆನಿ (೧೮೮೦) ನಂತರ ಇದೇ 'ಶಾಕುಂತಲಾ ಕರ್ಣಾಟಕ ನಾಟಕ ಸಭಾ' ಎಂಬ ಹೆಸರು ಪಡೆಯಿತು. ಮತ್ತೆ ೧೮೮೨ ರಲ್ಲಿ 'ಶ್ರೀ ಚಾಮರಾಜೇಂದ್ರ ಕರ್ನಾಟಕ ನಾಟಕ ಸಭಾ' ಎಂದು ಹೆಸರು ಬದಲಿಸಿಕೊಂಡಿತು. ರಾಜಧಾನಿ ನಾಟಕ ಮಂಡಳಿ (೧೮೮೦), ಹೀಗೆ ಅನೇಕಾನೇಕ ವೃತ್ತಿ ನಾಟಕ ಮಂಡಳಿಗಳು ಕನ್ನಡ ರಂಗಭೂಮಿಗೆ ತಮ್ಮ ನಿಷ್ಠ ಕೊಡುಗೆ ಸಲ್ಲಿಸಿವೆ. ಅದರಲ್ಲೂ ಕರ್ನಾಟಕದ ಉತ್ತರಭಾಗದಲ್ಲಿ ಕನ್ನಡ ರಂಗಭೂಮಿಯ ತಾಯಿ ಬೇರು ಕಂಡು ಬಂದಿದೆ. ಇದನ್ನು ಶಾಂತಕವಿಯೇ ಹೀಗೆ ಹೇಳಿದ್ದಾರೆ. ಈ ನಮ್ಮ ಉತ್ತರ ಕರ್ನಾಟಕದೊಳಗೆ ನರಗುಂದ, ನವಲಗುಂದ, ಹಲಸಿಗಿ, ಬಾದಾಮಿ, ರಬಕವಿ ಮುಂತಾದ ಕಡೆಗಳಲ್ಲಿ ಕನ್ನಡ ನಾಟಕ ಮಂಡಳಿಗಳು ಅಷ್ಟರ ಪೂರ್ತಿ ಹುಟ್ಟಿದವು ಮತ್ತು ಅಡಗಿದವು.

ಗುಬ್ಬಿ ಕಂಪೆನಿ, ಸುಬ್ಬಯ್ಯನಾಯ್ಡು ಅವರ 'ಸಾಹಿತ್ಯ ಸಾಮ್ರಾಜ್ಯ ನಾಟಕ ಮಂಡಳಿ', ಎಲ್ಲ ಪಾತ್ರಗಳನ್ನೂ ಸ್ತ್ರೀಯರೇ ನಿರ್ವಹಿಸುವ ಲಕ್ಷ್ಮೇಶ್ವರದ 'ಸ್ತ್ರೀ' ನಾಟಕ ಮಂಡಳಿ ಮುಂತಾಗಿ ಕನ್ನಡ ವೃತ್ತಿ ರಂಗಭೂಮಿ ಅನೇಕ ಸ್ಥಿರ ಹೆಜ್ಜೆಗಳನ್ನು ಕಂಡಿದೆ.

### ಹವ್ಯಾಸಿ ರಂಗಭೂಮಿ

ಆಧುನಿಕವೆನಿಸಿದ ಹವ್ಯಾಸಿ ರಂಗಭೂಮಿ, ಕರ್ನಾಟಕದಲ್ಲಿ ಇಪ್ಪತ್ತನೆ ಶತಮಾನದ ಮೂರನೇ ದಶಕದಲ್ಲಿ ಹುಟ್ಟಿತು. ನಾಟಕಗಳ ಕಥಾವಸ್ತು ಸಾಮಾಜಿಕ ನೆಲೆಯಲ್ಲಿದ್ದು ಪ್ರೇಕ್ಷಕರ ಬದುಕಿಗೆ ಹತ್ತಿರವಾಗಿದ್ದುದರಿಂದಲೂ, ವೇಷಭೂಷಣ, ಅಲಂಕಾರ, ಭಾಷೆ, ರಂಗಸಜ್ಜಿಕೆ/ಸಲಕರಣೆ ಎಲ್ಲದರಲ್ಲೂ ಆಧುನೀಕರಣಗೊಂಡು ಸುಶಿಕ್ಷಿತ ರಂಗಭೂಮಿ ಎನಿಸಿತು. ಜಾನಪದ ರಂಗಭೂಮಿ, ವೃತ್ತಿರಂಗಭೂಮಿಯಂತೆಯೇ ಹವ್ಯಾಸೀ ರಂಗಭೂಮಿ ಸಹ ಕನ್ನಡ ರಂಗಭೂಮಿಯ ಮತ್ತೊಂದು ಕವಲಾಯಿತು. ಸಂವಹನೆಯ ವಿನೂತನ ಅವಿಷ್ಕಾರಗಳಾದವು. ಇತರ ಭಾರತೀಯ ಭಾಷಾನಾಟಕ, ಪಾಶ್ಚಾತ್ಯ ನಾಟಕಗಳ, ಥಿಯೇಟರ್‌ಗಳ ಪ್ರಭಾವ ಕನ್ನಡ ನಾಟಕಗಳಿಗೆ ನಾವೀನ್ಯ ತಂದುಕೊಟ್ಟವು. ವೃತ್ತಿರಂಗಭೂಮಿಯಂತೆ ವ್ಯಾಪಾರೀ ಕ್ಷೇತ್ರವಾಗದೆ, ಹವ್ಯಾಸಿ ವಿಲಾಸೀ ರಂಗಭೂಮಿ ಕಲಾಭಿವೃದ್ಧಿಯ ಸಾಧನರಂಗ ಎಂದೆನಿಸಿತು. ರಂಗಭೂಮಿಯ ಕೆಲಸ ಕೇವಲ ಮನರಂಜನೆಯಲ್ಲ. ಪ್ರೇಕ್ಷಕನ ಬುದ್ಧಿಶಕ್ತಿಯನ್ನು ಪರೀಕ್ಷಿಸುವ, ಸಮಾಜದ ವಿದ್ಯಮಾನಗಳನ್ನು ವಿಶ್ಲೇಷಿಸುವಂತೆ ಮಾಡುವ, ಸಮಾಜದ ಒಪ್ಪು - ತಪ್ಪುಗಳನ್ನು ತಿಳಿಸುವ ಹೊಣೆಗಾರಿಕೆಯೂ ಅದರದಾಯಿತು. ಸಂವಹನೆಯ ಒಂದು ಹೊಸ ಲೋಕ ತೆರೆದುಕೊಂಡಿತು.

ಅನೇಕ ವಿಲಾಸೀ ನಾಟಕ ತಂಡಗಳು ಹುಟ್ಟಿಕೊಂಡಂತೆ ಅವುಗಳಿಗೆ ಖಾಯಂ ಪ್ರೇಕ್ಷಕ ವರ್ಗವೂ ರೂಪುಗೊಂಡವು. ಬೆಂಗಳೂರಿನ ಅಮೆಚೂರ್ ಡ್ರೆಮ್ಯಾಟಿಕ್ ಅಸೋಸಿಯೇಷನ್, ಧಾರವಾಡದ ಕಲಾಮಂಡಲಿ, ಮೈಸೂರಿನ ಎಲ್.ಡಿ.ಎ. ಕಲಾವಿದರು, ಉತ್ತರ ಕರ್ನಾಟಕದಲ್ಲಿ ಮದಿಹಾಳದ ಪ್ರಾಚ್ಯ ಕ್ರೀಡಾಸಂವರ್ಧನ ಮಂಡಲಿ, ಬಾದಾಮಿ ಅಮೆಚೂರ್ ನಾಟಕ ಮಂಡಲಿ, ಯಂಗ್‌ಮನ್ಸ್ ಫುಟ್‌ಬಾಲ್ ಕ್ಲಬ್ ಅಮೆಚೂರ್ಸ್ ಹೀಗೆ ಅನೇಕಾನೇಕ ವಿಲಾಸಿ ನಾಟಕ ತಂಡಗಳು ವೈಚಾರಿಕ ನೆಲೆಯಲ್ಲಿ ಸಂವಹನೆಯ ಕೈಂಕರ್ಯ ನಡೆಸಿದವು. ಟಿ.ಪಿ. ಕೈಲಾಸಂ, ಕುವೆಂಪು, ಬಿ.ಎಂ.ಶ್ರೀ, ಶ್ರೀರಂಗ, ಸಂಸ, ಶಿವರಾಮ ಕಾರಂತ, ಪು.ತಿ.ನ. ಮೊದಲಾದ ಅನೇಕ ವಿದ್ವಾಂಸರು ನಾಟಕ ರಚನೆಯಲ್ಲಿ ಹೊಸ ಹೊಸ ಪ್ರಯೋಗಗಳನ್ನು ಮಾಡಿದರು. ನಾಟಕಗಳ ಮೂಲಕ ಸಂವಹನಗೊಳ್ಳುವ ವಿಷಯಗಳಲ್ಲಿ ಸಾಮಾಜಿಕ ಸ್ಪಂದನೆ ಹೆಚ್ಚಾಗತೊಡಗಿತು. ಹೊಸ ಸಂವೇದನೆಯ ನಾಟಕಗಳು ಹೆಚ್ಚಾದವು. ಬೀದಿ ನಾಟಕಗಳಂತೂ ಸಾಮಾಜಿಕ ಸಮಸ್ಯೆಗಳನ್ನೇ ಕೇಂದ್ರವಸ್ತುಗಳನ್ನಾಗಿಸಿಕೊಂಡು, ವೇದಿಕೆಯನ್ನು ತ್ಯಜಿಸಿ ಜನತೆಯ ಮಧ್ಯಕ್ಕೇ ಬಂದುಬಿಟ್ಟವು.

ಇಂತಹ ರಂಗಸಂಸ್ಕೃತಿಯ ಅಚ್ಚುಕಟ್ಟಾದ ವೇದಿಕೆಯ ಮೇಲೆ ಚಲನಚಿತ್ರದಂತಹ ಬಣ್ಣಬಣ್ಣದ ಕನಸು ಅರಳಿಕೊಂಡಿತು. ನೇರವಾದ ಅಂತರ್‌ಸಂವಹನೆಗೆ ಬದಲಾಗಿ ಸೆಲ್ಯೂಲಾಯ್ಡ್‌ನಂತಹ ತಾಂತ್ರಿಕ ಪರಿಕರಗಳ ಸಹಕಾರದೊಂದಿಗೆ ಸಮೂಹ ಸಂವಹನೆಗೆ ನಾಂದಿಯಾಯಿತು. ಆಧುನಿಕ ತಾಂತ್ರಿಕ ಮಾಧ್ಯಮವೊಂದು ಸೃಷ್ಟಿಯಾಯಿತು.

> *ವೃತ್ತಿ ರಂಗಭೂಮಿಯ ಅಸ್ತಿತ್ವಕ್ಕೆ ಯಾವ ಅರ್ಥವೂ ಉಳಿಯಲಿಲ್ಲ. ಕಣ್ಣು ಕೋರೈಸುವಂಥ ಸೆಟ್‌ಗಳು, ಅದೇ ಪೌರಾಣಿಕ ಕಥೆಗಳು, ಇಂಪಾದ ಹಾಡುಗಳು, ಸುಂದರ ಲೋಕೇಷನ್‌ಗಳಲ್ಲಿ ನೃತ್ಯಗಳು ಹೀಗೆ ಚಲನಚಿತ್ರಗಳು ವೃತ್ತಿ ನಾಟಕಗಳನ್ನು ಎಲ್ಲ ರೀತಿಯಲ್ಲಿ ಮೀರಿಸಿದವು. ಇನ್ನು ಪವಾಡಗಳನ್ನು ರಂಗಭೂಮಿಗಿಂತ ಚಲನಚಿತ್ರದಲ್ಲಿ ಹೆಚ್ಚು ಪರಿಣಾಮಕಾರಿಯಾಗಿ ತೋರಿಸಬಹುದಷ್ಟೇ.* [೨೫]

## ೪.೨. ಚಲನಚಿತ್ರ

ಶತಮಾನದ ವಿಸ್ಮಯ, ಜಗತ್ತಿನ ಅದ್ಭುತ ಎಂದು ಕರೆಸಿಕೊಂಡ ಸಿನೆಮಾ ಆಧುನಿಕ ಸಂವಹನ ಮಾಧ್ಯಮಗಳಲ್ಲೇ ಅತ್ಯಂತ ಜನಪ್ರಿಯ ಮಾಧ್ಯಮ ಎನಿಸಿದೆ. ಈ 'ಮಾಧ್ಯಮಗಳ ಚಕ್ರವರ್ತಿ', ರಂಗಭೂಮಿಯ ನೆರಳಿನಲ್ಲೇ ಹುಟ್ಟಿಕೊಂಡಿತಾದರೂ ಅದಕ್ಕೆ ಪರ್ಯಾಯವೆನಿಸಲಿಲ್ಲ. ತನ್ನ ವಿನೂತನತೆ, ತಾಂತ್ರಿಕತೆ ಹಾಗೂ ವಿಭಿನ್ನತೆಯ ಕಾರಣಗಳಿಂದ ನಾಟಕಗಳಿಗಿಂತಲೂ ಹೆಚ್ಚಿನ ವಿಸ್ಮೃತಿಯನ್ನು ಜನರಲ್ಲಿ ಮೂಡಿಸಿ ಅವರನ್ನು ಮಂತ್ರಮುಗ್ಧರನ್ನಾಗಿಸಿತು. ರಂಗಭೂಮಿಯ ಸಾರ ಹೀರಿಯೇ ತಾನೇ ಒಂದು ಸ್ವತಂತ್ರ ಕವಲಾಗಿ ಸಿನೆಮಾ ಬೆಳೆಯುವ ಹೊತ್ತಿಗೆ ರಂಗಭೂಮಿ ತನ್ನ ಔನ್ನತ್ಯವನ್ನು ಕಂಡಿತ್ತು. ಕನ್ನಡ ರಂಗಭೂಮಿಯಂತೂ ಚಲನಚಿತ್ರದ ಕೆಲವು ತಾಂತ್ರಿಕ ವ್ಯವಸ್ಥೆಯನ್ನೂ ಅಳವಡಿಸಿಕೊಂಡು ತನ್ನ ಉತ್ಕರ್ಷವನ್ನು ಕಂಡುಕೊಂಡದ್ದು ಗುಬ್ಬಿ ವೀರಣ್ಣನವರ ಕಾಲದಲ್ಲಿ (೧೯೩೦ರ ದಶಕ).

> *ಗುಬ್ಬಿ ಕಂಪೆನಿಯ ಇತಿಹಾಸದೊಡನೆ ಕನ್ನಡ ರಂಗಭೂಮಿ ಮತ್ತು ಕನ್ನಡ ಚಲನಚಿತ್ರ ಉದ್ಯಮದ ಹಲವಾರು ಸುವರ್ಣಾಧ್ಯಾಯಗಳು ಬೆಸೆದಿವೆ.* [೨೬]

ಎಂದು ಹೇಳಲಾಗಿದೆ. ರಂಗಭೂಮಿ ಹಾಗೂ ಸಿನಿಮಾ ನಡುವೆ ಇಂತಹ ಬೆಸುಗೆ ಸಾಧ್ಯವಾಯಿತೇ ಹೊರತು, ಸಿನಿಮಾ ರಂಗಭೂಮಿಗೆ ಬದಲಿಯಾಗಿ ಎಂದೂ ತನ್ನ ಅಸ್ತಿತ್ವ ರೂಪಿಸಿಕೊಳ್ಳಲಿಲ್ಲ. ಅವೆರಡೂ ಪರಸ್ಪರ ಪೂರಕವಾಗಿ ಒಂದಷ್ಟು ದೂರ ಜೊತೆಜೊತೆಗೇ ಕ್ರಮಿಸಿದವು ಎನ್ನಬಹುದು.

ಸಿನಿಮಾ, ರಂಗಭೂಮಿ ಎರಡೂ ಪರಸ್ಪರ ಬದಲಿ ಮಾರ್ಗಗಳಲ್ಲ ಎಂಬುದನ್ನು ಹಲವು ವಿಮರ್ಶಕರು ಒಪ್ಪುತ್ತಾರೆ.

> *ಯಾವುದೇ ಒಂದು ಮಾಧ್ಯಮ ಇನ್ನೊಂದನ್ನು replace ಮಾಡಲು ಸಾಧ್ಯವೇ ಇಲ್ಲ. ಒಂದು ಹಳೆಯ ಮಾಧ್ಯಮಕ್ಕೆ ಸಾಧ್ಯವಾಗದ ಅನೇಕ ಆಯಾಮಗಳನ್ನು ಮಾತ್ರ ಹೊಸ ಮಾಧ್ಯಮ ರೂಢಿಸಿಕೊಂಡಿರುತ್ತದೆ. ಹಾಗಾಗಿ ಚಲನಚಿತ್ರ ರಂಗಭೂಮಿಗೆ ಎಂದೂ ಒಂದು replacement ಅಲ್ಲ.* [೨೭]

ತನ್ನ ತಾಂತ್ರಿಕ ನಾವೀನ್ಯ, ವ್ಯಾಪಕತೆ, ಮನರಂಜನೆಯಂತಹ ಆಸ್ವಾದನೀಯ ಗುಣಗಳು ಹಾಗೂ ಅದರ ಭಾರೀ ವಿಸ್ಮಯಗೊಳಿಸುವ ಶಕ್ತಿಯ ಕಾರಣ ಚಲನಚಿತ್ರ ರಂಗಭೂಮಿಗಿಂತ ಭಿನ್ನವಾಗಿ ಒಂದು ಸುಪುಷ್ಟ ಆಧುನಿಕ ಸಂವಹನ ಮಾಧ್ಯಮವಾಗಿ ಬೆಳೆಯಿತು.

ಹೀಗೆ ಚಲನಚಿತ್ರ ರಂಗಭೂಮಿಯಿಂದ ಅನೇಕ ಸವಲತ್ತುಗಳನ್ನು ಬಳಸಿಕೊಂಡಿದ್ದರೂ ತನ್ನ ಸ್ವಂತ ಶಕ್ತಿಯ ಆಧಾರದ ಮೇಲೆ ಹೆಮ್ಮರವಾದದ್ದು ಗಮನಾರ್ಹ.

> *ಚಲನಚಿತ್ರವು ರಂಗಭೂಮಿಯಿಂದ ಕೆಲವೊಂದು ಪರಿಕರಗಳನ್ನು ಪಡೆದುಕೊಂಡಿರಬಹುದು. ಆದರೆ ಅದು ರಂಗಭೂಮಿಗಿಂತ ತುಂಬ ಭಿನ್ನವಾದ ಮಾಧ್ಯಮ. ರಂಗಭೂಮಿ ಒಂದು ನಿರ್ದಿಷ್ಟ ಘಟ್ಟವನ್ನು ತಲುಪಿದ್ದ ಸಾಂಸ್ಕೃತಿಕ ಸಂದರ್ಭವೊಂದರಲ್ಲಿ ಚಲನಚಿತ್ರ ಜನ್ಮ ತಾಳಿತು. ಸಹಜವಾಗಿಯೇ ಅದು ರಂಗಭೂಮಿಯನ್ನು ಅನುಕರಿಸಲಾರಂಭಿಸಿತು* [೨೮]

ಎನ್ನುವ ಸಂಶೋಧಕರ ಹೇಳಿಕೆ ನಮ್ಮ ವಾದವನ್ನು ಪುಷ್ಟೀಕರಿಸಿದೆ.

೧೮೬೯ರಲ್ಲಿ ಅಮೆರಿಕದಲ್ಲಿ ಸೆಲ್ಯೂಲೋಸ್‌ನ ಒಂದು ವಿಧವಾದ ಸೆಲ್ಯೂಲಾಯ್ಡ್ ಅನ್ನು ತಯಾರಿಸಿದಾಗ, ಅದು ಒಂದು ಹೊಸ ಮಾಯಾಜಗತ್ತನ್ನೇ ಸೃಷ್ಟಿಸಬಹುದೆಂದು ತಿಳಿದಿರಲಿಲ್ಲ. ಮೊದಲು ಅದು ಛಾಯಾಚಿತ್ರಕ್ಕೆ ಫಿಲ್ಮ್ ಆಗಿ ಬಳಕೆಯಾಯಿತು. ೧೮೮೪ರಲ್ಲಿ ಫಿಲ್ಮ್‌ರೋಲ್ ತಯಾರಾಗಿ, ಅದರ ಮರುವರ್ಷವೇ, ೧೮೮೫ರಲ್ಲಿ ಜಾರ್ಜ್ ಈಸ್ಟ್‌ಮನ್, ನ್ಯೂಯಾರ್ಕ್‌ನ ರೋಚೆಸ್ಟೆರ್‌ನಲ್ಲಿ ವಿಶ್ವದ ಮೊದಲ ಛಾಯಾಚಿತ್ರ ಕೈಗಾರಿಕೆಯನ್ನು ಸ್ಥಾಪಿಸಿದ. ಸ್ಥಿರಚಿತ್ರ ಕ್ಯಾಮೆರಾದ ಮೊದಲ ರೋಲ್-ಕೊಡ್ಯಾಕ್ ಅನ್ನು ಈಸ್ಟ್‌ಮನ್ ಕಂಪೆನಿ ೧೮೮೮ರಲ್ಲಿ ವಿಶ್ವ ಮಾರುಕಟ್ಟೆಗೆ ಅರ್ಪಿಸಿತು. ಅಲ್ಲಿಂದಾಚೆಗೆ ಇಪ್ಪತ್ತನೆ ಶತಮಾನದ ಆರಂಭದಲ್ಲಿ ಛಾಯಾಚಿತ್ರಕಲೆ ಎಲ್ಲರಿಗೂ ತಿಳಿದ, ಅತ್ಯಂತ ಮುಖ್ಯ ಕೈಗಾರಿಕೆಯಾಗಿ ಬಿಟ್ಟಿತು.

ಮುದ್ರಣ ಕಲೆಯ ಉಗಮ, ಪತ್ರಿಕೋದ್ಯಮದಂತಹ ವಿನೂತನ, ವಿಸ್ತೃತವಲಯದ ಹೆಬ್ಬಾಗಿಲು ತೆರೆದಂತೆ, ಸೆಲ್ಯೂಲಾಯ್ಡ್ ಆವಿಷ್ಕಾರ ಚಲನಚಿತ್ರದಂತಹ ವಿಸ್ಮಯಕಾರಿ, ವಿಭ್ರಾಂತ ಜಗತ್ತನ್ನೇ ಅನಾವರಣಗೊಳಿಸಿತು. ಅನೇಕ ಪ್ರಯೋಗಗಳಿಗೆ ಹೆಸರಾದ ವಿಜ್ಞಾನಿ ಥಾಮಸ್ ಅಲ್ವಾ ಎಡಿಸನ್ ೧೮೯೧ ರಲ್ಲಿ ಪ್ರದರ್ಶಕ ಸಾಧನವೊಂದನ್ನು ತಯಾರಿಸಿದ. ಅದೇ ಕಲ್ಯಾಡೋಸ್ಕೋಪ್. ಈ ಸಾಧನದೊಳಗಿನ ತೆರೆಯ ಮೇಲೆ ಮೂಡುವ ಬಿಂಬಗಳನ್ನು ಒಮ್ಮೆಗೆ ಒಬ್ಬ ವ್ಯಕ್ತಿ ಮಾತ್ರ 'ಇಣುಕಿ ನೋಡುವ' (Peep Show) ಡಬ್ಬ ಇದಾಗಿತ್ತು. ಇದನ್ನು ಕಂಡುಹಿಡಿದ ಸ್ವಾಮ್ಯವನ್ನು ತಾನೇ ಪಡೆಯಬಯಸುತ್ತಾನಾದರೂ ಎಡಿಸನ್ ಇದು ಹೆಚ್ಚು ಆರ್ಥಿಕ ಲಾಭ ನೀಡುವುದಿಲ್ಲ ಎಂದು ಭಾವಿಸಿ ಅದರ ಸುಧಾರಣೆಗೆ ಕೈಹಾಕುವುದಿಲ್ಲ ಎಂದು ಇತಿಹಾಸದಿಂದ ತಿಳಿದು ಬರುತ್ತದೆ. ಆದರೆ ಅದೇ ಕಲ್ಯಾಡೋಸ್ಕೋಪ್‌ನ ಸಂಶೋಧನೆ ಮೂಲಕ ಕ್ಯಾಮೆರಾ ತಯಾರಿಕೆಗೆ ದಾರಿ ಮಾಡಿಕೊಟ್ಟ ಎನ್ನುವುದು ಸ್ಪಷ್ಟವಾಗಿದೆ. ಮತ್ತೊಂದೆಡೆ ಕೈಗಾರಿಕಾ ಕ್ರಾಂತಿ ನಂತರದ ಪ್ರಭಾವದಿಂದಾಗಿ ಡೆನ್ಮಾರ್ಕ್, ರಷ್ಯಾ, ಬ್ರಿಟನ್, ಬೆಲ್ಜಿಯಂ, ಫ್ರಾನ್ಸ್, ಜರ್ಮನಿ ಮತ್ತು ಸಂಯುಕ್ತ ರಾಷ್ಟ್ರಗಳಲ್ಲಿ ವಿಜ್ಞಾನಿಗಳು ಸಂಶೋಧಕರು ಬಣ್ಣದ ಚಿತ್ರಗಳು ಅಥವಾ ಛಾಯಾಚಿತ್ರಗಳಿಗೆ ಚಲನೆ ನೀಡುವ ಸಾಧನಗಳ ತಯಾರಿಕೆಗೆ ತೊಡಗಿದ್ದರು. ಈ ಸಾಧನಗಳ ಬಳಕೆಯಿಂದ ಸ್ಥಿರಚಿತ್ರಗಳು ಇಡಿಯಾಗಿ (ಸ್ಲೈಡ್‌ನಂತೆ) ತೆರೆಯ ಮೇಲೆ ಮೂಡಿ ಹೋಗುತ್ತಿದ್ದವೇ ಹೊರತು, ಚಿತ್ರಗಳಲ್ಲಿದ್ದ ವಸ್ತುಗಳಿಗೆ ಚಲನೆ ಇರುತ್ತಿರಲಿಲ್ಲ.

ಚಿತ್ರಗಳಲ್ಲಿನ ವಸ್ತುಗಳೂ ಚಲಿಸುವಂತೆ ಮಾಡಿದವರು ಲ್ಯೂಮಿಯೇರ್ ಸೋದರರು. ಫ್ರಾನ್ಸ್‌ನ ಲ್ಯೂಯಿ ಲ್ಯೂಮಿಯೇರ್ ಮತ್ತು ಆಗಸ್ಟ್ ಲ್ಯೂಮಿಯೇರ್ ೧೮೯೫ರಲ್ಲಿ ಲಿ ಸಿನೆಮಾಟೋಗ್ರಾಫ್ ಸಾಧನವನ್ನು ಜಗತ್ತಿಗೆ ನೀಡುವಲ್ಲಿ ಯಶಸ್ವಿಯಾದರು.




ಲ್ಯೂಮಿಯೇರ್ ಸೋದರರು








ಲಿ ಸಿನೆಮಾಟೋಗ್ರಾಫ್ ಸಾಧನ

ಇದರಲ್ಲಿ ಕ್ಯಾಮೆರಾ, ಸರಿದೂರಕ್ಕೆ ಬಿಂಬಗಳನ್ನು ರವಾನಿಸುವ ಒಂದು ಪ್ರೊಜೆಕ್ಟರ್, ಆ ಬಿಂಬಗಳನ್ನು ಹಿಡಿದುಕೊಳ್ಳಲು ಒಂದು ಪರದೆ ಅಳವಡಿಸಲಾಗಿತ್ತು. **ಸಲೋನ್ ಇಂಡಿಯನ್** ಚಿತ್ರದ ಮೊದಲ ಸಾರ್ವಜನಿಕ ಪ್ರಾತ್ಯಕ್ಷಿಕೆಯನ್ನು ೧೮೯೫ರ ಡಿಸೆಂಬರ್ ೨೮ರಂದು ಪ್ಯಾರಿಸ್ಸಿನಲ್ಲಿ ನೀಡಲಾಯಿತು.



**ಸಲೋನ್ ಇಂಡಿಯನ್ ಚಿತ್ರದ ಒಂದು ದೃಶ್ಯ**

**ಸಲೋನ್ ಇಂಡಿಯನ್ ಚಿತ್ರದ ಜಾಹೀರಾತು**

LE CINÉMATOGRAPHE

SALON INDIEN

GRAND CAFÉ

*14, Boulevard des Capucines, 14*

PARIS

*Cet appareil, inventé par MM. Auguste et Louis Lumière, permet de recueillir, par des séries d'épreuves instantanées, tous les mouvements qui, pendant un temps donné, se sont succédé devant l'objectif, et, de reproduire ensuite ces mouvements en projetant, grandeur naturelle, devant une salle entière, leurs images sur un écran.*

SUJETS ACTUELS

| | |
|---|---|
| 1 La Sortie de l'Usine LUMIÈRE à Lyon. | 5. Les Forgerons. |
| 2. La Voltige. | 6. Le Jardinier. |
| 3. La Pêche aux Poissons Rouges. | 7. Le Repas. |
| 4. Le Débarquement du Congrès de Photographie à Lyon. | 8. Le Saut à la Couverture. |
| | 9. La Place des Cordeliers à Lyon. |
| | 10. La Mer. |

ನೆರಳುಗಳಿಗಿಂತ ಭಿನ್ನವಾಗಿ ಸಜೀವ ವಸ್ತುಗಳಂತೆ ದೃಶ್ಯಗಳಲ್ಲಿ ಪಾತ್ರಗಳು ಚಲಿಸುತ್ತಿದ್ದದ್ದು ಸಿನಿಮಾಟೋಗ್ರಾಫ್‌ನ ಅಪಾರ ಯಶಸ್ಸಿಗೆ ಕಾರಣವಾಯಿತು. ಪ್ರದರ್ಶನಕ್ಕೆ ದೊರಕಿದ ಪ್ರತಿಕ್ರಿಯೆಯಿಂದಾಗಿ ಉತ್ತೇಜಿತರಾದ ಲ್ಯೂಮಿಯೇರ್ ಸೋದರರು ಜಗತ್ತಿನ ಪ್ರಮುಖ ದೇಶಗಳಿಗೆ ತೆರಳಿ ಪ್ರದರ್ಶನಗಳನ್ನು ನೀಡುತ್ತಾ ೧೮೯೬ರಲ್ಲಿ ಭಾರತಕ್ಕೂ ಬಂದರು. ಹೀಗೆ 'ಸಿನೆಮಾ' ಭಾರತಕ್ಕೆ ನುಸುಳಿತು; ಸುಭದ್ರ ನೆಲೆಯನ್ನೂ ಕಂಡುಕೊಂಡಿತು.

## ಭಾರತದಲ್ಲಿ ಚಲನಚಿತ್ರ

ಮೂಲತಃ ಭಾರತ ನಾಟಕಗಳ ನಾಡು. ಇಲ್ಲಿನ ಏಳು ಲಕ್ಷ ಹಳ್ಳಿಗಳಲ್ಲಿ ಬಹುತೇಕ ಎಲ್ಲೆಡೆ ಜಾನಪದ ಪ್ರದರ್ಶಕ ಕಲೆಗಳು ಮನೆ ಮಾಡಿವೆ. ಗೊಂಬೆಯಾಟ, ನೃತ್ಯ, ನಾಟಕ, ಭಜನೆ-ಭಕ್ತಿ ಕುಣಿತಗಳಂತಹ ಹಲಬಗೆಯ ದೃಶ್ಯ, ಶ್ರವ್ಯ ಕಲೆಗಳು ಸಂವಹನೆಯ ಮೂಲಾಧಾರಗಳಾಗಿವೆ. ಜಾತ್ರೆ, ಮೇಳ-ಮೆರವಣಿಗೆಗಳಂತಹ ಜನದಟ್ಟಣೆಯ ಸಂದರ್ಭಗಳಲ್ಲಿ ಸಮೂಹ ಸಂವಹನೆಯ ಕೈಂಕರ್ಯ ನಡೆಸಿವೆ. ಅದರಲ್ಲೂ ರಾಮಾಯಣ-ಮಹಾಭಾರತದಂತಹ ಮಹಾಕಾವ್ಯಗಳು, ಪುರಾಣ-ಪುಣ್ಯ ಕಥೆಗಳು, ಐತಿಹ್ಯ-ಇತಿಹಾಸಗಳ ಆವರಣದಿಂದ ಸಂದೇಶಗಳನ್ನು ಹೊತ್ತು ತಂದಿವೆ. ಭಕ್ತಿ ಮಾರ್ಗದಲ್ಲಿ, ಪಾಪ-ಪುಣ್ಯಗಳ ನೆಲೆಯಲ್ಲಿ ಆತ್ಮಾವಲೋಕನದ, ಜ್ಞಾನೋದ್ದೀಪನದ ಜ್ಯೋತಿ ಬೆಳಗಿವೆ; ಸಮಾಜ ಸುಧಾರಣೆಯ ಕಿಚ್ಚು ಹಚ್ಚಿವೆ.

ಇಂತಹ ಪ್ರದರ್ಶಕ ಕಲೆಗಳ ನಾಡಿಗೆ ೧೮೯೬ರಲ್ಲಿ ಸಿನೆಮಾ ಕಾಲಿಟ್ಟಾಗ ಪ್ರೇಕ್ಷಕರ ಅಭಾವವಿರಲಿಲ್ಲ. ಏಕೆಂದರೆ ಅದಕ್ಕೂ ಮೊದಲೇ ಭಾರತದಲ್ಲಿ 'ಮಾಯಾಲಾಂದ್ರ'ದ ನೆರಳು-ಬೆಳಕಿನಾಟ ತೆರೆಯ ಮೇಲಿನ ಚಿತ್ರಗಳ ಶಕೆಯನ್ನು ಪ್ರಾರಂಭಿಸಿತ್ತು. ಅದರಲ್ಲೂ ಬ್ರಿಟಿಷ್ ಮುಖಂಡರು, ಆಡಳಿತಗಾರರು ಹೆಚ್ಚಾಗಿದ್ದ ಸ್ಥಳಗಳಲ್ಲಿ ರಾಜಧಾನಿಗಳಲ್ಲಿ ಪಾಶ್ಚಾತ್ಯ ಪ್ರದರ್ಶನಕಾರರು ತಂತ್ರಜ್ಞಾನಾಧಾರಿತ ಪರಿಕರಗಳನ್ನು ಬಳಸಿ ಮನರಂಜನೆ ಒದಗಿಸುತ್ತಿದ್ದರು. ಅವುಗಳಲ್ಲಿ 'ಮಾಯಾಲಾಂದ್ರ'ವೂ ಒಂದು.

ಮಾಯಾಲಾಂದ್ರದ ಮೋಡಿಗೆ ಒಳಗಾದ ಮಹಾದೇವರಾವ್ ಪಟವರ್ಧನ್ 'ಶಾಂಬರಿಕ್ ಖರೋಲಿಕ್' ಎನ್ನುವ ಸಾಧನ ಸಿದ್ಧಪಡಿಸಿದರು. ಮೂರು ಕಂದೀಲು ಅಥವಾ ಲಾಂದ್ರಗಳನ್ನು, ಬಹುವರ್ಣದ ಸ್ಲೈಡ್‌ಗಳನ್ನು ಬಳಸಿ ಚಲಿಸುವ ಚಿತ್ರಗಳ ಮೊದಲ ಪ್ರಾತ್ಯಕ್ಷಿಕೆಯನ್ನು ೧೮೮೪ರಲ್ಲಿ ನೀಡುವ ಮೂಲಕ ಒಂದು ವ್ಯಾಪಾರವನ್ನೇ ಪ್ರಾರಂಭಿಸಿದರು. ಅವರ ಮಕ್ಕಳಾದ ರಾಮಚಂದ್ರರಾವ್ ಮತ್ತು ವಿನಾಯಕರಾವ್ ಅವರೂ ತಂದೆಯೊಂದಿಗೆ ಕೈಜೋಡಿಸಿ ಹಾಡು, ನಾಟಕೀಯತೆ, ಕಥಾ ಸ್ವರೂಪದ ನಿರೂಪಣೆಯಿದ್ದ ಏಳು ಚಿತ್ರಗಳನ್ನು ನಿರ್ಮಿಸಿದರು. ಸೆಲ್ಯೂಲಾಯ್ಡ್ ಫಿಲ್ಮ್‌ಗಳನ್ನು ಬಳಸಿರಲಿಲ್ಲ ಎನ್ನುವುದನ್ನು ಬಿಟ್ಟರೆ ಉಳಿದಂತೆ ಇದೇ 'ಸಿನಿಮಾ'ದ ರೀತಿ ಇತ್ತು. ೧೯೧೮ರವರೆಗೆ ಪಟವರ್ಧನ್ ತಂದೆ-ಮಕ್ಕಳು ಶಾಂಬರಿಕ್ ಖರೋಲಿಕ್‌ವನ್ನು ಉದ್ದಿಮೆಯಾಗಿ ನಡೆಸಿದರು.

ಈ ಮಧ್ಯೆ, ೧೮೯೬ರ ಮುಂಗಾರಿನಲ್ಲಿ ಫ್ರೆಂಚ್ ಸೋದರರು ಲಿ ಸಿನೆಮಾಟೋಗ್ರಾಫ್ ಅನ್ನು ಭಾರತಕ್ಕೆ ತಂದಾಗ ಅದನ್ನು ವೈಭವೀಕರಿಸಿ ಬಣ್ಣಿಸಲಾಯಿತು. ಜುಲೈ ೭ರ ಟೈಮ್ಸ್ ಆಫ್ ಇಂಡಿಯಾದ ಬೊಂಬಾಯಿ ಸಂಚಿಕೆಯಲ್ಲಿ "The marvel of the century, the wonder of the World" ಎಂದು ವರ್ಣಿಸಲಾಯಿತು. ಈ ಜಾಹೀರಾತಿನಂತಹ ಪ್ರಕಟಣೆಯಲ್ಲಿ ಸಿನಿಮಾ ಪ್ರದರ್ಶಿತವಾಗುವ ಸ್ಥಳ, ದಿನಾಂಕ, ವೇಳೆ ಮತ್ತು ಟಿಕೆಟ್ಟು ದರವನ್ನೂ ಬರೆಯಲಾಗಿತ್ತು.

THE MARVEL OF THE CENTURY.
THE WONDER OF THE WORLD.
LIVING PHOTOGRAPHIC PICTURES
IN
LIFE-SIZED REPRODUCTIONS
BY
MESSRS. LUMIERE BROTHERS.
CINEMATOGRAPHE.
A FEW EXHIBITIONS WILL BE GIVEN
AT
WATSON'S HOTEL
TO-NIGHT (7TH instant).
PROGRAMME will be as under:

1. Entry of Cinematographe.
2. Arrival of a Train.
3. The Sea Bath.
4. A Demolition
5. Leaving the Factory.
6. Ladies and Soldiers on Wheels.

The Entertainment will take place at 6, 7, 9, 10 p.m.
ADMISSION ONE RUPEE.

ಭಾರತದಲ್ಲಿ ಲಿ ಸಿನೆಮಾಟೋಗ್ರಾಫ್ : ಟೈಮ್ಸ್ ಆಫ್ ಇಂಡಿಯಾದ ಜಾಹೀರಾತು

ಬೊಂಬಾಯಿಯ ವ್ಯಾಟ್ಸನ್ ಹೋಟೆಲಿನಲ್ಲಿ ಸಿನಿಮಾಟೋಗ್ರಾಫ್ ಸಾಧನದ ಮೂಲಕ ಮೊದಲ ಐತಿಹಾಸಿಕ ಚಲನಚಿತ್ರ ಪ್ರದರ್ಶನ ನಡೆಯಿತು. ಮೂರು ದಿನಗಳ ಕಾಲ ನಡೆಯಬೇಕಿದ್ದ ಪ್ರದರ್ಶನ ವಾರಗಟ್ಟಲೆ ನಡೆದು ೧೮೯೬ರ ಜುಲೈ ೧೪ ರಂದು ಸ್ಥಳೀಯ ನಾಟಕ ಮಂದಿರಕ್ಕೆ ವರ್ಗಾವಣೆಯಾಯಿತು. ಆ ಮಂದಿರವನ್ನು ಕತ್ತಲೆ ಮಾಡಿ ಸಿನಿಮಾ ಥಿಯೇಟರ್ ಸ್ವರೂಪ ನೀಡಲಾಗಿತ್ತು. Arrival of a train, London dance girls, the sea bath, Storm at sea, parade of the guards, a demolition, leaving the factory ಮೊದಲಾದ ಚಿತ್ರಗಳು ಪ್ರದರ್ಶಿತಗೊಂಡವು.

ಈ ಚಿತ್ರವನ್ನು ನೋಡಿ ಪ್ರೇರೇಪಿತರಾದ ಮಹಾರಾಷ್ಟ್ರದ ಛಾಯಾಚಿತ್ರಕಾರ ಹರಿಶ್ಚಂದ್ರ ಎಸ್. ಭಟ್ವಾಡೇಕರ್ (ಸಾವೆದಾದ) ೧೮೯೯ರಲ್ಲಿ the wrestler ಎನ್ನುವ ವರದಿ ಚಿತ್ರ ತಯಾರಿಸಿದರು. ಮೊದಲ ಭಾರತೀಯ ಚಿತ್ರ ನಿರ್ಮಾತೃ ಎನಿಸಿದರು. ೧೯೦೧ ರಲ್ಲಿ Return of the Wrangler paranjape ಎನ್ನುವ ಭಾರತದ ಮೊದಲ ನ್ಯೂಸ್‌ರೀಲ್ (ಸುದ್ದಿ ಚಿತ್ರ)ವನ್ನೂ ಮಾಡಿದರು. ಅಷ್ಟು ಹೊತ್ತಿಗಾಗಲೇ ಚಲನಚಿತ್ರ ರಂಗದಲ್ಲಿ ಸಾಕಷ್ಟು ಬೆಳವಣಿಗೆ ಸಾಧಿಸಿದ್ದ ಅಮೆರಿಕ, ಇಂಗ್ಲೆಂಡ್‌ನಲ್ಲಿ ತಯಾರಾದ ಚಿತ್ರಗಳೂ ಭಾರತದಲ್ಲಿ ಪ್ರದರ್ಶನಕ್ಕಾಗಿ ಆಮದಾಗುತ್ತಿದ್ದು, ಭಾರತೀಯರಿಗೆ ಆಸಕ್ತಿಯನ್ನೂ, ಐಡಿಯಾಗಳನ್ನೂ ಕೊಡುತ್ತಿದ್ದವು.

೧೯೧೯ರಲ್ಲಿ 'ಪುಂಡಲೀಕ' ಎನ್ನುವ ಸಂತನೋರ್ವನನ್ನು ಕುರಿತ ಕಥಾ ಚಿತ್ರ ತಯಾರಿಕೆಯ ಕೆಲಸ ಪ್ರಾರಂಭಿಸಿದ ಮೊದಲ ಭಾರತೀಯ ಆರ್.ಜಿ. ಟೋರ್ನೆ. ಮರಾಠಿಯ ಜನಪ್ರಿಯ ನಾಟಕವಾಗಿದ್ದ 'ಪುಂಡಲೀಕ'ವನ್ನು ಯದ್ವತ್ತಾಗಿ ಸೆಲ್ಯೂಲಾಯ್ಡ್ ಮೇಲೆ ತಂದು ೧೯೧೨ರಲ್ಲಿ ಮೊದಲ ಪ್ರದರ್ಶನ ನೀಡಲಾಯಿತು. ಈ ಚಿತ್ರದ ಚಿತ್ರೀಕರಣದ ತಾಂತ್ರಿಕ ಹೊಣೆ ಹೊತ್ತವರಲ್ಲಿ ಬಹುಮಂದಿ ವಿದೇಶಿಯರೇ ಇದ್ದುದರಿಂದ ಇದು ಮೊದಲ ಸಂಪೂರ್ಣ ಭಾರತೀಯ ಸಿನಿಮಾ ಎನಿಸಿಕೊಳ್ಳಲಾರದೆ ಹೋಯಿತು. ಅಲ್ಲಿಂದಾಚೆಗೆ ದಶಕಗಳವರೆಗೂ ಮರಾಠಿ ನಾಟಕಗಳನ್ನು ಚಲನಚಿತ್ರಗಳಾಗಿ ನಿರ್ಮಿಸುವ ಕೆಲಸ ನಡೆಯಿತು.

೧೯೧೩ರಲ್ಲಿ ತೆರೆಕಂಡರೂ 'ರಾಜಾ ಹರಿಶ್ಚಂದ್ರ' ಮೊದಲ ಭಾರತೀಯ ಸಿನಿಮಾ ಎಂಬ ಹೆಗ್ಗಳಿಕೆ ಗಳಿಸಲು ಅದು ಸಂಪೂರ್ಣವಾಗಿ ಸ್ವತಂತ್ರ ಕಥೆಯಾಧರಿಸಿದ, ಸ್ವದೇಶೀ ಜನರೇ ತಯಾರಿಸಿದ ಚಿತ್ರವಾಗಿದ್ದದ್ದೇ ಕಾರಣ ಎನ್ನಬಹುದು. ದಾದಾ ಸಾಹೇಬ್ ಫಾಲ್ಕೆ ಹೆಸರಿನಿಂದ ಸುಪ್ರಸಿದ್ಧರಾದ ದುಂಡಿರಾಜ್ ಗೋವಿಂದ ಫಾಲ್ಕೆ ೧೫,೦೦೦ ರೂಪಾಯಿ ವೆಚ್ಚದಲ್ಲಿ ನಿರ್ಮಿಸಿದ ೫೦ ನಿಮಿಷದ ಈ ಮೂಕಿ ಚಿತ್ರ ಮೊದಲ ಪೂರ್ಣಪ್ರಮಾಣದ ಭಾರತೀಯ ಕಥಾಚಿತ್ರ ಎನಿಸಿಕೊಂಡಿತು. ೧೯೧೩ರ ಮೇ ೩ ರಂದು ಇದನ್ನು ಪ್ರದರ್ಶಿಸುವ ಮೂಲಕ ದಾದಾ ಸಾಹೇಬ್ ಫಾಲ್ಕೆ ಭಾರತದಲ್ಲಿ ಚಿತ್ರೋದ್ಯಮಕ್ಕೆ ಅಡಿಗಲ್ಲು ಹಾಕಿದರು.



**ಮೊದಲ ಭಾರತೀಯ ಚಿತ್ರ ರಾಜಾ ಹರಿಶ್ಚಂದ್ರದ ಒಂದು ದೃಶ್ಯ**



**ದಾದಾ ಸಾಹೇಬ್ ಫಾಲ್ಕೆ**

ಫಾಲ್ಕೆಯವರು ಭಾರತೀಯ ಚಿತ್ರರಂಗಕ್ಕೆ ನೀಡಿದ ಕೊಡುಗೆ ಅಮೂಲ್ಯವಾದದ್ದು. ಅವರು ಮೂಕಿ ಹಾಗೂ ಟಾಕಿ ಯುಗದಲ್ಲಿ ಸುಮಾರು ೧೩೦ಕ್ಕೂ ಹೆಚ್ಚು ಚಿತ್ರಗಳನ್ನು ತಯಾರಿಸಿದರು. ಅವುಗಳಲ್ಲಿ ೧೦೨ ದೊಡ್ಡ ಪ್ರಮಾಣದ ಚಿತ್ರಗಳು, ೩೦ ಸಣ್ಣ ಪ್ರಮಾಣದ ಚಿತ್ರಗಳೂ ಸೇರಿವೆ. ಸಾವಿತ್ರಿ, ಭಸ್ಮಾಸುರ-ಮೋಹಿನಿ, ಸೀತೆ, ಕಾಳೀಯಮರ್ದನ, ಲಂಕಾದಹನ, ಕೃಷ್ಣ ಜನ್ಮ ಇವು ಫಾಲ್ಕೆಯವರ ಚಿತ್ರಗಳಲ್ಲಿ ಪ್ರಮುಖವಾದವು. ಸಿನಿಮಾ ತಯಾರಿಕೆಯಷ್ಟೇ ಅಲ್ಲದೆ ಚಿತ್ರ ನಿರ್ಮಾಣಕ್ಕೆ ಬೇಕಾದ ಸ್ಟುಡಿಯೋ, ಪ್ರಯೋಗಾಲಯ ಮುಂತಾದ ಮೂಲಸೌಲಭ್ಯಗಳನ್ನೂ ಅವರು ಕಲ್ಪಿಸಿದರು. ಕಡೆಗೆ ಚಿತ್ರನಿರ್ಮಾಣದಲ್ಲಿ ಆರ್ಥಿಕವಾಗಿ ಭಾರೀ ನಷ್ಟ ಅನುಭವಿಸಿದರು. ಹೀಗೆ ತಮ್ಮದೆಲ್ಲವನ್ನೂ ಕಳೆದುಕೊಂಡು ಭಾರತೀಯ ಚಿತ್ರೋದ್ಯಮವನ್ನು ಬೆಳೆಸಿದ ದಾದಾ ಸಾಹೇಬ್ ಫಾಲ್ಕೆಯವರ ಹೆಸರಿನಲ್ಲಿ ಭಾರತ ಸರ್ಕಾರ ಈಗಲೂ ಚಿತ್ರರಂಗದ ಅತ್ಯುನ್ನತ ಪ್ರಶಸ್ತಿ ನೀಡುತ್ತಿದೆ.

೧೯೨೭ರಿಂದ ವಾಕ್ಚಿತ್ರಗಳ ಯುಗ ಆರಂಭವಾಗುವ ವೇಳೆಗಾಗಲೇ ಬ್ರಿಟಿಷ್ ಆಡಳಿತಗಾರರು ಸಿನಿಮಾಟೋಗ್ರಾಫಿಕ್ ಕಾಯ್ದೆಯನ್ನು ಜಾರಿಗೆ ತಂದದ್ದು ಭಾರತೀಯ ಸಾಮಾಜಿಕ-ರಾಜಕೀಯ ಸನ್ನಿವೇಶಕ್ಕೆ ಹೊಸ ತಿರುವು ನೀಡಿತು. ಸ್ವಾತಂತ್ರ್ಯ ಸಮರ ತೀವ್ರಗೊಳ್ಳುತ್ತಿದ್ದ ಕಾಲವದು. ಹೋರಾಟಗಾರರು ತಮ್ಮ ರಾಷ್ಟ್ರೀಯ ವಾದವನ್ನು ಸಿನೆಮಾಗಳ ಮೂಲಕ ಜನರಲ್ಲಿ ಬಿತ್ತಬಹುದೆಂಬ ಶಂಕೆ ಬ್ರಿಟಿಷ್ ಆಡಳಿತಗಾರರನ್ನು ಕಾಡತೊಡಗಿತು. ಅಮೆರಿಕ, ಇಂಗ್ಲೆಂಡ್ ಮೊದಲಾದ ದೇಶಗಳಿಂದ ಆಮದಾಗುತ್ತಿದ್ದ ಚಿತ್ರಗಳನ್ನು ತಡೆಹಿಡಿಯುವ ಹಾಗೂ ಭಾರತೀಯ ಸಿನಿಮಾಗಳು ಒಳಗೊಳ್ಳುವ ಸಂದೇಶದ ಮೇಲೆ ಹತೋಟಿ ಸಾಧಿಸುವ ದೃಷ್ಟಿಯಿಂದ ೧೯೧೮ರಲ್ಲಿ ಜಾರಿಗೆ ಬಂದ ಸಿನಿಮಾಟೋಗ್ರಾಫಿಕ್ ಕಾಯ್ದೆ ೧೯೨೦ರಲ್ಲಿ ಕಾನೂನಿನ ಸ್ವರೂಪ ಪಡೆಯಿತು. ಅಲ್ಲಿಂದ ಚಲನಚಿತ್ರಗಳ ಸೆನ್ಸಾರ್ ಆರಂಭವಾಯಿತು.

ವಾಕ್ಚಿತ್ರಗಳ ಯುಗ ಪ್ರಾರಂಭವಾದದ್ದು ೧೯೨೭ರಲ್ಲಿ. ಭಾರತದಲ್ಲಿ ಮೊದಲು ತೆರೆ ಕಂಡ ವಾಕ್ಚಿತ್ರ 'ದಿ ಮೆಲೊಡಿ ಆಫ್ ಲವ್'. ಆರ್ದೇಶಿರ್ ಇರಾನಿ ೧೯೩೧ರಲ್ಲಿ ನಿರ್ಮಿಸಿದ 'ಆಲಂ ಅರಾ' ಮೊದಲ ಭಾರತೀಯ ವಾಕ್ಚಿತ್ರ. ೧೨ ಹಾಡುಗಳನ್ನು ಒಳಗೊಂಡಿದ್ದ ಈ ಚಿತ್ರದ ಮೊದಲ ಪ್ರದರ್ಶನವನ್ನು ಬೊಂಬಾಯಿಯ ಮೆಜೆಸ್ಟಿಕ್ ಥಿಯೇಟರ್‌ನಲ್ಲಿ ಆಗಿನ ಗವರ್ನರ್ ಚಾಲನೆಗೊಳಿಸಿದರು. ವಿಶೇಷವೆಂದರೆ ೧೯೩೭ರಲ್ಲಿ ವೆನಿಸಿನಲ್ಲಿ ನಡೆದ ೫ನೇ ಅಂತರರಾಷ್ಟ್ರೀಯ ಚಲನಚಿತ್ರೋತ್ಸವದಲ್ಲಿ ಮರಾಠಿಯ 'ಸಂತ ತುಕಾರಾಂ' ವರ್ಷದ ಶ್ರೇಷ್ಠ ಚಿತ್ರ ಕೀರ್ತಿಗೆ ಪಾತ್ರವಾಯಿತು. ತದನಂತರದಲ್ಲಿ ಅನೇಕ ನಿರ್ದೇಶಕರು, ನಟ-ನಟಿಯರು, ಹಿನ್ನೆಲೆ ಸಂಗೀತಗಾರರು, ತಂತ್ರಜ್ಞರು ಭಾರತೀಯ ನೆಲದಲ್ಲೇ ಹುಟ್ಟಿಬಂದರು. ವಿ. ಶಾಂತಾರಾಂ, ಮೆಹಬೂಬ್ ಖಾನ್, ಹಿಮಾಂಶುರಾಯ್, ಧೀರೇನ್ ಗಂಗೂಲಿ, ಜೆ.ಬಿ.ಎಚ್. ವಾಡಿಯಾ, ಕೆ.ಎ. ಅಬ್ಬಾಸ್, ಸತ್ಯಜಿತ್ ರೇ, ಕೆ. ಸುಬ್ರಹ್ಮಣ್ಯಂ ಗಮನ ಸೆಳೆದ ನಿರ್ದೇಶಕರೆನಿಸಿದರು. ಕಲ್ಕತ್ತಾ ನಾಟಕ ವಲಯದಲ್ಲಿ ಭಾರೀ ಜನಪ್ರಿಯತೆ ಗಳಿಸಿದ್ದ ಜೆ.ಎಫ್. ಮದನ್ ಭಾರತದ ಮೊದಲ ಸಿನಿಮಾ ನಿರ್ಮಾಣ ಕಂಪೆನಿ Elphinstone Bioscope Company ಯನ್ನು ಸ್ಥಾಪಿಸಿದರು. ಅಲ್ಲಿಂದಾಚೆಗೆ ಭಾರತೀಯ ಸಿನೆಮಾ ಅತ್ಯಂತ ಪ್ರಭಾವಿ ಜನಪ್ರಿಯ, ಸೃಜನಶೀಲ ಸಮೂಹ ಮನರಂಜನಾ ಮಾಧ್ಯಮವಾಗಿ ಸುಭದ್ರ ನೆಲೆ ಹೊಂದಿತು.

ಸ್ವಾತಂತ್ರ್ಯ ಪೂರ್ವದಲ್ಲೇ ಭಾರತೀಯ ಚಿತ್ರರಂಗ ಅನೇಕ ದಿಟ್ಟ ಹೆಜ್ಜೆಗಳನ್ನು ಇಟ್ಟಿರುವುದು ಸ್ಪಷ್ಟವಾಗಿದೆ. ೧೯೪೮ರಲ್ಲಿ ಚಲನಚಿತ್ರಕ್ಕಾಗಿ ಒಂದು ವಿಭಾಗವನ್ನೇ ಕೇಂದ್ರ ಸರ್ಕಾರ ತೆರೆದಿರುವುದು ಈ ನಿಟ್ಟಿನಲ್ಲಿ ಮತ್ತೊಂದು ಮಹತ್ವದ ಹೆಜ್ಜೆ. ಸ್ವಾತಂತ್ರ್ಯೋತ್ತರ ಕಾಲದಲ್ಲಂತೂ ಭಾರತೀಯ ಚಿತ್ರರಂಗ ಅಭೂತಪೂರ್ವ ಯಶಸ್ಸನ್ನು ಸಾಧಿಸಿದೆ, ಜನಮನವನ್ನು ಗೆದ್ದಿದೆ ಎಂದು ಹೇಳುವುದಕ್ಕೆ ಇಂದು ನಮ್ಮ ಕಣ್ಣ ಮುಂದಿರುವ ಚಲನಚಿತ್ರೋದ್ಯಮವೇ ಸಾಕ್ಷಿ.

## ಸ್ವಾತಂತ್ರ್ಯಪೂರ್ವ ಭಾರತೀಯ ಸಿನಿಮಾರಂಗದ ಮುಖ್ಯಹೆಜ್ಜೆಗಳು

| | |
|---|---|
| ೧೮೯೬ ಜುಲೈ ೭ | ಭಾರತದಲ್ಲಿ ಮೊದಲ ಚಿತ್ರ ಪ್ರದರ್ಶನ |
| ೧೮೯೯ | ಮೊದಲ ಭಾರತೀಯ ಸಿನಿಮಾ ನಿರ್ಮಾಪಕನ ಉಗಮ - ಎಚ್.ಎಸ್. ಬಟ್ವಾಡೇಕರ್‌ರಿಂದ 'the wrestler' ವರದಿ ಚಿತ್ರ ನಿರ್ಮಾಣ |
| ೧೯೧೨ ಮೇ ೧೮ | ಭಾರತೀಯನಿಂದ ನಿರ್ಮಾಣಗೊಂಡ ಮೊದಲ ಕಥಾ ಚಿತ್ರ - 'ಪುಂಡಲೀಕ' ಪ್ರದರ್ಶನ |
| ೧೯೧೩ ಮೇ ೩ | ಮೊದಲ ಸಂಪೂರ್ಣ ಭಾರತೀಯ ಸುದೀರ್ಘ, ಸ್ವತಂತ್ರ ಚಿತ್ರ 'ರಾಜಾ ಹರಿಶ್ಚಂದ್ರ' ಪ್ರದರ್ಶನ |
| ೧೯೧೮ | ಸಿನಿಮಾಟೋಗ್ರಾಫಿಕ್ ಕಾಯ್ದೆ ಜಾರಿಗೆ |
| ೧೯೩೧ | ಮೊದಲ ಭಾರತೀಯ ವಾಕ್ಚಿತ್ರ 'ಆಲಂ ಅರಾ' ನಿರ್ಮಾಣ |
| ೧೯೩೭ | 'ಸಂತ ತುಕಾರಾಂ' ಚಿತ್ರಕ್ಕೆ ಅಂತರರಾಷ್ಟ್ರೀಯ ಪ್ರಶಸ್ತಿ |
| ೧೯೪೮ | ಕೇಂದ್ರ ಸರ್ಕಾರದ ಫಿಲ್ಮ್ ಡಿವಿಷನ್ ಸ್ಥಾಪನೆ |

ಭಾರತೀಯ ಚಲನಚಿತ್ರಗಳನ್ನು ಮೂರು ಪ್ರಮುಖ ವರ್ಗಗಳಾಗಿ ಗುರುತಿಸಬಹುದು.

- ೧೮೯೬- ೧೯೧೨ ಪ್ರಾರಂಭಿಕ ಯುಗ
- ೧೯೧೨- ೧೯೩೧ ಮೂಕಿ ಯುಗ
- ೧೯೩೧- ಈವರೆಗೆ ಟಾಕಿ ಯುಗ

೧೮೯೬-೧೯೧೨ರ ಪ್ರಾರಂಭಿಕ ಯುಗದಲ್ಲಿ ಹೆಚ್ಚಾಗಿ ಚಲನಚಿತ್ರ ಕಲೆಯನ್ನು, ಅದರ ಸಾಧ್ಯತೆಗಳನ್ನು ಕುರಿತ ಪ್ರಯೋಗಗಳೇ ನಡೆದಿರುವುದು ಇತಿಹಾಸದಿಂದ ತಿಳಿದು ಬರುತ್ತದೆ. ಈ ಅವಧಿಯಲ್ಲಿ ಕಥಾ ಚಿತ್ರಗಳಾಗಲೀ, ಮನರಂಜನೆಯ ದೃಷ್ಟಿಯಿಂದ ಸೃಷ್ಟಿಸಿದ ಚಿತ್ರಗಳಾಗಲಿ ಹುಟ್ಟಿಲ್ಲ. ಸಿನಿಮಾ ನಿರ್ಮಾಣದ ತಾಂತ್ರಿಕ ಸಾಧ್ಯತೆಗಳನ್ನು ಕಂಡುಹಿಡಿಯುವತ್ತಲೇ ಗಮನ ಹರಿಸಿರುವುದು ಸ್ಪಷ್ಟವಾಗಿದೆ.

೧೯೧೨-೧೯೩೧ರ ಮೂಕಿ ಯುಗದಲ್ಲೂ ಪ್ರಾಯೋಗಿಕ ನೆಲೆಯಲ್ಲೇ, ಪುರಾಣ-ಪುಣ್ಯಕಥೆಗಳಿಂದಾಯ್ದ ಕಥಾ ವಸ್ತುಗಳನ್ನು ತೆರೆಗೆ ತರಲಾಯಿತು. ಈ ಯುಗದ ಸಿನಿಮಾಗಳಿಗೆ ಕಥಾ ಹಂದರವಿದ್ದರೂ, ಮಾತಿಲ್ಲದೆ, ಹಾಡಿಲ್ಲದೆ ಮನರಂಜನೆಯ ದೃಷ್ಟಿಯಿಂದ ಅಪೂರ್ಣವಾಗಿರುತ್ತಿದ್ದವು. ಹೆಚ್ಚಾಗಿ ಜನಪ್ರಿಯ ನಾಟಕಗಳೇ ಸೆಲ್ಯೂಲಾಯ್ಡ್ ಮೇಲೆ ಚಿತ್ರಿತಗೊಂಡವು.

ವಾಕ್ಚಿತ್ರಗಳ ಯುಗದಲ್ಲಿ ೩೦ರ ದಶಕವೂ ಹೊಸ ಹೊಸ ಪ್ರಾಯೋಗಿಕ ಅಂಶಗಳನ್ನು ಸಿನಿಮಾಗೆ ಸೇರಿಸುವತ್ತ ಗಮನ ಹರಿಸಿದೆ. ಮಾತು, ಹಾಡು, ಬಣ್ಣ, ಮನರಂಜನೆ ಹೀಗೆ ಸೃಷ್ಟಿಶೀಲತೆಯನ್ನು, ಶಾಸ್ತ್ರೀಯತೆಯನ್ನು ಅಳವಡಿಸುವ ಪ್ರಯತ್ನ ನಡೆದಿದೆ. ೪೦ ರ ದಶಕದಲ್ಲಿ ಮನರಂಜನೆಯೇ ಮುಖ್ಯವಾಗಿ ಆ ಕಾಲಧರ್ಮಕ್ಕನುಗುಣವಾದ ರಾಷ್ಟ್ರೀಯತೆಯ ಸಂದೇಶಗಳನ್ನು

ಸಾರಲು ಈ ಮಾಧ್ಯಮ ಬಳಕೆಯಾಗಿದೆ. ೫೦ರ ದಶಕದ ಹೊತ್ತಿಗೆ ಸಿನಿಮಾ ರಂಗಕ್ಕೆ ಸಾಂಸ್ಕೃತಿಕ ಆಯಾಮ ದೊರಕಿದೆ. ೬೦ರ ದಶಕ ರಮ್ಯ ಚಿತ್ರಗಳ ನಿರ್ಮಾಣಕ್ಕೆ ಒತ್ತು ಕೊಟ್ಟಿದ್ದಲ್ಲದೆ ಸಿನಿಮಾಸ್ಕೋಪ್ ಹಾಗೂ ವರ್ಣ ಚಿತ್ರ ತಯಾರಿಕೆಗೆ ಪ್ರಾಶಸ್ತ್ಯನೀಡಿದೆ. ೭೦ರ ದಶಕ ವಾಣಿಜ್ಯಕ ಚಿತ್ರಗಳನ್ನೂ, ಹೊಸ ಅಲೆಯ ಕಲಾತ್ಮಕ ಚಿತ್ರಗಳನ್ನೂ ತೆರೆಗೆ ತಂದಿದೆ. ೮೦ರ ದಶಕದಲ್ಲಿ ಕಾಲಮಾನಕ್ಕೆ ಕಂಡು ಬಂದ ಜ್ವಲಂತ ಸಾಮಾಜಿಕ ಸಮಸ್ಯೆಗಳನ್ನು ಕಥಾವಸ್ತುವಾಗಿ ಹೊಂದಿದ ಚಿತ್ರಗಳಲ್ಲದೆ, ಅದರ ಹಿಂದಿನ ದಶಕದಲ್ಲೂ ಜನಪ್ರಿಯತೆ ಗಳಿಸಿದ್ದ ಅಂಶಗಳನ್ನೊಳಗೊಂಡ ಚಿತ್ರಗಳು ನಿರ್ಮಾಣವಾಗಿವೆ. ೮೦ರ ದಶಕದ ಕೊನೆಯ ಭಾಗದಿಂದ ೯೦ರ ದಶಕದಾದ್ಯಂತ ಚಲನಚಿತ್ರರಂಗ ದೂರದರ್ಶನವನ್ನು ಎದುರಾಳಿಯಾಗಿ ಎದುರಿಸಬೇಕಾದ ಸ್ಥಿತಿಯಲ್ಲಿತ್ತು. ವಿಡಿಯೋ ಕ್ಯಾಸೆಟ್‌ಗಳ ಬಳಕೆ ಹೆಚ್ಚಾಗಿ ಚಿತ್ರರಂಗ ಸೊರಗಿತು. ನಿರ್ಮಾಣಗೊಂಡ ಚಿತ್ರಗಳ ಸಂಖ್ಯೆ ಹೆಚ್ಚಾಗಿದ್ದರೂ, ವಸ್ತು ವಿಷಯಗಳಲ್ಲಿ ವಿಶೇಷತೆ ಕಂಡು ಬರಲಿಲ್ಲ. ತಾಂತ್ರಿಕತೆಯ ದೃಷ್ಟಿಯಿಂದ ಹಲಬಗೆಯ ತಂತ್ರ ಕೌಶಲ್ಯದ ಚಿತ್ರಗಳು ೩-ಡಿ ಚಿತ್ರ, ಅದ್ದೂರಿ ಚಿತ್ರಗಳು ಸೃಷ್ಟಿಯಾಗಿವೆ.

೧೯೨೦ರಲ್ಲಿ ದೇಶಾದ್ಯಂತ ೧೮ ಚಿತ್ರಗಳು ತಯಾರಾಗಿದ್ದರೆ, ಅದರ ಮರುವರ್ಷ ೧೯೨೧ರಲ್ಲಿ ೪೦ ಚಿತ್ರಗಳು ಸೃಷ್ಟಿಗೊಂಡವು. ೧೯೨೫ರಲ್ಲಿ ಅದಕ್ಕೆ ಎರಡು ಪಟ್ಟು ಅಂದರೆ ೮೦ ಚಿತ್ರಗಳು ನಿರ್ಮಾಣಗೊಂಡವು.

## ಕರ್ನಾಟಕದಲ್ಲಿ ಚಲನಚಿತ್ರ

ಹತ್ತೊಂಬತ್ತನೆ ಶತಮಾನದ ಅಂತ್ಯದಲ್ಲಿ ಭಾರತ ಪ್ರವೇಶಿಸಿ ೧೮೯೬ರಲ್ಲಿ ಈ ನೆಲದ ಕಸುವನ್ನೇ ಹೀರಿ 'ರಾಜಾ ಹರಿಶ್ಚಂದ್ರ'ದ ರೂಪದಲ್ಲಿ ಸಿನಿಮಾ ರಂಗ ಉಗಮಿಸಿತು. ನಂತರ ನಾಲ್ಕು ವರ್ಷಗಳಲ್ಲಿ ದಕ್ಷಿಣ ಭಾರತದ ಮೊದಲ ಸಿನೆಮಾ 'ಕೀಚಕ ವಧಂ' (೧೯೧೭) ನಿರ್ಮಾಣಗೊಳ್ಳುವುದರೊಂದಿಗೆ ಭಾಷಾ ಚಿತ್ರಗಳು ದಕ್ಷಿಣ ಭಾರತದಲ್ಲಿ ಮೊಳೆಯತೊಡಗಿದವು.

ಕನ್ನಡ ನಾಡು ಚಿತ್ರರಂಗವನ್ನು ಮನರಂಜನೆಗೂ, ವಿಚಾರ ಪ್ರಚೋದನೆಗೂ ಬಳಸಿಕೊಂಡಿದೆ. ಕನ್ನಡ ಸಿನೆಮಾ ಇತಿಹಾಸವನ್ನು ಪ್ರಮುಖವಾಗಿ ಎರಡು ಕಾಲಮಾನಗಳಲ್ಲಿ ಗುರುತಿಸಬಹುದು.

೧) ೧೯೩೪ರ ವರೆಗಿನ ಮೂಕಿ ಚಿತ್ರಗಳ ಯುಗ

೨) ೧೯೩೪ರ ನಂತರದ ಟಾಕಿ ಚಿತ್ರಗಳ ಯುಗ

## ಮೂಕಿ ಯುಗ

೧೯೨೯ರಲ್ಲಿ 'ಮೃಚ್ಛಕಟಿಕ' ಅಥವಾ 'ವಸಂತಸೇನ' ಚಿತ್ರ ನಿರ್ಮಾಣದೊಂದಿಗೆ ಕನ್ನಡ ಚಿತ್ರರಂಗದ ಅಂಕದ ಪರದೆ ಮೇಲೇಳುತ್ತದೆ. ಫಿಲಂಸ್ ಡಿವಿಷನ್ನಿನ ಮುಖ್ಯ ನಿರ್ಮಾಪಕರಾಗಿದ್ದ ಮೋಹನ್ ಭವನಾಮಿ ನಿರ್ಮಿಸಿದ ಈ ಚಿತ್ರ, ಸಿನೆಮಾಕ್ಕೆಂದೇ ಅಳವಡಿಸಿದ ಕಥೆ, ಟಿ.ಪಿ. ಕೈಲಾಸಂ ಮತ್ತಿತರ ಬಹುತೇಕ ಭಾರತೀಯರೇ ಭಾಗವಹಿಸಿದ ಕಾರಣದಿಂದಲೂ ಕನ್ನಡದ ಮೊದಲ ಪೂರ್ಣಪ್ರಮಾಣದ ಮೂಕಿ ಚಿತ್ರ ಎನಿಸಿಕೊಂಡಿತು. ಇದಕ್ಕೆ ಜರ್ಮನಿಯ ಯುಎಫ್‌ಎ ಸ್ಟುಡಿಯೋಸ್‌ನಲ್ಲಿ ಹ್ಯಾಂಡ್ ಕಲರ್ ಹಾಕಿಸಿ ತರಿಸಿದ್ದು ಮತ್ತೊಂದು ವಿಶೇಷ. ಚಾರುದತ್ತನ ಪಾತ್ರದಲ್ಲಿ ಜೈಕಿಷನ್ ನಂದ, ವಸಂತಸೇನೆಯಾಗಿ ಏಣಾಕ್ಷಿ ರಾಮರಾವ್, ಶಕಾರನಾಗಿ ಟಿ.ಪಿ. ಕೈಲಾಸಂ ಅಭಿನಯಿಸಿದ ಸುಮಾರು ೮,೦೦೦ ಅಡಿ ಉದ್ದದ 'ವಸಂತಸೇನ'ದಲ್ಲಿ ಕನ್ನಡನಾಡಿನ ಅನೇಕ ಆಕರ್ಷಣೀಯ ಸ್ಥಳಗಳನ್ನು ಚಿತ್ರಿಸಲಾಗಿದೆ. ಪಿ.ಎ. ಪಿಕ್ಚರ್ಸ್ ಲಾಂಛನದಲ್ಲಿ ಬೆಲ್ ಅಂಡ್ ಹೂವೆಲ್ ಕ್ಯಾಮೆರಾ ಬಳಸಿ ಬೆಂಗಳೂರಿನಲ್ಲಿ ನಿರ್ಮಿಸಿದ 'ವಸಂತಸೇನ' ೧೯೨೯ರಲ್ಲಿ ನ್ಯೂ ಎಂಪೈರ್ ಥಿಯೇಟರ್‌ನಲ್ಲಿ ತೆರೆಕಂಡಿತು. ಎರಡು ವರ್ಷಗಳ

ನಂತರ ೧೯೩೧ರ ಏಪ್ರಿಲ್ ತಿಂಗಳಿನಲ್ಲಿ ಮತ್ತದೇ ಥಿಯೇಟರ್‌ನಲ್ಲಿ ಬಿಡುಗಡೆಯಾಗಿದ್ದಲ್ಲದೆ ಡಿಸೆಂಬರ್ ವೇಳೆಗೆ ಜರ್ಮನಿಯಲ್ಲೂ ತೆರೆಕಂಡಿತೆಂದು ಹೇಳಲಾಗಿದೆ.

ಪ್ರಾಚೀನ ಕಥೆಯನ್ನೇ ಆಧರಿಸಿದರೂ, ಪೂರ್ಣ ಪ್ರಮಾಣದ ಸ್ವತಂತ್ರ ಸಿನೆಮಾ ಆಗಿ ಸೃಷ್ಟಿಗೊಂಡಿದ್ದರಿಂದ ವಸಂತಸೇನ ಕನ್ನಡ ಮೂಕಿ ಯುಗದ ಮೊದಲ ಚಿತ್ರ ಎನಿಸಿಕೊಂಡಿತಾದರೂ, ಅದಕ್ಕೂ ಮೊದಲು ಇನ್ನೂ ಎರಡು ಕನ್ನಡ ಚಿತ್ರಗಳು ನಿರ್ಮಾಣಗೊಂಡಿದ್ದು, ಅವುಗಳಿಗೂ ತಕ್ಕ ಪ್ರಾಶಸ್ತ್ಯ ಸಿಗಬೇಕೆಂಬ ವಾದವೂ ಇದೆ. ನಟರತ್ನಾಕರ ಎ.ವಿ. ವರದಾಚಾರ್ಯರು ಮೈಸೂರಿನಲ್ಲಿ ನಡೆಸುತ್ತಿದ್ದ, 'ರತ್ನಾವಳಿ ಥಿಯೇಟ್ರಿಕಲ್ ಕಂಪೆನಿ' ಮೈಸೂರು ಅರಮನೆಯಲ್ಲಿ ಆಡುತ್ತಿದ್ದ 'ನಿರುಪಮಾ' ನಾಟಕವನ್ನು ೧೯೨೧ರಲ್ಲೇ ಚಿತ್ರೀಕರಿಸಲಾಗಿತ್ತು ಎನ್ನಲಾಗಿದೆ.

> *೧೯೨೧ರಲ್ಲಿ ರತ್ನಾವಳಿ ಥಿಯೇಟ್ರಿಕಲ್ ಕಂಪೆನಿಯ ಎ.ವಿ. ವರದಾಚಾರ್ಯರು ಅರಮನೆಯಲ್ಲಿ ನಿರುಪಮಾ ನಾಟಕವನ್ನು ಆಡುತ್ತಿದ್ದರು. ಹಲವಾರು ಬಾರಿ ವಿದೇಶ ಪ್ರವಾಸ ಮಾಡಿ ವಿಷಯ ಅರಿತಿದ್ದ ಯುವರಾಜರಾಗಿದ್ದ ಶ್ರೀ ಕಂಠೀರವ ನರಸಿಂಹರಾಜ ಒಡೆಯರ್‌ರವರು ಕೈಯಿಂದ ಸುತ್ತಿ ಚಿತ್ರ ತೆಗೆಯುವ ಕ್ಯಾಮೆರಾದಿಂದ ಅದನ್ನು ಚಿತ್ರೀಕರಿಸಿದ್ದರು. ಸಂಸ್ಕರಣದ ನಂತರ ಅದನ್ನು ವಿದೇಶಿ ಅತಿಥಿಗಳಿಗೆ ತೋರಿಸುತ್ತಿದ್ದರಂತೆ. ಹೀಗಾಗಿ ಕನ್ನಡ ಚಲನಚಿತ್ರರಂಗದ ಇತಿಹಾಸದಲ್ಲಿ ಎ.ವಿ. ವರದಾಚಾರ್ಯರೇ ಮೊದಲ ನಾಯಕನಟ, ಯುವರಾಜ ಕಂಠೀರವ ನರಸಿಂಹರಾಜ ಒಡೆಯರ್ ಅವರೇ ಮೊದಲ ನಿರ್ಮಾಪಕ - ನಿರ್ದೇಶಕ.* [೨೯]



ಎ.ವಿ. ವರದಾಚಾರ್ಯ



**ಕಂಠೀರವ ನರಸಿಂಹರಾಜ ಒಡೆಯರ್**

ಆದರೆ, ಇಂಗ್ಲಿಷ್ ನಾಟಕವೊಂದರ ಅನುವಾದಿತ ರೂಪವಾಗಿದ್ದ 'ನಿರುಪಮಾ'ವನ್ನು ಒಡೆಯರ್ ಅವರು ಪ್ರಾಯೋಗಿಕ ಪ್ರಯತ್ನವಾಗಿ ಚಿತ್ರೀಕರಿಸಿದ್ದಾರೆನ್ನಬಹುದೇ ಹೊರತು ಅದನ್ನು ಚಲನಚಿತ್ರವಾಗಿ ನಿರ್ಮಿಸಿಲ್ಲ ಹಾಗೂ ಸಾರ್ವಜನಿಕವಾಗಿ ಬಿಡುಗಡೆ ಮಾಡಿದ ಸುಳಿವೂ ಇಲ್ಲ. ಹಾಗಾಗಿ ಇದೊಂದು ನಾಟಕದ ವಿಡಿಯೋ ಚಿತ್ರೀಕರಣವೇ ಹೊರತು ಪೂರ್ಣ ಪ್ರಮಾಣದ ಸಿನೆಮಾ ಚಿತ್ರೀಕರಣವಲ್ಲ ಎಂದು ಪ್ರತಿಪಾದಿಸಬಹುದು.

ಅದೇ ರೀತಿ ೧೯೨೫ರಲ್ಲಿ ಚಿತ್ರೀಕರಿಸಿದ ಮತ್ತೊಂದು ಮೂಕಿ ಚಿತ್ರ. 'ಮಹಾತ್ಮಾ ಕಬೀರ್'. ಅದು ಗುಬ್ಬಿ ವೀರಣ್ಣನವರ ಗುಬ್ಬಿ ಚನ್ನಬಸವೇಶ್ವರ ನಾಟಕ ಮಂಡಳಿಯ ಪ್ರಸಿದ್ಧ ನಾಟಕ 'ಕಬೀರ್ ದಾಸ್'ದ ಚಿತ್ರೀಕರಣ. ತರೀಕೆರೆಯ ಸಂತೆ ಮೈದಾನದಲ್ಲಿ ಪ್ರದರ್ಶಿಸುತ್ತಿದ್ದ ಸಂದರ್ಭದಲ್ಲಿ ಮದರಾಸಿನ ರಂಗಯ್ಯನಾಯ್ಡು ಅದನ್ನು ಚಿತ್ರೀಕರಿಸಿದರು. ಸಿ.ಬಿ. ಮಲ್ಲಪ್ಪನವರು ಕಬೀರ್ ಪಾತ್ರ ನಿರ್ವಹಿಸಿದ್ದ ಈ ನಾಟಕವನ್ನು ೪ ದಿನಗಳ ಕಾಲ ಚಿತ್ರೀಕರಿಸಲಾಯಿತು. ಇದರಿಂದ 'ನಿರುಪಮಾ' ಹಾಗೂ 'ಮಹಾತ್ಮಾ ಕಬೀರ್' ಎರಡೂ ಚಿತ್ರೀಕೃತ ನಾಟಕಗಳೇ ಹೊರತು ಯೋಜಿತ ಸಿನೆಮಾಗಳಲ್ಲ ಎಂದು ದೃಢವಾಗಿ ಹೇಳಬಹುದು. ಹಾಗಾಗಿ ೧೯೨೯ರಲ್ಲಿ ತೆರೆಕಂಡ 'ವಸಂತಸೇನ'ವೇ ಕನ್ನಡದ ಮೊದಲ ಮೂಕಿ ಚಿತ್ರ ಎಂದು ನಿಖರವಾಗಿ ಹೇಳಬಹುದು. ಇಂತಹುದೇ ಪ್ರಸಂಗ ಮೊದಲ ಭಾರತೀಯ ಚಿತ್ರ ಯಾವುದೆಂದು ನಿರ್ಧರಿಸುವಲ್ಲಿ ನಡೆದಿರುವುದೂ ಉಲ್ಲೇಖನೀಯ. ನಾಟಕ ಆಧಾರಿತ 'ಪುಂಡಲೀಕ' ೧೯೧೨ರಲ್ಲಿ ಸಿದ್ಧಗೊಂಡರೂ, ೧೯೧೩ರಲ್ಲಿ ಸ್ವತಂತ್ರವಾಗಿ ನಿರ್ಮಾಣಗೊಂಡ 'ರಾಜಾ ಹರಿಶ್ಚಂದ್ರ' ಮೊದಲ ಭಾರತೀಯ ಚಿತ್ರ ಎನಿಸಿಕೊಂಡದ್ದು ಸ್ಮರಣಾರ್ಹ.

೧೯೨೯ರಿಂದ ಕನ್ನಡ ಚಿತ್ರರಂಗದ ಇತಿಹಾಸವನ್ನು ಗುರುತಿಸಬಹುದು. 'ವಸಂತ ಸೇನ'ದ ನಂತರ ಅದೇ ವರ್ಷ ಮತ್ತೊಂದು ಚಿತ್ರ 'ರಾಜ ಹೃದಯ' ನಿರ್ಮಾಣವಾಯಿತು. ಬೆಂಗಳೂರಿನ ಸೂರ್ಯ ಫಿಲಂ ಕಂಪೆನಿ ಕನ್ನಡ ಚಿತ್ರರಂಗಕ್ಕೆ ಅಪೂರ್ವ ಕೊಡುಗೆ ನೀಡಿದೆ. ಕನ್ನಡ ಚಿತ್ರರಂಗದ ಮೊದಲ ನಾಯಕನಟಿ ಲಕ್ಷ್ಮೀಬಾಯಿಯನ್ನು, ನಂತರ ಅವರ ಸೋದರಿ ಕಮಲಾಬಾಯಿಯನ್ನೂ ಬೆಳ್ಳಿ ತೆರೆಗೆ ತಂದಿತು. 'ಸೂರ್ಯ ಸ್ಟಾರ್' ಎಂದೇ ಕರೆಸಿಕೊಳ್ಳುತ್ತಿದ್ದ ಲಕ್ಷ್ಮೀಬಾಯಿ ಕಂಪೆನಿ ತಯಾರಿಸಿದ ೪೦ ಚಿತ್ರಗಳ ಪೈಕಿ ೧೫ರಲ್ಲಿ ನಾಯಕಿ. ಕನ್ನಡ ಚಿತ್ರರಂಗದ ಬೆಳವಣಿಗೆಗೆ ಸೂರ್ಯ ಕಂಪೆನಿ ನೀಡಿದ ಮಹತ್ತರ ಕೊಡುಗೆಯಾಗಿ ಬೆಂಗಳೂರಿನಲ್ಲಿ Sunlight ಸ್ಟುಡಿಯೋ, ಸಂಸ್ಕರಣ ಸೌಲಭ್ಯ, ಚಿತ್ರೀಕರಣಕ್ಕಾಗಿ, ಚಿತ್ರಗಳಲ್ಲಿ ಪ್ರಾಣಿಗಳನ್ನು ಬಳಸುವ ಸಲುವಾಗಿ ಪುಟ್ಟ ಮೃಗಾಲಯ, ಹೊರಾಂಗಣ ಚಿತ್ರೀಕರಣದ ಐಡಿಯಾಗಳನ್ನು ಒದಗಿಸಿತು.


ಲಕ್ಷ್ಮೀಬಾಯಿ

ಮೂಕಿ ಚಿತ್ರಯುಗದಲ್ಲೇ ಅನೇಕ ಸಾಹಿತಿಗಳು ಚಿತ್ರಗಳಿಗೆ ಕಥೆ, ನಿರೂಪಣಾ ಚೌಕಟ್ಟು, ರಚನಾತ್ಮಕತೆಗೆ ಸೂಕ್ತ ಸಲಹೆಗಳನ್ನು ಒದಗಿಸಿದ ಉದಾಹರಣೆಗಳಿವೆ. ಬೆಳ್ಳಾವೆ ನರಹರಿಶಾಸ್ತ್ರಿ, ದೇವುಡು ನರಸಿಂಹಶಾಸ್ತ್ರಿ, ಟಿ.ಪಿ. ಕೈಲಾಸಂ, ಅ.ನ.ಕೃ., ಬಿ. ಪುಟ್ಟಸ್ವಾಮಯ್ಯ ಮುಂತಾದವರು ಚಿತ್ರತಂಡಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದರು.

ಸೂರ್ಯ ಫಿಲಂಸ್ ಗುಬ್ಬಿ ವೀರಣ್ಣನವರ ಕರ್ನಾಟಕ ಪಿಕ್ಚರ್ಸ್ ಕಾರ್ಪೋರೇಷನ್, ಶಾರದಾ ಪಿಕ್ಚರ್ಸ್, ರಮೇಶ ಫಿಲಂ ಕಂಪೆನಿ, ಸೂರ್ಯ ಪ್ರಕಾಶ್ ಫಿಲಂ, ಶಿವರಾಮ ಕಾರಂತ ಮುಂತಾದವರ ತಯಾರಿಕೆಯಲ್ಲಿ ಕನ್ನಡದಲ್ಲಿ ಸುಮಾರು ೧೭೫ ಮೂಕಿ ಚಿತ್ರಗಳು ತಯಾರಾದವೆಂದು ಹೇಳಲಾಗುತ್ತದೆ. ಅವುಗಳಲ್ಲಿ ೫೪ ಚಿತ್ರಗಳ ಹೆಸರುಗಳು ಲಭ್ಯವಿವೆ. ಅವುಗಳಲ್ಲಿ ಹರಿಮಾಯ (೧೯೩೦) ಹಿಸ್ ಲವ್ ಅಫೇರ್ (೧೯೩೦), ಡೊಮಿಂಗೊ (೧೯೩೦), ಸಾಂಗ್ ಆಫ್ ಲೈಫ್ (೧೯೩೧), ರೂಪ ಸುಂದರಿ (೧೯೩೧), ಹೃದಯ ವೀಣ (೧೯೩೨), ಭಾಗ್ಯಚಕ್ರ (೧೯೩೩) ಪ್ರಮುಖವಾದವು. ೧೯೩೩ರ ನಂತರ ಕನ್ನಡ ಚಿತ್ರರಂಗ ಹೊಸ ಹೊಸ ಆಯಾಮಗಳಿಗೆ ತೆರೆದುಕೊಂಡಿದೆ.

**ಟಾಕಿ ಯುಗ**

ಕನ್ನಡದ ವಾಕ್ಚಿತ್ರಗಳ ಶಕೆ ಆರಂಭವಾಗಿದ್ದು ೧೯೩೪ರಲ್ಲಿ. 'ಸತಿ ಸುಲೋಚನ' ಕನ್ನಡದ ಮೊದಲ ವಾಕ್ಚಿತ್ರ ಹಾಗೂ ಎಂ.ವಿ. ಸುಬ್ಬಯ್ಯನಾಯ್ಡು ವಾಕ್ಚಿತ್ರದ ಮೊದಲ ನಾಯಕ ನಟ ಎಂದು ಒಪ್ಪಲಾಗಿದೆ. ಭಾರತದ ಪ್ರಥಮ ವಾಕ್ಚಿತ್ರ - ಹಿಂದಿಯ ಆಲಂ ಆರಾ (೧೯೩೧) ತೆರೆಕಂಡ ಮೂರು ವರ್ಷಗಳಲ್ಲೇ ಕನ್ನಡದ ವಾಕ್ಚಿತ್ರ ತೆರೆಗೆ ಬಂದದ್ದು, ಪ್ರಾರಂಭದಲ್ಲಿ ಅದು ಬಿರುಸಿನ ನಡೆಯಿಟ್ಟಂತೆ ಕಂಡರೂ ನಂತರ ಮಂದಗತಿಯಲ್ಲೇ ೨೦ ವರ್ಷಗಳ ಕಾಲ ಸಾಗಿದ್ದು ಗಮನಾರ್ಹ.

ರತ್ನಾವಳಿ ಥಿಯೇಟ್ರಿಕಲ್ ಕಂಪನಿಯ ಗೆಳೆಯರು ವರದಾಚಾರ್ಯ ಮೆಮೋರಿಯಲ್ ಟ್ರಸ್ಟ್ ಮೂಲಕ ೧೯೩೩ರಲ್ಲಿ 'ಭಕ್ತಧ್ರುವ' ವಾಕ್ಚಿತ್ರವನ್ನು ನಿರ್ಮಿಸಿ ಅದು ಸೆನ್ಸಾರ್ ಆಗಿದ್ದರೂ, ೧೯೩೪ರ ಏಪ್ರಿಲ್‌ನಲ್ಲಿ ಅದು ಬಿಡುಗಡೆಯಾಗುವ ಮೊದಲೇ 'ಸತಿ ಸುಲೋಚನ' ೧೯೩೪ರ ಮಾರ್ಚ್‌ನಲ್ಲಿ ತೆರೆಗೆ ಬಂದು ಕನ್ನಡದ ಮೊದಲ ವಾಕ್ಚಿತ್ರ ಎನಿಸಿಕೊಂಡಿತು. 'ಭಕ್ತಧ್ರುವ'ಕ್ಕೆ ಅಂತಹ ಹೆಗ್ಗಳಿಕೆ ತಪ್ಪಿಹೋಯಿತು. ಆದರೂ ಕನ್ನಡ ಸಿನೆಮಾ ಇತಿಹಾಸದಲ್ಲಿ ಈ ಎರಡೂ ಚಿತ್ರಗಳಿಗೆ ಮಹತ್ವದ ಸ್ಥಾನವಿದೆ.


ಸುಬ್ಬಯ್ಯನಾಯ್ಡು

ಸೌತ್ ಇಂಡಿಯಾ ಮೂವೀಟೋನ್ ಲಾಂಛನದಲ್ಲಿ ಉತ್ತರ ಭಾರತದ ವ್ಯಾಪಾರಿ ಚಮನ್‌ಲಾಲ್ ಡೊಂಗಾಜಿಯ 'ಸತಿ ಸುಲೋಚನ' ಸಂಭಾಷಣೆ, ಹಾಡುಗಳನ್ನು ಹೊಂದಿತ್ತು. ಬೆಳ್ಳಾವೆ ನರಹರಿ ಶಾಸ್ತ್ರಿಗಳು ಈ ಚಿತ್ರದ ಮೂಲಕ ಕನ್ನಡ ಚಿತ್ರರಂಗದ ಮೊದಲ ಚಿತ್ರ ಸಾಹಿತಿಯಾದರು. ಟ್ರಿಕ್ ಶಾಟ್‌ಗಳನ್ನು, ಯುದ್ಧದ ಸನ್ನಿವೇಶಕ್ಕಾಗಿ ೨೦೦೦ ಜನರನ್ನು ಬಳಸಿಕೊಂಡದ್ದು ಈ ಚಿತ್ರದ ಅದ್ದೂರಿತನಕ್ಕೆ ನಿದರ್ಶನ. ಸುಪ್ರಸಿದ್ಧ ರಂಗಭೂಮಿ ನಟ ಸುಬ್ಬಯ್ಯ ನಾಯ್ಡು ಇಂದ್ರಜಿತುವಿನ ಪಾತ್ರವಹಿಸಿ, ಕನ್ನಡ ವಾಕ್ಚಿತ್ರದ ಮೊದಲ ಹೀರೋ ಆದರು.

ಇಷ್ಟಾದರೂ ಪಂಡಿತ ದೇವುಡು ನರಸಿಂಹಶಾಸ್ತ್ರಿಗಳು ಸಾಹಿತ್ಯ ಒದಗಿಸಿದ್ದ 'ಭಕ್ತಧ್ರುವ', 'ಸತಿ ಸುಲೋಚನ'ಕ್ಕೂ ಮೊದಲೇ ತೆರೆಕಾಣದಿದ್ದರೂ, ನಿರ್ಮಾಣದ ದೃಷ್ಟಿಯಿಂದ ಮೊದಲೇ ಸಿದ್ಧಗೊಂಡ ಚಿತ್ರ ಎನ್ನುವುದು ನಿರ್ವಿವಾದ. ಮದರಾಸಿನ ಜಯವಾಣಿ ಟಾಕೀಸ್ ಲಾಂಛನದಡಿ ಸೃಷ್ಟಿಗೊಂಡ 'ಭಕ್ತಧ್ರುವ' ಮೂಕಿ ಚಿತ್ರಗಳಿಂದ ಟಾಕಿ ಚಿತ್ರಗಳಿಗೆ ಹೊರಳಿದ ಮೊದಲ ಹೆಜ್ಜೆ.


ಭಕ್ತಧ್ರುವ ಚಿತ್ರದ ಒಂದು ದೃಶ್ಯ

೧೯೩೪ರಿಂದ ೧೯೫೪ ಅನ್ನು ಕನ್ನಡ ಸಿನೆಮಾಗಳ ಬೆಳವಣಿಗೆಯ ಕಾಲ ಎಂದೇ ಪರಿಗಣಿಸಿದರೂ, ಅದು ಅತ್ಯಂತ ನಿಧಾನಗತಿಯನ್ನು ಹೊಂದಿದ್ದುದು ಗಮನಾರ್ಹ. ೧೯೩೫ರಲ್ಲಿ ಸದಾರಮೆ, ೧೯೩೬ರಲ್ಲಿ ಸಂಸಾರ ನೌಕೆ, ೧೯೩೭ರಲ್ಲಿ ರಾಜಸೂಯ ಯಾಗ, ೧೯೪೧ರಲ್ಲಿ ವಸಂತಸೇನ, ೧೯೪೩ರಲ್ಲಿ ರಾಧಾರಮಣ ಹಾಗೂ ಸತ್ಯ ಹರಿಶ್ಚಂದ್ರ, ೧೯೩೮-೪೦ ಹಾಗೂ ೪೪-೪೬ರ ಅವಧಿಯಲ್ಲಿ ಚಿತ್ರ ನಿರ್ಮಾಣ ಸ್ಥಗಿತಗೊಂಡಿರುವುದನ್ನು ಗಮನಿಸಿದಾಗ ಕನ್ನಡ ಸಿನೆಮಾ ಬೆಳವಣಿಗೆಯ ಮಂದಗತಿಯನ್ನು ಗುರುತಿಸಬಹುದಾಗಿದೆ. ೧೯೩೫-೪೫ರ ಹತ್ತು ವರ್ಷಗಳ ಅವಧಿಯಲ್ಲಿ ಕೇವಲ ೧೪ ಚಿತ್ರಗಳು ಬಿಡುಗಡೆಯಾಗಿವೆ. ಸಂಸಾರ ನೌಕ - ಕನ್ನಡದ ಮೊದಲನೆ, ದಕ್ಷಿಣ ಭಾರತದ ಎರಡನೇ ಸಾಮಾಜಿಕ ಚಿತ್ರ ಎಂದೂ, ರಾಜಸೂಯಯಾಗ ಸಂಪೂರ್ಣವಾಗಿ ಕರ್ನಾಟಕದಲ್ಲೇ ತಯಾರಾದ ಮೊದಲ ಚಿತ್ರವೆಂದೂ, ವಸಂತಸೇನ (೧೯೪೧) ಆವರೆಗೂ ಭಾರತದಲ್ಲಿ ತಯಾರಾದ ಚಿತ್ರಗಳಲ್ಲೇ ಅತ್ಯುತ್ತಮ ತಾಂತ್ರಿಕ ಚಿತ್ರವೆಂದೂ, 'ರಾಧಾರಮಣ' ಕನ್ನಡಕ್ಕೆ ಮೊದಲ ಮಹಿಳಾ ನಿರ್ಮಾಪಕರನ್ನು (ಎಂ.ವಿ. ರಾಜಮ್ಮ) ನೀಡಿದ ಚಿತ್ರವೆಂದೂ ದಾಖಲೆಯಾಗಿವೆ. ಸತ್ಯ ಹರಿಶ್ಚಂದ್ರ ರಜತೋತ್ಸವ ಆಚರಿಸಿದ ಪ್ರಥಮ ಕನ್ನಡ ಚಿತ್ರವೆಂದೂ, ತಮಿಳಿಗೆ ಡಬ್ ಆದ ಮೊದಲ ಭಾರತೀಯ ಡಬ್ಬಿಂಗ್ ಚಿತ್ರ ಎಂದೂ ಹೆಸರು ಮಾಡಿತು.

ನಂತರ ೧೯೩೯-೪೫ರ ೨ನೇ ಮಹಾಯುದ್ಧದ ಅವಧಿಯಲ್ಲಿ ಬ್ರಿಟಿಷ್ ಸರ್ಕಾರ ಕಚ್ಚಾ ಫಿಲಂ ರೇಷನಿಂಗ್ ಜಾರಿಗೆ ತಂದು ಯಾವ ಚಿತ್ರವೂ ೧೧,೦೦೦ ಅಡಿಗಿಂತ ಜಾಸ್ತಿ ಇರಕೂಡದು ಎಂಬ ಕಾನೂನು ತಂದ ಹಿನ್ನೆಲೆಯಲ್ಲಿ ಕನ್ನಡ ಚಿತ್ರ ನಿರ್ಮಾಣ ಕುಂಠಿತಗೊಂಡದ್ದು ಗೋಚರವಾಗುತ್ತದೆ.

'ಹಿಸ್ ಲವ್ ಅಫೇರ್', 'ಹರಿಮಾಯ' ಮೂಕಿ ಚಿತ್ರಗಳನ್ನು, ೧೯೩೫ರಲ್ಲಿ 'ಸದಾರಮೆ' ವಾಕ್ಚಿತ್ರವನ್ನು ನಿರ್ಮಿಸಿ ಮತ್ತೆ ರಂಗಭೂಮಿಯಲ್ಲಿ ತೊಡಗಿಕೊಂಡಿದ್ದ ಗುಬ್ಬಿವೀರಣ್ಣನವರು ಗುಬ್ಬಿ ಫಿಲಂಸ್ ಲಾಂಛನದಲ್ಲಿ ಮತ್ತೆ ೧೯೪೧ರಲ್ಲಿ ವಾಕ್ಚಿತ್ರ ತಯಾರಿಕೆಗೆ ಕೈ ಹಾಕಿದರು. ಸುಭದ್ರ (೧೯೪೧), ಜೀವನ ನಾಟಕ (೧೯೪೨), ಹೇಮರೆಡ್ಡಿ ಮಲ್ಲಮ್ಮ (೧೯೪೫) ಚಿತ್ರಗಳನ್ನು ನಿರ್ಮಿಸಿದರು. ಬೆಂಗಳೂರಿನಲ್ಲಿ ಶ್ರೀ ಕಂಠೀರವ ಸ್ಟುಡಿಯೋಸ್, ಗೀತಾ ಮೂವಿಲ್ಯಾಂಡ್ ಮತ್ತು ಸಾಗರ್ ಚಿತ್ರಮಂದಿರದ



ಗುಬ್ಬಿ ವೀರಣ್ಣ

ಸೌಲಭ್ಯಗಳನ್ನು ನಿರ್ಮಿಸಿದ ವೀರಣ್ಣನವರು ಡಾ. ರಾಜ್‌ಕುಮಾರ್, ವೈ.ವಿ. ರಾವ್, ಬಿ. ಜಯಮ್ಮ, ಅಶ್ವತ್ಥಮ್ಮ, ಕಲ್ಯಾಣ್‌ಕುಮಾರ್, ನರಸಿಂಹರಾಜು, ಹೊನ್ನಪ್ಪ ಭಾಗವತರ್, ಡಿ. ಕೆಂಪರಾಜ ಅರಸು ಮೊದಲಾದ ಕಲಾವಿದರನ್ನು ಕನ್ನಡ ಚಿತ್ರ ತೆರೆಗೆ ತಂದರು.

೧೯೪೩ರಲ್ಲಿ ಕನ್ನಡದ ಮೊದಲ ಸಂಗೀತ ಪ್ರಧಾನ ಚಿತ್ರ ತಯಾರಾಯಿತು. ಸ್ವತಃ ಪಿಟೀಲು ವಿದ್ವಾಂಸರಾಗಿ ಸಂಗೀತರತ್ನ ಎನಿಸಿಕೊಂಡಿದ್ದ ಮೈಸೂರು ಟಿ. ಚೌಡಯ್ಯ 'ವಾಣಿ' ಚಿತ್ರ ನಿರ್ಮಿಸಿದರು. ಹಾರ್ಮೋನಿಯಂ ಶೇಷಗಿರಿರಾವ್ ಜೊತೆಗೂಡಿ ಈ ಚಿತ್ರಕ್ಕೆ ತಾವೇ ಸಂಗೀತ ನಿರ್ದೇಶನ ಮಾಡಿದ್ದೂ ವಿಶೇಷ. ಅವರ ರಾಗ ಸಂಯೋಜನೆಯ ಷಣ್ಮುಖಪ್ರಿಯ ರಾಗದ "ನಿಖಿಲ ಪಾಪ ವಿನಾಶಿನಿ..." ಗೀತೆ ಜನಪ್ರಿಯವೂ ಆಯಿತು. ಹೆಚ್.ಆರ್.ಜಿ.ಸಿ. ಶ್ರೀ ಪಿಕ್ಚರ್ಸ್ ಲಾಂಛನದಡಿ ತಯಾರಾದ 'ವಾಣಿ' ಹಲವಾರು ದೃಷ್ಟಿಯಿಂದ ಸ್ಮರಣೀಯ ಚಿತ್ರವೆನಿಸಿತು. ಸಂಗೀತದ ಹಿನ್ನೆಲೆ, ಸಾಮಾಜಿಕ ಸಮಸ್ಯೆಗಳ ವಿಶ್ಲೇಷಣೆ ಹೊಂದಿದ್ದ ಈ ಚಿತ್ರದಲ್ಲಿ ಟಿ. ಚೌಡಯ್ಯನವರೇ ನಾಯಕನಟರಾಗಿ ಅಭಿನಯಿಸಿದ್ದಲ್ಲದೆ, ಮುಸುರಿ ಕೃಷ್ಣಮೂರ್ತಿ, ನಟಿ ಪಂಡರೀಬಾಯಿಯನ್ನು ತೆರೆಗಿತ್ತ ಚಿತ್ರವಾಯಿತು. ಮತ್ತೊಬ್ಬ ಸಂಗೀತ ವಿದ್ವಾಂಸ ಚೆಂಬೈ ವೈದ್ಯನಾಥ ಭಾಗವತರ್ ಅವರೂ ಇದರಲ್ಲಿ ನಟಿಸಿದರು. ಇದೇ ಚಿತ್ರದ ಸಂದರ್ಭದಲ್ಲಿ ಮೈಸೂರಿನಲ್ಲಿ ಮೊದಲ ಸ್ಟುಡಿಯೋ ನಿರ್ಮಾಣದ ಬೀಜಾಂಕುರವಾಯಿತು. ನವಜ್ಯೋತಿ ಸ್ಟುಡಿಯೋ ಹುಟ್ಟಿತು.



ಟಿ. ಚೌಡಯ್ಯ

ವಾಣಿ ಚಿತ್ರದ
ಜಾಹೀರಾತು

೧೯೪೩ರ

ವಾಣಿ VIOLINIST

ಕನ್ನಡ ಟಾಕಿ ಚಿತ್ರಗಳ ಯುಗ ದೇಶದ ಸ್ವಾತಂತ್ರ್ಯ ಸಮರದ ಕಾಲದಲ್ಲಿ ಸಾಗಿದರೂ ಪತ್ರಿಕೆಗಳು ಹಚ್ಚಿಸಿಕೊಂಡಂತೆ ಆ ಹೋರಾಟದ ಕಿಚ್ಚನ್ನು ಕನ್ನಡ ಸಿನಿಮಾ ಹಚ್ಚಿಕೊಳ್ಳದೇ ಹೋಗಿರುವುದು ಗಮನಾರ್ಹ. ಆ ಅವಧಿಯಲ್ಲಿ ಸರ್ಕಾರ ಜಾರಿಗೆ ತಂದ ಕಚ್ಚಾ ಫಿಲ್ಮ್ ರೇಷನಿಂಗ್‌ನ ಹೊಡೆತ ಕನ್ನಡ ಸಿನಿಮಾಗಳಿಗೆ ಅಷ್ಟಾಗಿ ತಗುಲದಿದ್ದರೂ ಸ್ವಾತಂತ್ರ್ಯ ಹೋರಾಟ ಚಿತ್ರಗಳಿಗೆ ವಸ್ತುವಾಗಲೇ ಇಲ್ಲ. ಸಾಮಾಜಿಕ ಸಮಸ್ಯೆಗಳಿಗೆ ಸ್ಪಂದಿಸಿ ಕೆಲ ಚಿತ್ರಗಳು ಬಂದವೇ ಹೊರತು ರಾಜಕೀಯ ಸಮಸ್ಯೆಗಳನ್ನು ಒಳಗೊಂಡ ಚಿತ್ರಗಳು ಬಂದಿಲ್ಲ. ಆಗ ಬಂದ ಚಿತ್ರಗಳು ಬಹುತೇಕ ಪೌರಾಣಿಕ ನೆಲೆಯನ್ನು ಹೊಂದಿದ್ದವು. ಒಟ್ಟಿನಲ್ಲಿ ವಾಕ್ಚಿತ್ರಗಳ ಆರಂಭದ ಎರಡು ದಶಕಗಳಲ್ಲಿ (೧೯೩೪-೫೪) ಕೇವಲ ೩೯ ಚಿತ್ರಗಳು ನಿರ್ಮಾಣಗೊಂಡಿರುವುದು ಆ ಕಾಲಘಟ್ಟದಲ್ಲಿ ಸಿನಿಮಾ ಬೆಳವಣಿಗೆ ಮಂದಗತಿಯಲ್ಲಿದ್ದುದನ್ನು ಸೂಚಿಸುತ್ತದೆ.

ವಾಕ್ಚಿತ್ರಗಳ ಯುಗದಲ್ಲಿ ಮೊದಲ ಇಪ್ಪತ್ತು ವರ್ಷಗಳು ಮಂದಗತಿಯಲ್ಲೇ ಕಳೆದರೂ ೧೯೫೪ರ ನಂತರ ಕನ್ನಡ ಚಿತ್ರ ನಿರ್ಮಾಣ ಕ್ಷಿಪ್ರಗತಿಯನ್ನು ಪಡೆದುಕೊಂಡದ್ದು ಗಮನಾರ್ಹ. ೧೯೫೪-೬೪ರ ಹತ್ತು ವರ್ಷಗಳ ಅವಧಿಯಲ್ಲೇ ೧೨೫ ಚಿತ್ರಗಳು ತಯಾರಾದದ್ದು ಅದಕ್ಕೆ ಪುರಾವೆ. ಇದೇ ಸಂದರ್ಭದಲ್ಲಿ ಕನ್ನಡ ಸಿನಿಮಾಗಳ ಗುಣಮಟ್ಟ ಸುಧಾರಣೆ, ತಾಂತ್ರಿಕ ಪರಿಷ್ಕರಣೆ, ಬಣ್ಣದ ಪ್ರಯೋಗ, ಹಿನ್ನೆಲೆ ಗಾಯನ ಹಾಗೂ ಧ್ವನಿ ಸಂಯೋಜನೆ, ನಟ-ನಟಿಯರ ಉದಯ ಮುಂತಾದ ಅನೇಕ ಮಾರ್ಪಾಡುಗಳಾಗಿದ್ದು ಈ ತೀವ್ರತೆಗೆ ಕಾರಣವೆನ್ನಬಹುದು. ಹಾಗೆ ಪ್ರೇಕ್ಷಕರಲ್ಲೂ ಚಲನಚಿತ್ರಗಳ ಬಗ್ಗೆ ಅಸಾಧಾರಣ ಒಲವು ಮೂಡಿದ್ದು ಇದಕ್ಕೆ ಪ್ರೋತ್ಸಾಹ ನೀಡಿತು ಎನ್ನಬಹುದು. ಈ ಎಲ್ಲ ದೃಷ್ಟಿಯಿಂದ ಕನ್ನಡ ಚಿತ್ರರಂಗ ಒಂದು ಪರಿವರ್ತನೆಯ ಹಾದಿ ಹಿಡಿಯಿತು.



ಬೇಡರ ಕಣ್ಣಪ್ಪ ಚಿತ್ರದ ಒಂದು ದೃಶ್ಯ

ಈ ಕಾಲಮಾನದ ಮೊದಲ ಚಿತ್ರ 'ಬೇಡರ ಕಣ್ಣಪ್ಪ.' ಗುಬ್ಬಿ ಫಿಲಂಸ್ ಲಾಂಛನದಲ್ಲಿ ತಯಾರಾದ ಈ ಚಿತ್ರದ ನಾಯಕನಾಗಿ ರಾಜ್‌ಕುಮಾರ್ ಪರಿಚಯಗೊಂಡದ್ದಲ್ಲದೆ; ನಾಯಕ ನಟನ ಪ್ರತಿಭೆಗೆ ತಾರಾ ಮೌಲ್ಯ ಸೃಷ್ಟಿಸಿದರು. ಅದೇ ವರ್ಷ 'ನಟಶೇಖರ' ಚಿತ್ರದ ಮೂಲಕ ಕಲ್ಯಾಣಕುಮಾರ್, ೧೯೫೬ರಲ್ಲಿ 'ಭಾಗ್ಯೋದಯ'ದ ಮೂಲಕ ಉದಯಕುಮಾರ್ ನಾಯಕರಾಗಿ ಚಿತ್ರರಂಗಕ್ಕೆ ಬಂದರು. ೧೯೫೭ ರಲ್ಲಿ ಆರ್. ನಾಗೇಂದ್ರರಾಯರು ನಿರ್ಮಿಸಿದ 'ಪ್ರೇಮದ ಪುತ್ರಿ' ಆ ವರ್ಷ 'ಅತ್ಯುತ್ತಮ ಪ್ರಾದೇಶಿಕ ಚಿತ್ರ' ರಾಷ್ಟ್ರೀಯ ಪ್ರಶಸ್ತಿ ಪಡೆದ ಮೊದಲ ಕನ್ನಡ ಚಿತ್ರ ಎನಿಸಿಕೊಂಡಿತು. ಅದರ ಹಿಂದಿನ ವರ್ಷ ಆರೂರು ಪಟ್ಟಾಭಿ ನಿರ್ದೇಶನದ 'ಭಕ್ತ ವಿಜಯ' ಕೇಂದ್ರ ಸರ್ಕಾರದ ಅರ್ಹತಾ ಪತ್ರ ಪಡೆದಿತ್ತು. ೧೯೫೮ರಲ್ಲಿ 'ಸ್ಕೂಲ್ ಮಾಸ್ಟರ್' ಅಖಿಲ ಭಾರತ ಮಟ್ಟದ ಮೂರನೇ ಅತ್ಯುತ್ತಮ ಚಿತ್ರ ಪ್ರಶಸ್ತಿ

ಪಡೆಯುವುದರ ಮೂಲಕ ದಕ್ಷಿಣ ಭಾರತದಲ್ಲೇ ಈ ಪ್ರಶಸ್ತಿ ಪಡೆದ ಮೊದಲ ಚಿತ್ರ ಎನಿಸಿಕೊಂಡಿತು. ೧೯೬೦ ರಲ್ಲಿ ತೆರೆ ಕಂಡ ರಾಜ್‌ಕುಮಾರ್ ಅಭಿನಯದ 'ರಣಧೀರ ಕಂಠೀರವ' ಕನ್ನಡದ ೧೦೦ನೇ ವಾಕ್ಚಿತ್ರ.

೧೯೫೫ರಲ್ಲಿ ತಯಾರಾದ 'ಸ್ತ್ರೀರತ್ನ', ೧೯೫೬ ರಲ್ಲಿ ತಯಾರಾದ 'ಸದಾರಮೆ', ೧೯೬೦ ರ 'ಮಕ್ಕಳ ರಾಜ್ಯ', ೧೯೬೩ರ 'ವೀರಕೇಸರಿ' ಭಾಗಶಃ ವರ್ಣಚಿತ್ರಗಳಾಗಿದ್ದವು. ೧೯೬೪ ರಲ್ಲಿ ತೆರೆಕಂಡ ಬಿ.ಎಸ್. ರಂಗಾ ನಿರ್ಮಿತ 'ಅಮರಶಿಲ್ಪಿ ಜಕಣಾಚಾರಿ' ಕನ್ನಡದ ಮೊಟ್ಟ ಮೊದಲ ಸಂಪೂರ್ಣ ವರ್ಣಚಿತ್ರ ಆಯಿತು. ೧೯೬೩ರಲ್ಲಿ ಏಕಾಏಕಿ ಚಿತ್ರ ನಿರ್ಮಾಣದ ಹೆಚ್ಚಳವಾಗಿ ಅದೇ ವರ್ಷ ೨೧ ಚಿತ್ರಗಳು ರಜತಪರದೆ ಏರಿದವು.

೧೯೬೪ರಲ್ಲಿ ಎನ್. ಲಕ್ಷ್ಮೀನಾರಾಯಣ್ ನಿರ್ದೇಶನದ 'ನಾಂದಿ' ತೆರೆಕಾಣುವುದರೊಂದಿಗೆ ಹೊಸ ಅಲೆಯ ಚಿತ್ರಗಳಿಗೆ ನಾಂದಿ ಹಾಡಲಾಯಿತು. ೬೦ ರ ದಶಕ ಕಾದಂಬರಿ ಆಧಾರಿತ ಕತೆಗಳನ್ನು, ಕುವೆಂಪು, ಬೇಂದ್ರೆ ಮೊದಲಾದ ಪ್ರಸಿದ್ಧ ಕವಿಗಳ ಗೀತೆಗಳನ್ನು ಚಿತ್ರಗಳಿಗೆ ತಂದಿತು. ೧೯೬೭-೮೫ ರ ವರಿಗೆ ಅದ್ವಿತೀಯ ಚಿತ್ರಗಳನ್ನು ತೆರೆಗೆ ನೀಡಿದ ಪುಟ್ಟಣ್ಣ ಕಣಗಾಲ್ ತ್ರಿವೇಣಿ, ಎಂ. ಕೆ. ಇಂದಿರಾ ಮೊದಲಾದ ಲೇಖಕಿಯರ ಕೃತಿಗಳನ್ನು ಸಿನೆಮಾ ಆಗಿಸಿದ್ದೇ ಅಲ್ಲದೆ ಕಲ್ಪನಾ, ಆರತಿ, ವಿಷ್ಣುವರ್ಧನ್, ಅಂಬರೀಶ್, ಶ್ರೀನಾಥ್ ಮುಂತಾದ ನಾಯಕ ನಾಯಕಿಯರಿಗೆ ತಾರಾವರ್ಚಸ್ಸು ತಂದಿತ್ತರು.

೧೯೭೨ರಲ್ಲಿ ರಾಜ್‌ಕುಮಾರ್ - ಭಾರತಿ ಅಭಿನಯನದ ಸಿದ್ಧಲಿಂಗಯ್ಯ ನಿರ್ದೇಶನದ 'ಬಂಗಾರದ ಮನುಷ್ಯ' ೧೦೪ ವಾರಗಳ ಕಾಲ ಪ್ರದರ್ಶನಗೊಂಡು ದಾಖಲೆ ನಿರ್ಮಿಸಿತು. ರಾಜ್‌ಕುಮಾರ್, ಪಂಡರೀಬಾಯಿ, ಕೆ. ಎಸ್. ಅಶ್ವತ್ಥ, ಲೀಲಾವತಿ, ಸರೋಜದೇವಿ, ಎಂ.ಪಿ. ಶಂಕರ್, ಜಯಂತಿ, ಮಂಜುಳ, ಲಕ್ಷ್ಮೀ, ಲೋಕೇಶ್, ಅನಂತನಾಗ್, ಬಾಲಕೃಷ್ಣ, ವಜ್ರಮುನಿ ಮೊದಲಾದ ನಟ-ನಟಿಯರು, ಟಿ. ಜಿ. ಲಿಂಗಪ್ಪ, ದೊರೆ - ಭಗವಾನ್, ರಾಜನ್ - ನಾಗೇಂದ್ರ, ಗೀತಪ್ರಿಯ, ಜಿ.ಕೆ. ವೆಂಕಟೇಶ್ ಮೊದಲಾದ ಸಂಗೀತ ನಿರ್ದೇಶಕರು, ಪಿ. ಬಿ. ಶ್ರೀನಿವಾಸ್, ಪಿ. ಸುಶೀಲ, ಎಲ್. ಆರ್. ಈಶ್ವರಿ, ಎಸ್. ಜಾನಕಿ, ಎಸ್.ಪಿ. ಬಾಲಸುಬ್ರಮಣ್ಯಂ ಮೊದಲಾದ ಹಿನ್ನೆಲೆ ಗಾಯಕ - ಗಾಯಕಿಯರು, ಪುಟ್ಟಣ್ಣ ಕಣಗಾಲ್, ಸಿದ್ಧಲಿಂಗಯ್ಯ, ಗಿರೀಶ್ ಕಾಸರವಳ್ಳಿ, ಭಾರ್ಗವ, ರವಿ, ಶಂಕರ್‌ನಾಗ್, ರಾಜೇಂದ್ರಸಿಂಗ್ ಬಾಬು ಅವರಂತಹ ನಿರ್ದೇಶಕರು ೧೯೬೦ ರಿಂದ ಮುಂದಿನ ೩ ದಶಕಗಳ ಕಾಲ ಕನ್ನಡ ಚಿತ್ರರಂಗದ ತಾರೆಯರಾಗಿ ವಿಜೃಂಭಿಸಿದರು.

೧೯೭೦ರಿಂದ ಹೊಸ ಅಲೆಯ ಕಲಾತ್ಮಕ ಚಿತ್ರಗಳು ಹುಟ್ಟತೊಡಗಿದವು. ಆ ವರ್ಷ ಪಟ್ಟಾಭಿರಾಮರೆಡ್ಡಿ ನಿರ್ದೇಶನದ 'ಸಂಸ್ಕಾರ' , ೧೯೭೧ ರಲ್ಲಿ 'ಮುಕ್ತಿ', ೭೨ ರಲ್ಲಿ ವಂಶವೃಕ್ಷ, ೭೩ ರಲ್ಲಿ 'ಅಬಚೂರಿನ ಪೋಸ್ಟಾಫೀಸು', 'ಸಂಕಲ್ಪ', ೭೪ ರಲ್ಲಿ 'ಕಾಡು', ೭೫ ರಲ್ಲಿ 'ಚೋಮನದುಡಿ', ೭೭ ರಲ್ಲಿ ಘಟಶ್ರಾದ್ಧ, ೭೮ ರಲ್ಲಿ ಒಂದು ಊರಿನ ಕಥೆ, ಬೆಂಕಿ, ೧೯೮೦ ರಲ್ಲಿ ಆಕ್ರಮಣ, ೧೯೮೩ ರಲ್ಲಿ ಫಣಿಯಮ್ಮ, ಇತ್ತೀಚಿನ ದಿನಗಳಲ್ಲಿ 'ನಾಗಮಂಡಲ', 'ಕಾನೂರು ಹೆಗ್ಗಡತಿ', 'ಮತದಾನ' ಮುಂತಾದ ಚಿತ್ರಗಳ ಕಲಾತ್ಮಕ ಚಿತ್ರರಂಗ ಸುಮಾರು ೨೫ ವರ್ಷಗಳ ನಿರಂತರ ಹಾದಿ ಸಾಗಿ ಬಂದಿದೆ. ೧೯೮೦ ರ ದಶಕ ಸಾಹಸ ಪ್ರಧಾನ ಚಿತ್ರಗಳನ್ನು ತೆರೆಗೆ ತಂದಿತು. ೧೯೮೩ರಲ್ಲಿ ಕನ್ನಡದ ನೆಲದಿಂದ "ಆದಿಶಂಕರಾಚಾರ್ಯ' ಸಂಸ್ಕೃತ ಚಿತ್ರ ಹುಟ್ಟಿ ಬಂದಿತು. ಜಿ.ವಿ. ಅಯ್ಯರ್ ನಿರ್ದೇಶನದ ಈ ಚಿತ್ರ ಇಡೀ ದೇಶದಲ್ಲೇ ಸಂಸ್ಕೃತದಲ್ಲಿ ಸೃಷ್ಟಿಯಾದ ಮೊಟ್ಟ ಮೊದಲ ಪೂರ್ಣ ಪ್ರಮಾಣದ ಚಿತ್ರ ಎನಿಸಿಕೊಂಡಿತು.

೧೯೯೦ - ಹೊಸ ಪೀಳಿಗೆಗಳ ದಶಕ. ಶಿವರಾಜ್‌ಕುಮಾರ್, ರಮೇಶ್, ರವಿಚಂದ್ರನ್, ರಾಘವೇಂದ್ರ ರಾಜ್‌ಕುಮಾರ್, ರಾಂಕುಮಾರ್, ಶಶಿಕುಮಾರ್, ಶ್ರೀಧರ್, ಜಗ್ಗೇಶ್ ಮುಂತಾದ ನಾಯಕರು, ಸುಧಾರಾಣಿ, ಮಾಲಾಶ್ರೀ, ಶೃತಿ, ಪ್ರೇಮಾ ಇನ್ನಿತರ ನಾಯಕಿಯರು ಈ ದಶಕದಲ್ಲಿ ವಿಜೃಂಭಿಸಿದ್ದಾರೆ.



ಬಂಗಾರದ ಮನುಷ್ಯ ಚಿತ್ರದಲ್ಲಿ ಭಾರತಿ - ರಾಜ್‌ಕುಮಾರ್




ಡಾ.ರಾಜ್‌ಗೆ ದಾದಾ ಸಾಹೇಬ್ ಫಾಲ್ಕೆ ಪ್ರಶಸ್ತಿ ಪ್ರದಾನ

ಕನ್ನಡ ಚಿತ್ರರಂಗಕ್ಕೆ ಸಲ್ಲಿಸಿದ ಅತ್ಯದ್ಭುತ ಕೊಡುಗೆಯಿಂದಾಗಿ ನಾಯಕ-ಗಾಯಕ ಡಾ. ರಾಜ್‌ಕುಮಾರ್ ೧೯೯೬ರಲ್ಲಿ ಭಾರತದ ಸಿನೆಮಾ ಲೋಕದ ಅತ್ಯುನ್ನುತ ಮನ್ನಣೆ 'ದಾದಾ ಸಾಹೇಬ್ ಫಾಲ್ಕೆ' ಪ್ರಶಸ್ತಿಯನ್ನು ಪಡೆಯುವುದರ ಮೂಲಕ ಕನ್ನಡಕ್ಕೆ ಇಂತಹ ಮೊದಲ ಪ್ರಶಸ್ತಿ ತಂದಿತ್ತಿದ್ದಾರೆ. ಭಾಷೆಯಾಗಿ ಕನ್ನಡದ ಅಳಿವು ಉಳಿವಿನ ಪ್ರಶ್ನೆ ಬಂದಾಗ ಡಾ. ರಾಜ್‌ಕುಮಾರ್ ನೇತೃತ್ವದಲ್ಲಿ ಇಡೀ ಕನ್ನಡ ಚಿತ್ರೋದ್ಯಮವೇ 'ಗೋಕಾಕ್ ಚಳವಳಿ'ಯಲ್ಲಿ ಪಾಲ್ಗೊಂಡಿದ್ದು ನಮ್ಮ ಪ್ರಬಂಧದ ದೃಷ್ಟಿಯಿಂದ ಉಲ್ಲೇಖಾರ್ಹ.

### ಕನ್ನಡ ಚಿತ್ರರಂಗದ ಮೈಲಿಗಲ್ಲುಗಳು

| | | |
|---|---|---|
| ೧೯೩೯ | - | ಮೊದಲ ಮೂಕಿ ಚಿತ್ರ - **ವಸಂತಸೇನ** ನಿರ್ಮಾಣ. |
| ೧೯೩೪ ಮಾರ್ಚ್ ೩ | - | ಮೊದಲ ವಾಕ್ಚಿತ್ರ - **ಸತೀ ಸುಲೋಚನ** ಹಾಗೂ ಏಪ್ರಿಲ್‌ನಲ್ಲಿ **ಭಕ್ತ ಧ್ರುವ** ಬಿಡುಗಡೆ |
| ೧೯೩೭ | - | ಕನ್ನಡದ ಮೊದಲ ಸಾಮಾಜಿಕ ಚಿತ್ರ **ಸಂಸಾರ ನೌಕ** ತೆರೆಗೆ |
| ೧೯೪೩ | - | ಮೊದಲ ಮಹಿಳಾ ನಿರ್ಮಾಪಕಿಯಿಂದ **ರಾಧಾರಮಣ** ಚಿತ್ರ ನಿರ್ಮಾಣ |
| ೧೯೪೩ | - | ಮೊದಲ ಸಂಗೀತ ಪ್ರಧಾನ ಚಿತ್ರ **ವಾಣಿ** ನಿರ್ಮಾಣ. |
| ೧೯೩೯-೪೭ | - | ಕಚ್ಚಾ ಫಿಲಂ ರೇಷನಿಂಗ್ ಜಾರಿಗೆ |
| ೧೯೫೪ | - | **ಬೇಡರ ಕಣ್ಣಪ್ಪ** ಚಿತ್ರದ ಮೂಲಕ ನಾಯಕನಾಗಿ ಡಾ. ರಾಜ್‌ಕುಮಾರ್ ಬೆಳ್ಳಿತೆರೆಗೆ |
| ೧೯೬೦ | - | ೧೦೦ನೇ ವಾಕ್ಚಿತ್ರ - **ರಣಧೀರ ಕಂಠೀರವ** |
| ೧೯೬೪ | - | ಮೊದಲ ವರ್ಣಚಿತ್ರ - **ಅಮರಶಿಲ್ಪಿ ಜಕಣಾಚಾರಿ** |
| ೧೯೭೨ | - | ೧೦೪ ವಾರಗಳ ದಾಖಲೆ ಪ್ರದರ್ಶನ - **ಬಂಗಾರದ ಮನುಷ್ಯ** |
| ೧೯೮೩ | - | ರಾಷ್ಟ್ರದ ಮೊದಲ ಸಂಸ್ಕೃತ ಚಿತ್ರ - **ಆದಿ ಶಂಕರಾಚಾರ್ಯ** |
| ೧೯೯೬ | - | ಕನ್ನಡ ಚಿತ್ರರಂಗಕ್ಕೆ ಮೊದಲ ದಾದಾ ಸಾಹೇಬ್ ಫಾಲ್ಕೆ ಪ್ರಶಸ್ತಿ - ಡಾ. ರಾಜ್‌ಕುಮಾರ್‌ಗೆ |

೪.೩. ಪತ್ರಿಕೆ

**ಲೇಖನಿಯೇ ಶಕ್ತಿ** ಎನ್ನುವ ಮೂಲಮಂತ್ರದ ಮೇಲೆ ನಿಂತಿರುವ ಮಾಧ್ಯಮ - ಪತ್ರಿಕೆ. ಸರ್ಕಾರದ ಕಾರ್ಯ ವೈಖರಿಯನ್ನು ಕಟ್ಟೆಚ್ಚರದಿಂದ ಕಾಯುವ, ಸಮಾಜಕ್ಕೆ ಅದರ ಅಭಿವ್ಯಕ್ತಿ ಹಕ್ಕನ್ನು ಉಳಿಸಿಕೊಡುವ ರಾಷ್ಟ್ರಾಡಳಿತದ ನಾಲ್ಕನೆಯ ಅಂಗ ಇದು. ವೃತ್ತ ಪತ್ರಿಕಾ ಲೋಕವು ಪ್ರಜಾಪ್ರಭುತ್ವ ರಾಜ್ಯ ಪದ್ಧತಿಯ ರಕ್ಷಾಕವಚ ಎನ್ನುತ್ತಾರೆ ನಾಡಿಗ ಕೃಷ್ಣಮೂರ್ತಿ. ಲಾರ್ಡ್ ಗ್ರೇಯವರು ಪತ್ರಿಕೆಗಳನ್ನು ದೇಶದ ಸ್ವಾತಂತ್ರ್ಯವನ್ನು ರಕ್ಷಿಸುವ ರಕ್ಷಣೆಯ ಸಾಧನ ಎಂದಿದ್ದಾರೆ. ಇದು ಕತ್ತಿಯೋ ಗುರಾಣಿಯೊ ಎಂದು ಅಚ್ಚರಿಪಡುವಂತೆ ಕೆಲಸ ಮಾಡುವ ಪತ್ರಿಕೆಗಳು ಅನೇಕ ಕ್ರಾಂತಿಗಳಿಗೆ ಮೆಟ್ಟಿಲಾಗಿವೆ. ಇಂಥ ಪತ್ರಿಕೆಗಳ ಹುಟ್ಟೂ ಒಂದು ಮಹಾನ್ ಕ್ರಾಂತಿಯೇ ಆಗಿದೆ.

## ಮುದ್ರಣ ಕಲೆ

ಮುದ್ರಣ ಕಲೆಯನ್ನು ರೂಪಿಸಿದ ಕೀರ್ತಿ ಚೀನಾ ದೇಶದವರಿಗೆ ಸಲ್ಲುತ್ತದೆ. ಕ್ರಿ.ಶ. ೮೬೮ರಲ್ಲಿ ಮುದ್ರಣಗೊಂಡ ಬೌದ್ಧರ **ಹಿರಾಕ ಸೂತ್ರ**, ಈವರೆಗೂ ಲಭ್ಯವಿರುವ ಜಗತ್ತಿನ ಎಲ್ಲ ಪುಸ್ತಕಗಳ ಪೈಕಿ ಅತ್ಯಂತ ಪ್ರಾಚೀನವಾದ ಪ್ರಪ್ರಥಮ ಮುದ್ರಿತ ಪುಸ್ತಕ ಎನಿಸಿದೆ. ಚೀನಾದವರಿಂದ ಬಾಗ್ದಾದ್, ಅರಬ್, ಯುರೋಪ್‌ನ ಜನ ಕಾಗದ ತಯಾರಿಸುವುದನ್ನು ಕಲಿತರು. ಚಲಿಸುವ ಅಚ್ಚಿನ ಮೊಳೆಯನ್ನು ಮೊದಲು ತಯಾರಿಸಿದವರೂ ಚೀನಿಯರೇ. ಪಿ-ಷೆಂಗ್ ಎಂಬಾತ ೧೩೦೧ರಲ್ಲಿ ಚೈನಾ ಮಣ್ಣಿನಿಂದ ಅಚ್ಚಿನ ಮೊಳೆಗಳನ್ನು ತಯಾರಿಸಿ. ಕಬ್ಬಿಣದ ಕಟ್ಟು ಹಾಕಿ 'ಮುದ್ರಿಸುವ ಸಾಧನ'ವನ್ನು ಸಿದ್ಧಪಡಿಸಿದನು. ಅವನು ತಗಡಿನ ಮೊಳೆಗಳನ್ನು ಮಾಡಿದನು. ವಾಂಗ್ ಚಾಂಗ್ ಎಂಬ ಚೀನಿ ಪ್ರಜೆ ಮರದಲ್ಲಿ ಅಚ್ಚಿನ ಮೊಳೆಗಳನ್ನು ಮಾಡಿದ್ದು ೧೩೧೪ರಲ್ಲಿ. ಕೊರಿಯಾ ದೇಶದ ರಾಜನಾದ ಸೇನಾಪತಿ ಎಂಬುವನು ಅಚ್ಚಿನ ಮೊಳೆಗಳ ತಯಾರಿಕೆಗಾಗಿಯೇ ೧೪೦೨ರಲ್ಲಿ ಎರಕ ಹೊಯ್ಯುವ ಕಾರ್ಖಾನೆ ಸ್ಥಾಪಿಸಿದನು. ಕೊರಿಯಾದ ಹಿತ್ತಾಳೆ ಮೊಳೆಗಳನ್ನು ಬಳಸಿ ೧೪೦೯ರಲ್ಲಿ ಪುಸ್ತಕವೊಂದನ್ನು ಅಚ್ಚು ಮಾಡಲಾಯಿತು. ಯುರೋಪಿನ ಮೈಂಜ್‌ನಲ್ಲಿ ಜರ್ಮನಿಯ ಹೋಹೆನ್ ಗ್ಯುಟೆನ್‌ಬರ್ಗ್ ಚಲಿಸುವ ಅಚ್ಚಿನ ಮೊಳೆಯ ಮುದ್ರಣವನ್ನು ಕಂಡು ಹಿಡಿದ ಮೊದಲಿಗ. ಈತನೇ ಮುದ್ರಣ ಕಲೆಯ ಮೊದಲ ನಿರ್ಮಾತೃವೆಂದು ಬಹುತೇಕ ಎಲ್ಲರೂ ಒಪ್ಪಿದ್ದಾರೆ. ಕ್ರಮಬದ್ಧವಾಗಿ ಅಚ್ಚುಮಾಡಿದ ಜಗತ್ತಿನ ಮೊದಲ ಕೃತಿ ಎನಿಸಿಕೊಂಡ ಲ್ಯಾಟಿನ್ ಭಾಷೆಯ ಪವಿತ್ರ ಬೈಬಲ್ ಅನ್ನು ಈತ ೧೪೫೬ರಲ್ಲಿ ಅಚ್ಚು ಮಾಡಿದ.

ಅಲ್ಲಿಂದ ಸುಮಾರು ಒಂದು ಶತಕದ ನಂತರ ಮುದ್ರಣ ಕಲೆ ಭಾರತದಲ್ಲಿ ಚಿಗುರಿತು. ಧರ್ಮ ಪ್ರಚಾರದ ದೃಷ್ಟಿಯಿಂದ ಕ್ರೈಸ್ತ ಪಾದ್ರಿಗಳು ಮುದ್ರಣ ಕಲೆಯ ಜ್ಞಾನವನ್ನು ಭಾರತಕ್ಕೆ ತಂದರು. ಗೋವಾದಲ್ಲಿ ಮೊದಲ ಮುದ್ರಣಾಲಯ ೧೫೫೬ರಲ್ಲಿ ಕಾರ್ಯಾರಂಭ ಮಾಡಿತು. **ದೌತ್ರೀನಾ ಕ್ರಿಸ್ತ** ಎಂಬ ಮೊದಲ ಪುಸ್ತಕ ಭಾರತದಲ್ಲಿ ಮುದ್ರಣಗೊಂಡಿತು. ಕ್ರೈಸ್ತ ಪಾದ್ರಿಗಳು ಸುಲಭವಾಗಿ ಜನಮನ ಗೆಲ್ಲಲು ಭಾರತೀಯ ಭಾಷೆಗಳತ್ತ ದೃಷ್ಟಿ ಹಾಯಿಸಿದರು. ಜಾವ್‌ಗಾನ್ ಸಾಲ್ವಿನ್ ಎಂಬ ಅಕ್ಕಸಾಲಿಗ ತಮಿಳು ಭಾಷೆಯ ಮೊಳೆಗಳನ್ನು ಮೊದಲು ತಯಾರಿಸಿದರೂ ಅವನ್ನು ಮಲೆಯಾಳ ಭಾಷೆಯ ಮೊಳೆಗಳೆಂದು ಕರೆದ. ೧೫೭೪ರಲ್ಲಿ ಸಂತ ಕ್ಸೇವಿಯರ್‌ನ ದೌತ್ರೀನಾ ಕ್ರಿಸ್ತ ಕೃತಿ ತಮಿಳಿನಲ್ಲಿ ಅಚ್ಚಾಯಿತು.

೧೬೧೫ರ ವೇಳೆಗೆ ವಿಶ್ವದಲ್ಲಿ ಪತ್ರಿಕೆಗಳ ಹುಟ್ಟು ಪ್ರಾರಂಭವಾಯಿತು. ಅಲ್ಲೊಂದು ಇಲ್ಲೊಂದು ಪತ್ರಿಕೆಗಳು ಹುಟ್ಟತೊಡಗಿದವು. ಪ್ರಪಂಚದ ಮೊದಲ ಪತ್ರಿಕೆ ೧೬೧೫ರಲ್ಲಿ ಪ್ರಕಟವಾದರೆ, ಇಂಗ್ಲೆಂಡಿನ ಮೊದಲ ಪತ್ರಿಕೆ ೧೬೨೨ರಲ್ಲಿ ಹುಟ್ಟಿತು. ಅದಕ್ಕೂ ಮೊದಲು ೧೫೬೬ರಲ್ಲಿ ಯೂರೋಪಿನಲ್ಲಿ ಅದರಲ್ಲೂ ವೆನಿಸಿನಲ್ಲಿ ವೃತ್ತ ಪತ್ರಿಕೆಗಳು ಭಿತ್ತಿ ಪತ್ರಗಳ ರೂಪದಲ್ಲಿ ಕಾಣಿಸಿಕೊಂಡವು. 'ಲಿಖಿತ ಸೂಚನೆ'ಗಳು ಎಂದು ಕರೆಯಲಾಗುತ್ತಿದ್ದ ಅವನ್ನು ಸಾರ್ವಜನಿಕ ಸ್ಥಳಗಳಲ್ಲಿ ಗೋಡೆಗಳಿಗೆ



ಕೈ ಅಚ್ಚು (ಹ್ಯಾಂಡ್ ಪ್ರೆಸ್)

ಅಂಟಿಸಲಾಗುತ್ತಿತ್ತು. 'ಗೆಜೆಟ್ಟಾ' ಎನ್ನುವ ಒಂದು ಚಿಕ್ಕ ನಾಣ್ಯವನ್ನು ನೀಡಿದ ಯಾರು ಬೇಕಾದರೂ ಅದನ್ನು ಓದಿಕೊಳ್ಳಬಹುದಿತ್ತು. ಇದರಿಂದಾಗಿಯೇ ವೃತ್ತ ಪತ್ರಿಕೆಗಳಿಗೆ 'ಗೆಜೆಟ್' ಎಂಬ ಹೆಸರು ಅನ್ವಯಿಸಿ ಬಂದಿತು.

ಹದಿನೆಂಟನೆಯ ಶತಮಾನದ ಕೈಗಾರಿಕಾ ಕ್ರಾಂತಿ ಮುದ್ರಣ ಕಲೆಗೆ ಕ್ರಾಂತಿಯೋಪಾದಿಯ ನೆರವು ನೀಡಿ ಪತ್ರಿಕೆಗಳ ಬೆಳವಣಿಗೆಗೆ ಸಹಕಾರಿಯಾಯಿತು. ಯಂತ್ರ ಕುಶಲತೆ ಹೆಚ್ಚಿದಂತೆ ಮುದ್ರಣ ಸುಲಭವಾಯಿತು, ದಕ್ಷವಾಯಿತು. ಮುದ್ರಣ ಕಾಗದದ ತಯಾರಿಕೆ ಹೆಚ್ಚಿ ಅದೂ ಅಗ್ಗವಾಗಿ ಸಿಗುವಂತಾಯಿತು. ಮತ್ತೊಂದೆಡೆ ಕೈಗಾರಿಕಾ ಕ್ರಾಂತಿಯಿಂದ ಸಮಾಜದಲ್ಲಾದ ಬದಲಾವಣೆಗಳು ಪತ್ರಿಕೆಗಳಿಗೆ ಬೇಡಿಕೆ ತಂದವು. ಸರಿ ಸುಮಾರು ಅದೇ ಸಂದರ್ಭದಲ್ಲಿ (೧೮-೧೯ನೆ ಶತಮಾನ) ಯೂರೋಪಿನಲ್ಲಿ ಪ್ರಾರಂಭವಾದ ಸಮೂಹ ಶಿಕ್ಷಣ ಚಳವಳಿಯೂ ಪತ್ರಿಕೆಗಳ ಉಪಯೋಗ ಮತ್ತು ಬೇಡಿಕೆ ಹೆಚ್ಚಿಸಿತು.



GRAMMAR

OF THE

KURNATA LANGUAGE.

By W. CAREY, D. D.

Professor of the Sungskrita, Bengalee, and Mahratta Languages in the College of Fort William.

Serampore:

PRINTED AT THE [illegible]

1817

ವಿಲಿಯಂ ಕ್ಯಾರಿಯ ಎ ಗ್ರಾಮರ್ ಆಫ್ ದಿ ಕರ್ನಾಟ ಲ್ಯಾಂಗ್‌ವೆಜ್ - ೧೮೧೭
ಹೊಸಗನ್ನಡದ ಮೊದಲ ಪುಸ್ತಕ



A

GRAMMAR

OF THE

CARNATACA LANGUAGE.

By JOHN McKERRELL, Esq.

OF HILL-HOUSE, AYRSHIRE; AND OF THE HONOURABLE EAST INDIA COMPANY'S CIVIL SERVICE, ON THE ESTABLISHMENT OF FORT ST. GEORGE.

MADRAS:

PRINTED AT THE COLLEGE PRESS.

1820.

ಜೆ. ಮೆಕ್ಯಾರೆಲ್ ಬರೆದ ಎ ಗ್ರಾಮರ್ ಆಫ್ ದಿ ಕರ್ನಾಟಕ ಲ್ಯಾಂಗ್‌ವೆಜ್ - ೧೮೨೦

ಇತ್ತ ಕನ್ನಡ ಭಾಷೆಯ ಪುಸ್ತಕಗಳೂ ಅಚ್ಚಾದದ್ದು ಆವಾಗಲೇ. ೧೮೧೭ರಲ್ಲಿ ಡಾ. ವಿಲಿಯಂ ಕ್ಯಾರಿ **ಎ ಗ್ರಾಮರ್ ಆಫ್ ದಿ ಕರ್ನಾಟ ಲ್ಯಾಂಗ್‌ವೇಜ್** ಕರ್ನಾಟ ಭಾಷೆಯ ವ್ಯಾಕರಣ ಎಂಬ ಪುಸ್ತಕವನ್ನೂ, ೧೮೨೦ರಲ್ಲಿ ಜೆ. ಮೆಕ್ಯಾರೆಲ್ **ಎ ಗ್ರಾಮರ್ ಆಫ್ ದಿ ಕರ್ನಾಟಕ ಲ್ಯಾಂಗ್‌ವೇಜ್** ಎಂಬ ಪುಸ್ತಕವನ್ನೂ ಪ್ರಕಟಿಸಿದರು. ಇಂಗ್ಲೀಷ್ - ಕನ್ನಡ ಅರ್ಥಕೋಶವನ್ನು ಬರೆದ ರೆವರೆಂಡ್ ಫಾದರ್ ವಿಲಿಯಂ ರೀವ್ ಅದನ್ನು ೧೮೩೨ರಲ್ಲಿ ಅಚ್ಚು ಮಾಡಿದರು.

ಧರ್ಮ ಪ್ರಚಾರದ ಕಾರ್ಯಗಳಿಗಾಗಿ ಹುಟ್ಟಿಕೊಂಡ ಮುದ್ರಣಾಲಯಗಳನ್ನು ಭಾರತೀಯರು ಮೊದ ಮೊದಲು ಒಳಗೊಳ್ಳಲಿಲ್ಲವಾದರೂ ಭಾರತದ ಸಂಸ್ಕೃತಿ, ಸ್ವಾತಂತ್ರ್ಯದ ರಕ್ಷಣಾ ಕಾರ್ಯದಲ್ಲಿ ಅವು ತೊಡಗಿದಾಗ ಆಸಕ್ತಿ ತಳೆದರು; ಅದೇ ಭಾರತೀಯ ಪತ್ರಿಕೋದ್ಯಮದ ಮೊದಲ ಮೆಟ್ಟಿಲಾಯಿತು.

## ಪತ್ರಿಕೆಗಳ ಉಗಮ

Pen is mightier than Sword ಎನ್ನುವ ಧ್ಯೇಯವಾಕ್ಯ ಪತ್ರಿಕೋದ್ಯಮದ್ದು. ಅದು ನಿಜವೆಂದು ಸಾಬೀತಾದದ್ದು ಫ್ರೆಂಚ್ ಕ್ರಾಂತಿಯ ಸಮಯದಲ್ಲಿ. ೧೭೮೯ರಲ್ಲಿ ರಾಜಾಡಳಿತದ ವಿರುದ್ಧ ಸಿಡಿದೆದ್ದ ರೂಸ್ಸೋ, ವಾಲ್ಟೈರ್, ಮಾಂಟೆಸ್ಕ್ಯು ಮುಂತಾದ ಬುದ್ಧಿಜೀವಿಗಳು ತಮ್ಮ ಲೇಖನಿಗಳ ಮೂಲಕ ಜನ ಜಾಗೃತಿ ಮೂಡಿಸಿ ಫ್ರೆಂಚ್ ಮಹಾಕ್ರಾಂತಿಗೆ ನಾಂದಿ ಗೀತೆ ಹಾಡಿ, ರಾಜನ ಖಡ್ಗಕ್ಕಿಂತ ಬುದ್ಧಿಜೀವಿಗಳ ಲೇಖನಿಯ ಹರಿತ ಹೆಚ್ಚಿನದು ಎನ್ನುವುದನ್ನು ತೋರಿಸಿಕೊಟ್ಟಿದ್ದಾರೆ; ಪ್ರಜಾತಾಂತ್ರಿಕ ಮೌಲ್ಯಗಳನ್ನು ಲೇಖನಿಯ ಮೂಲಕವೇ ಎತ್ತಿ ಹಿಡಿದಿದ್ದಾರೆ.

*In a land of no Parliament (France) the men of letters*
*had come to be the Politicians* [೩೦]

ಎಂದಿದ್ದಾನೆ ಪ್ರಸಿದ್ಧ ಇತಿಹಾಸಜ್ಞ ಹೇಸೆನ್.

*Writers of all kinds prepared the French revolution*

ಎಂದಿರುವ ಡಿ.ಎಂ. ಕೆಟಲ್‌ಬೇ *The Writings and proponganda of the philosophers made an excellent gun powder for destroying the monarchy in France* [೩೧]

ಎಂದೂ ಹೇಳಿದ್ದಾನೆ. ಹೀಗೆ ಪತ್ರಿಕೆಗಳ ಹುಟ್ಟಿನ ಕ್ರಾಂತಿಯಾಯಿತು. ಅಥವಾ ಕ್ರಾಂತಿಗಾಗಿಯೇ ಪತ್ರಿಕೆಗಳು ಹುಟ್ಟಿದವು.

## ಭಾರತದಲ್ಲಿ ಪತ್ರಿಕೆಗಳು

ಜನವರಿ ೨೯, ೧೭೮೦ ಭಾರತೀಯ ಪತ್ರಿಕಾರಂಗದ ಸುವರ್ಣ ದಿನ. ಯೂರೋಪಿನ ಜೇಮ್ಸ್ ಆಗಸ್ಟಸ್ ಹಿಕ್ಕಿ **ಬೆಂಗಾಲ್ ಗೆಜೆಟ್** ಅಥವಾ **ಕಲ್ಕಟಾ ಜನರಲ್ ಅಡ್ವರ್ಟೈಸರ್** ಎನ್ನುವ ಎರಡು ಪುಟಗಳ ಇಂಗ್ಲೀಷ್ ಸಾಪ್ತಾಹಿಕವನ್ನು ಭಾರತದ ನೆಲದಲ್ಲಿ ಪ್ರಾರಂಭಿಸಿದ ದಿನ ಅದು. ಹಿಕ್ಕಿಯೇ ಈ ಪತ್ರಿಕೆಯ ಸಂಪಾದಕ, ಪ್ರಕಾಶಕ ಮತ್ತು ಮುದ್ರಕನೂ ಆಗಿದ್ದುದರಿಂದ ಅದು **ಹಿಕ್ಕೀಸ್ ಗೆಜೆಟ್** ಎಂದೂ ಕರೆಸಿಕೊಂಡಿತು. ಅದು ತನ್ನನ್ನು "Weekly political and Commercial Paper open to all parties but influenced by none" ಎಂದು ಘೋಷಿಸಿಕೊಂಡಿತು. ಅದರ ಮೊದಲ ಸಂಚಿಕೆಯಲ್ಲೇ

'ಸುದ್ದಿ'ಯೂ ಪ್ರಕಟವಾಗಿದ್ದು ಉಲ್ಲೇಖಾರ್ಹ. ಭಾರತದಲ್ಲಿ ಪತ್ರಿಕೋದ್ಯಮದ ಬೆಳವಣಿಗೆಗೆ ಕಾರಣಕರ್ತನಾದ ಜೇಮ್ಸ್ ಆಗಸ್ಟಸ್ ಹಿಕ್ಕಿ ಭಾರತದಲ್ಲಿ ಪತ್ರಿಕೋದ್ಯಮದ ಪಿತಾಮಹನೆಂದೂ ಎನಿಸಿಕೊಂಡ.

HICKY's
BENGAL GAZETTE;
OR THE ORIGINAL
Calcutta General Advertiser.

A Weekly Political and Commercial Paper, Open to all Parties, but influenced by None.

59 From Saturday March 3d to Saturday March 10th 1781. No. VII

ಬೆಂಗಾಲ್ ಗೆಜೆಟ್ - ೧೭೮೦

ಹಿಕ್ಕಿಯ ಬೆಂಗಾಲ್ ಗೆಜೆಟ್ ಬಂದ ನಂತರದ ಐದು ವರ್ಷಗಳೊಳಗೆ ಐದು ಪತ್ರಿಕೆಗಳು ಹುಟ್ಟಿದವು. ಇಂಡಿಯಾ ಗೆಜೆಟ್ (೧೭೮೦), ಕಲ್ಕತ್ತಾ ಗೆಜೆಟ್ ಮತ್ತು ಓರಿಯಂಟಲ್ ಅಡ್ವರ್ಟೈಸರ್ (೧೭೮೪), ಬೆಂಗಾಲ್ ಜರ್ನಲ್ (೧೭೮೫), ಓರಿಯಂಟಲ್ ಮ್ಯಾಗಜಿನ್ ಅಥವಾ ಕಲ್ಕತ್ತಾ ಅಮ್ಯೂಸ್‌ಮೆಂಟ್ (೧೭೮೫), ಕಲ್ಕತ್ತಾ ಕ್ರಾನಿಕಲ್ (೧೭೮೬) ಅಲ್ಲದೆ, ಮದರಾಸು, ಬಾಂಬೆ, ಕಲ್ಕತ್ತಾದಲ್ಲಿ ಹಲವಾರು ಪತ್ರಿಕೆಗಳು ಹುಟ್ಟಿಕೊಂಡವು. ಇವುಗಳಲ್ಲಿ ವಿಲಿಯಂ ಡ್ವುಯನ್‌ನ ಬೆಂಗಾಲ್ ಜರ್ನಲ್, ಚಾರ್ಲ್ಸ್ ಮೆಕ್ಲಿನ್‌ನ ಬೆಂಗಾಲ್ ಹರ್ಕರ್, ಜೇಮ್ಸ್ ಸಿಲ್ಕ್ ಬಕ್ಕಿಂಗ್ ಹ್ಯಾಂನ ಕಲ್ಕತ್ತಾ ಜರ್ನಲ್ ಗಮನಾರ್ಹ ಪತ್ರಿಕೆಗಳು.

THE
CALCUTTA GAZETTE;
OR
ORIENTAL ADVERTISER.

PROCLAMATION.

ಕಲ್ಕತ್ತಾ ಗೆಜೆಟ್ - ೧೭೮೪

ವಾಣಿಜ್ಯಕ ಉದ್ದೇಶಗಳಿಗಾಗಿ ಪ್ರಕಟಗೊಳ್ಳುತ್ತಿದ್ದ ಈ ಪತ್ರಿಕೆಗಳಲ್ಲಿ ಜಾಹೀರಾತುಗಳೇ ಪ್ರಮುಖವಾಗಿರುತ್ತಿದ್ದವು. ಅಂಚೆ ರಿಯಾಯಿತಿ ಪಡೆದ ಯೂರೋಪಿಯನ್ನರ ಹಿತಾಸಕ್ತಿಗಳಿಗೆ ತಕ್ಕಂತೆ ಈ ಪತ್ರಿಕೆಗಳನ್ನು ಬಳಸಿಕೊಳ್ಳುವುದು ಅವರ ಉದ್ದೇಶವಾಗಿತ್ತು. ಇವುಗಳೆಲ್ಲದರ ಮಧ್ಯೆ ಜೇಮ್ಸ್ ಸಿಲ್ಕ್ ಬಕ್ಕಿಂಗ್ ಹ್ಯಾಂ ಹೊರಡಿಸಿದ ಕಲ್ಕತ್ತಾ ಗೆಜೆಟ್ ತನ್ನದೇ ಆದ ಶೈಲಿಯಲ್ಲಿ ಉಪಯುಕ್ತ ವಿಚಾರಗಳನ್ನು ಹೊಂದಿರುತ್ತಿತ್ತು. ಇದರಲ್ಲಿ ಕೆಲವೊಮ್ಮೆ ಸಾರ್ವಜನಿಕರಿಗೆ ಸಂಬಂಧಿಸಿದ ಜ್ವಲಂತ ಸಮಸ್ಯೆಗಳ ಬಗ್ಗೆಯೂ ನಿರ್ಭಯವಾಗಿ ಬರೆಯಲಾಗುತ್ತಿತ್ತು. ಇದರಿಂದಾಗಿ ತನ್ನ ಆಡಳಿತ ವ್ಯವಸ್ಥೆಯಲ್ಲಿ ವ್ಯತ್ಯಾಸಗಳಾಗಬಹುದೆಂದು ಭಾವಿಸಿದ ಈಸ್ಟ್ ಇಂಡಿಯಾ ಕಂಪೆನಿ ಎಲ್ಲ ಪತ್ರಿಕೆಗಳಿಗೂ ಅವುಗಳ ಸಂಪಾದಕರಿಗೂ ಒಂದೇ ಬಗೆಯ ನಿಯಂತ್ರಣ ಕಾಯ್ದೆಗಳನ್ನು ಹೇರಿತು. ೧೭೯೯ ಮತ್ತು ೧೮೨೩ ರ ನಿಯಂತ್ರಣ ಕಾಯ್ದೆಗಳನ್ವಯ ಪತ್ರಿಕೆಗಳನ್ನು ಬೆಳಕಿಗೆ ತರುವ ಮುನ್ನ ಅವುಗಳನ್ನು

THE

ORIENTAL  STAR. Volume I. Num. XXII.

SATURDAY, JUNE 1, 1793.

ಓರಿಯಂಟಲ್ ಸ್ಟಾರ್ ೧೭೯೩

THE

ASIATIC  MIRROR,

COMMERCIAL AND ADVERTISER.

Vol. VI.] WEDNESDAY, October 9, 1793. [No 296.

ದಿ ಏಷ್ಯಾಟಿಕ್ ಮಿರರ್ ೧೭೯೩

THE HIRCARRAH.

QUICQUID  AGITUR

Volume I. TUESDAY, February 18, 1794. Number 24.

ದಿ ಹರ್ಕರ್ ೧೭೯೪

MADRAS  GAZETTE.

Volume XV. Saturday, August 12, 1809. Number 7[illegible]

ಮದ್ರಾಸ್ ಗೆಜೆಟ್ ೧೮೦೯

ಆರಂಭಿಕ ಹಂತದ ಪತ್ರಿಕೆಗಳ ಮಾದರಿ

ಸೆನ್ಸಾರ್ ಮಾಡುವುದು, ಮುದ್ರಣಾಗಾರಗಳಿಗೆ ಪರವಾನಗಿ ಪಡೆಯುವಂತೆ ಹೇಳುವುದು ಮುಂತಾಗಿ ನಿರ್ಬಂಧಗಳನ್ನು ಒಡ್ಡಲಾಯಿತು. ಅಂಚೆ ರಿಯಾಯಿತಿ ಹಿಂತೆಗೆದುಕೊಳ್ಳುವುದು, ಅಧಿಕೃತ ಜಾಹೀರಾತು ಕೊಡದಿರುವುದು ಮತ್ತು ಕೆಲವೊಮ್ಮೆ ಕಠಿಣ ಶಿಕ್ಷೆಗಳನ್ನು ವಿಧಿಸುವ ಹಕ್ಕುಗಳನ್ನು ಕಂಪೆನಿ ಹೊಂದಿತ್ತು. ಹಿಕ್ಕಿಯ ನಿರ್ಭಯತೆ, ಪತ್ರಿಕಾ ಸ್ವಾತಂತ್ರ್ಯ - ವಾಕ್ ಸ್ವಾತಂತ್ರ್ಯದ ಧೋರಣೆಗಳಿಗೆ ಅಂಟಿದ ಇನ್ನೂ ಕೆಲವು ಸಂಪಾದಕರ ಸಿದ್ಧಾಂತಗಳಿಂದಾಗಿ ಭಾರತದಲ್ಲಿ ನಾಲ್ಕನೇ ಎಸ್ಟೇಟ್‌ನ ಸ್ವಾತಂತ್ರ್ಯ ಪ್ರಜ್ಞೆ ಮೂಡಿತು.

ಭಾರತೀಯ ಧರ್ಮ, ತತ್ವ ಮತ್ತು ಸಂಸ್ಕೃತಿಯನ್ನು ಖಂಡಿಸಿ ಬ್ರಿಟಿಷ್ ಸಾಮ್ರಾಜ್ಯಶಾಹಿಯ ಸಂಸ್ಕೃತಿಯನ್ನು ಎತ್ತಿ ಹಿಡಿಯುವ ಒಂದು ವರ್ಗದ ಪತ್ರಿಕೆ ಮತ್ತು ಭಾರತೀಯರೇ ಪ್ರಾರಂಭಿಸಿದ ಇನ್ನೊಂದು ವರ್ಗದ ಪತ್ರಿಕೆಗಳು ೧೯ನೇ ಶತಮಾನದಲ್ಲಿ ಹುಟ್ಟಿ ಬಂದವು. ೧೮೫೭ರವರೆಗೆ ಪ್ರಕಟಗೊಂಡಿರುವ ಭಾರತೀಯ ಪತ್ರಿಕೆಗಳನ್ನು ಮೂರು ಗುಂಪುಗಳಾಗಿ ವಿಭಜಿಸಬಹುದು;

- ಕ್ರೈಸ್ತ ಮತ ಪ್ರಚಾರಕ್ಕಾಗಿ ಮಿಷನರಿಗಳು ಇಂಗ್ಲಿಷ್ ಮತ್ತು ಭಾರತೀಯ ಭಾಷೆಗಳಲ್ಲಿ ಸ್ಥಾಪಿಸಿದ ಪತ್ರಿಕೆಗಳು.
- ಈಸ್ಟ್ ಇಂಡಿಯಾ ಕಂಪೆನಿಯ ಕೆಲಸಕ್ಕಾಗಿ ಭಾರತಕ್ಕೆ ಬಂದು ನೆಲೆಸಿದ ಬ್ರಿಟಿಷ್ ಮತ್ತಿತರ ಪಾಶ್ಚಾತ್ಯರು ಸ್ಥಾಪಿಸಿದ ಪತ್ರಿಕೆಗಳು.
- ಕ್ರಿಶ್ಚಿಯನ್ ಮತ ಪ್ರಚಾರಕರು ಹಿಂದೂ ಧರ್ಮದ ವಿರುದ್ಧ ಮಾಡುತ್ತಿದ್ದ ಟೀಕೆಗಳಿಗೆ ಉತ್ತರ ನೀಡಲು ಭಾರತೀಯರು ಆರಂಭಿಸಿದ ಪತ್ರಿಕೆಗಳು.

## ಭಾರತೀಯ ವಾರ್ತಾ ಪತ್ರಿಕೆಗಳ ಉಗಮ

ಮತಾಂತರ ಭಯದಿಂದ ಕೂಡಿದ ಪ್ರಚೋದನೆಯ ಕಾರಣ, ಕೆಲವು ಪ್ರಯತ್ನಶೀಲ ಭಾರತೀಯ ಸಮಾಜ ಸುಧಾರಕರು ಮತ್ತು ರಾಜಕೀಯ ಮುಖಂಡರು ರಕ್ಷಣಾತ್ಮಕ ಪ್ರಕಾಶನ ಅಥವಾ ಅಭಿಪ್ರಾಯ ಪತ್ರಿಕೋದ್ಯಮ ಪ್ರಾರಂಭಿಸಿ, ನಂತರ ವೈರುಧ್ಯ ಪತ್ರಿಕೋದ್ಯಮವನ್ನೂ ಪ್ರಾರಂಭಿಸಿದರು. ಪತ್ರಿಕಾ ಪ್ರಪಂಚದ ಬೆಳವಣಿಗೆಗೆ ಇದ್ದ ಅಡೆತಡೆಗಳ ನಡುವೆಯೂ ಭಾರತದಲ್ಲಿ ಸಾರ್ವಜನಿಕ ಅಭಿಪ್ರಾಯ ಮೂಡಿಬರತೊಡಗಿತು. ೧೮೧೯ರಲ್ಲಿ ಭಾರತೀಯರಲ್ಲಿ ಮೊದಲಿಗರಾಗಿ ಗಂಗಾಧರ ಭಟ್ಟಾಚಾರ್ಯರ ಒಡೆತನದಲ್ಲಿ **ಬೆಂಗಾಲ್ ಗೆಜೆಟ್** ಎಂಬ ಹೆಸರಿನದೇ ಪತ್ರಿಕೆ ಆರಂಭವಾಯಿತು. ಆ ವೇಳೆಗಾಗಲೇ ಹಿಕ್ಕಿಯ ಬೆಂಗಾಲ್ ಗೆಜೆಟ್ ನಿರ್ನಾಮವಾಗಿತ್ತು. ಗಂಗಾಧರ ಭಟ್ಟಾಚಾರ್ಯರ **ಬೆಂಗಾಲ್ ಗೆಜೆಟ್** ಸಹ ಒಂದೇ ಒಂದು ವರ್ಷ ಬದುಕಿತಾದರೂ, ಭಾರತೀಯ ಒಡೆತನದ ಪ್ರಥಮ ಪತ್ರಿಕೆ ಎನಿಸಿಕೊಂಡಿತು.

ಹೆಚ್ಚು ನಿಯತವಾದ ವೃತ್ತ ಪತ್ರಿಕೆಗಳು ಮತ್ತು ದೊಡ್ಡ ದಿನ ಪತ್ರಿಕೆಗಳು ಭಾರತೀಯ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಹೊರಬರಲು ಕಾರಣವಾದ ಪ್ರಮುಖ ಅಂಶಗಳು ಹೀಗಿವೆ:

- ಮುದ್ರಣ ತಂತ್ರಜ್ಞಾನ ಅಭಿವೃದ್ಧಿ ಮತ್ತು ಸುದ್ದಿ ಸಂಗ್ರಹಣೆಯ ಬೆಳವಣಿಗೆ.
- ಸಾರಿಗೆ ಮತ್ತು ಸಂಪರ್ಕ ಸೇವೆಗಳ ಅಭಿವೃದ್ಧಿ.
- ಸಂಪರ್ಕ ಭಾಷೆಯ ಉಗಮ.
- ಸಾರ್ವಜನಿಕ ಶಿಕ್ಷಣ ವ್ಯವಸ್ಥೆ.
- ವ್ಯಾಪಾರ ಮತ್ತು ವಾಣಿಜ್ಯ ವ್ಯವಹಾರಗಳ ಅಭಿವೃದ್ಧಿ.

೧೮೧೮ ರಲ್ಲಿ ಸೇರಂಪುರ್ ಮಿಷನರಿಗಳು ಆರಂಭಿಸಿದ ಮಾಸಿಕ ವೃತ್ತ ಪತ್ರಿಕೆ **ದಿಗ್‌ದರ್ಶನ** ಭಾರತದ ಮೊಟ್ಟ ಮೊದಲ ಭಾಷಾ ಪತ್ರಿಕೆ. ಈ ಬೆಂಗಾಲಿ ಪತ್ರಿಕೆ ಅಲ್ಲದೆ ೧೮೧೯ರಲ್ಲಿ **ಸಮಾಚಾರ್ ದರ್ಪಣ್** ಎನ್ನುವ ಇನ್ನೊಂದು ಬೆಂಗಾಲಿ ಪತ್ರಿಕೆಯನ್ನೂ ಅವರು ಹೊರಡಿಸಿದರು. ಈ ಮಿಷನರಿಗಳು ಭಾರತೀಯ ಜನತೆಗೆ ಮೂಲ ಮಟ್ಟದಲ್ಲಿ ಬೇಕಾದ ಹಾಗೆ ಸಮೂಹ ಸಂವಹನ ಮತ್ತು ಪತ್ರಿಕೋದ್ಯಮವನ್ನು ಪೋಷಿಸಿದ ಕೀರ್ತಿ **ಭಾರತೀಯ ಭಾಷಾ ಪತ್ರಿಕೋದ್ಯಮದ ಪಿತಾಮಹ** ರಾಜಾ ರಾಮ್‌ಮೋಹನ್‌ರಾಯ್ ಅವರಿಗೆ ಸಲ್ಲುತ್ತದೆ. ಭಾರತೀಯ ಸಂಸ್ಕೃತಿ, ತತ್ವಗಳ ಮೇಲೆ ಆಕ್ರಮಣ ನಡೆಸಿದ್ದ ವಿದೇಶೀ ಮಿಷನರಿಗಳ ಮೇಲೆ ಪ್ರತಿದಾಳಿ ಮಾಡುವ ಸಲುವಾಗಿ ಇಂಗ್ಲೀಷ್ ಮತ್ತು ಬೆಂಗಾಲಿ ಭಾಷೆಗಳಲ್ಲಿ **ಬ್ರಾಹ್ಮಿನ್ ಸವದ್** ಬೆಂಗಾಲಿಯಲ್ಲಿ **ಸಂಬೋಧ ಕೌಮುದಿ** ಮತ್ತು ಪರ್ಷಿಯನ್ ಭಾಷೆಯಲ್ಲಿ **ಮೀರತ್-ಉಲ್-ಅಕ್ಬರ್** ಪತ್ರಿಕೆಗಳನ್ನು ಅವರು ಸ್ಥಾಪಿಸಿದರು. ೧೯ನೇ ಶತಮಾನದ ೩೦-೪೦ರ ದಶಕದಲ್ಲಿ ರಾಯ್ ಪ್ರಾರಂಭಿಸಿದ ಸಮಾಜ ಸುಧಾರಣಾ ಆಂದೋಲನದ ಮುಖ್ಯ ವಾಹಕಗಳಾದವು ಈ ಪತ್ರಿಕೆಗಳು.



**ರಾಜಾ ರಾಮ್‌ಮೋಹನ್‌ರಾಯ್**

ಭಾರತದಲ್ಲಿ ಪತ್ರಿಕಾ ಸ್ವಾತಂತ್ರ್ಯ ಮತ್ತು ಪತ್ರಿಕೆಗಳ ಪಾತ್ರವನ್ನು ವಿವರಿಸಿದ ಮೊದಲಿಗ ರಾಜಾ ರಾಮ್‌ಮೋಹನ್‌ರಾಯ್. ಪತ್ರಿಕೆಗಳು ಜನರಲ್ಲಿ ಅರಿವು ಮೂಡಿಸುವ ಒಂದು ಸಾಧನವೆಂದು ಭಾವಿಸಿದ್ದ ರಾಯ್ ಈ ಸುದ್ದಿ ವಾಹಕಗಳು ಅಭಿವ್ಯಕ್ತಿ ಸ್ವಾತಂತ್ರ್ಯ ಹೊಂದಿರಬೇಕೆಂದು ನಂಬಿದ್ದರು. ಆಳುವವರು ಮತ್ತು ಆಳಿಸಿಕೊಳ್ಳುವವರ ನಡುವಿನ ಸಂಪರ್ಕಸೇತು ಈ ಪತ್ರಿಕೆಗಳೆಂದು ಅವರು ಪ್ರತಿಪಾದಿಸುತ್ತಿದ್ದರು.

ಯೂರೋಪಿಯನ್ ತ್ರಿಮೂರ್ತಿಗಳಾದ ಹಿಕ್ಕಿ, ಡ್ಯೂಯೆನ್, ಬಕ್ಕಿಂಗ್ ಹ್ಯಾಂ ರಂತೆ ರಾಜಾ ರಾಮ್‌ಮೋಹನ್‌ರಾಯ್ ಅವರ ಸಂಪಾದಕೀಯವೂ ಅಂದಿನ ಸರ್ಕಾರವನ್ನು ಸಾಕಷ್ಟು ಕೆರಳಿಸಿತು. ಇದರಿಂದಾಗಿ ೧೮೨೩ರಲ್ಲಿ ಜಾನ್ ಆಡೆಮ್‌ನ ಭಾಷಾ ಪತ್ರಿಕೆ ಕಾಯ್ದೆ ಜಾರಿಗೆ ಬಂತು. ಈ ಕಾಯ್ದೆ ಭಾಷಾ ಪತ್ರಿಕೆಗಳ ಸ್ವಾತಂತ್ರ್ಯಹರಣ ಮಾಡಿತು.

ಬ್ರಿಟಿಷ್ ಅಧಿಕಾರಿಗಳ ಮಲತಾಯಿ ಧೋರಣೆ, ಅವರು ಆಗಿಂದಾಗ್ಗೆ ಅಳವಡಿಸಿದ ಹಿಮ್ಮೆಟ್ಟಿಸುವ ಕ್ರಮ, ಮೊಳೆ ಜೋಡಿಸುವ ತೊಂದರೆ ಮತ್ತು ಆರ್ಥಿಕ ಮುಗ್ಗಟ್ಟಿನ ನಡುವೆಯೂ ಭಾರತೀಯ ವಾರ್ತಾ ಪತ್ರಿಕೆಗಳು ಹೆಚ್ಚಾಗತೊಡಗಿದವು. ಅವುಗಳ ಗಾತ್ರ ಹಾಗೂ ಸ್ಥಾನಮಾನ ಹೆಚ್ಚಾಯಿತು. ೧೮೩೫ರಿಂದ ೧೮೫೭ರ ನಡುವೆ ಸರ್ಕಾರದ ನಿಯಮಗಳು ಸ್ವಲ್ಪ ಸಡಿಲವಾಗಿ ಪತ್ರಿಕೆಗಳ ಉತ್ಪಾದನೆಗೆ ಒತ್ತಾಸೆ ಬಂದಿತು. ನಂತರದ ದಿನಗಳಲ್ಲಿ ಪತ್ರಿಕೆಗಳ ಸಂಖ್ಯೆ ಹೆಚ್ಚಾಗಲು ಈ ಕೆಳಗಿನ ಅಂಶಗಳು ಕಾರಣವಾದವು:-

- ಆ ಕಾಲದಲ್ಲಿ ಉದ್ಭವಿಸಿದ ಸಾಮಾಜಿಕ - ಧಾರ್ಮಿಕ ವಿವಾದಗಳು, ಸ್ವಾತಂತ್ರ್ಯ ಸಂಗ್ರಾಮದಂತಹ ವಿಚಾರಗಳನ್ನು ಕುರಿತ ಮಾಹಿತಿ, ಸುದ್ದಿಗಾಗಿ ಇದ್ದ ಬೇಡಿಕೆ.
- ಪತ್ರಿಕೆಗಳಲ್ಲಿ ಇರುತ್ತಿದ್ದ ಪ್ರಸಿದ್ಧ ಪತ್ರಕರ್ತರು - ನಾಯಕರ ಅಭಿಪ್ರಾಯ/ಹೇಳಿಕೆಗಳು.
- ತಂತ್ರಜ್ಞಾನ ಅಭಿವೃದ್ಧಿಯ ಪರಿಣಾಮವಾಗಿ ಆರ್ಥಿಕತೆ ಹಾಗೂ ಅಂತರರಾಷ್ಟ್ರೀಯ ಸುದ್ದಿ ಪ್ರಕಟಣೆ.

- ರಾಯ್‌ಟರ್‌ನಂತಹ ಅಂತರರಾಷ್ಟ್ರೀಯ ಸುದ್ದಿ ಸಂಸ್ಥೆ ಮತ್ತು ಅಸೋಸಿಯೇಟೆಡ್ ಪ್ರೆಸ್ ಆಫ್ ಇಂಡಿಯಾ, ಫ್ರೀ ಪ್ರೆಸ್ ಆಫ್ ಇಂಡಿಯಾ, ಯೂನೈಟೆಡ್ ಪ್ರೆಸ್ ಆಫ್ ಇಂಡಿಯಾ, ಗ್ಲೋಬ್ ನ್ಯೂಸ್ ಏಜೆನ್ಸಿ, ಮತ್ತು ಓರಿಯಂಟ್ ಪ್ರೆಸ್‌ನಂತಹ ಆಂತರಿಕ ಸುದ್ದಿ ಸಂಸ್ಥೆಗಳ ಸ್ಥಾಪನೆ.
- ವೃತ್ತ ಪತ್ರಿಕೆಗಳ ವಲಯದಲ್ಲಿ ಉತ್ಪಾದನೆ, ವೃತ್ತಿ ಪರ ಹಾಗೂ ವ್ಯಾಪಾರೀ ವಿಚಾರಗಳಲ್ಲಿ ಸುಧಾರಣೆ ಮತ್ತು ಹೊಸ ವಿಚಾರ ಸೇರ್ಪಡೆ.

ಈ ಎಲ್ಲಾ ಕಾರಣಗಳಿಂದ ದೇಶಕ್ಕೆ ಸ್ವಾತಂತ್ರ್ಯ ಲಭಿಸುವ ವೇಳೆಗೆ ವೃತ್ತ ಪತ್ರಿಕೆಗಳ ಸಂಖ್ಯೆಯಲ್ಲಿ ಭಾರೀ ಹೆಚ್ಚಳ ಕಂಡು ಬಂತು. ಸುಮಾರು ೩೩೦ ದಿನ ಪತ್ರಿಕೆಗಳು ಒಟ್ಟು ಎರಡೂವರೆ ಕೋಟಿ ಜನರನ್ನು ತಲುಪುತ್ತಿದ್ದವು. ೩,೨೦೩ಕ್ಕೂ ಹೆಚ್ಚು ವಿವಿಧ ಬಗೆಯ ನಿಯತಕಾಲಿಕೆಗಳಿದ್ದವು. ದೇಶದ ವಿವಿಧ ಭಾಷೆಗಳಲ್ಲಿ ಪತ್ರಿಕೆಗಳು ಹೆಚ್ಚಿನ ಸಂಖ್ಯೆಯಲ್ಲಿ ಬೆಳಕು ಕಾಣತೊಡಗಿದವು.

ಬ್ರಿಟಿಷ್ ಆಳ್ವಿಕೆಯ ಕೊನೆಯ ಎಂಟು ವರ್ಷಗಳಲ್ಲಿ ಭಾರತೀಯ ಪತ್ರಿಕೋದ್ಯಮಕ್ಕೆ ಹೊಸ ಆಯಾಮ ದೊರಕಿದ್ದನ್ನು ಗಮನಿಸಬಹುದು. ಕೆಲ ಪತ್ರಿಕೆಗಳಿಗೆ ಗುಡಿ ಕೈಗಾರಿಕೆಯ ಸ್ಥಾನಮಾನಗಳಿಂದ ಸಣ್ಣ ಕೈಗಾರಿಕೆಯ ಸ್ಥಾನಮಾನ ಸಿಕ್ಕಿತು. ಭಾರತದ ಮೊದಲ ಪತ್ರಿಕಾ ಆಯೋಗ ನಡೆಸಿದ ಸಮೀಕ್ಷೆಯನ್ವಯ ಕೆಲವು ಪತ್ರಿಕೆಗಳು ಬರಹಗಳ ಧ್ವನಿ ಹಾಗೂ ಗುಣಮಟ್ಟದಲ್ಲಿ ಸುಧಾರಣೆ ಕಂಡವು. ಸ್ವಾತಂತ್ರ್ಯ ಸಂಗ್ರಾಮದ ಅನೇಕ ಮುಖಂಡರು ದೇಶ ಭಾಷಾ ಪತ್ರಿಕೋದ್ಯಮದ ಮೂಲಕವೂ ರಣಕಹಳೆ ಮೊಳಗಿಸತೊಡಗಿದರು.

## ಕನ್ನಡದಲ್ಲಿ ಮುದ್ರಣ ಕಲೆ

ಕ್ರಿಶ್ಚಿಯನ್ ಧರ್ಮ ಪ್ರಚಾರ ಹಾಗೂ ಮತಾಂತರದ ಕೆಲಸಗಳಿಗಾಗಿಯೇ ಕನ್ನಡದಲ್ಲೂ ಮುದ್ರಣ ಕಲೆ ಹುಟ್ಟಿಕೊಂಡಿತು. ವಿಶೇಷವೇನೆಂದರೆ, ಕನ್ನಡದ ಮೊಟ್ಟ ಮೊದಲ ಮುದ್ರಣ ನಡೆದದ್ದು ಬೆಂಗಾಲಿನ ಸೇರಂಪುರ್ (ಶ್ರೀರಾಂಪುರ್)ನಲ್ಲಿ. ೧೮೧೭ರಲ್ಲಿ **ಎ ಗ್ರಾಮರ್ ಆಫ್ ದಿ ಕರ್ನಾಟ ಲ್ಯಾಂಗ್‌ವೇಜ್** ಅನ್ನು ವಿಲಿಯಂ ಕ್ಯಾರಿ ತನ್ನ ಸಹಾಯಕ ಮನೋಹರ್‌ನಿಂದ ಕನ್ನಡದ ಮೊಳೆಗಳನ್ನು ಮಾಡಿಸಿಕೊಂಡು ಮುದ್ರಿಸಿದ. ಈ ಪುಸ್ತಕದಲ್ಲಿ ಕನ್ನಡ ವ್ಯಾಕರಣವನ್ನು ಇಂಗ್ಲೀಷಿನಲ್ಲಿಯೇ ಮುದ್ರಿಸಿದರೂ ಉದಾಹರಣೆಗಳನ್ನು ಕನ್ನಡದಲ್ಲಿ ನೀಡಲಾಗಿತ್ತು. ಕನ್ನಡ, ತೆಲುಗು ಲಿಪಿಗಳ ವ್ಯತ್ಯಾಸ ತಿಳಿಯದೇ ಈ ಪುಸ್ತಕದಲ್ಲಿ ಅಲ್ಲಲ್ಲಿ ಲಿಪಿಗೆ ಸಂಬಂಧಿಸಿದ ದೋಷಗಳಿವೆ. ಆದರೆ ಕ್ಯಾರಿಯ ಉದ್ದೇಶ ಧರ್ಮ ಪ್ರಚಾರಕ್ಕಾಗಿ ಕನ್ನಡ ಭಾಷೆಯನ್ನು ಅನುವಾದಿಸಿಕೊಳ್ಳುವುದಾಗಿದ್ದುದರಿಂದ ಅದರ ಲಿಪಿಯ ಬಗ್ಗೆ ಆತ ಹೆಚ್ಚು ಗಮನ ಹರಿಸಿದಂತಿಲ್ಲ. ಕೃತಿಯ ಲೋಪಗಳೇನೇ ಇರಲಿ ಕನ್ನಡ ಮುದ್ರಣ ಕಲೆಗೆ ಕ್ಯಾರಿ ನೀಡಿದ ಕೊಡುಗೆಯನ್ನು ಮರೆಯಲಾಗುವುದಿಲ್ಲ. ಅವನ ನಂತರ ೧೮೨೦ರಲ್ಲಿ ಜಾನ್ ಮ್ಯಾಕೆರಲ್‌ನ **ಎ ಗ್ರಾಮರ್ ಆಫ್ ದಿ ಕರ್ನಾಟಕ ಲ್ಯಾಂಗ್‌ವೇಜ್**, ೧೮೨೪ರಲ್ಲಿ ಫಾದರ್ ವಿಲಿಯಂ ರೀವ್‌ನ **ಇಂಗ್ಲೀಷ್-ಕನ್ನಡ ಅರ್ಥಕೋಶ** ಅಚ್ಚು ಕಂಡವು. ಕನ್ನಡ ನಾಡಿನಲ್ಲಿ ಮೊದಲ ಮುದ್ರಣ ಯಂತ್ರ ೧೮೨೭ರಲ್ಲಿ ಬಳ್ಳಾರಿಯಲ್ಲಿ ಸ್ಥಾಪನೆಯಾಯಿತು. ಕನ್ನಡದಲ್ಲಿ ಮುದ್ರಣಕಲೆ ಹುಟ್ಟುವ ಸಂದರ್ಭದಲ್ಲಿ ಮುಖ್ಯವಾಗಿ ಗುರುತಿಸಬೇಕಾದ ಅಂಶ ವಿದೇಶೀ ಪಂಡಿತರ ಕನ್ನಡ ಕಲಿಕೆಯ ಆಸಕ್ತಿ.

೧೮೩೪ರಲ್ಲಿ ಜರ್ಮನಿಯ ಬಾಲ್‌ನಿಂದ ಬಂದ ಮೂವರು ಪಾದ್ರಿಯರು ಮಂಗಳೂರಿನಲ್ಲಿ ಮುದ್ರಣಾಲಯ ಸ್ಥಾಪಿಸಿ, ಕನ್ನಡ ಭಾಷೆ ಕಲಿತು, ಕನ್ನಡಿಗರಿಗೂ ಮುದ್ರಣ ಕಲೆಯನ್ನು ಹೇಳಿಕೊಟ್ಟರು. ಜೊತೆಗೆ ಕನ್ನಡ ನೆಲದ ಧಾರ್ಮಿಕ ಪುಸ್ತಕಗಳನ್ನು

[illegible]

ಮೊದಲ ಬಾರಿಗೆ 1848 ರಲ್ಲಿ ಮಂಗಳೂರಿನಲ್ಲಿ ಅಚ್ಚಾದ
ಕನ್ನಡ ಜೈಮಿನಿ ಭಾರತದ ಮೊದಲನೇ ಪುಟ.

ಅಚ್ಚು ಹಾಕಿದ್ದು ಗಮನಾರ್ಹ ಹಾಗೂ ಸ್ತುತ್ಯಾರ್ಹ ಅಂಶ. ೧೮೪೮ ರಲ್ಲಿ ಜೈಮಿನಿ ಭಾರತ, ೧೮೫೦ ರಲ್ಲಿ ಬಸವ ಪುರಾಣ, ೧೮೫೧ರಲ್ಲಿ ದಶಪರ್ವ ಭಾರತ ಮತ್ತು ಚನ್ನಬಸವ ಪುರಾಣ ಅಚ್ಚು ಕಂಡವು. ಇವನ್ನೆಲ್ಲಾ ಲಿಥೋ ಮುದ್ರಣ ವಿಧಾನದಲ್ಲಿ ಮುದ್ರಿಸಲಾಯಿತು. ಇದಾದ ನಂತರ ಜನಪ್ರಿಯ ಸಾಹಿತ್ಯ ಮುದ್ರಣಕ್ಕೆ ಕೈ ಹಾಕಿದ ಪಾದ್ರಿಗಳು ೩೫೦ಕ್ಕೂ ಹೆಚ್ಚು ಗಾದೆಗಳಿದ್ದ ಕನ್ನಡ ಗಾದೆಗಳು, ೧೭೪ ಕನ್ನಡ ಪದ್ಯಗಳಿದ್ದ ದಾಸರ ಪದಗಳು, ಹರಿಭಕ್ತಸಾರ, ರಾವಣ ದಿಗ್ವಿಜಯ ಎನ್ನುವ ಜನಪದ ಕೃತಿಗಳನ್ನು ಅಚ್ಚಿಗಿಳಿಸಿದರು. ಇವು ಓದುವುದಕ್ಕೆ ಸರಾಗವೂ ಸ್ಪಷ್ಟವೂ ಆಗುವಂತೆ ಮುದ್ರಿತವಾಗಿದ್ದವು.

## ಕನ್ನಡದಲ್ಲಿ ಪತ್ರಿಕೆಗಳು

ಕನ್ನಡ ಪತ್ರಿಕೋದ್ಯಮ ಸುಮಾರು ಒಂದೂವರೆ ಶತಮಾನದಷ್ಟು ಪ್ರಾಚೀನವಾದುದು. ದೇಶಕ್ಕೆ ಸ್ವಾತಂತ್ರ್ಯ ಬರುವ ಮೊದಲೇ ಕನ್ನಡ ಪತ್ರಿಕೋದ್ಯಮ ಮೈಸೂರು, ಹೈದರಾಬಾದ್ ರಾಜ್ಯಗಳ, ಬೊಂಬಾಯಿ, ಮದರಾಸು ಬ್ರಿಟಿಷ್ ಪ್ರಾಂತ್ಯಗಳ

ವ್ಯಾಪ್ತಿಗೆ ಹರಡಿತ್ತು. ಆಗಿನ ಮೈಸೂರು ರಾಜ್ಯದ ಮೈಸೂರು, ಬೆಂಗಳೂರು ; ಬೊಂಬಾಯಿ ರಾಜ್ಯದ ಬೆಳಗಾವಿ, ಧಾರವಾಡ, ಹುಬ್ಬಳ್ಳಿ; ಮದರಾಸಿನ ಮಂಗಳೂರು ಹಾಗೂ ಹೈದರಾಬಾದ್ ರಾಜ್ಯದ ಗುಲ್ಬರ್ಗಾಗಳಲ್ಲಿ ಮುದ್ರಣಾಲಯಗಳಿದ್ದವು. ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲೂ ಕನ್ನಡ ಪತ್ರಿಕೆಗಳು ಗಮನಾರ್ಹ ಪಾತ್ರವಹಿಸಿದವು.

ಕನ್ನಡ ಪತ್ರಿಕೋದ್ಯಮ ಇತಿಹಾಸ ಕುರಿತು ಸವಿಸ್ತಾರವಾದ ಅಧ್ಯಯನ ಮಾಡಿರುವ ಶ್ರೀನಿವಾಸ ಹಾವನೂರ ಅವರು ಪ್ರಾರಂಭಿಕ ಪತ್ರಿಕೋದ್ಯಮವನ್ನು ಎರಡು ಘಟ್ಟಗಳಲ್ಲಿ ಗುರುತಿಸಿದ್ದಾರೆ.

**೧೮೪೩ರಿಂದ ೧೮೮೨ರವರೆಗಿನ ಮೊದಲ ಘಟ್ಟ :** ಪತ್ರಿಕೋದ್ಯಮ ಈ ಸಂದರ್ಭದಲ್ಲಿ ಮೆಲ್ಲನೆ ತಲೆಯೆತ್ತಿತ್ತು. ಎಲ್ಲ ಪತ್ರಿಕೆಗಳ ಉದ್ದೇಶ ಜನತೆಗೆ ಸುದ್ದಿಯನ್ನು ಕೊಡುವುದು ಮತ್ತು ಪ್ರತಿಯೊಂದು ವಿಷಯದ ತಿಳುವಳಿಕೆಯನ್ನು ಮಾಡಿಕೊಡುವುದಾಗಿದ್ದಿತು.

**೧೮೮೦ರ ನಂತರದ ಎರಡನೆ ಘಟ್ಟ :** ಆಗ ಪತ್ರಿಕೆಗಳನ್ನು ಹೊರಡಿಸುವುದು ಒಂದು ಪರಂಪರೆಯಾಗಿ ಮುಂದುವರೆಯಿತು. ೧೮೮೨ರ ಸುಮಾರಿಗೆ ನಾಡಿನಲ್ಲಿ ಇದ್ದ ಕೇವಲ ೪-೫ ಪತ್ರಿಕೆಗಳ ಸಂಖ್ಯೆಗೆ ಪ್ರತಿಯಾಗಿ ೧೯೦೦ರಲ್ಲಿ ಸುಮಾರು ೨೫ ಪತ್ರಿಕೆಗಳು ವಿವಿಧ ಊರುಗಳಲ್ಲಿ ಹೊರಡುತ್ತಿದ್ದವು. ಇವು ಆದರ್ಶಪೂರಿತ ಸುದುದ್ದೇಶ ಪತ್ರಿಕೆಗಳು.

ಕನ್ನಡ ಪತ್ರಿಕೋದ್ಯಮ ಹಲವು ಧೋರಣೆ, ಉದ್ದೇಶ, ನಿಲುವುಗಳನ್ನು ಹೊತ್ತು ಸಾಗಿಬಂದಿರುವುದು ಇತಿಹಾಸವನ್ನು ಸೂಕ್ಷ್ಮವಾಗಿ ಗಮನಿಸಿದಾಗ ವ್ಯಕ್ತವಾಗುತ್ತದೆ. ಹ. ವೆಂ. ನಾಗರಾಜ್‌ರಾವ್ ಅವರು ಕನ್ನಡ ಪತ್ರಿಕೆಗಳು ಬೆಳೆದು ಬಂದ ಪರಿಯನ್ನು ಐದು ಹಂತಗಳಲ್ಲಿ ಗುರುತಿಸುವುದು ಉಲ್ಲೇಖಾರ್ಹ.

- ಅನ್ಯ ದೇಶೀಯರಿಂದ ಆರಂಭ.
- ದೇಶೀಯರ ಪ್ರವೇಶ - ಸಣ್ಣ ಪುಟ್ಟ ಪ್ರಯತ್ನ
- ಸ್ವಾತಂತ್ರ್ಯ ಧೋರಣೆ - ಧೀಮಂತ ಪತ್ರಿಕಾಕರ್ತರ ಸಾಲು
- ರಾಷ್ಟ್ರಮಟ್ಟದಲ್ಲಿ ಘನತೆ - ಗುಣಮಟ್ಟಕ್ಕೆ ಸಾಧನೆ.
- ಆಧುನಿಕ ಅಭಿವ್ಯಕ್ತಿ - ಹೊಸ ನಿಲುವು; ಹೊಸ ಆಶೋತ್ತರ.

ಹಾಗೆಯೇ ಆ ಐದೂ ವರ್ಗಗಳ ಪತ್ರಿಕೆಗಳು ನಿರ್ವಹಿಸಿದ ಕಾರ್ಯಗಳೇನು, ಹೊತ್ತ ಜವಾಬ್ದಾರಿಗಳೇನು ಎಂಬುದನ್ನೂ ಅವರು ವಿವರಿಸಿದ್ದಾರೆ.

- ಪ್ರಾರಂಭದಲ್ಲಿ ಮತ ಪ್ರಚಾರ ಕಾರ್ಯ.
- ತನ್ನದೇ ನಿಟ್ಟ ನಿಲುವುಗಳನ್ನು ಹುಡುಕುವ ಪ್ರಯತ್ನ.
- ದೇಶಪ್ರೇಮ, ದೇಶ ಸ್ವಾತಂತ್ರ್ಯಗಳ ಕಡೆ ಜನಾಂಗವನ್ನು ಜಾಗೃತಗೊಳಿಸುವ ಗುರಿ.
- ಕನ್ನಡನಾಡು ನುಡಿಗಳ ಬಗ್ಗೆ ಎಚ್ಚರ; ಕನ್ನಾಡಿನ ಏಳ್ಗೆ-ಏಕತೆಗಳ ಸಂಕಲ್ಪ.
- ಸ್ವಾತಂತ್ರ್ಯಾನಂತರ ಸಾರ್ವಜನಿಕ ಅಭಿಪ್ರಾಯಗಳ ರೂಢಣೆ ಮತ್ತು ಸಂಘಟನೆಗಳ ಕರ್ತವ್ಯ.

## ಇತಿಹಾಸದತ್ತ ಒಂದು ನೋಟ

ಕನ್ನಡದ ಮೊದಲ ಪತ್ರಿಕೆ ೧೮೪೩ರಲ್ಲಿ ಮಂಗಳೂರಿನಲ್ಲಿ ಪ್ರಕಟಗೊಂಡಿತೆನ್ನಲಾಗಿದೆ. **ಮಂಗಳೂರ ಸಮಾಚಾರ** ಎನ್ನುವ ಪಾಕ್ಷಿಕ ಪತ್ರಿಕೆಯನ್ನು ಬಾಸೆಲ್ ಮಿಷನ್‌ನ ರೆವರೆಂಡ್ ಹರ್ಮನ್ ಫ್ರೆಡ್ರಿಕ್ ಮೋಗ್ಲಿಂಗ್ ಸಂಪಾದಿಸಿ ಪ್ರಕಟಿಸಿದರು. ಕನ್ನಡ ಪತ್ರಿಕಾರಂಗದ ಆದ್ಯ ಸಂಪಾದಕರೆನಿಸಿದರು. ಮತ ಪ್ರಚಾರವೇ ಈ ಪತ್ರಿಕೆಯ ಮೂಲ ಉದ್ದೇಶವಾಗಿದ್ದರೂ ಇದರಲ್ಲಿ ಸ್ಥಳೀಯ ಆಸಕ್ತಿಯ ಸುದ್ದಿಗಳಿರುತ್ತಿದ್ದವು. ಜೊತೆಗೆ ಸರ್ಕಾರದ ಸುತ್ತೋಲೆ, ಅಧಿಸೂಚನೆಗಳೂ ಇರುತ್ತಿದ್ದವು. ಇದಾದ ಒಂದು ವರ್ಷದ ನಂತರ ಇದನ್ನು ಬಳ್ಳಾರಿಗೆ ಸ್ಥಳಾಂತರಿಸಿ **ಕನ್ನಡ ಸಮಾಚಾರ** ಎಂದು ಮರುನಾಮಕರಣ ಮಾಡಲಾಯಿತೆನ್ನಲಾಗಿದೆ.

> *The first kannada newspaper, a fortnightly was published in Mangalore in 1843 and it was called "Mangalore Samachara"..... after a year it was shifted to Bellary where it assumed a new name "Kannada Samachara.*[೩೨]
>
> *ಕನ್ನಡದ ಮೊದಲ ಪತ್ರಿಕೆ ೧೮೪೩ರಲ್ಲಿ ಪ್ರಕಟವಾದ "ಮಂಗಳೂರ ಸಮಾಚಾರ" ಎಂದು ಹೇಳಲಾಗುತ್ತದೆ. ಮುಂದೆ ಇದೇ ಪತ್ರಿಕೆ "ಕನ್ನಡ ಸಮಾಚಾರ"ವಾಗಿ ಬಳ್ಳಾರಿಗೆ ಸ್ಥಳಾಂತರಗೊಂಡಿತು.*[೩೩]

ಆದರೆ ಇನ್ನೊಂದು ವಾದದಂತೆ ಕನ್ನಡದ ಮೊದಲ ಪತ್ರಿಕೆ **"ಕನ್ನಡ ಸಮಾಚಾರ."** ಇದು ಮೊದಲು ಬಳ್ಳಾರಿಯಲ್ಲಿ ಹುಟ್ಟಿ ನಂತರ ಮಂಗಳೂರಿಗೆ ಬಂತೆಂದು ಹೇಳಲಾಗಿದೆ. ನಾಡಿಗ ಕೃಷ್ಣಮೂರ್ತಿಯವರ ಪ್ರಕಾರ

> *ಪ್ರಥಮ ಕನ್ನಡ ಪತ್ರಿಕೆಯು ಎಲ್ಲಿ ಯಾವಾಗ ಹುಟ್ಟಿತೆಂಬುದು ಜಿಜ್ಞಾಸೆಯಲ್ಲಿದೆ. ಕೆಲವರು ಅದು ಬಳ್ಳಾರಿಯಲ್ಲಿ ಹುಟ್ಟಿತೆಂದೂ ವಾದಿಸುತ್ತಾರೆ. ಆದರೆ ಪ್ರಥಮ ಕನ್ನಡ ಪತ್ರಿಕೆಯಾದ 'ಕನ್ನಡ ಸಮಾಚಾರ' ಎಂಬ ಪತ್ರಿಕೆಯು ೧೮೧೨ರಲ್ಲಿ ಬಳ್ಳಾರಿಯಲ್ಲಿ ಪ್ರಕಟವಾಗಿ, ಆನಂತರ ಕೆಲವು ಜರ್ಮನ್ ಪಾದ್ರಿಗಳು ಮಂಗಳೂರಿಗೆ ಹೋಗಿ ನೆಲೆಸಿದಾಗ, ಅವರ ಜೊತೆಗೆ ಆ ಪತ್ರಿಕೆಯನ್ನೂ ತೆಗೆದುಕೊಂಡು ಹೋದರು. 'ಕನ್ನಡ ಸಮಾಚಾರ' ಪತ್ರಿಕೆಯಲ್ಲಿ ಕೆಲಸ ಮಾಡುತ್ತಿದ್ದ ಒಬ್ಬ ಪಾದ್ರಿಯು ಮಂಗಳೂರಿನಲ್ಲಿ ಪ್ರಾರಂಭವಾದ ಕನ್ನಡ ಸಮಾಚಾರದ ಸಂಪಾದಕನೂ ಆದನು...... ಬಳ್ಳಾರಿಯ 'ಕನ್ನಡ ಸಮಾಚಾರ'ವೇ ಕನ್ನಡ ನಾಡಿನ ಪ್ರಥಮ ಪತ್ರಿಕೆಯೆಂದು ಘಂಟಾಘೋಷವಾಗಿ ಹೇಳಬಹುದು. ೧೮೪೨ ರಲ್ಲಿ ಮಂಗಳೂರಿನ ಬಾಸೆಲ್ ಮಿಷನ್ ಪ್ರೆಸ್‌ನಲ್ಲಿ ಈ ಪತ್ರಿಕೆಯನ್ನು ಅಚ್ಚು ಮಾಡಿದಾಗ ಅದರ ಹೆಸರನ್ನು "ಕನ್ನಡ ಸಮಾಚಾರ" ವೆಂದೇ ಮುಂದುವರೆಸಿದರು.*[೩೪]

ನಾಡಿಗ ಕೃಷ್ಣಮೂರ್ತಿಯವರ ಈ ಹೇಳಿಕೆಯನ್ನು ಗಮನಿಸಿದರೆ ಅವರು ಹೇಳಿರುವಂತೆ ೧೮೧೨ರಲ್ಲಿ ಮೊದಲ ಕನ್ನಡ ಪತ್ರಿಕೆ ಬಳ್ಳಾರಿಯಲ್ಲಿ ಪ್ರಕಟವಾಗಿದೆ. ಬಳ್ಳಾರಿಯಲ್ಲಿ ಮೊದಲ ಮುದ್ರಣ ಯಂತ್ರ ಸ್ಥಾಪನೆಗೊಂಡಿರುವುದರಿಂದ, ಮೊದಲ ಪತ್ರಿಕೆ ಅಲ್ಲಿಯೇ ಪ್ರಕಟವಾಗಿರಬಹುದೇ ಎಂಬ ಸಂದೇಹ ಮೂಡಬಹುದಾದರೂ, ಖಚಿತ ಮಾಹಿತಿಯಂತೆ, ಆ ಮುದ್ರಣ

ಯಂತ್ರ ಸ್ಥಾಪನೆಗೊಂಡಿದ್ದು ೧೮೨೦ರಲ್ಲಿ ಆಗಿರುವುದರಿಂದ ೧೮೧೨ರಲ್ಲಿ ಮೊದಲ ಕನ್ನಡ ಪತ್ರಿಕೆ ಕನ್ನಡದ ನೆಲದಿಂದಲೇ ಹುಟ್ಟಿ ಬಂದಿರುವ ಸಾಧ್ಯತೆ ಕಡಿಮೆ ಅಥವಾ ಇಲ್ಲವೇ ಇಲ್ಲ ಎನ್ನಬಹುದು. ಅದಕ್ಕೂ ಮುನ್ನ ನಾಡಿಗ ಕೃಷ್ಣಮೂರ್ತಿಯವರು ಅದೇ ಪುಸ್ತಕದಲ್ಲಿ ಹೇಳಿರುವಂತೆ

> *೧೮೩೬ನೇ ಇಸವಿಯಲ್ಲಿ ಮೂವರು ಜರ್ಮನ್ ಪಾದ್ರಿಗಳು ಜರ್ಮನಿಯ ಬಾಲ್ ಎಂಬ ಊರಿನಿಂದ ಮಂಗಳೂರಿಗೆ ಬಂದರು, ಬಂದವರೇ ಮುದ್ರಣಾಲಯ ಸ್ಥಾಪಿಸಿ, ಕನ್ನಡ ಭಾಷೆಯನ್ನು ಕಲಿತು ಕನ್ನಡಿಗರಿಗೆ ಮುದ್ರಣ ಕಲೆಯನ್ನು ಹೇಳಿಕೊಟ್ಟು, ಕನ್ನಡ ಪುಸ್ತಕಗಳನ್ನು ಮುದ್ರಿಸತೊಡಗಿದರು.*[೩೧]

ಅವರ ಪ್ರಕಾರ ಕನ್ನಡ ನಾಡಿನಲ್ಲಿ ಮುದ್ರಣಯಂತ್ರ ಸ್ಥಾಪಿತವಾದದ್ದೇ ೧೮೩೬ರಲ್ಲಿ. ಅದೂ ಮಂಗಳೂರಿನಲ್ಲಿ. ಹಾಗಾದ ಮೇಲೆ ಕನ್ನಡದ ಮೊದಲ ಪತ್ರಿಕೆ ೧೮೧೨ರಲ್ಲಿ ಬಳ್ಳಾರಿಯಲ್ಲಿ ಹುಟ್ಟಿತೆಂಬ ಮಾತು ತರ್ಕಬದ್ಧವಾದುದಲ್ಲ. ಅಷ್ಟೇ ಅಲ್ಲದೆ, ೧೮೧೨ರಲ್ಲಿ ಬಳ್ಳಾರಿಯಲ್ಲಿ ಮೊದಲ ಮುದ್ರಣ ಕಂಡ ಪತ್ರಿಕೆ ಮೂವತ್ತು ವರ್ಷಗಳ ನಂತರ ಅಂದರೆ ೧೮೪೨ರಲ್ಲಿ ಮಂಗಳೂರಿಗೆ ಸ್ಥಳಾಂತರಗೊಂಡಿತು ಎಂಬ ಮಾತೂ ದಾಖಲೆಗಳೊಂದಿಗೆ ದೃಢಪಟ್ಟಿಲ್ಲ. ಆ ಕಾಲದಲ್ಲಿ ಪ್ರಾದೇಶಿಕ ಭಾಷಾ ಪತ್ರಿಕೆಯೊಂದು ೩೦ ವರ್ಷಗಳ ಕಾಲ ಜೀವಂತವಾಗಿರುವುದು ಕಷ್ಟಸಾಧ್ಯದ ವಿಚಾರವಾಗಿತ್ತು. ಒಂದು ವೇಳೆ ಹಾಗೆ ಉಳಿದಿದ್ದರೆ ಅದು ಉಳಿದಿದ್ದಕ್ಕೆ ಸಾಕ್ಷಿ-ಪುರಾವೆಗಳು ಈವರೆಗೂ ಲಭ್ಯವಾದಂತಿಲ್ಲ. ಹಾಗಾಗಿ ನಾಡಿಗ ಕೃಷ್ಣಮೂರ್ತಿಯವರು ಭಾರತೀಯ ಪತ್ರಿಕೋದ್ಯಮ ಕೃತಿಯಲ್ಲಿ ಮಾಡಿರುವ ಉಲ್ಲೇಖದಿಂದ ಕನ್ನಡದ ಪ್ರಥಮ ಪತ್ರಿಕೆಯ ಉಗಮದ ವಿಷಯವನ್ನು ವಿವಾದಕ್ಕೆ ತಳ್ಳಿದ್ದಾರೆ ಎನ್ನಬಹುದು.

ಹಾಗೇ ಎಂ. ಚಲಪತಿರಾವ್ ಅವರೂ

> *ಕ್ರೈಸ್ತ ಮತ ಪ್ರಚಾರಕರೇ ಕನ್ನಡ ಪತ್ರಿಕೋದ್ಯಮದ ಮೊದಲ ಸ್ಥಾಪಕರು, ಮೈಸೂರಿನ 'ವೃತ್ತಾಂತ ಪತ್ರಿಕೆ' ಕನ್ನಡದ ಮೊದಲ ಪತ್ರಿಕೆ*[೩೨]

ಎಂದು ಹೇಳಿ ದ್ವಂದ್ವತೆ ಮೂಡಿಸಿದ್ದಾರೆ. ಅವರ ಅರ್ಥದಲ್ಲಿ 'ವೃತ್ತಾಂತ ಪತ್ರಿಕೆ'ಯೊಂದಿಗೆ ಆಧುನಿಕ ಕನ್ನಡ ಪತ್ರಿಕೋದ್ಯಮ ಯುಗ ಆರಂಭವಾಯಿತೆಂದೂ, ಅದೇ ಆ ಯುಗದ ಮೊದಲ ಪತ್ರಿಕೆ ಎಂದಿದ್ದಾರೆಂದೇ ಭಾವಿಸಿಕೊಂಡರೂ ಚಲಪತಿರಾವ್ ಅವರು ತಮ್ಮ ಪುಸ್ತಕದಲ್ಲಿ 'ಮಂಗಳೂರ ಸಮಾಚಾರ' ಅಥವಾ 'ಕನ್ನಡ ಸಮಾಚಾರ'ದ ವಿಷಯವನ್ನೇ ಪ್ರಸ್ತಾಪಿಸಿಲ್ಲದಿರುವುದು ಗಮನಾರ್ಹ.

ಮತ್ತೊಂದೆಡೆ ಬಿ.ಎಸ್. ಕೇಶವನ್

> *The first Newspaper in Kannada, the Kannada Samachar came out in Mangalore in 1842*[೩೩]

ಎಂದು ಹೇಳಿದ್ದಾರೆ. ಅವರ ಮಾತಿನಿಂದ ಕನ್ನಡದ ಮೊದಲ ಪತ್ರಿಕೆ ಮಂಗಳೂರಿನಲ್ಲಿ ಉದಿಸಿತು ಎನ್ನಬಹುದು. ಆದರೆ ಅದು 'ಕನ್ನಡ ಸಮಾಚಾರ' ವಾಗಿರದೆ 'ಮಂಗಳೂರ ಸಮಾಚಾರ' ಎಂದೂ ೧೮೪೨ಕ್ಕೆ ಬದಲಾಗಿ ೧೮೪೩ ರಲ್ಲಿ ಎಂದೂ ಒಪ್ಪಬಹುದಾಗಿದೆ.

ಈ ಎಲ್ಲ ವಾದಗಳ ಹಿನ್ನೆಲೆಯಲ್ಲಿ ಕನ್ನಡದ ಮೊದಲ ಪತ್ರಿಕೆ 'ಮಂಗಳೂರ ಸಮಾಚಾರ' ಎಂದು ಹೇಳಬಹುದಾಗಿದೆ. ಅದಕ್ಕೆ ದಾಖಲೆ ಎಂಬಂತೆ ಮಂಗಳೂರ ಸಮಾಚಾರದ ಮೊದಲ ಸಂಪುಟ ಮೊದಲ ಸಂಚಿಕೆಯ ಪ್ರತಿ ಉಪಲಬ್ಧವಿದೆ. ಅದರ ಮೇಲೆ 'ಮಂಗಳೂರ ಸಮಾಚಾರ, ೧೮೪೩ರ ಜೂಲೈ ೧ನೇ ತಾರೀಖು, ೧ನೇ ಪುಸ್ತಕ, ೧ನೇ ಅಂಕೆ, ಕ್ರಯವು ೧ ದುಡ್ಡು' ಎಂಬ ಲಿಖಿತ ದಾಖಲೆಯಿರುವುದು ಎಲ್ಲ ವಿವಾದಗಳಿಗೆ ತೆರೆ ಎಳೆಯುತ್ತದೆ. ಇದರ ಪೀಠಿಕೆಯ ಭಾಗದಲ್ಲಿ ಪ್ರಾರಂಭದ ಮೊದಲ ಶಬ್ದವೇ "ಮಂಗಲೂರಿನವರ ......" ಎಂಬುದಾಗಿದ್ದು, ಇದು ಮಂಗಳೂರಿನಲ್ಲಿ ಮುದ್ರಣಗೊಂಡಿದೆ ಎನ್ನುವ ಸುಳಿವು ನೀಡುತ್ತದೆ.


ಮಂಗಳೂರ ಸಮಾಚಾರ

ಕನ್ನಡದ ಪ್ರಥಮ ಪತ್ರಿಕೆಯ ಪ್ರಥಮ ಪ್ರತಿ

ಹೀಗೆ ೧೮೪೩ರಲ್ಲಿ ಮಂಗಳೂರಿನಲ್ಲಿ ಹುಟ್ಟಿದ **ಮಂಗಳೂರ ಸಮಾಚಾರ** ಒಂದು ವರ್ಷದ ನಂತರ ಬಳ್ಳಾರಿಗೆ ಸ್ಥಳಾಂತರಗೊಂಡಿತು. ಮತ್ತು **ಕನ್ನಡ ಸಮಾಚಾರ** ಎಂಬ ಹೆಸರಿನಲ್ಲಿ ಹೊರಡುತ್ತಿತ್ತು. ಹೊಸ ಪರಿಸರದಲ್ಲಿ ಈ ಪತ್ರಿಕೆ ಹೆಚ್ಚು ಕಾಲ ಬದುಕಲಿಲ್ಲ.

೧೮೪೯ರಲ್ಲಿ ಕನ್ನಡದ ಮೊದಲ ವಾರಪತ್ರಿಕೆ **ಸುಬುದ್ಧಿ ಪ್ರಕಾಶ** ಬೆಳಗಾವಿಯಲ್ಲಿ ಪ್ರಕಟಗೊಂಡಿತು. ೧೯ನೇ ಶತಮಾನದ ಉತ್ತರಾರ್ಧದಲ್ಲಿ ಕನ್ನಡ ವರ್ತಮಾನ ಪತ್ರಿಕೆಗಳ ನೆಲೆವೀಡಾದ ಮೈಸೂರಿನಿಂದ ಹೆಚ್ಚಾಗಿ ಪತ್ರಿಕೆಗಳು ಪ್ರಕಟಗೊಂಡಿವೆ. ೧೮೫೯ರಲ್ಲಿ ಭಾಷ್ಯಂ ತಿರುಮಲಾಚಾರ್ಯರ ಸಂಪಾದಕತ್ವದಲ್ಲಿ ಹೊರಬಂದ ವಾರಪತ್ರಿಕೆ **ಮೈಸೂರು ವೃತ್ತಾಂತ ಬೋಧಿನಿ.** ಈ ಪತ್ರಿಕೆಗೆ ಮೈಸೂರು ಮಹಾರಾಜರ ಕೃಪಾಶ್ರಯ ದೊರೆತದ್ದರಿಂದ ಪತ್ರಿಕೆಯಲ್ಲಿ ಸರ್ಕಾರದ ಚಟುವಟಿಕೆಗಳನ್ನು ವರದಿ ಮಾಡಲಾಗುತ್ತಿತ್ತು. ೧೮೬೪ರ ವರೆಗೆ ಈ ಪತ್ರಿಕೆ ಉಳಿದಿತ್ತು. ೧೮೬೬ ರಲ್ಲಿ ಮೈಸೂರು ಸರ್ಕಾರವೇ **ಮೈಸೂರು ಗೆಜೆಟ್** ಎನ್ನುವ ಆಂಗ್ಲ - ಕನ್ನಡ ದ್ವಿಭಾಷಾ ವಾರಪತ್ರಿಕೆಯನ್ನು ಹೊರತಂದಿತು.


ಎಂ. ವೆಂಕಟಕೃಷ್ಣಯ್ಯ (ತಾತಯ್ಯ)

ಎಲ್. ರಿಕೆಟ್ಸ್ ಅವರು ಸಂಪಾದಕರಾಗಿದ್ದ ಈ ಪತ್ರಿಕೆ ಸರ್ಕಾರದ ಸುತ್ತೋಲೆ, ಅಧಿಸೂಚನೆಗಳ ಜೊತೆಗೆ ಇತರ ಸುದ್ದಿ ಅಭಿಪ್ರಾಯಗಳನ್ನೂ ಹಲವು ವೇಳೆ ಸರ್ಕಾರದ ನೀತಿಗಳನ್ನೂ ಕುರಿತ ಟೀಕೆ ಟಿಪ್ಪಣಿಗಳನ್ನು ಪ್ರಕಟಿಸುತ್ತಿತ್ತು. ಬಹುಶಃ **ಮೈಸೂರ್ ಗೆಜೆಟ್** ಪತ್ರಿಕೆಯೇ ಕನ್ನಡದ ಮೊದಲ ಸರ್ಕಾರೀ ಸ್ವಾಮ್ಯದ ಪತ್ರಿಕೆ ಎನ್ನಬಹುದು. ಕನ್ನಡದ ಮೊದಲ ದಿನ ಪತ್ರಿಕೆ **ಸರ್ವೋದಯ ಪ್ರಕಾಶಿಕಾ** ೧೮೮೮ರಲ್ಲಿ ಬೆಂಗಳೂರಿನಿಂದ ಪ್ರಕಟಗೊಳ್ಳುತ್ತಿತ್ತಾದರೂ ಆರ್ಥಿಕ ತೊಂದರೆಗಳಿಂದಾಗಿ ಬಹಳ ಬೇಗನೇ ವಾರ ಪತ್ರಿಕೆಯಾಗಿ ರೂಪುಗೊಂಡಿತು. ಬಿ. ನರಸಿಂಗರಾವ್ ಈ ದಿನಪತ್ರಿಕೆಯ ಸಂಪಾದಕರಾಗಿದ್ದರು.

ಕನ್ನಡ ಪತ್ರಿಕೋದ್ಯಮದ ಪ್ರಾರಂಭಿಕ ದಿನಗಳಲ್ಲಿ ಅಸಾಧಾರಣ ಶ್ರಮ ಸಲ್ಲಿಸಿದ ಕೀರ್ತಿ ಮೈಸೂರಿನ ಎಂ. ವೆಂಕಟಕೃಷ್ಣಯ್ಯ (ತಾತಯ್ಯ) ಅವರಿಗೆ ಸಲ್ಲುತ್ತದೆ. ಅವರನ್ನು ಆಧುನಿಕ ಕನ್ನಡ ಪತ್ರಿಕೋದ್ಯಮದ ಸಂಸ್ಥಾಪಕ ಎಂದೇ ಹೇಳಲಾಗುತ್ತದೆ. ಅವರು ೧೮೮೫ರಲ್ಲಿ **ವೃತ್ತಾಂತ ಚಿಂತಾಮಣಿ** ಎನ್ನುವ ಸಾಪ್ತಾಹಿಕ ಪತ್ರಿಕೆಯನ್ನು ಮೈಸೂರಿನಿಂದ ಹೊರಡಿಸುವುದರ ಜೊತೆಗೆ ಕನ್ನಡ ಪತ್ರಿಕೋದ್ಯಮದ ಬೆಳವಣಿಗೆಗೆ ವಿಶೇಷವಾಗಿ ಶ್ರಮಿಸಿದರು. ಬಹಳ ಸರಳವಾದ, ನೇರವಾದ, ಪರಿಣಾಮಕಾರಿಯಾದ ಬರವಣಿಗೆ ಮೂಲಕ ಸಾಮಾಜಿಕ ಸುಧಾರಣಾ ಕಾರ್ಯ

ನಡೆಸಿದರು. ಮೈಸೂರು ವಿಶ್ವ ವಿದ್ಯಾನಿಲಯದಲ್ಲಿ ಪತ್ರಿಕೋದ್ಯಮ ವಿಭಾಗ ಪ್ರಾರಂಭಿಸಿ, ಅಲ್ಲಿ ವ್ಯಾಸಂಗ ಪೂರೈಸುವ ಅತ್ಯುತ್ತಮ ವಿದ್ಯಾರ್ಥಿಗೆ ಬಹುಮಾನ ನೀಡಿ ಪ್ರೋತ್ಸಾಹಿಸುವಂತೆ ದತ್ತಿಯೊಂದನ್ನು ಅವರು ಸ್ಥಾಪಿಸಿದ್ದು ಸ್ಮರಣಾರ್ಹ. ಆದರೆ ಅಂತಹ ಒಂದು ವಿಭಾಗವನ್ನು ಆರಂಭಿಸುವುದಕ್ಕೆ ಮೈಸೂರು ವಿಶ್ವ ವಿದ್ಯಾನಿಲಯಕ್ಕೆ ೩೦ ವರ್ಷಗಳು ತಗುಲಿದವು. ವೆಂಕಟಕೃಷ್ಣಯ್ಯನವರು ಕನ್ನಡ ಮತ್ತು ಇಂಗ್ಲೀಷಿನಲ್ಲಿ ಸುಮಾರು ೧೦ಕ್ಕೂ ಹೆಚ್ಚು ವೃತ್ತ ಪತ್ರಿಕೆಗಳನ್ನು ನಡೆಸಿದರು. ಅವುಗಳಲ್ಲಿ ೧೯೧೨ರಲ್ಲಿ ಪ್ರಾರಂಭವಾದ **ಸಂಪದಭ್ಯುದಯ** ದಿನಪತ್ರಿಕೆ, ೧೮೯೯ರಲ್ಲಿ **ಸಾಧ್ವಿ** ವಾರಪತ್ರಿಕೆ, ೧೮೯೦ ರಲ್ಲಿ ವೃತ್ತಾಂತ ಚಿಂತಾಮಣಿ, **ಮೈಸೂರ್ ಹೆರಾಲ್ಡ್** ಜನಪ್ರಿಯವಾಗಿದ್ದವು. ವೆಂಕಟಕೃಷ್ಣಯ್ಯನವರ ಸ್ಫೂರ್ತಿಯಿಂದ ಎಂ. ಗೋಪಾಲ್ ಐಯ್ಯಂಗಾರ್ ಮತ್ತು ಎಂ. ಶ್ರೀನಿವಾಸ್ ಐಯ್ಯಂಗಾರ್ ಸೋದರರು ೧೮೯೫ರಲ್ಲಿ ಬೆಂಗಳೂರಿನಿಂದ ಹೊರಡಿಸಿದ **ಕನ್ನಡ ನಡೆಗನ್ನಡಿ** ಪತ್ರಿಕೆ ಅತ್ಯಂತ ಪ್ರಭಾವಿ ಪತ್ರಿಕೆಯಾಗಿತ್ತು.

ಪತ್ರಿಕೆಗಳನ್ನು ಪ್ರಾರಂಭಿಸುವುದಕ್ಕೆ ಮುನ್ನ ಸರ್ಕಾರದ ಅನುಮತಿ ಪಡೆದಿರಬೇಕು ಎನ್ನುವ ಶಾಸನ ೧೯೦೮ರಿಂದ ಜಾರಿಗೆ ಬಂದಿತು. ಮೈಸೂರು ಸರ್ಕಾರ ಜಾರಿಗೆ ತಂದ 'ಮೈಸೂರು ವೃತ್ತ ಪತ್ರಿಕೆ ನಿಯಂತ್ರಣ ಕಾಯ್ದೆ'ಯನ್ವಯ, ನೀಡಿದ್ದ ಅನುಮತಿಯನ್ನು ರದ್ದು ಮಾಡುವ ಅಧಿಕಾರವನ್ನೂ ಸರ್ಕಾರ ಹೊಂದಿತ್ತು. ಅನುಮತಿ ಇಲ್ಲದೆ ಪತ್ರಿಕೆ ನಡೆಸುವವರನ್ನೂ ಅನುಮತಿ ರದ್ದಾದ ಮೇಲೂ ಪತ್ರಿಕೆ ಮುಂದುವರೆಸುವವರನ್ನೂ ತೀವ್ರಶಿಕ್ಷೆಗೆ ಗುರಿ ಮಾಡುವ ಹಕ್ಕೂ ಸರ್ಕಾರಕ್ಕೆ ಇತ್ತು. ಈ ಕಾಯ್ದೆಗೆ ಮೊದಲು ಬಲಿಯಾದವರು 'ಕನ್ನಡ ನಡೆಗನ್ನಡಿ' ಸಂಪಾದಕರು. ನಂತರ, ೧೯೦೭ರಲ್ಲಿ ಪ್ರಾರಂಭವಾಗಿದ್ದ ರಾಷ್ಟ್ರೀಯವಾದಿ ದಿನಪತ್ರಿಕೆ 'ಭಾರತಿ'ಯನ್ನು ದುರ್ಬಲಗೊಳಿಸಲಾಯಿತು. ಈ ಕಾಯ್ದೆಯನ್ನು ತೀವ್ರವಾಗಿ ಪ್ರತಿರೋಧಿಸಿದ್ದು ವೆಂಕಟಕೃಷ್ಣಯ್ಯನವರು. ಹಾಗೂ ಅದರ ತತ್ಪರಿಣಾಮ ಅವರ ಪತ್ರಿಕೆಗಳು ಕೊನೆಕಂಡವು. ಈ ಪತ್ರಿಕಾ ಕಾಯ್ದೆಯನ್ನು ದಿವಾನ್ ವಿಶ್ವೇಶ್ವರಯ್ಯನವರ ಕಾಲದಲ್ಲಿ ಮಾರ್ಪಾಡು ಮಾಡಿದ ನಂತರ ಮತ್ತೆ ವೆಂಕಟಕೃಷ್ಣಯ್ಯನವರ ಪತ್ರಿಕೆಗಳು ಪ್ರಕಟಗೊಂಡವು. ಪತ್ರಿಕೆಗಳ ಬೆಳವಣಿಗೆಯನ್ನು ಉತ್ತೇಜಿಸುತ್ತಿದ್ದ ಸರ್ ಎಂ.ವಿ. ಪತ್ರಿಕಾ ನಿರ್ಬಂಧವೆಂಬ ಕರಾಳ ಶಾಸನದ ಒರಟು ದೊಣ್ಣೆಯನ್ನು ನಾನು ಮುಟ್ಟಲಾರೆನೆಂದು ಹೇಳುತ್ತಿದ್ದರು.

೧೮೮೦-೧೯೦೮ರ ಅವಧಿಯಲ್ಲಿ ಹಲವಾರು ಕನ್ನಡ ಪತ್ರಿಕೆಗಳು ಪ್ರಕಟವಾದವು. ಹುಬ್ಬಳ್ಳಿಯಿಂದ **ಕನ್ನಡ ಕೇಸರಿ** (೧೮೮೮), ಬೆಂಗಳೂರಿನಿಂದ **ಒಕ್ಕಲಿಗರ ಪತ್ರಿಕೆ** (೧೯೦೭) ಅಲ್ಲಿಂದಾಚೆಗೆ ಒಂದರ ಹಿಂದೊಂದರಂತೆ ಅನೇಕ ಪತ್ರಿಕೆಗಳು ಹೊರಬಂದಿವೆ.

ಒಂದರ್ಥದಲ್ಲಿ ೨೦ನೆ ಶತಮಾನದ ಪ್ರಾರಂಭದಲ್ಲಿ ಕನ್ನಡ ಪತ್ರಿಕೋದ್ಯಮ ಹೊಸ ಜಾಡು ಹಿಡಿದದ್ದು ಗಮನಾರ್ಹ. ಅದಕ್ಕೆ ಸಾಹಿತ್ಯಕ ಸ್ತರ ಲಭ್ಯವಾಯಿತು. ಇದಕ್ಕೆ ಪಂಚಭಾಷಾ ಪಂಡಿತರಾಗಿದ್ದ ಡಾ. ಡಿ. ವಿ. ಗುಂಡಪ್ಪನವರ ಶ್ರಮ ಗಮನಾರ್ಹ. ಅವರು ೧೯೦೭ ರಲ್ಲಿ **ಸಮಾಚಾರ ಸಂಗ್ರಹ** ದಿನಪತ್ರಿಕೆಯನ್ನು ಬೆಂಗಳೂರಿನಿಂದ ಹೊರಡಿಸಿದರು. ೧೯೦೯ ರಲ್ಲಿ **ಸುಮತಿ** ವಾರಪತ್ರಿಕೆ, **ಕರ್ನಾಟಕ** ಎನ್ನುವ ಇನ್ನೂ ಒಂದು ವಾರಪತ್ರಿಕೆ ಪ್ರಕಟವಾಗುತ್ತಿದ್ದವು. ಭಾಷಾ ಕೋವಿದರಾಗಿದ್ದ ಡಿ.ವಿ.ಜಿ.ಯವರು ಪತ್ರಿಕೆಗಳಲ್ಲಿ ಬಳಸುತ್ತಿದ್ದ ಭಾಷೆ ಜನ ಸಾಮಾನ್ಯರ ತಿಳುವಳಿಕೆಗೆ ಬಹಳ ಹೆಚ್ಚಿನದಾಗಿದ್ದುದರಿಂದ ಸಾಮಾನ್ಯ ಓದುಗರನ್ನು ತಲುಪದೇ ಹೋಯಿತು. ಆದರೂ ಸಾರ್ವಜನಿಕ ಜೀವನ ಹಾಗೂ ಆಡಳಿತ ಯಂತ್ರದ ಮೇಲೆ ತೀವ್ರ ಪರಿಣಾಮ ಬೀರಿತು. ಮಿಗಿಲಾಗಿ ಪತ್ರಿಕೆಗಳಿಗೆ ಸಾಹಿತ್ಯಕ ಮೌಲ್ಯ ಹಾಗೂ ಸಾಂಸ್ಕೃತಿಕ ಸೊಬಗು ನೀಡಿತು.

೧೯೧೪ರಲ್ಲಿ **ಅರ್ಥಸಾಧಕ ಪತ್ರಿಕೆ**, ಅದೇ ವರ್ಷ ಟಿ. ಸಂಜೀವಮ್ಮನವರ ಸಂಪಾದನೆಯಲ್ಲಿ ಹೊರಬಂದ ಭಾಗ್ಯೋದಯ (ಶಿವಮೊಗ್ಗ), ೧೯೧೬ರಲ್ಲಿ ನಂಜನಗೂಡು ತಿರುಮಲಾಂಬ ಅವರ **ಕರ್ನಾಟಕ** ನಂದಿನಿ, ೧೯೧೩ರಲ್ಲೇ **ಸತಿ ಹಿತೈಷಿಣಿ**,

೧೯೨೨ರಲ್ಲಿ **ಸನ್ಮಾರ್ಗದರ್ಶಿನಿ** ಮುಂತಾಗಿ ಮಹಿಳೆಯರೂ ಪತ್ರಿಕೋದ್ಯಮದಲ್ಲಿ ತೊಡಗಿಕೊಂಡ ಚರಿತ್ರೆಯಿದೆ. ಹಾಗೆ ನೋಡಿದರೆ ಇವರೆಲ್ಲರಿಗಿಂತ ಮೊದಲೇ ೧೯೦೧ರಲ್ಲೇ ಆಂಗ್ಲ ಮಹಿಳೆ ಇ.ಎಂ. ಟಾಂಲಿನ್‌ಸನ್ ಎಂಬಾಕೆ ಮಹಿಳಾ ಸಖಿ ಎಂಬ ಕನ್ನಡ ಮಾಸ ಪತ್ರಿಕೆಯನ್ನು ತುಮಕೂರಿನಿಂದ ಹೊರಡಿಸುತ್ತಿದ್ದರು ಎಂದೂ, ಅದು ೨೫ ವರ್ಷಗಳ ಕಾಲ ನಡೆಯಿತೆಂದೂ, ತುಮಕೂರಿನ ಎನ್. ನಟರಾಜ್ ಸಂಶೋಧನೆ ಮಾಡಿರುವುದಾಗಿ ಕರ್ನಾಟಕ ಪತ್ರಿಕಾ ಅಕಾಡೆಮಿ ತಿಳಿಸಿದೆ.

**ಬೊಂಬಾಯಿ ಪ್ರಾಂತ್ಯದಲ್ಲಿ ಕನ್ನಡ ಪತ್ರಿಕೋದ್ಯಮದ ಮೇಲೆ ಬಾಲಗಂಗಾಧರ ತಿಲಕರ ಪ್ರಭಾವ ತೀವ್ರವಾಗಿತ್ತು.** ಅವರ ಪ್ರಭಾವದಿಂದಲೇ ಆಲೂರು ವೆಂಕಟರಾಯರು ೧೯೨೨ರಲ್ಲಿ ಜಯ **ಕರ್ನಾಟಕ**, ಹರ್ಡೇಕರ್ ಮಂಜಪ್ಪನವರು ಧನುರ್ಧಾರಿ, ಸೀತಾರಾಮ ಶಾಸ್ತ್ರಿಯವರು ವೀರಕೇಸರಿ ಪತ್ರಿಕೆಗಳನ್ನು ಪ್ರಕಟಿಸುತ್ತಿದ್ದರು. ಇವುಗಳಲ್ಲಿ ಧನುರ್ಧಾರಿಯಂತೂ ತಿಲಕರ ಕೇಸರಿ ಪತ್ರಿಕೆಯ ಲೇಖನಗಳನ್ನೇ ಅನುವಾದಿಸಿ ಬಳಸುತ್ತಿತ್ತು. ಈ ಪತ್ರಿಕೆಗಳು ಸಹ ಸಮಾಜ ಹಾಗೂ ಸರ್ಕಾರಗಳ ಮೇಲೆ ಪರಿಣಾಮ ಹಾಗೂ ಒತ್ತಡ ಉಂಟುಮಾಡುತ್ತಿದ್ದವು. ರಾಜ್ಯದ ಏಕೀಕರಣ ರಾಜಕೀಯ ಚಳವಳಿಗಳಲ್ಲಿ ಧಾರವಾಡದ ಪತ್ರಿಕೆಗಳಾದ ಚಂದ್ರೋದಯ (೧೯೧೩), ಸಚಿತ್ರ ಭಾರತ (೧೯೧೩), ಶುಭೋದಯ (೧೯೧೭), ವಿಜಯಾ (೧೯೨೧), ಕರ್ಮವೀರ (೧೯೨೧), ಬಾಗಲ್ಕೋಟೆಯ ಕನ್ನಡಿಗ (೧೯೨೫) ಪತ್ರಿಕೆಗಳು ಪ್ರಮುಖ ಪಾತ್ರ ವಹಿಸಿದವು.

ಮಹಿಳಾ ಪರ ಧ್ವನಿಯೂ ಅದೇ ವೇಳೆಗೆ ಹೆಚ್ಚಾಯಿತು. ಮಹಿಳಾ ಸಾಹಿತ್ಯಕ್ಕೆ ಒತ್ತು ನೀಡುವ ಪತ್ರಿಕೆ ಸುಪ್ರಭಾತವನ್ನು ಸರಸ್ವತಿ ಬಾಯಿ ರಾಜವಾಡೆ ೧೯೨೮ರಲ್ಲಿ ಹೊರಡಿಸಿದರು. ಅದೇ ವರ್ಷ ಸರೋಜಿನಿ ಮಹಿಷಿಯವರ ವೀರಮಾತೆ, ೩೦ರ ದಶಕದಲ್ಲಿ ಬೆಂಗಳೂರಿನಿಂದ ದ್ವಾರಕಾಬಾಯಿಯವರ **ಚಿತ್ರ**, ಆರ್. ಕಲ್ಯಾಣಮ್ಮನವರ **ಸರಸ್ವತಿ**, ಗದುಗಿನ ತಾರಾಬಾಯಿ ವಾಜಪೆ ಅವರ **ರಸಿಕ ರಂಜನಿ**, ೧೯೫೦ರಲ್ಲಿ ಎಂ. ಆರ್ ಲಕ್ಷ್ಮಮ್ಮನವರ **ಸೋದರಿ** ಮುಂತಾದ ಅನೇಕ ಪತ್ರಿಕೆಗಳು ಬೆಳಕು ಕಂಡಿವೆ.

ಇನ್ನೊಂದೆಡೆ ರಾಷ್ಟ್ರೀಯತೆಯ ವಾದವನ್ನೇ ಗುರಿಯಾಗಿಸಿಕೊಂಡದ್ದರಿಂದ ತಿರುಮಲೆ ತಾತಾಚಾರ್ಯ ಶರ್ಮ ಅವರ ವಿಶ್ವ **ಕರ್ನಾಟಕ** (೧೯೨೧) ಸರ್ಕಾರದ ಕೆಂಗಣ್ಣಿಗೆ ಪಾತ್ರವಾಯಿತು. ಆಗಿನ ಬ್ರಿಟಿಷ್ ಸರ್ಕಾರದ ವಿರುದ್ಧ ಹೋರಾಟ ನಡೆಸಿ, ಅನೇಕ ತ್ಯಾಗಗಳಿಗೂ ಸಿದ್ಧರಾಗಿ ಜೈಲುಶಿಕ್ಷೆ ಅನುಭವಿಸಿದರೂ ಶರ್ಮರು ಸರ್ಕಾರದ ಆಣತಿಗಳಿಗೆ ಮಣಿಯಲಿಲ್ಲ. ೧೯೨೯ರಲ್ಲಿ ಬೆಂಗಳೂರಿನಲ್ಲಿ ನಡೆದ ಗಲಭೆಗಳ ವರದಿ ಪ್ರಕಟಿಸಿದಕ್ಕಾಗಿ ಅವರ ಪತ್ರಿಕೆಯನ್ನು ದುರ್ಬಲಗೊಳಿಸಲಾಯಿತು. ವೀರಕೇಸರಿಯ ಸೀತಾರಾಮಶಾಸ್ತ್ರಿ, ನವಜೀವನದ ಅಶ್ವತ್ಥನಾರಾಯಣರಾವ್ ಅವರಂತೂ ಉಗ್ರಶಿಕ್ಷೆಗೆ ಗುರಿಯಾದರು. ಆದರೂ ೧೯೪೨ರ ವೇಳೆಗೆ ಬೇರೆ ಸಂಪಾದಕ ಹಾಗೂ ಆಡಳಿತ ಮಂಡಲಿಗಳ ನೆರವಿನಲ್ಲಿ ಮತ್ತೆ ಚೇತರಿಸಿಕೊಂಡ ವಿಶ್ವ ಕರ್ನಾಟಕ, 'ಕ್ವಿಟ್ ಇಂಡಿಯಾ' ಚಳವಳಿಯಲ್ಲಿ ಸಕ್ರಿಯ ಪಾತ್ರವಹಿಸಿತು; ಜನತೆಯ ಧ್ವನಿ ಎನಿಸಿತು. ಆಗಿನ ವೈಸ್‌ರಾಯ್‌ಗೆ ಬಹಿರಂಗ ಪತ್ರವನ್ನು ಪ್ರಕಟಿಸಿದ್ದಕ್ಕಾಗಿ ೧೯೪೪ರಲ್ಲಿ ಮತ್ತೆ ಕ್ಷೀಣಿಸಿ, ೧೯೪೫ರಲ್ಲಿ ಮತ್ತೊಮ್ಮೆ ಚಿಗುರಿತು - ವಿಶ್ವಕರ್ನಾಟಕ.

ಸರಿ ಸುಮಾರು ಇದೇ ಅವಧಿಯಲ್ಲಿ ರಾಷ್ಟ್ರೀಯವಾದವನ್ನು ಪ್ರತಿಪಾದಿಸುತ್ತಿದ್ದ ಇನ್ನೂ ಅನೇಕ ಪತ್ರಿಕೆಗಳನ್ನು ಇಲ್ಲಿ ಹೆಸರಿಸಬಹುದು. ೧೯೨೬ರಲ್ಲಿ ವೆಂಕಟಕೃಷ್ಣಯ್ಯನವರ ಆಪ್ತ ಶಿಷ್ಯ ಪಿ.ಆರ್. ರಾಮಯ್ಯ ತಾಯಿನಾಡು ಪತ್ರಿಕೆಯನ್ನು ಮೈಸೂರಿನಿಂದ ಹೊರಡಿಸಿದರು. ಮೊದಲು ವಾರಪತ್ರಿಕೆಯಾಗಿದ್ದ ತಾಯಿನಾಡು ನಂತರ ಬೆಂಗಳೂರಿಗೆ ಸ್ಥಳಾಂತರಗೊಂಡು ೧೯೨೯ರಲ್ಲಿ ದಿನಪತ್ರಿಕೆಯಾಯಿತು. ೧೯೫೨ರಲ್ಲಿ ಬೆಳ್ಳಿಹಬ್ಬವನ್ನು ಆಚರಿಸಿತು.

೧೯೨೫ರಲ್ಲಿ ವಾರಪತ್ರಿಕೆಯಾಗಿ ಬೆಳಗಾವಿಯಲ್ಲಿ ಪ್ರಾರಂಭಗೊಂಡ ಸಂಯುಕ್ತ ಕರ್ನಾಟಕ ಉತ್ತರ ಕರ್ನಾಟಕ ಭಾಗದ ಸ್ವಾತಂತ್ರ್ಯ ಚಳವಳಿಯ ಧ್ವನಿಯಾಯಿತು. ಇದೇ ಪತ್ರಿಕೆ ೧೯೩೩ರಲ್ಲಿಹುಬ್ಬಳ್ಳಿಗೆ ಬಂದು ದಿನಪತ್ರಿಕೆಯಾಯಿತು. ಪ್ರಸಿದ್ಧ ಪತ್ರಕರ್ತ ಹನುಮಂತರಾವ್ ಮೊಹರೆ ಇದರ ಸಂಪಾದಕರಾಗಿದ್ದರು. ಸ್ವರಾಜ್ಯ ಹಾಗೂ ಅಖಂಡ ಕರ್ನಾಟಕ ಈ ಪತ್ರಿಕೆಯ ಧ್ಯೇಯಘೋಷವಾಗಿತ್ತು. ೧೯೪೦ರಲ್ಲಿ ಸ್ವಲ್ಪ ಕಾಲ ಆರ್ಥಿಕವಾಗಿ ದುರ್ಬಲಗೊಂಡಿದ್ದು ಮತ್ತೆ ಚೇತರಿಸಿಕೊಂಡುಬಿಟ್ಟಿತು.

ಆರ್.ಆರ್. ದಿವಾಕರ್ ಅವರ ನೇತೃತ್ವದಲ್ಲಿ ೧೯೨೧ರಲ್ಲಿ ಧಾರವಾಡದಿಂದ ಕರ್ಮವೀರ ಹೊರಬಂದಿತು. ಸರ್ಕಾರಿ ಧೋರಣೆಗಳ ವಿರುದ್ಧ ದನಿ ಎತ್ತಿದ್ದಕ್ಕಾಗಿ ದಿವಾಕರ್ ಅವರ ದಸ್ತಗಿರಿಯಾದಾಗ ಹೆಚ್.ಆರ್. ಪುರೋಹಿತ್ ಅವರ ನೇತೃತ್ವದಲ್ಲಿ ಕರ್ಮವೀರ ಹುಬ್ಬಳ್ಳಿಗೆ ಬಂದಿತು.

ಈ ಇತಿಹಾಸದಿಂದ ನಾವು ಗಮನಿಸಬಹುದಾದ ಒಂದು ಮಹತ್ವದ ಅಂಶವೆಂದರೆ ಮೂಲತಃ ಮತಪ್ರಚಾರದ ಉದ್ದೇಶದಿಂದ ಆರಂಭವಾದ ಪತ್ರಿಕೆಗಳು ಕಾಲಕ್ರಮೇಣ ಜನಜಾಗೃತಿ ಮೂಡಿಸುವ ಮಾಧ್ಯಮಗಳಾಗಿ, ನಂತರ ಸರ್ಕಾರದ ಧೋರಣೆಗಳ ವಿರುದ್ಧ ತಿರುಗಿಬಿದ್ದ ಅಸ್ತ್ರಗಳಾಗಿ ರೂಪುಗೊಂಡಿದ್ದು. ಪತ್ರಿಕೆಗಳಿಗೆ ಪ್ರತಿಭಟನೆಯ ಶಕ್ತಿ ತಂದುಕೊಟ್ಟವರಲ್ಲಿ ವೆಂಕಟಕೃಷ್ಣಯ್ಯನವರು ಪ್ರಮುಖರು.

ಈ ಮಧ್ಯೆ ಮಕ್ಕಳಿಗೆಂದೇ ಹೊರಬರುತ್ತಿದ್ದ ನಮ್ಮ ಪುಸ್ತಕ (೧೯೩೬), ಹಿತೋಪದೇಶ, ಮಕ್ಕಳ ಪುಸ್ತಕ (ಸಚಿತ್ರ), ಬಾಲಭಾರತ (೧೯೭೮), ಮಕ್ಕಳ ಬಾವುಟ, ಪಾಪಚ್ಚಿ, ಚಂದಮಾಮ, ಬಾಲಮಿತ್ರ, ಬಾಲಮಂಗಳ, ಬೊಂಬೆಮನೆ ಮೊದಲಾದ ನಿಯತಕಾಲಿಕೆಗಳನ್ನೂ; ವಿಜ್ಞಾನಕ್ಕೆ ಸಂಬಂಧಿಸಿದ ವಿಜ್ಞಾನ ಕರ್ನಾಟಕ, ಜನಪ್ರಿಯ ವಿಜ್ಞಾನ, ಮಕ್ಕಳ ವಿಜ್ಞಾನ, ಪತ್ರಿಕೆಗಳು; ಕ್ರೀಡೆಗೆ ಸಂಬಂಧಿಸಿದಂತೆ ೧೯೭೨ ರಲ್ಲಿ ಕ್ರೀಡಾಂಗಣ, ಕ್ರೀಡಾರತ್ನ; ಚಲನಚಿತ್ರರಂಗವನ್ನು ಕುರಿತ ಮಾಹಿತಿ ಹೊತ್ತ ಪಾಕ್ಚಿತ್ರ, ಚಿತ್ರಸಮಾಚಾರ (೧೯೩೮), ಮೇನಕ, ವಿಜಯಚಿತ್ರ, ರೂಪತಾರ, ಚಿತ್ರಲತಾ, ಅರಗಿಣಿ ಪತ್ರಿಕೆಗಳೂ ಲಂಕೇಶ ಪತ್ರಿಕೆ, ಹಾಯ್ ಬೆಂಗಳೂರ್‌ನಂತಹ ಟ್ಯಾಬ್ಲಾಯ್ಡ್‌ಗಳನ್ನು ಗಮನಿಸಿದರೆ ವಿವಿಧ ವಯೋವರ್ಗ, ಲಿಂಗ, ಕಾಲ, ಪ್ರಾದೇಶಿಕತೆ, ಅಭಿರುಚಿ-ಆಸಕ್ತಿಗಳಿಗೆ ತಕ್ಕಂತ ಹಲವಾರು ಬಗೆಯ ಕನ್ನಡ ಪತ್ರಿಕೆಗಳು, ನಿಯತಕಾಲಿಕೆಗಳು ಇದ್ದವು, ಇಂದೂ ಇವೆ.

ಪ್ರಜಾಮತ ನಂತರ ಪ್ರಜಾಮಿತ್ರ (೧೯೩೧), ಜನವಾಣಿ (೧೯೩೪), ನವಭಾರತ (೧೯೪೧), ವಿಶಾಲ ಕರ್ನಾಟಕ (೧೯೪೭), ಪ್ರಜಾವಾಣಿ (೧೯೪೮), ಪ್ರಪಂಚ (೧೯೫೪), ಕನ್ನಡಪ್ರಭ (೧೯೫೭), ಸುಧಾ (೧೯೬೫), ಜನಮಿತ್ರ (೧೯೬೯), ಉದಯವಾಣಿ (೧೯೭೦), ಲೋಕವಾಣಿ (೧೯೭೪), ತರಂಗ (೧೯೮೨) ವಿಜಯಕರ್ನಾಟಕ (೧೯೯೯) ಹೀಗೆ ಅನೇಕ ದೈನಿಕ, ಸಾಪ್ತಾಹಿಕ, ಪಾಕ್ಷಿಕ ಹಾಗೂ ಮಾಸ ಪತ್ರಿಕೆಗಳು ಹೊರಬಂದಿವೆ. ಸ್ಥಳೀಯವಾದ ಸಣ್ಣ ಪತ್ರಿಕೆಗಳು, ಹೆಚ್ಚಿನ ಆವರ್ತನೆ ವ್ಯಾಪ್ತಿ ಹೊಂದಿದ ಮಧ್ಯಮ ಹಾಗೂ ಭಾರೀ ಪತ್ರಿಕೆಗಳು ಕನ್ನಡ ಪತ್ರಿಕೋದ್ಯಮವನ್ನು ಕೈ ಹಿಡಿದು ನಡೆಸಿವೆ.

ಇನ್ನೂ ಅನೇಕಾನೇಕ ವಿದ್ವಾಂಸರು ಪಂಡಿತರು, ಸಾಹಿತಿ - ಅಂಕಣಕಾರರು, ಪತ್ರಿಕೋದ್ಯಮಿ - ಪತ್ರಕರ್ತರು, ಮುತ್ಸದ್ದಿಗಳು ಸಮಾಜ ಸುಧಾರಕರು ಕನ್ನಡ ಪತ್ರಿಕೋದ್ಯಮದ ಏಳ್ಗೆಗೆ ಶ್ರಮಿಸಿದ್ದಾರೆ.

ನಮ್ಮ ಮಹಾಪ್ರಬಂಧದ ಬಂಧ ಕೆಡದಂತೆ, ಅಗತ್ಯಕ್ಕನುಸಾರವಾಗಿ ಮಾತ್ರ ಪತ್ರಿಕೋದ್ಯಮದ ಉಗಮ-ವಿಕಾಸವನ್ನು ಇಲ್ಲಿ ಪ್ರಸ್ತಾಪಿಸಿದ್ದೇವೆಯೇ ಹೊರತು ಇತರರ ಸಾಧನೆಗಳನ್ನು ಕಡೆಗಣಿಸಿಲ್ಲ ಅಥವಾ ಗಮನಿಸದೆಯೂ ಇಲ್ಲ.

## ಕನ್ನಡ ಪತ್ರಿಕೋದ್ಯಮದ ಮೈಲಿಗಲ್ಲುಗಳು

| | | |
|---|---|---|
| ೧೮೪೩ | : | ಮಂಗಳೂರ ಸಮಾಚಾರ: ಮೊದಲ ಪತ್ರಿಕೆ. |
| ೧೮೪೯ | : | ಸುಬುದ್ಧಿ ಪ್ರಕಾಶ: ಮೊದಲ ವಾರ ಪತ್ರಿಕೆ. |
| ೧೮೫೯ | : | ಮೈಸೂರು ವೃತ್ತಾಂತ ಬೋಧಿನಿ. |
| ೧೮೬೬ | : | ಮೈಸೂರು ಸರ್ಕಾರದ ಮೈಸೂರು ಗೆಜೆಟ್ ವಾರಪತ್ರಿಕೆ. |
| ೧೮೮೫ | : | ಆಧುನಿಕ ಕನ್ನಡ ಪತ್ರಿಕೋದ್ಯಮದ ಆರಂಭ - ವೃತ್ತಾಂತ ಚಿಂತಾಮಣಿ ಸಾಪ್ತಾಹಿಕ. |
| ೧೮೮೮ | : | ಸರ್ವೋದಯ ಪ್ರಕಾಶಿಕಾ ಮೊದಲ ದಿನಪತ್ರಿಕೆ. |
| ೧೯೦೮ | : | ಮೈಸೂರು ಸರ್ಕಾರದ ಪತ್ರಿಕಾ ಕಾಯ್ದೆ ಜಾರಿಗೆ. |
| ೧೯೧೨ರ ನಂತರ | : | ಅನೇಕ ಪ್ರಮುಖ ಪತ್ರಿಕೆಗಳ ಉಗಮ - ಕನ್ನಡದಲ್ಲಿ ಸುಭದ್ರ ಪತ್ರಿಕೋದ್ಯಮ. |

೧೯೯೬ರ ವೇಳೆಗೆ ಭಾರತದಲ್ಲಿ ಸುಮಾರು ೧೦೦ ಭಾಷೆ - ಉಪಭಾಷೆಗಳಲ್ಲಿ ಪತ್ರಿಕೆಗಳು ಪ್ರಕಟವಾಗುತ್ತಿದ್ದವು. ಇಂಗ್ಲೀಷ್ ಅಲ್ಲದೆ ಸಂವಿಧಾನದ ೮ನೇ ಷೆಡ್ಯೂಲ್‌ನಲ್ಲಿ ಸೂಚಿಸಿರುವ ೧೮ ಪ್ರಧಾನ ಭಾಷೆಗಳು, ಇತರ ಭಾರತೀಯ ಭಾಷೆ - ಉಪಭಾಷೆಗಳು ಮತ್ತು ಕೆಲ ವಿದೇಶೀ ಭಾಷೆಗಳಲ್ಲಿ ೮೧ ಪತ್ರಿಕೆಗಳೂ ಪ್ರಕಟಗೊಂಡಿವೆ. ಹಿಂದಿ ಭಾಷೆಯಲ್ಲಿ ಅತ್ಯಧಿಕ ಸಂಖ್ಯೆಯಲ್ಲಿ ಪತ್ರಿಕೆಗಳು ಬೆಳಕು ಕಂಡಿವೆ. ಆ ವರ್ಷ ಒಟ್ಟು ೧೫,೬೪೭ ಹಿಂದಿ ಪತ್ರಿಕೆಗಳು ಪ್ರಕಟಗೊಂಡಿವೆ. ಇಂಗ್ಲೀಷ್ - ೪೯೧೨, ಉರ್ದು - ೨೫೬೭, ಬೆಂಗಾಲಿ - ೨೨೫೪, ಮರಾಠಿ - ೧೭೩೬ ತಮಿಳು - ೧೬೩೦, ಕನ್ನಡ - ೧೩೪೦ ಪತ್ರಿಕೆಗಳು ಪ್ರಕಟಗೊಂಡಿವೆ. ಭಾಷಾವಾರು ಪತ್ರಿಕೆಗಳು ಪ್ರಕಟಗೊಂಡ ಸಂಖ್ಯೆಯ ಪಟ್ಟಿಯಲ್ಲಿ ಕನ್ನಡ ೧೯೯೬ರಲ್ಲಿ ೭ನೇ ಸ್ಥಾನದಲ್ಲಿದೆ.

ಪ್ರಸಾರ ಸಂಖ್ಯೆಯ ದೃಷ್ಟಿಯಿಂದಲೂ ಹಿಂದಿ ಪತ್ರಿಕೆಗಳು ಅಗ್ರಸ್ಥಾನದಲ್ಲಿವೆ. ೧೯೯೬ರಲ್ಲಿ ಹಿಂದಿ - ೩,೭೨,೩೧,೦೦೦, ಇಂಗ್ಲಿಷ್ - ೧,೧೭,೩೫,೦೦೦ ಹಾಗೂ ಮೂರನೇ ಸ್ಥಾನದಲ್ಲಿ ಮಲಯಾಳಂ - ೭೯,೧೨,೦೦೦ ಪ್ರತಿಗಳು ಓದುಗರನ್ನು ತಲುಪಿವೆ.

೧೯೯೩ರಿಂದ ೧೯೯೬ರವರೆಗೆ ಅತಿ ಹೆಚ್ಚಿನ ಶೀರ್ಷಿಕೆಗಳ (ಸಂಖ್ಯೆ ದೃಷ್ಟಿಯಿಂದ) ಪತ್ರಿಕೆಗಳನ್ನು ಪ್ರಕಟಿಸಿದ ಮೊದಲ ಹತ್ತು ರಾಜ್ಯಗಳ ಪೈಕಿ ಕರ್ನಾಟಕ ೮ನೇ ಸ್ಥಾನದಲ್ಲಿದೆ. (ಪಟ್ಟಿ - ೬)

## ಪಟ್ಟಿ - ೬*

| ಕ್ರ.ಸಂ.ನಂ. | ರಾಜ್ಯ | ೧೯೯೩ | ೧೯೯೪ | ೧೯೯೫ | ೧೯೯೬ |
|---|---|---|---|---|---|
| ೧. | ಉತ್ತರ ಪ್ರದೇಶ | ೫೧೩೧ | ೫೬೩೦ | ೬೧೦೫ | ೬೮೦೪ |
| ೨. | ದೆಹಲಿ | ೪೪೩೫ | ೪೭೩೩ | ೪೯೮೩ | ೫೨೫೪ |
| ೩. | ಮಹಾರಾಷ್ಟ್ರ | ೩೬೧೪ | ೩೭೭೫ | ೩೮೮೨ | ೩೯೭೯ |
| ೪. | ಪಶ್ಚಿಮ ಬಂಗಾಳ | ೨೮೯೬ | ೨೯೯೨ | ೩೦೫೨ | ೩೧೪೮ |
| ೫. | ಮಧ್ಯಪ್ರದೇಶ | ೨೪೨೦ | ೨೬೨೯ | ೨೮೧೦ | ೩೦೦೩ |
| ೬. | ರಾಜಾಸ್ತಾನ | ೨೪೩೫ | ೨೫೯೮ | ೨೬೮೦ | ೨೭೮೧ |
| ೭. | ತಮಿಳುನಾಡು | ೧೯೩೭ | ೨೦೧೮ | ೨೧೧೭ | ೨೧೫೧ |
| ೮. | ಕರ್ನಾಟಕ | ೧೬೫೦ | ೧೭೭೪ | ೧೮೫೯ | ೧೯೨೬ |
| ೯. | ಆಂಧ್ರಪದೇಶ | ೧೫೮೩ | ೧೬೬೮ | ೧೭೩೦ | ೧೭೮೯ |
| ೧೦. | ಬಿಹಾರ | ೧೪೬೧ | ೧೫೦೦ | ೧೫೨೮ | ೧೫೫೫ |

*ಮೂಲ : ಪ್ರೆಸ್ ಇನ್ ಇಂಡಿಯಾ - ೧೯೯೫
ಪ್ರೆಸ್ ಇನ್ ಇಂಡಿಯಾ - ೧೯೯೭

ಈ ಮಹಾಪ್ರಬಂಧ ರಚನೆಯ ವೇಳೆಗೆ ಲಭ್ಯವಿರುವ ಮಾಹಿತಿಯಂತೆ ಹಂತ ಹಂತವಾಗಿ ಬೆಳೆದ ಭಾರತೀಯ ಪತ್ರಿಕೋದ್ಯಮ ೧೯೯೬ರಲ್ಲಿ ಅತ್ಯಧಿಕ ಸಂಖ್ಯೆಯ ಅಂದರೆ - ೩೯೧೪೯ ಶೀರ್ಷಿಕೆಯ (ಎಲ್ಲ ಬಗೆಯ, ಭಾಷೆಯ ಪತ್ರಿಕೆ, ನಿಯತಕಾಲಿಕೆಗಳು) ಪತ್ರಿಕೆಗಳನ್ನು ಒಳಗೊಂಡಿತ್ತು.

೧೯೮೭ರಿಂದ ೧೯೯೬ರ ಅವಧಿಯಲ್ಲಿ ಭಾರತೀಯ ಪತ್ರಿಕೆಗಳ ಸಂಖ್ಯೆ ಹಾಗೂ ಅವುಗಳ ಪ್ರಸಾರ ಸಂಖ್ಯೆಯನ್ನು ಕ್ರೋಢೀಕರಿಸಿ ಪಟ್ಟಿ - ೭ರಲ್ಲಿ ನೀಡಲಾಗಿದೆ. ಈ ಪಟ್ಟಿಯಿಂದ ತಿಳಿದು ಬರುವಂತೆ, ೧೯೮೭ರಲ್ಲಿದ್ದ ಒಟ್ಟು ೨೪,೬೨೯ ಪತ್ರಿಕೆಗಳ ಸಂಖ್ಯೆ ೧೯೯೬ ರಲ್ಲಿ ಒಟ್ಟು ೩೯೧೪೯ ಪತ್ರಿಕೆಗಳಿಗೆ ನಿರಂತರವಾಗಿ ವರ್ಷದಿಂದ ವರ್ಷಕ್ಕೆ ಏರಿರುವುದು ಸ್ಪಷ್ಟವಾಗಿದೆ. ಆದರೆ ಆ ಪತ್ರಿಕೆಗಳ ಒಟ್ಟು ಪ್ರಸಾರದಲ್ಲಿ ೧೯೮೮-೯೦ರ ನಡುವೆ ಏರಿಳಿತಗಳಾಗಿ ನಂತರ ೧೯೯೬ರವರೆಗೆ ಹಂತ ಹಂತವಾಗಿ ಏರಿ ೮,೯೪,೩೪,೦೦೦ ಸಂಖ್ಯೆ ತಲುಪಿದೆ.

## ಪಟ್ಟಿ - ೭

ಪ್ರಕಟಿತ ಪತ್ರಿಕೆಗಳ ಸಂಖ್ಯೆ — ಪ್ರಸಾರ ಸಂಖ್ಯೆ (ಸಾವಿರಗಳಲ್ಲಿ)

| ವರ್ಷ | ದಿನಪತ್ರಿಕೆ | ವಾರಪತ್ರಿಕೆ | ಇತರೆ | ಒಟ್ಟು | ದಿನಪತ್ರಿಕೆ | ವಾರಪತ್ರಿಕೆ | ಇತರೆ | ಒಟ್ಟು |
|---|---|---|---|---|---|---|---|---|
| ೧೯೮೭ | ೨೧೫೧ | ೭೫೦೧ | ೧೪೯೭೭ | ೨೪೬೨೯ | ೨೨೬೦೭ | ೧೬೫೨೭ | ೧೭೬೯೬ | ೫೬೮೩೦ |
| ೧೯೮೮ | ೨೨೮೧ | ೭೮೧೩ | ೧೫೪೪೨ | ೨೫೫೩೬ | ೨೧೫೬೩ | ೧೬೭೫೧ | ೧೬೫೫೯ | ೫೪೮೭೩ |
| ೧೯೮೯ | ೨೫೩೮ | ೮೩೫೩ | ೧೬೧೬೩ | ೨೭೦೫೪ | ೨೩೦೯೭ | ೧೮೨೯೩ | ೧೬೮೯೪ | ೫೮೨೮೪ |
| ೧೯೯೦ | ೨೮೫೬ | ೮೯೨೬ | ೧೬೭೦೯ | ೨೮೪೯೧ | ೨೨೬೩೭ | ೧೫೨೨೯ | ೧೫೨೯೪ | ೫೩೧೬೦ |
| ೧೯೯೧ | ೩೨೨೯ | ೯೬೨೧ | ೧೭೩೬೪ | ೩೦೨೧೪ | ೨೪೨೯೦ | ೧೫೭೬೭ | ೧೩೮೨೮ | ೫೩೮೮೫ |
| ೧೯೯೨ | ೩೫೦೨ | ೧೦೩೭೫ | ೧೮೦೮೦ | ೩೧೯೫೭ | ೨೮೦೯೨ | ೧೯೧೮೪ | ೧೬೩೯೧ | ೬೩೬೬೭ |
| ೧೯೯೩ | ೩೭೪೦ | ೧೧೧೩೫ | ೧೮೭೩೬ | ೩೩೬೧೨ | ೨೯೨೫೮ | ೨೧೩೮೦ | ೧೬೯೭೩ | ೬೭೬೧೧ |
| ೧೯೯೪ | ೪೦೪೩ | ೧೧೯೭೩ | ೧೯೫೮೫ | ೩೫೬೦೧ | ೩೧೫೫೯ | ೨೨೫೯೫ | ೧೮೧೪೮ | ೭೨೩೦೨ |
| ೧೯೯೫ | ೪೨೩೬ | ೧೨೬೯೫ | ೨೦೩೨೩ | ೩೭೨೫೪ | ೩೫೪೫೧ | ೨೪೭೭೦ | ೧೯೦೬೨ | ೭೯೨೮೩ |
| ೧೯೯೬ | ೪೪೫೩ | ೧೩೬೨೪ | ೨೧೦೭೨ | ೩೯೧೪೯ | ೪೦೨೨೫ | ೨೯೧೧೦ | ೨೦೦೯೯ | ೮೯೪೩೪ |

ಮೂಲ : ಪ್ರೆಸ್ ಇನ್ ಇಂಡಿಯಾ - ೧೯೯೭

### ೪.೪. ರೇಡಿಯೊ

'ಬಹುಜನ ಹಿತಾಯ ಬಹುಜನ ಸುಖಾಯ' ಎಂಬ ತತ್ವದ ತಳಹದಿಯ ಮೇಲೆ ಹುಟ್ಟಿ 'ಬಹು ಜನಪ್ರಿಯಾಯ'ವೂ ಆದ ರೇಡಿಯೊ ಕೇವಲ ಧ್ವನಿಯಿಂದಲೇ ಅತ್ಯಧಿಕ ಜನರ ಮನಗೆದ್ದ ಮಾಧ್ಯಮ. ಕೇವಲ ಶ್ರವ್ಯ ಮಾಧ್ಯಮವಾದರೂ ಸಾಮಾಜಿಕ ಪರಿವರ್ತನೆಗೆ ಕಾರಣವಾದ ಮುಖ್ಯ ಮಧ್ಯವರ್ತಿ. ದೂರದರ್ಶನದಂತೆ ರೇಡಿಯೊ ದೃಶ್ಯಗಳನ್ನು ಅವಲಂಬಿಸಲಾರದು. ಇಲ್ಲಿ ಅನುಭವಗಳನ್ನು ಹಂಚಿಕೊಳ್ಳುವುದು ಭಾಷೆಯ ಮೂಲಕ; ಧ್ವನಿಯೇ ಇದರ ಜೀವಾಳ. ಬ್ರಿಟಿಷ್ ಬ್ರಾಡ್‌ಕಾಸ್ಟಿಂಗ್ ಕಾರ್ಪೊರೇಷನ್ ತನ್ನ ರೇಡಿಯೊ ನೀತಿಯಲ್ಲಿ ಹೀಗೆ ಹೇಳಿದೆ 'Radio is first and foremost an extension and enrichment of experience through the sense of hearing' ಸುದ್ದಿ, ನಾಟಕ, ಸಂಗೀತ, ಭಾಷಣ ಏನೇ ಇರಲಿ ರೇಡಿಯೊದು ಹೇಳುವ ಕೆಲಸ; ಅದರ ಗ್ರಾಹಕನದು ಕೇಳುವ ಕೆಲಸ.

ಇಪ್ಪತ್ತನೆ ಶತಮಾನದ ವಿದ್ಯುನ್ಮಾನ ಶಕದಲ್ಲಿ ದೃಶ್ಯ-ಶ್ರವ್ಯ ಮಾಧ್ಯಮವಾದ ದೂರದರ್ಶನದ ಅತೀವ ಪೈಪೋಟಿಯ ನಡುವೆಯೂ 'ತನ್ನತನ' ಕುಗ್ಗಿಸಿಕೊಳ್ಳದ ಮಾಧ್ಯಮವಿದು. ಭಾರತದ ಸಂದರ್ಭದಲ್ಲಿ

*ಆಕಾಶವಾಣಿ ಬಹುಸಂಖ್ಯಾತ ಸಮುದಾಯವನ್ನು ತಲುಪಿದ್ದರೆ,*
*ದೂರದರ್ಶನ ಇನ್ನೂ ಅಲ್ಪ ಸಂಖ್ಯಾತ ಸಮುದಾಯವನ್ನು ಮುಟ್ಟುವ*
*ಹಂತದಲ್ಲೇ ಉಳಿದಿದೆ*[೩೮]

ಎಂಬ ಅಭಿಪ್ರಾಯವಿದೆ. ಆಕಾಶವಾಣಿ 'ಜನವಾಣಿ'ಯಾಗುವುದಕ್ಕೆ ಅದರ ಶ್ರಾವಕ ಶಕ್ತಿ, ಸರ್ವ ವ್ಯಾಪಕ ಸಾಮರ್ಥ್ಯವೇ ಕಾರಣ. ಜಗತ್ತನ್ನು ಕಿವಿಯಿಂದ ಕೇಳಿ ಅರಿಯಬಹುದಾದ ಅದ್ಭುತ ಮಾಧ್ಯಮ - ರೇಡಿಯೊ.

ಇಪ್ಪತ್ತನೆ ಶತಮಾನದ ಆರಂಭದಲ್ಲಿ ರೇಡಿಯೊದಂತಹ ಅತ್ಯಂತ ಪ್ರಭಾವಿ ಸಾಧನವನ್ನು ಆವಿಷ್ಕಾರಗೊಳಿಸಿದ ಕೀರ್ತಿ ವಿಜ್ಞಾನಿ ಗುಗ್ಲಿಯೆಲ್ಮೋ ಮಾರ್ಕೋನಿಗೆ ಸಲ್ಲುತ್ತದೆ. ಎಲೆಕ್ಟ್ರೋ-ಮ್ಯಾಗ್ನೆಟಿಕ್ ತರಂಗಗಳನ್ನು ಬಳಸಿ ಟೆಲಿಗ್ರಾಫ್ ಸಂಕೇತಗಳನ್ನು ಪ್ರಸಾರ ಮಾಡಬಹುದೆಂಬುದನ್ನು ೧೮೯೫ರಲ್ಲಿ ಕಂಡುಹಿಡಿದ. ಇದೇ ಎಲೆಕ್ಟ್ರೋ-ಮ್ಯಾಗ್ನೆಟಿಕ್ ತರಂಗಗಳ ಮೂಲಕ ಮನುಷ್ಯರ ಧ್ವನಿಯನ್ನು ಮೊದಲು ಪ್ರಸಾರ ಮಾಡಿದ್ದು-೧೯೦೬ರಲ್ಲಿ. ಇದರಿಂದಾಗಿ ರೇಡಿಯೊ ಆವಿಷ್ಕಾರದಿಂದ ಟೆಲಿಗ್ರಾಫ್ ಕ್ಷೇತ್ರದಲ್ಲಿ ಮಹತ್ತರ ಬದಲಾವಣೆ ನಿರೀಕ್ಷಿಸಿದ್ದವರಿಗೆ ಅದಕ್ಕಿಂತಲೂ ಅದ್ಭುತವಾದ ಒಂದು ಹೊಸ ತಾಂತ್ರಿಕ ಜಗತ್ತಿನದೇ ಬಾಗಿಲು ಅನಿರೀಕ್ಷಿತವಾಗಿ ತೆರೆದುಕೊಂಡಿತು. ಈ ಮಾಧ್ಯಮದ ಸಾಧ್ಯತೆಗಳು ಜಗತ್ತಿಗೆ ಅರಿವಾದದ್ದು ೧೯೧೦ರಲ್ಲಿ ಮೊಟ್ಟ ಮೊದಲ ಬಾರಿಗೆ ಸಂಗೀತವನ್ನು ಪ್ರಸಾರ ಮಾಡಿದಾಗ; ನೂರಾರು ಜನ ಏಕಕಾಲಕ್ಕೆ ಅದನ್ನು ಕೇಳಿದಾಗ. ಆ ಸಂದರ್ಭದಲ್ಲೇ ಅಮೆರಿಕದಲ್ಲಿ ಮೊದಲ ಸಾರ್ವಜನಿಕ ರೇಡಿಯೊ ಕೇಂದ್ರ ಸ್ಥಾಪನೆಗೊಂಡಿತು; ಕ್ರಮೇಣ ರೇಡಿಯೊ ಸರ್ವವ್ಯಾಪಿಯಾಯಿತು.




ರೇಡಿಯೊ ಜನಕ ಮಾರ್ಕೋನಿ

ರೇಡಿಯೊ ಕೇಳುಗನ ಸಾಧನ, ಜಗತ್ತಿನ ಕಂಡರಿಯದ ಪ್ರದೇಶದ ಸುದ್ದಿಯನ್ನೂ ಅತ್ಯಂತ ಕುಗ್ರಾಮದ ಸಾಮಾನ್ಯ ಮನುಷ್ಯನೂ ಕೇಳ್ಮೆಯಿಂದಲೇ ತಿಳಿದುಕೊಳ್ಳಬಹುದಾದ ಸೌಲಭ್ಯವಿದು. ನಮ್ಮ ನಾಡಿನಲ್ಲಿ ಜಾನಪದೀಯವಾದಂತ ಮೌಖಿಕ ಕಲಾಪರಂಪರೆಗೆ ಒಗ್ಗಿ ಹೋಗಿದ್ದವನಿಗೆ ಇಂತಹ ಒಂದು ಶ್ರವಣ ಮಾಧ್ಯಮ ವರದಂತೆ ಬಂದಿತೆನ್ನಬೇಕು. ರೇಡಿಯೊ ಮತ್ತು ಅದರ ಶ್ರೋತೃವಿನ ಸಂಬಂಧ ಹೇಳಿ-ಕೇಳಿ ತಿಳಿಯುವಂತಹ ನೇರಸಂಬಂಧ. ಅಂತರ್‌ಸಂವಹನೆಯಂತೆ ಎನಿಸಿದರೂ, ಮಧ್ಯೆ ಇರುವ ತಾಂತ್ರಿಕ ಸಾಧನದಿಂದಾಗಿ ಸಮೂಹ ಸಂವಹನೆಯಾಗುತ್ತದೆ.




ರೋಮಾದಲ್ಲಿ ಧ್ವನಿವರ್ಧಕದ ಮೂಲಕ ಮುಸ್ಸೋಲಿನಿಯ ಮೊದಲ ಪ್ರಸಾರ ಭಾಷಣ ಕೇಳಲು ನೆರೆದ ಜನತೆ (೨೩.೩.೧೯೨೪)

೧೯೨೦ರಲ್ಲಿ ಅಮೆರಿಕದಲ್ಲಿ ಮೊಟ್ಟ ಮೊದಲ ಶಾಶ್ವತ ರೇಡಿಯೊ ಪ್ರಸಾರ ಕೇಂದ್ರ ಸ್ಥಾಪನೆಗೊಂಡು ವೆಸ್ಟಿಂಗ್‌ಹೌಸ್ ಸಂಸ್ಥೆಯ ಮೂಲಕ ಕಾರ್ಯಾರಂಭ ಮಾಡಿತು.



ಕ್ರಿಸ್ಟಲ್ ರೇಡಿಯೊ ರಿಸೀವರ್ - ೧೯೨೧



ರೇಡಿಯೊ ರಿಸೀವರ್ - ೧೯೨೪



ಹೋಂ ಬ್ರ್ಯೂ - ೧೯೨೫



ಅಲ್ಪ್ರಾ ಗೀಡಂ - ೧೯೩೨



ಎಕೋ ಬಿ. ೫೪ - ೧೯೩೨



ಮಾರ್ಕೊನಿ, ೨೭೬ - ೧೯೩೩



ವಿಇ ೩೦೧ - ೧೯೩೩



ರೇಡಿಯೊ ರೂರಲೇ - ೧೯೩೪



ಫಿಲಿಪ್ಸ್, ೮೨೬ಎ - ೧೯೩೪



ಎಸ್‌ಬಿಆರ್, ೩೬೪ - ೧೯೩೫



ಮಾರ್ಕೊನಿ, ೨೧೯ - ೧೯೩೫



ಮಾರ್ಕೊನಿ - ೧೯೩೮

## ಆರಂಭಿಕ ಹಂತದ ರೇಡಿಯೊ ಮಾದರಿಗಳು

ಮನೆಮನೆಯಲ್ಲೂ ರೇಡಿಯೊ ಬಳಕೆಗೆ ಬರತೊಡಗಿತು. ಅಲ್ಲಿಂದ ೧೫ ವರ್ಷಗಳ ಒಳಗಾಗಿ ಜಗತ್ತಿನ ಎಲ್ಲ ದೇಶಗಳಲ್ಲೂ ಪ್ರಸಾರ ಕೇಂದ್ರಗಳು ಹುಟ್ಟಿಕೊಂಡವು. ಅದೇ ವೇಳೆಗೆ ರೇಡಿಯೊ ಸೆಟ್‌ಗಳ ಉತ್ಪಾದನೆಯೂ ಅಧಿಕಗೊಂಡಿತು. ರೇಡಿಯೊ ಜನತೆಯ ಎರಡು ಮುಖ್ಯ ಆಸಕ್ತಿಗಳನ್ನು ಪೂರೈಸತೊಡಗಿತು. ಸಮಾಚಾರ ಮತ್ತು ಮನರಂಜನೆ. ಬಿತ್ತರಿಸುತ್ತಿದ್ದ ಕಾರ್ಯಕ್ರಮಗಳು ಸುಲಭ ಹಾಗೂ ಅಗ್ಗದ ಲಭ್ಯತೆಯ ಕಾರಣಗಳಿಂದಾಗಿ ರೇಡಿಯೊ ಜಗತ್ತಿನ ಎಲ್ಲ ದೇಶಗಳ ಮನೆಮನೆಯ ಬಳಕೆಯ ಸಾಮಾನ್ಯ ಸಾಧನವಾಗಿಬಿಟ್ಟಿತು. ಹಾಗೆ ಸಮಸ್ತ ವಿಶ್ವವನ್ನೂ ವಿಶ್ವದ ವಿವಿಧ ಮೂಲೆಗಳ ಸುದ್ದಿಗಾಗಿ ತನ್ನ ಮೇಲೆ ಅವಲಂಬಿಸಿಕೊಂಡುಬಿಟ್ಟಿತು.

ರೇಡಿಯೊ ತಂತ್ರಜ್ಞಾನಕ್ಕೆ ಆದ್ಯವೆನಿಸಿದ ಅಮೆರಿಕ ಸಂಯುಕ್ತ ಸಂಸ್ಥಾನದಲ್ಲಿ ರೇಡಿಯೊ ಪ್ರಾರಂಭದಿಂದಲೂ ಖಾಸಗೀ ವಲಯದಲ್ಲೇ ಇರುವುದು ಗಮನಾರ್ಹ ಸಂಗತಿ. ಒಂದು ಪ್ರಜಾತಂತ್ರ ವ್ಯವಸ್ಥೆಯಲ್ಲಿ ಒಂದು ಪ್ರಬಲ ಸಂವಹನ ಮಾಧ್ಯಮ ಸುಮಾರು ೮೦ ವರ್ಷಗಳಷ್ಟು ದೀರ್ಘಕಾಲ ತನ್ನ ಅಸ್ತಿತ್ವವನ್ನೂ ಅಷ್ಟೇ ಪ್ರಭಾವವನ್ನೂ ಉಳಿಸಿಕೊಂಡು ಬಂದಿರುವುದು ಇತರ ದೇಶಗಳಿಗೆ ಅದರಲ್ಲೂ ಭಾರತಕ್ಕೆ ಒಂದು ಮಾದರಿಯಾಗಿದೆ. ಭಾರತ ಸ್ವಾತಂತ್ರ್ಯ ಪಡೆದು ಪ್ರಜಾಪ್ರಭುತ್ವ ದೇಶ ಎನಿಸಿಕೊಂಡು ಸುಮಾರು ೪ ದಶಕಗಳು ಕಳೆದ ನಂತರವೇ ಮಾಧ್ಯಮಗಳಿಗೆ ಸ್ವಾಯತ್ತತೆ ಕಲ್ಪಿಸಿಕೊಡುವ ಮಾತು ಕೇಳಿ ಬಂದದ್ದು. (೧೯೯೦ರಲ್ಲಿ 'ಪ್ರಸಾರ ಭಾರತಿ'ಯ ಪರಿಕಲ್ಪನೆ ಒಡಮೂಡಿ ಬಂದಿತು) ಹಾಗೆ ನೋಡಿದರೆ ಕರ್ನಾಟಕವೂ (ಹಳೆ ಮೈಸೂರು) ಸೇರಿದಂತೆ ಭಾರತದಲ್ಲಿ ಖಾಸಗಿ ವಲಯದಲ್ಲೇ ಇದ್ದ ರೇಡಿಯೊ ಮಾಧ್ಯಮ ಒಂದು ಹಂತದಲ್ಲಿ ಸರ್ಕಾರಿ ವಲಯಕ್ಕೆ ಸೇರಿಕೊಳ್ಳಬೇಕಾದ ಅನಿವಾರ್ಯತೆ ಉಂಟಾಗಿದ್ದು ಮಾಧ್ಯಮಗಳ ಅಭಿವ್ಯಕ್ತಿ ಸ್ವಾತಂತ್ರ್ಯದ ದೃಷ್ಟಿಯಿಂದ ಹಿನ್ನಡೆಯಾಗಿತ್ತೆಂದೇ ಹೇಳಬಹುದು.

ಅಮೆರಿಕದಲ್ಲಿ ರೇಡಿಯೊ ಪ್ರಸಾರ ಕ್ಷೇತ್ರ ಒಂದು ಉದ್ಯಮವೇ ಆಗಿ ಹೋಗಿದೆ. ಸರ್ಕಾರದ ಅನುಮತಿ ಪಡೆದು, ಇತರ ರೇಡಿಯೊ ಸ್ಟೇಷನ್‌ಗಳ ತರಂಗಾಂತರಗಳಿಗೆ ತೊಂದರೆಯಾಗದಂತೆ ಹೊಸ ನಿಲಯಗಳನ್ನು ಪ್ರಾರಂಭಿಸಲು ಅವಕಾಶವಿತ್ತು. ಅಲ್ಲಿನ ಪ್ರಮುಖ ರೇಡಿಯೊ ನಿಲಯಗಳಲ್ಲಿ ಅಮೆರಿಕನ್ ಬ್ರಾಡ್‌ಕಾಸ್ಟಿಂಗ್ ಕಂಪೆನಿ, ಕೊಲಂಬಿಯಾ ಬ್ರಾಡ್‌ಕಾಸ್ಟಿಂಗ್ ಸರ್ವಿಸ್, ನ್ಯಾಷನಲ್ ಬ್ರಾಡ್‌ಕಾಸ್ಟಿಂಗ್ ಕಂಪೆನಿಗಳನ್ನು ಹೆಸರಿಸಬಹುದು.

ಬ್ರಿಟನ್ನಿನಲ್ಲಿ ರೇಡಿಯೊ ಪ್ರಸಾರ ವ್ಯವಸ್ಥೆಯ ಏಕಸ್ವಾಮ್ಯವನ್ನು ಹೊಂದಿರುವ ಸಂಸ್ಥೆ ಬ್ರಿಟಿಷ್ ಬ್ರಾಡ್‌ಕಾಸ್ಟಿಂಗ್ ಕಾರ್ಪೊರೇಷನ್. ಬಿಬಿಸಿ ಎಂದೇ ಚಿರಪರಿಚಿತವಾಗಿರುವ ಈ ಸಂಸ್ಥೆ ಸಂಪೂರ್ಣ ಸ್ವಾಯತ್ತವೂ ವಿಶ್ವಾದ್ಯಂತ ಜನಪ್ರಿಯವೂ ಆಗಿದೆ. ಆದರೆ ದೂರದರ್ಶನ ವಾಹಿನಿಗಳ ಹಾವಳಿಯ ಮಧ್ಯೆಯೇ ಬಿಬಿಸಿ ದೂರದರ್ಶನ ಛಾನೆಲ್ ಅನ್ನೂ ಪ್ರಾರಂಭಿಸಿ ಎರಡೂ ವಿದ್ಯುನ್ಮಾನ ಮಾಧ್ಯಮಗಳನ್ನು ಒಳಗೊಂಡು ಇನ್ನಷ್ಟು ಬಲಿಷ್ಠವಾಗಿದೆ.

## ಭಾರತದಲ್ಲಿ ರೇಡಿಯೊ

ರೇಡಿಯೊದಂತಹ ಶ್ರವಣ ಮಾಧ್ಯಮ ಭಾರತಕ್ಕೆ ತಂತ್ರಜ್ಞಾನ ದೃಷ್ಟಿಯಿಂದಷ್ಟೇ ಹೊಸತು. ಏಕೆಂದರೆ ರಾಮಾಯಣ, ಮಹಾಭಾರತದ ಈ ನಾಡಿನಲ್ಲಿ ಸಂವಹನ ಕಲೆ ಮೌಖಿಕ ಪರಂಪರೆಯಲ್ಲೇ ಹರಿದುಬಂದಿರುವುದರಿಂದ ಅದಕ್ಕೆ ಸ್ಪಂದನೀಯ ಶ್ರೋತೃವೃಂದವೂ ಆಗಲೇ ನಿರ್ಮಾಣಗೊಂಡಿತ್ತು, ಅದನ್ನು ಹೊಸದಾಗಿ ಸೃಷ್ಟಿಸಬೇಕಾಗಿರಲಿಲ್ಲ. ಈ ಮಹಾಪ್ರಬಂಧದಲ್ಲಿ ಈಗಾಗಲೇ ತಿಳಿಸಿರುವಂತೆ ನಾಗರಿಕತೆ, ಸಂಸ್ಕೃತಿಯ ವಿಕಾಸ ಆದಂತೆಲ್ಲ ಸಂವಹನ ಕಲೆಗಳು ಅರಳಿ ಬೆಳೆದಿವೆ. ಇವಕ್ಕೆ ರೇಡಿಯೊದಂತಹ ಒಂದು ವೈಜ್ಞಾನಿಕ ಸಾಧನ ಅಳವಟ್ಟಿದ್ದು ೧೯೨೫ರ ವೇಳೆಗೆ, ಮೊಟ್ಟ ಮೊದಲ ಬಾರಿಗೆ ಭಾರತಕ್ಕೆ ಪಾದಾರ್ಪಣೆ ಮಾಡಿದಾಗ.

ಇಪ್ಪತ್ತನೆ ಶತಮಾನದ ಇಪ್ಪತ್ತರ ದಶಕದಲ್ಲಿ ಕೆಲ ಹವ್ಯಾಸಿ ಖಾಸಗಿ ಸಂಸ್ಥೆಗಳು ಭಾರತದಲ್ಲಿ ರೇಡಿಯೊ ಯುಗವನ್ನು ಆರಂಭಗೊಳಿಸಿದವು. ೧೯೨೧ರಲ್ಲಿ ಬೊಂಬಾಯಿಯ ಟೈಮ್ಸ್ ಆಫ್ ಇಂಡಿಯಾ ಕಟ್ಟಡದ ಮೇಲಿನಿಂದ ಮೊಟ್ಟ ಮೊದಲ ರೇಡಿಯೊ ಪ್ರಸಾರ ನಡೆಯಿತು. ಆದರೆ ಆಗಿನ್ನೂ ರೇಡಿಯೊ ಮೂಲಕ ಪ್ರಸಾರಕ್ಕೆ ಭಾರತದಲ್ಲಿ ಪರವಾನಗಿ ಸಿಕ್ಕುತ್ತಿರಲಿಲ್ಲ. ೧೯೨೨ರಲ್ಲಿ ಮೊದಲ ಪ್ರಸಾರ ಪರವಾನಗಿ ಲಭ್ಯವಾಯಿತು. ಇದಾದ ಸುಮಾರು ಒಂದು ವರ್ಷದ ವೇಳೆಗೆ ೧೯೨೩ರಲ್ಲಿ ಮೊದಲ ಪ್ರಸಾರ ಸಮ್ಮೇಳನವೂ ನಡೆದು, ಅದೇ ವರ್ಷದ ಜೂನ್‌ನಲ್ಲಿ ಬೊಂಬಾಯಿಯ 'ರೇಡಿಯೊ ಕ್ಲಬ್' ತನ್ನ ಮೊದಲ ಪ್ರಸಾರ ನಡೆಸಿತು. ಮತ್ತದೇ ವರ್ಷದ ಅಂದರೆ ೧೯೨೩ರ ನವೆಂಬರ್ ತಿಂಗಳಿನಲ್ಲಿ ಕಲ್ಕತ್ತಾ 'ರೇಡಿಯೊ ಕ್ಲಬ್' ಕಾರ್ಯಾರಂಭ ಮಾಡಿತು. ಇವೆರಡಕ್ಕೂ ಮಾರ್ಕೋನಿ ಕಂಪೆನಿಯೇ ಟ್ರಾನ್ಸ್‌ಮೀಟರ್‌ಗಳನ್ನು ಅಳವಡಿಸಿತು. ೧೯೨೪ರಲ್ಲಿ ೪೦ ವಾಟ್ ಟ್ರಾನ್ಸ್‌ಮೀಟರ್‌ನ ನೆರವಿನೊಂದಿಗೆ ಮದ್ರಾಸ್ 'ರೇಡಿಯೊ ಕ್ಲಬ್' ಕಾರ್ಯಕ್ರಮ ಬಿತ್ತರಿಸಿತು. ಪ್ರತಿ ಸಾಯಂಕಾಲ ಸಂಗೀತ ಹಾಗೂ ಭಾಷಣಗಳಿಂದ ಕೂಡಿದ ಎರಡೂವರೆ ಗಂಟೆಗಳ ಪ್ರಸಾರ ನೀಡುತ್ತಿತ್ತು. ಆರ್ಥಿಕ ಮುಗ್ಗಟ್ಟಿನ ಕಾರಣದಿಂದ ಈ ಸಂಸ್ಥೆ ೧೯೨೭ರ ಅಕ್ಟೋಬರ್‌ನಲ್ಲಿ ತನ್ನ ಸೇವೆಯನ್ನು ಸ್ಥಗಿತಗೊಳಿಸಿತು.

ಅದಕ್ಕೂ ಕೆಲ ತಿಂಗಳ ಮುನ್ನ ೧೯೨೭ರ ಜುಲೈನಲ್ಲಿ ಭಾರತದ ಮೊದಲ ರೇಡಿಯೊ ಕಾರ್ಯಕ್ರಮ ಪತ್ರಿಕೆ 'The Indian Radio Times' ಪ್ರಕಟಗೊಂಡಿತು. ನಂತರ ಇದನ್ನು 'The Indian Listener' ಎಂದೂ ಆಮೇಲೆ 'ಆಕಾಶವಾಣಿ' ಎಂದೂ ಹೆಸರಿಸಲಾಯಿತು. ಅದೇ ವರ್ಷ ಅದೇ ತಿಂಗಳು ಅಂದರೆ ೧೯೨೭ರ ಜುಲೈ ತಿಂಗಳಿನಲ್ಲೇ 'ಇಂಡಿಯನ್ ಬ್ರಾಡ್‌ಕಾಸ್ಟಿಂಗ್ ಸರ್ವೀಸ್' (IBS) ಎನ್ನುವ ಸಂಘಟಿತ ಭಾರತೀಯ ಪ್ರಸಾರ ಸಂಸ್ಥೆ ಅಸ್ತಿತ್ವಕ್ಕೆ ಬಂದಿತು. ಇದರ ಮೊದಲ ಪ್ರಸಾರ ಕೇಂದ್ರವನ್ನು ಭಾರತದ ಬ್ರಿಟಿಷ್ ವೈಸರಾಯ್ ಆಗಿದ್ದ ಲಾರ್ಡ್ ಇರ್ವಿನ್ ಬೊಂಬಾಯಿಯಲ್ಲಿ ಉದ್ಘಾಟನೆ ಮಾಡಿದರು.

ಅದಾದ ೫ ವಾರಗಳಲ್ಲೇ ೧೯೨೭ರ ಆಗಸ್ಟ್‌ನಲ್ಲಿ ಬೆಂಗಾಲಿನ ರಾಜ್ಯಪಾಲರಾಗಿದ್ದ ಸರ್ ಸ್ಟ್ಯಾನ್ಲಿ ಜಾಕ್‌ಸನ್ IBSನ ಕಲ್ಕತ್ತಾ ಕೇಂದ್ರವನ್ನು ಉದ್ಘಾಟಿಸಿದರು. ಅದೇ ವರ್ಷಾಂತ್ಯದ ವೇಳೆಗೆ ೩,೫೯೪ ಲೈಸೆನ್ಸ್‌ಗಳನ್ನು ನೀಡಲಾಗಿತ್ತು. ಕ್ರಮೇಣ ಭಾರತದಲ್ಲಿ ರೇಡಿಯೊ ಮನೆಮಾತಾಗುತ್ತಿದ್ದದ್ದನ್ನು ಕಂಡು IBS ಅಧ್ಯಕ್ಷ ಸರ್ ಇಬ್ರಾಹಿಂ ರಹೀಮತುಲ್ಲಾ, ಬೊಂಬಾಯಿ ಅಪೊಲೋ ಬಂಡರ್‌ನ ರೇಡಿಯೊ ಹೌಸ್‌ನಲ್ಲಿ ನಡೆದ ಕಾರ್ಯಕ್ರಮವೊಂದರಲ್ಲಿ ಸ್ವಾಗತ ಭಾಷಣ ಮಾಡುತ್ತಾ, ರೇಡಿಯೊ ಭವಿಷ್ಯ ಕುರಿತು ಹೀಗೆ ಹೇಳಿದರು :-

> *India can not lag behind the rest of the world in so great a development, the potentialities of which are only just beginning to be realised. One of the greatest problems of India is that of distance and the consequent difficulty of maintaining efficient communication between her component parts. It is the recognised merit of broadcasting that it annihiletes distance so far as the transmitting of sound is concerned. with the advent of efficient broadcasting there is nothing to prevent in time, the farthest confines of Kashmir, sikkim or of Travancore simultaneously receiving the news of the moment. In other directions*

*broadcasting may well claim to be able to banish the odium of isolation, and provide entertainment and education.*[೩೯]

ಇಂಡಿಯನ್ ಬ್ರಾಡ್‌ಕಾಸ್ಟಿಂಗ್ ಸರ್ವಿಸ್ ಸಹ ಹಣಕಾಸಿನ ತೊಂದರೆಯಿಂದ ನರಳತೊಡಗಿತು. ೧೯೩೦ರ ವೇಳೆಗೆ ದಿವಾಳಿಯೂ ಆಯಿತು. ಹಾಕಿದ ಬಂಡವಾಳಕ್ಕೂ ಆಗುತ್ತಿದ್ದ ವೆಚ್ಚಕ್ಕೂ ತಾಳೆಯಾಗುತ್ತಿರಲಿಲ್ಲ. ಭಾರತೀಯ ಅಂಚೆ ಮತ್ತು ತಂತಿ ಕಂಪೆನಿ ಸಾಲ ಸೌಲಭ್ಯ ನೀಡಿದರೂ ಸಾಕಾಗದೆ ಸ್ತಬ್ಧಗೊಂಡಿತು. ೧೯೩೦ರ ಏಪ್ರಿಲ್ ೧ ರಂದು ಭಾರತದಲ್ಲಿ ಪ್ರಸಾರ ವ್ಯವಸ್ಥೆ ಸರ್ಕಾರದ ಕೈ ಸೇರಿತು.

೧೯೩೬ರಲ್ಲಿ The Indian State Broadcasting Service (ISBS) ಎನಿಸಿಕೊಂಡ ಈ ಸರ್ಕಾರಿ ಸ್ವಾಮ್ಯದ ಸಂಸ್ಥೆಯ ಮೊದಲ ಕಂಟ್ರೋಲರ್ ಆಗಿದ್ದ ಲಿಯೋನಲ್ ಫೀಲ್ಡನ್ ಅದಕ್ಕೆ All India Radio ಎಂಬ ಹೆಸರು ನೀಡಿದ. ೧೯೩೬ರಲ್ಲೇ All India Radio ಅನ್ನು ಸಂಕ್ಷಿಪ್ತವಾಗಿ AIR ಎಂದೂ ಕರೆಯಲಾಯಿತು. AIR ಅನ್ನು ಕೈಗಾರಿಕೆ ಮತ್ತು ಕಾರ್ಮಿಕ ಇಲಾಖೆಯಡಿ ಇರಿಸಲಾಯಿತು. ಪ್ರಸಾರ ವ್ಯವಸ್ಥೆಯ ನಿರ್ವಹಣೆ ಹಾಗೂ ಅಭಿವೃದ್ಧಿಯನ್ನು ನೋಡಿಕೊಳ್ಳಲು 'ಕೇಂದ್ರ ಪ್ರಸಾರ ಸಲಹಾ ಸಮಿತಿ'ಯನ್ನೂ ರಚಿಸಲಾಯಿತು.

ಈ ಮಧ್ಯೆ, ಹಲವು ಅನಿವಾರ್ಯತೆಗಳಿಂದಾಗಿ ೧೯೩೧ರ ಅಕ್ಟೋಬರ್ ವೇಳೆಗೆ ಭಾರತದಲ್ಲಿ ಪ್ರಸಾರ ವ್ಯವಸ್ಥೆಯನ್ನು ಸಂಪೂರ್ಣವಾಗಿ ನಿಲ್ಲಿಸಿಬಿಡಲು ತೀರ್ಮಾನಿಸಿತ್ತಾದರೂ, ಎಲ್ಲೆಡೆ, ವಿಶೇಷವಾಗಿ ಬೆಂಗಾಲಿನಲ್ಲಿ ಈ ನಿರ್ಣಯದ ವಿರುದ್ಧ ವ್ಯಕ್ತವಾದ ಪ್ರತಿಭಟನೆಯ ಪರಿಣಾಮ, ನವೆಂಬರ್ ೨೩ ರಂದು ಮತ್ತೆ ಪ್ರಸಾರ ಮುಂದುವರೆಸುವ ನಿರ್ಧಾರವನ್ನು ಸರ್ಕಾರ ಕೈಗೊಂಡಿತು. ೧೯೩೨ರಲ್ಲಿ ಬಿಬಿಸಿ ಸಹ ತನ್ನ ಎಂಪೈರ್ ಸರ್ವಿಸ್ ಆರಂಭಿಸಿದಾಗ ರೇಡಿಯೊ ಉದ್ಯಮ ನಷ್ಟವನ್ನು ನೀಗಿಕೊಳ್ಳತೊಡಗಿತು. ಭಾರತದ ಪ್ರಸಾರ ಸೇವೆಯೂ ಸ್ಥಿರತೆಯತ್ತ ಸಾಗಿತು. ಕಂಟ್ರೋಲರ್ ಫೀಲ್ಡನ್ ದೇಶಾದ್ಯಂತ ಪ್ರಸಾರಕ್ಕಾಗಿ ಹೊಸ ಯೋಜನೆಗಳನ್ನು ರೂಪಿಸಿದ. ೧೯೩೮ರಲ್ಲಿ ಕೆಲವು ಪ್ರದೇಶಗಳಿಗೆ ಲಘು ತರಂಗ, ಅಗತ್ಯವಿದ್ದ ಇನ್ನು ಕೆಲವೆಡೆ ಮಧ್ಯಮ ತರಂಗದ ಮೂಲಕ ಸೇವೆ ನೀಡಿ ನಷ್ಟ ಆಗದಂತೆ ಎಚ್ಚರ ವಹಿಸಿದ. ೧೯೩೯ರ ಹೊತ್ತಿಗೆ ಬೊಂಬಾಯಿ, ದೆಹಲಿ, ಮದ್ರಾಸು, ಕಲ್ಕತ್ತಾ ಅಲ್ಲದೆ ಲಕ್ನೋ ಮತ್ತು ತಿರುಚಿಯಲ್ಲೂ ರೇಡಿಯೊ ಕೇಂದ್ರಗಳಾಗಿದ್ದವು. ಎರಡನೆ ಜಾಗತಿಕ ಯುದ್ಧದ ಸಂದರ್ಭದಲ್ಲಿ ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಪ್ರಸಾರ ಸೇವೆ ಅಗತ್ಯವೆನಿಸಿತು. ಅಧಿಕ ಶಕ್ತಿಯ ಟ್ರಾನ್ಸ್‌ಮೀಟರ್‌ಗಳನ್ನು ಅಳವಡಿಸಲಾಯಿತು. ಕೇಂದ್ರ ವಾರ್ತಾ ಗೃಹ (Central News Room) ದಿಂದ ವಾರ್ತೆಗಳು ಕೇಳಿಬರತೊಡಗಿದವು. ಯುದ್ಧದ ವರ್ಷದಲ್ಲಿ ಪ್ರತಿದಿನ ೨೭ ವಾರ್ತಾ ಬುಲೆಟಿನ್ ಪ್ರಸಾರಗೊಳ್ಳುತ್ತಿತ್ತು. ಭಾರತ ಸ್ವತಂತ್ರವಾಗುವ ವೇಳೆಗಿನ್ನೂ AIRನ ರಾಷ್ಟ್ರೀಯ ಜಾಲ ಸಿದ್ಧಗೊಳ್ಳಬೇಕಾಗಿತ್ತು. ೧೯೫೭ರಲ್ಲಿ 'ವಿವಿಧ ಭಾರತಿ' ಪ್ರಾರಂಭವಾದಾಗ ರೇಡಿಯೊ ಒಂದು ಸಮೂಹ ಸಂವಹನ ಮಾಧ್ಯಮ ಎನಿಸಿಕೊಂಡಿತು. 'ವಿವಿಧ ಭಾರತಿ' ಆಕಾಶವಾಣಿಯ ಅಖಿಲ ಭಾರತ ಕಾರ್ಯಕ್ರಮ. ಉನ್ನತ ಶಕ್ತಿಯ ಲಘು ತರಂಗದ ಎರಡು ಪ್ರಸಾರ ಯಂತ್ರಗಳ ಮೂಲಕ ಇದನ್ನು ಮೊದಲು ಬಿತ್ತರಿಸಲಾಯಿತು. ಮತ್ತೊಂದು ಜನಪ್ರಿಯ ಮಾಧ್ಯಮವಾದ ಚಲನಚಿತ್ರಗೀತೆಗಳನ್ನು ಪ್ರಸಾರ ಮಾಡುವ ಮೂಲಕ ಆಕಾಶವಾಣಿ ತನ್ನೆಡೆಗೆ ಜನರನ್ನೂ ಜಾಹೀರಾತನ್ನೂ ಆಕರ್ಷಿಸಿಕೊಂಡದ್ದು ತನ್ನ ನೆಲೆ ಭದ್ರವಾಗಿಸಿಕೊಳ್ಳಲು ಅನುಕೂಲವಾಯಿತು. ಇಂದು ೩ ವಿವಿಧ ಭಾರತಿ ಕೇಂದ್ರಗಳನ್ನು ಆಕಾಶವಾಣಿ ಹೊಂದಿದೆ. ಮತ್ತೊಂದೆಡೆ ಸಮುದಾಯ ಪ್ರಸಾರ ಯೋಜನೆ, ಗ್ರಾಮೀಣ ಕಾರ್ಯಕ್ರಮಗಳ ಪ್ರಸಾರದಿಂದ ಅತ್ಯಂತ ಜನಪ್ರಿಯವೂ ಆಗಿ ಪ್ರಾದೇಶಿಕ ಭಾಷಾ ಕೇಂದ್ರಗಳು ಮೊಳೆಯತೊಡಗಿದವು.

## ಭಾರತದಲ್ಲಿ ರೇಡಿಯೊ ವಿಕಾಸದ ಮೈಲಿಗಲ್ಲುಗಳು

| | | |
|---|---|---|
| ೧೯೨೧ ಆಗಸ್ಟ್ ೨೦ | : | ಬೊಂಬಾಯಿಯ ಟೈಮ್ಸ್ ಆಫ್ ಇಂಡಿಯಾ ಕಟ್ಟಡದ ಮೇಲ್ಭಾಗದಿಂದ ಮೊದಲ ಪ್ರಸಾರ |
| ೧೯೨೨ ಫೆಬ್ರವರಿ ೨೩ | : | ಮೊದಲ ಪ್ರಸಾರ ಪರವಾನಗಿ ನೀಡಿಕೆ |
| ೧೯೨೩ ಮಾರ್ಚ್ ೭ | : | ಮೊದಲ ಪ್ರಸಾರ ಸಮ್ಮೇಳನ |
| ೧೯೨೩ ಜೂನ್ | : | ಬೊಂಬಾಯಿಯ ರೇಡಿಯೊ ಕ್ಲಬ್ ಅಸ್ತಿತ್ವಕ್ಕೆ |
| ೧೯೨೩ ನವೆಂಬರ್ | : | ಕಲ್ಕತ್ತಾ ರೇಡಿಯೊ ಕ್ಲಬ್ ಪ್ರಾರಂಭ |
| ೧೯೨೪ ಮೇ ೧೬ | : | ಮದ್ರಾಸ್ ರೇಡಿಯೊ ಕ್ಲಬ್ ಕಾರ್‍ಯಾರಂಭ |
| ೧೯೨೪ ಜುಲೈ ೩೧ | : | ಮದ್ರಾಸ್ ರೇಡಿಯೊ ಕ್ಲಬ್‌ನ ಮೊದಲ ಪ್ರಸಾರ |
| ೧೯೨೭ ಜುಲೈ ೧೬ | : | The Indian Radio Times ಪತ್ರಿಕೆ ಆರಂಭ |
| ೧೯೨೭ ಜುಲೈ ೨೩ | : | ಬೊಂಬಾಯಿಯಲ್ಲಿ ಇಂಡಿಯನ್ ಬ್ರಾಡ್‌ಕಾಸ್ಟಿಂಗ್ ಸರ್ವಿಸ್ (IBS) ಆರಂಭ. |
| ೧೯೨೭ ಆಗಸ್ಟ್ ೨೬ | : | IBSನ ಕಲ್ಕತ್ತಾ ಕೇಂದ್ರ ಸ್ಥಾಪನೆ |
| ೧೯೩೦ | : | ಬೊಂಬಾಯಿ ರೇಡಿಯೊ ಕೇಂದ್ರ ಸರ್ಕಾರಿ ಸ್ವಾಮ್ಯಕ್ಕೆ ಹಸ್ತಾಂತರ |
| ೧೯೩೬ ಜೂನ್ ೮ | : | All India Radio - AIR ಎಂದು ನಾಮಕರಣ |
| ೧೯೩೮ ಫೆಬ್ರವರಿ | : | ಲಘು ತರಂಗ ಪ್ರಸರಣ ಪ್ರಾರಂಭ |
| ೧೯೩೯ | : | ಅಂತರರಾಷ್ಟ್ರೀಯ ಸೇವಾ ವಿಭಾಗ ಉದ್ಘಾಟನೆ |
| ೧೯೫೭ ಅಕ್ಟೋಬರ್ ೨ | : | 'ವಿವಿಧ ಭಾರತಿ' ಸ್ಥಾಪನೆ |
| ೧೯೮೮ ಮೇ | : | ಉಪಗ್ರಹದ ಮೂಲಕ ರಾಷ್ಟ್ರೀಯ AIR ವಾಹಿನಿ ಕಾರ್‍ಯಾರಂಭ |
| ೧೯೯೭ ನವೆಂಬರ್ ೨೩ | : | 'ಪ್ರಸಾರ ಭಾರತಿ' ಸ್ವಾಯತ್ತ ಸಂಸ್ಥೆಯಾಗಿ ಹೊಸರೂಪ |

### ಕರ್ನಾಟಕದಲ್ಲಿ ರೇಡಿಯೊ

ಸಾಂಸ್ಕೃತಿಕ ರಾಯಭಾರಿ ಎನಿಸಿದ ರೇಡಿಯೊ ಕೇಂದ್ರವನ್ನು ಆಗಿನ ಮೈಸೂರು ಪ್ರಾಂತ್ಯದಲ್ಲಿ ಮೊದಲು ಪ್ರಾರಂಭಿಸಿದ್ದು ಸಂಗೀತ, ಸಾಹಿತ್ಯ, ಸಂಸ್ಕೃತಿಯ ನೆಲವೀಡಾಗಿದ್ದ ಮೈಸೂರಿನಲ್ಲಿ ಎನ್ನುವುದು ಉಲ್ಲೇಖಾರ್ಹ. ೧೯೩೫ರ ಸೆಪ್ಟೆಂಬರ್ ೧೦ರಂದು ಕನ್ನಡದ ರೇಡಿಯೊ ಪ್ರಸಾರ ಸೇವೆ ಖಾಸಗಿ ಒಡೆತನದಲ್ಲಿ ಪ್ರಾರಂಭವಾಯಿತು. ಮೈಸೂರು ವಿಶ್ವವಿದ್ಯಾಲಯದಲ್ಲಿ ಮನಃಶಾಸ್ತ್ರದ ಪ್ರಾಧ್ಯಾಪಕರಾಗಿದ್ದ ಡಾ. ಎಂ.ವಿ. ಗೋಪಾಲಸ್ವಾಮಿಯವರು ಒಂಟಿಕೊಪ್ಪಲಿನಲ್ಲಿದ್ದ ತಮ್ಮ ನಿವಾಸದಲ್ಲೇ ರೇಡಿಯೊ ಕೇಂದ್ರವನ್ನು ಆರಂಭಿಸಿದ್ದು ರಾಜ್ಯದಲ್ಲಿ ಬಾನುಲಿ ಪ್ರಸಾರ ವ್ಯವಸ್ಥೆಗೆ ಅಡಿಗಲ್ಲಾಯಿತು. ಅವರೇ ಹೆಸರಿಸಿದ ಆಕಾಶವಾಣಿ ಪ್ರಾರಂಭದಲ್ಲಿ ೩೦ ವಾಟ್ ಟ್ರಾನ್ಸ್‌ಮೀಟರ್‌ನೊಂದಿಗೆ ಕೆಲಸ ಮಾಡುತ್ತಿತ್ತು. ಸಾಂಸ್ಕೃತಿಕ ರಾಜಧಾನಿಯೇ ಆಗಿದ್ದ ಮೈಸೂರಿನಲ್ಲಿ ಉನ್ನತ ಸ್ತರದ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಪ್ರಸಾರ ಮಾಡುವುದು ಆಕಾಶವಾಣಿಗೆ ಕಷ್ಟವಾಗಲಿಲ್ಲ. ಜೊತೆಗೆ ಅಷ್ಟೇ ಉನ್ನತ ದರ್ಜೆಯ, ಅಧಿಕ ಪ್ರಮಾಣದ ಕೇಳುಗರ ಸ್ಪಂದನ ಪಡೆಯುವುದೂ ಕಷ್ಟವಾಗಲಿಲ್ಲ. ಹೀಗೆ ಮೈಸೂರು

ಆಕಾಶವಾಣಿ ರಾಜ್ಯದಲ್ಲಿ ಉನ್ನತ ಮಟ್ಟದ ಕಾರ್ಯಕ್ರಮ ನೀಡುವ ಪರಂಪರೆಗೆ ತಳಹದಿ ಹಾಕಿತು. ರೇಡಿಯೊ ಸೆಟ್‌ಗಳ ಸೌಲಭ್ಯ ಹೆಚ್ಚಾಗಿ ಇರದಿದ್ದ ಆ ಸಂದರ್ಭದಲ್ಲಿ ಅಲ್ಲಿನ ಪ್ರಸಿದ್ಧ ಟೌನ್‌ಹಾಲ್ ಪಕ್ಕದ ದೊಡ್ಡ ಗಡಿಯಾರಕ್ಕೆ ಧ್ವನಿವರ್ಧಕ ಕಟ್ಟಿ ಸಾರ್ವಜನಿಕರಿಗೆ ಕೇಳಿಸುವ ವ್ಯವಸ್ಥೆ ಮಾಡಲಾಗಿತ್ತು. ಗೋಪಾಲಸ್ವಾಮಿಯವರಂತೆಯೇ ಪ್ರೊ. ಎ.ಎನ್. ಮೂರ್ತಿರಾಯರು, ಲಿಂಗಪ್ಪಾಜಿ, ರಾಜಮ್ಮ ಕಲ್ಲೋಳಿಮಠ, ಮಾ.ನ. ಚೌಡಪ್ಪ, ಷಣ್ಮುಖಯ್ಯ ಮೊದಲಾದವರ ಸೇವೆ ಗಣನೀಯ. ಗುಣಮಟ್ಟದ ಕಾರ್ಯಕ್ರಮ, ಗುಣಮಟ್ಟದ ಶ್ರೋತೃಗಳೂ ಇದ್ದಾಗ್ಯೂ ಹಣಕಾಸಿನ ತೊಂದರೆ ಎದುರಿಸತೊಡಗಿದ ಆಕಾಶವಾಣಿಯ ನೆರವಿಗೆ ಬಂದವರು ಮೈಸೂರು ಮಹಾರಾಜರು. ೧೯೪೨ರಲ್ಲಿ ಆಕಾಶವಾಣಿ ರಾಜಾಶ್ರಯ ಪಡೆಯಿತು. ೧೯೫೦ರಲ್ಲಿ ರಾಷ್ಟ್ರೀಯ ಪ್ರಸಾರ ವ್ಯವಸ್ಥೆಯಲ್ಲಿ ವಿಲೀನಗೊಂಡಿದ್ದಲ್ಲದೆ ಆ ವ್ಯವಸ್ಥೆಗೂ ಆಕಾಶವಾಣಿ ಎನ್ನುವ ಹೆಸರನ್ನೇ ಮುಂದುವರೆಯಿತು.

ಉತ್ತರ ಕರ್ನಾಟಕದ ಜನರಿಗಾಗಿ ೧೯೪೭ರ ಸುಮಾರಿನಲ್ಲಿ ಬೊಂಬಾಯಿಯಿಂದ ನಿತ್ಯ ಅರ್ಧಗಂಟೆ ಕಾಲ ಕನ್ನಡ ಕಾರ್ಯಕ್ರಮ ಪ್ರಸಾರವಾಗುತ್ತಿತ್ತು. ೧೯೫೦ರಲ್ಲಿ ಧಾರವಾಡದಲ್ಲೊಂದು ಕೇಂದ್ರ ಹುಟ್ಟಿತು. ನಂತರ ೧೯೫೫ರ ವೇಳೆಗೆ ಮೈಸೂರು ಕೇಂದ್ರದ ಪ್ರಸಾರ ಸ್ಥಗಿತಗೊಂಡು ಬೆಂಗಳೂರಿನಲ್ಲಿ ಅಧಿಕ ಶಕ್ತಿಯ ಪ್ರಸಾರ ಕೇಂದ್ರ ಸ್ಥಾಪನೆಯಾಯಿತು. ಬೆಂಗಳೂರು, ಧಾರವಾಡ ಕೇಂದ್ರಗಳ ವ್ಯಾಪ್ತಿ ವಿಸ್ತೃತಗೊಂಡು ಭದ್ರಾವತಿ (೧೯೬೫), ಗುಲ್ಬರ್ಗಾ (೧೯೬೬)ಗಳಲ್ಲಿ ಉಪಕೇಂದ್ರಗಳು ಜೀವ ತಳೆದವು. ೧೯೭೪ರಲ್ಲಿ ಐತಿಹಾಸಿಕ ಮೈಸೂರು ಕೇಂದ್ರ ಅಲ್ಪಶಕ್ತಿಯೊಂದಿಗೆ ಮತ್ತೆ ತನ್ನ ಪ್ರಸಾರ ಪ್ರಾರಂಭಿಸಿತು. ಕರಾವಳಿ ಜಿಲ್ಲೆಯ ಶ್ರೋತೃಗಳಿಗಾಗಿ ಮಂಗಳೂರು (೧೯೭೬), ಚಿತ್ರದುರ್ಗ (೧೯೯೧), ಹಾಸನ (೧೯೯೧), ಹೊಸಪೇಟೆ (೧೯೯೨), ಮಡಿಕೇರಿ (೧೯೯೩), ರಾಯಚೂರು (೧೯೯೩), ಕಾರವಾರ (೧೯೯೪), ಬಿಜಾಪುರ (೧೯೯೫)ದಲ್ಲಿ ಆಕಾಶವಾಣಿ ಕೇಂದ್ರಗಳು ಸ್ಥಾಪಿತಗೊಂಡು ನಿರಂತರ ಪ್ರಸಾರ ಸೇವಾ ಕಾರ್ಯದಲ್ಲಿ ತೊಡಗಿದವು.

ಮೆಲ್ಲಮೆಲ್ಲನೆ ಪ್ರಾದೇಶಿಕ ವ್ಯಾಪಕತೆ ಗಳಿಸಿದ ಆಕಾಶವಾಣಿ ಪ್ರಸಾರ ವಿಷಯಗಳನ್ನು ಹೆಚ್ಚಿಸಿಕೊಂಡಿದ್ದಲ್ಲದೆ, ಜನಾಭಿರುಚಿಗೆ ತಕ್ಕಂತಹ ಕಾರ್ಯಕ್ರಮ ನಿರೂಪಿಸುವುದರಲ್ಲೂ ಯಶಸ್ವಿಯಾಯಿತು. ಎಲ್ಲ ವಯೋವರ್ಗಗಳ ಶ್ರೋತೃಗಳನ್ನು ಆಕರ್ಷಿಸಿಕೊಂಡಿತು. ಅದರಲ್ಲೂ ಮುಖ್ಯವಾಗಿ ೧೯೬೫ರ ನಂತರ ಪ್ರಾರಂಭವಾದ ಕೃಷಿ ಸಂಬಂಧಿ ಕಾರ್ಯಕ್ರಮಗಳು, ಮಹಿಳೆ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ, ರಾಷ್ಟ್ರೀಯ ಭಾವೈಕ್ಯತೆ, ವಿಜ್ಞಾನ ಮತ್ತು ತಂತ್ರಜ್ಞಾನ, ಆಧ್ಯಾತ್ಮ, ಶೈಕ್ಷಣಿಕ ಪ್ರಸಾರ, ಮನರಂಜನೆ ಜನಮೆಚ್ಚಿಗೆ ಗಳಿಸಿದವು. ಎಲ್ಲಕ್ಕಿಂತ ಮಿಗಿಲಾಗಿ ಆಕಾಶವಾಣಿ ಇಂದು ದಿನವಹಿ ಒಟ್ಟು ೩೧೫ ಬುಲೆಟಿನ್‌ಗಳನ್ನು ನೀಡುವ ಒಂದು ಪ್ರಮುಖ ಸುದ್ದಿ ಮಾಧ್ಯಮವಾಗಿ, ಒಂದು ಸುದ್ದಿ ಸಂಸ್ಥೆಯೇ ಆಗಿ ಬೆಳೆದು ನಿಂತಿದೆ. ೧೯೯೯-೨೦೦೦ದ ವಾರ್ತಾ ಮತ್ತು ಪ್ರಸಾರ ಸಚಿವಾಲಯದ ವಾರ್ಷಿಕ ವರದಿಯಂತೆ ಶೇಕಡಾ ೯೭.೭ರಷ್ಟು ಕೇಳುಗರು ಆಕಾಶವಾಣಿಯನ್ನೇ ಅವಲಂಬಿಸಿದ್ದಾರೆ.

ಇಂದು, ದೇಶಾದ್ಯಂತ ಶೇಕಡಾ ೯೧ರಷ್ಟು ವ್ಯಾಪಕತೆ, ಸುಮಾರು ೧೯೮ ಕೇಂದ್ರಗಳನ್ನು ಹೊಂದಿರುವ ಆಕಾಶವಾಣಿ ಸರ್ಕಾರಿ ಅಧಿಪತ್ಯದ ಸಂಸ್ಥೆಯಾಗಿದೆ. ಕೇಂದ್ರ ವಾರ್ತಾ ಮತ್ತು ಪ್ರಸಾರ ಸಚಿವಾಲಯದ ನೆರಳಲ್ಲಿದ್ದ ಈ ವಿದ್ಯುನ್ಮಾನ ಮಾಧ್ಯಮ ದೂರದರ್ಶನದೊಂದಿಗೆ ಪ್ರಸಾರ ಭಾರತಿ ಹೆಸರಿನಲ್ಲಿ ಸ್ವಾಯತ್ತ ಸೇವಾಸಂಸ್ಥೆಯ ಸ್ಥಾನಮಾನಗಳಿಸುವ ಸ್ಥಿತ್ಯಂತರದ ಸ್ಥಿತಿಯಲ್ಲಿದೆ. ದೂರದರ್ಶನ ಪ್ರಸಾರದ ಜನಪ್ರಿಯತೆಯ ನಡುವೆ ಆಕಾಶವಾಣಿ ಹತ್ತು ಹಲವು ಪೈಪೋಟಿಗಳನ್ನು ಎದುರಿಸಬೇಕಾಗಿದೆ.

## ಕರ್ನಾಟಕದಲ್ಲಿ ರೇಡಿಯೊ ವಿಕಾಸದ ಮಜಲುಗಳು

| | | |
|---|---|---|
| ೧೯೩೫ ಸೆಪ್ಟೆಂಬರ್ ೧೦ | : | ಮೈಸೂರಿನಲ್ಲಿ ರೇಡಿಯೊ ಪ್ರಸಾರ ಸೇವೆ ಆರಂಭ |
| ೧೯೪೨ ಜನವರಿ ೧ | : | ಆಕಾಶವಾಣಿ ರಾಜಾಶ್ರಯಕ್ಕೆ |
| ೧೯೪೭ | : | ಬೊಂಬಾಯಿ ಕೇಂದ್ರದಿಂದ ೧/೨ ಗಂಟೆ ಕನ್ನಡ ಕಾರ್ಯಕ್ರಮ ಪ್ರಸಾರ |
| ೧೯೫೦ ಏಪ್ರಿಲ್ ೧ | : | ರಾಷ್ಟ್ರೀಯ ರೇಡಿಯೊ ವ್ಯವಸ್ಥೆಯಲ್ಲಿ ವಿಲೀನ |
| ೧೯೫೦ ಜನವರಿ ೮ | : | ಧಾರವಾಡದಲ್ಲಿ ಆಕಾಶವಾಣಿ ಕೇಂದ್ರ ಸ್ಥಾಪನೆ |
| ೧೯೫೫ ನವೆಂಬರ್ ೨ | : | ಬೆಂಗಳೂರು ಕೇಂದ್ರ ಆರಂಭ |
| ೧೯೬೫ ಫೆಬ್ರವರಿ ೭ | : | ಭದ್ರಾವತಿ ಕೇಂದ್ರ ಆರಂಭ |
| ೧೯೬೬ ನವೆಂಬರ್ ೧೦ | : | ಗುಲ್ಬರ್ಗಾ ಕೇಂದ್ರ ಆರಂಭ |
| ೧೯೭೪ ನವೆಂಬರ್ ೧೪ | : | ಸ್ಥಗಿತಗೊಂಡಿದ್ದ ಮೈಸೂರು ಕೇಂದ್ರ ಪುನರಾರಂಭ |
| ೧೯೭೬ ಫೆಬ್ರವರಿ ೧೦ | : | ಮಂಗಳೂರು ಕೇಂದ್ರ ಆರಂಭ |
| ೧೯೯೧ ಮೇ ೩ | : | ಚಿತ್ರದುರ್ಗ ಕೇಂದ್ರ ಆರಂಭ |
| ೧೯೯೧ ಮೇ ೪ | : | ಹಾಸನ ಕೇಂದ್ರ ಆರಂಭ |
| ೧೯೯೨ ಮೇ ೧ | : | ಹೊಸಪೇಟೆ ಕೇಂದ್ರ ಆರಂಭ |
| ೧೯೯೩ ಆಗಸ್ಟ್ ೨೮ | : | ಮಡಿಕೇರಿ ಕೇಂದ್ರ ಆರಂಭ |
| ೧೯೯೩ ಆಗಸ್ಟ್ ೨೮ | : | ರಾಯಚೂರು ಕೇಂದ್ರ ಆರಂಭ |
| ೧೯೯೪ ಫೆಬ್ರವರಿ ೧೩ | : | ಕಾರವಾರ ಕೇಂದ್ರ ಆರಂಭ |
| ೧೯೯೫ | : | ಬಿಜಾಪುರ ಕೇಂದ್ರ ಸ್ಥಾಪನೆ (೧೯೯೭ರಲ್ಲಿ ವಿಸ್ತೃತಗೊಂಡಿತು) |

### ೪.೫ ದೂರದರ್ಶನ

ಪಾಶ್ಚಾತ್ಯ ದೇಶಗಳಲ್ಲಿ **ಕಣ್ಣಿನ ಚೂಯ್ಯಿಂಗ್‌ಗಮ್** ಎಂದು ಕರೆಸಿಕೊಳ್ಳುವ ದೂರದರ್ಶನ ಅತ್ಯಂತ ಪ್ರಭಾವಿ ಸಂವಹನ ಮಾಧ್ಯಮ. ದೃಶ್ಯ ಸಂವಹನೆಯ ಸಾಮರ್ಥ್ಯದೊಂದಿಗೆ ಧ್ವನಿಯನ್ನು ಸಂವಹಿಸುವ ಈ ಮಾಯಾಪೆಟ್ಟಿಗೆ ಅತ್ಯಂತ ಉತ್ಕೃಷ್ಟ ಪ್ರಸಾರ ತಾಂತ್ರಿಕತೆಯನ್ನು ಹೊಂದಿದೆ. ದೂರದರ್ಶನ ಹುಟ್ಟುವ ಮೊದಲೇ ಜಗತ್ತಿಗೆ ಚಲಿಸುವ ಚಿತ್ರಗಳ ತಿಳುವಳಿಕೆಯಿತ್ತು. ರೇಡಿಯೊ ಪ್ರಸಾರವೂ ಪ್ರಾರಂಭವಾಗಿತ್ತು.

ದೂರದರ್ಶನಕ್ಕೆ ಬಹಳ ಸುದೀರ್ಘವಾದ ಇತಿಹಾಸವಿಲ್ಲ. ಇದು ೨೦ನೇ ಶತಮಾನದ ಆವಿಷ್ಕಾರ. ಸುಮಾರು ೬೫ ವರ್ಷಗಳಷ್ಟು ಮಾತ್ರ ಹಳೆಯದು. ೧೯೨೦ರ ದಶಕದಲ್ಲಿ ಚಲಿಸುವ ಚಿತ್ರಗಳಿಗೂ ಧ್ವನಿಗೂ ಹೊಂದಾಣಿಕೆ ಮಾಡುವ ಸಾಹಸ ಪ್ರಾರಂಭವಾಯಿತು. ಡಾ. ವ್ಲಾಡಿಮಿರ್ ಜ್ವೋರಿಕಿನ್ ೧೯೨೩ರಲ್ಲಿ ಐಕನೋಸ್ಕೋಪ್ ಎನ್ನುವ ವಿದ್ಯುತ್ ಟೆಲಿವಿಷನ್



ಟೆಲಿವಿಷನ್ ಜನಕ ಜ್ವೋರಿಕಿನ್

ಟ್ಯೂಬ್ ಕಂಡು ಹಿಡಿಯುವುದರೊಂದಿಗೆ ಟೆಲಿವಿಷನ್ ಸೆಟ್‌ನ ಉಗಮದ ಪ್ರಯತ್ನ ಆರಂಭವಾಯಿತು. ಇದಾದ ಎರಡು ವರ್ಷಗಳ ನಂತರ ಅಮೆರಿಕದ ಜೆನ್‌ಕಿನ್ಸ್ ನೀಸ್ ಯಾಂತ್ರಿಕ ಟಿ.ವಿ. ಉಪಕರಣವನ್ನು ಕಂಡು ಹಿಡಿದದ್ದು ದೂರದರ್ಶನ ಸೆಟ್‌ಗಳ ಉಗಮಕ್ಕೆ ತಳಹದಿಯಾಯಿತು. ೧೯೨೭ರಲ್ಲಿ ಬೆಲ್ ಟೆಲಿಫೋನ್ ಲ್ಯಾಬರೇಟರೀಸ್ ಎನ್ನುವ ಸಂಸ್ಥೆ ನ್ಯೂಯಾರ್ಕ್‌ನಿಂದ ವಾಷಿಂಗ್‌ಟನ್‌ವರೆಗೆ ತಂತಿ ಮುಖೇನ ಪ್ರಾಯೋಗಿಕ ದೂರದರ್ಶನ ಕಾರ್ಯಕ್ರಮವೊಂದನ್ನು ರವಾನಿಸಿತು. ೧೯೨೮ರಲ್ಲಿ ಅದೇ ಪ್ರಯೋಗಶಾಲೆ, ಪ್ರಾಯೋಗಿಕವಾಗಿಯೇ ಹೊರಾಂಗಣ ಕಾರ್ಯಕ್ರಮವನ್ನು ಟಿ.ವಿ. ಮೂಲಕ ಪ್ರಸಾರ ಮಾಡಿತು. ಇದರೊಂದಿಗೆ ದೃಶ್ಯ - ಧ್ವನಿಯ ಏಕಕಾಲೀನ ಸಂಯೋಜಿತ ಪ್ರಸಾರ ಆರಂಭಗೊಂಡಂತಾಯಿತು. ರೇಡಿಯೊ ಪ್ರಸರಣೆಯ ಕ್ಷೇತ್ರದಲ್ಲೂ ಅಸಾಮಾನ್ಯ ಸಾಧನೆ ಮಾಡಿದ್ದ ಬ್ರಿಟಿಷ್ ಬ್ರಾಡ್‌ಕಾಸ್ಟಿಂಗ್ ಕಾರ್ಪೊರೇಷನ್ ಜಗತ್ತಿನ ಮೊಟ್ಟ ಮೊದಲ ಸಾರ್ವಜನಿಕ ಸೇವೆಯನ್ನು ಆರಂಭಿಸಿದ್ದು ೧೯೩೬ರಲ್ಲಿ. ಎರಡನೇ ಮಹಾಯುದ್ಧ ಆರಂಭವಾಗುವ ಹೊತ್ತಿಗೆ ಅಲ್ಲಿ ೨೦,೦೦೦ ಟಿ.ವಿ. ಸೆಟ್‌ಗಳಿದ್ದವು. ನ್ಯೂಯಾರ್ಕ್‌ನಲ್ಲಿ ೧೯೩೯ರಲ್ಲಿ ನಡೆದ ವಿಶ್ವಮೇಳದಲ್ಲಿ ಅಮೇರಿಕಾದ ಜನತೆ ಮೊದಲ ಬಾರಿಗೆ ಟಿ.ವಿ. ವೀಕ್ಷಣೆ ನಡೆಸಿದರು. ೧೯೪೪ರಲ್ಲಿ ಬಿ.ಬಿ.ಸಿ. ತನ್ನ ಎರಡನೇ ಚಾನೆಲ್ ಅನ್ನು ಪ್ರಾರಂಭಿಸಿತು. ಈ ಚಾನೆಲ್ ಮೂಲಕ ಅಂತರರಾಷ್ಟ್ರೀಯ ಮಟ್ಟದಲ್ಲಿ ಕಾರ್ಯಕ್ರಮ ವಿನಿಮಯವೂ ಪ್ರಾರಂಭವಾಯಿತು.





ಐಕನೋಸ್ಕೋಪ್


ಬರ್ಲಿನ್ ಒಲಿಂಪಿಕ್ಸ್‌ನಲ್ಲಿ ಬಳಸಿದ ಕ್ಯಾಮರಾ (೧೯೩೬)

ಚಂದ್ರಗ್ರಹದ ಮೇಲೆ ೧೯೬೯ರಲ್ಲಿ ಮಾನವ ತನ್ನ ಮೊದಲ ಹೆಜ್ಜೆ ಇರಿಸಿದ ಸನ್ನಿವೇಶವನ್ನು ಜಗತ್ತಿನಾದ್ಯಂತ ೫೦೦ ಮಿಲಿಯನ್ ಜನರು ನೋಡುವಂತೆ ಮಾಡುವ ಸಾಮರ್ಥ್ಯವನ್ನ ಟಿ.ವಿ. ಗಳಿಸಿಕೊಂಡಿತ್ತು. ೧೯೭೨ರ ವೇಳೆಗೆ ಟಿ.ವಿ. ಸಾಮಾನ್ಯರ ಮನೆ ಮಾತಾಗಿತ್ತು. ಇಂದು ೧೨೦ಕ್ಕೂ ಹೆಚ್ಚು ದೇಶಗಳು ಸಂವಹನ ಕ್ಷೇತ್ರದಲ್ಲಿ ಅಭೂತಪೂರ್ವ ಪ್ರಗತಿ ಸಾಧಿಸಿವೆ.

ವಿದ್ಯುನ್ಮಾನ ತಂತ್ರಜ್ಞಾನ, ಬಣ್ಣದ ಟಿ.ವಿ. ಸೆಟ್‌ನ ಆವಿಷ್ಕಾರ, ಉಪಗ್ರಹದ ಮೂಲಕ ಪ್ರಸಾರ ಹೀಗೆ ಸಂವಹನ ವ್ಯವಸ್ಥೆಯ ಅನೇಕ ಅಂಗಗಳು ಕ್ರಾಂತಿಯಂತೆ ಹೊಮ್ಮಿಬಂದವು. ೧೯೨೫ರಲ್ಲೇ ಬಣ್ಣದ ಟಿ.ವಿ. ಸೆಟ್ ತಯಾರಿಕೆಯ ಪ್ರಯತ್ನ ಪ್ರಾರಂಭವಾದರೂ ೧೯೨೯ರಲ್ಲಿ ಹಾರ್ಬರ್ಟ್ ಐವ್ಸ್ ನೇತೃತ್ವದ ಅಮೆರಿಕನ್ನರ ತಂಡ ಮೊದಲ ಬಣ್ಣದ ಟಿ.ವಿ. ಪರದೆಯ ಮೇಲೆ ಪ್ರಾತ್ಯಕ್ಷಿಕೆ ನೀಡಿತು. ಕೆಂಪು, ಹಸಿರು ಮತ್ತು ನೀಲಿ ಬಣ್ಣದ ಮೂರು ಪ್ರತ್ಯೇಕ ವರ್ಣಗಳಲ್ಲಿ ಚಿತ್ರಗಳನ್ನು ಪ್ರಸಾರ ಮಾಡಿತು. ಇದರೊಂದಿಗೆ ಮೂರು ಬಣ್ಣಗಳನ್ನು ಮಿಳಿತಗೊಳಿಸಿ ಸಂಪೂರ್ಣ ಸಹಜ ವರ್ಣದ ಒಂದು ಚಿತ್ರ ಮೂಡಿಸುವ ಪ್ರಯೋಗ ಮುಂದುವರೆಯಿತು. ೧೯೫೪ರಲ್ಲಿ ಅಮೇರಿಕ ಮೊದಲ ಸಂಪೂರ್ಣ ಬಣ್ಣದ ಟಿ.ವಿ. ಮೂಲಕ ಸಾರ್ವಜನಿಕ ಪ್ರಸಾರ ಸೇವೆ ಆರಂಭಿಸಿದರೆ, ೧೯೬೦ರಲ್ಲಿ ಜಪಾನ್, ೧೯೬೭ರಲ್ಲಿ ಬ್ರಿಟನ್ ಮತ್ತು ಅನೇಕ ಐರೋಪ್ಯ ರಾಷ್ಟ್ರಗಳು ಬಣ್ಣದ ಟಿ.ವಿ.ಯನ್ನು ಬಳಕೆಗೆ ತಂದವು. ೧೯೭೯ರಲ್ಲಿ ಅತ್ಯಂತ ಚಿಕ್ಕ (ಕಿಸೆಗಾತ್ರದ) ಟಿ.ವಿ.ಯನ್ನೂ ಅದಾದ ಹತ್ತು ವರ್ಷಗಳ ನಂತರ ೧೯೮೯ರಲ್ಲಿ ದೊಡ್ಡ ಪರದೆಯ ದೂರದರ್ಶನ ಸೆಟ್ಟನ್ನೂ ಸಿದ್ಧಪಡಿಸಲಾಯಿತು. ಜಗತ್ತಿನ ಇತರ ಅನೇಕ ದೇಶಗಳಂತೆ ಭಾರತವೂ ಈ ಪ್ರಸಾರ ಮಾಧ್ಯಮವನ್ನು ಬಹಳ ಬೇಗನೆ ಅಳವಡಿಸಿಕೊಂಡುದನ್ನು ಕಾಣಬಹುದು.

## ಭಾರತದಲ್ಲಿ ದೂರದರ್ಶನ

ಯುನೆಸ್ಕೋದ ಒಂದು ಪ್ರಾಯೋಗಿಕ ಯೋಜನೆಯಾಗಿ ೧೯೫೯ರ ಸೆಪ್ಟೆಂಬರ್ ೧೫ರಂದು ಭಾರತದಲ್ಲಿ ದೂರದರ್ಶನ ಕಾರ್ಯಾರಂಭ ಮಾಡಿತು. ಭಾರತದಂತಹ ಪ್ರಗತಿಶೀಲ ರಾಷ್ಟ್ರದಲ್ಲಿ ದೂರದರ್ಶನವನ್ನು ಒಂದು ಶೈಕ್ಷಣಿಕ, ಗ್ರಾಮೀಣ ಹಾಗೂ ಸಮುದಾಯ ಅಭಿವೃದ್ಧಿಯ ಉದ್ದೇಶದಿಂದ ಪ್ರಾರಂಭಿಸಲಾಯಿತು. ಈ ಯೋಜನೆಯಡಿಯಲ್ಲಿ ದೆಹಲಿ ಹಾಗೂ ಸುತ್ತಮುತ್ತ ೨೦ ಸಮುದಾಯಗಳಲ್ಲಿ ದೂರದರ್ಶನ ಸೆಟ್‌ಗಳನ್ನು ಇರಿಸಲಾಯಿತು. ಪ್ರತಿಯೊಂದು ಸೆಟ್‌ನ ಮೂಲಕ ವಾರಕ್ಕೆರಡು ಬಾರಿ ಒಂದು ಗಂಟೆ ಕಾಲ ನೀಡಲಾಗುತ್ತಿದ್ದ ಕಾರ್ಯಕ್ರಮಗಳನ್ನು ೧೫೦ ರಿಂದ ೨೦೦ ಮಂದಿ ವೀಕ್ಷಿಸುತ್ತಿದ್ದರು. ಇದಕ್ಕೆಂದೇ ೨೦ ವಿಶೇಷ ಕಾರ್ಯಕ್ರಮಗಳನ್ನು ರೂಪಿಸಲಾಗಿತ್ತು. ಈ ಕಾರ್ಯಕ್ರಮದ ಯಶಸ್ಸಿನ ನಂತರ ೧೯೬೧ರಲ್ಲಿ ಶಾಲಾ ಶೈಕ್ಷಣಿಕ ಕಾರ್ಯಕ್ರಮಗಳನ್ನು ವಾರಕ್ಕೊಮ್ಮೆಯಂತೆ ೧೦ ವಾರಗಳ ಕಾಲ ಪ್ರಸಾರ ಮಾಡಲಾಯಿತು.



ಫ್ರಾನ್ಸ್‌ವರ್ತ್ - ೧೯೩೨



ಫ್ಯಾಂಟಮ್ - ೧೯೩೯



ಫಿಲಿಪ್ಸ್ ಟಿಎಕ್ಸ್, ೫೦೦ ಯು



ಫಿಲಿಪ್ಸ್ - ೧೯೪೮



ಫಿಲಿಪ್ಸ್ ಟಿಎಕ್ಸ್, ೧೪೨೨ಎ - ೧೯೫೫



ಫಿಲಿಪ್ಸ್ ಟಿಎಕ್ಸ್, ೪೦೦



ಫಿಲಿಪ್ಸ್ ಟಿಎಕ್ಸ್, ೪೦೦ ಯು



ಫಿಲ್ಕೋ ೪೬೫೪ - ೧೯೫೮



ಫಿಲ್ಕೋ ಪ್ರೆಡಿಕ್ಟಾ - ೧೯೫೮

## ಆರಂಭಿಕ ಹಂತದ ಟೆಲಿವಿಷನ್ ಮಾದರಿಗಳು

೧೯೬೫ ಆಗಸ್ಟ್ ೧೫ ರಿಂದ ದಿನವಹಿ ಒಂದು ಗಂಟೆ ಅವಧಿಯ ಕ್ರಮಬದ್ಧ ಪ್ರಸಾರ ಶುರುವಾಯಿತು. ಕೃಷಿ ಪ್ರಧಾನ ದೇಶವಾಗಿರುವುದರಿಂದ ಭಾರತದ ಸುಮಾರು ೮೦ ಹಳ್ಳಿಗಳ ರೈತಾಪಿ ವರ್ಗದವರ ಅನುಕೂಲಕ್ಕೆಂದು ೧೯೬೭ ರ ಹೊತ್ತಿಗೆ 'ಕೃಷಿ ದರ್ಶನ' ಕಾರ್ಯಕ್ರಮ ಪ್ರಸಾರ ಆರಂಭವಾಯಿತು. ೧೯೭೦ ರಲ್ಲಿ ಪ್ರಸಾರಾವಧಿಯನ್ನು ೩ ಗಂಟೆಗಳಿಗೆ ಹೆಚ್ಚಿಸಲಾಯಿತು. ಇದರಲ್ಲಿ ಮಾಹಿತಿ ಮತ್ತು ಮನರಂಜನಾ ಕಾರ್ಯಕ್ರಮಗಳೂ ಸೇರಿ ಪ್ರಸಾರ ನಡೆಯುತ್ತಿತ್ತು. ಆ ವೇಳೆಗೆ ದೇಶದಲ್ಲಿ ವಿದೇಶಿ ಮೂಲದ ೨೨,೦೦೦ ಟಿವಿ ಸೆಟ್‌ಗಳು ಬಳಕೆಯಲ್ಲಿದ್ದುದರ ಜೊತೆಗೆ ಭಾರತದಲ್ಲೇ ಸಿದ್ಧಪಡಿಸಲಾದ ಒಂದು ಲಕ್ಷ ಸೆಟ್‌ಗಳು ಮಾರುಕಟ್ಟೆಗೆ ಬಂದಿದ್ದವು.

೧೯೭೨ರಲ್ಲಿ ಬೊಂಬಾಯಿಯ ದೂರದರ್ಶನ ಕೇಂದ್ರ ಕಾರ್ಯಾರಂಭಮಾಡಿತು. ಅದರ ಮುಂದಿನ ವರ್ಷ ಶ್ರೀನಗರ, ಅಮೃತಸರದಲ್ಲಿ ಟಿ.ವಿ. ಕೇಂದ್ರಗಳು ಆರಂಭಗೊಂಡವು. ೧೯೭೫ರಲ್ಲಿ ಮದ್ರಾಸ್, ಕಲ್ಕತ್ತಾ, ಲಕ್ನೋ ಕೇಂದ್ರಗಳ ಮೂಲಕ ಪ್ರಸಾರ ನಡೆಯತೊಡಗಿತು. ೧೯೭೫-೭೬ರಲ್ಲಿ Satellite Instructional Television Experiment (SITE) ಎನ್ನುವ ಶೈಕ್ಷಣಿಕ ಕಾರ್ಯಕ್ರಮ ಸಂವಹನ ವ್ಯವಸ್ಥೆ ಸೂಕ್ತವಾಗಿ ಬೆಳೆದಿರದ ೨೪೦೦ ಗ್ರಾಮಗಳಲ್ಲಿ ಒಂದು ವರ್ಷ ಕಾಲ ಪ್ರಸಾರವಾಯಿತು. ಈ ಕಾರ್ಯಕ್ರಮದ ಪ್ರಯೋಜನ ಕರ್ನಾಟಕದ ಹಲವು ಗ್ರಾಮಗಳಿಗೂ ಆದದ್ದು ಗಮನಾರ್ಹ.

೧೯೭೦-೮೦ರ ದಶಕಗಳಲ್ಲಿ ದೂರದರ್ಶನ ಕುರಿತು ನಡೆದ ಅನೇಕ ಸಂಶೋಧನೆ - ಸಮೀಕ್ಷೆಗಳಲ್ಲಿ ಭಾರತೀಯ ದೂರದರ್ಶನ ಒಂದು ಸಮರ್ಥವಾದ ಶೈಕ್ಷಣಿಕ ಟೆಲಿವಿಷನ್ ಎಂದು ಅಭಿಪ್ರಾಯಪಡಲಾಗಿದೆ. ಹಾಗಾಗಿ ನಂತರದಲ್ಲಿ ವಯಸ್ಕರ ಶಿಕ್ಷಣ, ಔಪಚಾರಿಕ ಹಾಗೂ ಅನೌಪಚಾರಿಕ ಶಿಕ್ಷಣ, ಉನ್ನತ ಶಿಕ್ಷಣ ಮತ್ತು ಯು.ಜಿ.ಸಿ. ಶೈಕ್ಷಣಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಮೂಲಕ ದೂರದರ್ಶನದ ಉಪಯೋಗವನ್ನು ಹೆಚ್ಚಿಸಿಕೊಳ್ಳಲಾಯಿತು.

ಆದರೆ ಆ ನಂತರದ ದಿನಗಳಲ್ಲಿ ಭಾರತೀಯ ದೂರದರ್ಶನ ಮನರಂಜನೆ ಹಾಗೂ ಸುದ್ದಿ ಮಾಧ್ಯಮವಾಗಿ ಹೆಚ್ಚು ಜನಪ್ರಿಯವಾಯಿತೇ ಹೊರತು ಶೈಕ್ಷಣಿಕ ಮಾಧ್ಯಮವಾಗಿ ಅಲ್ಲ ಎನ್ನುವುದನ್ನು ಗುರುತಿಸಬಹುದು. ೧೯೭೬ರ ಜನವರಿ ೧ನೇ ತಾರೀಖಿನಿಂದ ಎಲ್ಲ ಕೇಂದ್ರಗಳಿಂದಲೂ ವಾಣಿಜ್ಯ ಜಾಹೀರಾತುಗಳ ಪ್ರಸಾರ ಪ್ರಾರಂಭವಾಯಿತು. ಅದೇ ವರ್ಷ ಏಪ್ರಿಲ್ ೧ರಂದು ನಡೆದ ಮತ್ತೊಂದು ಮಹತ್ತರ ಘಟನೆ ಎಂದರೆ ಭಾರತೀಯ ದೂರದರ್ಶನ ಆಕಾಶವಾಣಿಯಿಂದ ಬೇರ್ಪಟ್ಟದ್ದು. ದೂರದರ್ಶನ ಎನ್ನುವ ಹೆಸರಿನಲ್ಲಿ ಕೇಂದ್ರ ಸರ್ಕಾರದ ವಾರ್ತಾ ಮತ್ತು ಪ್ರಸಾರ ಸಚಿವಾಲಯದ ವ್ಯಾಪ್ತಿಯಲ್ಲಿ ಸ್ವತಂತ್ರ ಸಂಸ್ಥೆಯಾಯಿತು.

೧೯೭೭ರಲ್ಲಿ ಸ್ಥಾಪಿಸಿದ ೬ ದೂರದರ್ಶನ ಕೇಂದ್ರಗಳಲ್ಲಿ ಗುಲ್ಬರ್ಗಾ ಕೇಂದ್ರವೂ ಒಂದು ಎನ್ನುವುದು ಗಮನಾರ್ಹ. ೧೯೮೪ರ ಹೊತ್ತಿಗೆ ದೇಶಾದ್ಯಾಂತ ೧೭೨ ಟ್ರಾನ್ಸ್‌ಮೀಟರ್‌ಗಳಿದ್ದು ಶೇ ೫೨ರಷ್ಟು ಜನತೆಗೆ ವ್ಯಾಪಿಸಿತ್ತು. ಅದೇ ವರ್ಷ ದೂರದರ್ಶನದ ಎರಡನೆ ವಾಹಿನಿ ಡಿಡಿ -೨, ೧೯೮೮ರಲ್ಲಿ ಮಹಾರಾಷ್ಟ್ರದಲ್ಲಿ ಮೊದಲ ಪ್ರಾದೇಶಿಕ ಜಾಲ, ೧೯೯೩ರಲ್ಲಿ ಮೆಟ್ರೋ ಮನರಂಜನಾ ವಾಹಿನಿ, ಜೊತೆಗೆ ೫ ಉಪಗ್ರಹ ಚಾನೆಲ್‌ಗಳು, ೧೯೯೫ರಲ್ಲಿ ಡಿಡಿ - ಇಂಡಿಯಾ ಎನ್ನುವ ಅಂತರರಾಷ್ಟ್ರೀಯ ವಾಹಿನಿ ಹಾಗೂ ೧೯೯೮ರಲ್ಲಿ ಡಿಡಿ -೩, ಮತ್ತು ಸುದ್ದಿ ಮತ್ತು ಮನರಂಜನೆ (Infotainment) ವಾಹಿನಿ ಚಾಲನೆಗೆ ಬಂದವು.

ಇದರೊಂದಿಗೆ ಕಾರ್ಯಕ್ರಮ ನಿರ್ಮಾಣ ಸ್ಟೂಡಿಯೋಗಳ ಸಂಖ್ಯೆಯೂ ಹೆಚ್ಚಿತು. ೧೯೭೨ರಲ್ಲಿ ಇದ್ದ ಒಂದು ಸ್ಟುಡಿಯೋಗೆ ಪ್ರತಿಯಾಗಿ ೭೭ರಲ್ಲಿ ೮, ೮೨ರಲ್ಲಿ ೧೦, ೯೨ರಲ್ಲಿ ೨೦ ಹಾಗೂ ೧೯೯೭ರಲ್ಲಿ ೪೧ ಸ್ಟುಡಿಯೋಗಳಿದ್ದವು. ನೇರ ಪ್ರಸಾರವೂ ಸೇರಿದಂತೆ ಅನೇಕ ಹೊಸ ಪ್ರಯೋಗಗಳು ಪ್ರಾರಂಭವಾದವು.

ಇಂದು ೨೦೦೦ದ ಇಸವಿ ಖಾಸಗಿ ಚಾನೆಲ್‌ಗಳ ಯುಗವೆನಿಸಿದೆ. ಸುದ್ದಿ, ಕ್ರೀಡೆ, ಚಲನಚಿತ್ರ ಮತ್ತು ಚಲನಚಿತ್ರ ಆಧಾರಿತ ಕಾರ್ಯಕ್ರಮ, ಆಧ್ಯಾತ್ಮ, ಮನರಂಜನೆ, ಶಿಕ್ಷಣ, ಸಂಶೋಧನೆ, ಸಂಗೀತ, ಫ್ಯಾಶನ್ ಹೀಗೆ ಒಂದೊಂದು ವಿಷಯವನ್ನೇ ಆಧರಿಸಿದ ವಾಹಿನಿಗಳಿವೆ. ಅಂತರರಾಷ್ಟ್ರೀಯ ವಾಹಿನಿಗಳು ಭಾರತದಲ್ಲೂ ಭಾರತೀಯ ವಾಹಿನಿಗಳು ವಿದೇಶಗಳಲ್ಲೂ ಸಂವಹಿಸುತ್ತವೆ.

### ಭಾರತೀಯ ದೂರದರ್ಶನ - ಪ್ರಮುಖ ಮಜಲುಗಳು

| | | |
|---|---|---|
| ೧೯೫೯ ಸೆಪ್ಟೆಂಬರ್ ೧೫ | : | ಪ್ರಾಯೋಗಿಕ ದೂರದರ್ಶನ ಕೇಂದ್ರ, ನವದೆಹಲಿಯಲ್ಲಿ ಆರಂಭ |
| ೧೯೬೧ | : | ಶೈಕ್ಷಣಿಕ ಕಾರ್ಯಕ್ರಮಗಳ ಆರಂಭ |
| ೧೯೬೫ ಆಗಸ್ಟ್ | : | ಮನರಂಜನಾ ಕಾರ್ಯಕ್ರಮಗಳ ಶುರು |
| ೧೯೬೭ ಜನವರಿ | : | ದೆಹಲಿ, ಉತ್ತರ ಪ್ರದೇಶ, ಹರಿಯಾಣದಲ್ಲಿ ಕೃಷಿ ಕಾರ್ಯಕ್ರಮ ಆರಂಭ |
| ೧೯೭೨ ಅಕ್ಟೋಬರ್ | : | ಬೊಂಬಾಯಿ ಕೇಂದ್ರ ಸ್ಥಾಪನೆ |
| ೧೯೭೩ | : | ಶ್ರೀನಗರ, ಅಮೃತಸರದಲ್ಲಿ ಕಾರ್ಯಕ್ರಮ ನಿರ್ಮಾಣ ಆರಂಭ<br>ಪುಣೆ ಕೇಂದ್ರದಿಂದ ಬೊಂಬಾಯಿ ಕಾರ್ಯಕ್ರಮಗಳ ಸಹಪ್ರಸಾರ |
| ೧೯೭೫ | : | ಕಲ್ಕತ್ತಾ, ಮದ್ರಾಸ್, ಲಕ್ನೋ ಕೇಂದ್ರಗಳ ಸ್ಥಾಪನೆ |
| ೧೯೭೫ ಆಗಸ್ಟ್ - ೧೯೭೬ ಆಗಸ್ಟ್ | : | SITE ಕಾರ್ಯಕ್ರಮ ಪ್ರಸಾರ |
| ೧೯೭೬ ಜನವರಿ ೧ | : | ಮೊಟ್ಟ ಮೊದಲ ಬಾರಿಗೆ ವಾಣಿಜ್ಯ ಪ್ರಸಾರ |
| ೧೯೬೦ | : | ಆಕಾಶವಾಣಿಯಿಂದ ಬೇರ್ಪಟ್ಟು ದೂರದರ್ಶನ ಎಂಬ ನಾಮಕರಣ |
| ೧೯೭೭ | : | ಗುಲ್ಬರ್ಗದಲ್ಲಿ ಕೇಂದ್ರ ಆರಂಭ |
| ೧೯೮೨ ಆಗಸ್ಟ್ ೧೫ | : | ರಾಷ್ಟ್ರೀಯ ಪ್ರಸಾರ ಆರಂಭ |
| ೧೯೮೨ | : | INSAT-1A ಉಪಗ್ರಹ ಕಕ್ಷೆಗೆ, ಆದರೂ ಕಾರ್ಯಾಚರಣೆ ವಿಫಲ |
| ೧೯೮೩ ಆಗಸ್ಟ್ | : | INSAT - 1B ಯಶಸ್ವಿಯಾಗಿ ಕಕ್ಷೆಗೆ, ಕಾರ್ಯಾಚರಣೆ ಸಫಲ |

### ಕರ್ನಾಟಕದಲ್ಲಿ ದೂರದರ್ಶನ

೧೯೭೭ರ ಸೆಪ್ಟೆಂಬರ್ ೯ರಂದು ಗುಲ್ಬರ್ಗಾದಲ್ಲಿ ಮೊದಲ ಕೇಂದ್ರ ಆರಂಭವಾಗುವುದರೊಂದಿಗೆ ದೂರದರ್ಶನ ಕರ್ನಾಟಕಕ್ಕೆ ಕಾಲಿಟ್ಟಿತು. ನಂತರ ಬೊಂಬಾಯಿ ಮತ್ತು ಮದರಾಸು ಕೇಂದ್ರಗಳ ಕಾರ್ಯಕ್ರಮಗಳನ್ನು ಪ್ರಸಾರ ಮಾಡುವ ತಾತ್ಕಾಲಿಕ ಪ್ರಸಾರ ಕೇಂದ್ರವಾಗಿ ೧೯೮೧ರ ಜನವರಿ ೧ನೇ ತಾರೀಖು ಬೆಂಗಳೂರಿನಲ್ಲಿ ಸ್ಥಾಪನೆಯಾಯಿತು. ೧೯೮೩ರ ನವೆಂಬರ್ ೧ರಂದು ಬೆಂಗಳೂರು ಕೇಂದ್ರ ಕನ್ನಡ ಕಾರ್ಯಕ್ರಮಗಳ ಪ್ರಸಾರ ಪ್ರಾರಂಭಿಸಿತು. ೧೯೮೮ರಲ್ಲಿ ಒಂದು ವ್ಯವಸ್ಥಿತ ಸ್ಟುಡಿಯೋ ಕೇಂದ್ರ ಬೆಂಗಳೂರಿನಲ್ಲಿ ನಿರ್ಮಾಣವಾಗುವವರೆಗೆ ಡಾ. ಅಂಬೇಡ್ಕರ್ ವೀಧಿಯಲ್ಲಿರುವ ವಿಶ್ವೇಶ್ವರಯ್ಯ ಗೋಪುರದ ೨೧ನೇ ಮಹಡಿಯಿಂದ ಪ್ರಸಾರ ನಡೆಯುತ್ತಿತ್ತು. ೧೯೯೦ರಲ್ಲಿ ಕನ್ನಡ ಕಾರ್ಯಕ್ರಮಗಳ ಪ್ರಸಾರಾವಧಿಯನ್ನು ಹೆಚ್ಚಿಸಲಾಯಿತು. ೧೯೯೪ರಲ್ಲಿ ಡಿ.ಡಿ - ೯ ಕನ್ನಡ ಉಪಗ್ರಹ ವಾಹಿನಿ ಕಾರ್ಯಾರಂಭ ಮಾಡಿ, ೨೦೦೦ದಲ್ಲಿ 'ಚಂದನ' ಎಂಬ ಹೊಸ ಹೆಸರು ಪಡೆಯಿತು.

ಕನ್ನಡ ವಾರ್ತಾ ಪ್ರಸಾರ ಪ್ರಾರಂಭವಾದದ್ದು ೧೯೮೩ರ ನವೆಂಬರ್ ೧ರಂದು. ಮೆಲ್ಲ ಮೆಲ್ಲನೆ ಪ್ರಸಾರದ ವಿಷಯ ವ್ಯಾಪ್ತಿ ಹೆಚ್ಚಿಸಿಕೊಂಡ ಬೆಂಗಳೂರು ಕೇಂದ್ರ ದಸರಾ ಉತ್ಸವ, ಕ್ರಿಕೆಟ್ ಮ್ಯಾಚ್‌ಗಳನ್ನು ನೇರ ಪ್ರಸಾರ ಮಾಡುವುದರ ಜೊತೆಗೆ ಕೃಷಿ,

ಮಹಿಳೆ, ಕ್ರೀಡೆ, ಆರೋಗ್ಯ, ಚಲನಚಿತ್ರ, ಧಾರಾವಾಹಿಗಳು, ಸಾಕ್ಷ್ಯಚಿತ್ರಗಳ ಪ್ರಸಾರದತ್ತ ವಿಶೇಷ ಗಮನ ಹರಿಸಿತು. ೧೯೯೫ರ ಮಾರ್ಚ್ ೮ರಂದು ಮಹಿಳಾ ದಿನಾಚರಣೆ ಅಂಗವಾಗಿ ಪ್ರಸಾರ ಮಾಡಿದ 'ಹಲೋ ಸೋದರಿ' ಎನ್ನುವ ಕಾರ್ಯಕ್ರಮ ಬೆಂಗಳೂರು ದೂರದರ್ಶನ ಕೇಂದ್ರದ ಮೊಟ್ಟ ಮೊದಲ ಫೋನ್-ಇನ್ ಕಾರ್ಯಕ್ರಮದ ನೇರ ಪ್ರಸಾರವೆನಿಸಿತು. ಇದೇ ದ್ವಿಮುಖ ಸಂವಹನೆಯ ಮೊದಲ ಯತ್ನ.

ಕನ್ನಡ ಕಾರ್ಯಕ್ರಮಗಳ ವ್ಯಾಪಕತೆಯನ್ನು ಗ್ರಾಮೀಣ ಪ್ರದೇಶಗಳಿಗೆ ಹರಡುವ ಸಲುವಾಗಿ ೧೯೮೪ರಲ್ಲಿ ಮಂಗಳೂರು, ದಾವಣಗೆರೆ, ಬಿಜಾಪುರ, ಬಳ್ಳಾರಿ, ಗದಗ, ರಾಯಚೂರು, ಧಾರವಾಡ, ಮೈಸೂರು, ಬೆಳಗಾವಿ ಮತ್ತು ಹೊಸಪೇಟೆಗಳಲ್ಲಿ ಮರು ಪ್ರಸಾರ ಕೇಂದ್ರಗಳು ಸ್ಥಾಪನೆಯಾದವು. ನಂತರ ಹಾಸನ, ತಿಪಟೂರು, ಕೊಡಗು, ಶಿವಮೊಗ್ಗದಲ್ಲಿ ಮರುಪ್ರಸಾರ ಕೇಂದ್ರಗಳೂ ಕಾರ್ಯಾರಂಭಮಾಡಿದವು. ೧೯೯೩ರ ವೇಳೆಗೆ ರಾಜ್ಯದಲ್ಲಿ ೨೭ ಪ್ರಸಾರ ಕೇಂದ್ರಗಳಿದ್ದವು. ೧೯೯೪ರ ಆಗಸ್ಟ್ ೧೫ರಿಂದ ಕರ್ನಾಟಕ ಪ್ರಾದೇಶಿಕ ಪ್ರಸಾರ ಸೇವೆಯ ಮೂಲಕ ಸಂಪೂರ್ಣವಾಗಿ ಕನ್ನಡ ಕಾರ್ಯಕ್ರಮಗಳು ಬಿತ್ತರಗೊಳ್ಳತೊಡಗಿದವು.

೧೯೯೦ರಲ್ಲೇ ಹುಟ್ಟಿಕೊಂಡ ವಿದ್ಯುನ್ಮಾನ ಮಾಧ್ಯಮಗಳ ಸ್ವಾಯತ್ತತೆಯ ಕಲ್ಪನೆ ಒಂದು ನಿರ್ದಿಷ್ಟ ರೂಪು ತಳೆದದ್ದು ೧೯೯೭ ವೇಳೆಗೆ. ೧೯೯೭ರ ನವೆಂಬರ್‌ನಲ್ಲಿ 'ಪ್ರಸಾರ ಭಾರತಿ' ಕಾಯ್ದೆಯಡಿ, ಅದೇ ಹೆಸರಿನಲ್ಲಿ ದೂರದರ್ಶನ ಹಾಗೂ ಆಕಾಶವಾಣಿಗಳಿಗೊಂದು ಸ್ವಾಯತ್ತ ಮಂಡಲಿ ಉಗಮವಾಯಿತು. ೧೯೭೬ನೆ ಇಸವಿಯಲ್ಲಿ ಬೇರ್ಪಟ್ಟಿದ್ದ ಈ ಎರಡೂ ಸಂಸ್ಥೆಗಳು ಮತ್ತೆ ಈಗ ೨೦೦೦ದ ಇಸವಿಯಲ್ಲಿ 'ಪ್ರಸಾರ ಭಾರತಿ'ಯಡಿ ಸಹವರ್ತಿ ಸಂಸ್ಥೆಗಳಾಗಿವೆ. ಪ್ರಸ್ತುತ 'ಪ್ರಸಾರ ಭಾರತಿ' ಕಾರ್ಯರೂಪಕ್ಕೆ ತರಲಿರುವ ನೀತಿ ನಿಬಂಧನೆಗಳು ಸರ್ಕಾರಿ ಸ್ವಾಮ್ಯದಲ್ಲಿದ್ದ ಈ ಎರಡೂ ವಿದ್ಯುನ್ಮಾನ ಮಾಧ್ಯಮಗಳಿಗೆ ಯಾವ ಸ್ವರೂಪ ನೀಡುತ್ತವೆ ಎಂದು ಇನ್ನೂ ತಿಳಿಯಬೇಕಾಗಿದೆ.

ಪ್ರಸ್ತುತ ಕನ್ನಡದಲ್ಲಿ ಅನೇಕ ಖಾಸಗಿ ವಾಹಿನಿಗಳು, ಕೇಬಲ್ ವ್ಯವಸ್ಥೆಯ ಮೂಲಕ ಸಣ್ಣ ವಾಹಿನಿಗಳು ಪ್ರಸಾರ ಕಾರ್ಯ ಆರಂಭಿಸಿವೆ. ಇವೆಲ್ಲವನ್ನೂ ಒಳಗೊಂಡಂತೆ ಏಕರೂಪದ ಪ್ರಸಾರ ಕಾಯ್ದೆ ಇನ್ನೂ ಸಿದ್ಧಗೊಳ್ಳಬೇಕಾಗಿರುವುದರಿಂದ ಖಾಸಗಿ ವಾಹಿನಿಗಳು ಇದೀಗ ಸಂಪೂರ್ಣ ಸ್ವಾತಂತ್ರ್ಯವನ್ನು ಅನುಭವಿಸುತ್ತಿವೆ. ಉದಯ, ಉದಯ ನ್ಯೂಸ್, ಉಷೆ, ಕಾವೇರಿ, ಸುಪ್ರಭಾತ, ಈ ಟೀವಿ. ಅಲ್ಲದೆ ಸಣ್ಣ ಚಾನಲ್‌ಗಳಾದ ಸಿಟಿ ಕೇಬಲ್, ಇನ್ ಬ್ಯಾಂಗಲೂರ್ ಮುಂತಾದ ಚಾನೆಲ್‌ಗಳು ಕನ್ನಡ ಕಾರ್ಯಕ್ರಮಗಳನ್ನೂ ಸುದ್ದಿಯನ್ನೂ ಪ್ರಸಾರ ಮಾಡುತ್ತಾ ಸರ್ಕಾರಿ ಸ್ವಾಮ್ಯದ ದೂರದರ್ಶನಕ್ಕೆ ತೀವ್ರ ಪೈಪೋಟಿ ಒಡ್ಡುತ್ತಿವೆ. ಖಾಸಗಿ ಚಾನಲ್‌ಗಳು ಒಡ್ಡುತ್ತಿರುವ ಸ್ಪರ್ಧೆಯ ಬಗ್ಗೆ ಈ ಮಹಾಪ್ರಬಂಧದ ಮುಂದಿನ ಭಾಗದಲ್ಲಿ ವಿಶ್ಲೇಷಿಸಿದ್ದೇನೆ.

### ಕರ್ನಾಟಕದಲ್ಲಿ ದೂರದರ್ಶನ ಬೆಳವಣಿಗೆಯ ಮುಖ್ಯ ಹೆಜ್ಜೆಗಳು

| | | |
|---|---|---|
| ೧೯೭೭ ಸೆಪ್ಟೆಂಬರ್ ೩ | : | ಗುಲ್ಬರ್ಗಾದಲ್ಲಿ ಮೊದಲ ಕೇಂದ್ರ |
| ೧೯೮೧ ಜನವರಿ ೧ | : | ಬೆಂಗಳೂರಿನಿಂದ ತಾತ್ಕಾಲಿಕ ಪ್ರಸಾರ |
| ೧೯೮೩ ನವೆಂಬರ್ ೧ | : | ಕನ್ನಡ ವಾರ್ತಾ ಪ್ರಸಾರ ಆರಂಭ |
| ೧೯೮೩ ನವೆಂಬರ್ ೧೯ | : | ಬೆಂಗಳೂರು ಕೇಂದ್ರದಿಂದ ಕನ್ನಡ ಕಾರ್ಯಕ್ರಮಗಳ ಪ್ರಸಾರ |
| ೧೯೯೪ | : | ಕನ್ನಡ ಉಪಗ್ರಹ ವಾಹಿನಿ ಡಿ.ಡಿ. -೯ ಕಾರ್ಯಾರಂಭ |
| ೧೯೯೭ | : | ಪ್ರಸಾರ ಭಾರತಿ ಕಾಯ್ದೆ ಜಾರಿಗೆ |
| ೨೦೦೦ | : | ಡಿಡಿ -೯ 'ಚಂದನ' ಆಗಿ ಮರು ನಾಮಕರಣ |

## ಅಡಿಟಿಪ್ಪಣಿ

೧. ಬಿ.ಎನ್. ಅಹುಜಾ ಮತ್ತು ಶಕ್ತಿ ಭಾತ್ರಾ, Mass Communication, ೧೯೭೮, ಪು - ೩೯
೨. ವಿಲಿಯಂ ಐ. ರಿವರ್‍ಸ್, The mass media and the modern Society, ೧೯೭೧, ಪು - ೧೬.
೩. ವಿಲಿಯಂ ಐ. ರಿವರ್‍ಸ್, The mass media and the modern Society, ೧೯೭೧, ಪು - ೨೨
೪. ಎಡ್ವರ್ಡ್ ಸಪೀರ್
ಉಲ್ಲೇಖ : The Mass media and the modern Society, ವಿಲಿಯಂ ರಿವರ್‍ಸ್, ೧೯೭೧, ಪು - ೨೨
೫. ಡಾ. ಪುರುಷೋತ್ತಮ ಬಿಳಿಮಲೆ, ಸಂವಹನ : ಜಾನಪದ ಮಾದರಿಗಳು, ಸಂ: ಕನ್ನಡ ಅಧ್ಯಯನ - ೨, ೧೯೯೪, ಪು - ೨೦-೨೧
೬. ವಿಲ್ಬರ್ ಶ್ರಾಮ್
ಉಲ್ಲೇಖ : Mass Communication in India, ಕೇವಲ್ ಜೆ. ಕುಮಾರ್, ೧೯೯೧, ಪು - ೨೦
೭. ಲಾಸ್‌ವೆಲ್
ಉಲ್ಲೇಖ : The mass Communication : Media & Encyclopaedia of mass communication, ಪ್ರಧಾನ ಸಂಪಾದಕ : ಅರವಿಂದ್ ಕುಮಾರ್, ೧೯೯೯, ಪು - ೫೦
೮. ಲಾಸ್‌ವೆಲ್
ಉಲ್ಲೇಖ : The mass Communication : Media & Encyclopaedia of mass communication, ಪ್ರಧಾನ ಸಂಪಾದಕ : ಅರವಿಂದ್ ಕುಮಾರ್, ೧೯೯೯, ಪು - ೫೦
೯. ಲಾಸ್‌ವೆಲ್
ಉಲ್ಲೇಖ : The mass Communication : Media & Encyclopaedia of mass communication, ಪ್ರಧಾನ ಸಂಪಾದಕ : ಅರವಿಂದ್ ಕುಮಾರ್, ೧೯೯೯, ಪು - ೫೦
೧೦. ಸಿಯಾನ್ ಮ್ಯಾಕ್‌ಬ್ರೈಡ್, Many voices and one world, ೧೯೮೨, ಪು - ೬೪
೧೧. ರಿಚರ್ಡ್ ಎಂ. ಡೋರ್ಸನ್
ಉಲ್ಲೇಖ : ಜಾನಪದ, ಡಾ. ಜೀ.ಶಂ. ಪರಮಶಿವಯ್ಯ, ೧೯೮೯, ಪು - ೫
೧೨. ಸಿ.ಎಫ್. ಪಾಟರ್
ಉಲ್ಲೇಖ : ಜಾನಪದ, ಡಾ. ಜೀ.ಶಂ. ಪರಮಶಿವಯ್ಯ, ೧೯೮೯, ಪು - ೬
೧೩. ರಿಚರ್ಡ್ ಎಂ. ಡೋರ್ಸನ್
ಉಲ್ಲೇಖ : ಜಾನಪದ, ಡಾ. ಜೀ.ಶಂ. ಪರಮಶಿವಯ್ಯ, ೧೯೮೯, ಪು - ೬
೧೪. ಇ. ಡಬ್ಲ್ಯು. ವೊಗಲಿನ್, Standard dictionary of folklore mythology & legend, ಪು - ೪೦೩
೧೫. ಟಿ.ಎಚ್. ಗ್ಯಾಸ್ಟರ್
ಉಲ್ಲೇಖ : ಜಾನಪದ, ಡಾ. ಜೀ.ಶಂ. ಪರಮಶಿವಯ್ಯ, ೧೯೮೯
೧೬. ಡಾ. ಜೀ.ಶಂ. ಪರಮಶಿವಯ್ಯ, ಜಾನಪದ, ೧೯೮೯, ಪು - ೯೭
೧೭. ಡಾ. ಪುರುಷೋತ್ತಮ ಬಿಳಿಮಲೆ, ಸಂವಹನ : ಜಾನಪದ ಮಾದರಿಗಳು, ಸಂ : ಕನ್ನಡ ಅಧ್ಯಯನ - ೨, ೧೯೯೪, ಪು - ೨೭
೧೮. ಡಾ. ಪುರುಷೋತ್ತಮ ಬಿಳಿಮಲೆ, ಸಂವಹನ : ಜಾನಪದ ಮಾದರಿಗಳು, ಸಂ : ಕನ್ನಡ ಅಧ್ಯಯನ - ೨, ೧೯೯೪, ಪು - ೨೬
೧೯. ಡಾ. ವಿಲಿಯಂ ಮಾಡ್ತಾ, ಜಾನಪದ ಮತ್ತು ಭಾಷಾ ವಿಜ್ಞಾನ, ಸಂ : ಜಾನಪದ ಮತ್ತು ಪೂರಕ ಕ್ಷೇತ್ರಗಳು, ೧೯೯೧, ಪು - ೮೩
೨೦. ಕೇವಲ್ ಜೆ. ಕುಮಾರ್, Mass Communication in India, ೧೯೯೧, ಪು - ೧೯೪
೨೧. ಡಾ. ಸೋಮಶೇಖರ ಇಮ್ರಾಪುರ, ಜಾನಪದ ಮತ್ತು ಸಮೂಹ ಸಂವಹನ ಮಾಧ್ಯಮಗಳು, ಸಂ : ಜಾನಪದ ಮತ್ತು ಪೂರಕ ಕ್ಷೇತ್ರಗಳು, ೧೯೯೧, ಪು - ೧೨೭
೨೨. ಡಾ. ಶ್ಯಾಮ್ ಪರಮಾರ್, Traditional folk media in India, ಪು - ೧೩೨
೨೩. ಡಾ. ಸೋಮಶೇಖರ ಇಮ್ರಾಪುರ, ಜಾನಪದ ಮತ್ತು ಸಮೂಹ ಸಂವಹನ ಮಾಧ್ಯಮಗಳು, ಸಂ : ಜಾನಪದ ಮತ್ತು ಪೂರಕ ಕ್ಷೇತ್ರಗಳು, ೧೯೯೧, ಪು - ೧೨೯
೨೪. ಡಾ. ಹಾ.ಮಾ. ನಾಯಕ, ಕರ್ನಾಟಕ ರಂಗಭೂಮಿ ಕೃತಿಯ ನಾಂದಿಭಾಗ, ಲೇ. ಎಚ್.ಕೆ. ರಂಗನಾಥ, ೧೯೭೮, ಪು - ೯

೨೫. ಡಾ. ಟಿ.ಪಿ. ಅಶೋಕ, ಕನ್ನಡ ರಂಗಭೂಮಿ ಮತ್ತು ಆಧುನಿಕ ಸಮೂಹ ಮಾಧ್ಯಮ, ಸಂ. ಸಾಹಿತ್ಯ ಮತ್ತು ಸಮೂಹ ಮಾಧ್ಯಮಗಳು, ೧೯೯೭, ಪು - ೭೮

೨೬. ಗಂಗಾಧರ ಮೊದಲಿಯಾರ್, ಕನ್ನಡ ಸಿನೆಮಾ - ಇತಿಹಾಸದ ಪುಟಗಳಲ್ಲಿ, ೧೯೯೮, ಪು - ೪೮

೨೭. ಡಾ. ಟಿ.ಪಿ. ಅಶೋಕ, ಕನ್ನಡ ರಂಗಭೂಮಿ ಮತ್ತು ಆಧುನಿಕ ಸಮೂಹ ಮಾಧ್ಯಮ, ಸಂ. ಸಾಹಿತ್ಯ ಮತ್ತು ಸಮೂಹ ಮಾಧ್ಯಮಗಳು, ೧೯೯೭, ಪು - ೭೬

೨೮. ಡಾ. ಟಿ.ಪಿ. ಅಶೋಕ, ಕನ್ನಡ ರಂಗಭೂಮಿ ಮತ್ತು ಆಧುನಿಕ ಸಮೂಹ ಮಾಧ್ಯಮಗಳು, ಸಂ. ಸಾಹಿತ್ಯ ಮತ್ತು ಸಮೂಹ ಮಾಧ್ಯಮಗಳು, ೧೯೯೭, ಪು - ೭೭

೨೯. ಗಂಗಾಧರ ಮೊದಲಿಯಾರ್, ಕನ್ನಡ ಸಿನೆಮಾ - ಇತಿಹಾಸದ ಪುಟಗಳಲ್ಲಿ, ೧೯೯೮, ಪು - ೨

೩೦. ಹೇಸನ್

ಉಲ್ಲೇಖ : A Simple history of modern Europe, ೧೯೮೫, ಪು - ೧೨

೩೧. ಡಿ.ಎಂ. ಕಿಟಲ್ ಬೇ

ಉಲ್ಲೇಖ : A Simple history of modern Europe, ೧೯೮೫, ಪು - ೧೩

೩೨. ರಂಗಸ್ವಾಮಿ ಪಾರ್ಥಸಾರಥಿ, Journalism in India, ೧೯೭೫, ಪು - ೨೦೫

೩೩. ಬಿ.ಎಸ್. ಚಂದ್ರಶೇಖರ್, ಸಮೂಹ ಮಾಧ್ಯಮಗಳು, ೧೯೭೬, ಪು - ೧೪೬-೧೪೭

೩೪. ಡಾ. ನಾಡಿಗ ಕೃಷ್ಣಮೂರ್ತಿ, ಭಾರತೀಯ ಪತ್ರಿಕೋದ್ಯಮ, ೧೯೬೯, ಪು - ೩೮೯-೩೯೦

೩೫. ಡಾ. ನಾಡಿಗ ಕೃಷ್ಣಮೂರ್ತಿ, ಭಾರತೀಯ ಪತ್ರಿಕೋದ್ಯಮ, ೧೯೬೯, ಪು - ೩೮೮

೩೬. ಎಂ. ಚಲಪತಿರಾವ್, ಅನು : ಪತ್ರಿಕೋದ್ಯಮ, ೧೯೭೪, ಪು - ೧೪೨

೩೭. ಬಿ.ಎಸ್. ಕೇಶವನ್, History of printing and Publishing in India, Vol - II, ೧೯೮೮, ಪು - ೩

೩೮. ಡಾ. ಕರೀಗೌಡ ಬೀಚನಹಳ್ಳಿ, ಏನೋ ಉಳಿಯುವುದು ಮತ್ತೆ, ೧೯೯೮, ಪು - ೨೯

೩೯. ಇಬ್ರಾಹಿಂ ರಹೀಮತುಲ್ಲಾ

ಉಲ್ಲೇಖ : This is all India Radio, ಲೇ. ಯು.ಎಲ್. ಬರೂವ, ೧೯೮೩, ಪು - ೨,೩

ಅಧ್ಯಾಯ : ಮೂರು

# ಸಂವಹನ ಮಾಧ್ಯಮಗಳ ಸಮಾಜೋರಾಜಕೀಯ ಆಯಾಮಗಳು

೧. ಸಂವಹನ ಮಾಧ್ಯಮಗಳು ಮತ್ತು ಸಮೂಹ ಸಂಸ್ಕೃತಿ

೨. ಅಭಿವೃದ್ಧಿ ಯೋಜನೆಯಲ್ಲಿ ಸಮೂಹ ಮಾಧ್ಯಮಗಳ ಪಾತ್ರ, ನೀತಿ ಮತ್ತು ಪ್ರಣಾಳಿಗಳು

೩. ಪಂಚವಾರ್ಷಿಕ ಯೋಜನೆ ಮತ್ತು ಮಾಧ್ಯಮ ನೀತಿ

೪. ಅಭಿವ್ಯಕ್ತಿ ಸ್ವಾತಂತ್ರ್ಯ, ಪ್ರಜಾತಾಂತ್ರಿಕ ಮೌಲ್ಯಗಳು ಮತ್ತು ಸರ್ಕಾರದ ಸ್ವಾಯತ್ತ ನೀತಿ

೫. ಜಾಗತೀಕರಣದ ಸಂದರ್ಭದಲ್ಲಿ ಕನ್ನಡ

ಮುಕ್ತ ಸಮಾಜದಲ್ಲಿ ಸ್ವಾತಂತ್ರ್ಯದ ರಕ್ಷಣೆಗೂ ಸ್ವಾತಂತ್ರ್ಯದ ಉಪಯೋಗಗಳನ್ನು ಪಡೆಯುವುದಕ್ಕೂ ಇರುವ ಸಂಸ್ಥೆಗಳಲ್ಲಿ ಮಾಧ್ಯಮ ಕ್ಷೇತ್ರವೂ ಒಂದು. ಜನತಂತ್ರ ವ್ಯವಸ್ಥೆಯಲ್ಲಿ ಅತ್ಯಂತ ಮಹತ್ತರ ಪಾತ್ರವಹಿಸುವ ಸಂವಹನ ಮಾಧ್ಯಮಗಳು ಸಮಾಜವನ್ನೂ ಸರ್ಕಾರವನ್ನೂ ಕಟ್ಟೆಚ್ಚರದಿಂದ ಕಾಯುತ್ತವೆ. ಮಾಧ್ಯಮಗಳ ಪಹರೆಯಿಂದಾಗಿಯೇ ಸಮಾಜವೂ ಪ್ರಗತಿಯ ದಿಕ್ಕಿನಲ್ಲಿ ಮುನ್ನಡೆಯುತ್ತವೆ ಸರ್ಕಾರವೂ ಉತ್ತರದಾಯಿತ್ವವನ್ನು ಹೊಂದಿ ಬಾಳುತ್ತದೆ. ಇಂತಹ ಸಂವಹನ ಮಾಧ್ಯಮಗಳು ಸಮಾಜೋರಾಜಕೀಯವಾಗಿ ಬೀರುವ ವಿವಿಧ ಪರಿಣಾಮಗಳನ್ನು ಈ ಭಾಗದಲ್ಲಿ ಪರಿಶೀಲಿಸಲಾಗುತ್ತಿದೆ.

### ೧. ಸಂವಹನ ಮಾಧ್ಯಮಗಳು ಮತ್ತು ಸಮೂಹ ಸಂಸ್ಕೃತಿ

ಭಾರತ ಶ್ರೀಮಂತ ಸಂಸ್ಕೃತಿಯ ನಾಡಾಗಿದ್ದು ಈ 'ಸಾಂಸ್ಕೃತಿಕ ಸಂಪತ್ತ'ನ್ನು ಪರಂಪರಾಗತವಾಗಿ ಹೊತ್ತು ತಂದಿದೆ. ಜನರ ಜನಾಂಗೀಯ ಲಕ್ಷಣಗಳು, ಚಟುವಟಿಕೆ, ಆಚಾರ-ವಿಚಾರ, ಭಾಷೆ- ಭಾವ, ಉಡುಗೆ-ತೊಡುಗೆ, ಜನ-ಜಾನುವಾರುಗಳ ನಡವಳಿಕೆ, ಅಭಿವ್ಯಕ್ತಿ ಕ್ರಮ ಮುಂತಾಗಿ ಒಂದು ಜನ ಸಮುದಾಯ ತಮ್ಮ - ತಮ್ಮೊಳಗೇ ಸ್ಪಂದಿಸಿ, ಪ್ರತಿಸ್ಪಂದಿಸಿಕೊಳ್ಳುವ ವಿಧಾನವನ್ನು 'ಸಂಸ್ಕೃತಿ' ಎನ್ನಬಹುದು.

> *ಮೂಲ ಅರ್ಥದಲ್ಲಿ 'ಪ್ರಕೃತಿ'ಯು ವಿವಿಧ ಸಂಸ್ಕಾರಗಳ ಮೂಲಕ ಹಾದು ಹೋಗುತ್ತಾ 'ಸಂಸ್ಕೃತಿ'ಯಾಗಿ ಪರಿವರ್ತಿತವಾಗುತ್ತದೆ; ಸ್ವೀಕಾರಕ್ಕೆ ಯೋಗ್ಯವಾಗುತ್ತದೆ. ಪ್ರಾಕೃತಿಕ ಘಟಕವಾದ ಹಾಲು ಹದವಾಗಿ ಕಾದು, ಸಕ್ಕರೆ-ಕೇಸರಿ-ಯಾಲಕ್ಕಿಗಳ ಮಿಶ್ರಣದೊಂದಿಗೆ ರಸಪುಷ್ಟವಾಗುವ ಕ್ರಿಯೆಗೆ 'ಸಂಸ್ಕೃತಿ' ಪರಿಕಲ್ಪನೆಯನ್ನು ಹೋಲಿಸಬಹುದು.*[೧]

> *ವ್ಯಕ್ತಿ ಅಥವಾ ಸಮುದಾಯದ ಸಂಸ್ಕೃತಿಯನ್ನು ಅರಿಯಲು ಆಯಾ ಆಚಾರ-ವಿಚಾರ, ವೇಷ, ಭಾಷೆ, ಸಮಾಜ ವ್ಯವಸ್ಥೆ, ಆಹಾರ - ವಿಹಾರ ಮೊದಲಾದವುಗಳನ್ನು ನಿಖರವಾಗಿ ಗಮನಿಸುವುದು, ಅರಿಯುವುದು ಅಗತ್ಯ.*[೨]

> *'ಪರಿಸರ', ಪರಂಪರೆ ಹಾಗೂ ಪ್ರತ್ಯಕ್ಷ ಜೀವನದ ಅನೇಕ ಸಂಸ್ಕಾರಗಳ ಮೂಲಕ ಮನುಷ್ಯನ ಅಂತರಂಗ ಪಡೆಯುವ ಪರಿಪಕ್ವತೆ.*[೩]

'ಸಂಸ್ಕೃತಿ' ಎಂಬ ಶಬ್ದಕ್ಕೆ ಇಂಗ್ಲಿಷಿನ 'ಕಲ್ಚರ್' (Culture) ಎಂಬ ಪದ ಸಂವಾದಿಯಾಗಿದೆ. ನಾಗರಿಕತೆಯ ತಳಹದಿಯ ಮೇಲೆ ಬೆಳೆದ, ವಿಕಸಿತವಾದ, ಸುಧಾರಣೆಗಳಿಗೆ ಒಳಪಟ್ಟ, ಮುಂದುವರೆದ, ಪ್ರಗತಿಶೀಲವಾದ ಎಂದೆಲ್ಲಾ ಅರ್ಥಗ್ರಹಿಕೆಗೆ ಒಳಪಟ್ಟಿದೆ.

> *ಸಂಸ್ಕೃತಿ ಪದವು ಮಾನವ ಜನಾಂಗದ ಬದುಕಿನ, ಬೆಳವಣಿಗೆಯ, ವಿವಿಧ ಹಂತಗಳ ಪರಿಸರದ ಅಂಕವಾಗಿ ವಿಸ್ತೃತಗೊಳ್ಳುತ್ತದೆ. ಸ್ಪೆನ್ಸರ್, ಸಂಸ್ಕೃತಿಯಲ್ಲಿ ಜೀವಂತಿಕೆಯ, ಮತ್ತು ನಾಗರಿಕತೆಯಲ್ಲಿ ಅವಸಾನದ (Culture is living one ; civilization is dying one) ಹಂತಗಳನ್ನು ಗುರುತಿಸುತ್ತಾನೆ.* ೪

ಸುತ್ತಲಿನ ಪರಿಸರವನ್ನು ಅರಿತುಕೊಳ್ಳಲು ಮಾಡುತ್ತಿರುವ ಪ್ರಯತ್ನ, ನಡೆಯುತ್ತಿರುವ ಘಟನೆಗಳಿಗೆ ಅರ್ಥವನ್ನು ಕೊಡುವುದು, ಪರಮ ಸತ್ಯದೊಂದಿಗೆ ಸಂಬಂಧ ಹೊಂದುವುದು ಅಥವಾ ಅದನ್ನು ನಿರಾಕರಿಸುವುದು, ನೀತಿ ನಿಯಮಗಳನ್ನು ರೂಪಿಸುವುದು ಅಥವಾ ಮುರಿಯುವುದು, ಅಧಿಕಾರವನ್ನು ಎತ್ತಿ ಹಿಡಿಯುವುದು ಅಥವಾ ಅಲ್ಲಗಳೆಯುವುದು, ಶಬ್ದ, ಧ್ವನಿ, ರೂಪ, ಬಣ್ಣಗಳಿಂದ ಭಾವನೆಗಳನ್ನು ಪ್ರಚೋದಿಸುವುದು ಅಥವಾ ನಿಯಂತ್ರಿಸುವುದು, ಇವುಗಳ ಮೂಲಕ ಸಮಾಜದಲ್ಲಿ ಸಂಸ್ಕೃತಿ ಅಭಿವ್ಯಕ್ತವಾಗುತ್ತದೆಂದು ಎಡ್ವರ್ಡ್ ಷಿಲ್ಸ್ ಹೇಳುತ್ತಾರೆ.

ಸಮಾಜದಲ್ಲಿ ಸಂಸ್ಕೃತಿ ಅಭಿವ್ಯಕ್ತಗೊಳ್ಳುವ ಮೂರು ಮಜಲುಗಳನ್ನು ಎಡ್ವರ್ಡ್ ಷಿಲ್ಸ್ ಹೀಗೆ ವಿವರಿಸುತ್ತಾರೆ:

**ಉನ್ನತ ಸಂಸ್ಕೃತಿ - High brow :** ಸಾಂಪ್ರದಾಯಿಕವಾಗಿ ನಾವು ಯಾವುದನ್ನು 'ಸಂಸ್ಕೃತಿ' ಎಂದು ಕರೆಯುತ್ತೇವೆಯೋ ಅದೇ ಉನ್ನತ ಸಂಸ್ಕೃತಿ. ಇದು ಸೌಂದರ್ಯ, ಸಾಹಿತ್ಯ, ವಿಜ್ಞಾನ ಕ್ಷೇತ್ರಗಳಲ್ಲಿನ ಗಣ್ಯರಿಂದ ಅವರ ಮೇಲ್ವಿಚಾರಣೆಯಲ್ಲಿ ಸೃಷ್ಟಿಸಲ್ಪಡುತ್ತದೆ. ಈ ಗಣ್ಯರು ತಮ್ಮ ತಮ್ಮ ಕ್ಷೇತ್ರಗಳಲ್ಲಿ ಹಿರಿಯರು, ಅನುಭವಸ್ಥರು ಎಂದು ಪರಿಗಣಿಸಲ್ಪಡುತ್ತಾರೆ. ಇಲ್ಲಿ ವಿಮರ್ಶೆಗೆ ನಿಷ್ಪೃಷ್ಟ ವಿಮರ್ಶಾ ಮಾನದಂಡಗಳಿರುತ್ತವೆ. ಉನ್ನತ ಸಂಸ್ಕೃತಿ ಕಾವ್ಯ, ನಾಟಕ, ಕತೆ, ಕಾದಂಬರಿ ಮೊದಲಾದ ಸಾಹಿತ್ಯ ಪ್ರಕಾರದಲ್ಲಿನ ಉತ್ತಮ ಕೃತಿಗಳು, ವಿಜ್ಞಾನದ ಮಹತ್ಸಾಧನೆಗಳು, ದರ್ಶನ, ಇತಿಹಾಸ, ಅರ್ಥಶಾಸ್ತ್ರ, ಸಮಾಜ ಶಾಸ್ತ್ರಗಳಲ್ಲಿನ ಗಹನವಾದ ಮೀಮಾಂಸೆಗಳು, ಸಂಗೀತ, ನೃತ್ಯ, ಶಿಲ್ಪ ಮೊದಲಾದ ಕಲಾ ಪ್ರಕಾರಗಳಲ್ಲಿನ ರಚನೆಗಳು ಎಲ್ಲವನ್ನೂ ಒಳಗೊಂಡಿರುತ್ತದೆ.

**ಮಧ್ಯಮ ಸಂಸ್ಕೃತಿ - Middle brow :** ಸಮಾಜದ ಹೆಚ್ಚಿನ ಜನ ಬಯಸುವ ಜನಪ್ರಿಯ ಕಲಾಪ್ರಕಾರಗಳು. ಉನ್ನತ ಸಂಸ್ಕೃತಿಯ ವಿಮರ್ಶೆಯ ಮಾಪನಗಳಲ್ಲಿ ತೇರ್ಗಡೆ ಹೊಂದದ ಕೃತಿಗಳು ಇಲ್ಲಿ ಸೇರಿರುತ್ತವೆ. ಇಲ್ಲಿ ಸ್ವಂತಿಕೆ ಕಡಿಮೆ. ಸಾಮಾನ್ಯ ನಿಯಮಕ್ಕೆ ಅಪವಾದವೆಂಬಂತೆ ಕೆಲವು ಸಲ ಇಲ್ಲಿಯೂ ಪ್ರತಿಭೆ ಮಿಂಚುವುದು ಸಾಧ್ಯ. ಆದರೆ ಈ ಸಂಸ್ಕೃತಿಯ ಆಯುಮಾನ ಕಡಿಮೆ.

**ಪಾಶವೀ ಸಂಸ್ಕೃತಿ - Low brow :** ಒಂದು ವರ್ಗದ ಜನ ಮೆಚ್ಚುವ ಕುದುರೆ ಪಂದ್ಯಗಳು, ಪೋಲಿ ಹಾಡುಗಳು, ಇತ್ಯಾದಿ., ಆಟಗಳು, ನೋಟಗಳು ಮೊದಲಾದ ಸಾಂಕೇತಿಕತೆ ತೀರಾ ಕಡಿಮೆ ಇರುವ ವಸ್ತುಗಳು ಸೇರಿರುತ್ತವೆ. ಇಲ್ಲಿನ ಕೃತಿಗಳು ತುಂಬಾ ಒರಟು, ಇವು ಹೆಚ್ಚಿನ ಸಂದರ್ಭಗಳಲ್ಲಿ ಮನುಷ್ಯನ ಹೀನ ಪ್ರವೃತ್ತಿಗಳನ್ನು ತಣಿಸುವಂತಹವು.

ಹೀಗೆ ಸಮಾಜವನ್ನು ಸ್ಥೂಲವಾಗಿ ಮೂರು ಗುಂಪುಗಳಾಗಿ ಮಾಡಿಕೊಂಡ ಮೇಲೆ ಪ್ರತಿಯೊಂದು ವರ್ಗವೂ ಗಳಿಸಿಕೊಳ್ಳುವ ಜನಾದರ, ಜನಪ್ರಿಯತೆ, ಜನಾಸಕ್ತಿಗಳನ್ನು ಗಮನಿಸಬಹುದು. ರಾಜರ, ವಿದ್ಯಾವಂತರ, ಅನುಕೂಲವಂತರ ಮನ್ನಣೆಗೆ

ಪಾತ್ರವಾದ ಉನ್ನತ ಸಂಸ್ಕೃತಿಯ ಜನರಲ್ಲಿ ಆಸಕ್ತಿ, ಪ್ರೀತಿ ಮೂಡಿಸುವುದು ಕಷ್ಟದ ಮಾತಾಗಿದ್ದಿರಬಹುದು. ಮಧ್ಯಮ ವರ್ಗದ ಸಾಮಾನ್ಯ ಜನರು ತಮ್ಮ ದೈನಂದಿನ ಕಸುಬುಗಳಿಗೆ ತೊಂದರೆಯಾಗದಂತೆ, ಉಳಿದ ವೇಳೆಯಲ್ಲಿ, ಹಬ್ಬ ಹರಿದಿನಗಳಲ್ಲಿ, ಸುಗ್ಗಿ ಸಂತೋಷದಲ್ಲಿ ಅತೀವ ದುಃಖದಲ್ಲಿ ತಮ್ಮ ಭಾವನೆಗಳನ್ನು ವ್ಯಕ್ತಪಡಿಸಿಕೊಳ್ಳಲು ಜಾನಪದ ಗೀತ, ನೃತ್ಯ ಮೊದಲಾದ ಕಲಾಮಾರ್ಗಗಳನ್ನು ಹಿಡಿಯುತ್ತಿದ್ದರು. ಈಚೀಚಿನ ದಿನಗಳಲ್ಲಿ ಈ ವರ್ಗ ನಿಯತಕಾಲಿಕೆಗಳ, ಆಕಾಶವಾಣಿ, ದೂರದರ್ಶನದ ಜನಪ್ರಿಯ/ಮನರಂಜನಾ ಕಾರ್ಯಕ್ರಮಗಳ ಇನ್ನೂ ಹೆಚ್ಚೆಂದರೆ ಸಿನೆಮಾಗಳ ಮೂಲಕ ಮನರಂಜನೆ ಪಡೆಯುತ್ತಿದ್ದಾರೆ. ವಿಶೇಷವೆಂದರೆ ಈ ಮಧ್ಯಮ ಸ್ತರದ 'ಸಂಸ್ಕೃತಿ'ಯೇ ಇಂದು ಎಲ್ಲ ಮೂರು ವರ್ಗಗಳ ಸಂಸ್ಕೃತಿಯೂ ಆಗಿರುವಂತಿದೆ. ಮನರಂಜನೆಗಾಗಿ ಬೇಟೆ, ಕೋಳಿ ಕಾಳಗ, ಕುದುರೆ, ಕೋಣಗಳ ಪಂದ್ಯ ಮುಂತಾದ ಕೆಳಸ್ತರದ ಕೃತ್ಯಗಳಲ್ಲಿ ಭಾಗಿಯಾಗುತ್ತಿದ್ದ ಜನರೂ, ಅನಕ್ಷರಸ್ಥರೂ, ಆಕಾಶವಾಣಿ, ದೂರದರ್ಶನ, ಸಿನೆಮಾ ಮೂಲಕ ತಮ್ಮ ಆಸಕ್ತಿಗಳನ್ನು ತಣಿಸಿಕೊಳ್ಳುತ್ತಿದ್ದಾರೆ. ಅದರಲ್ಲೂ ಸಿನೆಮಾ ಅತ್ಯಂತ ಜನಪ್ರಿಯ ಪ್ರಕಾರವಾಗಿ ಬಿಟ್ಟಿದೆ. ಹೀಗೆ ಎಲ್ಲ ವರ್ಗದ ಜನರೂ ಬಯಸುವ, ಮೆಚ್ಚುವ ಎಲ್ಲ ಬಗೆಯ ಕಲೆ ಸಾಹಿತ್ಯ ಪ್ರಕಾರಗಳ ಒಗ್ಗೂಡಿದ ಮಾದರಿಯೇ ಸಮೂಹ ಸಂಸ್ಕೃತಿ ಅಂದರೆ **Mass Culture** ಎನ್ನಬಹುದು. ಜರ್ಮನ್‌ನಲ್ಲಿ Kitsch ಎನ್ನಲಾಗುವ ಈ ಸಮೂಹ ಸಂಸ್ಕೃತಿ ಸಮಾಜವನ್ನು ಏಕೀಕರಿಸುವ ಸಮಾನಗೊಳಿಸುವ ಶಕ್ತಿ ಹೊಂದಿರುತ್ತದೆ.

ಡೆನಿಸ್ ಮಾಕ್ವೆಲ್ ಪ್ರಕಾರ

> *The Understanding of 'Mass Culture' depends on our point of view and on what culture means to us. Thus mass culture can be used pejoratively or positively. The Concept of mass culture refers to a whole range of popular activities and artefacts - to entertainments, spectacles, music, books, films - but has become identified with the typical content of mass media and especially with the fictional, dramatic and entertainment material which they provide.*[೫೫]

ಸಮೂಹ ಸಂಸ್ಕೃತಿ ಎನ್ನುವುದು ಸಮೂಹ ಮಾಧ್ಯಮಗಳಿಂದ ನಿರ್ಮಿತವಾದ ಒಂದು ಸಂಕೀರ್ಣ ಸಾಂಸ್ಕೃತಿಕ ವಿಚಾರ. ಒಂದರ್ಥದಲ್ಲಿ ಇದನ್ನು 'ಸಮೂಹ ಮಾಧ್ಯಮ ಸಂಸ್ಕೃತಿ' (Mass Media Culture) ಎಂದೇ ಹೇಳಬಹುದೇನೋ. ತ್ವರಿತಗತಿಯ ಕೈಗಾರಿಕಾ ಪ್ರಗತಿ, ನಗರೀಕರಣದ ದೆಸೆಯಿಂದ ಸಮೂಹ ಮಾಧ್ಯಮ ಸಂಸ್ಕೃತಿ ಹುಟ್ಟಿದೆ, ಬೆಳೆದಿದೆ ಎಂದು ಕೇವಲ್ ಜೆ. ಕುಮಾರ್ ಹೇಳುತ್ತಾರೆ.

ಮಾರಾಟದ ಅಥವಾ ಮಾರುಕಟ್ಟೆಯ ಉದ್ದೇಶ ಹೊಂದಿರುವ ಸಮೂಹ ಸಂಸ್ಕೃತಿ ಒಟ್ಟು ಲಕ್ಷಣವನ್ನು ವೈಟ್ ಮ್ಯಾಕ್‌ಡೊನಾಲ್ಡ್ ಹೀಗೆ ಕ್ರೋಢೀಕರಿಸುತ್ತಾರೆ.

> *The Lords of Kitsch (or mass culture) sell culture to the masses. It is debased, trivial culture that voids*

> *both the deep realities (Sex, death, failure, tragedy) and also the single, spontaneous pleasure...... . The masses debanched by several generations of this sort of things, in turn come to demand trivial and comfortable cultural products which came first.... the mass demand or its satisfaction (and further stimulation) is a question as acadamic as it is unanswerable.* [೬]

ಈ ಕಾರಣಗಳಿಂದಾಗಿಯೇ ಸಮೂಹ ಸಂಪರ್ಕ ಮಾಧ್ಯಮಗಳ ಮೇಲೆ ಮಾಡಲಾಗಿರುವ ಅತ್ಯಂತ ಗುರುತರ ಆಪಾದನೆಗಳಲ್ಲಿ ಕೆಲವು, ಅವುಗಳಿಂದ ಸಂಸ್ಕೃತಿಯ ಮೇಲೆ ಆಗುತ್ತಿರುವ ಪ್ರಭಾವವನ್ನು ಕುರಿತದ್ದು ಎನ್ನುವ ಬಿ.ಎಸ್. ಚಂದ್ರಶೇಖರ್ ತಮ್ಮ ಸಮೂಹ ಮಾಧ್ಯಮಗಳು ಪುಸ್ತಕದಲ್ಲಿ ಭಾರತದಲ್ಲಿ ಕೈಗಾರಿಕೆಗಳು ಪಾಶ್ಚಾತ್ಯ ದೇಶಗಳ ಮಟ್ಟವನ್ನು ಮುಟ್ಟಿಲ್ಲದಿದ್ದರೂ ಇಲ್ಲೂ 'ಸಮೂಹ ಸಂಸ್ಕೃತಿ' ಬೆಳೆಯುತ್ತಿದೆ ಎನ್ನುವುದರಲ್ಲಿ ಸಂಶಯವಿಲ್ಲ ಎಂದಿದ್ದಾರೆ.

ಸಮೂಹ ಮಾಧ್ಯಮಗಳ ಸಂಸ್ಕೃತಿ ಸಮಾಜದ ಅವನತಿಗೆ ಕಾರಣವಾಗುತ್ತಿದೆಯೇ? ಎಂದು ಭಾರತವೂ ಸೇರಿದಂತೆ ಮುಂದುವರೆಯುತ್ತಿರುವ ಹಲವು ದೇಶಗಳು ಗಾಬರಿ ವ್ಯಕ್ತಪಡಿಸುತ್ತಿವೆ. ದಕ್ಷಿಣ ಕೊರಿಯಾದ ಪೈಕ್ ಸ್ಯಾಂಗ್ ಚುಂಗ್ ಅವರು ದಕ್ಷಿಣ ಕೊರಿಯಾದ ಯುವಜನಾಂಗ ಪಾಶ್ಚಿಮಾತ್ಯ ಸಂಸ್ಕೃತಿಯ ಮೌಲ್ಯಗಳನ್ನು ಸ್ವಲ್ಪವೂ ಪ್ರಶ್ನಿಸದೆ ಅಂಧವಾಗಿ ಅದನ್ನು ಅನುಕರಿಸುತ್ತಿರುವುದು ದುರದೃಷ್ಟಕರ. ಇದೇ ಪರಿಸ್ಥಿತಿ ಮುಂದುವರೆದರೆ ನಮ್ಮ ಸಮಾಜ, ಸಂಸ್ಕೃತಿ ಅವಸಾನವನ್ನು ಎದುರಿಸಬೇಕಾಗುತ್ತದೆ ಎಂದಿದ್ದಾರೆ.

ಹ್ಯಾನ್ಸ್‌ಮ್ಯಾಗ್ನಸ್ ಎಂಜೆನ್ಸ್‌ಬರ್ಗರ್‌ರ

> *'ಉದಾತ್ತ ಶಿಕ್ಷಣ' (Liberal Education)ದ ಸುಭದ್ರ ನೆಲೆಯಲ್ಲಿ ನಿಂತು 'ಸಂವಹನ ಮಾಧ್ಯಮ'ಗಳ ಕೀಳು ಅಭಿರುಚಿಗಳ ಬಗೆಗೆ ಕೂಗು ಎಬ್ಬಿಸುವುದರಿಂದ ಅವನ್ನು ಕಿಂಚಿತ್ತೂ ಬದಲಾಯಿಸುವುದು ಸಾಧ್ಯವಾಗುವುದಿಲ್ಲ. 'ಸಂಸ್ಕೃತಿ'ಯ ಮೃತ ಆತ್ಮಗಳನ್ನು ಪುನರುಜ್ಜೀವಿಸುವುದೂ ಸಾಧ್ಯವಿಲ್ಲ.* [೭]

ಎಂಬ ಹೇಳಿಕೆ ಚರ್ಚಾರ್ಹ.

## ೨. ಅಭಿವೃದ್ಧಿ ಯೋಜನೆಯಲ್ಲಿ ಸಮೂಹ ಮಾಧ್ಯಮಗಳ ಪಾತ್ರ, ನೀತಿ ಮತ್ತು ಪ್ರಣಾಳಿಗಳು

ಒಂದು ದೇಶದ ಆರ್ಥಿಕ ಪ್ರಗತಿಯ ಆಧಾರದ ಮೇಲೆ ಆ ದೇಶವನ್ನು ಅಭಿವೃದ್ಧಿ ಹೊಂದಿದ ಅಥವಾ ಅಭಿವೃದ್ಧಿ ಹೊಂದುತ್ತಿರುವ ದೇಶ ಎಂದು ಗುರುತಿಸಬಹುದು. ಭಾರತದ ಯೋಜನಾ ಆಯೋಗದ ಪ್ರಕಾರ ಪೂರ್ಣ ಇಲ್ಲವೆ ಅಪೂರ್ಣವಾಗಿ ಉಪಯೋಗಿಸಲ್ಪಡದ ನೈಸರ್ಗಿಕ ಸಂಪನ್ಮೂಲಗಳು ಕೂಡಿಯೇ ಇದ್ದರೆ ಆ ರಾಷ್ಟ್ರವು ಅಪೂರ್ಣಾಭಿವೃದ್ಧಿ ಹೊಂದಿದ ರಾಷ್ಟ್ರವಾಗಿರುತ್ತದೆ. ಮನುಷ್ಯನ ಜೀವಿತದ ಎಲ್ಲ ಮಜಲುಗಳನ್ನು ಗಣನೆಗೆ ತೆಗೆದುಕೊಂಡೇ ಎರಡನೆ ಜಾಗತಿಕ

ಯುದ್ಧದ ನಂತರ ಅಭಿವೃದ್ಧಿ ಎನ್ನುವ ಪರಿಕಲ್ಪನೆ ಹುಟ್ಟಿಕೊಂಡಿತು. ಮೂಲತಃ ಒಬ್ಬ ವ್ಯಕ್ತಿಯ, ಕುಟುಂಬದ, ಸಮುದಾಯದ, ರಾಜ್ಯದ, ರಾಷ್ಟ್ರದ ಆರ್ಥಿಕ ಸ್ಥಿತಿಗತಿಯ ಆಧಾರದ ಮೇಲೇ ಅದರ ಅಭಿವೃದ್ಧಿ ಮಟ್ಟವನ್ನು ಅಳೆಯುತ್ತಿದ್ದ ಮಾನದಂಡದಲ್ಲಿ ವ್ಯತ್ಯಸ್ಥವಾಗಿ ಜನತೆಯ ಸಾಮಾಜಿಕಾರ್ಥಿಕ ಪ್ರಗತಿ, ಜನರ ಜೀವನ ಮಟ್ಟದ ಸುಧಾರಣೆ, ಶೈಕ್ಷಣಿಕ ಔನ್ನತ್ಯ, ಆಹಾರ ಸ್ವಾವಲಂಬನೆ ಮುಂತಾದ ವಿವಿಧ ಅಂಶಗಳನ್ನು ಪರಿಗಣಿಸಿ ಒಟ್ಟಾರೆ 'ಸರ್ವತೋಮುಖ ಅಭಿವೃದ್ಧಿ'ಯನ್ನು ದೇಶದ ಪ್ರಗತಿ ಎಂದು ಪರಿಗಣಿಸಲಾಯಿತು. ಜೊತೆಜೊತೆಗೆ ಮಾನವ ಹಾಗೂ ನೈಸರ್ಗಿಕ ಸಂಪನ್ಮೂಲಗಳ ಸದುಪಯೋಗದೊಂದಿಗೆ ಇತರ ಮುಂದುವರೆದ ದೇಶಗಳೊಂದಿಗೆ ಸ್ಪರ್ಧೆಗಿಳಿಯುವ ಫಲವನ್ನೂ ಅಭಿವೃದ್ಧಿಶೀಲ ದೇಶಗಳಿಗೆ ತುಂಬಲಾಯಿತು. ಹಾಗಾಗಿ ಅಭಿವೃದ್ಧಿ ಎನ್ನುವುದು ಒಂದು ಪರಿಪೂರ್ಣ, ಮೌಲ್ಯಾಧಾರಿತ, ಸಾಂಸ್ಕೃತಿಕ ಪ್ರಕ್ರಿಯೆ; ಸಹಜ ಪರಿಸರ, ಸಾಮಾಜಿಕ ಬಾಂಧವ್ಯ, ಜನತೆಯ ಕ್ಷೇಮಾಭಿವೃದ್ಧಿಯ ಹಿನ್ನಲೆಯಲ್ಲಿ ರೂಪುಗೊಳ್ಳುವ ಸಾಮಾಜಿಕ ಶಕ್ತಿ ಎಂಬ ತತ್ವ ಹೊರಬಂದಿತು.

ದೇಶದ ತಲಾ ಆದಾಯ ವರ್ಧನೆಯಿಂದಲೇ ಪ್ರಗತಿ ಸಾಧ್ಯ ಎಂದು ಹೇಳುವುದರಿಂದ ಅಂತಹ ಆರ್ಥಿಕ ಪ್ರಗತಿ ಸಾಧಿಸುವುದಕ್ಕಾಗಿ ಸಾಮಾಜಿಕ ಬದಲಾವಣೆ ಅತ್ಯಗತ್ಯ ಎನ್ನುವುದು ಹಲವು ಚಿಂತಕರ ಅಭಿಪ್ರಾಯವಾಗಿದೆ.

> *Development is a type of Social change in which new ideas are introduced into a Social System in order to produce higher Per Capita incomes and levels of living through more modern production methods and improved Social Organization.*[೮]
>
> *A total process in which all the aspects of human life-aspiration, education, health, nutrition are involved and evaluated on the touchstone of economic growth and living standards.*[೯]
>
> *The modernization of the total structure, a process of social and economic change on which hinges the making of a community.*[೧೦]

ಗ್ರಾಮೀಣಾಭಿವೃದ್ಧಿಯೇ ರಾಷ್ಟ್ರಾಭಿವೃದ್ಧಿ ಎಂದು ಜೂಲಿಯಸ್ ನೇರೇರೆ ಹೇಳಿರುವುದನ್ನು ಗಮನದಲ್ಲಿರಿಸಿಕೊಂಡು ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರದಲ್ಲಿ ಗ್ರಾಮೀಣಾಭಿವೃದ್ಧಿಯ ಪ್ರಕ್ರಿಯೆಯಲ್ಲಿ ಕಂಡು ಬರುವ ಎರಡು ಅಂಶಗಳನ್ನು ಗಮನಿಸಬೇಕು. ಒಂದು ಆರ್ಥಿಕ ಸುಧಾರಣೆ, ಎರಡು ಸಾಮಾಜಿಕ ಬದಲಾವಣೆ.

'ಅಭಿವೃದ್ಧಿ' ಶಬ್ದದ ಹರಹು ಆರ್ಥಿಕೇತರ ವಿಚಾರಗಳತ್ತಲೂ ಹರಡಿಕೊಂಡಿದ್ದು, ಆರ್ಥಿಕಾಭಿವೃದ್ಧಿ ಎನ್ನುವುದು ಸಾಮಾಜಿಕಾಭಿವೃದ್ಧಿ ಎನ್ನುವ ಬೃಹತ್ ಪ್ರಕ್ರಿಯೆಯ ಒಂದು ಅಂಶ ಎನ್ನುವುದನ್ನು ಮನಗಾಣಿಸಿತು. ನಿಜವಾದ ಅರ್ಥದಲ್ಲಿ 'ಅಭಿವೃದ್ಧಿ' ಎನ್ನುವುದು ಮಾನವನ ಮೂಲಭೂತ ಹಕ್ಕು ಹಾಗೂ ಘನತೆಯ ಸಂರಕ್ಷಣಾ ಪ್ರಕ್ರಿಯೆ ಎಂದು ಪರಿಗಣಿತವಾಗಿರುವುದು ಗಮನಾರ್ಹ. ವಿಶ್ವಬ್ಯಾಂಕಿನ ೧೯೭೫ರ ವರದಿಯೂ ಸಂಪೂರ್ಣ ಅಥವಾ ತಕ್ಕ ಮಟ್ಟಿನ ಬಡತನ ಅನುಭವಿಸುತ್ತಿರುವ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಸಾಮಾಜಿಕಾರ್ಥಿಕ ಜೀವನ ಮಟ್ಟವನ್ನು ಉತ್ತಮಪಡಿಸಲು ಏಕಚಿತ್ತದ ಶ್ರಮ ಅಗತ್ಯ ಎಂದು ಹೇಳಿದೆ.

ಡೇನಿಯಲ್ ಲರ್ನರ್ ಹೇಳುವಂತೆ ಸಮಾಜದ ಬದಲಾವಣೆಗೆ ಒಬ್ಬ ಶ್ರೀ ಸಾಮಾನ್ಯ ತನ್ನ, ತನ್ನ ಕುಟುಂಬದ ಪರಿಸ್ಥಿತಿ/ಜೀವನ ಮಟ್ಟವನ್ನು ಉತ್ತಮಪಡಿಸಿಕೊಳ್ಳಬೇಕೆಂಬ ಬಯಕೆ ಹೊಂದುವುದೇ ಮುಖ್ಯ ಕಾರಣ. ಇದೊಂದು ರೀತಿಯಲ್ಲಿ ಆಧುನೀಕರಣದತ್ತಲೂ ಸಾಗುವ ಆಶಯ. ಉದಾಹರಣೆಗೆ ರೈತನೊಬ್ಬ ತನ್ನ ಪೂರ್ವಿಕರು ಮಾಡಿದಂತೆ ಎತ್ತು-ನೇಗಿಲುಗಳನ್ನು ಹೂಡಿ ವ್ಯವಸಾಯ ಮಾಡದೆ, ಆಧುನಿಕ ಕೃಷಿ ಉಪಕರಣಗಳನ್ನು ಬಳಸಿ ಬೇಸಾಯ ಮಾಡುವ ಮೂಲಕ ತನ್ನ ಆರ್ಥಿಕ ಸುಧಾರಣೆಗೆ ಪ್ರಯತ್ನಿಸುತ್ತಾನೆ. ಇಲ್ಲಿ ಸಾಮಾಜಿಕ ಬದಲಾವಣೆ ತನ್ನಷ್ಟಕ್ಕೆ ತಾನೇ ಆಗುವುದು ಗಮನಾರ್ಹ.

ಸಾಮಾಜಿಕ ಬದಲಾವಣೆಯ ಪ್ರಜ್ಞೆ ಗ್ರಾಮೀಣ ಜನರಲ್ಲಿ ಮೂಡಿ ಕಾರ್ಯರೂಪಕ್ಕೆ ಬಂದು ಅದಕ್ಕೆ ಅವರು ಹೊಂದಿಕೊಂಡು ಜೀವನ ಸಾಗಿಸುವುದು ಸುಲಭದ ವಿಚಾರವಾಗಲಾರದು. ಅದಕ್ಕೆ ಅವರ ಮನೋಭಾವದಲ್ಲಿ ಸಾಕಷ್ಟು ಮಾರ್ಪಾಡೂ ಹೊಸ ವಿಚಾರಗಳನ್ನು ನಂಬುವ ಅವಲಂಬಿಸುವ ಶಕ್ತಿಯೂ ಇರಬೇಕಾಗುತ್ತದೆ. ಇಂತಹ ಶಕ್ತಿ ಅವರಲ್ಲಿ ಮೂಡಬೇಕಾದರೆ ಅವರತನಕ ಜ್ಞಾನಪ್ರಸರಣವಾಗಬೇಕು. ಯಾವುದೇ ನಿರ್ದಿಷ್ಟ ವಿಷಯದ ಬಗ್ಗೆಯೂ ಮಾಹಿತಿ ವಿನಿಮಯವಾಗಬೇಕು. ಇದನ್ನೇ ಲರ್ನರ್ ಇನ್ನಷ್ಟು ವಿಷದವಾಗಿ ಆಧುನಿಕತೆಯ ಮುಖ್ಯ ಲಕ್ಷಣಗಳು ಚಲನೆ (Mobility), ತದನುಭೂತಿ (Empathy), ಹಾಗೂ ಸಹಭಾಗಿತ್ವ (Participation) ಎಂದು ವಿವರಿಸುತ್ತಾರೆ. ಈ ಆಧುನೀಕರಣದ ಕ್ರಿಯೆಯಲ್ಲೇ ಮಾಧ್ಯಮಗಳ ಮಹತ್ವ ಗೋಚರವಾಗುವುದು ಎಂದು ಬಿ.ಎಸ್. ಚಂದ್ರಶೇಖರ್ ಹೇಳಿದ್ದಾರೆ.

ಗ್ರಾಮೀಣ ಜನಜೀವನಕ್ಕೆ ಪರಿವರ್ತನಾಶೀಲತೆಯನ್ನು ಒದಗಿಸಿಕೊಡುವಲ್ಲಿ ಮಹತ್ತರ ಪಾತ್ರ ವಹಿಸುವ ಸಮೂಹ ಸಂವಹನ ಮಾಧ್ಯಮಗಳನ್ನು ಲರ್ನರ್ 'ಮಹಾವರ್ಧಕ ಶಕ್ತಿ' ಎಂದು ಕರೆದಿದ್ದಾರೆ.

> *The Mass Communication has multiplier Property. It produces development attitude rapidly*

ಎನ್ನುವ ಲರ್ನರ್ ಇನ್ನೂ ವಿಸ್ತೃತವಾಗಿ

> *In a developing country an effective communication system is an essential element in modernizing agriculture, in producing healthy literate and trained workers for industry and in bringing about effective participation in the making of the nation.*[೧೧]

ಎಂದಿದ್ದಾರೆ.

ಪರಿಣಾಮಕಾರಿ ಸಂವಹನೆಯ ಮೂಲಕ ಸಾಮಾಜಿಕ ಬದಲಾವಣೆ, ಜನಜೀವನ ಮಟ್ಟ ಸುಧಾರಣೆಯಾಗುವುದು ಸಾಧ್ಯ ಎಂದು ವಿದ್ವಾಂಸರು ನೀಡಿರುವ ಹೇಳಿಕೆಗಳ ಆಧಾರದ ಮೇಲೆ ಅಭಿವೃದ್ಧಿಯ ಪ್ರಕ್ರಿಯೆಯಲ್ಲಿ ಸಮೂಹ ಮಾಧ್ಯಮಗಳು ವಹಿಸುವ ಪಾತ್ರ ಮಹತ್ವದ್ದಾಗಿರಲೇಬೇಕು ಎಂದು ನಿರ್ಧರಿಸಬಹುದು. ಅಭಿವೃದ್ಧಿ ಕ್ರಿಯೆಗೆ ಪೂರಕವಾಗುವಂತೆ ತಂತ್ರಜ್ಞಾನ ವರ್ಗಾವಣೆಯ ಕ್ರಿಯೆ ಘಟಿಸುತ್ತದೆ; ಅದಕ್ಕೆ ಪೂರಕವಾದದ್ದು 'ಸಂವಹನೆ' ಎನ್ನುತ್ತಾರೆ, ಬಿ.ಜಿ. ವರ್ಗೀಸ್.

> *The transfer of technology for development depends closely on communication of developing societies are to be moved along the path of modernization, they need more sophisticated and effective*

*communication for social and political mobilization, national integration, learning, social education and extension.*[೧೨]

ಎಡ್ವರ್ಡ್ ಡಬ್ಲ್ಯು. ಪ್ಲೋಮನ್ ಪ್ರಕಾರ ಗ್ರಾಮಸ್ಥರ ಮೂಲ ಮನೋಭಾವದಲ್ಲೇ ಬದಲಾವಣೆ ತರಬೇಕಾದರೆ ಗರಿಷ್ಠಮಟ್ಟದ ಮಾಹಿತಿ ವಿನಿಯೋಗವಾಗಬೇಕು.

*A high rate inflow of information is essential for attitudinal changes of the villagers to transform them from a traditional Society to modern one.*[೧೩]

ಹೀಗೆ ಕೃಷಿ, ಆರೋಗ್ಯ, ಆಹಾರ, ಶಿಕ್ಷಣ, ವಸತಿ, ಕುಡಿಯುವ ನೀರು, ಪರಿಸರ ನೈರ್ಮಲ್ಯ, ವಿಜ್ಞಾನ-ತಂತ್ರಜ್ಞಾನ, ಸಾಮಾಜಿಕ ಪಿಡುಗುಗಳು, ಪ್ರಚಲಿತ ವಿದ್ಯಮಾನಗಳ ಬಗ್ಗೆ ಹಳ್ಳಿಹಳ್ಳಿಗೂ ಮಾಹಿತಿ ಹೊತ್ತೊಯ್ಯುವ ಸಾಧನಗಳೇ ಆಧುನಿಕ ಸಮೂಹ ಮಾಧ್ಯಮಗಳು. ಈ ಮಾಧ್ಯಮಗಳು ಮಾಹಿತಿ ನೀಡುವ, ಜಾಗೃತಿ ಮೂಡಿಸುವ, ಮನರಂಜನೆ ಒದಗಿಸುವ ಕೆಲಸ ಮಾಡುತ್ತಿವೆ. ಅದರಲ್ಲೂ ಅನಕ್ಷರಸ್ಥ ಜನರ ಮಧ್ಯೆ ತನ್ನ ವ್ಯಾಪಕತೆ, ಸುಲಭ ಲಭ್ಯತೆಯ ಕಾರಣಗಳಿಂದಾಗಿ ರೇಡಿಯೊದಂತಹ ಶ್ರವ್ಯ ಮಾಧ್ಯಮ ಅತ್ಯಂತ ಜನಪ್ರಿಯವಾಗಿದೆ. ಹಾಗೇ ಈ ಮಾಧ್ಯಮದ ಮೂಲಕ ಜನಮನಕ್ಕೆ ಒಪ್ಪುವಂತೆ ತಿಳಿಸಿ ಹೇಳಿಕೊಡುವ ಕಲೆಯೂ ಸುಲಭದ್ದೂ ಪರಿಣಾಮಕಾರಿಯಾದದ್ದೂ ಆಗಿದೆ. ಜೊತೆಗೆ ಆಕಾಶವಾಣಿ ಇತ್ತೀಚಿನವರೆಗೂ ಕೇಂದ್ರ ಸರ್ಕಾರದ ಸ್ವಾಮ್ಯದಲ್ಲಿದ್ದ ಒಂದು ಇಲಾಖೆಯಾಗಿದ್ದು, ರಾಷ್ಟ್ರೀಯ ಅಭಿವೃದ್ಧಿಗಾಗಿ ಸರ್ಕಾರ ಕೈಗೊಳ್ಳುತ್ತಿದ್ದ ನೀತಿ ನಿಯಮಗಳನ್ನು ಯಶಸ್ವಿಯಾಗಿ ನಿರೂಪಿಸಿದೆ. ಅದನ್ನೇ ಹೆಚ್.ವೈ. ಶಾರದಾಪ್ರಸಾದ್ ಹೀಗೆ ಹೇಳುತ್ತಾರೆ:

*In the matter of assisting development radio stands ahead of the print medium. This is because the radio has been Government owned and has to reflect and support official policy which is to foster development.*[೧೪]

ಅಕ್ಷರ ಜ್ಞಾನವಿಲ್ಲದವರೂ ಕೇಳಿ ತಿಳಿಯಬಹುದಾದ ಈ ಶ್ರವಣ ಮಾಧ್ಯಮ ಗ್ರಾಮೀಣ ಜನತೆಯನ್ನು ತನ್ನ ಮೇಲೆ ಅವಲಂಬಿಸಿಸಿಕೊಂಡಿದೆ ಎನ್ನುವುದು ಸ್ಪಷ್ಟ. ಅನಕ್ಷರತೆ ಹೆಚ್ಚಾಗಿರುವ ಕಡೆಗಳಲ್ಲಿ ಜನರೊಂದಿಗೆ ದಿನನಿತ್ಯವೂ ಸಂವಹನೆ ನಡೆಸಲು ಬಾನುಲಿಯನ್ನು ಅವಲಂಬಿಸಬೇಕಾಗುತ್ತದೆ. ಅದನ್ನೆ ಮೆನೆಫೀ ಮತ್ತು ಮೆನೆಫೀ ಹೀಗೆ ಹೇಳುತ್ತಾರೆ

*Any area where illiteracy predominates the radio must be relied up on for day-to-day communication with people.*[೧೫]

ರೇಡಿಯೊದಂತಹ ಶ್ರವ್ಯ ಮಾಧ್ಯಮ, ಅಷ್ಟೇ ಅಥವಾ ಅದಕ್ಕಿಂತಲೂ ಪ್ರಬಲವಾದ ಯಶಸ್ವಿ ದೃಶ್ಯ-ಶ್ರವ್ಯ ಮಾಧ್ಯಮ ಸಿನೆಮಾ ಇವೆರಡೂ ಸಂವಹನೆಯ ಜನಪ್ರಿಯ ವಾಹಕಗಳು ಎನ್ನುತ್ತಾರೆ ವಿದ್ವಾಂಸರು.

*Among the mass media, films and radio are important vehicles of communication and information.*[೧೬]

ಭಾರತೀಯ ಸಮೂಹ ಸಂವಹನ ಸಂಸ್ಥೆ (IIMC) ನಡೆಸಿದ ಒಂದು ಅಧ್ಯಯನದನ್ವಯ ರೈತರಿಗೆ ಮಾಹಿತಿ ಒದಗಿಸುವ ಪ್ರಥಮ ಮಾಧ್ಯಮ ರೇಡಿಯೊ ಎಂದು ಹೇಳಲಾಗಿದೆ. ಇಲ್ಲಿ ಗಮನಿಸಬೇಕಾದ ಅಂಶವೇನೆಂದರೆ ಈ ಸಮೀಕ್ಷೆ ನಡೆದ ಅಂದರೆ ೧೯೬೦ರ ಸಂದರ್ಭದಲ್ಲಿ ಟೆಲಿವಿಷನ್‌ನ ಪ್ರಭಾವ ತೀರಾ ಕಡಿಮೆಯಿತ್ತು. ಇತ್ತೀಚಿನ ದಿನಗಳಲ್ಲಿ ಟೆಲಿವಿಷನ್ ಸೆಟ್‌ಗಳು ಹಳ್ಳಿಹಳ್ಳಿಗಳಿಗೂ ವ್ಯಾಪಿಸಿವೆ.

ಉಪಗ್ರಹಗಳ ಯುಗವೆನಿಸಿರುವ ಈ ಹೊತ್ತಿನಲ್ಲಿ ಟೆಲಿವಿಷನ್ ಪ್ರಭಾವ ವರ್ಧಿಸಿದ್ದು, ಅವುಗಳ ಮೂಲಕ ಸಾಮಾಜಿಕಾರ್ಥಿಕ ಬದಲಾವಣೆಯಾಗುತ್ತಿರುವುದನ್ನು ಅನೇಕ ವಿದ್ವಾಂಸರು ಗುರುತಿಸಿದ್ದಾರೆ. ಯಾವುದೇ ದೇಶದ ಅಭಿವೃದ್ಧಿಗೆ ರಸಗೊಬ್ಬರ, ಬೀಜ, ಕೀಟನಾಶಕ, ಬೇಸಾಯ ಕ್ರಮ, ಹೊಸ ಕೃಷಿ ಪರಿಕರಗಳು, ಹೊಸ ಬಗೆಯ ಜೀವನ ವಿಧಾನ ಮೊದಲಾದವುಗಳ ಬಗ್ಗೆ ಮಾಹಿತಿ ಹರಡುವುದು ಮುಖ್ಯವಾಗಿದೆ. ಹಾಗಾಗಿ ಜನರಿಗೆ, ಅದರಲ್ಲೂ ಮುಖ್ಯವಾಗಿ ದೃಶ್ಯ-ಶ್ರವ್ಯ ಮಾಧ್ಯಮ ಹೆಚ್ಚು ಪರಿಣಾಮಕಾರಿಯಾಗಬಹುದಾದ ಅಸಕ್ಷರಸ್ಥರಿಗೆ ಮಾಹಿತಿ ಮತ್ತು ಸುದ್ದಿ ತಲುಪಿಸುವ ಅದ್ಭುತ ಮಾಧ್ಯಮ ಟೆಲಿವಿಷನ್ ಆಗಿದೆ ಎಂದು ವಿಕ್ರಮ್ ಸಾರಾಭಾಯ್(೧೯೯೧) ಅಭಿಪ್ರಾಯಪಡುತ್ತಾರೆ.

ಯು.ಕೆ. ಶ್ರೀವಾಸ್ತವ ಅವರು

*Majority of the viewers did find television programmes useful in including changes in the prevailing set up of society.*[೧೭]

*Television has contributed a great deal to the information explosion. It has provided to the people a window on the social and cultural milien in other parts of the country.*[೧೮]

ಎನ್ನುವುದು ಸಕ್ಸೇನಾ ಅವರ ಹೇಳಿಕೆ. ಈ ರೀತಿ ಪ್ರಸ್ತುತ ಇರುವ ಸಾಮಾಜಿಕ ಸಂರಚನೆಯಲ್ಲಿ ಬದಲಾವಣೆಗಳನ್ನು ತರುವಲ್ಲಿ ಟೆಲಿವಿಷನ್ ಕಾರ್ಯಕ್ರಮಗಳು ಉಪಯುಕ್ತ ಎನ್ನುವುದನ್ನು ವೀಕ್ಷಕರೇ ಕಂಡುಕೊಂಡಿದ್ದಾರೆ. ಮಾಹಿತಿ ಸ್ಫೋಟದ ವಿಷಯದಲ್ಲೂ ಟೆಲಿವಿಷನ್ ಅಸಾಧಾರಣ ಸಾಧನೆ ಮಾಡಿದೆ.

ಬರೀ ಶ್ರವ್ಯ ಮಾಧ್ಯಮವಾಗದೇ ಚಿತ್ರಗಳನ್ನೂ ನೀಡುವ ಟೆಲಿವಿಷನ್ ಇಂದಿನ ದಿನಗಳಲ್ಲಿ ಸಂವಹನೆಯ ಹಿಡಿತ ಸಾಧಿಸಿದೆ. ಇಷ್ಟಾದರೂ ಗ್ರಾಮೀಣ ಪ್ರದೇಶಗಳಿಗೆ ಟೆಲಿವಿಷನ್ ಸೌಲಭ್ಯ ಎಷ್ಟರ ಮಟ್ಟಿಗೆ ತಲುಪುತ್ತಿದೆ, ಅದಕ್ಕಿರಬಹುದಾದ ತೊಂದರೆಗಳೇನು ಎನ್ನುವುದು ವಿದ್ವಾಂಸರ ಗಮನದಲ್ಲಿದೆ. ವಿದ್ಯುತ್ ಅಭಾವ, ಕೇಬಲ್/ಉಪಗ್ರಹ ಸಂಪರ್ಕದ ಅಲಭ್ಯತೆ, ಗ್ರಾಮೀಣ ಜನತೆಯಿಂದ ದೂರದರ್ಶನ ದೂರವೇ ಉಳಿಯುವುದಕ್ಕೆ ಕಾರಣ ಎನ್ನುತ್ತಾರೆ.

*Most parts of the Country side receive electric power a couple of hours only. the people in villages don't*

*get to watch even krishi Darshan and News Bulletins. More over more than 70% of our population in villages has yet to get cable/Satellite connections. So they will not be affected by such TV fare, which worries us, the urbanites.*[೧೯]

ಇಂತಹ ಕಾರಣಗಳಿಂದಲೇ ಕನ್ನಡದ ಕಾರ್ಯಕ್ರಮಗಳಿಗೆ ಸಂಬಂಧಿಸಿದಂತೆ ಅದರಲ್ಲೂ ರೈತರ ಅನುಕೂಲಕ್ಕಾಗಿ, ರೈತರಿಗೆ ಅರ್ಥವಾಗುವ ಧಾಟಿಯಲ್ಲಿ ಕಾರ್ಯಕ್ರಮಗಳನ್ನು ನಿರೂಪಿಸುವುದು ಆಕಾಶವಾಣಿಗೆ ಸಾಧ್ಯವಾಗಿದೆ. ಜೊತೆಗೆ ದಿನವಿಡೀ ಹೊಲಗದ್ದೆಗಳಲ್ಲೇ ದುಡಿಯುವ ರೈತ ತನ್ನೊಂದಿಗೆ ಚಿಕ್ಕ ರೇಡಿಯೊವನ್ನು ಕೊಂಡೊಯ್ಯಬಹುದಾದದ್ದು ಅದರ ಪ್ರಯೋಜನವನ್ನು ಇನ್ನೂ ಹೆಚ್ಚಿಸಿದೆ. ಆಕಾಶವಾಣಿಯ ಹಾಗೆ ದೂರದರ್ಶನದ ಕಾರ್ಯಕ್ರಮಗಳು ನಿರೂಪಿತವಾಗದೆ, ಈ ಮಾಧ್ಯಮಕ್ಕೆ ಸಿಕ್ಕಿರುವ ಜನಪ್ರಿಯತೆಯನ್ನು ಯಶಸ್ವಿಯಾಗಿ ಬಳಸಿಕೊಳ್ಳಲಾಗುತ್ತಿಲ್ಲ ಎನ್ನುವುದು ಸಮೀಕ್ಷೆಯಿಂದ ತಿಳಿದುಬಂದಿದೆ.

ಮಂಡ್ಯ ಜಿಲ್ಲೆ ಪಾಂಡವಪುರ ತಾಲ್ಲೂಕಿನ ಕ್ಯಾತನಹಳ್ಳಿಯಲ್ಲಿ ಈ ಮಹಾಪ್ರಬಂಧಕ್ಕಾಗಿ ೧೯೯೮ರಲ್ಲಿ ನಡೆಸಿದ ಅಧ್ಯಯನದಂತೆ ಅಲ್ಲಿನ ಶೇಕಡಾ ೬೭ರಷ್ಟು ಜನರಿಗೆ ಟಿ.ವಿ. ವೀಕ್ಷಿಸುವುದು ಸಾಧ್ಯವಿರಲಿಲ್ಲ. ಟಿ.ವಿ. ವೀಕ್ಷಿಸುತ್ತಿದ್ದ ಶೇಕಡಾ ೩೩ರಷ್ಟು ಜನರಲ್ಲಿ ಶೇ. ೫ರಷ್ಟು ಜನ ಯಾವ ಅನಿಸಿಕೆಯನ್ನೂ ನೀಡದ ಸ್ಥಿತಿಯಲ್ಲಿದ್ದರು. ಇನ್ನುಳಿದವರಲ್ಲಿ ಶೇ. ೧೮ರಷ್ಟು ಕೇವಲ ಮನರಂಜನಾ ಕಾರ್ಯಕ್ರಮಗಳನ್ನು, ಶೇ. ೧೦ರಷ್ಟು ಜನ ಮನರಂಜನೆಯೊಂದಿಗೆ ಮಾಹಿತಿ/ಸುದ್ದಿ ಸಂಬಂಧೀ ಕಾರ್ಯಕ್ರಮಗಳನ್ನು ವೀಕ್ಷಿಸುವವರೂ ಆಗಿದ್ದರು. ಹಾಗೆ ರೇಡಿಯೊ ಕಾರ್ಯಕ್ರಮಗಳನ್ನು ಆಲಿಸುವವರು ಶೇ. ೬೮ ಇದ್ದು ಇದರಲ್ಲಿ ಶೇ. ೮ರಷ್ಟು ಮಂದಿ ಏನೂ ಹೇಳದ ಸ್ಥಿತಿಯಲ್ಲಿದ್ದರು. ಇನ್ನು ಶೇ. ೩೨ರಷ್ಟು ಜನರು ರೇಡಿಯೊ ಕಾರ್ಯಕ್ರಮಗಳನ್ನು ಕೇಳುತ್ತಿರಲಿಲ್ಲ.







| | | ದೂರದರ್ಶನ | ಆಕಾಶವಾಣಿ (ಶೇಕಡಾವಾರು) |
|---|---|---|---|
| ಮಂಡ್ಯ ಜಿಲ್ಲೆ ಪಾಂಡವಪುರ ತಾಲ್ಲೂಕು | ಒಟ್ಟು ಗ್ರಾಹಕರು | ೩೩ | ೬೮ |
| ಕ್ಯಾತನಹಳ್ಳಿಯಲ್ಲಿ ೧೯೯೮ರಲ್ಲಿ | ಮನರಂಜನೆ ಗ್ರಾಹಕರು | ೧೮ | ೩೭ |

| | | | |
|---|---|---|---|
| ನಡೆಸಿದ ಸಮೀಕ್ಷೆ | ಸುದ್ದಿ ಗ್ರಾಹಕರು | ೧೦ | ೨೩ |
| | ಏನೂ ಹೇಳದವರು | ೫ | ೮ |
| | ಗ್ರಾಹಕರಲ್ಲದವರು | ೬೭ | ೩೨ |

ಬೆಂಗಳೂರು ದೂರದರ್ಶನದ ಕನ್ನಡ ಕಾರ್ಯಕ್ರಮಗಳನ್ನು ವೀಕ್ಷಿಸುತ್ತಿದ್ದವರು ಹೀಗೆ ಹೇಳಿದರು: 'ಬೆಂಗಳೂರು ದೂರದರ್ಶನದ ಮೂಲಕ ಪ್ರಸಾರಗೊಳ್ಳುವ ಕೃಷಿ ಸಂಬಂಧಿ ಕಾರ್ಯಕ್ರಮಗಳು ನಮ್ಮ ಬೇಸಾಯಕ್ಕೆ ಅನುಕೂಲಕರವಾದ ಸಂದರ್ಭದಲ್ಲಿ ಅಥವಾ ಕಾಲಮಾನದಲ್ಲಿ ದೊರೆಯುವುದಿಲ್ಲ. ಒಂದು ನಿರ್ದಿಷ್ಟ ಕಾಲದಲ್ಲಿ (ಹವಾಮಾನದಲ್ಲಿ) ನಾವು ಬೆಳೆಸಬಹುದಾದ ಫಸಲು, ಬೆಳೆಸುವ ಕ್ರಮ, ಬಳಸಬೇಕಾದ ರಸಗೊಬ್ಬರ, ಕ್ರಿಮಿನಾಶಕಗಳ ಬಗ್ಗೆ ದಿನಚರಿಯಂತೆ ತಿಳುವಳಿಕೆ ಲಭ್ಯವಾಗುವುದಿಲ್ಲ. ನಿರ್ದಿಷ್ಟ ಹವಾಗುಣಕ್ಕೆ, ಮಣ್ಣಿನ ಗುಣಕ್ಕೆ ತಕ್ಕಂತೆ, ಪ್ರಾದೇಶಿಕ ಬೇಸಾಯ ಪದ್ಧತಿಗಳಿಗೆ ತಕ್ಕಂತೆ ಮಾಡಬೇಕಾದ ಕೃಷಿ ಚಟುವಟಿಕೆಗಳ ಬಗ್ಗೆಯೂ ತಿಳಿಸಿಕೊಡುವಲ್ಲಿ ಸೋಲುತ್ತದೆ. ವಾರ್ತಾ ಪ್ರಸಾರದೊಂದಿಗೆ ದೊರೆಯುವ ಹವಾಗುಣ ಮಾಹಿತಿಯೂ ಅಪೂರ್ಣವಾಗಿದ್ದು ಹಲವು ವೇಳೆ ಹಾದಿ ತಪ್ಪಿಸುತ್ತದೆ.'

ಅದನ್ನೇ ಆಕಾಶವಾಣಿ ಕಳೆದೆರಡು ದಶಕಗಳಿಂದಲೂ ರೈತರಿಗೆ ಅರ್ಥವಾಗುವ ಆಡುಭಾಷೆಯಲ್ಲಿ ಯಾವ ಯಾವ ಕಾಲಮಾನದಲ್ಲಿ ಯಾವ ಕೃಷಿಕಾರ್ಯ ಕೈಗೆತ್ತಿಕೊಳ್ಳಬೇಕೆನ್ನುವ ಮಾರ್ಗದರ್ಶಕ ಕಾರ್ಯಕ್ರಮವನ್ನು ಬಿತ್ತರಿಸುತ್ತಿರುವುದು ಆ ಪ್ರದೇಶದ ಕೃಷಿಕರ ಮೆಚ್ಚುಗೆ ಗಳಿಸಿರುವುದು ಕಂಡು ಬಂದಿತು. ದೈನಂದಿನ ಕೃಷಿ ಚಟುವಟಿಕೆಗಳಿಗಾಗಿಯೇ ಸೂಕ್ತ ಮಾಹಿತಿ ನೀಡುತ್ತಿರುವುದನ್ನು ಕೃಷಿಕರು ಮೆಚ್ಚಿಕೊಂಡರಾದರೂ 'ಪ್ರದೇಶ ಸಮಾಚಾರ'ದಲ್ಲಿ ನೀಡುವ ಹವಾಮಾನ ವರದಿ ಅಪೂರ್ಣವೂ ಹಲವು ವೇಳೆ ದಾರಿ ತಪ್ಪಿಸುವಂಥದೂ ಆಗಿರುತ್ತದೆಂದು ತಿಳಿಸಿದರು. ಇದರಿಂದ ತಿಳಿದುಬರುವುದೇನೆಂದರೆ:-

- ಕೊಡುವ ಮಾಹಿತಿ/ವಿಚಾರ ಶ್ರೋತೃ/ಪ್ರೇಕ್ಷಕನಿಗೆ ಅರ್ಥವಾಗುವ ಭಾಷೆಯಲ್ಲಿ, ರೀತಿಯಲ್ಲಿ ಉಪಲಬ್ಧವಾಗಬೇಕು.
- ಮಾಹಿತಿಯ ಅವಶ್ಯಕತೆ ಇರುವಾಗಲೇ ಅದನ್ನು ನೀಡಬೇಕು.
- ಹೊಸ ತಂತ್ರಜ್ಞಾನವನ್ನು ವರ್ಗಾಯಿಸಿಕೊಂಡ ಮೇಲೆ ಅದನ್ನು ರೈತವರ್ಗ ಸಂಪೂರ್ಣವಾಗಿ ಬಳಕೆಗೆ ತರುವವರೆಗೆ ಕಾರ್ಯಕ್ರಮವನ್ನು ಮರುಪ್ರಸಾರ ಮಾಡಬೇಕು.
- ಮಾಹಿತಿ ನೀಡದಿದ್ದರೂ ಸರಿಯೇ, ತಪ್ಪು ಮಾಹಿತಿ ನೀಡಿ ರೈತನನ್ನು ತೊಂದರೆಗೆ ಸಿಲುಕಿಸಬಾರದು.
- ಪ್ರಾದೇಶಿಕವಾಗಿ ಇರುವ ಹವಾಗುಣದ ಅಂತರವನ್ನು ಗಮನಿಸಿ, ಸಮಂಜಸ ಮಾಹಿತಿ ಒದಗಿಸಬೇಕು.

ಹೀಗೆ, ಸಮೂಹ ಮಾಧ್ಯಮಗಳು ಜನರ ಮೇಲೆ ನೇರ ಹಾಗೂ ತೀವ್ರತರ ಪ್ರಭಾವ ಬೀರುವುದರಿಂದ, ಅದು ಪ್ರತಿಕೂಲ ಪರಿಣಾಮ ಬೀರದಂತೆ ಕಟ್ಟೆಚ್ಚರ ವಹಿಸಬೇಕು ಎನ್ನುವುದು ಪ್ರಮುಖ ವಾದ. ಹವಮಾನಕ್ಕೆ ಸಂಬಂಧಿಸಿಂತೆ ಹವಮಾನ ವೀಕ್ಷಣಾಲಯದ ಮೂಲಕ ಅತ್ಯಂತ ನಿಖರವಾದ ಮಾಹಿತಿ ಇಂದಿನ ದಿನಗಳಲ್ಲಿ ಮಾಧ್ಯಮಗಳಿಗೆ ಲಭ್ಯವಾಗುತ್ತಿದೆ. ಅದನ್ನೇ ಮಾಧ್ಯಮಗಳು ಜನರಿಗೆ ನೀಡುತ್ತಿವೆ ಎನ್ನುವುದನ್ನೂ ಗಮನಿಸಬೇಕಾಗುತ್ತದೆ. ಪ್ರೇಕ್ಷಕವರ್ಗದಲ್ಲಿ ವೈವಿಧ್ಯತೆ ಇರುವುದನ್ನು ಗಮನದಲ್ಲಿಟ್ಟುಕೊಂಡು, ಮಾಧ್ಯಮ ನೀತಿಗಳನ್ನು ರೂಪಿಸುವಾಗ ಕೇಂದ್ರೀಕೃತ ಯೋಜನೆ ರೂಪಿಸುವುದು ಸರಿಯಲ್ಲ ಎಂದು ಮ್ಯಾಕ್‌ಬ್ರೈಡ್ ವರದಿ ಎಚ್ಚರಿಸಿದೆ.

> *While the need for national communication policies*
> *may be more or less universal, it should be noted*
> *that formulation and content differ very widely. they*

*do not necessarily imply rigid, centralised planning, but may simply constitute a favourable frame work for the co-ordination activities, allowing flexibility and a wide choice of approaches to communication strategies.*[೨೦]

ಸಂವಹನೆಯ ಸಮಸ್ಯೆಗಳ ಅಧ್ಯಯನಕ್ಕಾಗಿ ಅಂತರರಾಷ್ಟ್ರೀಯ ಸಂವಹನ ಆಯೋಗದ ಅಧ್ಯಕ್ಷ ಸಿಯಾನ್ ಮ್ಯಾಕ್‌ಬ್ರೈಡ್ ಹೇಳುವಂತೆ ರಾಷ್ಟ್ರೀಯ ಸಂವಹನ ನೀತಿಗಳನ್ನು ರೂಪಿಸುವ ದೇಶಗಳು ಅಥವಾ ಅಳವಡಿಸಿಕೊಳ್ಳುವ ದೇಶಗಳು ಸತತವಾಗಿ ಹೆಚ್ಚುತ್ತಿವೆ: ಇದೊಂದು ಅತ್ಯವಶ್ಯಕತೆ. ಅದರಂತೆ ಇದನ್ನು ಪ್ರೋತ್ಸಾಹಿಸಬೇಕು ಈ ಯೋಜನೆಗಳು ಮತ್ತು ಕ್ರಮಗಳು ಸಾಂಸ್ಕೃತಿಕ ಹಾಗೂ ಮಾಹಿತಿ ವಿನಿಮಯಕ್ಕೆ ಯಾವುದೇ ರೀತಿಯ ತಡೆಯೊಡ್ಡುವಂತಿರಬಾರದು. ಬದಲಿಗೆ ವಿವಿಧ ಸಮಾಜಗಳೊಳಗೆ ಮತ್ತು ನಡುವೆ ಅಂತರ, ಅಸಮತೆಗಳನ್ನು ಕುಗ್ಗಿಸಬೇಕು. ಸಂವಹನ ನೀತಿಗಳನ್ನು -

- ರಾಷ್ಟ್ರೀಯ ಸಂಪನ್ಮೂಲಗಳನ್ನು ಸಮರ್ಥವಾಗಿ ಬಳಸಿಕೊಳ್ಳಲು
- ಪ್ರಸ್ತುತ ಇರುವ ಅಥವಾ ಯೋಜಿತ ಮೂಲಭೂತ ಸೌಲಭ್ಯಗಳ ಬಲವರ್ಧನೆಗೆ
- ರೀತಿ - ನೀತಿಗಳಿಗೆ ಸಂಬಂಧಿಸಿದಂತೆ ವಿವೇಕಪೂರ್ಣ ಆಯ್ಕೆ ಮಾಡುವುದಕ್ಕೆ
- ಅನುಕೂಲ ವಂಚಿತರ ಅಗತ್ಯಗಳನ್ನು ಪೂರೈಸಲು, ನೆರವಾಗಲು ಮತ್ತು ಅತೀ ಸಂಕೀರ್ಣ ಅಸಮಾನತೆಗಳನ್ನು ನಿವಾರಿಸಲು
- ಜಾಗತಿಕ ಹಾಗೂ ನಿರಂತರ ಶಿಕ್ಷಣಕ್ಕೆ ಒತ್ತು ನೀಡಲು
- ಸಾಂಸ್ಕೃತಿಕ ಸ್ವಂತಿಕೆ ಹಾಗೂ ರಾಷ್ಟ್ರೀಯ ಸ್ವಾತಂತ್ರ್ಯದ ಬಲವರ್ಧನೆಗೆ
- ಅಂತರರಾಷ್ಟ್ರೀಯ ಮಟ್ಟದಲ್ಲಿ ಎಲ್ಲ ದೇಶಗಳೂ, ಎಲ್ಲ ಸಂಸ್ಕೃತಿಗಳೂ ಮಹತ್ವದ ಭೂಮಿಕೆ ನಿಭಾಯಿಸಲು ನೆರವಾಗುವಂತೆ ರೂಪಿಸಿರಬೇಕು.

ಭಾರತದಂತಹ ದೇಶದಲ್ಲಿ ಅಂದರೆ ಗ್ರಾಮೀಣ ಜನಸಂಖ್ಯೆ ಜೊತೆಗೆ ಅನಕ್ಷರತೆ ಹೆಚ್ಚಾಗಿರುವಲ್ಲಿ ಸಿನೆಮಾ, ಟೆಲಿವಿಷನ್, ರೇಡಿಯೊ ಹಾಗೂ ಮುದ್ರಣ ಮಾಧ್ಯಮಗಳ ಪೈಕಿ ರೇಡಿಯೊ ಹಾಗೂ ಟೆಲಿವಿಷನ್ ಅತ್ಯಂತ ಪ್ರಭಾವಶಾಲಿಯೂ ಪರಿಣಾಮಕಾರಿಯೂ ಆಗಿವೆ ಎನ್ನುವುದು ಸಮೀಕ್ಷೆ, ವರದಿಗಳಿಂದ ಸಿದ್ಧಪಟ್ಟಿದೆ. ಇದಲ್ಲದೆ ಜನತೆಯ ವಯೋವರ್ಗ, ವಿದ್ಯಾಭ್ಯಾಸ, ಧರ್ಮ/ಜಾತಿ, ಆದಾಯ, ಸಾಮಾಜಿಕಾರ್ಥಿಕ ಸ್ಥಿತಿ, ಉದ್ಯೋಗ ಮುಂತಾದವೂ ಸಹ ವೈವಿಧ್ಯಮಯವಾಗಿರುವುದರಿಂದ ರೇಡಿಯೊ ಹೊರತುಪಡಿಸಿ ಉಳಿದ ಮಾಧ್ಯಮಗಳು ಉಂಟುಮಾಡುವ ಪರಿಣಾಮ ಪ್ರಶ್ನಾಸ್ಪದವೇ ಆಗುತ್ತದೆ. ಏಕೆಂದರೆ ಯುವ ವರ್ಗದ ಜನತೆ ಸಿನೆಮಾಗಳಿಗೆ ಮಾರುಹೋಗುತ್ತಾರೆ. ವಿದ್ಯಾವಂತ ಜನತೆ ಪತ್ರಿಕೆಗಳು, ಟೆಲಿವಿಷನ್ ಹಾಗೂ ರೇಡಿಯೊವನ್ನು ಅವಲಂಬಿಸುತ್ತಾರೆ. ಹಳ್ಳಿಗರ ಆದಾಯವೂ ಅವರಿಗೆ ಪತ್ರಿಕೆ, ಟೆಲಿವಿಷನ್‌ನಂತಹ ನಿರಂತರ ಖರ್ಚಿನ ಮಾಧ್ಯಮವನ್ನು ಹೊಂದಲು ಅಡ್ಡಿಯಾಗುತ್ತದೆ. ಎಲ್ಲಕ್ಕಿಂತಲೂ ಮಿಗಿಲಾಗಿ ಅವರು ನಿರ್ವಹಿಸುವ ಕಸುಬು, ಕೃಷಿ, ಹೈನುಗಾರಿಕೆ ಇವೂ ಪ್ರಮುಖ ಪಾತ್ರ ವಹಿಸುತ್ತವೆ. ಇಷ್ಟಾದರೂ ಇಂದಿಗೂ ಪತ್ರಿಕೆಗಳು ರಾಷ್ಟ್ರೀಯ ಅಭಿವೃದ್ಧಿ, ಸಮಗ್ರತೆಗೆ ಒತ್ತು ನೀಡುವ ಸುದ್ದಿ/ ಜಾಹೀರಾತುಗಳನ್ನು ಪ್ರಕಟಿಸುತ್ತಿರುವುದು ಗಮನಾರ್ಹ.

ಒಟ್ಟಾರೆ ಒಂದು ದೇಶದ ಸಮಗ್ರ ಅಭಿವೃದ್ಧಿ ಪ್ರಕ್ರಿಯೆಗೆ ಮಾಹಿತಿ ವಿನಿಮಯದ ಅವಶ್ಯಕತೆ ಹೆಚ್ಚಾಗಿರುವುದರಿಂದ ಆಧುನಿಕ ಸಮೂಹ ಮಾಧ್ಯಮಗಳ ಮೇಲಿನ ಅವಲಂಬನೆಯೂ, ಅವುಗಳ ಜವಾಬ್ದಾರಿಯೂ ಹೆಚ್ಚಿನದೇ ಆಗಿರುತ್ತದೆ. ರಾಷ್ಟ್ರ ನಿರ್ಮಾಣದ ಕೆಲಸದಲ್ಲಿ ಪ್ರಮುಖ ಸಾಧನಗಳಾಗುವ ಆಧುನಿಕ ಸಮೂಹ ಮಾಧ್ಯಮಗಳಿಗಾಗಿ ನೀತಿ ನಿಯಮಗಳನ್ನು ರೂಪಿಸುವಾಗ ಕಟ್ಟೆಚ್ಚರವಹಿಸಬೇಕಾದ್ದೂ ಅಗತ್ಯವಾಗಿದೆ.

## ೩. ಪಂಚವಾರ್ಷಿಕ ಯೋಜನೆ ಮತ್ತು ಮಾಧ್ಯಮ ನೀತಿ

ಸಾಮಾಜಿಕಾರ್ಥಿಕ ಬದಲಾವಣೆ ಸಾಧಿಸುವ ಸಲುವಾಗಿ ಲಭ್ಯವಿದ್ದ ಸಂವಹನ ಮಾದರಿಗಳನ್ನು ಅಭಿವೃದ್ಧಿಪಡಿಸಬೇಕೆಂಬ ಉದ್ದೇಶದಿಂದ ಮೊದಲ ಪಂಚವಾರ್ಷಿಕ ಯೋಜನೆಯಲ್ಲೇ (೧೯೫೧-೫೬) ರೇಡಿಯೊ, ಚಲನಚಿತ್ರ ಹಾಗೂ ನಾಟಕಗಳತ್ತ ವಿಶೇಷ ಗಮನ ಹರಿಸಲಾಯಿತು. ಎರಡನೆ ಪಂಚವಾರ್ಷಿಕ ಯೋಜನೆ (೧೯೫೬-೬೧)ಯಲ್ಲಿ 'ಜನತೆಯ ಭಾಷೆ ಹಾಗೂ ಚಿನ್ಹೆಯಲ್ಲೇ ಯೋಜನೆಯನ್ನು ಪ್ರತಿಮನೆಗೂ ಕೊಂಡೊಯ್ಯಬೇಕು ಮತ್ತು ಅವರ ಸಾಮಾನ್ಯ ಅಗತ್ಯಗಳು ಮತ್ತು ಸಮಸ್ಯೆಗಳಿಗೆ ಅನುಗುಣವಾಗಿ ವಿಚಾರ ತಿಳಿಸಬೇಕು ಎಂಬ ಬಗ್ಗೆ ಒತ್ತು ನೀಡಲಾಯಿತು. ಸಮೂಹ ಮಾಧ್ಯಮಗಳ ಮೂಲಕ ಯೋಜನೆಯ ಪ್ರಚಾರವನ್ನು ಹೆಚ್ಚಿಸಲೂ ಈ ಯೋಜನೆಯಲ್ಲಿ ಕ್ರಮಗಳನ್ನು ಸೂಚಿಸಲಾಯಿತು.

ಯೋಜನಾ ವಿವರಗಳನ್ನು ದೇಶಾದ್ಯಂತ ಜನತೆಗೆ ತಲುಪಿಸಲು ಹಾಗೂ ಯೋಜನೆಯ ಪರಿಣಾಮವಾಗಿ ಆಗುವ ತೀವ್ರಗತಿಯ ಬೆಳವಣಿಗೆಯನ್ನು ಜನತೆಗೆ ಮುಟ್ಟಿಸುವ ಕಾರ್ಯವನ್ನು ಮಾಡುವತ್ತ ೩ನೇ ಪಂಚವಾರ್ಷಿಕ ಯೋಜನೆ (೧೯೬೧-೬೬) ಗಮನ ಹರಿಸಿದೆ. ನಂತರದ ಯೋಜನೆಗಳಲ್ಲೂ ಅಭಿವೃದ್ಧಿ ಪರವಾದ ಸಂವಹನ ತಂತ್ರಗಳ ವಿವಿಧ ಅಂಶಗಳತ್ತ ಒತ್ತು ನೀಡಲಾಗಿದೆ.

೪ನೇ ಯೋಜನೆಯಲ್ಲಿ (೧೯೬೯-೭೪), ಕೃಷಿ, ಅರಣ್ಯ, ರಸ್ತೆ ನಿರ್ಮಾಣ ಮೊದಲಾದ ಕ್ಷೇತ್ರಗಳ ನಿರ್ದಿಷ್ಟ ಯೋಜನೆಗಳ ಬಗ್ಗೆ ಗ್ರಾಮೀಣ ಜನತೆಗೆ ಅದರಲ್ಲೂ ಹಿಂದುಳಿದ ಪ್ರದೇಶಗಳ ನಿವಾಸಿಗಳಿಗೆ ತಿಳಿಸಿಕೊಡಬೇಕಾದ ಅಗತ್ಯವನ್ನು ಮನಗಾಣಲಾಯಿತು.

೧೯೭೪-೭೯ ಅವಧಿಯ ೫ನೇ ಪಂಚವಾರ್ಷಿಕ ಯೋಜನೆಯಲ್ಲಿ ಶಿಕ್ಷಣ, ಸಾಮಾಜಿಕಾರ್ಥಿಕ ಅಭಿವೃದ್ಧಿಯನ್ನು ಪ್ರೋತ್ಸಾಹಿಸಲು ದೂರದರ್ಶನ ಉತ್ತಮ ಬೆಂಬಲ ನೀಡುವುದೆನ್ನುವ ದೃಷ್ಟಿಯಿಂದ ಅದರ ಜಾಲವನ್ನು ವಿಸ್ತರಿಸಲು ಯೋಜಿಸಲಾಯಿತು. ಈ ಉದ್ದೇಶಕ್ಕಾಗಿಯೇ ಆರು ರಾಜ್ಯಗಳಲ್ಲಿ ೧೯೭೫ರ ಆಗಸ್ಟ್ ೧ ರಿಂದ ೧೯೭೬ರ ಜುಲೈ ೩೧ರವರೆಗೆ SITE ಕಾರ್ಯಕ್ರಮವನ್ನು ನಡೆಸಲಾಯಿತು. ಗ್ರಾಮೀಣ ಜನತೆಗೆ ಆಧುನೀಕರಣದ ಸಂದೇಶ ಹೊತ್ತು ತಂದ ಈ ಕಾರ್ಯಕ್ರಮಕ್ಕಾಗಿ ಭಾರೀ ಹಣವನ್ನೂ ನೀಡಲಾಯಿತು.

೬ನೇ ಯೋಜನೆ (೧೯೮೦-೮೫)ಯಲ್ಲಿ ವಿದ್ಯುನ್ಮಾನ ಮಾಧ್ಯಮಗಳಿಗೆ, ಅದರಲ್ಲೂ ಟೆಲಿವಿಷನ್ ಪ್ರಸಾರಕ್ಕೆ ನೀಡುತ್ತಿದ್ದ ಹಣದ ಹಂಚಿಕೆಯನ್ನು ಹೆಚ್ಚಿಸಲಾಯಿತು. ಈ ಮೂಲಕ ಟೆಲಿವಿಷನ್ ಕಾರ್ಯಜಾಲ ಅಪಾರವಾಗಿ ವಿಸ್ತರಿಸಲ್ಪಟ್ಟಿತು.

೧೯೮೫-೯೦ರ ೭ನೇ ಪಂಚವಾರ್ಷಿಕ ಯೋಜನೆಯ ಮಾಧ್ಯಮ ನೀತಿಯ ಮೂಲಕ ರಾಷ್ಟ್ರೀಯ ಹಾಗೂ ಭಾವನಾತ್ಮಕ ಸಮಗ್ರತೆ, ಅಭಿವೃದ್ಧಿ ಹಾಗೂ ಸಾಮಾಜಿಕ ಪ್ರಗತಿಯ ಸಾಧನವಾಗಿ ಮಾಧ್ಯಮದ ಬಳಕೆ, ಮಾಹಿತಿ ಹಾಗೂ ಮನರಂಜನೆಯ ಪ್ರಸರಣೆಗೆ ಪ್ರಾಶಸ್ತ್ಯ ನೀಡಲಾಯಿತು.

೧೯೯೨-೯೭ರ ೮ನೇ ಪಂಚವಾರ್ಷಿಕ ಯೋಜನೆ ಉಪಗ್ರಹ ಸೇವೆಯನ್ನು ಸದುಪಯೋಗ ಪಡಿಸಿಕೊಂಡು ಪ್ರಾದೇಶಿಕ ಭಾಷೆಗಳ ಆಧಾರದ ಮೇಲೆ ದೂರದರ್ಶನ ಬಳಕೆ ಸಾಮರ್ಥ್ಯ ಹೆಚ್ಚಿಸಲು ಪ್ರಯತ್ನಿಸಿದೆ ಹಾಗಾಗಿ ಹಿಂದೆಂದೂ ಕಂಡಿರದ ಪ್ರಮಾಣದಲ್ಲಿ ದೂರದರ್ಶನ ವ್ಯಾಪಕತೆ, ಉಪಗ್ರಹ ಸೇವೆ, ಸಾಫ್ಟ್‌ವೇರ್ ಯೋಜನೆಗಳು ಮತ್ತು ಉತ್ಪಾದನಾ ಸವಲತ್ತುಗಳನ್ನು ಹೆಚ್ಚಿಸಿಕೊಂಡಿದೆ. ೧೯೯೦ರಲ್ಲಿ ಪ್ರಸಾರಭಾರತಿ ಕಾಯ್ದೆಯನ್ನು ಜಾರಿಗೆ ತರುವ ಮೂಲಕ ಸರ್ಕಾರ ವಿದ್ಯುನ್ಮಾನ ಮಾಧ್ಯಮಗಳಿಗೆ ಸ್ವಾಯತ್ತತೆಯನ್ನು ನೀಡಲು ಯತ್ನಿಸಿದೆ.

ಪಂಚವಾರ್ಷಿಕ ಯೋಜನೆಗಳ ಪ್ರಯೋಜನಗಳನ್ನು ಜನರಿಗೆ ಮುಟ್ಟಿಸುವ ಸಲುವಾಗಿ ವಿದ್ಯುನ್ಮಾನ ಮಾಧ್ಯಮಗಳ ಬಲವರ್ಧಿಸಿದ ಸರ್ಕಾರ ಜನರಲ್ಲಿ ಪ್ರಜಾಪ್ರಭುತ್ವದ ಕಲ್ಪನೆಯನ್ನು ಸಾಕಾರಗೊಳಿಸುವ ನಿಟ್ಟಿನಲ್ಲಿಯೂ ಮಾಧ್ಯಮಗಳನ್ನೇ ಬಳಸಿತು. ಹಾಗೆ ಮಾಧ್ಯಮಗಳೂ ಬೆಳೆದವು.

ನಾಡಿಗೆ ಸ್ವಾತಂತ್ರ್ಯ ಬಂದ ಹೊಸತರಲ್ಲೇ (೧೯೫೧) ಕುಟುಂಬ ಯೋಜನೆ, ಕಾರ್ಯಕ್ರಮವನ್ನು ಪ್ರಾರಂಭ ಮಾಡಿದ ಮೊಟ್ಟ ಮೊದಲ ದೇಶವೆನಿಸಿಕೊಂಡ ಭಾರತದಲ್ಲಿ, ಆ ಕಾರ್ಯಕ್ರಮದ ಪ್ರಚಾರಕ್ಕೆ ಮಾಧ್ಯಮಗಳು ಸೂಕ್ತ ನೆರವು ನೀಡಿದ್ದು ವಿಶೇಷ. ನಂತರ ೧೯೭೮ರಲ್ಲಿ ವಯಸ್ಕರ ಶಿಕ್ಷಣದ ದೇಶವ್ಯಾಪ್ತಿ ಕಾರ್ಯಕ್ರಮ, ೧೯೮೮ರಲ್ಲಿ 'ರಾಷ್ಟ್ರೀಯ ಸಾಕ್ಷರತಾ ಮಿಷನ್'ನ ಪುನಃಶ್ಚೇತನಕ್ಕೂ ಮಾಧ್ಯಮಗಳು ಬಳಕೆಯಾದವು. ೧೯೭೯ರಲ್ಲಿ ಕರ್ನಾಟಕದಲ್ಲಿ ಸಾಕ್ಷರತಾ ಆಂದೋಲನ ಚಾಲ್ತಿಯಲ್ಲಿದ್ದಾಗ ಮಂಗಳೂರು- ಧಾರವಾಡ ಆಕಾಶವಾಣಿ ಕೇಂದ್ರಗಳು ಆಂದೋಲನಕ್ಕೆಂದೇ ವಿಶೇಷ ಕಾರ್ಯಕ್ರಮ ರೂಪಿಸಿದವು. "ನನಗೂ ಕಲಿಸವ್ವ" ಎನ್ನುವ ಕಿರುಚಿತ್ರವನ್ನು ಬಿಜಾಪುರದವರು ಆಂದೋಲನದ ಸಂದರ್ಭದಲ್ಲಿ ರೂಪಿಸಿದರು. ಕರ್ನಾಟಕ ರಾಜ್ಯ ಸಂಪನ್ಮೂಲ ಕೇಂದ್ರದ ಮೂಲಕ ಬಿ.ವಿ. ಕಾರಂತರ ನಿರ್ದೇಶನದಲ್ಲಿ ಧ್ವನಿಸುರುಳಿ ಹೊರ ಬಂತು. ಕೇಂದ್ರ ವಾರ್ತಾ ಮತ್ತು ಪ್ರಸಾರ ಸಚಿವಾಲಯದಡಿಯಲ್ಲಿ ಕ್ಷೇತ್ರ ಪ್ರಚಾರ ನಿರ್ದೇಶನಾಲಯ ದೃಶ್ಯ ಪ್ರಚಾರ ಮತ್ತು ಜಾಹೀರಾತು ನಿರ್ದೇಶನಾಲಯ, ಸಂಗೀತ ಮತ್ತು ನೃತ್ಯ ವಿಭಾಗ, ಚಲನಚಿತ್ರ ವಿಭಾಗ, ಪ್ರಕಟಣಾ ವಿಭಾಗ, ಪ್ರೆಸ್ ಇನ್‌ಫರ್‌ಮೇಷನ್ ಬ್ಯೂರೋದಂತಹ ವಿದ್ಯುನ್ಮಾನೇತರ ಮಾಧ್ಯಮಗಳು ಯೋಜನಾ ಮಾಹಿತಿಗಳನ್ನು ದೇಶಾದ್ಯಂತ ಜನರಿಗೆ ತಲುಪಿಸುವ 'ಸರ್ಕಾರಿ ಮಾಧ್ಯಮಗಳೇ' ಆದವು. ಇವುಗಳಲ್ಲಿ ರೇಡಿಯೊ ತನ್ನ ವ್ಯಾಪಕತೆ, ಕಡಿಮೆ ವೆಚ್ಚದಲ್ಲಿ ಲಭ್ಯವಾಗುವ ಕಾರಣಗಳಿಂದಾಗಿ ಮುಂದುವರೆಯುತ್ತಿರುವ ದೇಶಗಳಲ್ಲಿ ಭಾರೀ ಬೇಡಿಕೆ ಪಡೆಯಿತು.

> *It was only the revolution in Radio technology which enabled the manufacture of cheaper receiving sets that has unheard in a new and revolutionary means of mass communication anoung the developing Countries.*[೨೧]

ಹೀಗೆ ಸಂವಹನ ಹಾಗೂ ಅಭಿವೃದ್ಧಿ ಪರಸ್ಪರ ಪೂರಕವೂ ನಿರಂತರವೂ ಕ್ರೋಢೀಕೃತವೂ ಆಗಿರುತ್ತದೆ.

> *Communication plays a significant role in national development and that the relationship between communication and development is a constant and cumulative one.*[೨೨]

ಇಷ್ಟು ಅಗಾಧ ಪ್ರಮಾಣದಲ್ಲಿ ಮಾಧ್ಯಮಗಳನ್ನು ರಾಷ್ಟ್ರದ ಅಭಿವೃದ್ಧಿ ಕಾರ್ಯಗಳಿಗೆ ಪೂರಕವಾಗಿ ಬಳಸಿಕೊಳ್ಳುತ್ತಿರುವಾಗ, ಇತ್ತೀಚಿನ ದಿನಗಳಲ್ಲಿ ರಾಷ್ಟ್ರೀಯ ಸಂವಹನ ನೀತಿಗಳನ್ನು ರೂಪಿಸಬೇಕಾದ ಅಗತ್ಯ ತೋರಿಬಂತು. ಅಂತರರಾಷ್ಟ್ರೀಯ ಮಟ್ಟದಲ್ಲಿ ಸಂವಹನ ನೀತಿ ಹಾಗೂ ಪ್ರಣಾಳಿಗಳು ಅಭೂತಪೂರ್ವವಾಗಿ ಸೃಷ್ಟಿಗೊಂಡು ಮಾಹಿತಿ ತಂತ್ರಜ್ಞಾನದ ಶಕೆಯನ್ನೇ ಸ್ಥಾಪಿಸಿಬಿಟ್ಟಿರುವಾಗ ದೇಶದಲ್ಲಿ ಒಂದು ವೈಜ್ಞಾನಿಕ ತಳಹದಿಯ ಮೇಲೆ ನೆಲೆಗೊಂಡ ರಾಷ್ಟ್ರೀಯ ಸಂವಹನ ಮಾಧ್ಯಮ ನೀತಿಯ ಕೊರತೆ ಎದ್ದುಕಂಡಿತು. ದೇಶವ್ಯಾಪಿ ಚರ್ಚೆಗೆ ಗ್ರಾಸವಾಯಿತು. ವಾರ್ತಾ ಮತ್ತು ಪ್ರಸಾರ ಸಚಿವಾಲಯವೂ ಇತ್ತೀಚೆಗೆ ಮಾಧ್ಯಮ ನೀತಿ ಕುರಿತ ೬೪ ಪುಟಗಳ ಪ್ರಶ್ನಾವಳಿಯನ್ನು ಸಿದ್ಧಪಡಿಸಿ ಅಭಿಪ್ರಾಯ ಸಂಗ್ರಹಿಸಿತು. ಹಲವಾರು ಸಮಿತಿ, ಉಪಸಮಿತಿ, ಆಯೋಗಗಳು ರಚನೆಗೊಂಡು ಮಾಧ್ಯಮ ನೀತಿ ನಿರೂಪಣೆಯ ಕಾರ್ಯ ಪ್ರಾರಂಭವಾಯಿತು. ಬಿ.ಜಿ. ವರ್ಗೀಸ್ ನೇತೃತ್ವದ ಕಾರ್ಯತಂಡ ಆಕಾಶವಾಣಿ - ದೂರದರ್ಶನಕ್ಕೆ ಸ್ವಾಯತ್ತತೆ ನೀಡುವ ಸಮಗ್ರ ದೂರದರ್ಶನ ನೀತಿ ರೂಪಿಸುವ ನಿಟ್ಟಿನಲ್ಲಿ ಆಕಾಶಭಾರತಿ ವರದಿ-೧೯೭೮ ಅನ್ನು ಸಿದ್ಧಪಡಿಸಿದ್ದೇ ಮೊದಲ ಗಂಭೀರ ಪ್ರಯತ್ನ. ೧೯೮೦ರಲ್ಲಿ ಅಧಿಕೃತ ಮಾಧ್ಯಮಗಳಿಗೆ ನೀತಿ ಮಾರ್ಗಸೂಚಿ ನೀಡುವ ಮೂಲಕ ವಿದ್ಯುನ್ಮಾನ ಮಾಧ್ಯಮಗಳು ಪ್ರಸಾರ ಮಾಡಬೇಕಾದ ವಿಷಯಗಳ ಬಗ್ಗೆ ನಿಯಂತ್ರಣ ತರಲಾಯಿತು. ನಂತರ ಪ್ರಸಾರ ಭಾರತಿ (ಭಾರತದ ಪ್ರಸಾರ ನಿಗಮ) ಕಾಯ್ದೆ - ೧೯೯೦ ಅನ್ನು ಜಾರಿಗೆ ತರುವ ಮೂಲಕ ವಿದ್ಯುನ್ಮಾನ ಮಾಧ್ಯಮಗಳಿಗೆ ಸ್ವಾಯತ್ತತೆ ಘೋಷಿಸಲಾಯಿತು.

ಮಹಿಳೆಯರನ್ನು ಸಶಕ್ತರನ್ನಾಗಿಸುವ ಕಾರ್ಯದಲ್ಲಿ ಮಾಧ್ಯಮಗಳು ತಮ್ಮ ಪರಿಪೂರ್ಣ ಸಹಕಾರ ನೀಡುತ್ತಿವೆ. ಮಹಿಳಾ ಸಮಸ್ಯೆಗಳಿಗೆ ಹೆಚ್ಚು ಒತ್ತು ನೀಡಿ ಪರಿಹಾರಗಳನ್ನು ಸೂಚಿಸುವ ನಿಟ್ಟಿನಲ್ಲಿ ಅಂದರೆ ಮಹಿಳಾ ಶಿಕ್ಷಣ, ತರಬೇತಿ, ಉದ್ಯೋಗಾವಕಾಶಗಳನ್ನು ಕಲ್ಪಿಸಿ ಎಲ್ಲ ವಲಯಗಳಲ್ಲೂ ಸಮಾನಾವಕಾಶಗಳನ್ನು ಒದಗಿಸಿಕೊಂಡು ಮಾಧ್ಯಮಗಳು ಸಹಕಾರಿಯಾಗಬೇಕು ಎಂಬ ಕೂಗು ೧೯೯೫ರಲ್ಲಿ ಬೀಜಿಂಗ್‌ನಲ್ಲಿ ನಡೆದ ವಿಶ್ವಸಂಸ್ಥೆಯ ೪ನೇ ಮಹಿಳಾ ಸಮ್ಮೇಳನದಲ್ಲಿ ಕೇಳಿ ಬಂತು. ಯುನೆಸ್ಕೋ ರಚಿಸಿದ ಅಂತರರಾಷ್ಟ್ರೀಯ ಮ್ಯಾಕ್‌ಬ್ರೈಡ್ ಆಯೋಗವು ಪ್ರತಿಯೊಂದು ದೇಶವೂ ಅಭಿವೃದ್ಧಿ ಹೊಂದಬೇಕಾದರೆ ಒಂದು ಮಾಧ್ಯಮ ನೀತಿಯನ್ನು ಹೊಂದಿರಬೇಕಾದ ಅವಶ್ಯಕತೆಯನ್ನು ತನ್ನ ವರದಿಯಲ್ಲಿ ಸಾರಿ ಹೇಳಿತು.

ಸಂವಹನ ಮಾಧ್ಯಮಗಳಿಗೆ ನೀತಿ-ರೀತಿಗಳನ್ನು, ರೂಪುರೇಷೆಗಳನ್ನು ಅಳವಡಿಸಬೇಕಾದ್ದು ಅಗತ್ಯವೆನಿಸಿದ್ದಾಗ್ಯೂ ಸಮಾಜದ ಬೆಳವಣಿಗೆಯ ಕಾವಲು ಕಾಯುವ ಮಾಧ್ಯಮಗಳನ್ನು ನಿಬಂಧನೆಗಳಿಂದ ಬಂಧಿಸದೆ ಜನಪರ ಕಾರ್ಯಗಳಿಗಾಗಿ ಸ್ವಾತಂತ್ರ್ಯ ಅಥವಾ ಸ್ವಾಯತ್ತತೆ ನೀಡಬೇಕಾದ ಮಾಧ್ಯಮ ನೀತಿಯೊಂದರ ಅಗತ್ಯ ಇಂದಿನ ಈ ಮಾಹಿತಿ ತಂತ್ರಜ್ಞಾನದ ಮಹಾಕಾಲಘಟ್ಟದಲ್ಲೂ ಎದ್ದು ಕಾಣುತ್ತಿದೆ. ಮಾಹಿತಿ ಹಕ್ಕು, ಅಭಿವ್ಯಕ್ತಿ ಸ್ವಾತಂತ್ರ್ಯದ ಪರಮೋಚ್ಚ ಸಂದರ್ಭದಲ್ಲಿ ಮಾಧ್ಯಮಗಳ ಸ್ವಾಯತ್ತತೆ ಹಾಗೂ ಖಾಸಗೀಕರಣ ಅವಶ್ಯವೆನಿಸುತ್ತದೆ.

## ೪. ಅಭಿವ್ಯಕ್ತಿ ಸ್ವಾತಂತ್ರ್ಯ, ಪ್ರಜಾತಾಂತ್ರಿಕ ಮೌಲ್ಯಗಳು ಮತ್ತು ಸರ್ಕಾರದ ಸ್ವಾಯತ್ತ ನೀತಿ

Give me the liberty to know, to utter and to argue freely according to conscience above all liberties.

**- John Milton**

Areo pagitica -1644

ಸಕಲ ಜೀವಚರಗಳಿಗೂ ನಿಸರ್ಗದತ್ತವಾಗಿ ಬಂದ 'ಹೇಳಿಕೊಳ್ಳುವ' ಸಾಮರ್ಥ್ಯವೇ ಅದರ 'ಅಭಿವ್ಯಕ್ತಿ ಶಕ್ತಿ'. ಸಿಂಹ ಘರ್ಜಿಸಲೇಬೇಕು, ಕುದುರೆ ಕೆನೆಯಲೇಬೇಕು, ನಾಯಿ ಬೊಗಳಲೇಬೇಕು, ಬೆಕ್ಕು ಮಿಂಯ್ಗುಟ್ಟಲೇಬೇಕು ಹಾಗೆಯೇ ಮಗು ಅಳಲೇಬೇಕು. ಹೀಗೆ ಪ್ರಕೃತಿಯೇ ದಯಪಾಲಿಸಿರುವ ಈ ಅಭಿವ್ಯಕ್ತಿ ಕ್ರಮವನ್ನು ಯಾರೂ ಅಡ್ಡಿಪಡಿಸಲಾಗದು ಎಂಬ ಸಹಜ ನಿಲುವಿನ ಮೇಲೆ ಆಧುನಿಕ ಸಮಾಜಗಳಲ್ಲೂ ಅನಿಸಿಕೆಯನ್ನು ಹೊರಗೆಡಹುವ, ಅನಿಸಿದ್ದನ್ನು ವ್ಯಕ್ತಪಡಿಸುವ ಸ್ವಾತಂತ್ರ್ಯವನ್ನು ನೀಡಲಾಗಿದೆ.

ಪ್ರಜಾಸತ್ತಾತ್ಮಕ ಗಣರಾಜ್ಯವಾದ ಭಾರತ ತನ್ನ ಸಂವಿಧಾನದಲ್ಲಿ ತನ್ನ ಸಮಸ್ತ ನಾಗರಿಕರಿಗೆ ದೊರೆಯಬೇಕಾದ ನ್ಯಾಯ, ಸ್ವಾತಂತ್ರ್ಯ, ಸಮಾನತೆಯನ್ನು ಎತ್ತಿ ಹಿಡಿದಿದೆ. ಸಂವಿಧಾನದ ಪ್ರಸ್ತಾವನೆಯ ಭಾಗ ಮೂರರಲ್ಲಿ ಮೂಲಭೂತ ಹಕ್ಕುಗಳ ಬಗ್ಗೆ ಪ್ರಸ್ತಾಪಿಸುತ್ತಾ ೧೯ (೧) (ಕ) ಅನುಚ್ಛೇದದಂತೆ ಸಮಸ್ತ ನಾಗರಿಕರಿಗೂ ವಾಕ್ ಸ್ವಾತಂತ್ರ್ಯಕ್ಕೆ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಹಕ್ಕು ಇರತಕ್ಕದ್ದು ಎಂದು ಘೋಷಿಸಲಾಗಿದೆ.

ಸಾಮಾಜಿಕ ನ್ಯಾಯ ಹಾಗೂ ವ್ಯಕ್ತಿಗತ ಸ್ವಾತಂತ್ರ್ಯವನ್ನು ಎತ್ತಿಹಿಡಿಯುವ ಭಾರತದ ಸಂವಿಧಾನ ಪ್ರಜೆಗಳಿಗೆ ವಾಕ್ ಹಾಗೂ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಖಾತ್ರಿಪಡಿಸಿದೆ. ಈ ಸಂವಿಧಾನದ ಪ್ರಕಾರ ಪತ್ರಿಕೆಗಳಿಗೆ ಯಾವುದೇ ನೇರವಾದ ಸ್ವಾತಂತ್ರ್ಯ ಕೊಟ್ಟಿಲ್ಲವಾದರೂ ಪ್ರಜೆಗಳಿಗೆ ನೀಡಲಾಗಿರುವ ಸ್ವಾತಂತ್ರ್ಯವನ್ನೇ ಅವೂ ಬಳಸಿಕೊಳ್ಳಬಹುದಾಗಿದೆ.

೧೯೫೨ರಲ್ಲಿ ರಚನೆಗೊಂಡ ಭಾರತೀಯ ಪತ್ರಿಕಾ ಆಯೋಗ ಪತ್ರಿಕಾ ಸ್ವಾತಂತ್ರ್ಯವನ್ನು ಹೀಗೆ ವರ್ಣಿಸಿದೆ. ಯಾವುದೇ ಸಾರ್ವಜನಿಕ ಸಂಸ್ಥೆಯ ಹಸ್ತಕ್ಷೇಪವಿಲ್ಲದೆ, ಅಭಿಪ್ರಾಯಗಳನ್ನು ಹೊಂದಲು, ಮಾಹಿತಿಗಳನ್ನು ಪಡೆದು ಮುದ್ರಣದ ಮೂಲಕ ಅದನ್ನು ಪ್ರಸಾರ ಮಾಡುವ ಸ್ವಾತಂತ್ರ್ಯವಿದೆ. ಈ ಆಯೋಗವು ಪತ್ರಿಕೆಗಳನ್ನು ಪ್ರಜಾಸತ್ತಾತ್ಮಕ ಸಮಾಜದ ಜವಾಬ್ದಾರಿಯುತ ಅಂಗ ಎಂದು ಕರೆದಿರುವುದೇ ಅಲ್ಲದೆ ಅದು ಸಾಮಾಜಿಕ ಮೌಲ್ಯಗಳನ್ನು ಸ್ಪಷ್ಟಪಡಿಸಿ, ತನ್ನ ಗುರಿಗಳ ಸ್ಪಷ್ಟಚಿತ್ರಣವನ್ನೂ ನೀಡಬೇಕು ಎಂದು ತಿಳಿಸಿದೆ.

ಪ್ರಜೆಗಳಿಗೆ ನೀಡಲಾಗಿರುವ ವಾಕ್ ಸ್ವಾತಂತ್ರ್ಯ ಪತ್ರಿಕೆಗಳಿಗೂ ಅನ್ವಯವಾಗುತ್ತದೆ ಎನ್ನುವುದನ್ನು ಸರ್ವೋನ್ನತ ನ್ಯಾಯಾಲಯ ಬೆಂಗಾಲಿನ ಕ್ರಿಕೆಟ್ ಅಸೋಸಿಯೇಷನ್ ಮತ್ತಿತರರು, ಕೇಂದ್ರ ಸರ್ಕಾರದ ವಿರುದ್ಧ ಹೂಡಿದ್ದ ದಾವೆಯಲ್ಲಿ ಎತ್ತಿ ಹಿಡಿದಿದೆ. : 'Freedom of speech and expression includes right ot acquire information and desseminate it. Freedom of speech and expression is necessary for self expression which is an important means of free conscience and self fulfilment' ಎಂದು ಸರ್ವೋಚ್ಛ ನ್ಯಾಯಾಲಯ ಹೇಳಿದೆ.

ಹೀಗೆ ಜನತೆಯ ಧ್ವನಿಯಾಗಿ, ಅವರು ಧ್ವನಿಯೆತ್ತಲು ಬೇಕಾದ ಸಾಮಾಗ್ರಿ (ಮಾಹಿತಿ) ನೀಡುವ ವಾಹಕನಾಗಿ ಕಾರ್ಯನಿರ್ವಹಿಸುವ ಮಾಧ್ಯಮಗಳು ಅನಿರ್ಬಂಧಿತವಾಗಿ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಹೊಂದಿವೆ. ಮಾಧ್ಯಮಗಳಿಗಿರುವ ಈ ಸ್ವಾತಂತ್ರ್ಯ ಇಲ್ಲವಾದರೆ, ಪ್ರಜಾಪ್ರಭುತ್ವ ಸತ್ತಂತೆಯೇ ಎಂದು ಡಿ. ಆರ್. ಮಂಕೇಕರ್ ಅಭಿಪ್ರಾಯಪಡುತ್ತಾರೆ.

ಪತ್ರಿಕಾ ಸ್ವಾತಂತ್ರ್ಯವನ್ನು ಕುರಿತು ಇನ್ನೂ ವಿಷದವಾಗಿ ವ್ಯಾಖ್ಯಾನಿಸಿರುವ ೧೯೫೨ರ ಪತ್ರಿಕಾ ಆಯೋಗ Democratic society lives and grows by accepting ideas, by experimenting with them and where necessary, rejecting them. It is necessary therefore that as many as possible of these ideas which its members freely put before the public ಎಂದಿದೆ.

ಪ್ರಜಾತಂತ್ರ ವ್ಯವಸ್ಥೆ ಯಶಸ್ವಿಯಾಗಬೇಕಾದರೆ ಪತ್ರಿಕಾ ಸ್ವಾತಂತ್ರ್ಯ ಅವಶ್ಯಕ ಎಂಬುದನ್ನು ಮನಗಂಡಿದ್ದ ಪಂಡಿತ್ ಜವಹರ್‌ಲಾಲ್ ನೆಹರೂ

> *ಪತ್ರಿಕೆಗಳು ತೆಗೆದುಕೊಳ್ಳುವ ಸ್ವಾತಂತ್ರ್ಯವನ್ನು ಸರ್ಕಾರ ಇಷ್ಟಪಡದೇ ಇದ್ದರೂ, ಅದನ್ನು ಅಪಾಯಕಾರಿ ಎಂದು ಪರಿಗಣಿಸುವುದರಲ್ಲಿ ನನಗೆ ಸಂಶಯವಿಲ್ಲ. ಪತ್ರಿಕಾ ಸ್ವಾತಂತ್ರ್ಯದಲ್ಲಿ ಹಸ್ತಕ್ಷೇಪ ಮಾಡುವುದು ತಪ್ಪು. ಇಂತಹ ಸ್ವಾತಂತ್ರ್ಯವನ್ನು ತಪ್ಪಾಗಿ ಬಳಸಿಕೊಂಡು ಘಟಿಸಬಹುದಾದ ಅಪಾಯಗಳ ಜೊತೆಗೂ ಮುಕ್ತ ಪತ್ರಿಕೋದ್ಯಮವನ್ನು ನಾನು ಬಯಸುತ್ತೇನೆ; ಕುಗ್ಗಿಸಿದ ಅಥವಾ ನಿಯಂತ್ರಿತ ಪತ್ರಿಕೋದ್ಯಮವನ್ನಲ್ಲ*[೩೩]

ಎಂದು ಅಭಿಪ್ರಾಯಪಟ್ಟಿದ್ದಾರೆ. ಅದನ್ನೇ ಆಂಗ್ಲ ನ್ಯಾಯಶಾಸ್ತ್ರಜ್ಞ ಬ್ರಾಡ್‌ಲಾಫ್ ವಾಕ್‌ಸ್ವಾತಂತ್ರ್ಯವನ್ನು ನಿರಾಕರಿಸುವುದಕ್ಕಿಂತ, ಸಾವಿರ ಬಾರಿ ಅದನ್ನು ದುರುಪಯೋಗಪಡಿಸಿದರೂ, ವಾಕ್ ಸ್ವಾತಂತ್ರ್ಯ ಇರುವುದೇ ಮೇಲು ಎಂದಿದ್ದಾರೆ.

ಹಾಗೆ ನೋಡಿದರೆ, ಸಾರ್ವಜನಿಕ ಹಿತವನ್ನು ಕಾಪಾಡುವ ಮಾಧ್ಯಮ ಎನ್ನುವ 'ಕಾವಲು ನಾಯಿ' ಆಗಿಂದಾಗ್ಗೆ ಸರ್ಕಾರದೊಂದಿಗೆ ಮುಖಾಮುಖಿಯಾಗಿ ಸೆಣಸುತ್ತಲೇ ಬಂದಿದೆ. ಏಕೆಂದರೆ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಪತ್ರಿಕೆಗಳು ನಿರ್ವಹಿಸುವ ಪಾತ್ರ ಯಾವಾಗಲೂ ವಿರೋಧಿ ಸ್ಥಾನದ್ದೇ ಆಗಿರುತ್ತದೆ. ಸರ್ಕಾರದ ಕಾರ್ಯಕಲಾಪಗಳ ಲೋಪದೋಷ ನ್ಯೂನತೆಗಳನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಬೆಳಕಿಗೆ ತರುವುದೇ ಪತ್ರಿಕೆಗಳ ಪಾತ್ರ ಎನ್ನುವುದನ್ನು ಎಲ್ಲ ಪ್ರಜಾತಂತ್ರ ದೇಶಗಳೂ ಒಪ್ಪಿವೆ.

ಸುದ್ದಿಗಳನ್ನು ಪ್ರಕಟಿಸುವ 'ಆದ್ಯ ಸ್ವಾತಂತ್ರ್ಯ'ವನ್ನು ಹೊಂದಿರುವ ಭಾರತ ಪತ್ರಿಕೋದ್ಯಮ ಸಂವಿಧಾನದ ೧೯ (೧) (ಎ) ವಿಧಿಯನ್ವಯ ಅಭಿವ್ಯಕ್ತಿ ಸ್ವಾತಂತ್ರ್ಯದ ಮೂಲಭೂತ ಹಕ್ಕು ಹೊಂದಿದ್ದರೂ ೨೪ ಮತ್ತು ೨೫ನೇ ತಿದ್ದುಪಡಿಯನ್ವಯ ಸಂವಿಧಾನದ ಮೂಲಭೂತ ಹಕ್ಕುಗಳನ್ನೂ ಮಾರ್ಪಡಿಸುವ ಹಕ್ಕನ್ನು ಸಂಸತ್ತಿಗೆ ನೀಡಲಾಗಿರುವುದರಿಂದ ಮೂಲಭೂತ ಹಕ್ಕುಗಳ ಚಲಾವಣೆಯಲ್ಲಿ ಪತ್ರಿಕೆಗಳು / ನಾಗರಿಕರು ಎಚ್ಚರ ಕಾಯ್ದುಕೊಳ್ಳಬೇಕೆನ್ನುವ ಧ್ವನಿ ಇರುವುದು ಗಮನಾರ್ಹ.

ಪ್ರಜಾತಾಂತ್ರಿಕ ವ್ಯವಸ್ಥೆಯಲ್ಲಿ ಪ್ರಜೆಗಳೇ ಪ್ರಮುಖರು. ಅವರ ಅಭಿಪ್ರಾಯಗಳೇ ಪ್ರಜಾಸತ್ತೆಯ ಆಧಾರ ಸ್ತಂಭಗಳು. ಒಂದು ಸರ್ಕಾರವನ್ನು ಅಥವಾ ಆಳುವ ವರ್ಗವನ್ನು ರೂಪಿಸುವಾಗ ಮುಕ್ತ ಚರ್ಚೆಗೆ ಅವಕಾಶವಿರಬೇಕಾದ್ದು ಅಗತ್ಯ. ಮಾಧ್ಯಮಗಳೇ ಈ ಮುಕ್ತ ಚರ್ಚೆಯನ್ನು ನಡೆಸುವ ವೇದಿಕೆಗಳಂತೆ ಕೆಲಸ ಮಾಡಬೇಕು. ಇದನ್ನೇ ಭಾರತದ ಪತ್ರಿಕಾ ಆಯೋಗ ಸಾರ್ವಜನಿಕರು ಹಲವು ದೃಷ್ಟಿಕೋನಗಳನ್ನು ಅರಿಯುವ ಅವಕಾಶವಿರಬೇಕು; ಹಾಗೆ ಸಾರ್ವಜನಿಕ ವ್ಯವಹಾರಗಳ ಬಗ್ಗೆ ಮುಕ್ತ ಚರ್ಚೆ ನಡೆಸುವ ದೃಷ್ಟಿಯಿಂದ ಜನತೆಯ ವಿವಿಧ ಅಭಿಪ್ರಾಯಗಳನ್ನೂ ಮಂಡಿಸಬೇಕು ಎಂದು ಹೇಳಿದೆ.

ವ್ಯಕ್ತಿಗತ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಎತ್ತಿ ಹಿಡಿಯುವುದರ ಮೂಲಕ ಭಾರತದ ಸರ್ವೋಚ್ಚ ನ್ಯಾಯಾಲಯ ಮಾಧ್ಯಮಗಳಿಗೂ ಅಂತಹ ಸ್ವಾತಂತ್ರ್ಯವಿರುವುದನ್ನು ಸಾರಿ ಹೇಳಿದೆ. ಜೊತೆಗೆ ಆ ಮಾಧ್ಯಮಗಳ ಮೇಲೆ ನಿಯಂತ್ರಣಕ್ಕೆ ಅಡ್ಡಿಯಿಲ್ಲವೆಂದೂ ತಿಳಿಸಿದೆ. ಹಾಗೇ ಮುಂದುವರೆದು ಇಂತಹ ಸ್ವಾತಂತ್ರ್ಯವನ್ನು ಹೊಂದಲು ಅಥವಾ ಸ್ವಾಯತ್ತತೆಯನ್ನು ಸಾಧಿಸಲು ಮಾಧ್ಯಮಗಳ ಮೇಲೆ ಸರ್ಕಾರದ ಅಥವಾ ಸಮಾಜದ ಪ್ರಭಾವಶಾಲಿ ವಲಯದ ನಿಯಂತ್ರಣವಿರದ, ಸಮಾಜದ ಎಲ್ಲ ವರ್ಗಗಳ ಪ್ರತಿನಿಧಿಯಾದ ಒಂದು 'ಕೇಂದ್ರೀಕೃತ ವ್ಯವಸ್ಥೆ' ಇರಬೇಕೆಂದೂ ತಿಳಿಸಿದೆ.

ಸರ್ಕಾರ ಅಥವಾ ಇನ್ನಾವುದೇ ಸಂಸ್ಥೆ ಪ್ರಸಾರದ ಮೇಲೆ ಏಕಸ್ವಾಮ್ಯವನ್ನು ಸಾಧಿಸುವುದು ಪ್ರಜೆಗಳ ವಾಕ್‌ಸ್ವಾತಂತ್ರ್ಯದ ಹಕ್ಕಿಗೆ ಚ್ಯುತಿ ತರುತ್ತದೆ. ರಾಜ್ಯದ ಹಿಡಿತ ಎಂದರೆ ಸರ್ಕಾರದ ಹಿಡಿತ ಎಂದೂ ತನ್ಮೂಲಕ ಆ ಕಾಲಕ್ಕೆ ಅಧಿಕಾರದಲ್ಲಿರುವ ಪಕ್ಷ ಅಥವಾ ಪಕ್ಷಗಳ ಹಿಡಿತ ಎಂದೂ ಅರ್ಥೈಸಬಹುದಾಗಿದೆ. ಇಂತಹ ಪ್ರಭಾವಗಳಿಂದ ಮಾಧ್ಯಮಗಳು ಪ್ರಸಾರ ಮಾಡುವ ಮಾಹಿತಿಗಳು, ಅಭಿಪ್ರಾಯಗಳು ವರ್ಣರಂಜಿತವಾಗಿರುತ್ತವೆ ಎಂದೂ ಸರ್ವೋನ್ನತ ನ್ಯಾಯಾಲಯ ಅಭಿಪ್ರಾಯಪಟ್ಟಿದೆ.

ಸತ್ಯಕ್ಕೆ ದೂರವಾದ ಅಥವಾ ಸತ್ಯವನ್ನು ತಿರುಚಿದ ಸುದ್ದಿ/ಮಾಹಿತಿಗಳನ್ನು ಸಮೂಹ ಮಾಧ್ಯಮಗಳು ಪ್ರಸಾರ ಮಾಡದಂತೆ ಆಗಬೇಕಾದರೆ ಅವುಗಳ ಮೇಲೆ ಸರ್ಕಾರಿ ಅಥವಾ ಇತರೇ ಯಾವುದೇ ಶಕ್ತಿಶಾಲಿ ಪ್ರಭಾವೀವರ್ಗದ ಹಿಡಿತವಿರಬಾರದು. ಸರ್ಕಾರದಿಂದ ದೂರವಾಗಿ ಸ್ವತಂತ್ರವಾಗಿ ಸಾರ್ವಜನಿಕ ಸಮಸ್ಯೆಗಳನ್ನು ಪಕ್ಷಪಾತವಿಲ್ಲದೆ ಪ್ರಸಾರ ಮಾಡುವುದನ್ನು ಖಾತ್ರಿಪಡಿಸಿಕೊಳ್ಳಲು ನಿಗಮ/ನಿಗಮಗಳನ್ನು ರಚಿಸಿ ಕ್ರಿಯಾಶೀಲಗೊಳಿಸಬೇಕು ಎಂದು ಹೇಳುವ ಸುಪ್ರೀಂ ಕೋರ್ಟಿನ ತೀರ್ಪು : 'A Controlled Media cannot Command that level of credibility' ಎಂದೂ ತಿಳಿಸಿದೆ. ಹಾಗೆ ಅವಹೇಳನಕಾರಿಯಾದ, ಮಾನಹಾನಿಯಾಗಬಹುದಾದ, ಅವಾಚ್ಯ/ಅಸಂಸದೀಯ ಎನಿಸಿಕೊಳ್ಳುವ ಭಾಷಾಪ್ರಯೋಗ ಅಥವಾ ವಿಷಯ ಪ್ರಸ್ತಾಪವನ್ನೂ ಮಾಧ್ಯಮಗಳು ಮಾಡದಂತೆ ನಿಯಂತ್ರಿಸಲಾಗಿದೆ. ಹೆಚ್.ಜೆ. ಲಾಸ್ಕಿ ಹೇಳುವಂತೆ 'ಸದಾ ಎಚ್ಚರವಾಗಿರುವುದೇ ಸ್ವಾತಂತ್ರ್ಯಕ್ಕಾಗಿ ತೆರಬೇಕಾದ ಬೆಲೆ ಎನ್ನುವುದನ್ನು ಪತ್ರಿಕೆಗಳು ಮರೆಯದಿರಲಿ ಎಂದೇ ಕಾನೂನಿನನ್ವಯ ಹಲವು ಮಿತಿಗಳನ್ನೂ ಹೇರಲಾಗಿದೆ.

ಭಾರತೀಯ ಪತ್ರಿಕಾ ಆಯೋಗದ ಶಿಫಾರಸ್ಸಿನ ಮೇಲೆ ೧೯೬೬ರಲ್ಲಿ ಸ್ಥಾಪನೆಗೊಂಡ ಸ್ಥಾಯಿಸಂಸ್ಥೆ ಭಾರತೀಯ ಪತ್ರಿಕಾ ಪರಿಷತ್ತು ಸಹ ಮಾಧ್ಯಮಗಳ ಮೇಲೆ ನಿಯಂತ್ರಣ ಹೊಂದಿದೆ. ಪತ್ರಿಕೆಗಳ ಕಾರ್ಯವ್ಯಾಪ್ತಿಯಲ್ಲಿ ಹಸ್ತಕ್ಷೇಪ ಮಾಡದೆ ವಾಕ್‌ಸ್ವಾತಂತ್ರ್ಯವನ್ನು ಪತ್ರಿಕೆಗಳು ದುರುಪಯೋಗಪಡಿಸಿಕೊಂಡಾಗ ಪತ್ರಿಕಾ ಪರಿಷತ್ತು ಅಂತಹ ಪತ್ರಿಕೆಗಳನ್ನು ಎಚ್ಚರಿಸುತ್ತದೆ. ಹಾಗೆ ಪತ್ರಿಕಾ ಸ್ವಾತಂತ್ರ್ಯವನ್ನೂ ಕಾಯ್ದುಕೊಳ್ಳುತ್ತದೆ.

'ಮಾಧ್ಯಮವು ಎಂತಹ ಪರಿಣಾಮಕಾರಿ ಕಾರ್ಯವನ್ನು ನಿರ್ವಹಿಸುತ್ತದೆ ಎಂಬುದನ್ನು ಸರ್ಕಾರ ಮನಗಂಡಿಲ್ಲದಿರುವುದೇ ಭಾರತದಲ್ಲಿ ಸೂಕ್ತ ಮಾಧ್ಯಮನೀತಿ ಇಲ್ಲದಿರುವುದಕ್ಕೆ ಕಾರಣ. ಮಾಧ್ಯಮದ ಕಾರ್ಯನಿರ್ವಹಣೆಯಲ್ಲಿ ಯಾವುದೇ ರೀತಿಯಲ್ಲಿ ಹಸ್ತಕ್ಷೇಪ ಮಾಡದೆ ಮಾಧ್ಯಮದ ಪಾತ್ರ ರಚನಾತ್ಮಕವಾಗಿರುವಂತೆ ಮಾಡಬಹುದು ಎಂಬುದರ ಬಗ್ಗೆ ಸರ್ಕಾರ ಎಂದೂ ಗಂಭೀರ ಆಲೋಚನೆಯನ್ನೇ ಮಾಡಿಲ್ಲ' ಎಂದು ೧೯೮೪ರಲ್ಲಿ ನಡೆದ ಅಖಿಲ ಭಾರತ ಪತ್ರಿಕಾ ಸಂಪಾದಕರ ಸಮ್ಮೇಳನದಲ್ಲಿ ಆಗ ಪ್ರಧಾನಮಂತ್ರಿಯಾಗಿದ್ದ ಇಂದಿರಾಗಾಂಧಿ ನೀಡಿದ ಹೇಳಿಕೆಯಿದು.

ರಾಷ್ಟ್ರದ ಅಭಿವೃದ್ಧಿಗೆ ಪೂರಕವಾಗುವಂತೆ ಮಾಧ್ಯಮಗಳ ನೆರವನ್ನು ಪಡೆದುಕೊಳ್ಳಲು ಸಾಧ್ಯವಾಗುವಂತಹ ಸೂಕ್ತ ಮಾಧ್ಯಮ ನೀತಿಯನ್ನು ಹೊಂದುವಂತೆ ೧೯೪೭ರಿಂದಲೇ ಧ್ವನಿ ಎದ್ದಿದೆ. ಗ್ರಾಮೀಣ ಜನರಿಗೆ ವಿದ್ಯಾಭ್ಯಾಸ, ಪ್ರಾದೇಶಿಕ ಭಾಷೆಗಳಲ್ಲಿ ಸಂಸ್ಕೃತಿಯ ವೈವಿಧ್ಯತೆಯನ್ನು ನಿರೂಪಿಸಲು ಬೇಕಾದ ಮಾಧ್ಯಮ ನೀತಿಯನ್ನು ಪ್ರಕಟಿಸುವಂತೆ ಡಾ. ಪಟ್ಟಾಭಿ ಸೀತಾರಾಮಯ್ಯನವರು ಸಂವಿಧಾನ ಸಭೆಯ ಒಕ್ಕೂಟದ ಅಧಿಕಾರಿಗಳ ಸಭೆಗೆ ೧೯೪೭ರಲ್ಲಿ ಟಿಪ್ಪಣಿ ನೀಡಿದ್ದು ಉಲ್ಲೇಖಾರ್ಹ. ಅದನ್ನು ಪರಿಶೀಲಿಸಿದ ಜವಹರಲಾಲ್ ನೆಹರೂ ಅಧ್ಯಕ್ಷತೆಯ ಸಮಿತಿ ಈ ಬಗ್ಗೆ ರಾಷ್ಟ್ರಪತಿಯವರಿಗೆ ತನ್ನ ನಿರ್ಧಾರವನ್ನೂ ಸಲ್ಲಿಸಿತ್ತು. ನಂತರವೂ ದೇಶವನ್ನಾಳಿದ ವಿವಿಧ ಪಕ್ಷಗಳ ಎಲ್ಲ ಸರ್ಕಾರಗಳೂ ಮಾಧ್ಯಮ ನೀತಿ ಸಿದ್ಧಪಡಿಸಬೇಕಾದ ಅಗತ್ಯವನ್ನು ಮನಗಂಡಿವೆ; ಒಪ್ಪಿ ಹೇಳಿವೆ. ಆದರೂ ಈವರೆಗೆ ಅಂತಹ ನೀತಿಯೊಂದು ಪ್ರಕಟಗೊಳ್ಳದಿರುವುದು ಆತಂಕಕಾರಿ ವಿಷಯ ಎಂದು ವಾರ್ತಾ ಮತ್ತು ಪ್ರಸಾರ ಮಾಧ್ಯಮಗಳ ಬಗ್ಗೆ ಅಧ್ಯಯನ ನಡೆಸಿದ ಅಶೋಕ ಕೆ. ಚಂದಾ ಸಮಿತಿ ವರದಿ

ತಿಳಿಸಿದೆ. ಮಾಧ್ಯಮ ನೀತಿಯ ಪರಿಶೀಲನೆ ಎಂಬುದು ಸಂಸತ್ತಿನಲ್ಲಿ ಹಲವಾರು ವಿಷಯಗಳ ನಡುವಣ ಚರ್ಚೆಯಲ್ಲಿ ಆಗೀಗ ಕಾಣಿಸಿಕೊಳ್ಳುವ ಮತ್ತು ಬಜೆಟ್‌ಗೆ ಅನುಮೋದನೆ ನೀಡುವಾಗ ವರ್ಷಕ್ಕೊಮ್ಮೆ ನಡೆಯುವ ಚರ್ಚೆಗಷ್ಟೇ ಪರಿಮಿತವಾಗಿದೆ ಎಂದು ವರದಿ ಹೇಳಿದೆ.

ಮೂಲತಃ ಸಮೂಹ ಮಾಧ್ಯಮಗಳು ಕಾರ್ಯಾಂಗ, ಶಾಸಕಾಂಗ, ನ್ಯಾಯಾಂಗಗಳ ಕಾರ್ಯವೈಖರಿಯನ್ನು ಗಮನಿಸಿ ಅದರ ಒಪ್ಪುತಪ್ಪುಗಳನ್ನು ಬಹಿರಂಗ ಪಡಿಸುವ ನಾಲ್ಕನೆ ಆಯಾಮವೆನಿಸಿದೆ. ಈ ಕಾರ್ಯವನ್ನು ಸುಸೂತ್ರವಾಗಿ ನೆರವೇರಿಸಲು ಮಾಧ್ಯಮಗಳಿಗೆ ಸ್ವಾತಂತ್ರ್ಯ ಅಥವಾ ಸ್ವಯಂಶಕ್ತಿ ಬೇಕು. ಮೊದಲ ಮೂರು ಅಂಗಗಳೂ ಈ ಮಾಧ್ಯಮ ಅಂಗದ ಮೇಲೆ ಯಾವುದೇ ರೀತಿಯ ಹಿಡಿತ ಸಾಧಿಸಿದರೂ ಅಥವಾ ಸಾಧಿಸಲು ಯತ್ನಿಸಿದರೂ ಅದರ ಕಾರ್ಯವೈಖರಿಯಲ್ಲಿ ಏರುಪೇರಾಗಬಹುದು ಎಂಬ ಮೂಲ ಉದ್ದೇಶದಿಂದ ಮಾಧ್ಯಮ ರಂಗ ಸಂಪೂರ್ಣ ಸ್ವಾವಲಂಬಿಯೂ ಸ್ವಾಯತ್ತವೂ ಆಗಬೇಕೆಂಬ ಅಭಿಪ್ರಾಯ ವ್ಯಕ್ತವಾಗಿದೆ.

ಒಂದು ಸಂಪೂರ್ಣ ಸ್ವತಂತ್ರ, ಸ್ವಾಯತ್ತ ಮಾಧ್ಯಮ ಸರ್ಕಾರದ ಜೀವನಾಡಿಯಾಗಬಲ್ಲುದು.

> *There is nothing that a Government can't do with public opinion behind it - and indeed there is nothing that a Government can really do without public opinion behind it! This is the great merit of democracy, and a free press is its very life-breath.*[೨೪]

ಯಾವುದೇ ಸರ್ಕಾರ ಅಥವಾ ಪ್ರಭಾವಿ ವಲಯ ಮಾಧ್ಯಮವನ್ನು ತನ್ನ ಹಿಡಿತದಲ್ಲಿ ಇರಿಸಿಕೊಳ್ಳುವುದರಿಂದ ಸರ್ಕಾರದ ಲೋಪದೋಷಗಳನ್ನು ಬಯಲು ಮಾಡುವಲ್ಲಿ ಮಾಧ್ಯಮಗಳು ಸೋಲುತ್ತವೆ. ಅಂದರೆ ಪ್ರಜಾತಾಂತ್ರಿಕ ವ್ಯವಸ್ಥೆಯಲ್ಲಿ ಮಾಧ್ಯಮಗಳ ಮೂಲ ಉದ್ದೇಶವೇ ಸೋತಂತಾಗುತ್ತದೆ. ಜನರಿಗೆ ತಲುಪಬೇಕಾದ ಮಾಹಿತಿ ಸೂಕ್ತವಾಗಿ ತಲುಪದೆ, ಜನರ ಅಭಿಪ್ರಾಯವೂ ಸೂಕ್ತವಾಗಿ ವ್ಯಕ್ತವಾಗದೆ ಪ್ರಜಾತಂತ್ರ ವ್ಯವಸ್ಥೆಯೂ ಸೋಲುತ್ತದೆ.

ಈ ಹಿನ್ನೆಲೆಯಲ್ಲಿ, ಸರ್ಕಾರಿ ಸ್ವಾಮ್ಯದಲ್ಲಿದ್ದ ಆಕಾಶವಾಣಿ ಹಾಗೂ ದೂರದರ್ಶನಕ್ಕೆ ಸ್ವಾಯತ್ತತೆ ನೀಡುವ 'ಭಾರತದ ಪ್ರಸಾರ ನಿಗಮ' ಅಥವಾ 'ಪ್ರಸಾರಭಾರತಿ ಕಾಯ್ದೆ - ೧೯೯೦' ಅನ್ನು ಸಿದ್ಧಪಡಿಸಲಾಗಿದೆ. ೧೯೯೦ರ ಸೆಪ್ಟೆಂಬರ್‌ನಲ್ಲೇ ಕಾಯ್ದೆ ಅಸ್ತಿತ್ವಕ್ಕೆ ಬಂದಿದ್ದರೂ, ೧೯೯೭ರ ಸೆಪ್ಟೆಂಬರ್‌ನಲ್ಲಿ 'ಪ್ರಸಾರ ಭಾರತಿ' ಶಿರೋನಾಮೆಯಲ್ಲಿ ಆಕಾಶವಾಣಿ ಹಾಗೂ ದೂರದರ್ಶನ ಸ್ವಾಯತ್ತ ಸಂಸ್ಥೆಗಳು ಎನಿಸಿಕೊಂಡಿವೆ. ಪರಿಣತರು ಹೇಳುವಂತೆ

> *ಈಗ ಈ ಮಾಧ್ಯಮಗಳು ಸರ್ಕಾರದ ಸ್ವಾಮ್ಯದಿಂದ 'ಪ್ರಸಾರ ಭಾರತಿ' ಹೆಸರಿನಲ್ಲಿ ಸ್ವಾಯತ್ತತೆಯನ್ನು ಪಡೆದುಕೊಳ್ಳುತ್ತಿವೆ. ಇವು ಇನ್ನು ಮುಂದೆ ಸ್ವತಂತ್ರವಾಗಿ ಕಾರ್ಯನಿರ್ವಹಿಸುವುದರಿಂದ ಮುಕ್ತವಾದ ಅಭಿಪ್ರಾಯಗಳಿಗೆ ಹೆಚ್ಚು ಅವಕಾಶ ದೊರೆಯುತ್ತದೆಂಬ ಭ್ರಮೆಯನ್ನು ಹುಟ್ಟುಹಾಕಲಾಗಿದೆ. ಆದರೆ ಹುಸಿ ಪ್ರಜಾಸತ್ತೆಯ ವ್ಯವಸ್ಥೆಯಲ್ಲಿ ಇವುಗಳು ತಮ್ಮ ಅಸ್ತಿತ್ವವನ್ನು ಎಷ್ಟರಮಟ್ಟಿಗೆ ದಕ್ಷತೆ ಹಾಗೂ ನಿಷ್ಪಕ್ಷಪಾತದಿಂದ ನಿರ್ವಹಿಸಬಲ್ಲವು ಎಂಬುದನ್ನು ಕಾಲ ನಿರ್ಧರಿಸಬೇಕಾಗಿದೆ.*[೨೫]

ಸ್ವಾಯತ್ತತೆ ದೊರಕಿರುವುದರ ಹಿಂದೆಯೇ ಸರ್ಕಾರಿ ಸ್ವಾಮ್ಯದಲ್ಲಿದ್ದ ದೂರದರ್ಶನದಂತಹ ಪ್ರಭಾವಿ ಮಾಧ್ಯಮಕ್ಕೆ ಖಾಸಗಿ ಚಾನೆಲ್‌ಗಳು ಒಡ್ಡುವ ಸವಾಲುಗಳೂ ಹುಟ್ಟಿಕೊಂಡಿವೆ.

## ೫. ಜಾಗತೀಕರಣದ ಸಂದರ್ಭದಲ್ಲಿ ಕನ್ನಡ

ಇಂದು ಜಗತ್ತು ಒಂದು ಗ್ರಾಮದಂತಾಗುತ್ತಿದೆ. ಉನ್ನತ ತಂತ್ರಜ್ಞಾನದ ಆವಿಷ್ಕಾರಗಳಿಂದಾಗಿ ದೇಶದೇಶಗಳ ನಡುವೆ ಏರ್ಪಟ್ಟಿರುವ ನೇರ ಸಂಪರ್ಕ ಇದಕ್ಕೆ ಮುಖ್ಯ ಕಾರಣ. ನೀಲಗಗನದಾಚೆಗೆ ಹಾರಿಬಿಟ್ಟ ಉಪಗ್ರಹಗಳು, ಆ ಮೂಲಕ ಚಾಲನೆ ಪಡೆದ ಟೆಲಿವಿಷನ್, ಸಂಚಾರಿ ಟೆಲಿಫೋನ್, ಕಂಪ್ಯೂಟರ್ ಜಾಲಗಳು ಸಮಸ್ತ ವಿಶ್ವವನ್ನೂ ಒಂದೆಡೆಯಿಂದ ಮತ್ತೊಂದೆಡೆಗೆ ಸುಲಭವಾಗಿ ನೇರವಾಗಿ ಬೆಸೆದು ಇದು 'ಸಂವಹನ ಯುಗ' ಎಂದು ಸಾಬೀತುಗೊಳಿಸಿವೆ. ಆಧುನಿಕ ತಂತ್ರಜ್ಞಾನದ ಮಡಿಲಿಗೆ ಬಿದ್ದಿರುವ ಈ ಯುಗ ಕಂಡಷ್ಟು ಆಧುನಿಕ ಸಂವಹನ ಸಾಧನಗಳನ್ನು ಕಳೆದ ಶತಮಾನದವರೆಗೂ ಕಾಣಲಾಗಿಲ್ಲ.

ಸಂಪರ್ಕ, ಸಂವಹನ ವ್ಯವಸ್ಥೆ ಸುಗಮಗೊಂಡಂತೆ ಇಡೀ ಜಗತ್ತೇ ಒಂದು ಸಣ್ಣ ಗ್ರಾಮ ಎಂಬಂತೆ ಅಂದರೆ 'ವಿಶ್ವಗ್ರಾಮ'ದ ಪರಿಕಲ್ಪನೆ ಮೂಡಿಬಂದಿದೆ. ಜಗತ್ತಿನ ಒಂದೇ ವೇದಿಕೆಯ ಮೇಲೆ ಎಲ್ಲ ದೇಶಗಳೂ ಒಡಮೂಡಿ ವಿಶ್ವದ ಒಂದು ವಿಶಾಲ ಚಿತ್ರಣ ಸೃಷ್ಟಿಯಾಗಿದೆ. ದೂರದೂರದ ಜನರು-ಜಾಗಗಳು ಹತ್ತಿರವಾಗಿವೆ.

> *The media have shrunk the world, made the obscure accessible and brought far-off people and places nearer.* [೨೬]

ಎನ್ನುತ್ತಾರೆ ಅಶನ್‌ಕಾಂತ್ ನಿಂಬಾರ್ಕ್. ಎಲ್ಲವೂ ಜಾಗತೀಕರಣಗೊಳ್ಳುತ್ತಿರುವ, ಅದರ ಬೆನ್ನಲ್ಲೇ ಉದಾರೀಕರಣ ಗೊಳ್ಳುತ್ತಿರುವ ಇಂದಿನ ಸಂದರ್ಭದಲ್ಲಿ ನಮ್ಮ ಮಹಾಪ್ರಬಂಧದ ನೆಲೆಯಿಂದ ಎರಡು ಮುಖ್ಯ ವಿಚಾರಗಳತ್ತ ಗಮನ ಹರಿಸಬೇಕಾಗುತ್ತದೆ. ಒಂದು, ಸಂವಹನೆ ಮತ್ತು ಎರಡು, ಪ್ರಾದೇಶಿಕ ಭಾಷೆ - ಕನ್ನಡ

### ಸಂವಹನೆ

ಜಾಗತೀಕರಣ, ಉದಾರೀಕರಣದ ಫಲವಾಗಿ ಎಲ್ಲ ಕ್ಷೇತ್ರಗಳಲ್ಲೂ ದೇಶ-ದೇಶಗಳ ನಡುವೆ ವಿಚಾರ ವಿನಿಮಯ ನಡೆಯುತ್ತಿದೆ. ಇದಕ್ಕೆ ಸಂಪರ್ಕ - ಸಂವಹನ ಕ್ಷೇತ್ರವೂ ಹೊರತಲ್ಲ. ಈ ಕ್ಷೇತ್ರದ ಬಲವರ್ಧನೆಯಿಂದಾಗಿ ವೈಚಾರಿಕ, ಸಾಂಸ್ಕೃತಿಕ ವಿನಿಮಯವೂ ನಡೆಯುತ್ತಿದೆ; ಇದು ಜನಾಂಗೀಕರಣದ (Tribalisation) ಪುನರ್‌ನಿರ್ಮಾಣಕ್ಕೆ ಕಾರಣವಾಗುತ್ತಿದೆಯೇ ಎಂದು ಗಂಭೀರ ಚಿಂತನೆ ನಡೆಸಬೇಕಾಗಿದೆ. ಇದನ್ನೇ ಅಶನ್‌ಕಾಂತ್ ನಿಂಬಾರ್ಕ್ ಹೀಗೆ ಪ್ರತಿಪಾದಿಸುತ್ತಾರೆ.

> *Specially scattered people are linked together by the mass media so close that they can interact as if they belong to one tribe.* [೨೭]

ಇದನ್ನೇ ನಾರಾಯಣ ಮೆನನ್

> *Communication explosion has a re-tribalising effect on modern world.*[೨೪]

ಎಂದು ಅಭಿಪ್ರಾಯಪಡುತ್ತಾರೆ. ಈ ಹಿನ್ನೆಲೆಯಲ್ಲಿ ಸಮೂಹ ಮಾಧ್ಯಮಗಳು ತಂದು ಹೇರುವ ಸಂಸ್ಕೃತಿಯ ಪ್ರಭಾವ ಭಾರತದಂತಹ ಅಭಿವೃದ್ಧಿಶೀಲ, ಪುರಾತನ ಸಂಸ್ಕೃತಿಯ ಬಹುಭಾಷೀಯ ದೇಶದ ಮೇಲೆ ಹೇಗಾಗುತ್ತದೆ ಎಂದು ಚರ್ಚಿಸಬೇಕು.

ಸಮೂಹ ಸಂವಹನೆ ಮತ್ತು ಸಂಬಂಧಿತ ಸಂವಹನ ತಂತ್ರಜ್ಞಾನಗಳಿಗೆ ಸಂಬಂಧಿಸಿದಂತೆ ಭಾರತ ಈಗಿನ ಸಂದರ್ಭದಲ್ಲಿ ಸ್ವಲ್ಪಮಟ್ಟಿನ ಯಶಸ್ಸು ಸಾಧಿಸಿದೆ. ಮುಂಬರುವ ವರ್ಷಗಳಲ್ಲಿ ಇಂಟರ್‌ನೆಟ್ ಸಂಪರ್ಕಕ್ಷೇತ್ರದಲ್ಲಿ ಅದ್ಭುತ ಯಶಸ್ಸನ್ನು ನಿರೀಕ್ಷಿಸಬಹುದಾಗಿದೆ ಎಂದು ಬಿಸಿನೆಸ್ ಸ್ಟ್ಯಾಂಡರ್ಡ್ ಪತ್ರಿಕೆಯನ್ನು ಉಲ್ಲೇಖಿಸಿ ಕನ್ನಡದ ದಿನಪತ್ರಿಕೆಯೊಂದು ವರದಿ ಮಾಡಿದೆ.[೨೫] ಆ ಸಮೀಕ್ಷೆಯನ್ವಯ ೨೦೦೦ದ ಇಸವಿಯ ಆಗಸ್ಟ್ ವೇಳೆಗೆ ದೇಶದಲ್ಲಿದ್ದ ಸಂಪರ್ಕ ಸಾಧನಗಳ ಪ್ರಮಾಣ ೨೦೦೮ರ ವೇಳೆಗೆ ಈ ಕೆಳಕಂಡಂತೆ ಬಳಕೆಯಾಗುವ ನಿರೀಕ್ಷೆಯಿದೆ :

| | | ೨೦೦೦ (ಆಗಸ್ಟ್) | ೨೦೦೮ |
|---|---|---|---|
| ೧. | ಕೇಬಲ್ ಟಿ.ವಿ. ಸಂಪರ್ಕಗಳು | ೩೭೦ ಲಕ್ಷ | ೭೦೦ ಲಕ್ಷ |
| ೨. | ಪರ್ಸನಲ್ ಕಂಪ್ಯೂಟರ್‌ಗಳು | ೫೦ ಲಕ್ಷ | ೩೦೦ ಲಕ್ಷ |
| ೩. | ಇಂಟರ್ ನೆಟ್ ಚಂದಾದಾರರು | ೧೬ ಲಕ್ಷ | ೫೦೦ ಲಕ್ಷ |
| ೪. | ಇಂಟರ್‌ನೆಟ್ ಬಳಕೆದಾರರು | ೪೮ ಲಕ್ಷ | ೧೨೦೦ ಲಕ್ಷ |
| ೫. | ಟೆಲಿಫೋನ್ ಸಂಖ್ಯೆ | ೨೬೦ ಲಕ್ಷ | ೧೨೫೦ ಲಕ್ಷ |
| ೬. | ಟಿ.ವಿ. ಸಂಖ್ಯೆ | ೭೫೦ ಲಕ್ಷ | ೨೨೫೦ ಲಕ್ಷ |

ಈ ಸಮೀಕ್ಷೆಯ ಅಂಕಿ-ಅಂಶಗಳನ್ನು ನೋಡಿದಾಗ, ಈಗಿರುವ ಕೇವಲ ೧೬ ಲಕ್ಷ ಇಂಟರ್‌ನೆಟ್ ಸಂಪರ್ಕಗಳಿಗೆ ಪ್ರತಿಯಾಗಿ ಇನ್ನು ೮ ವರ್ಷಗಳಲ್ಲಿ ೫ ಕೋಟಿಗೇರುವ ಸಾಧ್ಯತೆಯಿದ್ದು, ಭಾರತದಲ್ಲಿ 'ಭಾರೀ ಸಂವಹನ ಕ್ರಾಂತಿ' ಆಗಬಹುದೇ ಎಂದು ಆಶಿಸಬಹುದು. ಆದರೂ ಇದು ದೇಶದ ನಗರ ಪ್ರದೇಶಗಳಿಗೆ ಮಾತ್ರ ಸೀಮಿತಗೊಂಡು, ದೇಶದ ಬಹುದೊಡ್ಡ ಪಾಲುಹೊಂದಿರುವ ಗ್ರಾಮೀಣ ಜನರ ಬದುಕನ್ನು ಪ್ರವೇಶಿಸಲಾರದೇನೋ ಎಂಬ ಆತಂಕ ಇಲ್ಲದೆ ಇಲ್ಲ. ಇನ್ನೂ ತೊಡೆದು ಹಾಕಲಾಗದೇ ಇರುವ ಬಡತನ, ಅಜ್ಞಾನ, ದೇಶಾದ್ಯಂತ ಆಧುನಿಕ ಸಂವಹನ ಜಾಲ ನಿರ್ಮಾಣಕ್ಕೆ ತೊಡಕಾಗುತ್ತದೆಯೇ? ಗ್ರಾಮೀಣ ಪ್ರದೇಶದ ಸಮಸ್ತ ಜನತೆಗೆ ಈ ಆಧುನಿಕ ಸವಲತ್ತಿನ ಪ್ರಯೋಜನ ಪಡೆದುಕೊಳ್ಳುವುದು ಸಾಧ್ಯವಾಗುತ್ತದೆಯೇ? ಅವರಿಗೆ ಇದರ ಅವಶ್ಯಕತೆಯಿದೆಯೇ? ಜನರ ಬದುಕಿನ, ಅವರು ನೆಚ್ಚಿಕೊಂಡು ಬಂದ ಸಂಸ್ಕೃತಿಯ ಮೇಲೆ ಪ್ರತಿಕೂಲ ಪರಿಣಾಮ ಆಗಬಹುದೇ? ಎಂದೂ ಯೋಚಿಸಬೇಕಾಗುತ್ತದೆ.

೧೯೫೫ರಲ್ಲಿ ಅಂದಿನ ಪ್ರಧಾನಮಂತ್ರಿ ಪಂಡಿತ್ ಜವಹರಲಾಲ್ ನೆಹರೂ ಅವರ ದೂರದರ್ಶಿತ್ವದ ಫಲವಾಗಿ ಪ್ರೆಸ್ ಟ್ರಸ್ಟ್ ಆಫ್ ಇಂಡಿಯಾ (PTI) ಯುನೈಟೆಡ್ ನ್ಯೂಸ್ ಆಫ್ ಇಂಡಿಯಾ (UNI) ಎಂಬೆರಡು ಭಾರತೀಯ ಸುದ್ದಿ

ಸಂಸ್ಥೆಗಳು ಬೀಜಾಂಕುರಗೊಂಡದ್ದೇ ಅಲ್ಲದೆ, 'ಮುಖ್ಯವಾಗಿ ಸುದ್ದಿ ಮತ್ತು ಪ್ರಚಲಿತ ವಿದ್ಯಮಾನಗಳನ್ನು ಒಳಗೊಳ್ಳುವ ಯಾವುದೇ ಹೊರರಾಷ್ಟ್ರದ ದಿನಪತ್ರಿಕೆ/ನಿಯತಕಾಲಿಕೆಗಳನ್ನು ಭಾರತದಲ್ಲಿ ಪ್ರಕಟಿಸಬಾರದೆಂಬ' ನಿರ್ಧಾರವನ್ನೂ ಸರ್ಕಾರ ಕೈಗೊಂಡಿತ್ತು. ಇಂದಿನ ವಾರ್ತಾ ಮತ್ತು ಪ್ರಸಾರ ಖಾತೆ ಸಚಿವೆ ಸುಷ್ಮಾ ಸ್ವರಾಜ್ ಅವರೂ ಇದೇ ಅಂಶವನ್ನು ಎತ್ತಿ ಹಿಡಿದಿದ್ದು, ಮುದ್ರಣ ಮಾಧ್ಯಮದಲ್ಲಿ ವಿದೇಶೀ ಸಹಭಾಗಿತ್ವಕ್ಕೆ ಅನುಮತಿ ಇಲ್ಲ ಎಂದು ಘೋಷಿಸಿದ್ದಾರೆ. ೧೮.೧೧.೨೦೦೦ದ ಪ್ರಜಾವಾಣಿ ಪತ್ರಿಕೆಯಲ್ಲಿ (ಪುಟ.೭) ವರದಿಯಾಗಿರುವಂತೆ ಈ ಬಗ್ಗೆ ಸರ್ಕಾರ ನಿರ್ಣಯ ಕೈಗೊಂಡಿದ್ದು ೧೯೫೫ರಲ್ಲಿ ಮುದ್ರಣಮಾಧ್ಯಮದಲ್ಲಿ ವಿದೇಶೀ ಪ್ರವೇಶದ ವಿರುದ್ಧ ನಿರ್ಣಯ ಕೈಗೊಂಡ ಸಂದರ್ಭದಲ್ಲಿ ಅಂದಿನ ಸಚಿವ ಸಂಪುಟ ವ್ಯಕ್ತಪಡಿಸಿದ ಕಳಕಳಿ ಇಂದಿಗೂ ಪ್ರಸ್ತುತ ಎಂದು ಹೇಳಿದ್ದಾರೆ.

ಜಾಗತೀಕರಣದ ಇಂದಿನ ಸಂದರ್ಭದಲ್ಲಿ ಭಾರತದಲ್ಲಿ ವಿದೇಶಿ ಮಾಧ್ಯಮಗಳು ಪಾದಾರ್ಪಣೆ ಮಾಡುತ್ತಿವೆ. ಈ ವಿದೇಶೀ ಮಾಧ್ಯಮಗಳ ಪ್ರವೇಶವನ್ನು 'ನಮ್ಮ ಸಂಸ್ಕೃತಿಯ ಮೇಲಾಗುವ ದಾಳಿ' ಎಂದು ಕೆಲವರು ಬಣ್ಣಿಸಿದರೆ 'ಮಾಹಿತಿ ತಂತ್ರಜ್ಞಾನ ಕ್ಷೇತ್ರದ ಮಹತ್ತರ ಸಾಧನೆ' ಎಂದೂ ಕೆಲವರು ವಿವರಿಸುತ್ತಾರೆ.

೧೯೫೦ರಲ್ಲಿ ರಮೇಶ್ ಥಾಪರ್ ಮತ್ತು ಮದ್ರಾಸ್ ರಾಜ್ಯ ಸರ್ಕಾರದ ನಡುವಿನ ಪ್ರಕರಣದಲ್ಲಿ ಸುಪ್ರೀಂಕೋರ್ಟ್ "ಭಾರತದ ಪ್ರಜೆಗಳಲ್ಲದ 'ನಿವಾಸಿ'ಗಳು ಬೇರೆ ಯಾವುದೇ ಸಂವಿಧಾನಾತ್ಮಕ ಸೌಲಭ್ಯಗಳನ್ನು ಅನುಭವಿಸಿದರೂ ಅಭಿವ್ಯಕ್ತಿ ಮತ್ತು ವಾಕ್‌ಸ್ವಾತಂತ್ರ್ಯದ ಹಕ್ಕನ್ನು ಹೊಂದುವುದಿಲ್ಲ" ಎಂದು ಸ್ಪಷ್ಟಪಡಿಸಿರುವುದು, ಒಬ್ಬ ವಿದೇಶೀಯ ಅಥವಾ ಒಂದು ವಿದೇಶೀ ಸಂಸ್ಥೆ, ಭಾರತದಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯದ ವ್ಯಾಪ್ತಿಯನ್ನು ಹೊಂದಿರತಕ್ಕಂತ ಪತ್ರಿಕಾ ಸಂಸ್ಥೆಯನ್ನು ಸ್ಥಾಪಿಸಬಹುದೇ? ಭಾರತೀಯ ಪತ್ರಿಕಾಸಂಸ್ಥೆಯಲ್ಲಿ ಬಂಡವಾಳ ಹೂಡಬಹುದೇ? ಪಾಲು ಹೊಂದಬಹುದೇ? ಅನಿಸಿಕೆ, ಅಭಿಪ್ರಾಯದ ಪ್ರಸರಣೆ ಮಾಡಬಹುದೇ? ಎಂದೆಲ್ಲಾ ಪ್ರಶ್ನೆಗಳ ಹುಟ್ಟಿಗೆ ದಾರಿ ಮಾಡಿಕೊಟ್ಟಿದೆ.

ಹಿರಿಯ ಸಮಾಜ ಶಾಸ್ತ್ರಜ್ಞ ಎಂ.ಎನ್. ಶ್ರೀನಿವಾಸ್

> *We should remember that we are in a particular historical situation and when you say globalisation, it is not opening the doors for everybody. We should be very careful about the print media. The foreigner can use a newspaper to spread disinformation.*[೩೦]

ಎಂಬ ಎಚ್ಚರಿಕೆಯನ್ನು ನೀಡಿದ್ದಾರೆ.

ದೇಶಾದ್ಯಂತ ಜಾಗತೀಕರಣ, ಉದಾರೀಕರಣದ ಅಲೆ ದಟ್ಟವಾಗಿರುವ ಸಂದರ್ಭದಲ್ಲಿ ವಿದೇಶೀ ಮಾಧ್ಯಮ ಸಂಸ್ಥೆಗಳು ಭಾರತದಲ್ಲಿ ವೃತ್ತ ಪತ್ರಿಕೆಗಳನ್ನು ಪ್ರಾರಂಭಿಸಲು ಅವಕಾಶ ನೀಡುವ ಬಗ್ಗೆ ಪರಿಶೀಲನೆ ನಡೆಸಲು ಸರ್ಕಾರ ಮುಂದಾಗಿದೆ. ಮತ್ತೊಂದೆಡೆ ವಿಜ್ಞಾನ-ತಂತ್ರಜ್ಞಾನದ ಹೊಸ ಹೊಸ ಆವಿಷ್ಕಾರಗಳ ಫಲವಾಗಿ ಒಡಮೂಡಿರುವ ಈ 'ಮಾಹಿತಿ ಯುಗದಲ್ಲಿ' ಭಾರತ ಇತರ ದೇಶಗಳಿಗಿಂತ ಹಿಂದುಳಿಯಬಾರದು ಎಂಬುದು ಪ್ರಗತಿವಾದಿಗಳ ಪ್ರತಿಪಾದನೆ. ಈಗ ಆಗಿರುವ ಸಾಧನೆಯನ್ನೂ ಅವರು ಮೆಚ್ಚುತ್ತಾರೆ. ಉಪರಾಷ್ಟ್ರಪತಿ ಕೃಷ್ಣಕಾಂತ್ ಅವರು ಹೀಗೆ ಹೇಳಿದ್ದಾರೆ:

> *India has made giant strides in the field of communication and the information age has finally*

> *set in. It has altered the life style of a vast segment of population. The rapid expansion of satellite communications facilities and enormous, mind-boggling growth of television, radio and computers constitute a big leap forward in India's Journey on the road to global village.*[೩೧]

ವೀರಬಲಾ ಅಗರ್‌ವಾಲ್ ಅವರು ಹೇಳುವಂತೆ ಭಾರತದಲ್ಲಿ ವಿದೇಶೀ ವಿದ್ಯುನ್ಮಾನ ಮಾಧ್ಯಮಗಳು ಈಗಾಗಲೇ ಗ್ರಾಹಕತೆಯ ಕಲಾನೈಪುಣ್ಯ-ಚಮತ್ಕಾರಗಳನ್ನು ಬಿತ್ತಿವೆ.

> *Foreign electronic media have handled the information in India. We are overloaded with information. In otherwords we are soon passing from the age of informations into the age of communications noise. These foreign channels now seem determined to teach the art and craft of consumerism to the Indians at large.*[೩೨]

ಜಾಗತೀಕರಣದ ಸಂದರ್ಭದಲ್ಲಿ ಸಂವಹನ ಮಾಧ್ಯಮಗಳು ಅತೀವ ಭರವಸೆಗಳನ್ನು ನೀಡಿದಾಗ್ಯೂ, ಹಲವು ಸಮಸ್ಯೆ, ಸವಾಲುಗಳಿಗೆ ಸಂಬಂಧಿಸಿದಂತೆ ಪ್ರತಿಕೂಲ ಸನ್ನಿವೇಶವನ್ನೂ ಒದಗಿಸುವ ಆತಂಕ ಇಲ್ಲದೆ ಇಲ್ಲ. ನಂದಿನಿ ಪ್ರಸಾದ್ ಅದನ್ನೇ

> *While the globalization of the media offers the promise of greater interaction among people it can also create and reinforce images, attitudes and behaviour that may often be contradictory to the advancement of women.*[೩೩]

ಎಂದಿದ್ದಾರೆ. ಇಷ್ಟಾದರೂ ಜಾಗತಿಕ ಮಟ್ಟದಲ್ಲಿ ಭಾರತವನ್ನು ನಿಲ್ಲಿಸಿ ನೋಡದ ಹೊರತು ದೇಶದ ಪ್ರಗತಿಯ ಮಟ್ಟವನ್ನು ಅಳೆಯಲಾಗುವುದಿಲ್ಲ. ಹೀಗೆ ಜಾಗತೀಕರಣವನ್ನು ನಾವು ಒಪ್ಪಿಕೊಳ್ಳುತ್ತಾ, ಅದರ ಪರಿಣಾಮಗಳಲ್ಲಿ ನಮ್ಮನ್ನು ಗುರುತಿಸಿಕೊಳ್ಳುತ್ತಾ ಮುನ್ನಡೆಯುವುದಕ್ಕೆ 'ಸಂವಹನ ಕ್ಷೇತ್ರ' ನೀಡುವ ಪೂರಕ ಸಹಾಯವನ್ನು ಅಲ್ಲಗಳೆಯಲಾಗದು. ವಿವಿಧ ದೇಶಗಳ ಸಂಸ್ಕೃತಿ-ಸುವಿಚಾರಗಳನ್ನು ವಿನಿಮಯ ಮಾಡಿಕೊಳ್ಳದ ಹೊರತು ಸಂವಹನ ಕ್ಷೇತ್ರದ ಉದ್ದೇಶವೂ ಈಡೇರುವುದಿಲ್ಲ. ಆದರೂ ಮಹಾತ್ಮಾಗಾಂಧಿಯವರ - I want the cultures of all lands to blow as freely as possible in India. But I refuse to be sweft off my feet by any of them ಎನ್ನುವ ಮಾತಿನಂತೆ ನಮ್ಮ ಸಂಸ್ಕೃತಿಯ ಬುಡ ಭದ್ರವಾಗಿದೆಯೇ ನೋಡಿಕೊಳ್ಳಬೇಕು. ಆದ್ದರಿಂದಲೇ ನಮ್ಮ ದೇಶದ ನೆಲ-ಜಲ-ಜಾಯಮಾನಗಳಿಗೆ ಹೊಂದಿಕೊಳ್ಳುವಂತೆ ಆಧುನಿಕ ಸಂವಹನ ಜಾಲವನ್ನು ಅಳವಡಿಸಿಕೊಳ್ಳಬೇಕು. ಈ ನಿಟ್ಟಿನಿಂದ ಹೊಸ ಸಂಶೋಧನೆಗಳಾಗಬೇಕು. ಪ್ರಗತಿಯ ಹೊಸ ದಾರಿ ತೆರೆದುಕೊಳ್ಳಬೇಕು.

ಕೃಷಿ ಪ್ರಧಾನ ದೇಶವಾದ ಭಾರತದಲ್ಲಿ ಆಧುನಿಕ ಸಂವಹನ ಸಾಧನಗಳನ್ನು ಕೃಷಿ ಸಂಬಂಧೀ ಚಟುವಟಿಕೆಗಳಿಗೆ ವ್ಯಾಪಕವಾಗಿ ಬಳಸಿಕೊಳ್ಳುವುದು ಈವರೆಗೂ ಸಾಧ್ಯವಾಗದೇ ಇರುವುದು ಗಮನಾರ್ಹ ಅಂಶ. ಇಲ್ಲಿನ ಬಹುಪಾಲು ಜನತೆ ಕೃಷಿ ಹಾಗೂ ಸಂಬಂಧಿತ ಕಸುಬುಗಳನ್ನೇ ಹೆಚ್ಚಾಗಿ ಅವಲಂಬಿಸಿಕೊಂಡು, ಆಧುನಿಕ/ಔಪಚಾರಿಕ ಶಿಕ್ಷಣ, ವಿಜ್ಞಾನ-ತಂತ್ರಜ್ಞಾನಗಳ ಕಡೆ ಒಲವು ತೋರದಿರುವುದೂ, ಅಂತಹ ನಿರ್ಲಕ್ಷ್ಯಕ್ಕೆ ಅವರ ಆರ್ಥಿಕ ಸ್ಥಿತಿಯೂ ಪೂರಕವಾಗಿರುವುದೂ ಆಧುನಿಕ ಸಂವಹನ ಜಾಲದ ಸೃಷ್ಟಿಗೆ ಅಡ್ಡಿಯಾಗಿದೆ. ಇದರ ಜೊತೆಗೆ ಭಾರತೀಯ ಸಂಸ್ಕೃತಿಯಲ್ಲಿರುವ ಭಿನ್ನತೆ, ಬಹುಭಾಷೀಯತೆ, ಪ್ರಾದೇಶಿಕತೆಯೂ ಸಂವಹನ ತಂತ್ರಜ್ಞಾನದ ವರ್ಗಾವಣೆ ಹಾಗೂ ಸುಲಲಿತ ಬಳಕೆಗೆ ತೊಂದರೆ ಒಡ್ಡುತ್ತಿದೆ ಎನ್ನಿಸದಿರದು. ಹಾಗಾದರೆ ಇದೆಲ್ಲದರ ನಿವಾರಣೆಯಾಗಿ ಅಭಿವೃದ್ಧಿಶೀಲ ದೇಶವಾದ ಭಾರತವನ್ನು ಮುಂದುವರೆದ ದೇಶಗಳ ಸಾಲಿನಲ್ಲಿ ಸರಿದೂಗಿಸುವುದು ಹೇಗೆ? ಇದನ್ನು ಬಗೆಹರಿಸಲೂ ಸಂವಹನ ವಿಧಾನಗಳೇ ಅಸ್ತ್ರವಾಗಬೇಕಾಗುತ್ತದೆ. ಸಂವಹನ ಸಾಧನಗಳ ಮೂಲಕ ಜನರಿಗೆ ತಿಳುವಳಿಕೆ ಮಾಹಿತಿ ಒದಗಿಸಿ, ಅವರ ಅಜ್ಞಾನವನ್ನು ದೂರ ಮಾಡುವುದೇ ಮೊದಲ ಗುರಿಯಾಗಬೇಕು. ಇದನ್ನೇ ಪಿ.ಎನ್. ಮಲ್ಹಾನ್ ಹೀಗೆ ಹೇಳಿದ್ದಾರೆ.

> *Audio visual electronic technology, Audio Visual aid and indegeneous media and research supported oral and extension communication at the grass root level will help us to overcome considerably the disadvantages of multilinguialism, colossal illiteracy, diversity, big distances and even poverty of resources.*[೩೪]

ಜಾಗತೀಕರಣದ ಇಂದಿನ ಸಂದರ್ಭದಲ್ಲಿ ಭಾರತದಲ್ಲಿ ಮಾಧ್ಯಮಗಳು, ಅವುಗಳ ಉದ್ದೇಶಿತ ಗುರಿ ಸಾಧನೆ ಮತ್ತು ಗ್ರಾಹಕನ ಅಂತರಂಗಗಳನ್ನು ಕುರಿತು ವ್ಯಾಪಕವೂ ಆಳವೂ ಆದ ಸಂಶೋಧನಾ ಅಧ್ಯಯನ ನಡೆಯಬೇಕಾಗಿದೆ. ಇಲ್ಲಿನ ಗ್ರಾಮೀಣ ಜನತೆಗೆ ಪ್ರಪಂಚ ಮಟ್ಟದ ವಿಚಾರಗಳು ತಲುಪುತ್ತಿವೆಯೇ ಎಂಬುದನ್ನು ಈ ಕೆಳಕಾಣಿಸಿದ ಅಂಶಗಳ ಮೂಲಕ ಪರಿಶೀಲಿಸಬೇಕಾಗಿದೆ.

- ಆಧುನಿಕ ಸಂವಹನ ಮಾಧ್ಯಮಗಳ ಲಭ್ಯತೆ
- ತಿಳುವಳಿಕೆ/ಅಕ್ಷರಜ್ಞಾನ/ಭಾಷೆ
- ಸಮಯ, ವ್ಯವಧಾನ
- ಅಗತ್ಯ

ಒಂದು ಹೊತ್ತಿನ ತುತ್ತಿಗಾಗಿ ಹಪಹಪಿಸುತ್ತಿರುವ ಬಡ ಹಾಗೂ ಕಡು ಬಡಜನರಿಗೆ ಟೆಲಿವಿಷನ್, ಮೊಬೈಲ್ ಟೆಲಿಫೋನ್, ಕಂಪ್ಯೂಟರ್‌ನಂತಹ ಸಾಧನಗಳನ್ನು ಹೊಂದುವ ಅಗತ್ಯವಾಗಲೀ, ಆರ್ಥಿಕ ಸಾಮರ್ಥ್ಯವಾಗಲೀ ಇರುವುದಿಲ್ಲ. ದಿನವಿಡೀ ಹೊಲಗದ್ದೆಗಳಲ್ಲಿ ದುಡಿದು ದಣಿವ ಕೃಷಿ ಕಾರ್ಮಿಕನ ಮಟ್ಟಿಗೆ ಆಧುನಿಕ ಮಾಧ್ಯಮಗಳಿಗಿಂತ, ಪಾರಂಪರಿಕ ಮಾಧ್ಯಮಗಳೇ ಸ್ಥಳೀಯ ಕಲೆಯಿಂದಾಗಿ ಮನರಂಜನೀಯವೂ, ಅಗ್ಗವೂ, ಭಾಷಾದೃಷ್ಟಿಯಿಂದ ಅರ್ಥವಾಗುವಂತಹವೂ ಆಗಿರುತ್ತವೆ. ಅವನ ಮಟ್ಟಿಗೆ ಬದುಕು ಅಷ್ಟು ಸರಳವಾಗಿದ್ದರೆ ಸಾಕು. ಪರಿಸ್ಥಿತಿ ಹೀಗಿರುವಾಗ ಏಕಾಏಕಿ ಆಧುನಿಕ ಸಂವಹನ ಮಾಧ್ಯಮಗಳ

ಮೂಲಕ ಪ್ರಯೋಗಕ್ಕೆ ಇಳಿಯದೆ ಅಂತರ್‌ಸಂವಹನೆ ಹಾಗೂ ಪಾರಂಪರಿಕ ಸಮೂಹ ಸಂವಹನ ವಿಧಾನಗಳ ಮೂಲಕವೇ ಅಭಿವೃದ್ಧಿಪರ ಚಿಂತನೆಗಳನ್ನು ಮಂಡಿಸುವ ಪ್ರಯತ್ನವಾಗಬೇಕು. ಇದರಿಂದ ದ್ವಿಮುಖ-ಸಂವಹನ ಸಂಚಾರ ಸಾಧ್ಯ. ೮ ಎಂಎಂ. ಸಿನೆಮಾಗಳು, ಸಂಚಾರಿ ಸಿನೆಮಾಗಳು, ಭಿತ್ತಿಪತ್ರ, ಬೊಂಬೆಯಾಟ ಹೆಚ್ಚೆಂದರೆ ಸಣ್ಣ ಪತ್ರಿಕೆಗಳ ಹಾಗೂ ರೇಡಿಯೊ, ಸಮುದಾಯ ಚರ್ಚೆ ಇವುಗಳ ಮೂಲಕವೇ ಆಧುನಿಕ ಸಂವಹನ ಮಾಧ್ಯಮಗಳು ಇಂದಿನ ಜಗತ್ತಿನಲ್ಲಿ ಅವುಗಳ ಅಗತ್ಯ, ಬೆಳವಣಿಗೆ ಮತ್ತು ಬಳಕೆಯ ಬಗ್ಗೆ ತಿಳಿಸಿಕೊಡಬೇಕು. ಇಂತಹ ಮಾಧ್ಯಮಗಳು ಆ ವರ್ಗದ ಜನರ ಜೀವನಮಟ್ಟ ಸುಧಾರಿಸುವಲ್ಲಿ ಪ್ರಯೋಜನಕ್ಕೆ ಬರುವಂತೆ ರೂಪಿಸಬೇಕು. ಹೇಗೆಂದರೆ ರೈತಾಪಿ ವರ್ಗದವರ ಕಸುಬು, ಉಪಕಸುಬುಗಳಿಗೆ ಸಂಬಂಧಿಸಿದಂತೆ ಆಧುನಿಕ ಹಾಗೂ ವೈಜ್ಞಾನಿಕ ವಿಧಾನಗಳ ಅಳವಡಿಕೆ, ಲಾಭಕರ ಪ್ರಯೋಗಗಳ ಬಗ್ಗೆ ಸೂಕ್ತ ಮಾಹಿತಿಗಳನ್ನು ಪದೇ ಪದೇ ಮಾಧ್ಯಮಗಳ ಮೂಲಕ ಒದಗಿಸಬೇಕು.

ಸಂಪೂರ್ಣವಾಗಿ ಕಂಪ್ಯೂಟರ್ ನಿಯಂತ್ರಣಕ್ಕೆ ಒಳಪಟ್ಟಂತೆ ಭೂಮಿಯ ಸಾರವತ್ತತೆ, ಲವಣ ಸಾಂದ್ರತೆ, ಸೂಕ್ತ ಬೆಳೆ, ಬೇಸಾಯ ಕ್ರಮ, ಹವಾ ವರ್ತಮಾನಗಳನ್ನು ಪರೀಕ್ಷಿಸಿ ನಿರಂತರ ಮಾಹಿತಿ ಒದಗಿಸಬೇಕು. ಕರಾವಳಿ ಪ್ರದೇಶದಲ್ಲಿ ಮೀನುಗಾರಿಕೆ ಸಂಬಂಧಪಟ್ಟಂತೆ ಎಲ್ಲ ಚಟುವಟಿಕೆಗಳಿಗೂ ಕಂಪ್ಯೂಟರ್ ನಿಯಂತ್ರಣ ಅಳವಡಿಸಬಹುದು. ಒಂದು ಉದಾಹರಣೆಯಾಗಿ ಹಾಸನದಲ್ಲಿರುವ ಪಶು ಆಹಾರ ಘಟಕವನ್ನು ಹೆಸರಿಸಬಹುದು. ಅಲ್ಲಿ ಪಶು ಆಹಾರವಾಗಿ ಹಿಂಡಿ (Pellets) ತಯಾರಿಕೆಯನ್ನು ಪ್ರಾರಂಭದಿಂದ ಪ್ಯಾಕಿಂಗ್‌ವರೆಗೆ ಕಂಪ್ಯೂಟರ್ ನಿಯಂತ್ರಣಕ್ಕೆ ಒಳಪಡಿಸಲಾಗಿದೆ. ಹಾಗೆಯೇ ಕೃಷಿ ಸಂಬಂಧೀ ಚಟುವಟಿಕೆಗಳಲ್ಲೂ ಕಂಪ್ಯೂಟರ್ ಬಳಕೆಯ ಸಾಧ್ಯತೆಯನ್ನು ತಳ್ಳಿಹಾಕಲಾಗುವುದಿಲ್ಲ. ಒಂದು ಗುಂಡಿ ಒತ್ತುವ ಮೂಲಕ ಜಮೀನಿನಲ್ಲಿ ನಿಂತ ಟ್ರ್ಯಾಕ್ಟರ್ ಚಲಿಸುವಂತೆ, ಕಳೆ ಕೀಳುವಂತೆ, ಕಟಾವು ಮಾಡುವಂತೆ ಸಂವೇದನ (remote) ಶಕ್ತಿ ನೀಡಲು ಸಾಧ್ಯವೇ? ಎಂದೂ ಯೋಚಿಸಬಹುದು.

ತಮ್ಮ ದೈನಂದಿನ ಕೆಲಸಕಾರ್ಯಗಳಲ್ಲಿ, ಅದರಲ್ಲೂ ತಮ್ಮ ಆರ್ಥಿಕ ಸ್ಥಿತಿ ಸುಧಾರಣೆಗೆ ಉಪಯೋಗಕ್ಕೆ ಬರದಿದ್ದರೆ ಕೇವಲ ಮನರಂಜನೆಗಾಗಿ ಹಳ್ಳಿಗಾಡಿನ ಜನರು ಸಾವಿರಾರು ರೂಪಾಯಿ ಹಣ ಸುರಿದು ಟಿ.ವಿ., ಕಂಪ್ಯೂಟರ್ ಪಡೆಯಬೇಕೆ? ಆ ಸಾಮರ್ಥ್ಯ ಅವರಿಗಿದೆಯೇ? ಎಂಬ ತಾತ್ವಿಕ ಪ್ರಶ್ನೆಗಳು ಮೂಡುತ್ತವೆ.

## ಪ್ರಾದೇಶಿಕ ಭಾಷೆ - ಕನ್ನಡ

ಭಾಷೆಯ ಮೂಲಭೂತ ಉಪಯೋಗವೇ ಸಂವಹನೆ. ಹೇಳಬೇಕಾದ್ದನ್ನು ಹೇಳಿದಾಗ, ಕೇಳಿದವರು ಅದನ್ನು ಅರ್ಥಮಾಡಿಕೊಂಡಾಗ ಮಾತ್ರ ಭಾಷೆ ಬಳಕೆ ಸಾರ್ಥಕವಾಗುತ್ತದೆ. ಅದರಲ್ಲೂ ಕನ್ನಡದಂತಹ ಒಂದು ಪ್ರಾದೇಶಿಕ ಭಾಷೆ ಜಗತ್ತಿನ ಒಂದು ಕ್ಯಾನ್ವಾಸ್‌ನಲ್ಲಿ ಯಾವ ಸ್ಥಾನ ಪಡೆಯಬಹುದು? ಕರ್ನಾಟಕದ ಎಲ್ಲೆಗೇ ಸೀಮಿತಗೊಂಡ ಕನ್ನಡ ಇನ್ನೂ ನೆರೆಹೊರೆಯ ರಾಜ್ಯಗಳನ್ನೂ ಮೆಟ್ಟಿಲ್ಲ. ಪ್ರತಿಯೊಂದು ರಾಜ್ಯದಲ್ಲೂ ಅವರವರದೇ ಆಡಳಿತ ಭಾಷೆ ಇರುವಾಗ ಕನ್ನಡಕ್ಕೆ ಅಂತಹ ಸಾಧ್ಯತೆ ಸಾಧ್ಯವೂ ಅಲ್ಲ. ಗಡಿ ಪ್ರದೇಶಗಳಲ್ಲೂ ಇನ್ನೂ ಭಾಷಾ ತೊಡಕು ನಿವಾರಣೆಯಾಗಿಲ್ಲ. ಹೀಗಿರುವಾಗ ನಾಲ್ಕೈದು ಕೋಟಿ ಜನರ ಭಾಷೆಯನ್ನು ಆರುನೂರು ಕೋಟಿ ಜನ ಸಮುದಾಯದ ಮಧ್ಯೆ ಹೋಲಿಕೆಗೆ ತರಬಹುದೇ? ತರಬೇಕೇ?

ಜನತೆಯ ಬದುಕಿನ ದೃಷ್ಟಿಯಿಂದ ಪ್ರಾಂತೀಯ ಆಧಾರದ ಮೇಲೆ ಆಯಾಯ ಪ್ರದೇಶದಲ್ಲಿ ಬಳಕೆಯಲ್ಲಿರುವ ಮಾತೃಭಾಷೆಯ ಮೂಲಕ ಎಲ್ಲ ವ್ಯವಹಾರಗಳೂ ನಡೆಯಬೇಕಾದ್ದು ಆ ಪ್ರಾಂತ್ಯದವರ ಕರ್ತವ್ಯ; ಹಕ್ಕು. ಎಲ್ಲಕ್ಕಿಂತ

ಹೆಚ್ಚಾಗಿ ಅಗತ್ಯ. ಅದೇ ಆ ಪ್ರದೇಶದ ಆಡಳಿತ ಭಾಷೆಯೂ ಆಗಬೇಕು ಎನ್ನುವ ನಿಲುವೂ ಸಮಂಜಸ. ಸ್ಥಳೀಯ ಭಾಷೆ ತಿಳಿಯದ ಮೇಲೆ ಅಲ್ಲಿನ ಚಟುವಟಿಕೆಗಳ ಸ್ವರೂಪವೂ ತಿಳಿಯುವುದಿಲ್ಲ. ಅದನ್ನೇ ಜಾನ್ ಮೆಕೆರಲ್ ತನ್ನ ವ್ಯಾಕರಣ ಪುಸ್ತಕದ ಮುನ್ನುಡಿಯಲ್ಲಿ ಬರೆದಿದ್ದಾನೆ 'ಸ್ಥಳೀಯ ಭಾಷೆ ಬಾರದ ಅಧಿಕಾರಿ ಸಮರ್ಥ ಆಡಳಿತಗಾರನಾಗಲಾರ.'

ಪ್ರಾದೇಶಿಕ ಭಾಷೆಯೇ ಆ ಪ್ರದೇಶದ ಆಡಳಿತ ಭಾಷೆಯಾಗಬೇಕು ಎನ್ನುವುದೂ ಮಹತ್ವದ ವಿಷಯ. ಹಾಗೇ ಆ ಪ್ರಾದೇಶಿಕ ಭಾಷೆಯೇ ಅಲ್ಲಿನ ಶಿಕ್ಷಣ ವ್ಯವಸ್ಥೆಯಲ್ಲಿ ಕಡ್ಡಾಯ ವಿಷಯ/ಪ್ರಥಮ ಭಾಷೆಯಾಗಬೇಕೆನ್ನುವುದೂ ಸೂಕ್ತ. ಆದರೆ ಜಾಗತೀಕರಣದ ಇಂದಿನ ಸಂದರ್ಭದಲ್ಲಿ ಇದರ ಔಚಿತ್ಯದ ಬಗ್ಗೆ ಒಮ್ಮೆ ಅವಲೋಕಿಸಬೇಕಾಗುತ್ತದೆ. ಕನ್ನಡ ಒಂದು ಪ್ರದೇಶದ ಭೌಗೋಳಿಕ ಮಿತಿಯೊಳಗೆ ಚಲಾವಣೆಯಾಗುವ ಭಾಷೆ. ಈ ಭಾಷೆಯನ್ನಾಡುವ ಜನ ವಿಶ್ವದ ಬೇರೆ ಬೇರೆ ಭಾಗಗಳಲ್ಲಿ ವ್ಯಾಪಕವಾಗಿ ಅಥವಾ ವಸಾಹತುಗಳ ಹಾಗೆ ಬೀಡುಬಿಟ್ಟಿಲ್ಲ; ಅಲ್ಲಲ್ಲಿ ಹಂಚಿಹೋಗಿದ್ದಾರೆ. ಮತ್ತೊಂದೆಡೆ ಇಂಗ್ಲಿಷ್ ಅಮೆರಿಕಾ, ಇಂಗ್ಲೆಂಡ್‌ನಂತಹ ಪ್ರಬಲ ರಾಷ್ಟ್ರಗಳ ಭಾಷೆಯಾಗಿರುವುದಲ್ಲದೆ ವಿಶ್ವದ ಬಹುತೇಕ ಭಾಗಗಳಲ್ಲಿ ಪರಿಚಿತವಾಗಿದ್ದು ಬಳಕೆಯಲ್ಲಿದೆ. ಅಂತಹ ಭಾಷೆಯ ವಿರುದ್ಧ ಕನ್ನಡ ಪೈಪೋಟಿ ನೀಡಲಾಗದು. ಕೊಡಗು ಪ್ರಾಂತ್ಯದ ಭೌಗೋಳಿಕ ಸೀಮೆಯೊಳಗೆ ವ್ಯಾಪಕವಾಗಿ ಬಳಕೆಯಾಗುವ ಕೊಡವ ಭಾಷೆ ಹೇಗೆ ಇಡೀ ರಾಜ್ಯದ ಭೂಮಿಕೆಯಲ್ಲಿ ಪ್ರಮುಖ ಸ್ಥಾನ ಪಡೆಯಲಾರದೋ ಹಾಗೆ ಕನ್ನಡ ವಿಶ್ವದ ಚಿತ್ರದಲ್ಲಿ ಸ್ಥಾನ ಪಡೆಯಲಾರದು.

ಜಾಗತೀಕರಣಗೊಳ್ಳುತ್ತಿರುವ ಇಂದಿನ ಸಂದರ್ಭದಲ್ಲಿ ಒಬ್ಬ ಕನ್ನಡಿಗ, ಮಾಹಿತಿತಂತ್ರಜ್ಞಾನದಲ್ಲಿ ಪದವೀಧರನಾದವನ ಪಾಡೇನು ಎಂದು ಗುರುತಿಸಬೇಕು. ಕಡ್ಡಾಯವಾಗಿ ಕನ್ನಡ ಮಾಧ್ಯಮದಲ್ಲಿ ಕಲಿಯುವ ಗ್ರಾಮೀಣ ವಿದ್ಯಾರ್ಥಿ ಏಕಾಏಕಿ ಇಂಗ್ಲಿಷ್ ಮಾಧ್ಯಮಕ್ಕೆ ತಿರುಗಿ ಅದರಲ್ಲೂ ತಾಂತ್ರಿಕ ವಿಷಯವನ್ನು ಅಭ್ಯಾಸ ಮಾಡಿದರೆ, ಪದವಿಯ ನಂತರ ಜಾಗತಿಕ ಮಟ್ಟದ ಸಂಸ್ಥೆಯಲ್ಲಿ ಕಾರ್ಯನಿರ್ವಹಿಸುವ ಸಾಮರ್ಥ್ಯ ಅವನಲ್ಲಿ ಬರಬಹುದೇ? ಅದಕ್ಕೆ ಅವನು ಕನಿಷ್ಠ ಅರ್ಹತೆಯನ್ನಾದರೂ ಪಡೆಯಬಹುದೇ?

ಇದನ್ನೇ ಇತ್ತೀಚೆಗೆ ರಾಜ್ಯಸಭಾ ಸದಸ್ಯ ಡಾ. ಮನಮೋಹನ್ ಸಿಂಗ್ ಹೀಗೆ ಹೇಳಿದ್ದಾರೆ.

> *ಜಾಗತಿಕ ಮಟ್ಟದಲ್ಲಿ ನಮ್ಮ ಮಕ್ಕಳು ಪೈಪೋಟಿ ಎದುರಿಸಬೇಕಾದರೆ*
> *ಅವರಿಗೆ ಆಂಗ್ಲ ಶಿಕ್ಷಣ ನೀಡುವುದು ಅನಿವಾರ್ಯ. ಮಾತೃಭಾಷೆಯನ್ನು*
> *ಕಲಿಸಬೇಕು. ಅದರೊಂದಿಗೆ ಆಂಗ್ಲಶಿಕ್ಷಣ ನೀಡದಿದ್ದರೆ ನಮ್ಮ ಮಕ್ಕಳು*
> *ತಾಂತ್ರಿಕ ಜ್ಞಾನ ಪಡೆಯುವುದರಲ್ಲಿ ಹಿಂದೆ ಬೀಳುತ್ತಾರೆ.* [೩೯]

೨೦೦೦ದ ಇಸವಿಯಲ್ಲಿ ಬಾಗಲಕೋಟೆಯಲ್ಲಿ ನಡೆದ ೬೮ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ರಾಜ್ಯದ ಮುಖ್ಯಮಂತ್ರಿ ಶ್ರೀ ಎಸ್.ಎಂ. ಕೃಷ್ಣ ಅವರು ಉದ್ಘಾಟನಾ ಭಾಷಣ ಮಾಡುತ್ತಾ, ಕನ್ನಡ ಮಾಧ್ಯಮದಲ್ಲಿ ಒಂದರಿಂದ ಹತ್ತನೆ ತರಗತಿಯವರೆಗೆ ಶಿಕ್ಷಣ ಪಡೆಯುವ ವಿದ್ಯಾರ್ಥಿಗಳಿಗೆ ಎಲ್ಲ ರೀತಿಯ ವೃತ್ತಿಶಿಕ್ಷಣ ಪ್ರವೇಶಕ್ಕೆ ಆದ್ಯತೆ ನೀಡುವುದಾಗಿ ತಿಳಿಸಿರುವುದು ಸ್ತುತ್ಯಾರ್ಹವೆನಿಸಿದೆ.

ಮತ್ತೊಂದೆಡೆ, ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲಿ ವಿಶ್ವದಲ್ಲೇ ತನ್ನ ಛಾಪು ಮೂಡಿಸಿದ ಅಮೆರಿಕದ ಬಿಲ್‌ಗೇಟ್ಸ್ ೧೪ ಸೆಪ್ಟೆಂಬರ್ ೨೦೦೦ದಂದು ಭಾರತಕ್ಕೆ ಭೇಟಿ ನೀಡಿದ ಸಂದರ್ಭದಲ್ಲಿ ಕನ್ನಡದ ಒಂದು ಸೂತ್ರ ಮತ್ತು ಒಂದು ಸಂಕೇತವನ್ನು ಹೊಂದುವ ಏಕರೂಪಿ ಸಾಫ್ಟ್‌ವೇರ್‌ವೊಂದನ್ನು ಅಭಿವೃದ್ಧಿಪಡಿಸುವುದಾಗಿ ಮುಖ್ಯಮಂತ್ರಿ ಎಸ್.ಎಂ. ಕೃಷ್ಣ

ಅವರಿಗೆ ನೀಡಿರುವ ಭರವಸೆ, ಜಗತ್ತಿನಲ್ಲಿ ಚಲಾವಣೆಯ, ಆಡುಭಾಷೆಯಾಗಿ ಅಲ್ಲದಿದ್ದರೂ, ಕನ್ನಡವನ್ನು ಇಂಟರ್‌ನೆಟ್ ಜಾಲದ ಪ್ರಮುಖ ಭಾಷೆಯಾಗಿ ಅಳವಡಿಸುವ ಸಾಧ್ಯತೆ ವ್ಯಕ್ತವಾಗಿದೆ.

ಜಾಗತೀಕರಣದಿಂದಾಗಿ ಅಭೂತಪೂರ್ವ ಬದಲಾವಣೆಯಾಗುತ್ತಿರುವ ಇಂದಿನ ಸಂದರ್ಭದಲ್ಲಿ ಸಂವಹನ ಮಾಧ್ಯಮಗಳು ಅದರಲ್ಲೂ ಕನ್ನಡದ ಸಂವಹನ ಮಾಧ್ಯಮಗಳು ಸಮೂಹ ಸಂಸ್ಕೃತಿಯ ದಾಳಿಗೆ ಒಳಗಾಗಲಿವೆಯೇ? ಹಾಗೊಂದು ವೇಳೆ ವಿದೇಶೀ ಸಂಸ್ಕೃತಿಯ ತೆಕ್ಕೆಗೆ ಭಾರತೀಯ ಭಾಷಾಪತ್ರಿಕೆ/ಮಾಧ್ಯಮಗಳು ಒಳಪಟ್ಟಿದ್ದೇ ಆದರೆ ಕುಶಾಗ್ರಮಟ್ಟದಲ್ಲಿ ಮೊಳೆತು ನಿಂತಿರುವ ಭಾರತೀಯರ ಮೂಲಭಾವನೆಗಳಿಗೆ ಪೆಟ್ಟು ಬೀಳಬಹುದೇ?

> *It is the Hindi and regional language news papers which will protect the Indian ethoes and culture because they are firmly rooted in the psyche of their readers.*[೩೬]

ವಿಶ್ವಮಟ್ಟದಲ್ಲಿ ಕನ್ನಡವನ್ನು ಮಾಹಿತಿ ತಂತ್ರಜ್ಞಾನದ ಜಾಲದಲ್ಲಿ ಅಳವಡಿಸುವುದರ ಪ್ರಯೋಜನವೇನು? ಸಂವಹನೆಯ ಉದ್ದೇಶಿತ ಗುರಿ ಸಾಧನೆ ಸಾಧ್ಯವೇ? ಅದು ಒಂದು ವರ್ಗದ ಜನತೆಗಷ್ಟೇ ಸೀಮಿತಗೊಳ್ಳುವುದೇ? ಈವತ್ತಿನ ಮಟ್ಟಿಗೆ ಇಂಟರ್‌ನೆಟ್ ಸೇರುವ ಕನ್ನಡ, ದಶಕಗಳ ನಂತರವಾದರೂ ಜಗತ್ತಿನೆಲ್ಲೆಡೆ ಪರಿಚಿತ ಭಾಷೆಯಾಗಬಲ್ಲುದೆ? ಅಥವಾ ತಾನೇ ಸ್ವರೂಪ ಬದಲಿಸಿಕೊಂಡು ನಿಲ್ಲುವುದೇ? ಕನ್ನಡಕ್ಕೆ ಅಂತಹ ಮಾನ್ಯತೆ ಅವಶ್ಯಕವೇ? ಹಾಗೊಂದು ವೇಳೆ ಜಗತ್ತಿಗೆ ಒಪ್ಪಿಗೆಯಾಗುವ ಈ ಭಾಷೆ ಬಾಹ್ಯ ಒತ್ತಡಗಳ ಮಧ್ಯೆಯೂ, ತನ್ನ ಮೂಲ ಸ್ವರೂಪವನ್ನು ಉಳಿಸಿಕೊಳ್ಳಬಲ್ಲುದೆ? ಎಂಬೆಲ್ಲ ಮೂಲಭೂತ ಪ್ರಶ್ನೆಗಳು ಜಾಗತೀಕರಣದ ಇಂದಿನ ಸಂದರ್ಭದಲ್ಲಿ ಉದ್ಭವಿಸುತ್ತಿವೆ.

**ಅಡಿಟಿಪ್ಪಣಿ**

೧. ಡಾ. ತಾಳ್ತಜೆ ವಸಂತಕುಮಾರ್, ಸಾಂಸ್ಕೃತಿಕ ಸಂಶೋಧನೆ - ಒಂದು ಮುನ್ನೋಟ, ೧೯೯೮, ಪು - ೧
೨. ಪ್ರೊ. ಲಕ್ಷ್ಮಣ ತೆಲಗಾವಿ, ಕರ್ನಾಟಕ ಸಂಸ್ಕೃತಿ ಸ್ಥೂಲ ನೋಟ : ಅವಲೋಕನ - ಕಲ್ಪನೆ, ೧೯೯೭, ಪು - ೧
೩. ಡಾ. ಸಿ. ಮಹಾದೇವ್, ಕರ್ನಾಟಕ ಸಂಸ್ಕೃತಿ ಸ್ಥೂಲ ನೋಟ : ಅವಲೋಕನ - ಕಲ್ಪನೆ, ೧೯೯೭, ಪು - ೧
೪. ಡಾ. ಸಿ.ಆರ್. ಗೋವಿಂದರಾಜ್, ಕರ್ನಾಟಕ ಸಂಸ್ಕೃತಿ ಸ್ಥೂಲ ನೋಟ : ಅವಲೋಕನ - ಕಲ್ಪನೆ, ೧೯೯೭, ಪು - ೧೨
೫. ಡೆನಿಸ್ ಮ್ಯಾಕ್ವೆಲ್, Towards a Sociology of mass communication, ೧೯೬೯, ಪು - ೨೨
೬. ವೈಟ್ ಮ್ಯಾಕ್‌ಡೊನಾಲ್ಡ್
ಉಲ್ಲೇಖ : Mass Culture, Language and arts in India, ಪು - ೧೨
೭. ಹ್ಯಾನ್ಸ್‌ಮ್ಯಾಗ್ನಸ್ ಎಂಜೆನ್ಸ್‌ಬರ್ಗರ್, ಮೆದುಳಿನ ಕೈಗಾರಿಕೀಕರಣ, ಸಂ : ಕನ್ನಡ ಅಧ್ಯಯನ - ೨, ೧೯೯೪, ಪು - ೫
೮. ರೋಜರ್ ಎವರೆಟ್ ಮತ್ತು ಶೂಮೇಕರ್, Communication of innovations : A cross cultural approach, ೧೯೭೧, ಪು - ೧೧
೯. ದೇವದಾಸ್, Directives of development, ೧೯೭೫, ಪು - ೧೫
೧೦. ನವೀನ್ ಚಂದ್ರ ಜೋಷಿ, Development strategy in third world, Ed : Yojana Vol. 23, No. 14 & 15, ೧೯೭೯
೧೧. ಡೇನಿಯಲ್ ಲರ್ನರ್, Communication and change in developing countries, ೧೯೬೭, ಪು - ೩೧೬
೧೨. ಬಿ.ಜಿ. ವರ್ಗೀಸ್, A philosophy of Communication : the view from India, ೧೯೮೦, ಪು - ೧೩೭
೧೩. ಎಡ್ವರ್ಡ್ ಡಬ್ಲ್ಯು. ಪ್ಲೋಮನ್, Development approaches and their implications for communication policy, ೧೯೮೦, ಪು - ೭೭
೧೪. ಎಚ್.ವೈ. ಶಾರದಾ ಪ್ರಸಾದ್, Some problems of development communication, ೧೯೮೦, ಪು - ೧೫೧
೧೫. ಮೆನಫೀ ಮತ್ತು ಮೆನಫೀ, Communication in Village India : A social experiment, ೧೯೬೪, ಪು - ೧೧೭
೧೬. ಜೈ ಪ್ರಕಾಶ್ ಗುಪ್ತ, Communication strategy and social development, Ed : communicator Vol. 13, No. 3 & 4, ೧೯೭೮, ಪು - ೩೫
೧೭. ಯು.ಕೆ. ಶ್ರೀವಾಸ್ತವ
ಉಲ್ಲೇಖ : Media policy and National Development, ೧೯೯೬, ಪು - ೫೯
೧೮. ಸಕ್ಸೇನ
ಉಲ್ಲೇಖ : Media policy and National Development, ೧೯೯೬, ಪು - ೫೯
೧೯. ಎಂ.ಆರ್. ದುವಾ, National Communication policy, Ed : National Media policy, ೧೯೯೬, ಪು - ೧೫
೨೦. ಸಿಯಾನ್ ಮ್ಯಾಕ್‌ಬ್ರೈಡ್, Many voices and one world, ೧೯೮೨, ಪು - ೨೦೭
೨೧. ಜೋನಿ ಸಿ. ಜೋಸೆಫ್, Mass media & rural development, ೧೯೯೭, ಪು - ೧೦
೨೨. ವೈ.ವಿ. ಲಕ್ಷ್ಮಣರಾವ್, Communication & development, ೧೯೯೬, ಪು - ೬
೨೩. ಜವಹರಲಾಲ್ ನೆಹರು, ಅಖಿಲ ಭಾರತ ಪತ್ರಿಕಾ ಸಂಪಾದಕರ ಸಮ್ಮೇಳನವನ್ನುದ್ದೇಶಿಸಿ ಮಾಡಿದ ಭಾಷಣ, ೧೯೫೦
೨೪. ಡಿ.ಆರ್. ಮಂಕೇಕರ್, The press versus the Government, ೧೯೭೮, ಪು - ೨೧
೨೫. ಡಾ. ಕರೀಗೌಡ ಬೀಚನಹಳ್ಳಿ, ಏನೋ ಉಳಿಯುವುದು ಮತ್ತೆ, ೧೯೯೮, ಪು - ೨೯
೨೬. ಅಶನ್‌ಕಾಂತ್ ನಿಂಬಾರ್ಕ್, Is marshal McLuhan a media prophet, Ed : Communicator Vol. 16 No.2, ೧೯೮೧, ಪು - ೨೮
೨೭. ಅಶನ್‌ಕಾಂತ್ ನಿಂಬಾರ್ಕ್, Is marshal McLuhan a media prophet, Ed : Communicator Vol. 16 No.2, ೧೯೮೧, ಪು - ೨೮, ೨೯
೨೮. ನಾರಾಯಣನ್ ಮೆನನ್, The Changing Media Scene, Ed : Communicator Vol. 16 No. 3, ೧೯೮೧, ಪು - ೨೭
೨೯. ಕನ್ನಡ ಪ್ರಭ, ವಿಶೇಷ ಪುರವಣಿ, ೨.೧೦.೨೦೦೦, ಪು - ೩
೩೦. ಪ್ರೊ. ಎಂ.ಎನ್. ಶ್ರೀನಿವಾಸ್, Foreigners on the Indian Media Scene, Ed : Foreign ownership of media, ಉಚಿತ ಆವರ್ತನೆ

೩೧. ಕೃಷ್ಣಕಾಂತ್, News today : coverage for masses, Ed : Mass media in India 1994-95, ೧೯೯೫, ಪು - ೧೭
೩೨. ವೀರ್‌ಬಲಾ ಅಗರ್‌ವಾಲ್, Media policy and National development, Ed : National media policy, ೧೯೯೬ ಪು - ೫೮
೩೩. ನಂದಿನಿ ಪ್ರಸಾದ್, Media policy and women issues, Ed: National media policy, ೧೯೯೬, ಪು - ೧೪
೩೪. ಪಿ.ಎನ್. ಮಲ್ಹಾನ್, Communication media - Yesterday, today & tommorrow, ೧೯೯೨, ಪು - ೧೮೮
೩೫. ಡಾ. ಮನಮೋಹನ್ ಸಿಂಗ್, ವಿಶ್ವ ಬಂಡವಾಳ ಹೂಡಿಕೆದಾರರ ಸಮಾವೇಶದ ಸಮಾರೋಪ ಭಾಷಣದಲ್ಲಿ (೧೧.೭.೨೦೦೦) ವರದಿ : ವಿಜಯ ಕರ್ನಾಟಕ ದೈನಿಕ, ೧೨.೭.೨೦೦೦
೩೬. ಕೃಷ್ಣಕಾಂತ್, News today : coverage for masses, Ed : Mass media in India 1994-95, ೧೯೯೫, ಪು - ೧೬

ಅಧ್ಯಾಯ : ನಾಲ್ಕು

# ದೂರದರ್ಶನ

೧. ದೂರದರ್ಶನ ಧ್ಯೇಯೋದ್ದೇಶ

೨. ಕಾರ್ಯಕ್ರಮ ವೈವಿಧ್ಯ

೩. ಸುದ್ದಿ - ಸಂಗ್ರಹಣೆ, ಮಂಡನೆ

೪. ದೂರದರ್ಶನ ಕ್ಷೇತ್ರದ ಸವಾಲುಗಳು

ಇದು ಸಂವಹನ ಯುಗ. ತಂತ್ರಜ್ಞಾನ ಬೆಳೆದಂತೆ ಅನೇಕ ಬಗೆಯ ಸಂವಹನ ಮಾಧ್ಯಮಗಳೂ ಬೆಳೆದು ನಿಂತಿವೆ. ಇಂದು ಲಭ್ಯವಿರುವ ವಿವಿಧ ನಮೂನೆಯ ಆಧುನಿಕ ಮಾಧ್ಯಮಗಳ ಬಗ್ಗೆ ಈ ಮಹಾಪ್ರಬಂಧದ ೨ನೇ ಅಧ್ಯಾಯದಲ್ಲಿ ಪ್ರಸ್ತಾಪಿಸಲಾಗಿದೆ. ಮಹಾಪ್ರಬಂಧದ ವಿಷಯ ಮತ್ತು ವ್ಯಾಪ್ತಿಯನ್ನು ಗಮನದಲ್ಲಿಟ್ಟುಕೊಂಡು ಕನ್ನಡ ಭಾಷೆಯ ಅಭಿವೃದ್ಧಿಗೆ ಪೂರಕ ನೆರವು ನೀಡಬಹುದಾದ ಮೂರು ಪ್ರಮುಖ ಮಾಧ್ಯಮಗಳನ್ನು ಮಾತ್ರ ವಿಸ್ತೃತ ಅಧ್ಯಯನಕ್ಕೆ ಆರಿಸಿಕೊಳ್ಳಲಾಗಿದೆ. ಈ ದೃಷ್ಟಿಯಿಂದ ದೂರದರ್ಶನ, ಆಕಾಶವಾಣಿ ಮತ್ತು ಪತ್ರಿಕಾ ಮಾಧ್ಯಮವನ್ನು ಆಯ್ಕೆ ಮಾಡಿಕೊಂಡಿದ್ದು, ಮೊದಲಿಗೆ ದೂರದರ್ಶನ ಮಾಧ್ಯಮ ಕುರಿತ ಈ ಅಧ್ಯಾಯವನ್ನು ಮಂಡಿಸಲಾಗುತ್ತಿದೆ.

## ೧. ದೂರದರ್ಶನದ ಧ್ಯೇಯೋದ್ದೇಶ

**ಕಿರುತೆರೆ** ಎಂದೇ ಹೆಸರಾದ ದೂರದರ್ಶನ 'ಸಾಮಾಜಿಕ ಪರಿವರ್ತನೆಯ ಸಾಧಕ' ಎನಿಸಿಕೊಂಡಿದೆ. ಈ ದೃಶ್ಯ - ಶ್ರವ್ಯ ಮಾಧ್ಯಮ ಸಾಮಾನ್ಯ ಜನಜೀವನದ ಮೇಲೆ ಅಗಾಧ ಪರಿಣಾಮ ಬೀರುತ್ತದೆ, ಬೀರುತ್ತಿದೆ ಎಂದು ಹೇಳಲಾಗುತ್ತಿದೆಯಾದರೂ, ವಿದೇಶಗಳಿಗೆ ಹೋಲಿಸಿದಾಗ ಭಾರತೀಯ ಟೆಲಿವಿಷನ್ ಅಂತಹ ತೀವ್ರತರ ಪರಿಣಾಮ ಬೀರುತ್ತಿದೆಯೇ ಎಂದು ಯೋಚಿಸಬೇಕಾಗುತ್ತದೆ. ಅದಕ್ಕೆ ಕಾರಣಗಳನ್ನು ಈ ರೀತಿ ಹೇಳಬಹುದು :

- ದೂರದರ್ಶನ ಸಮಾಜದ ಎಲ್ಲ ವರ್ಗದ ಜನರನ್ನು ತಲುಪುತ್ತಿದೆಯೇ?
- ಸಾಮಾಜಿಕ ಪರಿವರ್ತನೆಯ ಪರಿಣಾಮ ಬೀರುವಂತಹ ಕಾರ್ಯಕ್ರಮಗಳನ್ನು ಪ್ರಸಾರ ಮಾಡಲಾಗುತ್ತಿದೆಯೇ?
- ಮಾಡಿದರೂ, ಉದ್ದೇಶಿತ ಪ್ರೇಕ್ಷಕರನ್ನು ತಲುಪುವಂತೆ ಕಾಲ ಹಾಗೂ ಕಾಲಾವಧಿ ನೀಡಲಾಗುತ್ತಿದೆಯೇ?
- ಸರ್ಕಾರಿ ಸ್ವಾಮ್ಯದ ಟೆಲಿವಿಷನ್ ವಾಹಿನಿಯಲ್ಲದೆ ಖಾಸಗಿ ಒಡೆತನದ ವಾಹಿನಿಗಳಿಗೂ ಏಕರೂಪದ ಜವಾಬ್ದಾರಿ ಇರಬೇಕೇ? ಇದೆಯೇ?

ಈ ಎಲ್ಲ ಪ್ರಶ್ನೆಗಳಿಗೆ ಸಕಾರಾತ್ಮಕ ಉತ್ತರ ಸಿಗುವುದಾದರೆ ದೂರದರ್ಶನದಂತಹ ಅತ್ಯಂತ ಪ್ರಭಾವಿ ಮಾಧ್ಯಮ ಸಮಾಜದ ಪರಿವರ್ತನೆಗೆ, ಅಭಿವೃದ್ಧಿಗೆ ಪೂರಕ ಸಾಧನ ಎನಿಸಿಕೊಳ್ಳಬಹುದು. ಸ್ವಲ್ಪ ವ್ಯತ್ಯಾಸವಾದರೂ ಮಾರಕವೂ ಆಗಬಹುದು. ಏಕೆಂದರೆ ಒಂದು ದೃಶ್ಯ-ಶ್ರವ್ಯ ಮಾಧ್ಯಮವಾಗಿ ಅದು ಸಮಾಜದ ಮೇಲೆ ಬೀರುವ ಪ್ರಭಾವ ಅತೀ ಗಾಢವಾಗಿರುತ್ತದೆ. ಉದಾಹರಣೆಗೆ ದೂರದರ್ಶನದ ಡಿಡಿ - ೧ರ ಮೂಲಕ ೧೯೯೮ರಲ್ಲಿ ಪ್ರಸಾರ ಮಾಡಲಾಗುತ್ತಿದ್ದ 'ಶಕ್ತಿಮಾನ್' ಎನ್ನುವ ಮಕ್ಕಳ ಮನರಂಜನಾ ಕಾರ್ಯಕ್ರಮವನ್ನು ನೋಡಿದ ಇಬ್ಬರು ಹೆಣ್ಣು ಮಕ್ಕಳು ಧಾರವಾಡ ಜಿಲ್ಲೆಯ ಸತ್ತೂರ್ ಎಂಬಲ್ಲಿ, ಕಾರ್ಯಕ್ರಮದಲ್ಲಿ

ನಡೆಯುವ ಸಾಹಸವನ್ನು ನಿಜಜೀವನದಲ್ಲಿ ಮಾಡಲು ಹೋಗಿ ಒಂದು ಹುಡುಗಿ ಸಾವಿಗೀಡಾದ ದುರಂತ ನಮ್ಮ ಮುಂದಿರುವ ವರದಿಗಳಲ್ಲಿದೆ. ಅದಕ್ಕೂ ಹಿಂದೆ ದೇಶದ ಪ್ರಮುಖ ವಿಮಾನವೊಂದರ ಅಪಹರಣದ ನಾಟಕಕ್ಕೆ ದೂರದರ್ಶನದ ಕಾರ್ಯಕ್ರಮವೇ ಪ್ರೇರಣೆ ಎಂದು ಅದನ್ನು ಅಪಹರಿಸಿದ ಇಬ್ಬರು ಯುವಕರು ಹೇಳಿರುವುದೂ ದಾಖಲೆಯಲ್ಲಿದೆ.

ಇಂತಹ ನಿದರ್ಶನಗಳು ಕಣ್ಮುಂದೆ ಇರುವ ಕಾರಣ ಭಾರತದಲ್ಲಿ ಟೆಲಿವಿಷನ್ ವಿದೇಶಗಳಲ್ಲಿರುವಂತೆ ಸಾಮಾಜಿಕ ಬದಲಾವಣೆ ಹಾಗೂ ಅಭಿವೃದ್ಧಿಯ ಅಸ್ತ್ರವಾಗಿಲ್ಲ ಎಂದೂ ವಾದಿಸುವವರಿದ್ದಾರೆ.

> *TV in India is not proved to be an effective medium for social change and development. TV has a great potential to change a traditional society into a modern society. It has been contented to be a medium of entertainment.*[೧]

ವೈ.ಕೆ. ಡಿಸೋಜ ಅವರ ಈ ಹೇಳಿಕೆ ಕನ್ನಡ ಟಿ.ವಿ.ಯ ಸಂದರ್ಭದಲ್ಲಿ ಸತ್ಯಕ್ಕೆ ಹತ್ತಿರವಾಗಿರುವಂತಿದೆ. ನಾನು ಅಧ್ಯಯನದ ದೃಷ್ಟಿಯಿಂದಲೂ ಕನ್ನಡ ಕಾರ್ಯಕ್ರಮಗಳನ್ನು ಪ್ರಸಾರ ಮಾಡುವ ಟಿ.ವಿ. ವಾಹಿನಿಗಳ ಸಂದರ್ಭದಲ್ಲೇ ಚರ್ಚಿಸುವುದು ಸೂಕ್ತ ಎಂದು ಭಾವಿಸುತ್ತೇನೆ. ಅಧ್ಯಯನದ ದೃಷ್ಟಿಯಿಂದ 'ದೂರದರ್ಶನ' ಎನ್ನುವ ಪದವನ್ನು ಟೆಲಿವಿಷನ್ ಎನ್ನುವುದಕ್ಕೆ ಸಂವಾದಿಯಾಗಿ ಬಳಸಿದ್ದೇನೆ. ಅನೇಕ ವಾಹಿನಿಗಳಿರುವುದರಿಂದ ಅವನ್ನೆಲ್ಲ ದೂರದರ್ಶನ ವಾಹಿನಿಗಳೆಂದೇ ಕರೆಯುತ್ತಾ, ಪ್ರಸಾರ ಭಾರತಿಯಡಿಯಲ್ಲಿರುವ ವಾಹಿನಿಯನ್ನು (ಸಾಮಾನ್ಯವಾಗಿ ದೂರದರ್ಶನ ಎಂದೇ ಕರೆಯಲಾಗುವ) ಡಿಡಿ-೧ ಎಂದೂ, ಅದರ ಉಪಗ್ರಹ ವಾಹಿನಿಯನ್ನು ಡಿಡಿ-೯ (ಚಂದನ) ಎಂದೂ ಹೆಸರಿಸಿದ್ದೇನೆ. ಕನ್ನಡದಲ್ಲಿ ಈಗ ಅಂದರೆ ೨೦೦೧ನೇ ಇಸವಿಯ ಪ್ರಾರಂಭದ ಹೊತ್ತಿನಲ್ಲಿ ಐದು ಪ್ರಮುಖ ಉಪಗ್ರಹ ಚಾನೆಲ್‌ಗಳು ಪ್ರಸಾರ ಮಾಡುತ್ತಿವೆ. ಇವುಗಳಲ್ಲಿ ಒಂದು ಸರ್ಕಾರಿ ಸ್ವಾಮ್ಯದಲ್ಲಿದ್ದು ಇದೀಗ ಸ್ವಾಯತ್ತತೆ ಪಡೆದಿರುವ 'ಪ್ರಸಾರ ಭಾರತಿ'ಯ ದೂರದರ್ಶನ (ಡಿಡಿ-೧), ಉಳಿದ ನಾಲ್ಕು ಖಾಸಗಿ ಒಡೆತನದ ವಾಹಿನಿಗಳು. ಅವುಗಳ ಹೆಸರು ಹೀಗಿದೆ:

೧. ದೂರದರ್ಶನ - ಡಿಡಿ-೧

೨. ದೂರದರ್ಶನ - ಚಂದನ

೩. ಉದಯ

೪. ಉಷೆ

೫. ಉದಯ ನ್ಯೂಸ್

೬. ಸುಪ್ರಭಾತ

೭. ಕಾವೇರಿ

೮. ಈಟೀವಿ - ಕನ್ನಡ

ಇಲ್ಲಿ ಹೆಸರಿಸಿರುವ ೮ ವಾಹಿನಿಗಳ ಪೈಕಿ ಒಂದು ವಾಹಿನಿ (ಉದಯ ನ್ಯೂಸ್) ಸಂಪೂರ್ಣವಾಗಿ ಸಮಾಚಾರ ವಾಹಿನಿಯೇ ಆಗಿದೆ. ಉಷೆ ಹಾಗೂ ಸದ್ಯಕ್ಕೆ ಸುಪ್ರಭಾತ ಸಂಪೂರ್ಣ ಮನರಂಜನಾ ವಾಹಿನಿಗಳೆನಿಸಿವೆ. ಉದಯ, ಕಾವೇರಿ, ಈಟೀವಿ

ಹಾಗೂ ಚಂದನ ವಾಹಿನಿಗಳು ವಾರ್ತೆಗಳಲ್ಲದೆ ಕಥಾಧಾರಿತ ಧಾರಾವಾಹಿಗಳು, ಚಲನಚಿತ್ರ ಹಾಗೂ ಚಲನಚಿತ್ರಾಧಾರಿತ ಮನರಂಜನಾ ಕಾರ್ಯಕ್ರಮಗಳನ್ನು ಬಿತ್ತರಿಸುತ್ತಿವೆ. ಡಿಡಿ - ೧ ವಾಹಿನಿ ಮಾತ್ರ ವಾರ್ತೆ, ಸ್ವಲ್ಪ ಮಟ್ಟಿಗೆ ಮನರಂಜನೆ, ಸರ್ಕಾರಿ ಸ್ವಾಮ್ಯದ ಮಾಧ್ಯಮವಾಗಿದ್ದುದರಿಂದ ಸರ್ಕಾರದ ಸೂಚನೆಯಂತೆ ಕೆಲವು ಅಭಿವೃದ್ಧಿಪರ ಕಾರ್ಯಕ್ರಮಗಳನ್ನು ಪ್ರಸಾರ ಮಾಡುತ್ತಿದೆ. ಬಹುತೇಕ ವಾಹಿನಿಗಳು ಮನರಂಜನಾ ಹಾಗೂ ಮಾಹಿತಿ ನೀಡುವ ವಾಹಿನಿಗಳೆನಿಸಿವೆಯೇ ಹೊರತು ಸಾಮಾಜಿಕ ಬದಲಾವಣೆಗೆ ಒತ್ತು ನೀಡುವ ವಾಹಿನಿಗಳಾಗಿ ಕೆಲಸ ಮಾಡುತ್ತಿಲ್ಲ ಎನ್ನುವುದು ಗಮನಾರ್ಹ. ಹಾಗೊಂದು ವೇಳೆ ಅಂತಹ ಬದಲಾವಣೆಯ ಕುರುಹುಗಳು ಕಂಡುಬಂದರೂ ಅದು ಒಂದು ನಿರ್ದಿಷ್ಟ ಗುರಿಯೊಂದಿಗೆ, ಉದ್ದೇಶದೊಂದಿಗೆ ನಡೆಯುವಂತಹ ಬದ್ಧತೆ ಕಂಡುಬರುತ್ತಿಲ್ಲ.

ಕನ್ನಡ ವಾಹಿನಿಗಳ ಸಂದರ್ಭದಲ್ಲಿ ಜನಪ್ರಿಯತೆಯನ್ನೇ ಗುರಿಯಾಗಿಸಿಕೊಂಡ ಖಾಸಗಿ ವಾಹಿನಿಗಳು ಒಂದು ಕಡೆ, ಹಳೆಯ ಧೋರಣೆಗಳಿಂದ ಪೂರ್ಣವಾಗಿ ಹೊರಬಂದು 'ಹೊಸತನ' ಬೆಳೆಸಿಕೊಳ್ಳದ ಡಿಡಿ - ೧ರಂತಹ ವಾಹಿನಿಗಳು ಮತ್ತೊಂದು ಕಡೆ ಸಮಾಜದಲ್ಲಿ ಏಕಸ್ವರೂಪದ ಸಂಸ್ಕೃತಿಯನ್ನು ಬೆಳೆಸಲು ಸಫಲವಾಗುತ್ತಿಲ್ಲ ಎಂದು ಹೇಳಬಹುದು. ಅದರಲ್ಲೂ ಖಾಸಗಿ ವಾಹಿನಿಗಳು ಒಡ್ಡುತ್ತಿರುವ ಪೈಪೋಟಿ ಅಷ್ಟು ಆರೋಗ್ಯಕರವೂ ಆಗಿಲ್ಲ ಎನ್ನುವುದಕ್ಕೆ ಇತ್ತೀಚಿನ ಒಂದು ಘಟನೆ ಉದಹರಣೀಯ. ೨೦೦೦ದ ಇಸವಿಯ ಡಿಸೆಂಬರ್ ೧೦ರಂದು ಬೆಂಗಳೂರಿನಲ್ಲಿ ನಡೆದ 'ಧನ್ಯ ಮಿಲನ' ಎನ್ನುವ ಡಾ. ರಾಜ್‌ಕುಮಾರ್ ಅವರ ಅಭಿನಂದನಾ ಸಮಾರಂಭದ ಸಂದರ್ಭದಲ್ಲಿ ಖಾಸಗಿ ವಾಹಿನಿಗಳು ನೇರ ಪೈಪೋಟಿಗಿಳಿದವು ಎಂದು ಪತ್ರಿಕೆಗಳು ವರದಿ ಮಾಡಿವೆ. ಈ ಕಾರ್ಯಕ್ರಮದ ನೇರ ಪ್ರಸಾರದ ಹಕ್ಕನ್ನು ಪಡೆದಿದ್ದ ಉದಯ ಟಿವಿ ವ್ಯವಸ್ಥಾಪಕರು, ವರದಿ ಮಾಡಲು ಬಂದಿದ್ದ ಇತರ ಟಿವಿ ವಾಹಿನಿಗಳ ಪ್ರತಿನಿಧಿಗಳನ್ನು ಒಳಗೆ ಬರಗೊಡಲಿಲ್ಲ ಎಂದು ವರದಿಯಾಗಿದೆ.

> *ಒಂದು ಹಂತದಲ್ಲಿ ಸರ್ಕಾರದ ಚಾನೆಲ್ ಆದ ದೂರದರ್ಶನದವರಿಗೂ ಡಾ. ರಾಜ್ ಭಾಷಣದ ರೆಕಾರ್ಡಿಂಗ್‌ಗೆ ಅವಕಾಶ ನಿರಾಕರಿಸಿ ಕ್ಯಾಮೆರಾ ಮುಂದೆ ಅಡ್ಡಿಯುಂಟು ಮಾಡಲಾಯಿತು. ಕಾರ್ಯಕ್ರಮ ಆರಂಭಕ್ಕೆ ಮುನ್ನ ಟಿವಿ ಚಾನೆಲ್‌ಗಳ ಈ ಕಾಳಗದಲ್ಲಿ ಮಧ್ಯ ಪ್ರವೇಶಿಸಿದ ವಾರ್ತಾ ಸಚಿವ ಪ್ರೊ. ಬಿ.ಕೆ. ಚಂದ್ರಶೇಖರ್ ಅವರು ಸುದ್ದಿ ಸಂಗ್ರಹಕ್ಕೆ ಯಾವುದೇ ತೊಂದರೆಯಿಲ್ಲ ಎಂದು ಹೇಳಿದ್ದರಾದರೂ, ಯಾವುದೇ ಚಾನೆಲ್‌ಗಳಿಗೆ ಕಾರ್ಯಕ್ರಮದ ಛಾಯಾಗ್ರಹಣಕ್ಕೆ ಅವಕಾಶ ನೀಡದೆ ಅಡ್ಡಿಪಡಿಸಲಾಯಿತು.*[೨]

ಎಂದು ಕನ್ನಡಪ್ರಭ ವರದಿ ಮಾಡಿದೆ. ನೂಕು ನುಗ್ಗಲಿನಲ್ಲಿ ಝೀ ಟಿವಿ ವರದಿಗಾರನನ್ನು ದೂರಕ್ಕೆ ತಳ್ಳಿದ್ದಾಗಿಯೂ ಈ ವರದಿ ತಿಳಿಸಿದೆ.

ಇದನ್ನು ಗಮನಿಸಿದಾಗ, ಇದು ವಸ್ತುಸ್ಥಿತಿಯೇ ಆಗಿದ್ದಲ್ಲಿ, ಪ್ರಾಯೋಜಕರನ್ನು ಹಿಡಿದು ಆರ್ಥಿಕ ಲಾಭ ಮಾಡಿಕೊಳ್ಳುವುದು ಮತ್ತು ಜನಪ್ರಿಯತೆ ಗಳಿಸಿಕೊಳ್ಳುವುದನ್ನು ಅರಿತ ವಾಹಿನಿಗಳು ಸರ್ವಾಧಿಕಾರದ ಧೋರಣೆ ಬೆಳೆಸಿಕೊಳ್ಳುತ್ತಿವೆಯೇ ಎನ್ನುವಂತಾಗಿದೆ. ಉನ್ನತ ಸಂಸ್ಕೃತಿಯ ಸಮಾಜ ನಿರ್ಮಾಣದ ನಿಟ್ಟಿನಲ್ಲಿ ಶ್ರಮಿಸಬೇಕಾದ ಮಾಧ್ಯಮಗಳಿಂದಲೇ ಅಹಿತಕರ ಸನ್ನಿವೇಶಗಳು ಮೇಲಿಂದ ಮೇಲೆ ಮರುಕಳಿಸಿದರೆ ಸಮಾಜ ಪರಿವರ್ತನೆ - ಅಭಿವೃದ್ಧಿಯ ಸಂದೇಶ ನೀಡುವ ಕೆಲಸ ಅವುಗಳಿಗೆ ಸಾಧ್ಯವೇ?

ಭಾರತೀಯ ಸಾರ್ವಜನಿಕ ದೂರದರ್ಶನದ ಧ್ಯೇಯೋದ್ದೇಶಗಳು ಏನಿರಬೇಕು ಎನ್ನುವುದನ್ನು ಕೇಂದ್ರ ವಾರ್ತಾ ಮತ್ತು ಪ್ರಸಾರ ಸಚಿವಾಲಯ ಸೂಚಿಸಿರುವ ಅಂಶಗಳು ಹೀಗಿವೆ:

- ಸಾಮಾಜಿಕ ಬದಲಾವಣೆಯ ಸಾಧಕನಂತೆ ವರ್ತಿಸುವುದು.
- ರಾಷ್ಟ್ರೀಯ ಸಮಗ್ರತೆಯನ್ನು ಪ್ರೋತ್ಸಾಹಿಸುವುದು.
- ಜನರಲ್ಲಿ ವೈಜ್ಞಾನಿಕ ಮನೋಭಾವವನ್ನು ಪ್ರಚುರ ಪಡಿಸುವುದು.
- ಜನಸಂಖ್ಯಾ ನಿಯಂತ್ರಣ ಹಾಗೂ ಕುಟುಂಬ ಸೌಖ್ಯ ಕಾಪಾಡುವ ಒಂದು ಪ್ರಯತ್ನವಾಗಿ ಕುಟುಂಬ ಯೋಜನಾ ಸಂದೇಶವನ್ನು ರವಾನಿಸುವುದು.
- ಸೂಕ್ತ ಮಾಹಿತಿ ಹಾಗೂ ಜ್ಞಾನ ಒದಗಿಸಿ ಕೃಷಿ ಉತ್ಪಾದನೆ ಹೆಚ್ಚಳಕ್ಕೆ ನೆರವು ನೀಡುವುದು.
- ಪರಿಸರ ಸಮತೋಲನ ಕಾಪಾಡಿಕೊಳ್ಳಲು ನೆರವು ಮತ್ತು ಉತ್ತೇಜನ ನೀಡುವುದು.
- ಮಹಿಳೆ, ಮಕ್ಕಳು ಮತ್ತು ದುರ್ಬಲ ವರ್ಗದವರ ಕ್ಷೇಮಾಭಿವೃದ್ಧಿಗಾಗಿ ಇರುವ ಯೋಜನೆಗಳಿಗೆ ಪ್ರಚಾರ ನೀಡುವುದು.
- ಆಟೋಟಗಳಲ್ಲಿ ಆಸಕ್ತಿ ಮೂಡಿಸುವುದು.
- ಕಲೆ ಮತ್ತು ಸಾಂಸ್ಕೃತಿಕ ಪರಂಪರೆಯ ರಸಗ್ರಹಣಕ್ಕೆ ಒತ್ತು ನೀಡುವುದು.

ಈ ಒಂಭತ್ತು ಅಂಶಗಳನ್ನು ಗಮನಿಸಿದಾಗ ದೂರದರ್ಶನ ಸಾಮಾಜಿಕ ಸ್ವಾಸ್ಥ್ಯ, ರಾಷ್ಟ್ರೀಯತೆ, ವಿಜ್ಞಾನ, ಕುಟುಂಬ ಯೋಜನೆ ಮತ್ತು ಆರೋಗ್ಯ, ಪರಿಸರ, ಕೃಷಿ, ಕ್ರೀಡೆ, ಕಲೆ, ಸಾಹಿತ್ಯ - ಸಂಸ್ಕೃತಿಯಂತಹ ಮೂಲಧಾತುಗಳ ಪೋಷಣೆಯನ್ನೇ ಸೂಚಿಸಿದೆ ಎನ್ನುವುದು ಗ್ರಾಹ್ಯವಾಗುತ್ತದೆ.

ರಾಷ್ಟ್ರೀಯ ಗುರಿ ಸಾಧನೆಯ ವಿಷಯದಲ್ಲಿ ದೂರದರ್ಶನವೂ ಸೇರಿದಂತೆ ಎಲ್ಲಾ ಮಾಧ್ಯಮಗಳೂ ವಹಿಸಬೇಕಾದ ಪಾತ್ರ ಯಾವುದು, ಅದಕ್ಕಾಗಿ ಅಳವಡಿಸಿಕೊಳ್ಳಬೇಕಾದ ಅಂಶಗಳೇನು ಎನ್ನುವುದನ್ನು ತಿಳಿಸುವ ಯುನೆಸ್ಕೋ ವರದಿಯಲ್ಲಿ, ಈ ಕೆಳಗಿನ ಅಂಶಗಳನ್ನು ಸೂಚಿಸಲಾಗಿದೆ.

- ಮಾಹಿತಿ ವಿತರಣೆ
- ಸಾಮಾಜೀಕರಣ
- ಪ್ರೇರೇಪಣೆ
- ಸಾರ್ವತ್ರಿಕ ಸಮಸ್ಯೆಗಳನ್ನು ಕುರಿತು ಚರ್ಚೆ, ಅಭಿಪ್ರಾಯ ಮಂಡನೆಗೆ ಪ್ರೋತ್ಸಾಹ
- ಶಿಕ್ಷಣ
- ಸಾಂಸ್ಕೃತಿಕ ಪ್ರೋತ್ಸಾಹ
- ಮನರಂಜನೆ
- ಭಾವೈಕ್ಯತೆ

ಆದರೆ ಈ ಧ್ಯೇಯಗಳು, ಉದ್ದೇಶಗಳು, ಕರ್ತವ್ಯ-ಹೊಣೆಗಾರಿಕೆಗಳು ಖಾಸಗಿ ವಾಹಿನಿಗಳೂ ಸೇರಿದಂತೆ ಎಲ್ಲ ವಾಹಿನಿಗಳಿಗೂ ಅನ್ವಯಿಸುತ್ತಿದೆಯೇ ಎಂದು ನೋಡಬೇಕು.

ದೂರದರ್ಶನದಂತಹ ಆಧುನಿಕ ವಿದ್ಯುನ್ಮಾನ ಮಾಧ್ಯಮ ವೈವಿಧ್ಯತೆಯ ಈ ನಾಡಿನಲ್ಲಿ ಸಾಮಾಜಿಕ ಆರೋಗ್ಯವನ್ನು ಕಾಪಾಡುವುದಕ್ಕೆ ಪ್ರಗತಿಶೀಲ ಉದ್ದೇಶಗಳನ್ನು ಸಾಧಿಸುವುದಕ್ಕೆ ಬೇಕಾದ ಸೂಕ್ತಮಾರ್ಗಸೂಚಿ ಲಭ್ಯವಿದೆ. ಅದನ್ನು ಸಾಧಿಸುವ ಅಗಾಧ ಸಾಮರ್ಥ್ಯವೂ ಅದಕ್ಕಿದೆ. ಸರಳ, ವೇಗದ ಸಂವಹನ ಶಕ್ತಿ, ದೃಶ್ಯ ಸಂಯೋಜನೆ ಜನರಲ್ಲಿ ಜಾಗೃತಿ ಮೂಡಿಸುವ ಶಕ್ತಿ ಇರುವ ದೂರದರ್ಶನ ಮೇಲೆ ಸೂಚಿಸಿದ ಧ್ಯೇಯಗಳು, ಕರ್ತವ್ಯಗಳನ್ನು ಯಶಸ್ವಿಯಾಗಿ ಸಾಧಿಸುವಂತಹ ಶಕ್ತಿಶಾಲಿ ಮಾಧ್ಯಮ. ಮ್ಯಾಕ್ ಲ್ಯೂಹನ್ ಹೇಳುವಂತೆ

> *Television is the most appropriate medium for mass communication specially for the developing countries because of its involving and absorbing nature.*[೩]

ಆದರೂ ಭಾರತದಲ್ಲಿ - ಕನ್ನಡ ವಾಹಿನಿಗಳೂ ಸೇರಿದಂತೆ ಟೆಲಿವಿಷನ್ ಇನ್ನೂ ಪರಿಣಾಮಕಾರಿಯಾಗಿ ಇರಬಹುದಿತ್ತು ಎನ್ನುವುದು ಅಧ್ಯಯನದಿಂದ ತಿಳಿದು ಬಂದಿದೆ. ಅದಕ್ಕೆ ಕಾರಣವೆನ್ನಬಹುದಾದ ಕೆಲವು ಅಂಶಗಳನ್ನು ಗಮನಿಸಬಹುದು.

೧. ಖಾಸಗಿ ಒಡೆತನದ ವಾಹಿನಿಗಳೂ ಸೇರಿದಂತೆ ಎಲ್ಲ ವಾಹಿನಿಗಳಿಗೂ ಏಕರೂಪದ ಪ್ರಸಾರ ನೀತಿ ಇಂದು ಅಗತ್ಯವೆನಿಸುತ್ತಿದೆ. ಕೇಂದ್ರ ವಾರ್ತಾ ಮತ್ತು ಪ್ರಸಾರ ಸಚಿವಾಲಯ ಅಥವಾ ಯುನೆಸ್ಕೋ ಹಾಕುವ ಮಾರ್ಗಸೂಚಿ ಖಾಸಗಿ ಮಾಧ್ಯಮಗಳಿಗೂ ಅನ್ವಯವಾಗುವಂತಿರಬೇಕು.

೨. ಅಂತಹ ಮಾರ್ಗಸೂಚಿಗಳನ್ನು ಸಾಧ್ಯವಾದ ಮಟ್ಟಿಗೆ ಆಗಿಂದಾಗ್ಗೆ ಪರಿಷ್ಕರಿಸಬೇಕು.

೩. ಗ್ರಾಮೀಣ ಹಾಗೂ ಅತೀ ಗ್ರಾಮೀಣ ಪ್ರದೇಶಗಳಲ್ಲಿ ಟಿವಿ. ಸೆಟ್ ಲಭ್ಯವಾಗುವಂತಿರಬೇಕು. ಸಮುದಾಯ ಟಿವಿಯೂ ಉಪಯುಕ್ತ.

೪. ಮನರಂಜನೆಗಿಂತ ಹೆಚ್ಚಾಗಿ ತಿಳುವಳಿಕೆ ಮೂಡಿಸುವ ಕಾರ್ಯಕ್ರಮಗಳನ್ನು ಬಿತ್ತರಿಸಬೇಕು.

ಈವರೆಗೂ ಎರಡು ಪ್ರಮುಖ ಮಾರ್ಗಗಳ ಮೂಲಕ ದೂರದರ್ಶನ ಪ್ರಸಾರ ನಡೆಯುತ್ತಿದೆ.

**ಉಚಿತ ಪ್ರಸಾರ :** On - the - air - television ಎನ್ನುವ ಈ ಮಾರ್ಗ ಉಪಗ್ರಹದ ಸಂಪರ್ಕದಿಂದಾಗಿ ಸಾರ್ವಜನಿಕರಿಗೆ ಹಣಕಾಸಿನ ವೆಚ್ಚವಿಲ್ಲದೆ ದೊರೆಯುತ್ತದೆ. ಉಪಗ್ರಹದ ಮೂಲಕ ನೇರ ಪ್ರಸಾರ (Direct Broadcast by Satellite - DBS) ಪಡೆಯಲು ಆ್ಯಂಟೆನಾ ಒಂದಿದ್ದರೆ ಸಾಕು.

**ಶುಲ್ಕ ವಿಧಿತ ಪ್ರಸಾರ :** ತಂತಿ ಅಥವಾ ಕೇಬಲ್‌ಗಳ ಮೂಲಕ ಪ್ರಸಾರ ಹೊಂದಿರುವ ಈ ಮಾರ್ಗವನ್ನು ಪಡೆಯಲು ಪ್ರೇಕ್ಷಕರು ಶುಲ್ಕ ನೀಡಬೇಕಾಗುತ್ತದೆ. Community Antenna Television - CATV ಎಂದು ಕರೆಯಲಾಗುವ ಈ ವ್ಯವಸ್ಥೆಯಲ್ಲಿ ತಂತಿಗಳ ಮೂಲಕ ವಾಹಿನಿಗಳು ಹರಿದು ಬರುತ್ತವೆ.

ಇವುಗಳ ಜೊತೆಗೆ ವಿಸಿಪಿ ಬಳಸಿಯೂ ವಿಡಿಯೋ ಪ್ರಸಾರ ಸಾಧ್ಯ.

ಕನ್ನಡದ ವಾಹಿನಿಗಳಲ್ಲಿ ಡಿಡಿ-೧ ಅನ್ನು ಹೊರತು ಪಡಿಸಿದರೆ ಉಳಿದೆಲ್ಲ ವಾಹಿನಿಗಳು ಉಪಗ್ರಹದ ಮೂಲಕ ಪ್ರಸಾರ ಶಕ್ತಿ ಗಳಿಸಿಕೊಂಡರೂ ಕೇಬಲ್ ಮೂಲಕ ಪ್ರಸಾರಗೊಳ್ಳುತ್ತಿವೆ. ಇವಲ್ಲದೆ ಕೇಬಲ್ ಮೂಲಕವೇ ಅಲ್ಪ ಪ್ರಸಾರಶಕ್ತಿ ಹೊಂದಿದ ಅನೇಕ ವಾಹಿನಿಗಳೂ ಕಾರ್ಯ ನಿರ್ವಹಿಸುತ್ತಿವೆ. ಈ ಎಲ್ಲಾ ವಾಹಿನಿಗಳು ಬೀರುವ ಪ್ರಭಾವ ಎಂಥದು ಎಂದು ಈ ಮಹಾಪ್ರಬಂಧದಲ್ಲಿ ವಿಶ್ಲೇಷಿಸಲಾಗಿದೆ.

ಬಹುಭಾಷೀಯ ದೇಶವಾದ ಭಾರತದ ಒಂದು ನಿರ್ದಿಷ್ಟ ರಾಜ್ಯದ ಪ್ರಧಾನ ಭಾಷೆಯ ಬೆಳವಣಿಗೆಗೆ ಬೇಕಾದ ಪ್ರೋತ್ಸಾಹ ನೀಡುವ ಒಂದು ವಾಹಿನಿ ನೆರೆಹೊರೆಯ ರಾಜ್ಯಗಳ ಭಾಷೆಯ ಮೇಲೆ ಪ್ರಭಾವ ಬೀರುವುದೇ? ಎನ್ನುವುದನ್ನು ಮೊದಲು ನೋಡಬೇಕು. ಉದಾಹರಣೆಗೆ ಕರ್ನಾಟಕದಲ್ಲಿ ಕನ್ನಡ ಪ್ರಧಾನ ಭಾಷೆ. ಇಲ್ಲಿ ೧೯೯೧ರ ಜನಗಣತಿಯನ್ವಯ ಕನ್ನಡ ಭಾಷೆಯನ್ನು ಮಾತನಾಡುವ ೨,೪೧,೯೯,೫೨೬ ಜನರಿದ್ದಾರೆ. ಅಂದರೆ ಒಟ್ಟು ಜನಸಂಖ್ಯೆಯ (೪,೪೮,೧೭,೩೯೮) ೫೪% ಅಷ್ಟು. ಕರ್ನಾಟಕದಲ್ಲಿ ನೆರೆಹೊರೆಯ ರಾಜ್ಯಗಳ ಪ್ರಧಾನ ಭಾಷೆಗಳನ್ನು ಮಾತನಾಡುವ ಜನಸಂಖ್ಯೆ ಹೀಗಿದೆ.

| | | | | |
|---|---|---|---|---|
| ತೆಲುಗು | - | ೨೯,೯೩,೫೦೧ | - | ೬.೬೮% |
| ಮರಾಠಿ | - | ೧೩,೯೧,೩೧೧ | - | ೩.೧೦% |
| ತಮಿಳು | - | ೧೩,೮೫,೩೧೩ | - | ೩.೦೯% |
| ಮಲೆಯಾಳಂ | - | ೫,೯೦,೭೦೯ | - | ೧.೩೨% |
| ಉರ್ದು | - | ೩೫,೧೨,೮೩೧ | - | ೭.೮೪% |
| ಕೊಂಕಣಿ | - | ೬,೪೦,೭೩೮ | - | ೦.೧೪% |
| ತುಳು | - | ೧೨,೧೭,೮೩೪ | - | ೨.೭೨% |

ಈ ಅನ್ಯಭಾಷೀಯ ಜನರಿಗೆ ಬೇಕಾದ ಅವರ ಸ್ವಭಾಷಾ ಕಾರ್ಯಕ್ರಮಗಳು ಕೇಬಲ್ ಮೂಲಕ ಪ್ರಸಾರವಾಗುವ ವಾಹಿನಿಗಳಿಂದ ದೊರೆಯುತ್ತವೆ. ಹೇಗೆಂದರೆ, ಪ್ರಸಾರ ಭಾರತಿ ದೂರದರ್ಶನ - 'ಚಂದನ' ವಾಹಿನಿಯನ್ನು ಹೊಂದಿರುವಂತೆ, ತಮಿಳು, ತೆಲುಗು, ಮಲೆಯಾಳಂ, ಮರಾಠಿ ಮುಂತಾದ ವಾಹಿನಿಗಳನ್ನು ಹೊಂದಿದ್ದು ಅವು ಸಂಬಂಧಪಟ್ಟ ರಾಜ್ಯಗಳಲ್ಲಿ ಮಾತ್ರ ಪ್ರಸಾರವಾಗುವುದರ ಜೊತೆಗೆ ಇತರ ರಾಜ್ಯಗಳಿಗೂ ಹರಡುವುದು ಕೇಬಲ್ ವ್ಯವಸ್ಥೆಯ ವ್ಯಾಪಕತೆಯಿಂದಾಗಿ ಸುಲಭ ಸಾಧ್ಯ. ಹಾಗೆಯೇ ಸನ್ ಟಿವಿ. ನೆಟ್‌ವರ್ಕ್, ಈಟೀವಿ, ಏಷಿಯಾನೆಟ್ ಅಲ್ಲದೆ ಅನೇಕ ಬಿಡಿ ವಾಹಿನಿಗಳೂ (ರಾಜ್ ಟಿವಿ, ಜಯಾ, ಮುಂತಾದ) ಕೇಬಲ್ ಮೂಲಕ ಹರಿದು ಬರುತ್ತವೆ. ಅನ್ಯಭಾಷೀಯರಿಗೆ ತಮ್ಮ ಮಾತೃಭಾಷೆಯ ಇಂತಹ ಚಾನೆಲ್‌ಗಳು ಸುದ್ದಿ ಮನರಂಜನೆ ಪೂರೈಸುವ ಕೆಲಸ ಮಾಡಿಬಿಟ್ಟರೆ ಅವರು ಕನ್ನಡದ ವಾಹಿನಿಗಳನ್ನು ಅವಲಂಬಿಸಬೇಕಾದ ಅಗತ್ಯ ಕಾಣುವುದಿಲ್ಲ. ಸರಿಸುಮಾರು ಕರ್ನಾಟಕದ ಅರ್ಧದಷ್ಟು ಜನತೆ ಮಾತ್ರ ಮುಖ್ಯವಾಗಿ ಕನ್ನಡದ ವಾಹಿನಿಗಳನ್ನು ಅವಲಂಬಿಸುತ್ತಾರೆ ಎಂದು ಅಂದಾಜು ಮಾಡಬಹುದು. ಇವರಲ್ಲೂ ಇಂಗ್ಲೀಷ್, ಹಿಂದಿ ಪ್ರಸಾರಗಳನ್ನೂ ನೋಡುವ ಸಾಧ್ಯತೆಗಳಿವೆ. ಕೊಡವ, ತುಳು ಭಾಷಿಕರು ಕನ್ನಡ ವಾಹಿನಿಗಳನ್ನು ವೀಕ್ಷಿಸಬಹುದು.

ಸ್ಥಿತಿ ಹೀಗಿರುವಾಗ ಕನ್ನಡದ ಪಾಡೇನು ಎಂದು ತರ್ಕಿಸಬೇಕಾಗುತ್ತದೆ. ಇತರ ಭಾಷೆಗಳು ನಿಧಾನವಾಗಿ ಕನ್ನಡ ಭಾಷಾ ಬಳಕೆಯ ಕ್ರಮದೊಳಗೆ ಸೇರ್ಪಡೆಯಾಗುತ್ತವೆಯೇ? ಭಾಷಾ ಅಲ್ಪಸಂಖ್ಯಾತರು ಗಡಿ ಪ್ರದೇಶಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ನೆಲೆಸಿರುವುದರಿಂದ ಅಲ್ಲಿ ಸಮಸ್ಯೆ ಇನ್ನೂ ಬಿಗಡಾಯಿಸಿರುತ್ತದೆ ಎಂದೇ ಒಪ್ಪಬಹುದು. ಕರ್ನಾಟಕಕ್ಕೆ ಐದು ಭಾಷಾ ಗಡಿಗಳಿವೆ. ಹಾಗಾಗಿ ಕರ್ನಾಟಕದ ಅಂಚಿನುದ್ದಕ್ಕೂ ಕನ್ನಡವೇ ಸಂಪೂರ್ಣ ಬಳಕೆಯ ಭಾಷೆಯಾಗದೆ ಮಲೆಯಾಳಂ, ತಮಿಳು, ತೆಲುಗು, ಮರಾಠಿ, ಉರ್ದು ಹಾಗೂ ಕೊಂಕಣಿ ಭಾಷೆಗಳು ಬಳಕೆಯಲ್ಲಿರುವುದು ಸ್ಪಷ್ಟವಾಗಿದೆ. ಅಲ್ಲೆಲ್ಲ ಕನ್ನಡ ಹಿಂಜರಿದಿದೆ ಅಥವಾ ಅಂತಹ ಅನ್ಯ ಭಾಷೆಗಳಿಂದ ಪ್ರಭಾವಿತವಾಗಿದೆ ಎಂದೇ ಹೇಳಬಹುದು.

ಇಂಥದೇ ಪ್ರಭಾವವನ್ನು ಕನ್ನಡ ನೆರೆಹೊರೆಯ ರಾಜ್ಯಗಳ ಭಾಷೆಯ ಮೇಲೆ ಬೀರಿದೆಯೇ? ಎಂದು ಗಮನಿಸುವುದೂ ಸೂಕ್ತ. ಒಂದು ಭಾಷೆಯ ಕಾರ್ಯಕ್ರಮಗಳನ್ನು ರಾಷ್ಟ್ರಾದ್ಯಂತ ಬಿತ್ತರಿಸುವ ವಾಹಿನಿಗಳಿರುವಾಗ ಕನ್ನಡದ ಕಾರ್ಯಕ್ರಮಗಳೂ

ಇತರ ರಾಜ್ಯಗಳಲ್ಲಿ ಬಿತ್ತರಗೊಳ್ಳುವುದು ಸಹಜ. ಆದರೆ ಆ ರಾಜ್ಯಗಳಲ್ಲಿ ನೆಲೆಸಿರುವವರಲ್ಲಿ ಎಷ್ಟು ಮಂದಿ ಕನ್ನಡದ ಕಾರ್ಯಕ್ರಮಗಳನ್ನು ನೋಡುತ್ತಾರೆ? ಅನ್ಯಭಾಷೆಯ ವಾಹಿನಿಗಳನ್ನು ಆ ರಾಜ್ಯಗಳ ಜನತೆ, ಸರ್ಕಾರ ಒಳಗೊಂಡಿದ್ದಾರೆಯೇ? ಎನ್ನುವುದನ್ನು ಗಮನಿಸಬೇಕಾಗುತ್ತದೆ. ಉದಾಹರಣೆಗೆ: ದೂರದರ್ಶನದಲ್ಲಿ ಪ್ರತಿ ರಾತ್ರಿ ೮ ಗಂಟೆ ೩೦ ನಿಮಿಷಕ್ಕೆ ಪ್ರಸಾರವಾಗುತ್ತಿದ್ದ ರಾಷ್ಟ್ರೀಯ ಕಾರ್ಯಕ್ರಮಗಳಡಿಯಲ್ಲಿ ಮೊದಲ ಅರ್ಧಗಂಟೆ ಹಿಂದಿ ವಾರ್ತೆಯನ್ನು ದೇಶಾದ್ಯಂತ ಪ್ರಸಾರ ಮಾಡಲಾಗುತ್ತಿತ್ತು. ಹಿಂದಿ ಭಾಷೆಯನ್ನು ಅಭಿವೃದ್ಧಿಗೊಳಿಸಬೇಕು ಎನ್ನುವ ದೃಷ್ಟಿಯಿಂದ 'ಹಿಂದಿ ಭಾಷೆಯ ಪ್ರಸಾರವನ್ನು ಉನ್ನತಿಗೊಳಿಸುವುದು ಸಂಘದ ಕರ್ತವ್ಯವಾಗಿರತಕ್ಕದ್ದು' ಎಂದು ಸಂವಿಧಾನದ ೩೫೧ನೇ ವಿಧಿಯಲ್ಲಿ ಸೂಚಿಸಿರುವುದರಿಂದಲೂ ಹಿಂದಿಗೆ ರಾಷ್ಟ್ರಭಾಷೆಯ ಸ್ಥಾನಮಾನವಿರುವುದರಿಂದಲೂ ದೂರದರ್ಶನ ರಾತ್ರಿ ೮.೩೦ಕ್ಕೆ ಎಲ್ಲ ಪ್ರಾದೇಶಿಕ ಪ್ರಸಾರವನ್ನು ಸ್ಥಗಿತಗೊಳಿಸಿ ಹಿಂದಿಯ 'ಸಮಾಚಾರ್' ಅನ್ನು ಪ್ರಸಾರ ಮಾಡುತ್ತಿತ್ತು. ಆದರೆ ೧೯೭೬ರಿಂದಲೂ ಆ ಸಮಯದಲ್ಲಿ ತನ್ನ ಪ್ರಾದೇಶಿಕ ಭಾಷೆಯ ವಾರ್ತೆಯನ್ನು ಪ್ರಸಾರ ಮಾಡುತ್ತಿದ್ದ ತಮಿಳುನಾಡು ಸರ್ಕಾರ 'ಸಮಾಚಾರ್'ದ ಪ್ರಸಾರವನ್ನು ವಿರೋಧಿಸಿತು. ಅಲ್ಲಿನ ಜನತೆಯ ಮನವಿಯಂತೆ ಆಗಿನ ಮುಖ್ಯಮಂತ್ರಿ ಎಂ. ಜಿ. ರಾಮಚಂದ್ರನ್ ಅವರು ಕೇಂದ್ರ ಸರ್ಕಾರಕ್ಕೆ ಪತ್ರ ಬರೆದು ತಮ್ಮ ಸರ್ಕಾರದ ವಿರೋಧ ವ್ಯಕ್ತಪಡಿಸಿದ್ದಲ್ಲದೆ, ಹಿಂದಿ ವಾರ್ತೆಯನ್ನು ಹಿಮ್ಮೆಟ್ಟಿಸುವುದರಲ್ಲಿ ಸಫಲರಾದರು. ೧೯೮೧ರಲ್ಲಿ ಪ್ರಾರಂಭಗೊಂಡ ೬ ತಿಂಗಳೊಳಗೆ 'ಸಮಾಚಾರ್' ಪ್ರಸಾರ ತಮಿಳುನಾಡಿನಲ್ಲಿ ಸ್ಥಗಿತಗೊಂಡು, ಅದೇ ವೇಳೆಯಲ್ಲಿ ಈಗಲೂ ತಮಿಳು ವಾರ್ತೆ ಪ್ರಸಾರಗೊಳ್ಳುತ್ತಿದೆ. ಇಂತಹ ಪ್ರಯತ್ನಗಳಿಂದ ಸ್ವಲ್ಪ ಪ್ರಮಾಣದಲ್ಲಿ ಪ್ರಾದೇಶಿಕ ಭಾಷಾ ರಕ್ಷಣೆ ಸಾಧ್ಯವಾದರೂ ಕೇಬಲ್ ಮೂಲಕ ಹರಿದು ಬರುವ ಇತರ ಭಾಷಾ ಚಾನೆಲ್‌ಗಳನ್ನು ನಿವಾರಿಸಿಕೊಳ್ಳಬೇಕಾದದ್ದು ಜನಾಭಿಪ್ರಾಯ, ಅಭಿರುಚಿಯನ್ನು ಅವಲಂಬಿಸಿರುತ್ತದೆ. ಅಥವಾ ಅದೇ ಭಾಷೆಯ ಅನೇಕ ವಾಹಿನಿಗಳನ್ನು ಪ್ರಾರಂಭಿಸುವುದರಿಂದಲೂ ಭಿನ್ನ ಅಭಿರುಚಿಗಳ ಜನತೆ ತಮ್ಮ ಭಾಷೆಯಲ್ಲೇ ತಮ್ಮ ಆಯ್ಕೆಯ ಸ್ವಾತಂತ್ರ್ಯವನ್ನೂ ಬಳಸಿಕೊಳ್ಳುತ್ತಾರೆ. ಇದು ತಮಿಳುನಾಡಿನಲ್ಲಿ ಯಶಸ್ವಿಯೂ ಆಗಿದೆ.

ಅದೇ ರೀತಿ ಕರ್ನಾಟಕದಲ್ಲಿ ಬೆಂಗಳೂರು ದೂರದರ್ಶನ ಕೇಂದ್ರ ೧೯೯೪ ರಲ್ಲಿ ಉರ್ದು ವಾರ್ತೆ ಬಿತ್ತರಿಸತೊಡಗಿದಾಗ ತೀವ್ರ ಪ್ರತಿಭಟನೆ ವ್ಯಕ್ತವಾಯಿತು. ಆದರೆ ರಾಜ್ಯ ಸರ್ಕಾರಕ್ಕೆ ಬದಲಾಗಿ ಸಾರ್ವಜನಿಕರು, ಸಾಹಿತಿ - ಚಿಂತಕರು, ಕಲಾವಿದರು, ಕನ್ನಡಪರ ಹೋರಾಟಗಾರರು, ಸಂಘ-ಸಂಸ್ಥೆಗಳು ಹೋರಾಟಕ್ಕಿಳಿದರು. ಆಗ ಕನ್ನಡಕ್ಕಿದ್ದದ್ದು ಒಂದೇ ವಾಹಿನಿ. ಕನ್ನಡ ಕಾರ್ಯಕ್ರಮಗಳಿಗಾಗಿ ನಿಗದಿಗೊಳಿಸಲಾಗಿದ್ದ ಕಾಲಾವಧಿಯೂ ತೃಪ್ತಿದಾಯಕವಾಗಿರಲಿಲ್ಲ. ಪ್ರಸಾರವಾಗುತ್ತಿದ್ದದ್ದು ೧೫ ನಿಮಿಷಗಳ ಒಂದೇ ವಾರ್ತಾಸಂಚಿಕೆ. ಅದರ ಅವಧಿಯನ್ನೇ ವಿಸ್ತರಿಸುವ ಅಥವಾ ಮತ್ತೊಂದು ವಾರ್ತಾಸಂಚಿಕೆಯನ್ನು ಪ್ರಾರಂಭಿಸಬೇಕಾದ ಅಗತ್ಯವಿದ್ದ ಆ ಕಾಲದಲ್ಲಿ ಕನ್ನಡ ಕಾರ್ಯಕ್ರಮದ ಪ್ರಸಾರಾವಧಿಯನ್ನು ಮೊಟಕುಗೊಳಿಸಿ ಉರ್ದುವಾರ್ತೆ ಪ್ರಸಾರ ಮಾಡುವುದು ಕನ್ನಡಿಗರಿಗೆ ಸಹ್ಯವಾಗಲಿಲ್ಲ. ಕನ್ನಡ ಸಾಹಿತ್ಯ ಪರಿಷತ್ತು, ಕನ್ನಡ ಶಕ್ತಿ ಕೇಂದ್ರ, ಡಾ. ರಾಜ್‌ಕುಮಾರ್ ಅಭಿಮಾನಿ ಸಂಘ ಮತ್ತಿತರ ಸಂಘ ಸಂಸ್ಥೆಗಳ ಆಶ್ರಯದಲ್ಲಿ ನಡೆದ ತೀವ್ರ ಪ್ರತಿಭಟನೆಯಲ್ಲಿ ಬೆಂಗಳೂರಿನಲ್ಲಿ ಭಾರಿ ಸಾವು - ನೋವುಗಳಾಗಿ ಆಸ್ತಿ-ಪಾಸ್ತಿ ನಷ್ಟವಾಯಿತು. ೧೯೯೪ರ ಅಕ್ಟೋಬರ್ ೨ರಂದು ಪ್ರಾರಂಭಗೊಂಡಿದ್ದ ಉರ್ದು ವಾರ್ತೆಯನ್ನು ಕೇವಲ ೮ ದಿನಗಳ ಅವಧಿಯಲ್ಲಿ ಅಂದರೆ ೯-೧೦-೧೯೯೪ರಂದು ನಿಲ್ಲಿಸಲಾಯಿತು. ಇಷ್ಟಾದರೂ, ಒಂದು ಭಾಷಾ ಕಾರ್ಯಕ್ರಮವಾಗಿ ಪ್ರಸಾರವಾಗುತ್ತಿದ್ದ 'ಉರ್ದು ಕಾರ್ಯಕ್ರಮ'ವನ್ನು ಮಾತ್ರ ಕನ್ನಡಿಗರು ವಿರೋಧಿಸದಿದ್ದದ್ದು ಬಹುಭಾಷೀಯ ಸಮಾಜದಲ್ಲಿ ಆರೋಗ್ಯಕರ ಲಕ್ಷಣ ಎನಿಸುತ್ತದೆ.

ಹೀಗೆ ಜನತೆಯೇ ಮಾಧ್ಯಮಗಳಿಂದ ತಮಗೇನು ಬೇಕು ಎನ್ನುವುದನ್ನು ತಿಳಿಸುವುದು ಪ್ರತಿಕ್ರಿಯಾತ್ಮಕ ಸಂವಹನೆಗೆ ಅಂದರೆ ದ್ವಿಮುಖ ಸಂವಹನೆಗೆ ಉತ್ತೇಜನ ನೀಡಿದಂತಾಗುತ್ತದೆ.

ಖಾಸಗಿ ವಾಹಿನಿಗಳ ತೀವ್ರ ಪೈಪೋಟಿ ಎದುರಿಸುತ್ತಿರುವ ಡಿಡಿ-೧ರ ಪ್ರಾದೇಶಿಕ ಪ್ರಸಾರ ಹಾಗೂ ಚಂದನ ಚಾನೆಲ್‌ಗಳು ಸರ್ಕಾರದ ಮಾರ್ಗಸೂಚಿಯನ್ವಯ ಮಾಹಿತಿಪೂರ್ಣ, ಸಾಂದರ್ಭಿಕ, ಪ್ರಗತಿಪರ ಚಿಂತನೆಗಳುಳ್ಳ ಅನೇಕ ಕಾರ್ಯಕ್ರಮಗಳನ್ನು ಪ್ರಸಾರ ಮಾಡುತ್ತಲೇ ಬಂದಿವೆ, ಈಗಲೂ ಮಾಡುತ್ತಿವೆ. ಹಾಗೆ ನೋಡಿದರೆ ಮನರಂಜನೆಗೆ ಒತ್ತು ಕೊಟ್ಟದ್ದು ಕಡಿಮೆಯೇ ಎನ್ನಬಹುದು. ಒಂದು ದೃಷ್ಟಿಯಿಂದ ಸಾಮಾಜಿಕ ಅಭಿವೃದ್ಧಿಯ ಪ್ರೇರಕ ಶಕ್ತಿಯಾಗಿ ಪ್ರಾಮಾಣಿಕ ಸೇವೆ ಸಲ್ಲಿಸುವ ಅವಕಾಶಗಳು ದೊರೆತದ್ದೇ ಈ ವಾಹಿನಿಗೆ. ಈ ಚಾನೆಲ್ ಕಾರ್ಯಾರಂಭ ಮಾಡಿದಾಗ ಬೇರೆ ಯಾವ ಚಾನೆಲ್‌ಗಳೂ ಇರಲಿಲ್ಲವೆನ್ನುವುದು ಗಮನಾರ್ಹ. ಕನ್ನಡದಲ್ಲಿ ಆಗಿನ್ನೂ ಟೆಲಿವಿಷನ್ ಹೊಸ ವ್ಯವಸ್ಥೆಯಾಗಿದ್ದುದರಿಂದ ಅತೀ ಕುತೂಹಲಕಾರಿಯೂ ಆಗಿತ್ತು. ಪ್ರಾರಂಭದಲ್ಲಿ ಅಲ್ಲದಿದ್ದರೂ ೯೦ರ ದಶಕದ ಮಧ್ಯಭಾಗದ ವೇಳೆಗೆ, ಅಂದರೆ ಸರಿಸುಮಾರು ಮೊದಲ ಖಾಸಗಿ ಚಾನೆಲ್ ಹುಟ್ಟಿಕೊಳ್ಳುವ ವೇಳೆಗೆ ಅತ್ಯಧಿಕ ಪ್ರೇಕ್ಷಕರಿದ್ದರು. ನೇರ ಪ್ರಸಾರಗಳನ್ನು ಮಾಡಲು ಅನುಕೂಲವಾಗುವಂತಹ ಹೊರಾಂಗಣ ಪ್ರಸಾರದ ವ್ಯವಸ್ಥೆಗಳನ್ನು ಈ ವಾಹಿನಿ ಹೊಂದಿತ್ತು. ತರಬೇತಿ ಪಡೆದ ತಾಂತ್ರಿಕ ಸಿಬ್ಬಂದಿ, ನಿರ್ಮಾಣ ಸಿಬ್ಬಂದಿಯೂ ದೂರದರ್ಶನದೊಂದಿಗೆ ಇದ್ದರು.

ಇಷ್ಟಾದರೂ ಈ ವಾಹಿನಿ ಪ್ರಾರಂಭದಲ್ಲಿ ತೋರುತ್ತಿದ್ದ ಉತ್ಸಾಹವನ್ನು ಕ್ರಮೇಣ, ಅದರಲ್ಲೂ ಅತ್ಯಧಿಕ ಸಂಖ್ಯೆಯ ಪ್ರೇಕ್ಷಕರನ್ನು ಹೊಂದಿದ್ದ ಸಮಯದ ವೇಳೆಗೆ ಕಳೆದುಕೊಂಡಿತ್ತು. ಹಾಗೆ ಪ್ರೇಕ್ಷಕರನ್ನೂ ಕಳೆದುಕೊಳ್ಳತೊಡಗಿತು. ಅಧ್ಯಯನದ ಸಂದರ್ಭದಲ್ಲಿ ಇದಕ್ಕೆ ಕಾರಣಗಳನ್ನು ಗುರುತಿಸಲಾಯಿತು.

- ಖಾಸಗಿ ಹಾಗೂ ಕೇಬಲ್ ವಾಹಿನಿಗಳ ಆರಂಭ.
- ಕನ್ನಡ ಬಾರದ ಸಿಬ್ಬಂದಿ ನೇಮಕ / ವರ್ಗಾವಣೆ
- ಸ್ವಾಯತ್ತ ಸಂಸ್ಥೆಯಾಗಿ ರೂಪಾಂತರಗೊಳ್ಳುವ ಪ್ರಾರಂಭಿಕ ತೊಡಕುಗಳು.
- ಪ್ರಾಯೋಜಕರನ್ನು ಆಕರ್ಷಿಸುವುದಕ್ಕೆಂದೇ ಪ್ರೇಕ್ಷಕರ ಆಸಕ್ತಿ, ಅಭಿರುಚಿಯನ್ನು ಮರೆತು ಸಿದ್ಧಪಡಿಸಿದ ಕಾರ್ಯಕ್ರಮಗಳು (ಖಾಸಗಿ ನಿರ್ಮಾಣ)
- ಸರ್ಕಾರಿ ಮಾರ್ಗಸೂಚಿಯನ್ವಯ ತಿಳಿಸಿದ ವಿಷಯಗಳಲ್ಲಿ ಕಾರ್ಯಕ್ರಮಗಳನ್ನು ಸಿದ್ಧಪಡಿಸುವಾಗ ಸೃಜನಶೀಲತೆಯ ಕೊರತೆ, ಏಕತಾನತೆ, ಕಳಪೆ ಗುಣಮಟ್ಟದ ನಿರ್ಮಾಣ.
- ಅಧಿಕಾರಿಗಳಲ್ಲಿ ಭ್ರಷ್ಟಾಚಾರದ ಆರೋಪಗಳು, ಸಿಬ್ಬಂದಿ ಕೊರತೆ.
- ಖಾಸಗಿ ವಾಹಿನಿಗಳ ಉಗಮದ ನಂತರವೂ ಅವುಗಳ ಪೈಪೋಟಿಗೆ ಸಿದ್ಧಗೊಳ್ಳದ ಪ್ರಾಚೀನ ಧೋರಣೆಗಳು. ಆದರೆ ತಡವಾಗಿ ಖಾಸಗಿ ವಾಹಿನಿಗಳ ಅನುಕರಣೆ.

ಈ ಅಂಶಗಳು ಡಿಡಿ-೧ ರ ಜನಪ್ರಿಯತೆಯ ಇಳಿಮುಖಕ್ಕೆ ಮುಖ್ಯ ಕಾರಣಗಳೆನ್ನಬಹುದು. ದೂರದರ್ಶನವೇ ಕೇಬಲ್ ಹಾವಳಿಯ ಹೊಡೆತವನ್ನು ಹೀಗೆ ಒಪ್ಪಿಕೊಂಡಿದೆ

> *Without any regulatory frame work, the growth of cable TV has been haphazard. Local cable systems are distributed on substandard cables giving poor quality signals. Though the satellite channels offered*

*a variety of programms, the local cable channels with 2 to 6 films a day had the largest viewership share among all non-DD channels.*[೪]

ಇಷ್ಟಾದರೂ ಸರ್ಕಾರಿ ಸ್ವಾಮ್ಯದ ವಾಹಿನಿಯಾಗಿದ್ದ ಡಿ.ಡಿ - ೧ ೧೯೮೭-೯೬ರ ಅವಧಿಯಲ್ಲಿ ಸಾಹಿತ್ಯ, ಸಂಸ್ಕೃತಿ, ಕಲೆ, ಕ್ರೀಡೆ, ಆರೋಗ್ಯ, ಶಿಕ್ಷಣ, ಮಹಿಳೆ, ಕೃಷಿ, ನೃತ್ಯ ರೂಪಕಗಳು, ಸಾಕ್ಷ್ಯಚಿತ್ರ, ಕಥಾಧಾರಿತ ಮನರಂಜನೆಯನ್ನು ಒದಗಿಸುವ ವೈವಿಧ್ಯಮಯ ಕಾರ್ಯಕ್ರಮಗಳನ್ನು ಪ್ರಸಾರ ಮಾಡಿದೆ. ಹಾಗೆ ನೋಡಿದರೆ ಖಾಸಗಿ ವಾಹಿನಿಗಳಲ್ಲಿ ಕಾರ್ಯಕ್ರಮ ವೈವಿಧ್ಯತೆ ಕಡಿಮೆಯಿದೆ. ಆದರೆ ಹೊಸ ಪರಿಕಲ್ಪನೆ, ಸೃಷ್ಟಿಶೀಲತೆ, ನಾವೀನ್ಯವನ್ನು ಅವು ಹೊಂದಿರುತ್ತವೆ. ಮಾಹಿತಿ ವಿನಿಮಯಕ್ಕಿಂತ ಸುದ್ದಿ ಪ್ರಸಾರ ಹಾಗೂ ಮನರಂಜನೆಯೇ ಅವುಗಳ ಮುಖ್ಯ ಗುರಿಯೆನಿಸಿದೆ.

ಈ ಮಹಾಪ್ರಬಂಧದ ರಚನೆಯ ಸಂದರ್ಭದಲ್ಲಿ ನಡೆಸಿದ ವಿಸ್ತೃತ ಅಧ್ಯಯನದಿಂದ ತಿಳಿದು ಬಂದ ಮುಖ್ಯ ಅಂಶವೆಂದರೆ ಹೊಸ ವಾಹಿನಿಗಳು ಈಗಷ್ಟೇ ಬೇರುಬಿಟ್ಟಿವೆ. ಸರ್ಕಾರಿ ಸ್ವಾಮ್ಯದ ವಾಹಿನಿಯೂ ಈಗಷ್ಟೇ ಸ್ವಾಯತ್ತ ಸಂಸ್ಥೆಯಾಗಿದೆ. ಎಲ್ಲ ವಾಹಿನಿಗಳೂ ಬಹುತೇಕ ಸಮಾನ ಸ್ಥಿತಿಯಲ್ಲಿವೆ. ಅವು ಸಮಾಜದಲ್ಲಿ ಒಂದು ಶಿಸ್ತಿನ, ಆರೋಗ್ಯಪೂರ್ಣ ವಾತಾವರಣವನ್ನು ನಿರ್ಮಿಸಬೇಕು. ಇದಕ್ಕಾಗಿ ನಡೆಸುವ ಸ್ಪರ್ಧೆ ರಚನಾತ್ಮಕವಾಗಿರಬೇಕು. ಹಾಗಿರಬೇಕಾದರೆ ಎಲ್ಲ ವಾಹಿನಿಗಳಿಗೂ ಮಾರ್ಗದರ್ಶಿಯಾಗುವ ಏಕರೂಪದ ಪ್ರಸಾರ ನೀತಿ ರಚನೆಯಾಗಬೇಕು.

## ೨. ಕಾರ್ಯಕ್ರಮ ವೈವಿಧ್ಯ

ಸಂಸ್ಕೃತಿಯನ್ನು ಪೀಳಿಗೆಯಿಂದ ಪೀಳಿಗೆಗೆ ಹೊತ್ತೊಯ್ಯಬೇಕಾದ ಸಮೂಹ ಸಂವಹನ ಮಾಧ್ಯಮಗಳಲ್ಲಿ ಸಿನೆಮಾ ಹಾಗೂ ದೂರದರ್ಶನ ತಮ್ಮ ದೃಕ್-ಸಾಮರ್ಥ್ಯದಿಂದಾಗಿ ಅತ್ಯಂತ ಪ್ರಭಾವಿಯೂ, ಜನಪ್ರಿಯವೂ ಆಗಿವೆ ಎನ್ನುವ ವಿಚಾರ ಈಗಾಗಲೇ ಸ್ಪಷ್ಟವಾಗಿದೆ. ಸಿನೆಮಾ ಬಹುತೇಕ ಮಟ್ಟಿಗೆ ಮನರಂಜನಾ ಮಾಧ್ಯಮವೇ ಎನಿಸಿದ್ದು ಹಲವೊಮ್ಮೆ ಸಮಾಜ ಪೋಷಣೆಗೆ ಪೂರಕವಾಗುವ ಸಂದೇಶಗಳನ್ನೂ, ಪ್ರಜ್ಞೆಯನ್ನೂ ಪ್ರೇಕ್ಷಕನಿಗೆ ನೀಡುತ್ತಿದೆ. ಹಾಗಾಗಿ ಸಮಾಜ ಪೋಷಣೆಯ ಗುರುತರ ಹೊಣೆ ದೂರದರ್ಶನದ ಮೇಲೆ ಇರುವುದು ಖಚಿತ. ಅದರಲ್ಲೂ ಚಿತ್ರಮಂದಿರಕ್ಕೆ ಹೋಗಿ ಸಿನೆಮಾ ನೋಡಿ ಬರುವಂತಾಗದೆ, ಮನೆ ಮನೆಯಲ್ಲೇ ಕುಳಿತು ಟಿವಿ. ವೀಕ್ಷಿಸಬಹುದಾಗಿರುವುದರಿಂದ ಇದು ಸುಲಭವಾಗಿ ಲಭ್ಯವಾಗುವ ಮಾಧ್ಯಮವೂ ಆಗುತ್ತದೆ. ಜೊತೆಗೆ ಮನೆಯಲ್ಲಿರುವ, ಒಂದು ಸಮುದಾಯದಲ್ಲಿರುವ, ಒಂದು ಸಮಾಜದಲ್ಲಿರುವ ಎಲ್ಲ ಬಗೆಯ ಅಂದರೆ ವಯೋವರ್ಗ, ಜಾತಿ - ಮತ - ಪಂಥ, ಲಿಂಗ, ಪ್ರಾದೇಶಿಕ - ಸಾಂಸ್ಕೃತಿಕ - ಆರ್ಥಿಕ ಭಿನ್ನತೆಯುಳ್ಳ ಎಲ್ಲ ಬಗೆಯ ಜನರಿಗೆ ಅಂದರೆ ಸಮೂಹಕ್ಕೆ ಸಹ್ಯವಾಗುವಂತಹ ಜನರ ವಿಭಿನ್ನ ಅಭಿರುಚಿ, ಆಸಕ್ತಿ, ಅವಶ್ಯಕತೆಗಳಿಗೆ ತಕ್ಕಂತೆ ಕಾರ್ಯಕ್ರಮಗಳನ್ನು ಪೂರೈಸಬೇಕಾದ ಜವಾಬ್ದಾರಿ ಸಹಜವಾಗಿ ದೂರದರ್ಶನದ ಮೇಲೇ ಇದೆ. ಇಂತಹ ಸಾಮಾಜಿಕ ಅಗತ್ಯಗಳನ್ನು ಈ ಮಾಧ್ಯಮ ಹೇಗೆ ಪೂರೈಸುತ್ತಿದೆ ಎನ್ನುವುದನ್ನು ಅಧ್ಯಯನದ ಸಂದರ್ಭದಲ್ಲಿ ಗುರುತಿಸಲಾಯಿತು.

ದೂರದರ್ಶನದ ಕಾರ್ಯಕ್ರಮಗಳನ್ನು ಮುಖ್ಯವಾಗಿ ೩ ನೆಲೆಗಳಲ್ಲಿ ಗುರುತಿಸಬಹುದು.

೧. ವೈಚಾರಿಕ

೨. ಮನರಂಜನೆ

೩. ಮಾಹಿತಿ

ಹಲವು ವೇಳೆ ಮನರಂಜನೆಯ ಮೂಲಕವೇ ಮಾಹಿತಿ, ಸಂದೇಶಗಳನ್ನು, ವಿಚಾರಶೀಲ ಪ್ರಜ್ಞೆಯನ್ನೂ ಚಿಂತನೆಯನ್ನೂ ರವಾನಿಸುವ ಶಕ್ತಿ ಮಾಧ್ಯಮಗಳಿಗಿದೆ.

**ವೈಚಾರಿಕ**

ವೈಚಾರಿಕ ಕಾರ್ಯಕ್ರಮಗಳಲ್ಲಿ ಎರಡು ವಿಧಗಳನ್ನು ಗುರುತಿಸಬಹುದು.

೧. ಗಂಭೀರ ಚಿಂತನೆಯ ಕಾರ್ಯಕ್ರಮಗಳು

೨. ಲಘು ಆಸ್ವಾದನೆಯ ಕಾರ್ಯಕ್ರಮಗಳು

ದೂರದರ್ಶನದ ಕಾರ್ಯಕ್ರಮಗಳನ್ನು ಸಾಮಾನ್ಯ ಪ್ರೇಕ್ಷಕರು ಹಾಗೂ ವಿಶೇಷ ಪ್ರೇಕ್ಷಕರು ಎನ್ನುವ ಎರಡು ವರ್ಗದ ಪ್ರೇಕ್ಷಕರಿಗಾಗಿ ಸಿದ್ಧಪಡಿಸಬೇಕಾಗುತ್ತದೆ. ಸುದ್ದಿಯೂ ಸೇರಿದಂತೆ ಅನೇಕ ಕಾರ್ಯಕ್ರಮಗಳು ಕುಟುಂಬದವರೆಲ್ಲರೂ, ಸಮಾಜದ ಎಲ್ಲ ವರ್ಗದವರು ನೋಡಬಹುದಾದ ಸಾಮಾನ್ಯ ಕಾರ್ಯಕ್ರಮಗಳಾಗಿರುತ್ತವೆ. ಈ ಕಾರ್ಯಕ್ರಮಗಳ ವಿಷಯ, ಪ್ರಸ್ತುತಪಡಿಸುವ ರೀತಿ ಎಲ್ಲರನ್ನೂ ತಲುಪುವಂತಿರುತ್ತದೆ. ಕೆಲವು ಕಾರ್ಯಕ್ರಮಗಳನ್ನು ಕೆಲವು ನಿರ್ದಿಷ್ಟ ಪ್ರೇಕ್ಷಕರ ಗುಂಪಿಗಾಗಿಯೇ ರೂಪಿಸಬೇಕಾಗುತ್ತದೆ. ಉದಾಹರಣೆಗೆ ಮಹಿಳೆಯರ ಆಸಕ್ತಿ ಅಭಿರುಚಿಗಳಿಗೆ ತಕ್ಕಂತೆ, ಮಕ್ಕಳ ಗ್ರಾಹ್ಯಶಕ್ತಿಗೆ ತಕ್ಕಂತೆ, ರೈತಾಪಿ ವರ್ಗದವರ ಆಸಕ್ತಿ, ಅವಶ್ಯಕತೆಗಳಿಗೆ ತಕ್ಕಂತೆ ಕೆಲವು ಕಾರ್ಯಕ್ರಮಗಳಿರುತ್ತವೆ. ಹಾಗಾಗಿ ಮಹಿಳೆ, ಮಕ್ಕಳು, ರೈತರು ಮುಂತಾದ ವಿಶೇಷ ಪ್ರೇಕ್ಷಕರು ಸೃಷ್ಟಿಗೊಳ್ಳುತ್ತಾರೆ. ಈ ವಿಶೇಷ ಪ್ರೇಕ್ಷಕರಿಗಾಗಿ ರೂಪಿಸಲಾಗುವ ಕಾರ್ಯಕ್ರಮಗಳಲ್ಲೇ ಗಂಭೀರ ಚಿಂತನೆಯ ಕಾರ್ಯಕ್ರಮಗಳನ್ನೂ ಲಘು ಆಸ್ವಾದನೆಯ ಕಾರ್ಯಕ್ರಮಗಳನ್ನೂ ಗುರುತಿಸಬಹುದು.

**ಗಂಭೀರ ಚಿಂತನೆಯ ಕಾರ್ಯಕ್ರಮಗಳು :** ಸಮಾಜದಲ್ಲಿ ದುರ್ಬಲ ವರ್ಗದವರು ಎಂದು ಗುರುತಿಸುವ ವರ್ಗದಲ್ಲಿ ಮಹಿಳೆಯರೂ ಸೇರಿದ್ದಾರೆ. ಅನೇಕ ಬಗೆಯ ಸಾಮಾಜಿಕ ಆತಂಕಗಳನ್ನು ಅವರು ಎದುರಿಸುತ್ತಿದ್ದಾರೆ. ಅವರು ತಮ್ಮ ಹಕ್ಕುಗಳ ಬಗ್ಗೆ ಕರ್ತವ್ಯಗಳ ಬಗ್ಗೆ ತಿಳುವಳಿಕೆ ಪಡೆಯಬಯಸಿಯೂ ಇದ್ದಾರೆ. ತಮ್ಮ ಸಾಮಾಜಿಕಾರ್ಥಿಕ - ಸ್ಥಾನಮಾನ, ಸ್ವಾವಲಂಬನೆ, ಸಂರಕ್ಷಣೆಗಳತ್ತ ಗಮನ ಹರಿಸಲಿಚ್ಛಿಸುತ್ತಾರೆ. ಸಮಾಜದ ಎಲ್ಲ ರಂಗಗಳಲ್ಲೂ ಮುಂದಡಿಯಿಡುತ್ತಿದ್ದಾರೆ. ಅಂತಹ ಮಹಿಳೆಯರಲ್ಲಿ ಅರಿವು/ಜಾಗೃತಿ ಮೂಡಿಸಿ, ಆತ್ಮವಿಶ್ವಾಸವನ್ನು ಗಟ್ಟಿಗೊಳಿಸುವಂತಹ ಕಾರ್ಯಕ್ರಮಗಳು ಸಮಾಜವನ್ನು ಹೊಸ ಚಿಂತನೆಗಳಿಗೆ ಹಚ್ಚುತ್ತವೆ. ಮಹಿಳೆಯರ ಉಪಯೋಗಕ್ಕಾಗಿ ಪ್ರಸಾರವಾಗುವ ಇಂತಹ ಕಾರ್ಯಕ್ರಮಗಳಲ್ಲದೆ ಮಹಿಳೆಯರ ಬವಣೆ, ಕಷ್ಟ - ಕಾರ್ಪಣ್ಯ, ಕುಟುಂಬದ ಆರೋಗ್ಯ ಮುಂತಾಗಿ ಮಹಿಳೆಯರನ್ನು ಕುರಿತ ಕಾರ್ಯಕ್ರಮಗಳನ್ನೂ ದೂರದರ್ಶನ ಪ್ರಸಾರ ಮಾಡುವುದರ ಮೂಲಕ ಅವರ ಬಗ್ಗೆ ಕುಟುಂಬದ ಮತ್ತೊಂದು ಭಾಗವಾದ ಪುರುಷರಲ್ಲೂ ಜಾಗೃತಿ, ತಿಳುವಳಿಕೆ ಮೂಡಿಸಬೇಕಾದ ಅಗತ್ಯವಿದೆ.

ಉದಾಹರಣೆಗೆ, ಡಿಡಿ-೧ ರಲ್ಲಿ ಪ್ರಸಾರವಾಗುವ 'ಭಗಿನಿ' ಕಾರ್ಯಕ್ರಮ. ಈ ಕಾರ್ಯಕ್ರಮದ ವ್ಯಾಪ್ತಿಯಲ್ಲಿ, ಮಹಿಳೆ ಮತ್ತು ಕಾನೂನು ಎನ್ನುವ ಪ್ರಶ್ನಾವಳಿ ಕಾರ್ಯಕ್ರಮವನ್ನು ೧೯೯೨ರಲ್ಲಿ ಪ್ರಸಾರ ಮಾಡುವಾಗ ಸಮಾಜದ ವಿವಿಧ ವರ್ಗಗಳಿಗೆ ಸೇರಿದ ಸ್ತ್ರೀ - ಪುರುಷರನ್ನೂ ಸ್ಟೂಡಿಯೋಗೆ ಆಹ್ವಾನಿಸಿ ಮಹಿಳೆಯರ ಹಕ್ಕು-ಬಾಧ್ಯತೆಗಳಿಗೆ ಸಂಬಂಧಿಸಿದ ಪ್ರಶ್ನೆಗಳನ್ನು ಕೇಳಲಾಯಿತು. ಈ ಕಾರ್ಯಕ್ರಮದಲ್ಲಿ ನುರಿತ ವಕೀಲರೊಬ್ಬರ ಮೂಲಕ ಹೆಚ್ಚಿನ ವಿವರ ಹಾಗೂ ಸ್ಪಷ್ಟನೆಯನ್ನು ಕೊಡಿಸಲಾಯಿತು. ಈ ಕಾರ್ಯಕ್ರಮದ ವಿಶೇಷವೇನೆಂದರೆ, ಸಮಾಜವನ್ನು ಪ್ರತಿನಿಧಿಸುವ ಅನೇಕ ಆಯ್ದ ವೀಕ್ಷಕರು ಕಾರ್ಯಕ್ರಮದಲ್ಲಿ ಪಾಲ್ಗೊಂಡು ಸಂಶಯಗಳನ್ನು ನಿವಾರಿಸಿಕೊಳ್ಳುವ ಮೂಲಕ ಇದೊಂದು ದ್ವಿಮುಖ ಸಂವಹನೆಯ ಮೊದಮೊದಲ ಕಾರ್ಯಕ್ರಮವೆನಿಸಿತು.

ಇದೇ ರೀತಿಯ ಮತ್ತೊಂದು ಕಾರ್ಯಕ್ರಮದಲ್ಲೂ ಸಿಟಿ ಬಸ್ಸುಗಳಲ್ಲಿ ಮಹಿಳೆಯರಿಗೆ ಪ್ರತ್ಯೇಕ ಆಸನ ವ್ಯವಸ್ಥೆ ಬೇಕೇ ಬೇಡವೇ ಎನ್ನುವ ಬಗ್ಗೆ ಗಂಭೀರ ಚರ್ಚೆ ನಡೆಸಲಾಯಿತು. ಇದರಲ್ಲಿ ಸಾರಿಗೆ ಆಯುಕ್ತರೂ ಪಾಲ್ಗೊಂಡು ನೇರ, ಅಂತರ್‌ಸಂವಹನೆಗೆ ಅನುವು ಮಾಡಿಕೊಡಲಾಯಿತು. ವೀಕ್ಷಕರಲ್ಲಿ ಆಸಕ್ತಿ ಮೂಡಿಸುವ ಸಲುವಾಗಿ ಮಹಿಳಾಪರ ಚಿಂತನೆಗಳನ್ನು ಕಥಾರೂಪದಲ್ಲೂ ಪ್ರಸಾರ ಮಾಡಲಾಗುತ್ತಿತ್ತು.

ಮಹಿಳಾ ಮೀಸಲಾತಿ, ಸ್ವಯಂ ಉದ್ಯೋಗ - ಸಶಕ್ತೀಕರಣ, ವಿಧವಾ ವಿವಾಹ, ಲಿಂಗಭೇದ, ಹಲವು ರಂಗಗಳಲ್ಲಿ ಅಸಾಧಾರಣ ಸಾಧನೆ ಮಾಡಿದ ಮಹಿಳೆಯರ ವ್ಯಕ್ತಿ ಚಿತ್ರ, ಸ್ವಾತಂತ್ರ್ಯ ಹೋರಾಟದಲ್ಲಿ ಮಹಿಳೆಯರ ಪಾತ್ರ, ಮಹಿಳಾ ಆರೋಗ್ಯ ಮುಂತಾದ ಅನೇಕಾನೇಕ ಕಾರ್ಯಕ್ರಮಗಳನ್ನು ೧೯೯೦ರ ದಶಕದ ಮಧ್ಯಭಾಗದವರೆಗೂ ನಿರಂತರವಾಗಿ ಡಿಡಿ-೧ರಲ್ಲಿ ಬಿತ್ತರಿಸುವ ಮೂಲಕ ಮಹಿಳಾಪರ ಚಿಂತನೆಗಳನ್ನು ಈ ಮಾಧ್ಯಮ ತನ್ನ ಪ್ರೇಕ್ಷಕರಲ್ಲಿ ಮೂಡಿಸುವ ಪ್ರಯತ್ನ ನಡೆಸಿತು. ೧೯೯೭ರಲ್ಲಿ ಆರಂಭವಾದ ಉದಯ ವಾಹಿನಿ 'ಶಕ್ತಿ' ಎನ್ನುವ ಟಾಕ್ ಶೋ, ೨೦೦೦ದಲ್ಲಿ ಆರಂಭವಾದ ಈಟೀವಿ ಕನ್ನಡ 'ಅಗ್ನಿ', 'ಸಖೀ', 'ಕಲ್ಯಾಣಿ' ಸಂಚಿಕೆಗಳ ಮೂಲಕವೂ ಮಹಿಳಾ ವಿಚಾರಗಳಿಗೆ ಸ್ಪಂದನೆ ನೀಡಲು ಇದೀಗ ಆರಂಭಿಸಿವೆ.

**ಲಘು ಆಸ್ವಾದನೆಯ ಕಾರ್ಯಕ್ರಮಗಳು :** ಕುಟುಂಬದಲ್ಲಿ ಮಹಿಳೆಯ ಜವಾಬ್ದಾರಿ ದೊಡ್ಡದು. ಕುಟುಂಬದ ಆರೋಗ್ಯ, ಮನೆಯ ಸೌಂದರ್ಯ, ಆಹಾರ, ಶುಚಿತ್ವ ಮುಂತಾಗಿ ಎಲ್ಲ ವಿಷಯಗಳ ಬಗ್ಗೆಯೂ ಆಕೆ ಹೆಚ್ಚಿನ ವಿಚಾರ ತಿಳಿಯಬಯಸುತ್ತಾಳೆ. ಇಲ್ಲೂ ದೂರದರ್ಶನ ಅವಳ ನೆರವಿಗೆ ಬರುತ್ತದೆ. ಹೊಸತನ, ಹೊಸ ವಿಚಾರಗಳನ್ನು ತಿಳಿಸುವ ಕಾರ್ಯಕ್ರಮಗಳೇ ಈ ಎರಡನೆ ಪ್ರಕಾರದ ಕಾರ್ಯಕ್ರಮಗಳಲ್ಲಿ ಸೇರಿರುತ್ತವೆ. ಒಳಾಂಗಣ ಅಲಂಕಾರ, ಪುಷ್ಪಾಲಂಕಾರ, ಉಡುಗೆ ವಿನ್ಯಾಸ, ಕರಕುಶಲ ಕಲೆ ಹಾಗೂ ಪ್ರಸಾಧನ ಮೊದಲಾದ ವಿಷಯಗಳಲ್ಲಿ ಒಲವಿರುವ ಮಹಿಳೆಯರಿಗಾಗಿ ಅನೇಕ ಕಾರ್ಯಕ್ರಮಗಳು ಅಷ್ಟಾಗಿ ಪ್ರಸಾರವಾಗುತ್ತಿಲ್ಲ. ಆದರೆ ಖಾಸಗಿ ವಾಹಿನಿಗಳು ಇಂತಹ ಕಾರ್ಯಕ್ರಮಗಳ ಮೂಲಕ ಉದ್ಯೋಗಸ್ಥರಲ್ಲದ ಮಹಿಳೆಯರ ಆಕರ್ಷಣೆಯನ್ನು ತಮ್ಮತ್ತ ಸೆಳೆದುಕೊಳ್ಳುತ್ತಿವೆ. ಉದಯ ಟಿವಿ ಪ್ರತಿದಿನ ಬೆಳಿಗ್ಗೆ ೮ ಗಂಟೆ ೩೦ ನಿಮಿಷಕ್ಕೆ 'ಮಾನಿನಿ' ಎನ್ನುವ ಕಾರ್ಯಕ್ರಮದಲ್ಲಿ ಇವನ್ನು ಪ್ರಸಾರ ಮಾಡುತ್ತಿದೆ.

ಸಮಾಜದ ಅರ್ಧಭಾಗವೂ ಹಾಗೇ ಪ್ರೇಕ್ಷಕರ ಅರ್ಧಭಾಗವೂ ಆಗಿರುವ 'ಮಹಿಳೆಯರ ಸಮಾನತೆ, ಅಭಿವೃದ್ಧಿಯಂತಹ ರಾಷ್ಟ್ರೀಯ ನೀತಿಗೂ, ಅದನ್ನು ಪ್ರತಿಬಿಂಬಿಸುವಲ್ಲಿ ದೂರದರ್ಶನದ ಪಾತ್ರ ಮತ್ತು ಕಾರ್ಯಕ್ರಮ ಸೃಷ್ಟಿಗೂ ಅಜಗಜಾಂತರದ ಅಂತರವಿದೆ; ಮಹಿಳಾ ಪರ ಉದ್ದೇಶಗಳೊಂದಿಗೆ ಅದು ಮಾಡುತ್ತಿರುವ ಪ್ರಯತ್ನಗಳೂ ಮಸುಕಾಗಿವೆ' ಎಂದು ೧೯೯೮ರಲ್ಲಿ ದೆಹಲಿಯಲ್ಲಿ ನಡೆದ 'ಮಹಿಳಾ ಸಮಾನತೆ ಮತ್ತು ಅಭಿವೃದ್ಧಿಯ ಕಾರ್ಯದಲ್ಲಿ ದೂರದರ್ಶನದ ಪಾತ್ರ' ಎನ್ನುವ ವಿಚಾರ ಸಂಕಿರಣದಲ್ಲಿ ಅಭಿಪ್ರಾಯ ಪಡಲಾಯಿತು.

ಈ ಅಂತರವನ್ನು ಕಡಿಮೆಮಾಡಿಕೊಳ್ಳಬೇಕಾದರೆ ಕೇವಲ ಮಹಿಳೆಯರಲ್ಲಿ ಮಹಿಳೆಯರ ಬಗ್ಗೆ ಜಾಗೃತಿ ಮೂಡಿಸುವ ಕೆಲಸವನ್ನಷ್ಟೇ ಮಾಡದೆ ಅವರ ಸಮಸ್ಯೆಗಳಿಗೆ ಸಾರ್ವತ್ರಿಕ ಪರಿಹಾರ ಹುಡುಕುವ ಕೆಲಸವನ್ನೂ ಈ ಮಾಧ್ಯಮ ಮಾಡಬೇಕು. ಆಗ ಸಮಾಜ ಸುಧಾರಿಸುತ್ತದೆ, ಅದರ ಪ್ರಬಲ ಅಸ್ತ್ರ ಟೆಲಿವಿಷನ್ ಆಗುತ್ತದೆ. ಅದನ್ನೇ ನವದೆಹಲಿಯ ಕುಟುಂಬ ಯೋಜನಾ ಫೌಂಡೇಶನ್ನಿನ ನಿರ್ದೇಶಕಿ ರಾಣಿ ಚಾಬ್ರಾ ಹೀಗೆ ಹೇಳಿದ್ದಾರೆ.

*How far television succeeds in serving the interests of women is in fact a touch stone of how far television in made a genuine development tool.*"

**ಮಕ್ಕಳ ಕಾರ್ಯಕ್ರಮ :** ಮಹಿಳೆಯರಂತೆ ಮಕ್ಕಳೂ ಟಿಲಿವಿಷನ್ನಿನ ವಿಶೇಷ ಪ್ರೇಕ್ಷಕರು. ಅವರಿಗೆ ಟೆಲಿವಿಷನ್ನೂ ವಿಶೇಷವೇ. ಅವರಿಗೆಂತಹ ಕಾರ್ಯಕ್ರಮ ಬೇಕು ಎಂಬುದನ್ನು ಅವರೇ ನಿರ್ಧರಿಸಿಕೊಳ್ಳಲಾರದಂತಹವರು. ಅವರಿಗೇನು ಬೇಕು, ಅವರಿಗೇನನ್ನು ಕೊಡಬೇಕು ಎನ್ನುವುದನ್ನು ದೂರದರ್ಶನವೇ ನಿರ್ಧರಿಸಬೇಕು. ಈ ನಿರ್ಧಾರವನ್ನು ಕೈಗೊಳ್ಳುವ ಮುನ್ನ ಮೊದಲು ಮಕ್ಕಳನ್ನು ವಯೋಮಾನದ ಆಧಾರದ ಮೇಲೆ ವರ್ಗೀಕರಿಸಿಕೊಳ್ಳಬೇಕು. ೪ರಿಂದ ೮, ೮ರಿಂದ ೧೨, ೧೨ರಿಂದ ೧೬ ವರ್ಷದವರ ಗುಂಪುಗಳು. ಮಕ್ಕಳ ಏಕಾಗ್ರತೆ, ಗ್ರಾಹ್ಯಶಕ್ತಿ, ಮನನ ಸಾಮರ್ಥ್ಯ ಹಾಗೂ ನೆನಪಿನ ಶಕ್ತಿಯಲ್ಲಿ ಭಿನ್ನತೆ ಇರುವುದೇ ಈ ವಿಭಜನೆಗೆ ಕಾರಣ. ೪ ರಿಂದ ೮ ವರ್ಷದ ಮಕ್ಕಳು ಆಡುತ್ತಾ ಕಲಿಯುವ ವಯಸ್ಸಿನವು. ಅವುಗಳಿಗೆ ಟಿವಿ ಮುಂದೆ ಕುಳಿತು ನೋಡುವ ತಾಳ್ಮೆ ಇರುವುದಿಲ್ಲ. ಹಾಗಾಗಿ ಅಂತಹ ಮಕ್ಕಳಿಗೆ ಸಣ್ಣಪುಟ್ಟ ಶಿಶು ಗೀತೆಗಳು, ಪ್ರಾಣಿ, ಹೂ - ಹಣ್ಣುಗಳನ್ನು ಪರಿಚಯಿಸುವ ಚಾಮತ್ಕಾರಿಕ ಚಿತ್ರಗಳು, ಅದೇ ವಯಸ್ಸಿನ ಮಕ್ಕಳು ಮಾಡುವ ನೃತ್ಯ ಮುಂತಾದವನ್ನು ಬಹಳ ಕಡಿಮೆ ಅವಧಿಗೆ ಪ್ರಸಾರ ಮಾಡಬೇಕು. ಅಂತಹ ಕಾರ್ಯಕ್ರಮ ನೋಡಿದ ಮಕ್ಕಳು ತಾವೂ ಅದನ್ನು ಅನುಕರಣೆ ಮಾಡುವ, ಕುತೂಹಲ ಬೆಳೆಸಿಕೊಂಡು ಮನೆಯಲ್ಲಿ ಹಿರಿಯರನ್ನು ಆ ಬಗ್ಗೆ ಕೇಳಿ ತಿಳಿದುಕೊಳ್ಳುವ ಪ್ರಯತ್ನ ಮಾಡಬಹುದು. ೮ ರಿಂದ ೧೨ ವರ್ಷದ ಮಕ್ಕಳು ಸಹಜವಾಗೇ ಕುತೂಹಲಿಗಳು. ನೋಡಿದ್ದೆಲ್ಲವನ್ನೂ ಅದು ಯಾಕೆ, ಇದು ಹೇಗೆ ಎಂದು ತಿಳಿಯುವ ಹಂಬಲ ಆ ವಯಸ್ಸಿನಲ್ಲಿ ಸಹಜ. ಅಂದರೆ ಜ್ಞಾನಗ್ರಾಹ್ಯದ ವಯಸ್ಸದು. ಇಂತಹ ಮಕ್ಕಳಿಗೆ ಶಾಲಾ ಪಠ್ಯಕ್ರಮದ ಆಸುಪಾಸಿನಲ್ಲೇ, ಅದಕ್ಕೆ ಪೂರಕವೂ ಆಗುವಂತಹ ವಿಷಯಗಳನ್ನೆಲ್ಲ ಕಥೆ, ಗೀತೆ, ರೂಪಕಗಳ ಮೂಲಕ ಪ್ರಸಾರ ಮಾಡಿದರೆ ಆ ಮಕ್ಕಳ ಮನನ ಶಕ್ತಿಗೆ ಅನುಕೂಲವಾಗುತ್ತದೆ. ಅನಿಮೇಷನ್, ಚಮತ್ಕಾರ, ಕಾರ್ಟೂನ್ ಚಿತ್ರ ಈ ಗುಂಪಿನ ಮಕ್ಕಳು ಬಯಸುವ ಮುಖ್ಯ ಶೈಲಿಗಳು. ೧೨ರಿಂದ ೧೬ರ ವಯೋಗುಂಪಿನ ಮಕ್ಕಳು ಹೆಚ್ಚು ಜವಾಬ್ದಾರಿಯನ್ನೂ ಪ್ರದರ್ಶಿಸುತ್ತಾರೆ. ಅವರಿಗೇನು ಬೇಕು ಎನ್ನುವುದನ್ನು ಅವರು ತಿಳಿಸಬಲ್ಲವರಾಗಿದ್ದಾರೆ, ಆರಿಸಿಕೊಳ್ಳುವವರಾಗಿದ್ದಾರೆ. ಅವರಿಗೆ ಜ್ಞಾನ ಬೋಧಕ ಪ್ರಶ್ನಾವಳಿ, ಚಿಂತನೆಗೆ ಒಡ್ಡುವ ಸಣ್ಣ ಚರ್ಚಾಕೂಟಗಳು ಬೇಕು. ತಮ್ಮಲ್ಲಿರುವ ಪ್ರತಿಭೆಯನ್ನೇ ಪ್ರದರ್ಶಿಸಬಯಸುವ ವರ್ಗ ಅವರದು. ಅದೇ ರೀತಿ ಹೆಚ್ಚುಹೆಚ್ಚಾಗಿ ಮನರಂಜನೆ, ಸಿನೆಮಾ, ಸಾಹಸ ಮೊದಲಾದ ವಿಷಯಗಳತ್ತಲೂ ತೀವ್ರ ಆಸಕ್ತಿ ಬೆಳೆಸಿಕೊಳ್ಳುವ, ಟಿವಿಯಲ್ಲಿ ಕಂಡದ್ದನ್ನು ತಾವೂ ಮಾಡಬಯಸುವ ಸಂದಿಗ್ಧ ವಯಸ್ಸು ಅವರದು. ಹಾಗಾಗಿ ಈ ಗುಂಪಿನ ಮಕ್ಕಳಿಗೆ ಕಾರ್ಯಕ್ರಮಗಳನ್ನು ರೂಪಿಸುವಾಗ ಅತೀ ಎಚ್ಚರಿಕೆಯಿಂದ ಯೋಜಿಸಬೇಕು.

ಈ ರೀತಿ ಮಕ್ಕಳನ್ನು ವಯಸ್ಸಿನ ಆಧಾರದ ಮೇಲೆ ತಂಡಗಳಾಗಿ ವಿಂಗಡಿಸಿಕೊಂಡು ಕನ್ನಡ ವಾಹಿನಿಗಳು ಕಾರ್ಯಕ್ರಮ ಪ್ರಸಾರ ಮಾಡಿದ ಬಗ್ಗೆ ಅಧ್ಯಯನದ ವೇಳೆಯಲ್ಲಿ ತಿಳಿದುಬರಲಿಲ್ಲ. ಮಕ್ಕಳಿಗಾಗಿ ಡಿಡಿ-೧, ಉದಯ ವಾಹಿನಿಗಳು ಕಾರ್ಯಕ್ರಮಗಳನ್ನು ಪ್ರಸಾರ ಮಾಡುತ್ತಿವೆಯಾದರೂ, ಆ ಬಗ್ಗೆ ತೀವ್ರ ಕಾಳಜಿ, ಶ್ರದ್ಧೆ ವಹಿಸಿದಂತಿಲ್ಲ. ಸಾಹಿತ್ಯ ಕ್ಷೇತ್ರದಲ್ಲೂ ಮಕ್ಕಳ ಸಾಹಿತ್ಯ ನಿರ್ಲಕ್ಷ್ಯಕ್ಕೆ ಒಳಗಾದಂತೆ ಟಿವಿ ಸಹ ಮಕ್ಕಳಿಗೆ ತಕ್ಕ ಉತ್ತೇಜನ ನೀಡುತ್ತಿಲ್ಲ ಎನ್ನುವುದು ಗಮನಾರ್ಹ. ಡಿಡಿ -೧ ರಲ್ಲಿ ಅಲ್ಲೊಂದು ಇಲ್ಲೊಂದು ಕಾರ್ಯಕ್ರಮಗಳು ಉಪಯುಕ್ತ ಎನಿಸಿದರೂ ಅದರಲ್ಲಿ ಪಾಲ್ಗೊಳ್ಳುವ ಹಿರಿಯರದೇ ಹೆಚ್ಚು ಮಾತುಗಾರಿಕೆ, ವಿಶೇಷ ಆಕರ್ಷಣೆ ಇಲ್ಲದಂತೆ ಸ್ಟೂಡಿಯೋದಲ್ಲೇ ನಡೆಸುವ ಚಿತ್ರೀಕರಣ, ಈ ಆಧುನಿಕ ಯುಗದ ಹೊಸ ಆಲೋಚನೆಗಳಿಗೆ ಸ್ಪಂದಿಸದೆ ಮಕ್ಕಳಿಗೇನು ಬೇಕು ಎನ್ನುವುದಕ್ಕಿಂತ ನಾವು ಕೊಟ್ಟಿದ್ದನ್ನೇ ಮಕ್ಕಳು ನೋಡಬೇಕು ಎನ್ನುವ ಬಲವಂತದೊಂದಿಗೆ ಹಳೇ ಮಾದರಿಯಲ್ಲೇ ಕಾರ್ಯಕ್ರಮಗಳನ್ನು ನಿರ್ಮಾಣ ಮಾಡುವುದರಿಂದ ಆ ಕಾರ್ಯಕ್ರಮಗಳು ಸೋಲನುಭವಿಸುತ್ತಿವೆ. ನಡೆಸುವ ಪ್ರಶ್ನಾವಳಿಗಳನ್ನು ಇನ್ನೂ ಆಕರ್ಷಣೀಯಗೊಳಿಸಬಹುದು. ಆದಷ್ಟು ಮಟ್ಟಿಗೆ ಧಾರಾವಾಹಿಯಾಗಿ ಮಕ್ಕಳ ಕಾರ್ಯಕ್ರಮಗಳನ್ನು ಪ್ರಸಾರ ಮಾಡದಿರುವುದೇ ಒಳಿತು.

ಖಾಸಗಿ ವಾಹಿನಿಯಾದ ಉದಯ ಟಿವಿ ಮಕ್ಕಳಿಗಾಗಿ ಡ್ಯಾನ್ಸ್ ಡ್ಯಾನ್ಸ್ ಎನ್ನುವ ಸಾಮೂಹಿಕ ನೃತ್ಯ ಕಾರ್ಯಕ್ರಮ, ರಾಷ್ಟ್ರೀಯ ದೂರದರ್ಶನ ಚಾನೆಲ್‌ನಿಂದ ಧಾರಾವಾಹಿಯಾಗಿ ಹರಿದು ಬಂದ 'ಜಂಗಲ್‌ಬುಕ್' ಅ್ಯನಿಮೇಷನ್ ಚಿತ್ರದ ಕನ್ನಡ ಅವತರಣಿಕೆಯನ್ನು ಪ್ರಸಾರ ಮಾಡುತ್ತಿದೆ. 'ಸುಪ್ರಭಾತ' ವಾಹಿನಿ 'ನೃತ್ಯ ದರ್ಶನ' ಎನ್ನುವ ಶಾಸ್ತ್ರೀಯ ನೃತ್ಯ ಕಾರ್ಯಕ್ರಮವನ್ನು ಪ್ರಸಾರ ಮಾಡುತ್ತ ಬಾಲಪ್ರತಿಭೆಗಳನ್ನು ಗುರುತಿಸುವ ಪ್ರಯತ್ನ ಮಾಡುತ್ತಿದೆ.

ಇದನ್ನೆಲ್ಲ ಗಮನಿಸಿದಾಗ ಡಿಡಿ-೧ ಮಕ್ಕಳಿಗಾಗಿ 'ಅರಳು ಮಲ್ಲಿಗೆ'ಯಲ್ಲಿ ವೈವಿಧ್ಯಮಯ ಕಾರ್ಯಕ್ರಮಗಳನ್ನು ಮಾಡಿದೆ. ಆದರೆ ಅದಕ್ಕೊಂದು ಶಿಸ್ತು ಅಥವಾ ಕ್ರಮಬದ್ಧತೆಯಿಲ್ಲ ಎಂದು ಹೇಳಬಹುದು. ಮಕ್ಕಳ ಸಾಹಿತಿಗಳನ್ನು ಪರಿಚಯಿಸುವ 'ಇವರ ನೀವು ಬಲ್ಲಿರಾ?' ಕಾರ್ಯಕ್ರಮ ಮೂರೇ ಸಾಹಿತಿಗಳಿಗೆ ಸೀಮಿತವಾದದ್ದು ಇದಕ್ಕೊಂದು ಉದಾಹರಣೆ. ಕ್ವಿಜ್ ಕಾರ್ಯಕ್ರಮ 'ಚೂಟಿ ಚುರುಕು', ವಿಜ್ಞಾನ ರಸಪ್ರಶ್ನೆ, ಗೀತ ಚಿತ್ರ, 'ಅರಳು ಪ್ರತಿಭೆ' ಎನ್ನುವ ಇನ್ನೊಂದು ಕಾರ್ಯಕ್ರಮದಲ್ಲಿ ಬಾಲಪ್ರತಿಭೆಗಳನ್ನು ಗುರುತಿಸಿ ಪರಿಚಯಿಸಿದ ಉದಾಹರಣೆಗಳಿವೆ. ಇದೀಗ ತಾನೆ ಕಾರ್ಯಾರಂಭ ಮಾಡಿರುವ ಈಟೀವಿ ಕನ್ನಡ ಚಾನೆಲ್ 'ಪುಟಾಣಿ ಡಾಟ್ ಕಾಮ್' ಎನ್ನುವ ವಿನೂತನ ಪರಿಕಲ್ಪನೆಯ ಮಕ್ಕಳ ಕಾರ್ಯಕ್ರಮವನ್ನು ಪ್ರಸಾರ ಮಾಡುತ್ತಿರುವುದು ಪ್ರೇಕ್ಷಕರ ಗಮನ ಸೆಳೆದಿದೆ. ಕಾರ್ಯಾರಂಭ (೧೦-೧೨-೨೦೦೦) ಮಾಡಿದ ಕೇವಲ ಒಂದು ವಾರದ ಅವಧಿಯೊಳಗೆ ಖಾಸಗಿ ವಾಹಿನಿ ಮಕ್ಕಳಿಗಾಗಿ ಇಂತಹ ನೂತನ ಆಲೋಚನೆಯ ಕಾರ್ಯಕ್ರಮ ನೀಡಿರುವುದು ಗಮನಾರ್ಹ. ಅಂದರೆ ಈ ವಾಹಿನಿ ಮಾಡಿಕೊಂಡಿರುವ ಪೂರ್ವಸಿದ್ಧತೆಯನ್ನು ಮನಗಾಣಬೇಕು. ಮಕ್ಕಳು ಕಾಣುತ್ತಿರುವ ಆಧುನಿಕ ಜಗತ್ತಿನ ಒಳಹೊರಗುಗಳನ್ನು, ಅದಕ್ಕೆ ಹೊಂದಿಕೊಳ್ಳುವಲ್ಲಿ ಮಕ್ಕಳ ಮನೋವೈಜ್ಞಾನಿಕ ಅನಿಸಿಕೆಗಳನ್ನು ಮಕ್ಕಳೇ ತಮ್ಮಂತಹ ಮಕ್ಕಳೊಂದಿಗೇ ಹಂಚಿಕೊಳ್ಳುವುದು ವಿಶಿಷ್ಟವಾಗಿದೆ. ಸಂತಸದ ವಿಷಯವೆಂದರೆ ಇದರಲ್ಲಿ ದೊಡ್ಡವರು ತೆರೆಯ ಮೇಲೆ ಬಂದಿಲ್ಲದಿರುವುದು. ಇದಿನ್ನೂ ಪ್ರಾರಂಭಿಕ ಹೆಜ್ಜೆಯಾಗಿದ್ದು ಮುಂದಿನ ಹಂತಗಳನ್ನು ಹತ್ತಿರದಿಂದ ವೀಕ್ಷಿಸಬೇಕಾಗಿದೆ.

ಆದರೂ ಈವರೆಗೂ ಯಾವುದೇ ಕನ್ನಡವಾಹಿನಿ ಸ್ವತಂತ್ರವಾಗಿ ಅ್ಯನಿಮೇಷನ್ ಚಿತ್ರ ಮಾಡಿದ ಉದಾಹರಣೆಯಿಲ್ಲ. ಉತ್ತಮ ಮಟ್ಟದ ಮಕ್ಕಳ ಕಾರ್ಯಕ್ರಮಗಳನ್ನು ನೀಡುವ ಮೂಲಕ ಈ ಮಾಧ್ಯಮ ನಾಳಿನ ಸಮರ್ಥ ಪ್ರಜೆಗಳನ್ನು ರೂಪಿಸುವ ಪ್ರಯತ್ನ ಮಾಡಬಹುದು.

**ಕೃಷಿ ಕಾರ್ಯಕ್ರಮ :** ಇದೂ ಸಹ ವಿಶೇಷ ಪ್ರೇಕ್ಷಕರ ಕಾರ್ಯಕ್ರಮ. ದೇಶದ ಎಲ್ಲ ಪಂಚವಾರ್ಷಿಕ ಯೋಜನೆಗಳಲ್ಲೂ ಪ್ರಾಧಾನ್ಯತೆಯನ್ನು ಗಳಿಸಿರುವ ಈ ಕ್ಷೇತ್ರ ಸಹಜವಾಗಿಯೇ ಡಿಡಿ-೧ರಲ್ಲಿ ಅತ್ಯಂತ ಹೆಚ್ಚಿನ ಮಹತ್ವ ಪಡೆಯಿತು. ಕೃಷಿಕರ ಉಪಯೋಗಕ್ಕಾಗಿ ಅನೇಕ ಬಗೆಯ ಕಾರ್ಯಕ್ರಮಗಳನ್ನು ನಿರ್ಮಿಸಿದ ಹೆಗ್ಗಳಿಕೆ ಡಿಡಿ-೧ಕ್ಕೆ ಸೇರುತ್ತದೆ. ವಿವಿಧ ಬಗೆಯ ಬೇಸಾಯ ಕ್ರಮಗಳು; ಆಧುನಿಕ ವಿಜ್ಞಾನ ಹಾಗೂ ಯಂತ್ರೋಪಕರಣಗಳ ಬಳಕೆ; ಗೊಬ್ಬರ - ಕ್ರಿಮಿನಾಶಕಗಳ ಪ್ರಯೋಜನ; ಕೃಷಿ ಆಧಾರಿತ ಉಪ ಕಸುಬುಗಳು; ಕೃಷಿ ಉತ್ಪನ್ನಗಳ ಮಾರುಕಟ್ಟೆ; ಪ್ರಗತಿಪರ ರೈತರ ಯಶಸ್ವಿ ಕಥೆ; ಕೃಷಿ ತಜ್ಞರೊಂದಿಗೆ ಸಂದರ್ಶನ ಹೀಗೆ ಅನೇಕ ಆಯಾಮಗಳಲ್ಲಿ ಕೃಷಿ ಹಾಗೂ ಅದರ ಸಂಬಂಧೀ ವಲಯದ ಬಗ್ಗೆ ಡಿಡಿ-೧ ಕಾರ್ಯಕ್ರಮಗಳನ್ನು, ಸಾಕ್ಷ್ಯಚಿತ್ರಗಳನ್ನು ಪ್ರಸಾರ ಮಾಡಿದೆ. ಪ್ರಸ್ತುತ ಬೆಂಗಳೂರು ಕೃಷಿ ವಿಶ್ವ ವಿದ್ಯಾನಿಲಯದ ಸಹಕಾರದೊಂದಿಗೆ 'ಕೃಷಿ ಸಂಪದ' ಎನ್ನುವ ಕಾರ್ಯಕ್ರಮ ಬಿತ್ತರಿಸುತ್ತಿದೆ. ಹಾಗೆ ಗಮನಿಸಿದಾಗ ಖಾಸಗಿ ವಾಹಿನಿಗಳು ನಗರ ಜೀವನದ ಕಡೆಗೇ ಮುಖ ತಿರುಗಿಸಿ ನಿಂತಿವೆಯೇ ಹೊರತು ಗ್ರಾಮೀಣ ಜನರ ಜೀವನ ಕ್ರಮದತ್ತ ಅಷ್ಟಾಗಿ ಕಣ್ಣು ಹಾಯಿಸಿದಂತಿಲ್ಲ. ಈ ದೃಷ್ಟಿಯಿಂದ ಡಿಡಿ-೧ರ ಸಾಧನೆ ಅಗಾಧ ಎಂದೇ ತೋರಿಬಂತು. ಈಟೀವಿಯಲ್ಲಿ 'ಅನ್ನದಾತ', ಸುಪ್ರಭಾತದಲ್ಲಿ "ಅನ್ನದಾತ ಸುಖೀಭವ" ಎನ್ನುವ ಕಾರ್ಯಕ್ರಮಗಳು ನನ್ನ ಅಧ್ಯಯನ ಪೂರ್ಣಗೊಳ್ಳುವ ಹಂತದಲ್ಲಿದ್ದಾಗ ಪ್ರಾರಂಭವಾದದ್ದು ಗಮನಕ್ಕೆ ಬಂದಿತು.

ಅಧ್ಯಯನದ ಸಂದರ್ಭದಲ್ಲಿ ರೈತ ವರ್ಗದವರನ್ನು ಸಂದರ್ಶಿಸಿದಾಗ ಈ ಬಗ್ಗೆ ಹೆಚ್ಚಿನ ಮೆಚ್ಚುಗೆ ವ್ಯಕ್ತವಾಯಿತಾದರೂ, ಹೊಸ ಬೇಸಾಯ ಕ್ರಮಗಳನ್ನು ಅಳವಡಿಸಿಕೊಳ್ಳಬೇಕಾದ ಸಂದರ್ಭದಲ್ಲೇ ಆ ಬಗ್ಗೆ ಮಾಹಿತಿ ದೊರೆಯುವಂತಿರಬೇಕು ಎಂಬ ಅಭಿಪ್ರಾಯ ವ್ಯಕ್ತವಾಯಿತು. ಉದಾಹರಣೆಗೆ ಹವಾಮಾನಕ್ಕೆ ತಕ್ಕಂತೆ ಮಾಡಬೇಕಾದ ಬೇಸಾಯದ ಕೆಲಸದ ಬಗ್ಗೆ ಆಗಿಂದಾಗಲೇ ಮಾಹಿತಿ ದೊರೆತರೆ ಪ್ರಾಯೋಗಿಕವಾಗಿ ಆ ಕೆಲಸ ಮಾಡಲು ಅನುಕೂಲ ಎನ್ನುವುದು ಅವರ ಅಭಿಪ್ರಾಯ. ಏಕೆಂದರೆ ಪ್ರಸಾರಗೊಂಡ ಕಾರ್ಯಕ್ರಮದಿಂದ ವಿಷಯಗಳನ್ನು ಬರೆದಿಟ್ಟುಕೊಂಡು ಬೇಸಗೆ ಕಳೆದು ಮಳೆಗಾಲ ಬಂದಾಗ ಅದನ್ನು ಕಾರ್ಯರೂಪಕ್ಕೆ ತರಲು ರೈತರಲ್ಲಿ ಬಹುತೇಕರು ಅಕ್ಷರಸ್ಥರಲ್ಲ, ಸುಶಿಕ್ಷಿತರಲ್ಲ ಎನ್ನುವುದು ಗಮನಾರ್ಹ. ವಿಷಯಗಳು ಅವರ ಮನಸ್ಸಿನಿಂದ ಮರೆಯಾಗಿ ಹೋಗುವ ಮುಂಚೆಯೇ ಅದನ್ನವರು ಕಾರ್ಯಕ್ಕೆ ಇಳಿಸಿರಬೇಕು ಎನ್ನುವ ಅಂಶ ಅಧ್ಯಯನದ ಸಂದರ್ಭದಲ್ಲಿ ತಿಳಿದು ಬಂದಿತು. ಕರಾವಳಿ ಪ್ರದೇಶದ ಮೀನುಗಾರರೂ ಸೇರಿದಂತೆ ಅನೇಕ ಕಸುಬುದಾರರು ದೂರದರ್ಶನದಿಂದ ಬಯಸಿದ್ದೇನೆಂದರೆ, ವಿಸ್ತೃತವೂ ನಿಖರವೂ ಆದ ಹವಾವರ್ತಮಾನ. ವಾರ್ತಾಪ್ರಸಾರದೊಳಗೆ ಒಂದು ಸಣ್ಣ ಸುದ್ದಿಯಂತಾಗಿ ಹೋಗದೆ, ಪ್ರದೇಶವಾರು ಹವಾಮಾನ ವಾರ್ತೆಯನ್ನು ೨-೩ ನಿಮಿಷಗಳ ಮಟ್ಟಿಗಾದರೂ ಬಿತ್ತರಿಸಬೇಕು; ಅವು ನಿಖರವಾಗಿದ್ದು ದಾರಿ ತಪ್ಪಿಸುವಂತಿರಬಾರದು ಎನ್ನುವುದು. ಉಪಗ್ರಹಗಳ ಸಹಾಯದಿಂದ ಹವಾಮಾನ ವಾರ್ತೆಯ ಬಗ್ಗೆ ಸಚಿತ್ರ ಮಾಹಿತಿಯನ್ನು ದೂರದರ್ಶನ ೯೦ರ ದಶಕದ ಆದಿಭಾಗದಿಂದಲೂ ಬಿತ್ತರಿಸುತ್ತಲೇ ಬಂದಿದ್ದು ಇದು ಹೆಚ್ಚು ನಿಖರವೂ ಸ್ಪಷ್ಟವೂ ಆಗಿರುತ್ತದೆ ಎನ್ನುವುದು ಡಿಡಿ-೧ರ ಸುದ್ದಿ ಸಂಪಾದನೆ ಮಾಡಿದ ಸಂದರ್ಭದಲ್ಲಿ (೧೯೯೬-೯೯ರ ಅವಧಿ) ನನಗೆ ತಿಳಿದು ಬಂದಿದೆ. ಆದರೆ ರೈತ ಬಾಂಧವರು ಕೇಳುವಂತೆ ಇದನ್ನು ಸ್ವಲ್ಪ ವಿಸ್ತೃತಗೊಳಿಸಬಹುದು ಎನ್ನುವುದು ನನ್ನ ಅನುಭವದ ಮಾತು. ಸದ್ಯಕ್ಕೆ ೩೦ರಿಂದ ೪೦ ಸೆಕೆಂಡ್‌ನೊಳಗೆ ಹವಾವರ್ತಮಾನ, ೧೦ ಸೆಕೆಂಡ್ ಉಷ್ಣಾಂಶ ವಿವರವನ್ನು ವಾರ್ತೆಗಳಲ್ಲಿ ಪ್ರಸಾರ ಮಾಡಲಾಗುತ್ತಿದೆ.

ಹಾಗೆಯೆ ಕೃಷಿ ಕಾರ್ಯಕ್ರಮಗಳ ಪ್ರಸಾರಾವಧಿಯನ್ನೂ ಬಹಳ ಎಚ್ಚರದಿಂದ ಯೋಜಿಸಬೇಕು. ದಿನವಿಡೀ ಹೊಲದಲ್ಲಿ ದುಡಿದು ಬರುವ ರೈತನ ಬಿಡುವಿನ ಸಮಯವನ್ನು ಅವಲಂಬಿಸಿ ಕಾಲ ಹಾಗೂ ಕಾಲಾವಧಿ ನಿಗದಿ ಪಡಿಸಬೇಕು. ಕಾರ್ಯಕ್ರಮದಲ್ಲಿ ಬಳಸುವ ಭಾಷೆಯೂ ಅತ್ಯಂತ ಸರಳ, ನೇರ ಹಾಗೂ ಸಾಧ್ಯವಾದ ಮಟ್ಟಿಗೆ ಆಡು ಭಾಷೆ ಬಳಸುವುದು ಉತ್ತಮ. ಈ ಹಂತದಲ್ಲಿ ಭಾಷೆಯ ಪ್ರಾದೇಶಿಕ ಭಿನ್ನತೆಯನ್ನು ಗಮನದಲ್ಲಿಟ್ಟುಕೊಳ್ಳಬೇಕು. ಕರಾವಳಿ ಮೀನು ಸಾಕಣೆಯ ಬಗ್ಗೆ ಮಾಹಿತಿ ನೀಡುವಾಗ ಮಂಡ್ಯದ ಆಡುಭಾಷೆಯನ್ನೂ ಹಾಸನದ ಬೇಸಾಯಗಾರನಿಗೆ ಮಾಹಿತಿ ನೀಡುವಾಗ ಬೀದರಿನ ಸಹಜ ಭಾಷೆಯನ್ನೂ ಬಳಸಿದರೆ ಉದ್ದೇಶ ವಿಫಲವಾಗುತ್ತದೆ ಎನ್ನುವುದು ಖಚಿತ.

ಕೃಷಿಯೇ ಪ್ರಧಾನವಾಗಿರುವ ಭಾರತ ದೇಶದಲ್ಲಿ ನಮ್ಮ ಖಾಸಗಿ ವಾಹಿನಿಗಳೂ ಕೃಷಿ ವಲಯದತ್ತ ಲಕ್ಷ್ಯ ಹರಿಸಬೇಕಾದ ಅಗತ್ಯ ಹೆಚ್ಚಾಗಿ ಕಾಣಿಸುತ್ತಿದೆ. ವಿಶೇಷ ಪ್ರೇಕ್ಷಕರಿಗಾಗಿ ತಯಾರಿಸುವ ಕಾರ್ಯಕ್ರಮಗಳಲ್ಲದೆ, ಸಾಮಾನ್ಯ ವೀಕ್ಷಕರಿಗಾಗಿ ಸಿದ್ಧಪಡಿಸುವ ಅನೇಕ ಕಾರ್ಯಕ್ರಮಗಳನ್ನು ಡಿಡಿ-೧ ಪ್ರಸಾರ ಮಾಡುತ್ತಿದೆ. ಅವುಗಳಲ್ಲಿ ವೈಚಾರಿಕ, ಮನೋಲ್ಲಾಸಕರ, ಮಾಹಿತಿಪೂರ್ಣ ಕಾರ್ಯಕ್ರಮಗಳೂ ಸೇರಿವೆ. ಆರೋಗ್ಯ, ಕ್ರೀಡೆ, ನಾಡು ನುಡಿಯ ಬಗ್ಗೆ ಮಾಹಿತಿ-ವಿಚಾರ ವಿನಿಮಯ, ವಿಜ್ಞಾನ ವ್ಯಕ್ತಿ ಪರಿಚಯ, ಇತಿಹಾಸ, ಕಲೆ-ಸಂಸ್ಕೃತಿ ಕುರಿತ ಮಾಹಿತಿ-ವಿಚಾರಭರಿತ ಕಾರ್ಯಕ್ರಮಗಳನ್ನು ಪ್ರಸಾರ ಮಾಡಬೇಕೆನ್ನುವ ಸೂಚನೆಯೂ ಡಿಡಿ-೧ಕ್ಕೆ ಇದೆ, ಆ ವಾಹಿನಿ ಅದನ್ನು ಮಾಡುತ್ತಲೂ ಇದೆ.

## ಆರೋಗ್ಯ ಕಾರ್ಯಕ್ರಮ

ಇದು ಸಾಮಾನ್ಯ ಪ್ರೇಕ್ಷಕರ ಕಾರ್ಯಕ್ರಮಗಳಲ್ಲೊಂದು ಆರೋಗ್ಯ ಕಾರ್ಯಕ್ರಮದಲ್ಲಿ ಅನೇಕ ಬಗೆಯ ರೋಗಗಳಿಗೆ ಸಂಬಂಧಿಸಿದಂತೆ ತಜ್ಞರೊಡನೆ ಸಂದರ್ಶನ ಕಾರ್ಯಕ್ರಮಗಳನ್ನು ಪ್ರಸಾರ ಮಾಡಲಾಗಿದೆ. ಉಪಯುಕ್ತ ಕಾರ್ಯಕ್ರಮಗಳಾದರೂ ಅವು ಸ್ಟೂಡಿಯೋದ ಚೌಕಟ್ಟಿನೊಳಗೆ ಒಬ್ಬ ಸಂದರ್ಶಕ ಒಬ್ಬ ತಜ್ಞರ ನಡುವಿನ ಪ್ರಶ್ನಾವಳಿಯಂತೆ ಪ್ರಸಾರಗೊಂಡ ವಿಪರೀತ ಏಕತಾನತೆಯನ್ನು ಮಿಡಿಯುತ್ತಿದ್ದದ್ದು ವೀಕ್ಷಕರ ಆಸಕ್ತಿಯನ್ನು ಕುಂಠಿತಗೊಳಿಸುತ್ತಿತ್ತು. ಒಂದು ಕಾರ್ಯಕ್ರಮದ ನಿರೂಪಕ/ಸಂದರ್ಶಕನ ಕೆಲಸ ಕೇವಲ ಸಿದ್ಧಪಡಿಸಿದ ಪ್ರಶ್ನಾವಳಿಯನ್ನು ಮುಂದಿಟ್ಟುಕೊಂಡು ಅದಕ್ಕೆ ತಜ್ಞರಿಂದ ಉತ್ತರ ಪಡೆಯುವುದಲ್ಲ. ಸಂದರ್ಶನದ ವೇಳೆಯಲ್ಲಿ ಆಗಿಂದಾಗ್ಗೆ ಉದ್ಭವಿಸಬಹುದಾದ ಸಂದೇಹ, ಕುತೂಹಲಗಳನ್ನೂ ನಿವಾರಿಸಿಕೊಳ್ಳುವುದಾಗಿರಬೇಕು. ಅದರಲ್ಲೂ ಆತ/ಆಕೆ ವೀಕ್ಷಕರ ಪ್ರತಿನಿಧಿ, ಅವರ ಪರವಾಗಿ ತಾನು ಸಂವಾದ ನಡೆಸಿದ್ದೇನೆ, ನನ್ನಲ್ಲಿ ಮೂಡುವ ಸಂದೇಹ ಅಥವಾ ಕುತೂಹಲ ವೀಕ್ಷಕನದೂ ಆಗಿರಬಹುದು ಎನ್ನುವ ಬದ್ಧತೆ ಆತ/ಆಕೆಗಿರಬೇಕು. ಕಾರ್ಯಕ್ರಮ/ಸುದ್ದಿ ಮಂಡನೆಯ ಜವಾಬ್ದಾರಿಯ ಬಗ್ಗೆ ಮುಂದಿನ ಭಾಗಗಳಲ್ಲಿ ಪ್ರಸ್ತಾಪಿಸಿದ್ದೇನೆ.

ಎರಡನೆಯದಾಗಿ, ಸಂದರ್ಶನದ ಮಧ್ಯೆ ಗ್ರಾಫ್, ಚಿತ್ರಗಳು ಹಾಗೂ ಜೀವಂತ ಉದಾಹರಣೆಗಳನ್ನು ನೀಡುವುದು ಹೆಚ್ಚು ಉಪಯುಕ್ತ. ಎಲ್ಲ ಕಾರ್ಯಕ್ರಮಗಳನ್ನೂ ಸಂದರ್ಶನ ಕಾರ್ಯಕ್ರಮಗಳಾಗಿಯೇ ನಿರ್ಮಿಸದೆ ಸಂದರ್ಶನಾಧಾರಿತ ವರದಿಗಳಂತೆಯೂ ನಿರ್ಮಾಣ ಮಾಡಬಹುದು. ಎರಡು ಕುರ್ಚಿ, ಒಂದು ಸಣ್ಣ ಟೇಬಲ್ - ಹೂದಾನಿ, ಹಿನ್ನೆಲೆಗೊಂದು ಮರದ ತೆರೆ ಇರಿಸಿದ ಸೆಟ್ಟಿನಲ್ಲಿ ಇಬ್ಬರು ತಮ್ಮ ಪಾಡಿಗೆ ತಾವು ಮಾತಾಡಿಕೊಳ್ಳುವಂತಹ ಸಂದರ್ಶನಗಳು ಎಂತಹ ಆಕರ್ಷಣೆ ನೀಡಬಹುದು? ಎಲ್ಲ ವಿಷಯಗಳಲ್ಲೂ ಅಂಥದೇ ಕಾರ್ಯಕ್ರಮಗಳಾದರೆ ವೀಕ್ಷಕನ ಪಾಡು ಏನಾಗಬಹುದು? ಈ ದೃಷ್ಟಿಯಿಂದ ಸೃಜನಶೀಲ ಆಲೋಚನೆಗಳನ್ನು ಡಿಡಿ-೧ ಹೆಚ್ಚಾಗಿ ಬೆಳೆಸಿಕೊಳ್ಳಬೇಕಿದೆ ಎನ್ನುವುದು ಅಧ್ಯಯನದ ಸಂದರ್ಭದಲ್ಲಿ ಪ್ರೇಕ್ಷಕರಿಂದ ಬಂದ ಅಭಿಪ್ರಾಯವಾಗಿದೆ.

ಪ್ರೇಕ್ಷಕರನ್ನೂ ತೊಡಗಿಸಿಕೊಳ್ಳುವಂತಹ ಫೋನ್-ಇನ್ ನೇರ ಪ್ರಸಾರದ ಪ್ರಯತ್ನಗಳು ಯಶಸ್ವಿಯಾದ ಮೇಲೆ ಆರೋಗ್ಯಕ್ಕೆ ಸಂಬಂಧಿಸಿದ ಅನೇಕ ಕಾರ್ಯಕ್ರಮಗಳನ್ನು ಡಿಡಿ-೧ ಪ್ರಸಾರ ಮಾಡಿರುವುದು ಗಮನಾರ್ಹ. ಅಂತರ್‌ಸಂವಹನೆಗೆ ಅನುಕೂಲವಾಗುವ ಇಂತಹ ಕಾರ್ಯಕ್ರಮಗಳು ಸ್ತುತ್ಯಾರ್ಹ. ಆರೋಗ್ಯಕ್ಕೆ ಸಂಬಂಧಪಟ್ಟಂತೆ ಖಾಸಗಿ ವಾಹಿನಿಗಳು ಅಂತಹ ಯಶಸ್ವಿ ಕಾರ್ಯಕ್ರಮಗಳನ್ನು ಈವರೆಗೂ ಮಾಡಿದಂತಿಲ್ಲ. ಉದಯ ಟಿವಿ.ಯಲ್ಲಿ ಒಮ್ಮೊಮ್ಮೆ ಆಯುರ್ವೇದ ಗಿಡಮೂಲಿಕೆಗಳ ಬಗ್ಗೆ ಕಿರು ಕಾರ್ಯಕ್ರಮಗಳನ್ನು ಬಿತ್ತರಿಸಲಾಗಿದೆಯಾದರೂ ಅದು ಹೆಚ್ಚಾಗಿ ಮಹಿಳೆಯರ ಸೌಂದರ್ಯವರ್ಧನೆಗೇ ಸೀಮಿತಗೊಂಡು ಬಹಳ ನೀರಸವಾಗಿ ಮೂಡಿಬಂದಿದೆ. ಭಾಷೆ ದೃಷ್ಟಿಯಿಂದಲೂ ತೀರಾ ಗ್ರಾಂಥಿಕವೆನಿಸಿ ಜನರನ್ನು ತಲುಪುವುದರಲ್ಲಿ ವಿಫಲವಾಯಿತು. ಇನ್ನು ಈಗಷ್ಟೇ ಪದಾರ್ಪಣೆ ಮಾಡಿರುವ ಈಟೀವಿ ಈ ನಿಟ್ಟಿನಲ್ಲಿ ಎಂತಹ ಪ್ರಯತ್ನ ಮಾಡುತ್ತದೆ ಕಾದು ನೋಡಬೇಕಾಗಿದೆ.

**ಕ್ರೀಡೆ :** ೧೯೯೦ರ ದಶಕವಿಡೀ ಅಂತರರಾಷ್ಟ್ರೀಯ ಕ್ರಿಕೆಟ್ ಪಂದ್ಯಗಳ ನೇರ ಪ್ರಸಾರದ ಸವಿಯನ್ನು ಡಿಡಿ-೧ ಪ್ರೇಕ್ಷಕರಿಗೆ ಉಣ್ಣಿಸಿದೆ. ಕ್ರೀಡಾಪ್ರೇಮಿಗಳಿಗೆ ಅತ್ಯಂತ ಹೆಚ್ಚಿನ ಸಮಯವನ್ನು ಈ ವಾಹಿನಿ ಕೊಟ್ಟಿದೆ ಎಂದೇ ಹೇಳಬಹುದು. ಅನೇಕ ಪ್ರಾದೇಶಿಕ ಮಟ್ಟದ ಕ್ರೀಡಾ ಸ್ಪರ್ಧೆಗಳು, ರ‍್ಯಾಲಿಗಳು, ಗ್ರಾಮೀಣ ವಲಯದ ಆಟೋಟಗಳು ಹೀಗೆ ವಿವಿಧ ಕಾರ್ಯಕ್ರಮಗಳನ್ನು 'ಕ್ರೀಡಾ ಜಗತ್ತು' ಕಾರ್ಯಕ್ರಮದಲ್ಲಿ ಪ್ರಸಾರ ಮಾಡಲಾಗಿದೆ. ಗ್ರಾಮೀಣ ಮಕ್ಕಳ ಕ್ರೀಡೆಗಳು, ಸಾಹಸ ಕ್ರೀಡೆಗಳು, ಕ್ರೀಡಾ

ಸ್ಪರ್ಧೆಯ ವರದಿಗಳು, ರಕ್ಷಣಾ ಸಿಬ್ಬಂದಿಯ ಸಾಹಸ ಕ್ರೀಡಾ ಸ್ಪರ್ಧೆಯ ವರದಿಗಳನ್ನು ದೂರದರ್ಶನದ ಡಿಡಿ-೧ರಲ್ಲಿ ನಿರಂತರವಾಗಿ ಪ್ರಸಾರ ಮಾಡಲಾಗಿದೆ. ಕ್ರೀಡಾ ಕ್ಷೇತ್ರದಲ್ಲಿ ಉತ್ತಮ ಸಾಧನೆ ಮಾಡಿದ ಕನ್ನಡಿಗರನ್ನು ಉತ್ತಮ ರೀತಿಯಲ್ಲೇ ಜನತೆಗೆ ಪರಿಚಯಿಸಿದ ಉದಾಹರಣೆಗಳೂ ಇವೆ. ಒಂದು ಆಭಾಸದ ಸಂಗತಿಯೆಂದರೆ ೧೯೯೭ರ ಕೊನೆಯ ಭಾಗದಲ್ಲಿ ಉಪಗ್ರಹ ವಾಹನಿಯಾದ ಡಿಡಿ-೯ರಲ್ಲಿ, ಬೆಂಗಳೂರಿನಲ್ಲಿ ನಡೆದ 'ಕುದುರೆ ರೇಸಿ'ನ ಪಂದ್ಯವನ್ನು ನೇರ ಪ್ರಸಾರ ಮಾಡಿದ್ದು. ಪ್ರಾಯೋಜಕರಿಂದ ಹಣ ಗಳಿಕೆಯೇ ಸರ್ಕಾರಿ ಸ್ವಾಮ್ಯದಲ್ಲಿದ್ದ ವಾಹಿನಿಯೊಂದರ ಉದ್ದೇಶವಾಗಿಬಿಟ್ಟರೆ ಕುದುರೆ ಜೂಜು ಮತ್ತಿತರ ಚಟಗಳನ್ನು ಆ ವಾಹಿನಿ ಪ್ರೋತ್ಸಾಹಿಸಬಹುದೇ ಎನ್ನುವುದು ಪ್ರೇಕ್ಷಕರ ವಾದ. ಜನಮನ ಗೆಲ್ಲಬಹುದಾದ ಕ್ರೀಡಾಲೋಕವನ್ನು ಕನ್ನಡದ ಖಾಸಗಿ ವಾಹಿನಿಗಳು ಇನ್ನೂ ಪ್ರವೇಶಿಲ್ಲ ಎನ್ನುವುದು ದಾಖಲೆಯೋಗ್ಯ.

**ಕಲೆ - ಸಂಸ್ಕೃತಿ :** ಕನ್ನಡ ಸಾಹಿತ್ಯ ವಿವಿಧ ಮಜಲುಗಳನ್ನು ಪರಿಚಯಿಸುತ್ತಿದ್ದ, ವಿಶ್ಲೇಷಿಸುತ್ತಿದ್ದ 'ಸಂಚಯ' ಕಾರ್ಯಕ್ರಮ ೯೦ರ ದಶಕದ ಮಧ್ಯಭಾಗದ ನಂತರ ಡಿಡಿ-೧ ರಿಂದ ನಿಧಾನವಾಗಿ ಮರೆಯಾಗಿರುವುದು ಸ್ಪಷ್ಟವಾಗಿದೆ. ಡಾ. ಶಿವರಾಮ ಕಾರಂತ, ಚದುರಂಗ, ಕೆ.ಎಸ್.ನ., ಕುವೆಂಪು, ಎ.ಎನ್. ಮೂರ್ತಿರಾಯರು, ವ್ಯಾಸರಾಯ ಬಲ್ಲಾಳ ಹೀಗೆ ಅನೇಕ ಸಾಹಿತಿಗಳ ವ್ಯಕ್ತಿ ಪರಿಚಯವನ್ನೂ ಡಿಡಿ-೧ ಪ್ರಸಾರ ಮಾಡಿದೆ. ಹಾಗೆಯೇ ನಾಡಿನ ಶಿಲ್ಪಕಲೆ, ಚಿತ್ರಕಲೆ, ಇತಿಹಾಸ, ಸ್ವಾತಂತ್ರ್ಯ ಸಮರದಲ್ಲಿ ಕರ್ನಾಟಕದ ಪಾತ್ರ, ಗೊಮ್ಮಟನ ಮಹಾಮಜ್ಜನ, ಪ್ರಾಚೀನ ಕನ್ನಡ ಸಾಹಿತ್ಯ, ಜಾನಪದ ಸಂಪತ್ತು ಹೀಗೆ ಕನ್ನಡನಾಡು - ನುಡಿಗೆ ಸಂಬಂಧಿಸಿದ ಅಸಂಖ್ಯಾತ ಕಾರ್ಯಕ್ರಮಗಳನ್ನು ಡಿಡಿ-೧ ಪ್ರಸಾರ ಮಾಡಿರುವುದು ಗಮನಾರ್ಹ.

ಕರ್ನಾಟಕ ರಾಜ್ಯದ ವಾರ್ತಾ ಮತ್ತು ಪ್ರಚಾರ ಇಲಾಖೆ ತಯಾರಿಸುವ 'ಅವಲೋಕನ' ಎನ್ನುವ ಸಾಂಸ್ಕೃತಿಕ ಸಂಚಿಕೆ ಅತ್ಯಂತ ಯಶಸ್ವಿಯಾಗಿದ್ದು ಇದೀಗ ೨೫೦ ಕಂತುಗಳಷ್ಟು ಪ್ರಸಾರ ಕಂಡಿದೆ. ಬೇಲೂರು ಹಳೇಬೀಡಿನ ಶಿಲ್ಪಕಲಾ ನೈಪುಣ್ಯವನ್ನು ಬಿಂಬಿಸುವ 'ನೆಕ್ಚರ್ ಅಂಡ್ ಸ್ಟೋನ್' ಎನ್ನುವ ಕಾರ್ಯಕ್ರಮ ರಾಷ್ಟ್ರೀಯ ಜಾಲದಲ್ಲೂ ಪ್ರಸಾರಗೊಂಡಿದೆ. ಹಾಗೆ ಶ್ರವಣಬೆಳಗೊಳದ ಗೊಮ್ಮಟೇಶ್ವರನ ಮಹಾಮಸ್ತಕಾಭಿಷೇಕ (೧೯೯೩)ದ ಸಂದರ್ಭದಲ್ಲಿ ತಯಾರಿಸಿದ ಸಾಕ್ಷ್ಯ ಚಿತ್ರ ಈಗಲೂ ದೂರದರ್ಶನದ ಭಂಡಾರದಲ್ಲಿದೆ. ಇಂತಹ ಅದೆಷ್ಟೋ ಕಾರ್ಯಕ್ರಮಗಳನ್ನು ವರದಿಗಳನ್ನು ಡಿಡಿ-೧ ಪ್ರಸಾರ ಮಾಡಿದೆ ಎನ್ನುವುದು ಉಲ್ಲೇಖಾರ್ಹ.

ಹಾಗೆಯೇ ಸಾಂಸ್ಕೃತಿಕ ವಲಯಗಳಲ್ಲಿ ಉತ್ತಮ ಸೇವೆ ನೀಡಿರುವ ಮಹನೀಯರ ವ್ಯಕ್ತಿಚಿತ್ರಣ, ಅಂತಹವರ ಸಾವಿನ ಸಂದರ್ಭದಲ್ಲಿ ಶ್ರದ್ಧಾಂಜಲಿ ಸಲ್ಲಿಸುವ ಕೆಲಸವನ್ನು ಈ ವಾಹಿನಿ ಮರೆತಿಲ್ಲ. ಆದರೆ ಈಗೀಗ ಇಂತಹ ಶ್ರದ್ಧಾಂಜಲಿಗಳು, 'ನಿರ್ವಾಹವಿಲ್ಲದೆ ನಿರ್ಮಿಸುತ್ತಿದ್ದೇವೆ' ಎನ್ನುವಂತೆ ರೂಪುಗೊಳ್ಳುತ್ತಿದೆ. ನಾಲ್ಕಾರು ಜನರ ಅಭಿಪ್ರಾಯ, ಅಂತಿಮ ಸಂಸ್ಕಾರದ ಕೆಲವು ತುಣುಕುಗಳೊಂದಿಗೆ ನೀರಸ ಪ್ರಸಾರ ಕಾಣುತ್ತಿವೆ. ಹಳೆಯ ಸಂಗ್ರಹ ದೃಶ್ಯಗಳು, ಸ್ಥಿರ ಚಿತ್ರಗಳಂತಹ ದಾಖಲೆಗಳು, ಮೃತ ವ್ಯಕ್ತಿಯದೇ ಉಲ್ಲೇಖಾರ್ಹ ನುಡಿಗಳನ್ನು , ಸಂದರ್ಶನದ ತುಣುಕುಗಳನ್ನು ಬಳಸಿಕೊಂಡು ಅವರ ಬದುಕಿನ ಪುಟ್ಟ ಚಿತ್ರಣ ನೀಡುವಂತಹ ಸೃಜನಶೀಲ ಪ್ರಯತ್ನಗಳು ಕಾಣುತ್ತಿಲ್ಲ.

## ಮನರಂಜನೆ

ಮನರಂಜನೆ ಒಂದು ಮಾಧ್ಯಮದ ಜನಪ್ರಿಯತೆಗೆ ಅತ್ಯಂತ ಸುಲಭ ಮಾರ್ಗೋಪಾಯ ಎನ್ನುವುದು ಖಾಸಗಿ ವಾಹಿನಿಗಳಿಂದ ಸಾಬೀತಾಗಿದೆ. ಯಾವ ಖಾಸಗಿ ವಾಹಿನಿಯೂ ಇರದಿದ್ದ ದಿನಗಳಲ್ಲಿ ದೂರದರ್ಶನ ಪ್ರಸಾರ ಮಾಡುತಿದ್ದ 'ಚಿತ್ರಮಂಜರಿ'

(೧/೨ ಗಂಟೆ) ಕಾರ್ಯಕ್ರಮ ಅತ್ಯಂತ ಜನಪ್ರಿಯ ಕಾರ್ಯಕ್ರಮವೆನಿಸಿತ್ತು. ಅದೇ ರೀತಿ ವಾರಕ್ಕೊಮ್ಮೆ ಪ್ರಸಾರಗೊಳ್ಳುತ್ತಿದ್ದ ಚಲನಚಿತ್ರಕ್ಕಾಗಿ, ಪ್ರೇಕ್ಷಕರು ಕಾಯುತ್ತಿದ್ದದ್ದೂ ಇತ್ತು. 'ಕನ್ನಡ ಮೂವಿ ಕ್ಲಬ್' ಎನ್ನುವ ಉಪಗ್ರಹ ವಾಹಿನಿಯ ಕಾರ್ಯಕ್ರಮದಲ್ಲಿ ಪ್ರತಿರಾತ್ರಿ ಒಂದು ಕನ್ನಡ ಸಿನೆಮಾ, ಮತ್ತೆ ಮರು ಮಧ್ಯಾಹ್ನ ಅದೇ ಚಿತ್ರದ ಮರು ಪ್ರಸಾರ ಪ್ರಾರಂಭವಾಯಿತು.

೧೯೯೬ರಲ್ಲಿ ಉದಯ ಟಿವಿ ಕಾರ್ಯಾರಂಭ ಮಾಡಿ, ದಿನದ ೨೪ ಗಂಟೆಗಳ ಕಾರ್ಯಕ್ರಮ ಪ್ರಾರಂಭಿಸಿ ಅದರಲ್ಲಿ ಶೇ. ೭೦ರಷ್ಟು ಭಾಗ ಸಿನೆಮಾ, ಸಿನೆಮಾ ಗೀತೆಗಳು, ಸಿನೆಮಾ ಆಧಾರಿತ ಕಾರ್ಯಕ್ರಮಗಳನ್ನು ಪ್ರಸಾರ ಮಾಡತೊಡಗಿದಾಗ ಸಮಾಜದ ಒಂದು ವರ್ಗದ ಪ್ರೇಕ್ಷಕರು ಆ ಖಾಸಗಿ ವಾಹಿನಿಯನ್ನು ಅವಲಂಬಿಸಿಬಿಟ್ಟಿದ್ದು ಅಧ್ಯಯನದ ಸಂದರ್ಭದಲ್ಲಿ ಗಮನಕ್ಕೆ ಬಂದಿತು. ಆದರೂ ವಾರ್ತೆ, ಕ್ರೀಡೆ ಮತ್ತಿತರ ರೂಢಿಯಲ್ಲಿದ್ದ ಕಾರ್ಯಕ್ರಮಗಳಿಗಾಗಿ ಮತ್ತೊಂದು ವರ್ಗದ ಪ್ರೇಕ್ಷಕರು ಡಿಡಿ-೧ ಅನ್ನೇ ಅವಲಂಬಿಸಿದ್ದರು. ಹೀಗೆ ಖಾಸಗಿ ವಾಹಿನಿಯಲ್ಲಿ ಮನೋಲ್ಲಾಸಕರ ಕಾರ್ಯಕ್ರಮಗಳನ್ನು ಬಿತ್ತರಿಸುತ್ತಿರುವುದರಿಂದ ಪ್ರೇಕ್ಷಕ ಗಣ ವಿಭಜಿತಗೊಂಡಿದೆಯೆಂಬ ಅಂಶ ಖಚಿತವಾದರೂ, ಹಲವು ಅಂತಹ ವಾಹಿನಿಗಳ ಉಗಮದಿಂದಾಗಿ ಯಾವ ವಾಹಿನಿಗೂ ಅವರು ನಿಷ್ಠರಾಗುಳಿದಿಲ್ಲ ಎಂಬ ಅಂಶವೂ ಸತ್ಯವೆನಿಸುತ್ತಿದೆ. ಇದರಿಂದ ದೃಢಪಟ್ಟಿರುವುದಿಷ್ಟೇ ಹೆಚ್ಚು ಸಂಖ್ಯೆಯ ವಾಹಿನಿಗಳಿದ್ದಷ್ಟೂ ಸಮಾಜಕ್ಕೆ ತಲುಪಬೇಕಾಗಿರುವ ಸಂದೇಶ ನಿರೀಕ್ಷಿತ ಮಟ್ಟದಲ್ಲಿ ಮುಟ್ಟುವುದಿಲ್ಲ ಎನ್ನುವುದು.

ಮನರಂಜನೆ (ಒಂದು ದೃಷ್ಟಿಯಿಂದ) ಮನುಷ್ಯನ ಮೂಲಭೂತ ಅಗತ್ಯವೇ. ಆದರೂ ಬೇಡಿಕೆಯಿದ್ದಾಗ ಅದು ದೊರೆಯುವಂತಾಗಬೇಕೇ ಹೊರತು ಸದಾಕಾಲವೂ ಅದು ಲಭ್ಯವೇ ಆಗುವುದಾದರೆ ಅದರ ಬೆಲೆ ಕುಗ್ಗುವುದೂ ಖಚಿತ. ಉದಯ, ಉಷೆ, ಸುಪ್ರಭಾತ, ಕಾವೇರಿ ವಾಹಿನಿಗಳಲ್ಲಿ - ಬಹುತೇಕ ಏಕಕಾಲಕ್ಕೇ ಪ್ರಸಾರವಾಗುವ ಕನ್ನಡ ಚಲನಚಿತ್ರಗೀತೆಗಳ ನಿರಂತರ ಪ್ರಸಾರ ಮನರಂಜನೆ ಒದಗಿಸುವುದಕ್ಕಿಂತ ಹೆಚ್ಚಾಗಿ ಬೇಸರ ಮೂಡಿಸುತ್ತಿವೆ ಎನ್ನುವುದು ನಗರ ವಾಸಿಗಳ ಅನಿಸಿಕೆಯಾದರೆ, ಗ್ರಾಮೀಣ ಪ್ರದೇಶದ ಹೆಣ್ಣುಮಕ್ಕಳಲ್ಲಿ ಆಸಕ್ತಿ ಮೂಡಿಸಿವೆ ಎಂದು ತಿಳಿದು ಬಂದಿದೆ. ಅಲ್ಲಿ ಟಿವಿ ಸೆಟ್‌ಗಳ ಅಭಾವವಿದ್ದರೂ ಈ ಹಾಡುಗಳ ದೃಶ್ಯಗಳಿಗೆ ಬೇಡಿಕೆಯಿರುವುದು ಕಂಡು ಬರುತ್ತಿದೆ. ಈ ರೀತಿ ಕನ್ನಡ ಸಿನೆಮಾ ಹಾಡುಗಳನ್ನು ಸತತವಾಗಿ ಅಥವಾ ಕೆಲವೊಮ್ಮೆ ನಿರೂಪಣೆಗಳೊಂದಿಗೆ ಖಾಸಗಿ ವಾಹಿನಿಗಳು ಪ್ರಸಾರ ಮಾಡುತ್ತಿರುವುದು ಕೇವಲ ವೀಕ್ಷಕರನ್ನು 'ಹಿಡಿದಿಟ್ಟುಕೊಳ್ಳಬೇಕು' ಎನ್ನುವ ಉದ್ದೇಶಪೂರ್ವಕ ಗುರಿಯೇ ಹೊರತು ಬೇರಾವುದೇ ಸದಭಿರುಚಿಯ ಚಿಂತನೆ ಅಲ್ಲ.

ಚಲನಚಿತ್ರಗಳ ಪ್ರಸಾರ ಸ್ವಲ್ಪಮಟ್ಟಿಗೆ ಚಿತ್ರಮಂದಿರಗಳಲ್ಲಿ ಸಿನೆಮಾ, ನೋಡುವವರ ಸಂಖ್ಯೆಯನ್ನು ಕಡಿಮೆ ಮಾಡಬಹುದು ಎನ್ನುವ ಶಂಕೆ ಟೆಲಿವಿಷನ್ ಬಂದ ಹೊಸತರಲ್ಲಿ ಮೂಡಿತಾದರೂ ವಸ್ತುಶಃ ಅಂತಹ ತೀವ್ರ ಪರಿಣಾಮವನ್ನೇನೂ ಬೀರಿಲ್ಲ ಎಂದು ತಿಳಿದು ಬಂದಿದೆ. ಬದಲಿಗೆ ಕನ್ನಡ ಸಿನೆಮಾದ ಗುಣಮಟ್ಟ, ಸೃಜನಶಕ್ತಿ ಕ್ರಮೇಣ ಇಳಿಮುಖವಾಗುತ್ತಿದೆ ಎನ್ನಬಹುದು. ತೀರಾ ಗಂಭೀರ, ಸದಭಿರುಚಿಯ ಚಿತ್ರಗಳನ್ನಷ್ಟೇ ವೀಕ್ಷಿಸುತ್ತಿದ್ದ ಒಂದು ಉನ್ನತ ಸಂಸ್ಕೃತಿಯ ಪ್ರೇಕ್ಷಕರು ಟಿವಿಯನ್ನೇ ಹೆಚ್ಚಾಗಿ ಅವಲಂಬಿಸಿದ್ದರಿಂದಾಗಿ ಅಂತಹ ಚಿತ್ರಗಳಿಗೆ ಚಿತ್ರಮಂದಿರಗಳಲ್ಲಿ ಬೇಡಿಕೆ ಕಡಿಮೆಯಾಗಿರಬಹುದು. ಆ ಚಿತ್ರಗಳನ್ನು ಇತರ ವರ್ಗಗಳಿಗೆ ಸೇರಿದ ವೀಕ್ಷಕರೂ ನೋಡಬಯಸುವುದಿಲ್ಲ. ಆದ್ದರಿಂದ ಕೆಳ ವರ್ಗದ ಪ್ರೇಕ್ಷಕರಿಗಾಗಿಯೇ ಬೇಕಾದಂತಹ ಮಧ್ಯಮ ಅಥವಾ ಕೆಳದರ್ಜೆಯ ಕನ್ನಡ ಸಿನೆಮಾಗಳೇ ನಿರ್ಮಾಣವಾಗುವ ಆತಂಕ ಹೆಚ್ಚಾಗಿ ಕಾಡತೊಡಗಿದೆ. ಕೆಲವೊಂದು ಸದಭಿರುಚಿಯ ಕಲಾತ್ಮಕ ಚಿತ್ರಗಳು ಸೃಷ್ಟಿಗೊಂಡರೂ ಆರ್ಥಿಕವಾಗಿ ಅವು ಲಾಭಕರವಲ್ಲ. 'ಎ' ನಗರಗಳಲ್ಲಿ ಅವು ಹೆಸರು ಮಾಡಿದರೂ 'ಬಿ' ಮತ್ತು 'ಸಿ' ಕೇಂದ್ರಗಳಲ್ಲಿ ಬಿಡುಗಡೆಯಾಗುವುದೂ ಕಷ್ಟವೇ.

ಟೆಲಿವಿಷನ್ ಬಂದ ಮೇಲೆ ಕನ್ನಡಿಗರು ತಮ್ಮ ಮನರಂಜನೆಯ ದಾರಿಯನ್ನು ತಾವೇ ಹುಡುಕಿಕೊಳ್ಳುವುದಕ್ಕೆ ಬದಲಾಗಿ ಈ ಮಾಧ್ಯಮ ಏನನ್ನು ಕೊಡುತ್ತದೆಯೋ ಅದನ್ನೇ ಒಪ್ಪಿಕೊಳ್ಳಬೇಕಾದ ಸ್ಥಿತಿ ಬಂದಿತು. ೧೯೮೩ ರಿಂದ ೧೯೯೩ರವರೆಗೆ

ಡಿಡಿ-೧ ಕೊಟ್ಟ ಮನರಂಜನೆಯನ್ನೇ ಕನ್ನಡಿಗರು ನಿರ್ವಾಹವಿಲ್ಲದೆ ಒಪ್ಪಿಕೊಂಡರು. ಮೊದಲೇ ಹೇಳಿದಂತೆ 'ಬಿ''ಸಿ' ಕೇಂದ್ರಗಳನ್ನು ಬಿಟ್ಟು 'ಎ' ಕೇಂದ್ರದಲ್ಲಿ ಸಿನೆಮಾ ಪ್ರಭಾವ ಇಳಿಮುಖವಾಯಿತು. ರಂಗಭೂಮಿ ಒಂದು ನಿರ್ದಿಷ್ಟ ಪ್ರೇಕ್ಷಕರಿಗೇ ಸೀಮಿತವಾಯಿತು.

ಮತ್ತೆ ಪ್ರೇಕ್ಷಕನಿಗೆ ಆಯ್ಕೆಯ ಸ್ವಾತಂತ್ರ್ಯ ಬಂದದ್ದು ಕನ್ನಡದ ವಾಹಿನಿಗಳ ಸಂಖ್ಯೆ ಹೆಚ್ಚಿದಾಗಲೇ. ೧೯೯೬ರಲ್ಲಿ ಉದಯ ಟಿವಿ ಕಾರ್ಯಾರಂಭ ಮಾಡುವ ಹೊತ್ತಿಗಾಗಲೇ ಡಿಡಿ-೯ರ ಉಪಗ್ರಹ ಕನ್ನಡ ಚಾನೆಲ್ ಆರಂಭವಾಗಿತ್ತು. ನಾಟಕ, ಲಘು ಕಾರ್ಯಕ್ರಮಗಳು, ಸಿನೆಮಾ ಪ್ರಸಾರದ ಮೂಲಕ ಮನರಂಜನಾ ಕಾರ್ಯಕ್ರಮಗಳನ್ನು ಬಿತ್ತರಿಸುವ ಪ್ರಯತ್ನಗಳನ್ನೂ ಅದು ಮಾಡಿತ್ತಾದರೂ ಸಂಭಾವನೆ ನೀಡಿ ಖಾಸಗಿ ನಿರ್ಮಾಪಕರು, ಕಲಾವಿದರಿಂದ ಪಡೆದ ಸಾಕ್ಷ್ಯಚಿತ್ರ, ವರದಿಗಳ ಪ್ರಸಾರಕ್ಕೆ ವಿಶೇಷ ಒತ್ತು ನೀಡಿದಾಗ ವೀಕ್ಷಕರಿಗೆ ಮನರಂಜನೆ ಒದಗಿಸುವುದಕ್ಕಾಗಿಯೇ ಹುಟ್ಟಿಕೊಂಡ ಈ ವಾಹಿನಿ ಅಗಾಧ ಸೋಲುಂಡಿತು. ಅದೇ ಹೊತ್ತಿನಲ್ಲಿ ಹುಟ್ಟು ಪಡೆದದ್ದು ಉದಯ ಟಿವಿಯ ಗಳಿಕೆಯಾಯಿತು. ಆಗ ತಾನೇ ಕಣ್ಬಿಟ್ಟ ಉದಯ ಜನಪ್ರಿಯತೆ ಗಳಿಸಲು ಸಿನೆಮಾವನ್ನೇ ನೆಚ್ಚಿಕೊಂಡಿತು. ಚಲನಚಿತ್ರ, ಅದರ ಗೀತೆಗಳು, ಜೊತೆಗೆ ಜನರಿಗೇನು ಬೇಕು ಎಂದು ಕೇಳಿ ಅದನ್ನು ಕೊಡುವ ಮೂಲಕ ಜನರ ಕಡೆಗೇ ಹೋಯಿತು ಉದಯ. ಯಾವುದೇ ಮಾಧ್ಯಮದ ಅಂತಿಮ ಉದ್ದೇಶ ಜನಮನ ಗೆಲ್ಲುವುದೇ ಆಗಿರುವುದರಿಂದ ಉದಯ ಟಿವಿಯ ಇಂತಹ ಪ್ರಯೋಗಗಳು ಅದರ ಗೆಲುವಿಗೆ ದಾರಿ ಮಾಡಿಕೊಟ್ಟವು. ಜೊತೆಗೆ ತನ್ನ ಚೌಕಟ್ಟಿನಿಂದ ಹೊರಬರಲಾರದ ಡಿಡಿ-೧, ಡಿಡಿ-೯ ಬಿಟ್ಟರೆ ಉದಯ ಟಿವಿಗೆ ಬೇರಾವುದೇ ಖಾಸಗಿ ವಾಹಿನಿಯ ಸವಾಲೂ ಇರಲಿಲ್ಲ ಎನ್ನುವುದು ಗಮನಾರ್ಹ.

ಪ್ರಾರಂಭದಲ್ಲಿ ಉದಯ ವಾಹಿನಿ 'ಆದರ್ಶ ದಂಪತಿಗಳು', 'ಹೃದಯದಿಂದ' ಮುಂತಾದ ಜನಪ್ರಿಯ ಕಾರ್ಯಕ್ರಮಗಳನ್ನು ಪ್ರಸಾರ ಮಾಡಿ, ಮನರಂಜನೆಯ ಮೂಲಕವೇ ಮಹಿಳೆಯರಿಗಾಗಿ ಟಾಕ್ ಷೋ; ಚಿತ್ರಗೀತೆಗಳ ನಡುವೆ ಚಲನಚಿತ್ರ ಇತಿಹಾಸ, ಸಾಮಾಜಿಕ ಬವಣೆಗಳನ್ನು ಕುರಿತು ವಿಚಾರ ಮಂಡಿಸುವ ಕೆಲಸವನ್ನು ಮಾಡಿತು. ಆದರೆ ಈ ನಿರೂಪಣೆಗೂ ಆಚೀಚೆ ಪ್ರಸಾರವಾಗುತ್ತಿದ್ದ ಗೀತೆಗಳಿಗೂ ಸಂಬಂಧವೇ ಇರದೆ ಈ ಪ್ರಯತ್ನ ಸೋಲುತ್ತಿತ್ತು ಎನ್ನಬಹುದು. ಗೀತೆಗಳೇ ಪ್ರಮುಖವಾಗಿ ಅದಕ್ಕೆಂದೇ ವೀಕ್ಷಕರು ಇರುತ್ತಿದ್ದರು. 'ಹಾಸ್ಯ' ಎನ್ನುವ ಕಾರ್ಯಕ್ರಮದಲ್ಲಿ ಸಿನೆಮಾದ ಹಾಸ್ಯ ದೃಶ್ಯಗಳನ್ನು ಬಳಸಿ ಅವುಗಳ ನಡುವೆ ನಾಟಕೀಯ ಹಾಸ್ಯ ಕಥೆಯನ್ನು ಹೆಣೆದು ಪ್ರಸಾರ ಮಾಡಲಾಗುತ್ತಿದೆ. 'ತಾರೆಯರೊಂದಿಗೆ' ಎನ್ನುವ ಚಿತ್ರನಟ, ನಟಿಯರ ಸಂದರ್ಶನ ಕಾರ್ಯಕ್ರಮವನ್ನು ಪ್ರಸಾರ ಮಾಡಲಾಗುತ್ತಿದೆ. ಕ್ರಮೇಣ ಉದಯ ಮನರಂಜನೆಯ ಹಲವು ಮಾರ್ಗಗಳನ್ನು ಅಳವಡಿಸಿಕೊಂಡಿತು. ಡಿಡಿ-೧ ಮೊದಲೇ ಆರಂಭಿಸಿದ್ದಂತೆ ಕಥಾಧಾರಿತ ಧಾರಾವಾಹಿಗಳು, ಉದಯ ಟಿವಿಯ ಆದ್ಯತಾ ಕಾರ್ಯಕ್ರಮವಾದವು. ಹೊಸ ವಾಹಿನಿಯಾದ್ದರಿಂದ ಉದಯ, ಧಾರಾವಾಹಿಯ ಕಥೆ - ನಿರ್ಮಾಣದ ಬಗ್ಗೆ ಎಚ್ಚರವಹಿಸದೆ ಇದ್ದದ್ದರಿಂದ 'ಪ್ರತಿಬಿಂಬ' ಎನ್ನುವ ಧಾರಾವಾಹಿಯನ್ನು ಅರ್ಧಕ್ಕೆ ನಿಲ್ಲಿಸಬೇಕಾಯಿತು. ಈ ಧಾರಾವಾಹಿ ಬಹಳ ನೀರಸವಾಗಿ ನಿರ್ಮಾಣಗೊಂಡಿತ್ತೆನ್ನುವುದು ಅಧ್ಯಯನದ ಸಂದರ್ಭದಲ್ಲಿ ವೀಕ್ಷಕರಿಂದ ತಿಳಿದು ಬಂದಿತು.

ಧಾರಾವಾಹಿಗಳ ವಿಷಯದಲ್ಲಿ ಡಿಡಿ-೧ ಮೇಲುಗೈ ಸಾಧಿಸುವುದಕ್ಕೆ ಇದ್ದ ಮುಖ್ಯ ಕಾರಣ ಅತೀ ದೀರ್ಘವಾದ ಧಾರಾವಾಹಿ ಕಾರ್ಯಕ್ರಮಗಳನ್ನು ಅದು ನಿರ್ಮಿಸುತ್ತಿರಲಿಲ್ಲ. ಕೇವಲ ೧೩ ಕಂತುಗಳಲ್ಲಿ ಮುಗಿಸಿಬಿಡುತ್ತಿದ್ದದ್ದರಿಂದ ಒಂದು ವೇಳೆ 'ಅದು ಚೆನ್ನಾಗಿಲ್ಲ' ಎಂದು ವೀಕ್ಷಕ ಅಂದುಕೊಳ್ಳುವಷ್ಟರಲ್ಲೇ ಅದು ಮುಗಿದಿರುತ್ತಿತ್ತು. ಮತ್ತೊಂದು ಹೊಸ ಕಥೆ ಪ್ರಾರಂಭವಾಗಿರುತ್ತಿತ್ತು. ಇಷ್ಟೇ ಅಲ್ಲದೆ ಪ್ರಸಾರವಾಗುತ್ತಿದ್ದ ಎರಡು ಧಾರಾವಾಹಿಗಳಲ್ಲಿ ಒಂದು ಚೆನ್ನಾಗಿರದಿದ್ದರೂ ಮತ್ತೊಂದು ಚೆನ್ನಾಗಿದ್ದರೆ ಪ್ರೇಕ್ಷಕನಿಗಷ್ಟೇ ಸಾಕಾಗುತ್ತಿತ್ತು. ಎಲ್ಲಕ್ಕಿಂತ ಮೂಲಭೂತವಾಗಿ ಆತನಿಗೆ ಆಯ್ಕೆಯ ಸ್ವಾತಂತ್ರ್ಯವೇ ಇರದೆ 'ಬೇಕಾದರೆ ನೋಡಿ, ಬೇಡದಿದ್ದರೆ Switch off ಮಾಡಿ' ಎನ್ನುವ ಸ್ಥಿತಿ ಅವನದಾಗಿತ್ತು. ಇಂತಹ ಹೇರುವಿಕೆಯೇ ಮಾಧ್ಯಮಗಳ ಪಾಲಿನ ದೊಡ್ಡ ಹೊಡೆತ ಎನ್ನುವುದನ್ನು ಮಾಧ್ಯಮಗಳು ಈಗಾಗಲೇ ಅನುಭವಿಸಿವೆ.

ಮತ್ತೊಂದೆಡೆ ಪ್ರಾಯೋಜಿತ ಧಾರಾವಾಹಿಗಳ ಸಂದರ್ಭದಲ್ಲಿ ಗುಣಮಟ್ಟ ಕಡಿಮೆ ಎನಿಸಿದರೆ ಪ್ರಾಯೋಜಕ ನೀಡುತ್ತಿದ್ದ ಹಣವೂ ಕುಗ್ಗುತ್ತಾ ಬಂದಿತು. ಅದಕ್ಕೆ ಪ್ರತಿಯಾಗಿ ಪ್ರಾಯೋಜಿತ ಹಣ ಸಾಕಾಗುವುದಿಲ್ಲ ಎಂಬ ಕಾರಣಕ್ಕೆ ನಿರ್ಮಾಣದ ಗುಣಮಟ್ಟವೂ ಇಳಿಯುತ್ತಾ ಬಂದಿತು. ಈ ಮಧ್ಯೆ ಹೈರಾಣಾದದ್ದು ಮತ್ತೆ ಪ್ರೇಕ್ಷಕ. ಈ ಅಸಮತೋಲನೆಯನ್ನು ಸರಿಪಡಿಸಿ, ತನ್ನ ಪ್ರೇಕ್ಷಕನಿಗೇನು ಬೇಕು ಎಂಬುದನ್ನು ತಿಳಿದು ಅದನ್ನು ಕೊಡುವಲ್ಲಿ ಡಿಡಿ-೧ ನಿರ್ಲಕ್ಷ್ಯ ತೋರಿದೆ ಎನ್ನಬಹುದು. ಈ ಮಧ್ಯೆಯೂ 'ಮಾಯಾಮೃಗ', 'ಜನನಿ', 'ಮನೆತನ' (ಖಾಸಗಿ ವಾಹಿನಿ ಆರಂಭವಾದ ಮೇಲೂ) ಹಿಟ್ ಆದದ್ದು ಆ ಕಾರ್ಯಕ್ರಮಗಳ ಸತ್ವದಿಂದಾಗಿಯೇ ಎಂದು ಪ್ರೇಕ್ಷಕರು ಹೇಳುತ್ತಾರೆ.

ನಾಟಕ, ವಿಡಂಬನೆ, ಸಂಗೀತ, ನೃತ್ಯ, ನೃತ್ಯರೂಪಕಗಳ ಮೂಲಕವೂ ಶಿಷ್ಟ ಮನರಂಜನೆಯನ್ನು ನೀಡುವಲ್ಲಿ ಡಿಡಿ-೧ ನಿರಂತರ ಪ್ರಯತ್ನ-ಪ್ರಯೋಗಗಳನ್ನು ನಡೆಸುತ್ತಿದೆ. ರಂಗಭೂಮಿಗೆ ಸಂಬಂಧಿಸಿದ ಅನೇಕ ಗೀತೆಗಳು, ದೃಶ್ಯದ ತುಣುಕುಗಳನ್ನು ಡಿಡಿ-೧ ನೀಡಿದೆ. 'ಹಾಸ್ಯ ಚಕ್ರವರ್ತಿ ನರಸಿಂಹರಾಜು' ಎನ್ನುವ ಕಾರ್ಯಕ್ರಮ ಸಿನೆಮಾ ಆಧಾರಿತ ಕಾರ್ಯಕ್ರಮವೇ ಆದರೂ ವ್ಯಕ್ತಿ ಚಿತ್ರಣ ನೀಡುವ ಸದಭಿರುಚಿಯ ಮನರಂಜನಾ ಕಾರ್ಯಕ್ರಮ ಎನಿಸಿದೆ. 'ನಟಸಾರ್ವಭೌಮ ಡಾ. ರಾಜ್‌ಕುಮಾರ್', 'ಅಮ್ಮ-ರಾಜಮ್ಮ' ಕಾರ್ಯಕ್ರಮಗಳಲ್ಲಿ ಕನ್ನಡ ಚಿತ್ರರಂಗದ ಮೇರು ವ್ಯಕ್ತಿಗಳನ್ನು ಪರಿಚಯಿಸಲಾಗಿದೆ.

ಅನೇಕ ಗೀತಚಿತ್ರಗಳು, ಅನೇಕ ಕಲಾವಿದರ ಸುಗಮಸಂಗೀತ, ಶಾಸ್ತ್ರೀಯ ಸಂಗೀತ, ವಾದ್ಯ ಸಂಗೀತ ಕಾರ್ಯಕ್ರಮಗಳನ್ನು ಡಿಡಿ-೧ ಮತ್ತು ಡಿಡಿ-೯ ಪ್ರಸಾರ ಮಾಡಿವೆ. ಸಂಗೀತ ಲಹರಿ, ಗೀತ ಮಾಧುರಿ, ನಿತ್ಯೋತ್ಸವ ಮುಂತಾದ ಗಮನ ಸೆಳೆದ ಕಾರ್ಯಕ್ರಮಗಳನ್ನು ನೀಡಿದ ಹೆಗ್ಗಳಿಕೆ ಈ ವಾಹಿನಿಯದು. ಸಂಗೀತ ಸ್ಪರ್ಧೆಗಳನ್ನು ನೀಡತೊಡಗಿದ್ದು ಖಾಸಗಿ ವಾಹಿನಿಗಳ ಕೊಡುಗೆಯ ನಂತರವೆ. ಈ ಕಾರ್ಯಕ್ರಮವೂ ಲವಲವಿಕೆಯಿರದೆ ಶುಷ್ಕವಾಗಿ ಮೂಡಿಬರುತ್ತಿವೆ ಎಂದು ಪ್ರೇಕ್ಷಕರ ಅನಿಸಿಕೆ.

ಈ ಮಧ್ಯೆ 'ಈಟೀವಿ ಕನ್ನಡ' ಅತ್ಯಂತ ವ್ಯವಸ್ಥಿತ ರೀತಿಯಲ್ಲಿ ಪ್ರಸಾರ ಆರಂಭಿಸಿರುವುದು ವೇದ್ಯವಾಗುತ್ತಿದೆ. ಸರ್ಕಾರದ ಆದ್ಯತೆಯಿರುವ ಕ್ಷೇತ್ರಗಳಲ್ಲೇ ಕೈಯಾಡಿಸುತ್ತಾ ಹೊಸ ಬಗೆಯ ಔತಣವನ್ನು ಪ್ರೇಕ್ಷಕರ ಕಂಗಳಿಗೆ ಈಟೀವಿ ವಾಹಿನಿ ನೀಡಹೊರಟಿರುವಂತಿದೆ. ಮಹಿಳೆ, ಮಕ್ಕಳು, ಕೃಷಿಕ, ಕಾರ್ಮಿಕ, ಎಲ್ಲರ ವಿಚಾರಗಳನ್ನು ಚರ್ಚಿಸತೊಡಗಿದೆ. 'ಮಾಸ್ಟರ್' ಎನ್ನುವ ಸದಭಿರುಚಿಯ ವಿಡಂಬನೆ, 'ಪುಟಾಣಿ ಡಾಟ್‌ಕಾಮ್' ಎನ್ನುವ ಚಿಣ್ಣರ ಕಥೆ ಹೊಸತನದಿಂದ ಗಮನ ಸೆಳೆಯುತ್ತಿವೆ. ಈ ಚಾನೆಲ್ ಮಹಿಳೆಯರಿಗೆ, ಯುವಕರಿಗೆ ಕಾರ್ಯಕ್ರಮಗಳನ್ನು ರೂಪಿಸಿದೆ. ನವಿರು ಹಾಸ್ಯ, ಧರ್ಮ, ರಾಜಕೀಯ, ಶಿಕ್ಷಣ, ಚಿತ್ರಕಲೆ, ಸಂಗೀತ ಜೊತೆಗೆ ಧಾರಾವಾಹಿಗಳು, ಟೆಲಿಚಿತ್ರಗಳು ಹೀಗೆ ವೈವಿಧ್ಯಮಯ ಕಾರ್ಯಕ್ರಮಗಳನ್ನು ಇಷ್ಟು ಚಿಕ್ಕ ಅವಧಿಯಲ್ಲೆ ಪರಿಚಯಿಸಿದೆ. ಇದಕ್ಕಾಗಿ ಈಟೀವಿ ಒಂದು ವರ್ಷದಿಂದಲೂ ಪೂರ್ವಸಿದ್ಧತೆ ನಡೆಸಿರುವ ಅಂಶ ತಿಳಿದುಬಂದಿದೆ. ಪ್ರತಿ ಒಂದು ಗಂಟೆಗೊಮ್ಮೆ ಒಂದು ಸಣ್ಣ ವಾರ್ತಾ ಬುಲೆಟಿನ್ ಪ್ರಸಾರ ಮಾಡುತ್ತಾ ಇತರ ಕಾರ್ಯಕ್ರಮಗಳ ಅವಧಿಯನ್ನು ಅತ್ಯಂತ ವ್ಯವಸ್ಥಿತವಾಗಿ ಭರಿಸಿದೆ. ಸಮಯವನ್ನು ತುಂಬುವುದಕ್ಕಾಗಿ ಕೈಗೆ ಸಿಕ್ಕಿದ್ದನ್ನು ಪ್ರಸಾರ ಮಾಡದೆ, ಆಲೋಚನೆ - ಪರಿಕಲ್ಪನೆಯ ದೃಷ್ಟಿಯಿಂದಲೂ ಇತರ ಮಾಧ್ಯಮಗಳಿಂದ ಇದು ಭಿನ್ನವಾಗಿ ತೋರುತ್ತಿದೆ. ಮನರಂಜನೆಯೂ ತನ್ನ ಸ್ತರವನ್ನು ಹೆಚ್ಚಿಸಿಕೊಂಡಿದ್ದು ಸದಭಿರುಚಿಯ ಸಂಕೇತವಾಗಿದೆ. ಆಶಾದಾಯಕ ಭರವಸೆಗಳನ್ನು ಮೂಡಿಸಿರುವ ಈಟೀವಿ ಚಾನೆಲ್‌ನ ಉಗಮ ಇತರ ವಾಹಿನಿಗಳಿಗೆ ದಿಟ್ಟ ಸವಾಲು ನೀಡುವಂತಿದೆ.

ಆದರೂ ಇದನ್ನೆಲ್ಲ ಈಟೀವಿ ಎಷ್ಟು ಕಾಲ ನಿಭಾಯಿಸುತ್ತದೆ ಎನ್ನುವುದನ್ನು ಇನ್ನೂ ನೋಡಬೇಕಾಗಿದೆ. ಮನರಂಜನೆ ದೃಷ್ಟಿಯಿಂದ ಕಾವೇರಿ, ಸುಪ್ರಭಾತ ವಾಹಿನಿಗಳು ಬಹುತೇಕ ಸೋತಿವೆ ಎಂದು ಹೇಳಬಹುದು.

## ಮಾಹಿತಿ

೨೧ನೇ ಶತಮಾನದಲ್ಲಿ ಆಧುನಿಕ ಮಾಧ್ಯಮಗಳ ಆದ್ಯತೆ ಮಾಹಿತಿ. ಜಗತ್ತಿನ ಎಲ್ಲ ಭಾಗಗಳಿಗೂ, ಸಮಾಜದ ಎಲ್ಲ ವರ್ಗಗಳಿಗೂ ಪಾರದರ್ಶಕತೆಯನ್ನು ಹಚ್ಚುವ ಪ್ರಯತ್ನವಿದು. ಇಂದು ಎಲ್ಲೂ ಏನೂ ಗೌಪ್ಯವಾಗಿಲ್ಲ. ಅಮೆರಿಕದ ಸುದ್ದಿಗಳು ಭಾರತದಲ್ಲಿ, ಚೀನಾದ ಸುದ್ದಿಗಳು ಜಪಾನಿನಲ್ಲಿ, ಆಫ್ರಿಕಾದ ಆಗುಹೋಗುಗಳು ಆಸ್ಟ್ರೇಲಿಯಾದಲ್ಲಿ ಹೀಗೆ ಯಾವ ದೇಶದ ಬಗ್ಗೆಯಾದರೂ, ಇನ್ನಾವುದೇ ದೇಶದಲ್ಲಾದರೂ ಅತೀ ಸುಲಭವಾಗಿ, ಅಗ್ಗವಾಗಿ ದೊರೆಯುವುದೇ ಈ ಮಾಧ್ಯಮಗಳ ನೆರವಿಂದ. ಹಾಗಾಗಿ ದೂರದರ್ಶನ ಒಂದು ಮಾಹಿತಿ ನೀಡುವ ಸಾಧನ. ವಿದೇಶೀ ವಾಹಿನಿಗಳಂತೂ ಸುದ್ದಿಗಾಗಿಯೇ ನಡೆಯುತ್ತಿರುವ ಅನೇಕ ಉದಾಹರಣೆಗಳಿವೆ. ಉದಾ: ಬಿಬಿಸಿ, ಸಿಎನ್‌ಎನ್, ಸ್ಟಾರ್ ನ್ಯೂಸ್, ಝೀ ನ್ಯೂಸ್ ಮೊದಲಾದವು. ಕನ್ನಡದಲ್ಲೂ ಉದಯ ನ್ಯೂಸ್ ಎನ್ನುವ ಒಂದು ವಾಹಿನಿಯಿರುವುದು ಗಮನಾರ್ಹ.

೧೯೮೩ರಿಂದಲೂ ಡಿಡಿ-೧ ವಾರ್ತೆಗಳನ್ನು ಬಿತ್ತರಿಸುತ್ತಿದೆ. ಜೊತೆಗೆ ೧೯೯೦ರ ದಶಕದ ಆದಿಭಾಗದಲ್ಲಿ 'ಇನ್‌ಸೈಟ್' ಎನ್ನುವ ಇಂಗ್ಲಿಷ್ ಸುದ್ದಿ ಸಂಚಿಕೆಯನ್ನೂ, ಅದರ ಕನ್ನಡ ಅನುವಾದ 'ಕರ್ನಾಟಕ ಚಿತ್ರ'ವನ್ನೂ ಪ್ರಸಾರ ಮಾಡುತ್ತಿತ್ತು. ಆದರೂ ಈ ಕಾರ್ಯಕ್ರಮ ತೀರಾ ಅಲ್ಪಾಯುಷಿಯಾಗಿತ್ತು. ಪ್ರಚಲಿತ ವಿದ್ಯಮಾನಗಳನ್ನು ಕುರಿತ ಕಾರ್ಯಕ್ರಮಗಳನ್ನೂ ಡಿಡಿ ವಾಹಿನಿಗಳಲ್ಲಿ ಪ್ರಸಾರ ಮಾಡಬೇಕೆಂಬ ಸೂಚನೆಯಿದ್ದರೂ ಕನ್ನಡದಲ್ಲಿ ಅಂತಹ ಕಾರ್ಯಕ್ರಮಗಳು ಪ್ರಸಾರವಾಗುತ್ತಿಲ್ಲ. ಇನ್ನು ಚುನಾವಣೆ, ಮತ-ಎಣಿಕೆ, ಆಯವ್ಯಯ ಪತ್ರ ಮಂಡನೆ, ಅನೇಕ ಕ್ರೀಡೆಗಳು, ಐತಿಹಾಸಿಕ ದಸರಾ ಮೆರವಣಿಗೆಯಂತಹ ಮಹತ್ವಪೂರ್ಣ ವಿಷಯಗಳನ್ನು ಡಿಡಿ-೧ ಅತ್ಯುತ್ತಮ ಮಟ್ಟದಲ್ಲಿ, ಅದರಲ್ಲೂ ವಿಶೇಷ ವಾರ್ತಾ ಪ್ರಸಾರ, ನೇರ ಪ್ರಸಾರ ಮಾಡುವ ಹೆಗ್ಗಳಿಕೆ ಹೊಂದಿದೆ. ವಿಧಾನ ಮಂಡಲದ ಉಭಯ ಸದನಗಳ ಕಾರ್ಯಕಲಾಪಗಳ ಸಮೀಕ್ಷಾ ವರದಿ 'ವಿಧಾನ ಮಂಡಲದಲ್ಲಿ ಇಂದು' ಅನ್ನು ಈಗಲೂ ಪ್ರಸಾರ ಮಾಡುತ್ತಿರುವ ಒಂದೇ ವಾಹಿನಿ ಡಿಡಿ-೧. 'ಪ್ರಸ್ತುತ' ಎನ್ನುವ ಇನ್ನೂ ಒಂದು ಉಪಯುಕ್ತ ಕಾರ್ಯಕ್ರಮ ಚಂದನದಲ್ಲಿ ಮೂಡಿಬರುತ್ತಿದೆ. ಇತ್ತೀಚಿನವರೆಗೂ (೨೦೦೦ದ ಮಧ್ಯಭಾಗದವರೆಗೂ) ದಿನಕ್ಕೊಂದೇ ವಾರ್ತಾಪ್ರಸಾರ ಹೊಂದಿದ್ದ ಈ ವಾಹಿನಿ ಖಾಸಗಿ ವಾಹಿನಿಗಳ ಪೈಪೋಟಿ ಎದುರಿಸಲು ಎಂಬಂತೆ ಈಗ ಮತ್ತೊಂದು ವಾರ್ತಾ ಬುಲೆಟಿನ್‌ಅನ್ನು ಬೆಳಿಗ್ಗೆ ಕೇವಲ ಚಂದನ ವಾಹಿನಿಯಲ್ಲಿ ಪ್ರಸಾರ ಮಾಡುತ್ತಿದೆ. ಕೇವಲ ವಾರ್ತೆಗಳ ಸಂಖ್ಯೆಯನ್ನು ೧ ರಿಂದ ೨ಕ್ಕೆ ಹೆಚ್ಚಿಸಲು ಸರ್ಕಾರಿ ಸ್ವಾಮ್ಯದಲ್ಲಿದ್ದ ಈ ಸಂಸ್ಥೆ ೧೭ ವರ್ಷಗಳನ್ನು ತೆಗೆದುಕೊಂಡಿದೆ ಎನ್ನುವುದು ಗಮನಾರ್ಹ. ಅದರಲ್ಲಿ ಸುಮಾರು ೧೩ ವರ್ಷಗಳ ಕಾಲ ಅದೊಂದೇ ವಾಹಿನಿ ಇದ್ದು, ದಿನಕ್ಕೊಂದೇ 'ವಾರ್ತೆಗಳು' ಪ್ರಸಾರಗೊಳ್ಳುತ್ತಿದ್ದದ್ದರಿಂದ ವೀಕ್ಷಕರಿಗೆ ಆಗಿರಬಹುದಾದ ನಷ್ಟವನ್ನು ಆ ಮೂಲಕ ಗಂಭೀರವಾಗಿ ಗುರುತಿಸಬೇಕು ಎನ್ನುವುದನ್ನು ಈ ಅಧ್ಯಯನ ತಿಳಿಸಿದೆ. ಹಾಗಾಗಿ ವಾರ್ತೆಯ ದೃಷ್ಟಿಯಿಂದ ಕನ್ನಡ ಟಿವಿ ಆರಂಭವಾದ ಮೇಲೂ ಆಕಾಶವಾಣಿ ಹಾಗೂ ಪತ್ರಿಕೆಗಳಿಗೆ ಬೇಡಿಕೆ ಕಡಿಮೆಯಾಗಲಿಲ್ಲ ಎನ್ನುವುದನ್ನೂ ತಿಳಿಯಲಾಗಿದೆ.

೧೯೯೬ರಲ್ಲಿ ಉದಯ ಟಿವಿ ಸುದ್ದಿ ಪ್ರಸರಣೆ ಆರಂಭಿಸಿದ ಮೇಲೆ, ನಂತರ ಕಾಲ ಕ್ರಮೇಣ ಕೇವಲ ೩ ವರ್ಷಗಳ ಕೊನೆಗೆ ೫ ವಾರ್ತಾಪ್ರಸಾರಗಳನ್ನು ಕೊಟ್ಟಿದ್ದು, ಅಲ್ಲಿಂದ ಒಂದು ವರ್ಷದೊಳಗೆ ೨೪ ಗಂಟೆಗಳ ಒಂದು ಸುದ್ದಿ ವಾಹಿನಿಯನ್ನು ಆರಂಭಿಸಿದ್ದು, ಅದನ್ನೇ ತನ್ನ ಜನಪ್ರಿಯತೆಗೆ ಅಸ್ತ್ರವನ್ನಾಗಿ ಬಳಸಿಕೊಂಡಿತೆನ್ನಬಹುದು.

ಈ ವಾಹಿನಿ ವಾರ್ತೆಗಳನ್ನು ಮೊದಲು ಚೆನ್ನೈನಿಂದ ಪ್ರಸಾರ ಮಾಡುತ್ತಿತ್ತು. ನಂತರ ೨೦೦೦ದ ಇಸವಿಯಲ್ಲಿ ಬೆಂಗಳೂರಿನಿಂದಲೇ ಪ್ರಸಾರ ಮಾಡತೊಡಗಿದ ಮೇಲೆ, ವಾರ್ತೆಗಾಗಿಯೇ ಒಂದು ವಾಹಿನಿಯನ್ನೇ ತೆರೆದ ಮೇಲೆ ಅದರ ಜನಪ್ರಿಯತೆ ಉತ್ತುಂಗಕ್ಕೇರಿತು. ಅಂತಹ ಜನಪ್ರಿಯತೆಯ ಕಾರಣದಿಂದಲೇ ಸನ್ ಟಿವಿಯ ೩ ಕನ್ನಡ ವಾಹಿನಿಗಳು ಇಂದು

ಯಶಸ್ವಿಯಾಗಿ ಕಾರ್ಯನಿರ್ವಹಿಸುತ್ತಿವೆ. ಆಗಲೂ ಡಿಡಿ-೧ರ ವಾರ್ತಾ ವಿಭಾಗ ಅದನ್ನು ಸವಾಲಾಗಿ ಸ್ವೀಕರಿಸದೇ ಮುಂಚಿನಂತೆ ದಿನಕ್ಕೊಂದೇ ವಾರ್ತಾ ಪ್ರಸಾರಕ್ಕೆ ಅಂಟಿಕೊಂಡಿದ್ದು ಅದರ ಪ್ರಸಾರ ವೇಳೆಯನ್ನೂ ಏರುಪೇರುಗೊಳಿಸಿದ್ದು (ಅಧ್ಯಯನದ ಸಂದರ್ಭದಲ್ಲಿ, ಭಾನುವಾರ ಸಂಜೆ ೬.೩೦ಕ್ಕೆ, ಉಳಿದ ದಿನಗಳು ರಾತ್ರಿ ೭ಕ್ಕೆ) ಉದಯ ವಾರ್ತೆಗಳಿಗೆ ವಿಶೇಷ ಪ್ರಾಧಾನ್ಯ ನೀಡಿತು. ನಂತರ ಡಿಡಿ-೯ರಲ್ಲಿ ಬೆಳಿಗ್ಗೆಯೂ ಒಂದು ವಾರ್ತಾಪ್ರಸಾರ ಪ್ರಾರಂಭವಾಯಿತಾದರೂ ತನ್ನ ಹಳೆತನ, ಪತ್ರಿಕೆಗಳ ಮುಖಪುಟದ ವರದಿಯಂತಹ ಸುದ್ದಿ ಬಿತ್ತರಿಸಿ, ವೀಕ್ಷಕರನ್ನು ಗೆಲ್ಲಲು ವಿಫಲವಾಯಿತು ಎಂದು ಅಧ್ಯಯನದ ಸಂದರ್ಭದಲ್ಲಿ ತಿಳಿದು ಬಂದಿತು.

ಈ ಮಧ್ಯೆ ಉದಯ ವಾಹಿನಿ ದಿನವಹಿ ಪ್ರಾದೇಶಿಕ ವಾರ್ತೆ ನೀಡುವ ಮೂಲಕ ರಾಜ್ಯದ ಮೂಲೆ ಮೂಲೆಯ ಸಣ್ಣಪುಟ್ಟ ವರದಿಯನ್ನೂ ಪ್ರಸಾರ ಮಾಡಿ ಸಮಾಜದ ಕುಶಾಗ್ರ ಮಟ್ಟಕ್ಕೆ ಹರಡಿಕೊಳ್ಳುತ್ತಿದೆ ಎನ್ನುವುದು ಒಂದು ಭಾಗವಾದರೆ 'ಪ್ರಪಂಚ ಪರ್ಯಟನೆ' ಎನ್ನುವ ಸಾಪ್ತಾಹಿಕ ಸಂಚಿಕೆಯ ಮೂಲಕ ವಿಶ್ವದ ವಿವಿಧ ಭಾಗಗಳಲ್ಲಿ ಜರುಗುವ ವಿಸ್ಮಯಕರ ಸುದ್ದಿಗಳನ್ನು ನೀಡುವ ಮೂಲಕ ಜಗತ್ತಿನಾದ್ಯಂತದ ವ್ಯಾಪಕತೆಯನ್ನು ಮೈಗೂಡಿಸಿಕೊಳ್ಳುತ್ತಿದೆ. 'ಕಾವೇರಿ' ವಾಹಿನಿ ದಿನಕ್ಕೆ ೩ ವಾರ್ತೆಗಳನ್ನು ಈಗ ಪ್ರಸಾರ ಮಾಡುತ್ತಿದೆ. ಈ ಮಧ್ಯೆ ಈಟೀವಿ ಚಾನೆಲ್ ವಾರ್ತಾಪ್ರಸಾರ ಪ್ರಾರಂಭಿಸಿ ಗಂಟೆಗೊಂದು ಚಿಕ್ಕ ವಾರ್ತೆ, 'ಕನ್ನಡ ನಾಡಿ' ಎನ್ನುವ ರಾಜ್ಯದ ಎಲ್ಲ ಜಿಲ್ಲೆಯ ಸುದ್ದಿಗೂ ಪ್ರಾಶಸ್ತ್ಯ ನೀಡುವ ಪ್ರಾದೇಶಿಕ ವಾರ್ತೆಯನ್ನು ಪ್ರಸಾರ ಮಾಡುತ್ತಿದೆ.

ವಾರ್ತೆಗಳನ್ನು ಪ್ರಸಾರ ಮಾಡುವುದಷ್ಟೇ ಮಾಹಿತಿ ವಿತರಣೆಯಲ್ಲ. ವಾರ್ತಾ ವಿಶೇಷಗಳನ್ನು ಚರ್ಚೆಗೆ ಒಡ್ಡಿ ಜನಾಭಿಪ್ರಾಯ ರಚನೆಗೆ ಅನುವು ಮಾಡಿಕೊಡುವುದೂ ಮಾಧ್ಯಮಗಳ ಹೊಣೆಗಾರಿಕೆಯೇ ಆಗುತ್ತದೆ. ಉದಯ ಟಿವಿಯ 'ಮುಖಾಮುಖಿ' ಸಂದರ್ಶನ, 'ನಮ್ಮ ಸುತ್ತ' ಸುದ್ದಿ ತುಣುಕು, 'ಸಿನೆಮಾ ವಾರ್ತೆ' ಚಿತ್ರರಂಗದ ಸುದ್ದಿಗಳು, ನೇರ ಫೋನ್-ಇನ್ ಕಾರ್ಯಕ್ರಮಗಳು, ಮಾಹಿತಿಯ ವಿವಿಧ ಮುಖಗಳನ್ನು ಅನಾವರಣಗೊಳಿಸುತ್ತಿವೆ. ಮಾಹಿತಿ ವಿತರಣೆಯ ಇಂತಹ ಸುಭದ್ರ ನೆಲೆಗಳನ್ನು ಆಧುನಿಕ ಮಾಧ್ಯಮಗಳು ಮೈಗೂಡಿಸಿಕೊಳ್ಳುವುದು ಈ ಸಂವಹನಯುಗದಲ್ಲಿ ಆದ್ಯತೆಯಾಗಬೇಕು.

## ೩. ಸುದ್ದಿ - ಸಂಗ್ರಹಣೆ, ಮಂಡನೆ

ಸುದ್ದಿ ಎಂದರೆ ಸುದ್ದಿಯಷ್ಟೇ ಅಲ್ಲ. ಅದರ after effects, ಅದರ prior defects ಕೂಡ ಸುದ್ದಿಯೇ. ಆದ್ದರಿಂದ ಸುದ್ದಿಯನ್ನು ಅರಸುವವ ಈಗಷ್ಟೆ ಬದುಕಿದ್ದರೆ ಸಾಲದು, ನೆನ್ನೆಯೂ ನಾಳೆಯೂ ಬದುಕಬೇಕು. ಅಂದರೆ ಸುದ್ದಿಗಾರ ಸದಾ ಜಾಗ್ರತನಾಗಿರಬೇಕು.

ಹಾಗಾದರೆ ಸುದ್ದಿ ಎಂದರೇನು?

> *As a Working definition one can say that NEWS is a new piece of information about a significant and recent event that affects the listeners and is of interest to them.*[೬]

ಹಿಂದೂಸ್ತಾನ್ ಟೈಮ್ಸ್‌ನ ನಿವೃತ್ತ ಪ್ರಧಾನ ಸಂಪಾದಕ ಬಿ.ಜಿ. ವರ್ಗಿಸ್ ಪ್ರಕಾರ

> *The standard definition that only 'man bites dog' is news is obsolete and inaccurate. In view of the*

*'communication gap' in a democratic society that which is reported becomes news and that which is not reported remains non-news. Sensationalization, diasater, fraud and the like is news but it is not 'sole news or the highest news.'*[೬]

ಸುದ್ದಿ ಎನ್ನುವುದನ್ನು ಸಾಮಾನ್ಯವಾಗಿ ಅನೇಕ ರೀತಿಯಲ್ಲಿ ವ್ಯಾಖ್ಯಾನಿಸಲಾಗಿದೆ.

1. News may be defined as any accurate fact or idea that will interest a large number of readers.
2. News is anything timely that is interesting and significant to readers in respect of their personal affairs, of their relation to society, and the best news is that which possesses the greatest degree of this interest and significance for the greatest number.
3. News may be defined as an accurate, unbiased account of the significant facts of a timely happening that is of interest to the readers of the newspapers that print the account.
4. News is the first report of the significant events which have interest for the public.
5. News is an account of a current idea, event or problem that interests people.
6. News is the record of the most interesting, important and accurate information obtained about the things man thinks and says, sees, describes, plans and does.

ಸುದ್ದಿ ಎನ್ನುವುದಕ್ಕೆ ಜನಜನಿತವಾಗಿರುವ ಈ ಎಲ್ಲ ವ್ಯಾಖ್ಯೆಗಳನ್ನು ಗಮನಿಸಿದಾಗ ಎರಡು ಶಬ್ದಗಳು ಪ್ರಮುಖವಾಗಿ ಎದ್ದು ಕಾಣುತ್ತವೆ. (೧) ಘಟನೆ (೨) ಸಾರ್ವಜನಿಕ ಆಸಕ್ತಿ. ಅಂದರೆ 'ಸಾರ್ವಜನಿಕರ ಆಸಕ್ತಿ ಕೆರಳಿಸಬಹುದಾದ ಒಂದು ಘಟನೆಯೇ ಸುದ್ದಿ.' ಈ ಘಟನೆ ಸತ್ಯವಾದದ್ದೂ ಹೊಸದಾದದ್ದೂ ವಿಶೇಷವಾದದ್ದೂ ಸಾರ್ವಜನಿಕರನ್ನೇ ಒಳಗೊಳ್ಳುವಂಥದ್ದೂ ಆಗಿರಬೇಕು. ಉದಾಹರಣೆಗೆ: 'ಅಲ್ಲೊಂದು ಮರ ಇದೆ' ಎನ್ನುವುದು ಸುದ್ದಿಯಾಗುವುದಿಲ್ಲ. 'ಅಲ್ಲೊಂದು ಮರ ಬಿದ್ದಿದೆ' ಎನ್ನುವುದು ಒಂದು ಘಟನೆಯಾದರೂ ಗಮನ ಸೆಳೆಯುವುದಿಲ್ಲ. ಆದರೆ ಅದು ಸ್ವಲ್ಪ ಮಟ್ಟಿಗೆ ಜನರ ಗಮನ ಸೆಳೆಯುವುದು 'ಅಲ್ಲೊಂದು ಮರ ದಾರಿಗೆ ಅಡ್ಡಲಾಗಿ ಬಿದ್ದಿದೆ' ಎಂದು ಆದಾಗ ಮಾತ್ರ. ಮರ ರಸ್ತೆಗೆ ಅಡ್ಡಲಾಗಿ ಬಿದ್ದಿರುವುದರಿಂದ ಸಾರ್ವಜನಿಕರ ಸಂಚಾರಕ್ಕೆ ತೊಂದರೆ ಉಂಟು ಮಾಡುವಂಥದ್ದಾಗಿದ್ದರೆ ಸಹಜವಾಗಿ ಇದು ಸ್ಥಳೀಯರಿಗೆ ಸುದ್ದಿಯಾಗುತ್ತದೆ. ಆ ಮರದಡಿಯಲ್ಲಿ ಸ್ಕೂಟರ್ ಸವಾರನೊಬ್ಬ ಸಿಕ್ಕು ಮೃತಪಟ್ಟನೆಂಬ ಸುದ್ದಿ ಪ್ರಮುಖ ಸುದ್ದಿಯೂ ಆಗುತ್ತದೆ. ಒಂದು ವೇಳೆ ಅತೀ ಗಣ್ಯವ್ಯಕ್ತಿಯೊಬ್ಬ ಆ ಮರದಡಿ ಸಿಕ್ಕು ಮೃತಪಟ್ಟಿದ್ದರೆ ಅದು ಗಂಭೀರವಾದ ಸುದ್ದಿಯೂ ಆಗಬಹುದು.

ಹೀಗೆ ಸುದ್ದಿಯ ಗಂಭೀರತೆ ನಡೆದ ಘಟನೆಯ ಸ್ವರೂಪವನ್ನು ಅವಲಂಬಿಸಿರುತ್ತದೆ. ಅದು ತನ್ನ ತಾಜಾತನವನ್ನೇ ಅವಲಂಬಿಸಿರುತ್ತದೆ. ನಿಖರತೆ, ಗಂಭೀರತೆ, ಸಾಮೀಪ್ಯ, ಜನಾಸಕ್ತಿಗಳನ್ನು ಅವಲಂಬಿಸಿರುತ್ತದೆ. ಸುದ್ದಿಯ ಮೂಲಧಾತುಗಳನ್ನು ಮೊದಲು ತಿಳಿಯುವುದರಿಂದ ಮಾಧ್ಯಮಗಳಲ್ಲಿನ ಸುದ್ದಿಯ ಬಗ್ಗೆ ಆಳವಾದ ಅಧ್ಯಯನ ನಡೆಸಲು ಅನುಕೂಲವಾಗುತ್ತದೆ ಎಂದು ಭಾವಿಸಿ ಅವನ್ನು ಇಲ್ಲಿ ವಿವರಿಸಿದ್ದೇನೆ.

**೧. ಸಮಯಬದ್ಧತೆ :** ನೆನ್ನೆ ನಡೆದ ಘಟನೆಯನ್ನು ಮಾಧ್ಯಮಗಳ ಮೂಲಕ ನಾಳೆ ವರದಿ ಮಾಡುವ ಹೊತ್ತಿಗೆ ಜನರ ಬಾಯಿಂದ ಬಾಯಿಗೆ ಸುದ್ದಿ ಹರಡಿಬಿಟ್ಟಿರುತ್ತದೆ. ಈ ಉದಾಹರಣೆಯೊಂದೇ ಸಾಕು ಒಂದು ಘಟನೆ ಸುದ್ದಿಯಾಗಿ ಪರಿವರ್ತಿತವಾಗುವುದಕ್ಕೆ ಒಂದು ಗಳಿಗೆ ಕೂಡ ವ್ಯಯವಾಗಬಾರದು ಎನ್ನುವುದಕ್ಕೆ.

ಒಂದು ವಾಸ್ತವ ಉದಾಹರಣೆ : ಕನ್ನಡ ಚಿತ್ರರಂಗದ ಜನಪ್ರಿಯ ನಟ ಕಲ್ಯಾಣಕುಮಾರ್ ನಿಧನ ಹೊಂದಿದ ಸುದ್ದಿಯನ್ನು ಉದಯ ಟಿವಿ ತಾನು ಪ್ರಸಾರ ಮಾಡುತ್ತಿದ್ದ ಧಾರಾವಾಹಿಯ ಮಧ್ಯದಲ್ಲೇ ವಿಶೇಷ ವಾರ್ತೆಯ ರೂಪದಲ್ಲಿ ನೀಡಿತು. ಅದು ವಾರ್ತೆಯ ಸಮಯವಾಗಿರಲಿಲ್ಲ. ಆದರೆ 'ಸುದ್ದಿ' ಎನ್ನುವುದು ಸಮಯಕ್ಕಾಗಿ ಕಾಯುವುದಿಲ್ಲ. ಅದೇ ಸುದ್ದಿ ಸಂಜೆ ಪತ್ರಿಕೆಗಳಲ್ಲಿ, ಮಧ್ಯಾಹ್ನದ ಆಕಾಶವಾಣಿ ಪ್ರದೇಶ ಸಮಾಚಾರದಲ್ಲಿ ಪ್ರಸಾರವಾಗುವ ಹೊತ್ತಿಗೆ ಹಳೆಯ ಸುದ್ದಿ ಎನಿಸಿತ್ತು. ಆದ್ದರಿಂದ ಕಾಲಕ್ಕೆ ಸುದ್ದಿ ಬದ್ಧವಾಗಿರಬೇಕು.

**೨. ವಾಸ್ತವತೆ ಅಥವಾ ನಿಖರತೆ :** ಸುದ್ದಿ ಎನ್ನುವುದು ಕಲ್ಪಿತ ಕಥೆಯಲ್ಲ. ಅದು ವಸ್ತುಸ್ಥಿತಿ. ನಡೆದದ್ದನ್ನು ನಡೆದಂತೆಯೇ ವರದಿ ಮಾಡುವುದು ಸಮಾಜದಲ್ಲಿ ಗೊಂದಲ ಮೂಡಿಸುವುದಿಲ್ಲ. ಹಾಗಾಯಿತಂತೆ, ಹೀಗಾಯಿತಂತೆ ಎಂದೂ, ಊಹಾಪೋಹಗಳ ಮೂಲಕವೂ ಕಥೆ ಕಟ್ಟಬಹುದೇ ಹೊರತು ಸುದ್ದಿಯನ್ನು ವರದಿ ಮಾಡಿದಂತಾಗುವುದಿಲ್ಲ. ವರದಿಯ ನಿಖರತೆ ಅದರ ಮೌಲ್ಯವನ್ನು ಹೆಚ್ಚಿಸುತ್ತದೆ.

**೩. ಸ್ಥಳೀಯತೆ ಅಥವಾ ಸಾಮೀಪ್ಯ :** ನಮ್ಮ ತಕ್ಷಣದ ಆಸುಪಾಸಿನಲ್ಲಿ ಸಂಭವಿಸುವ ಘಟನೆ ಹೆಚ್ಚಿನ ಆಸಕ್ತಿ ಮೂಡಿಸುತ್ತದೆ. ಊರಾಚೆ ನಡೆಯುವ ಬಾಂಬ್ ಸ್ಫೋಟಕ್ಕಿಂತ ಪಕ್ಕದ ಮನೆಗೆ ಬಿದ್ದ ಬೆಂಕಿ ಹೆಚ್ಚು ಗಮನ ಸೆಳೆಯುತ್ತದೆ. ಹಾಗೆ ಸುದ್ದಿ ಸಹ. ಸುತ್ತಮುತ್ತಲ, ಹತ್ತಿರದ ಸ್ಥಳಗಳಲ್ಲಿ ಜರುಗುವ ಘಟನೆಗೂ ಅಲ್ಲಿ ನೆಲೆಸಿದವರಿಗೂ ಹತ್ತಿರದ ಸಂಬಂಧ, ಆಸಕ್ತಿಗಳಿರಬಹುದು. ಉದಾಹರಣೆಗೆ, 'ಅ' ಹಳ್ಳಿಯಿಂದ ಹೊರಟ ಬಸ್ 'ಬ' ಹಳ್ಳಿಯ ಬಳಿ ಅಪಘಾತಕ್ಕೀಡಾದರೆ ಆ ಎರಡೂ ಹಳ್ಳಿಗಳ ಜನರು ಹೊಂದಬಹುದಾದ ಆತಂಕವನ್ನು ಮತ್ತೊಂದು ಹಳ್ಳಿ 'ಕ' ಹೊಂದಲಾರದು. ಏಕೆಂದರೆ ಆ ಬಸ್ಸಿನಲ್ಲಿ ಮೊದಲೆರಡು ಹಳ್ಳಿಗರಿಗೆ ಸಂಬಂಧಿಸಿದ ಜನರಿರಬಹುದು. ಸಂಬಂಧದ ದೃಷ್ಟಿಯಿಂದಲೂ ಸಾಮೀಪ್ಯದ ದೃಷ್ಟಿಯಿಂದಲೂ ಈ ಸುದ್ದಿ ಒಂದು ನಿರ್ದಿಷ್ಟ ಸ್ಥಳದವರಿಗೆ ಹೆಚ್ಚು ಮುಖ್ಯವಾಗುತ್ತದೆ. ಚೀನಾದಲ್ಲಿ ನಡೆಯುವ ಭಾರೀ ರೈಲು ದುರಂತಕ್ಕಿಂತ ಅದೇ ವೇಳೆ ಕರ್ನಾಟಕದ ಹಳ್ಳಿಯೊಂದರಲ್ಲಿ ಸಂಭವಿಸುವ ಸಣ್ಣ ಅಪಘಾತ ಇಲ್ಲಿಯವರಿಗೆ ಆಸಕ್ತಿಯ ವಿಷಯವಾಗಿರುತ್ತದೆ.

**೪. ಆಸಕ್ತಿ ಪೂರ್ಣತೆ :** ಗ್ರಾಹಕರ ದೃಷ್ಟಿಯಿಂದ ಸುದ್ದಿ ಎನ್ನುವುದು ಕಾಳಜಿ ಆಸಕ್ತಿ ಮೂಡಿಸುವಂಥದ್ದೂ ವಿಶಿಷ್ಟವೆನಿಸುವಂಥದ್ದೂ ಆಗಿರಬೇಕು. ಗ್ರಾಹಕರಲ್ಲೂ ವಿಭಿನ್ನ ಆಸಕ್ತಿಗಳಿರುತ್ತವೆ ಎಂಬುದು ನಿಜ. ಒಂದು ವರ್ಗಕ್ಕೆ ಆಸಕ್ತಿ ಮೂಡಿಸಬಹುದಾದ ಸುದ್ದಿ ಇನ್ನೊಂದು ವರ್ಗಕ್ಕೆ ನೀರಸ ಎನಿಸಬಹುದು. ಹಾಗಾಗಿ ಎಲ್ಲ ಬಗೆಯ ಸುದ್ದಿಗಳನ್ನು ಸಂಗ್ರಹಿಸಲೂ ಬೇಕು, ಸಂಪಾದಿಸಲೂ ಬೇಕು.

**೫. ವ್ಯಕ್ತಿ ವೈಶಿಷ್ಟ್ಯ :** ನಾಮದ ಬಲವೊಂದಿದ್ದರೆ ಸಾಕು ಬಹಳ ಸುಲಭ ಪ್ರಚಾರ ಗಿಟ್ಟುತ್ತದೆ. ಉದಾಹರಣೆಗೆ, ರಾಜಕುಮಾರಿ ಡಯಾನಾ ನಿಂತದ್ದು, ಕೂತದ್ದು, ಕಡಲ ತೀರದಲ್ಲಿ ಓಡಿದ್ದು ಎಲ್ಲವೂ ಸುದ್ದಿಯಾಗುತ್ತಿದ್ದದ್ದು ಆ ವ್ಯಕ್ತಿಯ ವೈಶಿಷ್ಟ್ಯದಿಂದಾಗಿಯೇ. ಕಡೆಗೆ ಅಪಘಾತದಲ್ಲಿ ಅವಳ ಸಾವು ಸಮೀಪಿಸುತ್ತಿದ್ದಾಗಲೂ ಅವಳು ಸುದ್ದಿಯಾಗುವುದರಲ್ಲೇ ಇದ್ದಳು. ಸತ್ತೂ ಸುದ್ದಿಯಾದಳು.

**೬. ನಿಗೂಢತೆ :** ಇದು ಸುದ್ದಿಯಾಗುವುದಷ್ಟೇ ಅಲ್ಲ ಸುದ್ದಿಯನ್ನು ಕುತೂಹಲದ ಆಳಕ್ಕೆ ತಳ್ಳಿಬಿಡುತ್ತದೆ. ಕ್ರೈಂ ವರದಿಗಳಿಗೆ ಸುದ್ದಿಯ ನಿಗೂಢತೆಯೇ ಮೂಲಾಧಾರ. ಅದನ್ನು ಕೆದಕಿ, ಕೆಣಕಿ ಅದರ ಸತ್ವವನ್ನು, ಸತ್ಯವನ್ನು ಹುಡುಕಿ ಹೊರಗೆಳೆಯುವವರೆಗೆ

ಅದು ಸುದ್ದಿಯಲ್ಲೇ ಇರುತ್ತದೆ. ಉದಾಹರಣೆಗೆ: ರಾಜೀವ್‌ಗಾಂಧಿ ಹತ್ಯೆ. ಹತ್ಯೆಯ ಹಿಂದೆಯೇ ಅದರ ನಿಗೂಢತೆಯನ್ನು ಅರಿಯುವ ಪ್ರಯತ್ನಗಳು ನಡೆದದ್ದು, ಆ ಕೊಲೆಗಡುಕರು ಬೆಂಗಳೂರಿನಲ್ಲಿ ವಿಷ ಸೇವಿಸಿ ಸಾಯುವವರೆಗೂ ಸುದ್ದಿಯಾಗಿ ಉಳಿದೇ ಇತ್ತು.

ಈ ಎಲ್ಲ ಅಂಶಗಳೂ ಅಥವಾ ಇವುಗಳಲ್ಲಿ ಕೆಲವು ಅಂಶಗಳಾದರೂ ಇರುವ ಘಟನೆಗಳು ಸುದ್ದಿಯಾಗುತ್ತವೆ. ಇಷ್ಟಲ್ಲದೆ ಇನ್ನೂ ಎಷ್ಟೋ ವಿಚಾರಗಳಿರಬಹುದು. ಸಮರ, ಶತೃತ್ವ, ವದಂತಿ, ಅನ್ವೇಷಣೆ, ಉತ್ಖನನ, ಹಾಸ್ಯ, ಗ್ಲಾಮರ್, ಸಾಹಸ, ಈ ಆಕಾಶದಡಿಯಲ್ಲಿ ಜರುಗುವ, ಘಟಿಸುವ, ಸಂಭವಿಸುವ, ಉಂಟಾಗುವ, ಮಾಡುವ ಯಾವುದಾದರೂ ಆಗಿರಬಹುದು ಅದೂ ಸುದ್ದಿಯಾಗಬಹುದು. ಆದರೆ ಅದು ಯಾರಿಗೆ, ಯಾಕೆ, ಯಾವಾಗ, ಹೇಗೆ ಸುದ್ದಿಯಾಗುತ್ತದೆ ಎನ್ನುವುದು ಮುಖ್ಯ.

## ಸುದ್ದಿ ಸಂಗ್ರಹಣೆ

ಸುದ್ದಿ ಎನ್ನುವುದು ದೂರದರ್ಶನ, ಆಕಾಶವಾಣಿ ಹಾಗೂ ಪತ್ರಿಕಾ ಮಾಧ್ಯಮಗಳಿಗೆ ಬಹುತೇಕ ಒಂದೇ ಆದರೂ ಅದರ ಸಂಗ್ರಹಣಾ ವಿಧಾನ, ತಂತ್ರಜ್ಞಾನ ಬೇರೆಯೇ ಆಗಿದೆ. ಆದರೂ ಎಲ್ಲ ಮಾಧ್ಯಮಗಳೂ ಸುದ್ದಿ ಸಂಗ್ರಹಣೆಯಲ್ಲಿ ಗಮನಿಸಿಕೊಳ್ಳಲೇಬೇಕಾದ ಒಂದು ಸೂತ್ರ ೫ ಡಬ್ಲ್ಯೂ ಮತ್ತು ೧ ಹೆಚ್. (Where, when, why, who, what ಮತ್ತು How) ಎನ್ನುವ ಎಲ್ಲ ಪ್ರಶ್ನೆಗಳಿಗೂ ತಕ್ಕ, ವಸ್ತುನಿಷ್ಠ ಉತ್ತರ ದೊರಕಿಸಿಕೊಂಡು ಬಿಟ್ಟರೆ ಒಂದು ಸುದ್ದಿ ಸಿದ್ಧವಾಗಿಬಿಡುತ್ತದೆ. ಇದೇ ಮಾಧ್ಯಮೋದ್ಯಮದ ಮೂಲ ಸಿದ್ಧಾಂತ. ಇದರ ಜೊತೆಗೆ ಮಾಧ್ಯಮಕ್ಕೆ ತಕ್ಕಂತೆ ಇನ್ನಷ್ಟು ಪರಿಕರಗಳು ಬೇಕಾಗುತ್ತವೆ. ಆ ದೃಷ್ಟಿಯಿಂದ ಮೊದಲು ದೂರದರ್ಶನ ಮಾಧ್ಯಮದಲ್ಲಿ ಸುದ್ದಿ ಸಂಗ್ರಹಣೆ ನಡೆಯುವ ಬಗ್ಗೆ, ಅದರ ತಪ್ಪು-ಒಪ್ಪುಗಳ ಬಗ್ಗೆ ನನ್ನ ಅನುಭವ, ಅಧ್ಯಯನದ ಆಧಾರದ ಮೇಲೆ ಇಲ್ಲಿ ತಿಳಿಸಬಯಸುತ್ತೇನೆ.

**ಸುದ್ದಿ ಮೂಲ :** ಸುದ್ದಿ ಕೊಠಡಿಗಳಿಗೆ (News room) ಸುದ್ದಿ ಎನ್ನುವುದು ನಿರಂತರವಾಗಿ ಹರಿದು ಬರುತ್ತಿರುತ್ತದೆ. ಅದು ಎಲ್ಲಿಂದ ಬರುತ್ತದೆಯೋ ಅದೇ ಅದರ ಮೂಲವೂ ಆಗುತ್ತದೆ. ದೂರದರ್ಶನದಂತಹ ಮಾಧ್ಯಮಕ್ಕೆ ಸುದ್ದಿ ಒದಗಿಸುವ ಮೂಲಗಳು:

- ಕ್ಯಾಮೆರಾ ತಂಡ ಮತ್ತು ವರದಿಗಾರ/ರ್ತಿ
- ಸುದ್ದಿ ಸಂಸ್ಥೆಗಳು - ರಾಷ್ಟ್ರೀಯ - ಅಂತರರಾಷ್ಟ್ರೀಯ ಸಂಸ್ಥೆಗಳು
- ಆಕಾಶವಾಣಿ ಮತ್ತು ಇತರ ದೂರದರ್ಶನ ವಾಹಿನಿಗಳು
- ಪತ್ರಿಕಾ ಗೋಷ್ಠಿ, ಪ್ರಕಟಣೆ ಹಾಗೂ ಕರೆಯೋಲೆಗಳು
- ವೈಯಕ್ತಿಕ ಸಂಪರ್ಕ, ಸಾರ್ವಜನಿಕ ಸಂಪರ್ಕ, ಫ್ಯಾಕ್ಸ್, ಟೆಲಿಫೋನ್
- ವೃತ್ತ ಪತ್ರಿಕೆಗಳು, ನಿಯತಕಾಲಿಕೆಗಳು
- ದೂರದರ್ಶನದ ದೃಶ್ಯ ಭಂಡಾರ

ಈ ಎಲ್ಲ ಮೂಲಗಳಿಂದ ಸಂಪಾದಕನ ಮೇಜಿಗೆ ಬರುವ ಮಾಹಿತಿ, ಭಾಷಾಂತರ, ಭಾವಾಂತರ, ರೂಪಾಂತರ, ಸ್ವತಂತ್ರ ಬರಹಗಳಿಗೆ ಒಳಗಾಗಿ ಸುದ್ದಿ ಸ್ವರೂಪವನ್ನು ಪಡೆಯುತ್ತವೆ. ಈ ಮೂಲಗಳಿಂದ ಸುದ್ದಿ ಸಂಗ್ರಹಿಸುವ ಬಗೆ ಹೀಗಿದೆ :

## ಕ್ಯಾಮೆರಾ ತಂಡ ಮತ್ತು ವರದಿಗಾರ/ರ್ತಿ

ದೂರದರ್ಶನಕ್ಕಾಗಿ ಸುದ್ದಿ ಸಂಗ್ರಹಿಸುವಾಗ ಮೊದಲು ಗಮನದಲ್ಲಿರಿಸಿಕೊಳ್ಳಬೇಕಾದ್ದು ಇದು ಒಂದು ದೃಶ್ಯ ಮಾಧ್ಯಮ ಎನ್ನುವುದು. ಆದ್ದರಿಂದ ದೂರದರ್ಶನಕ್ಕಾಗಿ ವರದಿ ಮಾಡಲು ಹೊರಡುವ ಮುನ್ನ ವರದಿಗಾರ ತನ್ನೊಂದಿಗೆ ಒಂದು ವಿಡಿಯೋ ಕ್ಯಾಮೆರಾ ಮತ್ತು ಕ್ಯಾಮೆರಾಮನ್, ಧ್ವನಿಗ್ರಹಣಕ್ಕಾಗಿ ಮೈಕ್, ಬೆಳಕಿಗಾಗಿ ಲೈಟ್, ಬ್ಯಾಟರಿ ಮತ್ತು ಕ್ಯಾಸೆಟ್‌ಗಳನ್ನು ಇನ್ನಿತರ ತಾಂತ್ರಿಕ ಪರಿಕರಗಳನ್ನು ಸಿದ್ಧಪಡಿಸಿಕೊಂಡೇ ಹೊರಡಬೇಕು. ನಿಗದಿತ ಕಾರ್ಯಕ್ರಮ, ಸಭೆ, ಸಮಾರಂಭ, ಸಂಸತ್ತು, ವಿಧಾನ ಮಂಡಲದ ವರದಿಯಾಗಿದ್ದರೆ ನಿಗದಿಪಡಿಸಿದ ಕಾಲಕ್ಕಿಂತ ಮುಂಚಿತವಾಗಿಯೇ ನಿಗದಿತ ಸ್ಥಳದಲ್ಲಿ ಇರುವುದು ಸೂಕ್ತ. ಅನಿರೀಕ್ಷಿತ ಘಟನೆಗಳು ಹೀಗೆ ಸಜ್ಜಾಗಿ ಹೋಗಿ ಚಿತ್ರೀಕರಿಸಿಕೊಳ್ಳುವುದಕ್ಕಾಗಿ ಕಾಯ್ದಿರುವುದಿಲ್ಲ. ಅಂತಹ ಸಂದರ್ಭಗಳಲ್ಲಿ ಲಭ್ಯವಿರುವ ದೃಶ್ಯಗಳನ್ನೇ ಚಿತ್ರೀಕರಿಸಿಕೊಂಡು ಘಟನೆಯನ್ನು ಕಣ್ಣಾರೆ ಕಂಡ ಪ್ರತ್ಯಕ್ಷದರ್ಶಿಯ ಹೇಳಿಕೆಯನ್ನು ಚಿತ್ರೀಕರಿಸಿಕೊಳ್ಳುವುದು ಸುದ್ದಿಗೆ ಪುಷ್ಟಿ ನೀಡುತ್ತದೆ. ಸುದ್ದಿಯೊಂದನ್ನು ಚಿತ್ರೀಕರಿಸುವಾಗಲೂ ಅನೇಕ ಕೋನಗಳಿಂದ, ಅನೇಕ ಅಂತರದಲ್ಲಿ ದೃಶ್ಯವನ್ನು ಹೆಚ್ಚಾಗಿ ಚಿತ್ರೀಕರಿಸಿಕೊಳ್ಳುವುದರಿಂದ ಸುದ್ದಿಯ ದೃಶ್ಯಸಂಕಲನದ ಸಂದರ್ಭದಲ್ಲಿ ಕೊರತೆ ಎನಿಸುವುದಿಲ್ಲ. ಎದುರಿಗೆ ಸಿಕ್ಕಾಗ ಚಿತ್ರಿಸಿಕೊಳ್ಳದೆ ಹೋದರೆ ಮತ್ತೊಮ್ಮೆ ಅದಕ್ಕಾಗಿ ಘಟನೆಯ ಸ್ಥಳಕ್ಕೆ ಹೋಗಿಬರುವುದು ಸಾಧ್ಯವಾಗದು. ಕೆಲವೊಮ್ಮೆ ಅದು ಸುದ್ದಿಯಾಗುತ್ತದೋ ಇಲ್ಲವೋ ಘಟನೆ ಕಣ್ಣೆದುರಿಗೇ ನಡೆದಾಗ ಕ್ಯಾಮೆರಾ ಇದ್ದರೆ ಮೊದಲು ಚಿತ್ರಿಸಿಕೊಂಡುಬಿಡಬೇಕು. ಅದರ ಬಳಕೆಯ ನಿರ್ಧಾರ ನಂತರದ್ದು, ಅದರ ಗಂಭೀರತೆ, ಗಾಢತೆಯನ್ನು ಅವಲಂಬಿಸಿದ್ದು. ನಾನು ಡಿಡಿ-೧ರಲ್ಲಿ ಸುದ್ದಿ ಸಂಪಾದನೆ ಮಾಡುತ್ತಿದ್ದ ಒಂದು ಸಂದರ್ಭವನ್ನು ಉದಾಹರಿಸಬಯಸುತ್ತೇನೆ. ತುಮಕೂರಿನಲ್ಲಿ ಜರುಗಿದ ಕಾರ್ಯಕ್ರಮವೊಂದರ ವರದಿಗಾಗಿ ಕ್ಯಾಮೆರಾ ತಂಡ ಅಲ್ಲಿಗೆ ಹೋಗಿ ಸಂಜೆ ಹೊತ್ತಿಗೆ ವಾಪಸ್ಸಾಗುತ್ತಿತ್ತು. ಮಾರ್ಗ ಮಧ್ಯದಲ್ಲಿ ಡಾಬಸ್ ಪೇಟೆಯ ಹತ್ತಿರ ಆಗ ತಾನೆ ಒಂದು ರಸ್ತೆ ಅಪಘಾತ ಸಂಭವಿಸಿದ್ದು, ಅದನ್ನು ಕ್ಯಾಮೆರಾಮನ್ ತನ್ನ ವಿವೇಚನೆಯಿಂದ ಚಿತ್ರಿಸಿ ತಂದರು. ಇತ್ತ ನ್ಯೂಸ್ ರೂಮ್‌ನಲ್ಲಿ ಬೇರೆ ಮೂಲದಿಂದ ಅಪಘಾತದ ಸುದ್ದಿ, ಅದರಲ್ಲಿ ಸತ್ತವರ, ಗಾಯಗೊಂಡವರ ವಿವರ ದೊರಕಿತ್ತು. ಅದನ್ನು ವಾರ್ತೆಯಲ್ಲಿ ಬಳಸಿಕೊಳ್ಳಲು ಸಿದ್ಧಪಡಿಸಿಯೂ ಆಗಿತ್ತು. ಅದೇ ಹೊತ್ತಿಗೆ ಅನಿರೀಕ್ಷಿತವಾಗಿ ಕ್ಯಾಮೆರಾ ತಂಡ ಅಪಘಾತದ ಅತ್ಯಂತ ಸೂಕ್ತಚಿತ್ರಗಳನ್ನು ತಂದುಕೊಟ್ಟಿದ್ದು ಸುದ್ದಿಗೆ ಮಹತ್ವವನ್ನು ಒದಗಿಸಿತ್ತು. ಇಂತಹ ಪ್ರಯತ್ನಗಳು ವಾರ್ತೆಗಳನ್ನು ಪುಷ್ಟೀಕರಿಸುತ್ತವೆ.

ಏನೂ ಸುದ್ದಿಯೇ ಇಲ್ಲ ಅನ್ನುವುದನ್ನೂ ಒಂದು ಸುದ್ದಿಯಾಗಿ ಮಾಡುವ ಶಕ್ತಿ ಕ್ಯಾಮೆರಾಗಿರುತ್ತದೆ. ಒಮ್ಮೆ ರಾಜ್ಯ ಸರ್ಕಾರಿ ನೌಕರರೆಲ್ಲ ಮುಷ್ಕರ ಹೂಡಿದ್ದ ಸಂದರ್ಭ. ಮುಷ್ಕರ ನಿರತ ಸಿಬ್ಬಂದಿಯ ಮುಖಂಡರು ಸಿಕ್ಕರೆ ಅವರ ಹೇಳಿಕೆ, ಹಾಗೇ ಮುಖ್ಯಮಂತ್ರಿಯವರ ಹೇಳಿಕೆ ತರುವುದಕ್ಕೊಂದು ಕ್ಯಾಮೆರಾ ತಂಡದ ಜೊತೆ ವಿಧಾನಸೌಧಕ್ಕೆ ಹೋದಾಗ ಅಲ್ಲಿ ಯಾರೂ ಇಲ್ಲದೆ ಬಿಕೋ ಎನ್ನುತ್ತಿತ್ತು. ಯಾರ ಹೇಳಿಕೆಯೂ ಸಿಗಲಿಲ್ಲ. ಆಗ ಖಾಲಿ ಕಛೇರಿಗಳನ್ನೇ, ಮುಚ್ಚಿದ ಬಾಗಿಲು, ಕಾವಲು ಸಿಬ್ಬಂದಿಯನ್ನೇ ಚಿತ್ರೀಕರಿಸಿಕೊಂಡು ಅದನ್ನೇ ದೊಡ್ಡಸುದ್ದಿ ಮಾಡಲಾಯಿತು. ಇಂತಹ ಅನೇಕ ಪ್ರಸಂಗಗಳು ಕ್ಯಾಮೆರಾದ ಕಣ್ಣಿಗೆ ಸಿಕ್ಕುತ್ತವೆ. ಆದರೆ ಅಂತಹ ಕಣ್ಣು ಕ್ಯಾಮೆರಾ ಹಿಡಿದವನಿಗೂ ಇರಬೇಕು. ವರದಿ ಮಾಡುವವನಿಗೂ ಬೇಕು.

ಇಂದಿಗೆ ಸುದ್ದಿ ಏನಿದೆ, ಎಲ್ಲಿದೆ ಎಂದು ಅರಸುವ ಸಶಕ್ತ ಮನಸ್ಸು ವರದಿಗಾರ/ಗಾರ್ತಿಗೆ ಬೇಕು. ಹಾಗೆ ಒಂದಿಬ್ಬರು ವರದಿಗಾರರು ಮಾತ್ರ ಇದ್ದರೆ ಎಲ್ಲ ವಲಯಗಳನ್ನೂ ಅವರು ಗಮನಿಸುವುದು, ಅಲ್ಲಿಂದ ಸುದ್ದಿ-ದೃಶ್ಯಗಳನ್ನು ತರುವುದು ಸಾಧ್ಯವಾಗದೆ ಹೋಗಬಹುದು. ಸಾಧ್ಯವಾದರೂ ಅಪೂರ್ಣವಾಗಬಹುದು. ಅದರಿಂದಲೇ ರಾಜಕೀಯ, ಕ್ರೀಡೆ, ವಾಣಿಜ್ಯ,

ಸಾಂಸ್ಕೃತಿಕ ಕಾರ್ಯಕ್ರಮಗಳ ವರದಿಗೆಂದೇ ವರದಿಗಾರರನ್ನೂ ಚಿತ್ರೀಕರಣ ತಂಡವನ್ನೂ ಕ್ಯಾಮೆರಾ ಮತ್ತಿತರ ಪರಿಕರಗಳನ್ನೂ ಸಂಸ್ಥೆ ಹೊಂದಿರಬೇಕು. ಈ ತಂಡದ ಸಂಚಾರಕ್ಕಾಗಿ ವಾಹನ ಸೌಲಭ್ಯ, ವರದಿಗಾರನಿಗೆ ಸಂಚಾರಿ ಟೆಲಿಫೋನ್ ಅಥವಾ ಪೇಜರ್, ನ್ಯೂಸ್‌ರೂಂನಲ್ಲಿ ಫ್ಯಾಕ್ಸ್, ನೇರ ದೂರವಾಣಿಗಳು, ಅಂತರ್‌ಜಾಲದಂತಹ ಸೌಲಭ್ಯಗಳು, ಎಲ್ಲಾ ಚಾನೆಲ್‌ಗಳ ಸಂಪರ್ಕವಿರುವ ಟಿವಿ ಸೆಟ್ ಸಹ ಇರಬೇಕು. ಸಂಸ್ಥೆಯ ಮತ್ತೊಂದು ಕೇಂದ್ರೀಕೃತ ಸ್ಥಳದಲ್ಲಿ ಹತ್ತಾರು ವಾಹಿನಿಗಳು ಏಕಕಾಲಕ್ಕೆ ಪ್ರಸಾರವಾಗುವಂತೆ ಅಷ್ಟು ಪ್ರಮಾಣದ ಟಿವಿಸೆಟ್‌ಗಳೂ, ಉಪಯುಕ್ತ ಎನಿಸಿದ್ದನ್ನು ಆ ಕೂಡಲೇ ರೆಕಾರ್ಡ್ ಮಾಡಿಕೊಳ್ಳುವ ಸೌಲಭ್ಯವೂ, ಅವನ್ನು ನಿರಂತರವಾಗಿ ವೀಕ್ಷಿಸಿ, ಯಾವುದು ಬೇಕು, ಬೇಡ ಎನ್ನುವುದನ್ನು ನಿರ್ಧರಿಸಲು ಒಬ್ಬ ಸುದ್ದಿಗಾರನೂ ಇರಬೇಕು. ಪ್ರಾದೇಶಿಕ ವಾರ್ತೆಗಳಿಗೆಂದೇ ರಾಜ್ಯಾದ್ಯಂತ ಎಲ್ಲ ಜಿಲ್ಲಾ ಕೇಂದ್ರಗಳಲ್ಲೂ ಕ್ಯಾಮೆರಾ ಸಹಿತ ವರದಿಗಾರರು (Stringers) ಇದ್ದರೆ ಒಳಿತು. ಅವರೂ ಸಹ ತರಬೇತಿ ಪಡೆದ ವರದಿಗಾರರಾಗಿದ್ದು, ಸುದ್ದಿಯ ಮೌಲ್ಯವನ್ನು ತಿಳಿದವರಾಗಿರಬೇಕು.

## ಸುದ್ದಿ ಸಂಸ್ಥೆಗಳು

ದೂರದರ್ಶನ ವಿಶೇಷತೆಯಾದ ಕ್ಯಾಮರಾ ಮೂಲದಿಂದ ಸುದ್ದಿ ಸಂಗ್ರಹಿಸುವ ವಿಧಾನ ಒಂದಾದರೆ, ಸುದ್ದಿ ಸಂಸ್ಥೆಗಳಿಂದ ಸುದ್ದಿಸಂಗ್ರಹಣೆ ಇನ್ನೊಂದು ವಿಧಾನ. ಸಾಧಾರಣವಾಗಿ ದೂರದರ್ಶನಗಳ ಕ್ಯಾಮೆರಾ ತಂಡ ಸುದ್ದಿ ಸಂಗ್ರಹಣೆಗೆ ಹೋಗುವಲ್ಲೆಲ್ಲಾ ಸ್ಥಳೀಯ ಸುದ್ದಿ ಸಂಸ್ಥೆಗಳ ಪ್ರತಿನಿಧಿಗಳೂ ಉಪಸ್ಥಿತರಿರುತ್ತಾರೆ. ಸುದ್ದಿ ಸಂಸ್ಥೆಗಳು ಒದಗಿಸುವ ವರದಿಯನ್ನೇ ಕ್ಯಾಮೆರಾ ತಂಡ ತರುವ ದೃಶ್ಯಗಳಿಗೆ ಹೊಂದುವಂತೆ ಬರೆಯಬಹುದು. ಕರ್ನಾಟಕದಲ್ಲಿ ಯುನೈಟೆಡ್ ನ್ಯೂಸ್ ಆಫ್ ಇಂಡಿಯಾ (ಯುಎನ್‌ಐ) ಹಾಗೂ ಪ್ರೆಸ್ ಟ್ರಸ್ಟ್ ಆಫ್ ಇಂಡಿಯಾ (ಪಿಟಿಐ) ಎನ್ನುವ ಎರಡು ಸುದ್ದಿಸಂಸ್ಥೆಗಳಿದ್ದು ಅವು ಟೆಲಿಪ್ರಿಂಟರ್ ಮತ್ತು ಸ್ಕಾನರ್‌ಗಳ ಮೂಲಕ ಸುದ್ದಿ ಕೊಠಡಿಗಳಿಗೆ ಸುದ್ದಿ ರವಾನಿಸುತ್ತವೆ. ಇಂಗ್ಲಿಷ್‌ನಲ್ಲಿ ಬರುವ ಇಂತಹ ಸುದ್ದಿಗಳಲ್ಲಿ ಪ್ರಾದೇಶಿಕ ವಾರ್ತೆಗೆ ಬೇಕಾದ್ದನ್ನು ಆಯ್ಕೆ ಮಾಡಿಕೊಂಡು ಅದನ್ನೂ ಅನುವಾದಿಸಿಕೊಳ್ಳಲಾಗುತ್ತದೆ. ಇವಲ್ಲದೆ ಪ್ರೆಸ್ ಇನ್‌ಫರ್ಮೇಷನ್ ಬ್ಯೂರೋ (ಪಿಐಬಿ), ರಾಜ್ಯ ವಾರ್ತಾ ಇಲಾಖೆಯನ್ನು ಸುದ್ದಿಗಾಗಿ ಅವಲಂಬಿಸಲಾಗುತ್ತದೆ. ರಾಯಿಟರ್ಸ್, ಎ.ಎನ್.ಐ.ಯಂತಹ ಸಂಸ್ಥೆಗಳನ್ನು ಕನ್ನಡದ ಖಾಸಗಿ ವಾಹಿನಿಗಳು ಹೆಚ್ಚಾಗಿ ಅವಲಂಬಿಸಿರುವುದು ತಿಳಿದು ಬಂದಿದೆ.

## ಆಕಾಶವಾಣಿ ಮತ್ತು ಇತರ ದೂರದರ್ಶನ ವಾಹಿನಿಗಳು

ಈಗ ಬಹುತೇಕ ಎಲ್ಲ ವಾಹಿನಿಗಳೂ ನೆಟ್‌ವರ್ಕ್ ವ್ಯವಸ್ಥೆಗಳನ್ನು ಹೊಂದಿದ್ದು ಸುದ್ದಿಯನ್ನು ಹಂಚಿಕೊಳ್ಳುವಲ್ಲಿ ಸುಲಭದ ದಾರಿ ಕಂಡುಕೊಂಡಿವೆ. ಪ್ರಸಾರ ಭಾರತಿಯ ದೂರದರ್ಶನದ ನೆಟ್‌ವರ್ಕ್ ಒಟ್ಟು ೧೯ ವಾಹಿನಿಗಳೊಂದಿಗೆ ದೇಶಾದ್ಯಾಂತ ಜಾಲ ಹಬ್ಬಿಸಿದೆ. ಇದರಿಂದಾಗಿ ದೇಶದ ಮೂಲೆ ಮೂಲೆಯಲ್ಲೂ ನಡೆಯಬಹುದಾದ ಘಟನಾವಳಿಗಳು Uplinking ವ್ಯವಸ್ಥೆಯಿಂದಾಗಿ ದೆಹಲಿಯಲ್ಲಿರುವ ನ್ಯೂಸ್‌ರೂಮ್ ಸೇರಿ, ಘಟನೆಯ ಪ್ರಾಮುಖ್ಯತೆಯ ಆಧಾರದ ಮೇಲೆ ಆಯ್ಕೆಗೊಂಡು ಹಿಂದಿ ಮತ್ತು ಇಂಗ್ಲಿಷ್ ವಾರ್ತೆಗಳ ರೂಪದಲ್ಲಿ ಪ್ರಸಾರ ಕಾಣುತ್ತವೆ. ಆಗ ಅದನ್ನು ಪ್ರಾದೇಶಿಕ ನ್ಯೂಸ್‌ರೂಂಗಳಲ್ಲಿ ದಾಖಲಿಸಿಕೊಂಡು, ಪ್ರಾದೇಶಿಕ ವಾರ್ತೆಗಳಿಗೆ ಬೇಕಾದ್ದನ್ನು ಆಯ್ಕೆ ಮಾಡಿಕೊಳ್ಳಲಾಗುತ್ತದೆ. ಇಂತಹ ಅವಲಂಬನೆಯಿಂದ ಒಂದು ಸಣ್ಣ ಪ್ರಮಾದವೂ ಆಗಬಹುದು. ರಾಜ್ಯಕ್ಕೆ ಸಂಬಂಧಿಸಿದ ಸಮಸ್ಯೆಯೊಂದಕ್ಕೆ ಸಂಬಂಧಿಸಿದಂತೆ ದೆಹಲಿಯಲ್ಲಿ ನಡೆವ ಸಭೆಯ ಕಾರ್ಯಕಲಾಪಗಳು ಪ್ರಾದೇಶಿಕ ವಾರ್ತೆಗೆ ಅಗತ್ಯವೂ, ಆದ್ಯವೂ ಆಗಬಹುದು. ಆದರೆ ಕೇಂದ್ರದ ವಾರ್ತೆಗೆ ಅದು ವಿಶೇಷವಾಗದಿರಬಹುದು. ಹಾಗಾಗಿ ಆ ಸುದ್ದಿ ದೆಹಲಿಯ ವಾರ್ತೆಗಳಲ್ಲಿ ಪ್ರಸಾರವಾಗದೇ ಹೋದಾಗ, ಸುದ್ದಿ ಸಂಸ್ಥೆಗಳ

ಮೂಲಕ ಸುದ್ದಿ ಸಿಕ್ಕಿದರೂ, ದೃಶ್ಯಗಳು ಸಿಗದೇ ಹೋಗಬಹುದು. ಒಂದು ವೇಳೆ ಪ್ರಸಾರವಾದರೂ ದೃಶ್ಯಗಳು ಸಾಕಾಗದೇ ಹೋಗಬಹುದು. ಇದಕ್ಕೆ ಪ್ರಸಾರ ಭಾರತಿ ವ್ಯವಸ್ಥೆಯಲ್ಲಿರುವ ದೊಡ್ಡ ಲೋಪವೆಂದರೆ down linking facility ಇಲ್ಲದೆ ಇರುವುದು. ಅಂದರೆ ದೆಹಲಿ ಕೇಂದ್ರದಿಂದ ನೇರವಾಗಿ ಬೆಂಗಳೂರಿನ ಕೇಂದ್ರಕ್ಕೆ ಮಾತ್ರ ದೃಶ್ಯಗಳನ್ನು ರವಾನಿಸುವ ವ್ಯವಸ್ಥೆ ಇಲ್ಲದಿರುವುದು.

ಕನ್ನಡದ ಖಾಸಗಿ ವಾಹಿನಿಗಳು ಇಂತಹ ಲೋಪಗಳನ್ನು ನಿವಾರಿಸಿಕೊಂಡೇ ಕೆಲಸ ಆರಂಭಿಸಿವೆ. ಉದಾಹರಣೆಗೆ: ಉದಯ ಟಿವಿ ದಕ್ಷಿಣ ಭಾರತದಲ್ಲಿ ನೆಟ್‌ವರ್ಕ್ ವ್ಯವಸ್ಥೆ ಹೊಂದಿರುವ ಸನ್ ಟಿವಿಗೆ ಸೇರಿದೆ. ಹಾಗೆ ಈಟೀವಿ ಕನ್ನಡ ನೆಟ್‌ವರ್ಕ್ ಕೂಡ ಒಂದೆರಡು ಭಾಷೆಗಳಿಗೆ ಮಾತ್ರ ಸೀಮಿತವಾಗಿದೆ. ಏಷಿಯಾನೆಟ್ ಇಂಟರ್‌ನ್ಯಾಷನಲ್ ನೆಟ್‌ವರ್ಕ್ ವ್ಯಾಪ್ತಿಗೆ ಕನ್ನಡದ ಕಾವೇರಿ ಸೇರಿದೆ. ಈ ನೆಟ್‌ವರ್ಕ್ ವ್ಯವಸ್ಥೆಗಳು ಕಾರ್ಯನಿರ್ವಹಿಸುವ ರೀತಿಯೂ ದೃಶ್ಯಗಳನ್ನು ಹಂಚಿಕೊಳ್ಳುವುದಕ್ಕೆ ಅನುಕೂಲವಾಗುತ್ತದೆ. ನಿದರ್ಶನಕ್ಕೆ ಉದಯ ಟಿವಿ. ಇದು ಸನ್ ಟಿವಿ ಪ್ರಸಾರಮಾಡುವ ದಿನವಹೀ ವಾರ್ತಾಪ್ರಸಾರ ಹಾಗೂ ಇತರ ವಾರ್ತೆಗಳ ಮೂಲಕ ದೃಶ್ಯಗಳನ್ನು ಸ್ವೀಕರಿಸುತ್ತದೆ. ರಾಯಿಟರ್, ಎ.ಎನ್.ಐ ಯಂತಹ ಸಂಸ್ಥೆಗಳನ್ನೂ, ಪ್ರಸಾರ ಭಾರತಿಯ ಪ್ರಸಾರಗಳನ್ನೂ ಅವಲಂಬಿಸುತ್ತದೆ. (ಸಂಸತ್ತಿನ ಕಾರ್ಯಕಲಾಪ, ಕ್ರಿಕೆಟ್ ಪಂದ್ಯಗಳ, ಗಣರಾಜ್ಯೋತ್ಸವ ಪೆರೇಡಿನ ನೇರಪ್ರಸಾರಗಳನ್ನು ಅಳವಡಿಸಿಕೊಂಡು 'ದೂರದರ್ಶನ ಕೃಪೆ' ಎಂದೂ ಪ್ರಸಾರ ಮಾಡಲಾಗುತ್ತಿದೆ.) ಭಾರತದಲ್ಲಿ ದೃಶ್ಯದ ಹಕ್ಕು ಹಾಗೂ ಸ್ವಾಮ್ಯತೆಯ ಬಗ್ಗೆ ಯಾವ ನಿರ್ದಿಷ್ಟ ಕಾನೂನೂ ಜಾರಿಯಲ್ಲಿರದೇ ಇರುವುದರಿಂದ ಇದು ಸಾಧ್ಯವಾಗುತ್ತಿದೆ. ಆದರೂ ಇತರ ವಾಹಿನಿಗಳಿಂದ ಪ್ರಸಾರ ಭಾರತಿಯ ಡಿಡಿ-೧ ಕನ್ನಡ ವಾಹಿನಿ ದೃಶ್ಯಗಳನ್ನು ತೆಗೆದುಕೊಳ್ಳದೇ ಇರುವುದು ಗಮನಾರ್ಹ. ಕೆಲ ಖಾಸಗಿ ಸಂಸ್ಥೆಗಳು down linking ವ್ಯವಸ್ಥೆ ಹಾಗೂ ವಿಮಾನದ ಮೂಲಕ ತುರ್ತಾಗಿ ಕ್ಯಾಸೆಟ್‌ಗಳನ್ನು ರವಾನಿಸುವ ವಿಧಾನವನ್ನು ಹೊಂದಿವೆ. ಹಾಗಾಗಿ ಚೆನ್ನೈನಿಂದ ಬೆಂಗಳೂರು, ಹೈದರಬಾದಿನಿಂದ-ಬೆಂಗಳೂರು, ಟ್ರಿವೇಂಡ್ರಂನಿಂದ ಬೆಂಗಳೂರು ಬಹಳ ದೂರವಾಗುವುದಿಲ್ಲ. ಹಾಗೇ ಈ ವಾಹಿನಿಗಳೆಲ್ಲ ತಮ್ಮ ತಮ್ಮ ಸಂಸ್ಥೆಯ ಕೇಂದ್ರಸ್ಥಾನದಿಂದಲೇ ನೇರಪ್ರಸಾರ ಮಾಡಿಬಿಡುವ ಸೌಲಭ್ಯವನ್ನೂ ಹೊಂದಿವೆ. ಉದಾಹರಣೆಗೆ : ಉದಯ ಟಿವಿ, ಡಾ. ರಾಜ್‌ಕುಮಾರ್ ಅಪಹರಣದ ಸಂದರ್ಭದಲ್ಲಿ ಕರ್ನಾಟಕ - ತಮಿಳುನಾಡು ರಾಜ್ಯಗಳ ಮುಖ್ಯಮಂತ್ರಿಗಳು ಚೆನ್ನೈನಲ್ಲಿ ನಡೆಸಿದ ಜಂಟಿ ಪತ್ರಿಕಾಗೋಷ್ಠಿಯನ್ನು ನೇರ ಪ್ರಸಾರ ಮಾಡಿತು. ಇಂತಹ ಸಣ್ಣ ಸಣ್ಣ ಪ್ರಯತ್ನಗಳು ವೀಕ್ಷಕರನ್ನು ಆಕರ್ಷಿಸುವಲ್ಲಿ ಯಶಸ್ವಿಯಾಗುತ್ತವೆ.

ಆಕಾಶವಾಣಿ ವಾಸ್ತವವಾಗಿ ಸುದ್ದಿ ಸಂಸ್ಥೆಯಲ್ಲದಿದ್ದರೂ, ತನ್ನ ಅಧಿಕೃತತೆ ಹಾಗೂ ನಿಖರತೆಯಿಂದಾಗಿ ಇತರ ಎಲ್ಲ ಮಾಧ್ಯಮಗಳೂ ತನ್ನನ್ನು ಅವಲಂಬಿಸುವಂತೆ ಬೆಳೆದು ನಿಂತಿದೆ. ದೃಶ್ಯಗಳ ಮೂಲಕ ತೋರಿಸಬೇಕೆನ್ನುವ ಗೋಜಿಲ್ಲದೆ ಇರುವುದರಿಂದ ಸಿಕ್ಕ ಸುದ್ದಿಯನ್ನು ಕೂಡಲೇ ಹೇಳಿಬಿಡುತ್ತದೆ. ಧ್ವನಿ ಮೂಲಕ ಹರಡುವುದರಿಂದ, ಎಲ್ಲರಿಗೂ, ಎಲ್ಲೆಡೆಗೂ ಸುಲಭವಾಗಿ ಲಭ್ಯವೂ ಆಗುವುದರಿಂದ ಈ ಮಾಧ್ಯಮ ಸುದ್ದಿ ಸಂಸ್ಥೆಯಂತೆಯೂ ಆಗಿದೆ. ಆಕಾಶವಾಣಿಯ ರಾಷ್ಟ್ರೀಯ ವಾರ್ತೆಗಳು, ಪ್ರದೇಶ ಸಮಾಚಾರದಂತಹ ಪ್ರಾದೇಶಿಕ ವಾರ್ತೆಗಳನ್ನು ಗಮನಿಸುವುದರಿಂದ ಅದರಲ್ಲಿನ ಮುಖ್ಯ ಸುದ್ದಿಯನ್ನು ತಿಳಿದು ಘಟನೆಯ ಚಿತ್ರಗಳನ್ನು ನಂತರ ತರಿಸಿಕೊಳ್ಳಲೂ ಬಹುದು. ಉದಾಹರಣೆಗೆ ಮಂಗಳೂರಿನಲ್ಲಿ ಸಮೀಪದ ಹಳ್ಳಿಯಲ್ಲಿ ಸಂಭವಿಸುವ ರೈಲು ಅಪಘಾತದ ವರದಿಯನ್ನು ರೇಡಿಯೋದಲ್ಲಿ ಕೇಳಿ ಕೂಡಲೇ ಮಂಗಳೂರಿನ ವರದಿಗಾರನಿಗೆ ಅದರ ದೃಶ್ಯಗಳನ್ನು ಆದಷ್ಟು ಶೀಘ್ರ ಕಳಿಸಿಕೊಡುವಂತೆ ದೂರವಾಣಿ ಮೂಲಕ ತಿಳಿಸಬಹುದು. ಬೆಂಗಳೂರಿನಿಂದ ಕ್ಯಾಮೆರಾ ತಂಡವನ್ನು ಸಿದ್ಧಪಡಿಸಿಕೊಂಡು ಅಪಘಾತದ ಸ್ಥಳಕ್ಕೆ ಹೋಗಿ ದೃಶ್ಯಗಳನ್ನು ತರುವುದಕ್ಕಿಂತ ಈ ವ್ಯವಸ್ಥೆ ಸುಲಭವೂ ವೇಗವೂ ಆಗುತ್ತದೆ. ಹೀಗೆ ಆಕಾಶವಾಣಿಯನ್ನು ದೂರದರ್ಶನ ಮಾಧ್ಯಮ ನಿರಾತಂಕವಾಗಿ ಅವಲಂಬಿಸಿಕೊಂಡಿದೆ.

## ಸುದ್ದಿಗೋಷ್ಠಿ ಪ್ರಕಟಣೆ ಮತ್ತು ಕರೆಯೋಲೆಗಳು

ಸುದ್ದಿಗೋಷ್ಠಿ, ಪತ್ರಿಕಾ ಪ್ರಕಟಣೆ, ಹೇಳಿಕೆ ಮತ್ತು ಕರೆಯೋಲೆಗಳು ನೇರವಾಗಿ ಸುದ್ದಿಯನ್ನು ನೀಡಲಾರವು. ಅವು ವರದಿಗಳನ್ನು ಕೊಡುತ್ತವೆ. ಗೋಷ್ಠಿ ಅಥವಾ ಕಾರ್ಯಕ್ರಮಗಳಲ್ಲಿ ಮಾತನಾಡುವವರು ಸುದ್ದಿಯೊಂದನ್ನು ಕೊಡಬಹುದು. ಉದಾಹರಣೆಗೆ 'ತಕ್ಷಣದಿಂದ ಜಾರಿಗೆ ಬರುವಂತೆ ವಿದ್ಯುತ್‌ದರ ಹೆಚ್ಚಳ' ಎನ್ನುವ ಮಾಹಿತಿ ಸುದ್ದಿಗೋಷ್ಠಿಯಲ್ಲಿ ಸಿಗಬಹುದು. ಅಥವಾ ಪ್ರಮುಖವಾದ ನಿರ್ಧಾರವೊಂದನ್ನು ಮುಖ್ಯಮಂತ್ರಿಯವರು ಕಾರ್ಯಕ್ರಮದಲ್ಲಿ ಘೋಷಿಸಬಹುದು. ಇದು ಸಾರ್ವಜನಿಕರಿಗೆ ಬೇಕಾದ ಮಾಹಿತಿಯಾಗುತ್ತದೆ. ಆ ದೃಷ್ಟಿಯಿಂದ ವಾರ್ತೆಗಳಲ್ಲಿ ಸೇರಿಸಲೂ ಬೇಕಾಗುತ್ತದೆ. ಕರೆಯೋಲೆಗಳು ಮುಂಚಿತವಾಗಿಯೇ ಮುಖ್ಯ ವರದಿಗಾರನ ಕೈ ಸೇರಿದರೆ, ಆ ಕಾರ್ಯಕ್ರಮಕ್ಕೆ ತಮ್ಮ ತಂಡವನ್ನು ಕಳುಹಿಸಿ ವರದಿ ತರಿಸಿಕೊಳ್ಳುವುದು ಆತನ ಜವಾಬ್ದಾರಿಯಾಗುತ್ತದೆ. ಅದರಲ್ಲಿ ಸತ್ವಯುತವಾದ ಮಾಹಿತಿ ಇದ್ದರೆ ಅದು ವಾರ್ತೆಯಲ್ಲಿ ಸೇರಲು ಯೋಗ್ಯವೇ ಎಂದು ತೀರ್ಮಾನಿಸಿ ಆತ ಅದನ್ನು ಸುದ್ದಿ ಸಂಪಾದಕನಿಗೆ ಕಳಿಸುವುದು ಸೂಕ್ತ. ಅಂತಹುದೊಂದು ವರದಿ ಚಿತ್ರೀಕೃತವಾಗಿದೆ ಎಂಬ ಕಾರಣಕ್ಕಾಗಿಯೇ ಪ್ರಸಾರಗೊಳ್ಳುವುದು ವಾರ್ತೆಗಳನ್ನು ನೀರಸಗೊಳಿಸುತ್ತದೆ. ಪತ್ರಿಕಾ ಹೇಳಿಕೆಗಳನ್ನು ಸುದ್ದಿ ಮಂಡಿಸುವವರಿಂದ ಹೇಳಿಸದೆ, ಸಾಧ್ಯವಾದರೆ ಆ ಹೇಳಿಕೆ ನೀಡಿರುವವರನ್ನೇ ಸಂಪರ್ಕಿಸಿ ಅವರನ್ನೇ ಚಿತ್ರೀಕರಿಸಿಕೊಂಡು ಪ್ರಸಾರ ಮಾಡುವುದು ಈ ಮಾಧ್ಯಮಕ್ಕಿರುವ ಅವಕಾಶ ಸಹ ಆಗಿದೆ.

## ವೈಯಕ್ತಿಕ ಸಂಪರ್ಕ ಹಾಗೂ ಸಾರ್ವಜನಿಕ ಸಂಪರ್ಕ

ರಾಜ್ಯದ ಯಾವುದೇ ಮೂಲೆಯಲ್ಲಿ ಆಕಸ್ಮಿಕವಾಗಿ ಸಂಭವಿಸಬಹುದಾದ ಘಟನೆಯೊಂದನ್ನು ಅಲ್ಲಿಯ ಸ್ಥಳೀಯ ವ್ಯಕ್ತಿಯೊಬ್ಬ ದೂರವಾಣಿ ಮೂಲಕ ಸುದ್ದಿ ಸಂಪಾದಕರಿಗೆ ತಿಳಿಸಬಹುದು. ಅದನ್ನು ನಿರ್ಲಕ್ಷಿಸದೆ ತನ್ನ ಮೂಲಗಳಿಂದ ಅದನ್ನು ಪರಿಶೀಲಿಸಿಕೊಂಡು ಸುದ್ದಿಯಾಗಿ ಬಳಸಬಹುದು. ಉದಾಹರಣೆಗೆ, ನನ್ನ ಸಂಪಾದನೆಯಲ್ಲಿ ವಾರ್ತೆಯೊಂದು ಸಿದ್ಧಗೊಳ್ಳುತ್ತಿದ್ದ ವೇಳೆಗೆ ದಾವಣಗೆರೆಯ ದೇವರಬೆಳಕೆರೆ ಹಳ್ಳಕ್ಕೆ ಬಸ್ಸೊಂದು ಬಿದ್ದು ಭಾರೀ ಸಾವು ನೋವು ಸಂಭವಿಸಿರುವುದಾಗಿ, ನನಗೆ ತಿಳಿದಿದ್ದ ವ್ಯಕ್ತಿಯೊಬ್ಬರು ಅಲ್ಲಿಂದ ದೂರವಾಣಿ ಮೂಲಕ ತಿಳಿಸಿದರು. ಅವರು, ನಾನು ವೈಯಕ್ತಿಕವಾಗಿ ನಂಬಬಹುದಾಗಿದ್ದ ವ್ಯಕ್ತಿಯಾದರೂ, ವಾರ್ತೆಗಳ ಅಧಿಕೃತತೆಯ ದೃಷ್ಟಿಯಿಂದ ದಾವಣಗೆರೆ ಜಿಲ್ಲಾಧಿಕಾರಿ, ಅಲ್ಲಿಯ ವಿಭಾಗಾಧಿಕಾರಿ ಹಾಗೂ ಪೋಲಿಸ್ ವರಿಷ್ಠಾಧಿಕಾರಿಗಳನ್ನು ದೂರವಾಣಿ ಮೂಲಕ ಸಂಪರ್ಕಿಸಿ ವಸ್ತುಸ್ಥಿತಿ ತಿಳಿದು, ಅದನ್ನು ಅಂದಿನ ಸುದ್ದಿಯಲ್ಲಿ ಪ್ರಸಾರ ಮಾಡಿದೆವು. ಹಾಗೆಯೇ ನಮ್ಮ ದಾವಣಗೆರೆ ಪ್ರತಿನಿಧಿಯನ್ನು ಕೂಡಲೇ ಸ್ಥಳಕ್ಕೆ ಭೇಟಿಕೊಟ್ಟು ಅಪಘಾತದ ಮೊದ ಮೊದಲ ದೃಶ್ಯಗಳನ್ನು ಚಿತ್ರಿಸಿಕೊಂಡು ರಾತ್ರೋರಾತ್ರಿ ಅದನ್ನು ಬೆಂಗಳೂರಿಗೆ ರವಾನಿಸಿ, ಮತ್ತೊಂದು ಕ್ಯಾಸೆಟ್‌ನಲ್ಲಿ, ರಕ್ಷಣಾ ಕಾರ್ಯಾಚರಣೆಯ ಮುಂದಿನ ದೃಶ್ಯಗಳನ್ನು ಚಿತ್ರೀಕರಿಸಿಕೊಳ್ಳುವಂತೆ ಸೂಚನೆ ನೀಡಿದೆವು. ಈ ಕಾರಣಕ್ಕಾಗಿಯೇ ನ್ಯೂಸ್‌ರೂಂಗೆ ನೇರ ದೂರವಾಣಿ ಮಾರ್ಗಗಳು, ಫ್ಯಾಕ್ಸ್, ಅಂತರ್ಜಾಲ ಸೌಲಭ್ಯಗಳು ಅತ್ಯಗತ್ಯ.

ಒಂದು ಮಾಧ್ಯಮ ಸಂಸ್ಥೆಯನ್ನು ಯಾರು ಬೇಕಾದರೂ ಸಂಪರ್ಕಿಸಬಹುದು. ಸಂಪರ್ಕಿಸಬೇಕು. ಏಕೆಂದರೆ ಅದು ಜನರ ಸಂಸ್ಥೆ. ಪರಿಚಿತರೇ ಸಂಪರ್ಕಿಸಿ ಸುದ್ದಿ ನೀಡಬೇಕೆಂಬ ನಿಯಮವಿಲ್ಲ. ಆದರೆ ಅದನ್ನು ಖಚಿತ ಪಡಿಸಿಕೊಳ್ಳಬೇಕಾದ್ದು ಸಂಪಾದಕನ ಕರ್ತವ್ಯ ಹಾಗೂ ಜವಾಬ್ದಾರಿ. ಸುದ್ದಿ ಸಂಪಾದಕ/ಮುಖ್ಯ ವರದಿಗಾರ ಎಲ್ಲರಿಗೂ ಸಿಗುವಂತಿರಬೇಕು. ಅದಕ್ಕಿಂತ ಹೆಚ್ಚಾಗಿ ಸುದ್ದಿ ಸಂಪಾದಕ ಹಾಗೂ ವರದಿಗಾರರ ನಡುವಿನ ಸಾಮರಸ್ಯ ಮುಖ್ಯ. ಏಕೆಂದರೆ ದೂರದರ್ಶನದ ಸುದ್ದಿ ಒಬ್ಬರ ಸ್ವತ್ತಲ್ಲ. ಅದು ಟೀಂ ವರ್ಕ್.

### ವೃತ್ತ ಪತ್ರಿಕೆಗಳು, ನಿಯತಕಾಲಿಕೆಗಳು

ಮುದ್ರಣ ಮಾಧ್ಯಮವನ್ನು ಸುದ್ದಿಗಾಗಿ ಗಮನಿಸಬಹುದು. ಆದರೂ ದೃಶ್ಯಗಳನ್ನು ತರಿಸಿಕೊಳ್ಳಲೇಬೇಕು. ಇಂತಹ ಸುದ್ದಿ ಇದೆ ಎಂದು ಪತ್ರಿಕೆಗಳು ಎಚ್ಚರಿಸಬಹುದು. ನಿಯತಕಾಲಿಕೆಗಳಲ್ಲಿ ಲಘು ಆದರೆ ಆಸಕ್ತಿದಾಯಕ ನುಡಿಚಿತ್ರಗಳು (features) ಸಿಗಬಹುದು. ಅದರ ನೆಲೆಯಲ್ಲೇ ದೂರದರ್ಶನಕ್ಕೂ 'ಕಥೆ'ಯೊಂದನ್ನು ಸಿದ್ಧಪಡಿಸಬಹುದು. ಉದಾಹರಣೆಗೆ ಬಂಡೀಪುರದಿಂದ ಆಚೆಗೆ ಮಾವನಹಳ್ಳಿ ಎಂಬ ಸ್ಥಳದಲ್ಲಿ ಬಂಧನದಲ್ಲಿ ನರಳುತ್ತಿದ್ದ ಆನೆಯೊಂದರ ವ್ಯಥೆಯನ್ನು ಕೆಲವು ಪತ್ರಿಕೆಗಳು ವರದಿ ಮಾಡಿದ ನಂತರ, ಡಿಡಿ-೧ ಹಾಗೂ ಉದಯ ಎರಡೂ ವಾಹಿನಿಗಳು ಅದನ್ನು ಚಿತ್ರೀಕರಿಸಿ ಪ್ರಸಾರ ಮಾಡಿದವು. ಮುದ್ರಣ ಮಾಧ್ಯಮಗಳ ಮೂಲಕ ಇಂತಹ ಸೂಚನೆಗಳು ಸಿಗುತ್ತವೆ.

### ದೂರದರ್ಶನದ ದೃಶ್ಯಭಂಡಾರ

ದೂರದರ್ಶನ ಮಾಧ್ಯಮ ದೃಶ್ಯಾಧಾರಿತವಾದದ್ದು. ವಾರ್ತಾ ಪ್ರಸಾರದಲ್ಲಿನ ಪ್ರತಿಯೊಂದು ಸುದ್ದಿಗೂ ಒಂದು ದೃಶ್ಯವಿದ್ದರೆ ಸೊಗಸು. ಎಲ್ಲ ಸಂದರ್ಭಕ್ಕೂ ದೃಶ್ಯಗಳು ಕೂಡಲೇ ಸಿಗದೇ ಹೋಗಬಹುದು. ಆಗ ನೆರವಿಗೆ ಬರುವುದೇ ಸಂಸ್ಥೆಯ ದೃಶ್ಯಭಂಡಾರ ಆ ವಿಷಯಕ್ಕೆ ಸಂಬಂಧಪಟ್ಟ, ಸೂಕ್ತವಾಗಿ ಹತ್ತಿರವೆನಿಸುವ ದೃಶ್ಯಗಳು ಬಳಕೆಗೆ ಬರಬಹುದು. ಒಮ್ಮೊಮ್ಮೆ ಆ ದೃಶ್ಯಗಳಿರುವ ಕಾರ್ಯಕ್ರಮದಲ್ಲೇ ಅನೇಕ ಮಾಹಿತಿಗಳೂ ಸಿಗಬಹುದು. ಉದಾಹರಣೆಗೆ : ಜ್ಞಾನಪೀಠ ಪುರಸ್ಕೃತ ಸಾಹಿತಿ ಶಿವರಾಮಕಾರಂತರು ತೀವ್ರ ಅಸ್ವಸ್ಥತೆಯಿಂದ ನರಳುತ್ತಿರುವ ಸುದ್ದಿ ತಿಳಿದ ಕೂಡಲೆ ಮಂಗಳೂರಿನ ವರದಿಗಾರನನ್ನೂ ಇತ್ತ ಬೆಂಗಳೂರಿನ ತಂಡವನ್ನೂ ಮಣಿಪಾಲಕ್ಕೆ ಕಳಿಸಲಾಯಿತು. ನಂತರ ದೂರದರ್ಶನದ ದೃಶ್ಯ ಭಂಡಾರದಲ್ಲಿ ಲಭ್ಯವಿದ್ದ ಶಿವರಾಮ ಕಾರಂತರ ಎಲ್ಲ ಸಂದರ್ಶನ, ವ್ಯಕ್ತಿ ಚಿತ್ರದ ಕ್ಯಾಸೆಟ್‌ಗಳನ್ನು ತೆಗೆದು ವೀಕ್ಷಿಸಿದಾಗ ಅದರಲ್ಲಿ ಅವರ ಚಿಂತನೆ, ಹೇಳಿಕೆ, ಅವರ ಜೀವನದ ಪ್ರಮುಖ ಘಟ್ಟಗಳು, ಅವರ ಸಾಧನೆಗಳು, ಅವರ ಕೃತಿಗಳು ಹೀಗೆ ಅವರ ಬದುಕು-ಬರಹದ ಬಗ್ಗೆ ಅನೇಕ ಮಾಹಿತಿಗಳೂ, ದೃಶ್ಯಗಳೂ ಸಿಕ್ಕವು. ಒಂದು ವಾರದ ನಂತರ ಅವರು ನಿಧನರಾದಾಗ ವರದಿಗಾರರು ಕಳಿಸಿಕೊಟ್ಟ ಮೊದ ಮೊದಲ ತಾಜಾ ದೃಶ್ಯಗಳ ಜೊತೆಗೆ ಅವರ ಬದುಕನ್ನು ಬಿಂಬಿಸುವ ಆಸಕ್ತಿಪೂರ್ಣ ಮಾಹಿತಿಯನ್ನು ಸಚಿತ್ರವಾಗಿ ನೀಡಲಾಯಿತು. ಅಂದು ೧೮ ನಿಮಿಷಗಳ ಕಾಲ ಪ್ರಸಾರವಾದ 'ವಾರ್ತೆಗಳು' (ವಾರ್ತಾ ಪ್ರಸಾರದ ಅವಧಿ ೧೫ ನಿಮಿಷಗಳು) ಒಬ್ಬ ಶ್ರೇಷ್ಠ ಸಾಹಿತಿಗೆ ಸಂದ ಶ್ರೇಷ್ಠಮಟ್ಟದ ಗೌರವಾಂಜಲಿ ಎನಿಸಿಕೊಳ್ಳುವುದಕ್ಕೆ ನೀಡಿದ ಮಾಹಿತಿ, ಬಳಸಿದ ಭಾಷೆ ಹಾಗೂ ಸಂಗ್ರಹ ದೃಶ್ಯಗಳು ಕಾರಣವಾದವು ಎನ್ನಬಹುದು. ಆ ನಿರ್ದಿಷ್ಟ 'ವಾರ್ತೆಗಳು' ಅನಿರೀಕ್ಷಿತ ಮಟ್ಟದಲ್ಲಿ ಜನ ಮೆಚ್ಚುಗೆ ಗಳಿಸಿದ್ದೂ ದಾಖಲಾರ್ಹ. (ಸುದ್ದಿ ಸಂಪಾದಕಿ - ಟಿ. ಸಿ. ಪೂರ್ಣಿಮಾ. ಸಂಗ್ರಹ ದೃಶ್ಯಗಳ ಕೊಡುಗೆ - ಎಸ್.ಕೆ. ಶಿವಕುಮಾರ್). ಇದೇ ರೀತಿ ಚದುರಂಗ, ಪ್ರತಿಮಾ ಬೇಡಿ, ಮದರ್ ತೆರೇಸಾ, ವೀರೇಂದ್ರ ಪಾಟೀಲ್, ದೊರೆಸ್ವಾಮಿ ಐಯಂಗಾರ್, ಪುತಿನ ಮೊದಲಾದ ಗಣ್ಯರ ನಿಧನದ ಸಂದರ್ಭದಲ್ಲಿ, ಗಿರೀಶ್‌ಕಾರ್ನಾಡ್ ಅವರಿಗೆ ಜ್ಞಾನಪೀಠ ದೊರೆತ ಸಂದರ್ಭದಲ್ಲಿ ಮತ್ತಿತರ ಅನೇಕಾನೇಕ ಅವಕಾಶಗಳಲ್ಲಿ ಸಂಗ್ರಹ ದೃಶ್ಯಗಳನ್ನು ಡಿಡಿ-೧ ಬಳಸಿದೆ, ಬಳಸುತ್ತಿದೆ. ಉದಯ, ಈಟೀವಿ, ಕಾವೇರಿ ವಾಹಿನಿಗಳೂ ಸಂಗ್ರಹ ದೃಶ್ಯಗಳನ್ನು ಯಥೇಚ್ಛವಾಗಿ ಬಳಸುತ್ತಿರುವುದು ಗಮನಾರ್ಹ.

### ಸುದ್ದಿ ಸಂಪಾದನೆ

ಇದು ಸಂಪೂರ್ಣವಾಗಿ ಸುದ್ದಿ ಸಂಪಾದಕನ ಹೆಗಲಿಗೇ ಬೀಳುವ ಭಾರ. ಎಲ್ಲ ಮೂಲಗಳಿಂದ ಬಂದು ಸಂಪಾದಕನ ಟೇಬಲ್ಲಿನ ಮೇಲೆ ಶೇಖರಣೆಗೊಳ್ಳುವ ಮಾಹಿತಿಯನ್ನು ಅತೀ ಎಚ್ಚರದಿಂದ ಗಮನಿಸಿಕೊಂಡು 'ಸುದ್ದಿ'ಯೇ ಆಗಿದ್ದರೆ

ಅವನ್ನೊಂದು ಕಡೆ, ಸುದ್ದಿಯಲ್ಲದವನ್ನು ಮತ್ತೊಂದು ಕಡೆ ಇಟ್ಟುಕೊಳ್ಳುವುದು ಉತ್ತಮ. ಈಗ ಸುದ್ದಿ ಎನಿಸದ ಮಾಹಿತಿಯೂ ನಂತರ ಸುದ್ದಿಯಾಗಬಹುದು. ದೃಶ್ಯ ಮಾಧ್ಯಮದಲ್ಲಿ ಸುದ್ದಿಗಳನ್ನು ಎರಡು ಬಗೆಯಾಗಿ ಕಾಣಬಹುದು. ೧. ಶುಷ್ಕ = dry ೨. ಸಚಿತ್ರ = visual ಇಂಗ್ಲಿಷಿನಲ್ಲಿ ಪ್ರತಿಯೊಂದು ಸುದ್ದಿಗೂ News Story ಎಂದು ಕರೆಯಲಾಗುತ್ತದೆ. ಇಲ್ಲಿ ವಿವರಿಸಲು ಅನುಕೂಲವಾಗುವಂತೆ News Storyಯನ್ನು ಸುದ್ದಿ ಎಂತಲೂ, News Bulletin ಅನ್ನು ವಾರ್ತಾ ಪ್ರಸಾರ, ವಾರ್ತೆಗಳು ಎಂತಲೂ ಹೆಸರಿಸುತ್ತೇನೆ. Dry News ಅಥವಾ ಶುಷ್ಕ ಸುದ್ದಿ ಎನ್ನುವುದಕ್ಕೆ ದೃಶ್ಯಗಳಿರುವುದಿಲ್ಲ. ಹೆಚ್ಚಾಗಿ ಮಾಹಿತಿ ನೀಡುವ ಸುದ್ದಿಗಳು ಇವು. ಇವನ್ನು ವಾರ್ತೆ ಓದುವವರೇ ಹೇಳುತ್ತಾರೆ. ಇನ್ನು ಇವುಗಳಿಗೇ ಸಂಬಂಧಪಟ್ಟಂತೆ ಸ್ಥಿರಚಿತ್ರ, ಕಂಪ್ಯೂಟರ್ ಗ್ರಾಫಿಕ್, ಗ್ರಾಫ್ ಅಥವಾ ಬರೀ ಶೀರ್ಷಿಕೆಯನ್ನೂ ಕೊಡಬಹುದು. ಉದಾಹರಣೆಗೆ 'ರಾಜ್ಯದಲ್ಲಿ ವಿವಿಧ ವರ್ಗದ ಜನತೆಗೆ ರೇಷನ್‌ಕಾರ್ಡ್ ವಿತರಣೆ' ಎನ್ನುವ ಮಾಹಿತಿಯನ್ನು ವರ್ಗಾವಾರು ಅಂಕಿ ಅಂಶಗಳೊಂದಿಗೆ ನೀಡುವ ಸಂದರ್ಭದಲ್ಲಿ ಕಂಪ್ಯೂಟರ್ ಗ್ರಾಫಿಕ್‌ನ ಹಿನ್ನೆಲೆಯಲ್ಲಿ ಗ್ರಾಫ್ ಮೂಲಕ ತಿಳಿಸಬಹುದು. ಅಂತಹ ಸುದ್ದಿಗಳನ್ನು Photo Story, Captioned Story, Computer Graphic ಇರುವ Story ಎಂದೆಲ್ಲಾ ಕರೆಯಬಹುದು. ಇವು dry ಸುದ್ದಿಗಳಿಗಿಂತ ಉತ್ತಮ.

ಇನ್ನು Visual ಸುದ್ದಿಗಳೇ ಸಚಿತ್ರ ಸುದ್ದಿಗಳು. ಅವೇ ಈ ಮಾಧ್ಯಮದ ಜೀವಾಳ. ನೈಜ ದೃಶ್ಯಗಳು, ಸಂಗ್ರಹ ದೃಶ್ಯಗಳು ಇದ್ದರೆ ಅವೆಲ್ಲ ಸಚಿತ್ರ ಸುದ್ದಿಗಳು. ನ್ಯೂಸ್ ರೂಂನಲ್ಲಿ Pool ಆದ 'ಸುದ್ದಿ'ಗಳನ್ನು ಆಯ್ದುಕೊಳ್ಳುವಾಗಲೇ ಅದು ಶುಷ್ಕ ಸುದ್ದಿಯಾಗುತ್ತದೆಯೇ, ಸಚಿತ್ರ ಸುದ್ದಿಯಾಗುತ್ತದೆಯೇ ಎನ್ನುವುದನ್ನು ಸಂಪಾದಕ ಯೋಜಿಸಿಕೊಳ್ಳಬೇಕು. ನಂತರ ಒಂದು ಸುದ್ದಿಗೆ ಸಂಬಂಧಿಸಿದಂತೆ ಎಲ್ಲ ಮೂಲಗಳಿಂದ ಶೇಖರಣೆಯಾದ ವಿಷಯಗಳನ್ನು ಸಂಗ್ರಹಿಸಿ ಎರಡೆರಡು ಬಾರಿ ಅದನ್ನು ಪರಿಶೀಲಿಸಿ ನಂತರ ಟೆಲಿವಿಷನ್ ಮಾಧ್ಯಮಕ್ಕೆ, ಇರುವ ದೃಶ್ಯಗಳಿಗೆ ಹೊಂದುವಂತೆ ಸ್ವತಂತ್ರವಾಗಿ ಸುದ್ದಿ ರಚಿಸಿಕೊಳ್ಳಬೇಕು. ವರದಿಗಾರ ನೀಡಿದ್ದಾನೆ ಎಂಬ ಕಾರಣಕ್ಕೋ ದಾಕ್ಷಿಣ್ಯಕ್ಕೋ ಅದನ್ನು ಬಳಸಬೇಕೆಂದೇನೂ ಇಲ್ಲ. ಆಯ್ಕೆಯ ನಿರ್ಧಾರ ಸಂಪೂರ್ಣವಾಗಿ ಸಂಪಾದಕನದೇ ಜವಾಬ್ದಾರಿ. ಏಕೆಂದರೆ ವಾರ್ತಾಪ್ರಸಾರದಲ್ಲಿ ಆಗುವ ಎಲ್ಲ ತಪ್ಪುಗಳಿಗೂ ವೀಕ್ಷಕರ ದೃಷ್ಟಿಯಿಂದ, ಸಂಸ್ಥೆಯ ದೃಷ್ಟಿಯಿಂದ ಅವನೇ ಜವಾಬ್ದಾರನಾಗುವುದರಿಂದ ಆತ ಕಟ್ಟೆಚ್ಚರವಾಗಿಯೇ ಇರಬೇಕು.

'Omitting a story is better than Committing a mistake by taking an unworthy story' ಎನ್ನುವಂತೆ ಸುದ್ದಿ ಅಲ್ಲ ಅಥವಾ ಸುದ್ದಿಯಾಗಲಾರದು ಎನಿಸಿದ್ದನ್ನು ಪ್ರಸಾರ ಮಾಡಿ ಜನನಿಂದನೆಗೆ ಗುರಿಯಾಗುವುದಕ್ಕಿಂತ ಅದನ್ನು ಪ್ರಸಾರ ಮಾಡದಿರುವುದೇ ಒಳಿತು.

ದೂರದರ್ಶನದ ಸುದ್ದಿ ಪತ್ರಿಕೆಯ ಸುದ್ದಿಯಂತೆ, ಅರ್ಥವಾಗದಿದ್ದರೆ ಪುಟ ಮಗುಚಿ ಮತ್ತೆ ಓದಿಕೊಳ್ಳುವ ಅವಕಾಶವನ್ನು ಒದಗಿಸಿಕೊಡದ ಮೌಖಿಕ ಮಾಧ್ಯಮ. ಮೌಖಿಕ ಮಾಧ್ಯಮಕ್ಕೆ ಸುದ್ದಿಯನ್ನು ಬರೆಯುವಾಗ ಈ ಕೆಳಗಿನ ಅಂಶಗಳನ್ನು ಅನುಸರಿಸುವುದು ಉತ್ತಮ.

- ಚಿಕ್ಕದಾದ ವಾಕ್ಯರಚನೆ
- ಸರಳವಾದ, ಸ್ಪಷ್ಟವಾದ, ಪರಿಚಿತವಾದ ಪದಗಳ ಬಳಕೆ
- ಯಾರೋ ಕಂಡದ್ದನ್ನು ಹೇಳುವುದಕ್ಕಿಂತ ತಾನೇ ಕಂಡಂತೆ ಪ್ರಥಮ ಪುರುಷನಾಗಿ ಹೇಳಬೇಕು.
- ವರ್ತಮಾನಕಾಲದಲ್ಲಿದ್ದು ನೇರ ಸಂಬೋಧನೆ ಇದ್ದರೆ ಒಳಿತು.

- ದೊಡ್ಡದಾಗಿ ಸ್ವೀಕರಿಸಿದ ಕಚ್ಚಾ ಸುದ್ದಿಯನ್ನು ವಿಸ್ತೃತವಾಗಿ ಓದಿ ಅದರ ಕೇಂದ್ರ ವಸ್ತುವನ್ನು ಗ್ರಹಿಸಿ ಅಗತ್ಯಕ್ಕೆ ತಕ್ಕಂತೆ ಬರೆಯಬೇಕು.
- ತೀರಾ ಮಹತ್ವದ್ದಲ್ಲದಿದ್ದರೆ, ಸುದ್ದಿಗಳನ್ನು ಉದ್ದುದ್ದವಾಗಿ ಬರೆಯಬಾರದು. ಆದಷ್ಟು ಮಟ್ಟಿಗೆ ಒಂದು ಇಡೀ ಸುದ್ದಿ ೪೦ರಿಂದ ೬೦ ಸೆಕೆಂಡ್ ಇದ್ದರೆ ಚೆನ್ನ.
- ಸುದ್ದಿಯನ್ನು ಆದಷ್ಟು ಸಂಕ್ಷಿಪ್ತ ವಾಕ್ಯಗಳಲ್ಲಿ ಹೇಳಬೇಕು. ಆದರೆ ಅದು ಟೆಲಿಗ್ರಾಫಿಕ್ ಆಗಬಾರದು.
- ಸುದ್ದಿ ನಿಷ್ಪಕ್ಷಪಾತವಾಗಿರಬೇಕು. ಯಾವುದೇ ಒಬ್ಬ ವ್ಯಕ್ತಿಯ, ಒಂದು ಸಂಸ್ಥೆ, ರಾಜಕೀಯ ಪಕ್ಷ ಹೀಗೆ ಪರ ಪಕ್ಷೀಯವಾಗಿರುವುದು ಅಪಾಯಕಾರಿ.
- ದೃಶ್ಯಗಳಿಗೆ ತಕ್ಕಂತೆ ವಾಕ್ಯಗಳನ್ನು ಕಾಲಕ್ಕೆ ಅಳವಡಿಸಿರಬೇಕು.
- ಸುದ್ದಿಯಲ್ಲಿ ವಾಕ್ಯಗಳು ಸಂಪೂರ್ಣವಾಗಿರಬೇಕು. ಮುಖ್ಯಾಂಶಗಳಲ್ಲಿ ಕ್ರಿಯಾಪದಗಳನ್ನು ಬಳಸದಿದ್ದರೂ ಸುದ್ದಿಯ ಪಠ್ಯದಲ್ಲಿ ಅದು ಬೇಕಾಗುತ್ತದೆ.
- ಸರಳವಾದ, ಮಾನವಾಸಕ್ತಿಯ ಸುದ್ದಿಗಳನ್ನು ಒಮ್ಮೊಮ್ಮೆ ಬಳಸುವುದರಿಂದ ಏಕತಾನತೆ ದೂರವಾಗುತ್ತದೆ. ಸಿದ್ಧಗೊಂಡ ಪ್ರತಿಸುದ್ದಿಗೂ ಒಂದು ಪುಟ್ಟ ಹೆಸರು ಅಂದರೆ 'Slug' ನೀಡಿ ಗುರುತಿಸಬೇಕು.

ವಾಕ್ಯರಚನೆ, ಬಳಸಿದ ಶಬ್ದಗಳನ್ನು ತೂಗಿ ನೋಡಿ ಈ ಸುದ್ದಿ ಪ್ರಸಾರಯೋಗ್ಯ ಅಥವಾ ಪ್ರಸಾರಕ್ಕೆ ಸಿದ್ಧ ಎಂದಾದ ಕೂಡಲೇ ಅದನ್ನು ವಾರ್ತಾವಾಚಕರಿಂದ ಓದಿಸಿ, ಧ್ವನಿ ಗ್ರಹಿಸಿಕೊಂಡು ಅದಕ್ಕೆ ಸಂಬಂಧಪಟ್ಟ ಚಿತ್ರ/ದೃಶ್ಯಗಳನ್ನು ಅಳವಡಿಸಬೇಕು. ಇಲ್ಲಿ ಒಂದಂಶವನ್ನು ಎಚ್ಚರದಿಂದ ನೋಡಿಕೊಳ್ಳಬೇಕು. ಅದೇನೆಂದರೆ ಹಿನ್ನೆಲೆಯಲ್ಲಿ ಬರುತ್ತಿರುವ ಮಾತು ತೆರೆಯಮೇಲೆ ಕಾಣುವ ಚಿತ್ರ ಎರಡೂ ಹೊಂದಿಕೊಳ್ಳಬೇಕು. ಈ ಹೊಂದಾಣಿಕೆ ಅತ್ಯಂತ ಮುಖ್ಯ. ಉದಾಹರಣೆಗೆ ಕಂಬಳದ ಸ್ಪರ್ಧೆಯ ವಿವರ ನೀಡುವಾಗ ಅಲ್ಲಿಗೆ ಮುಖ್ಯ ಅತಿಥಿಯಾಗಿ ಆಗಮಿಸಿದ ಗಣ್ಯರ ಹೆಸರನ್ನು ಹೇಳುವಾಗ ಒಂದು ಕೋಣದ Close - up ದೃಶ್ಯ ತೋರಿಸಿದರೆ ಅದು ಅಕ್ಷಮ್ಯ ಪ್ರಮಾದವಾಗುತ್ತದೆ. ಅಂತಹ ಸಂದರ್ಭದಲ್ಲಿ ಆ ಗಣ್ಯ ಅತಿಥಿಯ ದೃಶ್ಯ ಇರದೇ ಇದ್ದಲ್ಲಿ, ದೂರದಿಂದ ತೆಗೆದ ಯಾವುದಾದರೂ ದೃಶ್ಯವನ್ನೇ ಬಳಸುವುದು ಸೂಕ್ತ. ಅಥವಾ ತೀರಾ ಮುಖ್ಯ ಅನಿಸದಿದ್ದರೆ ಅತಿಥಿಯ ಹೆಸರನ್ನೇ ಬಿಡುವುದು ಸೂಕ್ತ. ಏಕೆಂದರೆ ಇಲ್ಲಿ ಕಂಬಳದ ಸ್ಪರ್ಧೆಯೇ ಸುದ್ದಿ, ಗಣ್ಯ ಅತಿಥಿಯ ಭೇಟಿಯಲ್ಲ.

ಸುದ್ದಿಗಳನ್ನು ಪ್ರಾಮುಖ್ಯತೆಯ ಆಧಾರದ ಮೇಲೆ ಕ್ರಮವಾಗಿ ಜೋಡಿಸಿಡುವ ಹೊಣೆಯೂ ಸಂಪಾದಕನದೇ. ನೇರ ಪ್ರಸಾರದಲ್ಲಿ ಸುದ್ದಿ ಬಿತ್ತರವಾಗುವುದಿದ್ದರೆ ಆ ಹಂತದಲ್ಲೂ ಸಣ್ಣಪುಟ್ಟ ಲೋಪಗಳನ್ನು ತಿದ್ದಬಹುದು. ಪೂರ್ವ ಮುದ್ರಿತಪ್ರಸಾರವಾದರೆ ಅದೂ ಸಾಧ್ಯವಾಗುವುದಿಲ್ಲ. ಕ್ರಮಬದ್ಧ ಜೋಡಣೆ ಸುದ್ದಿಯ ಪ್ರಾಮುಖ್ಯತೆಯನ್ನು ಗಮನದಲ್ಲಿರಿಸಿಕೊಂಡು ಆಗಬೇಕು. ಇಲ್ಲದಿದ್ದರೆ ಆ ವಾಹಿನಿ ಬಹಳ ಸುಲಭವಾಗಿ ವೀಕ್ಷಕರನ್ನು ಕಳೆದುಕೊಳ್ಳುತ್ತದೆ. ಉದಾಹರಣೆಗೆ ಒಂದು ಹಬ್ಬದ ದಿನ ನಾಡಿನ ಮಹಾನ್ ಕಲಾವಿದರೊಬ್ಬರು ನಿಧನ ಹೊಂದಿದರು. ಆ ದಿನ 'ಒಂದು ಶುಭ ದಿನ, ಜನತೆಗೆ ವಾರ್ತೆಗಳಲ್ಲಿ ಮೊದಲೇ ಏಕೆ ಅಶುಭವಾರ್ತೆ ನೀಡಬೇಕು' ಎಂದು ತರ್ಕಿಸಿದ ಸಂಪಾದಕರೊಬ್ಬರು ಅದನ್ನು ಎರಡನೆಯ ಸುದ್ದಿಯಾಗಿ ಬಳಸಿದ್ದು ಡಿಡಿ-೧ರಲ್ಲಿ ನಡೆಯಿತು. ಆ ವೇಳೆಗಾಗಲೇ ಆಕಾಶವಾಣಿಯ ಸಂಜೆ ೬.೪೦ರ ಪ್ರದೇಶ ಸಮಾಚಾರದಲ್ಲಿ ಆ ಸುದ್ದಿ ಬಿತ್ತರಗೊಂಡು, ಅದನ್ನೇ ಟಿವಿಯಲ್ಲಿ ನಿರೀಕ್ಷಿಸಿದ ವೀಕ್ಷಕರು ಇಲ್ಲಿ ಎರಡನೆ ಸುದ್ದಿ ಬರುವ ವೇಳೆಗೆ ಮತ್ತೊಂದು ವಾಹಿನಿಗೆ ಹೋದರು. ವಾರ್ತೆಗಳನ್ನು ಸಿದ್ಧಪಡಿಸುವ ವಿಷಯದಲ್ಲಿ ಭಾವನೆಗಳಿಗೆ ಅವಕಾಶವಿರಬಾರದು. ಸಂಪಾದಕನಿಗೆ ಒಂದು ಸುದ್ದಿಗೆಷ್ಟು ಮಹತ್ವ ಕೊಡಬೇಕು ಎನ್ನುವುದಷ್ಟೇ ಲಕ್ಷ್ಯವಾಗಿರಬೇಕು.

'ವಾರ್ತೆಗಳ'ನ್ನು ಬರೆಯುವ ಕೊನೆಯ ಹಂತ ಮುಖ್ಯಾಂಶಗಳನ್ನು ಸಿದ್ಧಪಡಿಸುವುದು. ಸುದ್ದಿಗಳು ಸಿದ್ಧವಾಗುವ ಹಂತದಲ್ಲೇ ಇದು ಮುಖ್ಯಾಂಶವಾಗಬಲ್ಲದೇ ಎಂಬ ಅರಿವು ಸಂಪಾದಕನಿಗೆ ಆಗುತ್ತದೆ. ಆದರೂ ವಾರ್ತೆಗಳು ಪ್ರಸಾರವಾಗುವವರೆಗೂ, ಹಲವು ವೇಳೆ ಪ್ರಾರಂಭವಾದ ಮೇಲೂ ನ್ಯೂಸ್‌ರೂಂಗ್ ಬರುವ ಸುದ್ದಿಗಳನ್ನು ಗಮನಿಸುತ್ತಿದ್ದರೆ ಒಳ್ಳೆಯದು. Flash News ಆಗಷ್ಟೇ ಬಂದ ಸುದ್ದಿ ಅಂದರೆ ಅತ್ಯಂತ ಮಹತ್ವಪೂರ್ಣವಾಗುವ ಒಂದೇ ಸಾಲಿನ ಸುದ್ದಿ ಸಿಗಬಹುದು. ಉದಾಹರಣೆಗೆ ಡಿಡಿ-೧ ರ ರಾತ್ರಿ ೭ ಗಂಟೆಯ 'ವಾರ್ತೆಗಳು' ಮುಕ್ಕಾಲು ಭಾಗ ಆಗಲೇ ಪ್ರಸಾರಗೊಂಡಿತ್ತು. ಆ ವೇಳೆಗೆ ಪೋಖರಣ್‌ನಲ್ಲಿ ಭಾರತ ನಡೆಸಿದ ಅಣುಬಾಂಬ್ ಪರೀಕ್ಷಾರ್ಥ ಪ್ರಯೋಗದ ಸುದ್ದಿ, ಸುದ್ದಿ ಸಂಸ್ಥೆಯಿಂದ ದೊರೆಯಿತು. ಅದನ್ನು ಆ ಕೂಡಲೇ ಕನ್ನಡಕ್ಕೆ ಅನುವಾದಿಸಿ ಇದೀಗ ಬಂದ ಸುದ್ದಿ ಎಂದು - Flash ಸುದ್ದಿಯಾಗಿ ಕೊಟ್ಟದ್ದಲ್ಲದೆ, ಅದನ್ನು ಕೊನೆಯಲ್ಲಿ ಹೇಳಲಾಗುವ ಮುಖ್ಯಾಂಶಗಳಲ್ಲಿ ಮೊದಲನೆಯದಾಗಿಯೂ ಬಳಸಲಾಯಿತು.

## ಮಂಡನೆ

ದೂರದರ್ಶನ ಮೌಖಿಕ ಮಾಧ್ಯಮ. ಇಲ್ಲಿ ಸುದ್ದಿಗಳನ್ನು ಹೇಳಬೇಕೆ ಹೊರತು ಓದಬಾರದು. ಇಲ್ಲಿ ಸುದ್ದಿಗಳನ್ನು ಹೇಳುವಾಗ ಪ್ರೇಕ್ಷಕರ ಗಮನ ಹರಿಯುವುದು ಎರಡು ವಿಷಯಗಳತ್ತ.

೧. ವಾರ್ತಾವಾಚಕರ ಆತ್ಮವಿಶ್ವಾಸ, ದೃಢತೆ, ಶಿಸ್ತು, ಸೌಂದರ್ಯ - ಒಟ್ಟಾರೆ Presentability.

೨. ವಾರ್ತಾವಾಚಕರ ಭಾಷಾಬಳಕೆಯ ಮೇಲಿನ ಹಿಡಿತ, ಉಚ್ಚಾರಣೆ, ಸಮಯಸ್ಫೂರ್ತಿ, ಹೇಳುವ ವೈಖರಿ - ಒಟ್ಟಾರೆ Presentation.

ಇಲ್ಲಿ ಪ್ರೇಕ್ಷಕ ವಾರ್ತೆಯನ್ನು ಕೇಳುತ್ತಿರುವುದು ಮಾತ್ರವಲ್ಲ ನೋಡುತ್ತಲೂ ಇರುತ್ತಾನೆ. ಆದ್ದರಿಂದ ವಾರ್ತಾವಾಚಕ ಅತೀವ ಜಾಗೃತನಾಗಿರಬೇಕು. ಆತ ತೆರೆಯ ಮೇಲೆ ಮಾಡುವ ತಪ್ಪು, ಲೋಪ-ದೋಷಗಳು ಸುದ್ದಿ ವ್ಯವಸ್ಥೆಯ ತಂಡದ ಸದಸ್ಯರ ಶ್ರಮವನ್ನು ನಿಷ್ಫಲವನ್ನಾಗಿಸಿಬಿಡುತ್ತದೆ.

ಪ್ರಮಾದವಶಾತ್ ಆದ ತಪ್ಪನ್ನು ಕೂಡಲೆ ಸರಿಪಡಿಸಿಕೊಂಡು, ತಪ್ಪಾದದ್ದಕ್ಕೆ ಮುಂದೆ ಧೃತಿಗೆಡದೆ, ಇನ್ನೂ ಹೆಚ್ಚಿನ ತಪ್ಪುಗಳು ಆಗದಂತೆ ಸುದ್ದಿ ಹೇಳುವ ಆತ್ಮವಿಶ್ವಾಸ ದೃಢತೆ ವಾರ್ತಾವಾಚಕನಿಗಿರಬೇಕು. ಹಾಗೆ ಶುದ್ಧವಾದ, ಹವಾಮಾನಕ್ಕೆ ಹೊಂದುವ ಉಡುಗೆ ತೊಡುಗೆ, ಶಿಸ್ತಾಗಿ ಬಾಚಿದ ತಲೆಗೂದಲು ವೀಕ್ಷಕರನ್ನು ಹಿಡಿದಿಟ್ಟುಕೊಳ್ಳುವಲ್ಲಿ ಉಪಯುಕ್ತವಾಗಬಹುದು. ಅತೀವ ಸುಂದರರಲ್ಲದಿದ್ದರೂ ಚುರುಕುತನ, ಸಮಯಪ್ರಜ್ಞೆ ತಮ್ಮ ಸಹಜ ನಗೆಮೊಗದಿಂದ ವಾರ್ತಾವಾಚರು ವೀಕ್ಷಕರ ಮನಗೆಲ್ಲಬಹುದು.

ಹಾಗೆ ಅವರ ಭಾಷಾ ಶುದ್ಧತೆ; ಕ್ಯಾಮೆರಾದ ಕಣ್ಣಲ್ಲಿ ಕಣ್ಣಿರಿಸಿ ವೀಕ್ಷಕರೊಂದಿಗೆ ಸಾಧಿಸುವ ದೃಷ್ಟಿ ಸಂಪರ್ಕ, ಅಗತ್ಯ ವಾಕ್ಯ, ಪದಗಳಿಗೆ ನೀಡುವ ವಿಶೇಷ ಒತ್ತು ಹಾಗೂ ಆಗಿನ ಮುಖಭಾವ; ಸಹಜವಾಗಿ ಏರುವ ಹುಬ್ಬು ವಾಚಕ ಅಭಿವ್ಯಕ್ತಿಯ ವೈಶಿಷ್ಟ್ಯಗಳಾಗುತ್ತವೆ. ದೃಷ್ಟಿ ಸಂಪರ್ಕ ಸಾಧಿತವಾಗಲಿ ಎಂಬ ಉದ್ದೇಶದಿಂದಲೇ ಅನೇಕ ಅಥವಾ ಬಹುತೇಕ ವಾಹಿನಿಗಳು Tele prompter ನಂತಹ ಸಾಧನ (ವಾಚಕರ ಕಣ್ಮುಂದಿನ ತೆರೆಯ ಮೇಲೆ ಸುದ್ದಿಯನ್ನು ತೋರಿಸುವ ಸಾಧನ) ಬಳಸುತ್ತಿವೆ. ವಾರ್ತಾವಾಚನ ಎನ್ನುವುದು ಸಹಜವಾಗಿ ತೋರುವ ಒಂದು ನಾಟಕ; ಒಂದು ಪ್ರಬುದ್ಧ ಕಲೆ ಎನ್ನಬಹುದು. ಹಾಗಾಗಿ ಈ ಕಲೆಯಲ್ಲೂ ಕಸುಬುಗಾರಿಕೆ ಇರಬೇಕು.

## ಸುದ್ದಿ ಮತ್ತು ಕಾಲ

ಸುದ್ದಿಗಳ ಬಗ್ಗೆ ಬರೆಯುವಾಗ ಕಾಲದ ಬಗ್ಗೆ ಹೇಳಲೇಬೇಕಾಗುತ್ತದೆ. ಪತ್ರಿಕೆಗಳಲ್ಲಿ ಸ್ಥಳಕ್ಕೆ ಪರದಾಡುವಂತೆ ಆಕಾಶವಾಣಿ ಮತ್ತು ದೂರದರ್ಶನಗಳಲ್ಲಿ ಕಾಲಕ್ಕಾಗಿ ಹೊಡೆದಾಡಬೇಕು. ಈ ಮಾಧ್ಯಮಗಳದ್ದು ಕಾಲಕ್ಕಾಗಿ ಎರಡು ಬಗೆಯ ಹೋರಾಟ ಇರುತ್ತದೆ. ಹೊಸ ಹೊಸದಾಗಿ ಬಂದು ಬೀಳುವ ಬಿಸಿಬಿಸಿ ಸುದ್ದಿಗಳನ್ನೂ ಟೆಲಿವಿಷನ್ ಮಾಧ್ಯಮಕ್ಕೆ ಅಳವಡಿಸಿ ಪ್ರೇಕ್ಷಕರ ಮುಂದೆ ಇರಿಸುವುದಕ್ಕೂ ಕಾಲದೊಂದಿಗೆ ಓಡಬೇಕು. ಮತ್ತೆ ತಯಾರಿಸಿದ ಸುದ್ದಿಗಳನ್ನು ನಿಗದಿಗೊಳಿಸಿದ ಕಾಲಾವಧಿಯೊಳಗೆ ವ್ಯವಸ್ಥಿತವಾಗಿ ಸೇರಿಸುವುದಕ್ಕೂ ಹೋರಾಡಬೇಕು. ಆದ್ದರಿಂದ ಸುದ್ದಿ ಕೊಠಡಿಗಳಲ್ಲಿ ಕಾಲಕ್ಕೆ ಬಹಳ ಮಹತ್ವ.

> *ಮುದ್ರಣ ಮತ್ತು ವಿದ್ಯುನ್ಮಾನ ಮಾಧ್ಯಮಗಳು ಸಮನಾಗಿ ಎದುರಿಸುತ್ತಿರುವ ಸವಾಲು ಎಂದರೆ ಸಮಯದ ಮೇಲಿನ ಒತ್ತಡ. ಸಾಲದ್ದಕ್ಕೆ, ಕಲ್ಪನಾತೀತವಾಗಿ ಬೆಳೆಯುತ್ತಿರುವ ಇಂಗ್ಲೀಷ್ ಭಾಷೆಯ ಜೀವಂತಿಕೆಯನ್ನು, ರಭಸತೆಯನ್ನು ಭಾರತೀಯ ಭಾಷೆಗಳು ಅಳವಡಿಸಿಕೊಳ್ಳುವುದು ಅನಿವಾರ್ಯವಾಗಿದೆ.*[೮]

ಎಂದು ಬೆಂಗಳೂರು ದೂರದರ್ಶನ ಕೇಂದ್ರದ ಮೊದಲ ಸುದ್ದಿ ಸಂಪಾದಕರಾದ ವಿ.ಹೆಚ್. ದೇಸಾಯಿ ಈ ಅಧ್ಯಯನದ ಸಂದರ್ಭದಲ್ಲಿ ಹೇಳಿದ್ದಾರೆ.

ಹಲವು ವೇಳೆ ಸಂಪಾದಕ ಕಾಲ ಹಾಗೂ ಸುದ್ದಿಯ ಮಹತ್ವಗಳಲ್ಲಿ ಒಂದನ್ನು ಆಯ್ಕೆ ಮಾಡಬೇಕಾದ ಪ್ರಸಂಗಗಳೂ ಬರುತ್ತವೆ. ಕನಕಪುರದಲ್ಲಿ ನಡೆದ ಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಕ್ಯಾಸೆಟ್ಟಿಗಾಗಿ ಡಿಡಿ-೧ರ ನ್ಯೂಸ್‌ರೂಂ ಕಾಯುತ್ತಿತ್ತು. ಸಮ್ಮೇಳನಾಧ್ಯಕ್ಷರಾಗಿದ್ದ ಎಸ್.ಎಲ್. ಭೈರಪ್ಪನವರ ಭಾಷಣ ವಿಳಂಬವಾಗಿದ್ದುದರಿಂದ ಕ್ಯಾಸೆಟ್ ಸಂಪಾದಕರ ಕೈ ಸೇರುವಲ್ಲೂ ವಿಳಂಬವಾಯಿತು. ಸಹಜವಾಗಿಯೇ ಅದು ಅಂದಿನ ಮೊದಲ ಸುದ್ದಿ, ಮೊದಲ ಮುಖ್ಯಾಂಶ. ಬೆಂಗಳೂರಿನ ಸಮೀಪದಲ್ಲೇ ಕನಕಪುರದಲ್ಲಿ ನಡೆದ ಸಮ್ಮೇಳನದ ದೃಶ್ಯಗಳನ್ನು ಪ್ರಸಾರ ಮಾಡದೇ ಹೋದರೆ ಕನ್ನಡಿಗರು ಕ್ಷಮಿಸುವುದಿಲ್ಲ ಎನ್ನುವುದು ಸಂಪಾದಕ ವರ್ಗದ ಅಭಿಪ್ರಾಯ. ಅದರೂ ಮೂರು ಕ್ಯಾಸೆಟ್‌ಗಳು ಕೈಸೇರಿ, ಆ ವೇಳೆಗಾಗಲೇ ಸಿದ್ಧಪಡಿಸಿಟ್ಟುಕೊಂಡಿದ್ದ ಸುದ್ದಿಗೆ ತಕ್ಕಂತೆ ದೃಶ್ಯಗಳನ್ನು ೩-೪ ಗಂಟೆಗಳ ಇಡೀ ಕಾರ್ಯಕ್ರಮದಿಂದ ಹುಡುಕಿ, ಸುದ್ದಿಗೆ ಅಳವಡಿಸಿ ಪ್ರಸಾರಕ್ಕೆ ಸಿದ್ಧಪಡಿಸಿ, ಪ್ರಸಾರ ಕೊಠಡಿಗೆ ಅದನ್ನು ತಲುಪಿಸಿ 'ವಾರ್ತೆಗಳ' ಪ್ರಸಾರ ಪ್ರಾರಂಭಿಸುವ ವೇಳೆಗೆ ರಾತ್ರಿ ೭ ಗಂಟೆ ಕಳೆದು ೧ ನಿಮಿಷವಾಗಿತ್ತು. ಸಮಯಕ್ಕೆ ಸರಿಯಾಗಿ 'ವಾರ್ತೆಗಳು' ಸಿದ್ಧಗೊಂಡಿದ್ದರೂ ದೃಶ್ಯಗಳನ್ನು ಅಳವಡಿಸಲೇಬೇಕಾದ ಅನಿವಾರ್ಯತೆಯಿಂದ ೧೫ ನಿಮಿಷಗಳ ವಾರ್ತಾ ಕಾಲಾವಧಿಯಲ್ಲಿ ೧ ನಿಮಿಷವನ್ನು ಕಳೆದುಕೊಳ್ಳಬೇಕಾಯಿತು. ಆದರೆ ಅಸಂಖ್ಯಾತ ಕನ್ನಡಿಗರು ಸಮಾಧಾನಪಟ್ಟರು ಎನ್ನಬಹುದು.

ಒಮ್ಮೊಮ್ಮೆ ಹೆಚ್ಚಿನ ಸುದ್ದಿಗಳ ಕಾರಣದಿಂದಾಗಿ ವಾರ್ತಾ ಪ್ರಸಾರದ ಅವಧಿಯನ್ನು ೧೫ ನಿಮಿಷಗಳಿಗೂ ಆಚೆ ವಿಸ್ತರಿಸಬೇಕಾದ ಸಂದರ್ಭ ಒದಗುತ್ತದೆ. ಇಂತಹ ಸಮಸ್ಯೆಗಳು ಖಾಸಗಿ ವಾಹಿನಿಗಳಿಗೆ ಅಷ್ಟಾಗಿ ಕಾಡದಿರುವುದಕ್ಕೆ ಅವು ನಿಗದಿ ಪಡಿಸಿಕೊಂಡಿರುವ ೩೦ ನಿಮಿಷಗಳ ಕಾಲಾವಧಿ ಜೊತೆಗೆ ಆಗಿಂದಾಗ್ಗೆ ಪ್ರಸಾರವಾಗುವ ಅನೇಕ 'ವಾರ್ತೆಗಳು' ಕಾರಣ.

ವಾರ್ತೆಗಳಲ್ಲದೆ, ಸುದ್ದಿಗಳನ್ನು ವಿಶ್ಲೇಷಿಸುವ, ಪ್ರಸ್ತುತ ಸಮಸ್ಯೆಗಳನ್ನು ಕುರಿತು ಚಿಂತನೆ, ಚರ್ಚೆ ನಡೆಸುವ, ಸಾರ್ವಜನಿಕರ ಅಭಿಪ್ರಾಯ ಮಂಡಿಸುವ ವೇದಿಕೆ ಎನಿಸಬೇಕು ದೂರದರ್ಶನ. ಚುನಾವಣೆಯ ಸಂದರ್ಭಗಳಲ್ಲಿ ಹಲವು ವೇಳೆ ಈ ಮಾಧ್ಯಮ

ಬೀರುವ ಪ್ರಭಾವ ನಿರ್ಣಾಯಕವೂ ಆಗಿರುತ್ತದೆ. ಹಾಗಾಗಿ ಸಾರ್ವಜನಿಕರನ್ನು ಅಂದರೆ ಸಮಾಜವನ್ನು ಚಿಂತನೆಗೆ ಹಚ್ಚುವ, ನಿರ್ಣಯಗಳನ್ನು ಕೈಗೊಳ್ಳುವಂತೆ ಉತ್ತೇಜಿಸುವ ಸಾಮರ್ಥ್ಯ ಈ ಮಾಧ್ಯಮಕ್ಕಿದೆ.

ಇದನ್ನೆಲ್ಲ ಗಮನಿಸಿದಾಗ, ದೂರದರ್ಶನದ ಸುದ್ದಿ ಕೊಠಡಿ ಆಧುನಿಕ ಪರಿಕರ/ಸಾಧನಗಳೊಂದಿಗೆ, ಸಾಕಷ್ಟು ಸಂಪಾದಕ/ನಿರ್ಮಾಪಕ/ತಾಂತ್ರಿಕ ಸಿಬ್ಬಂದಿಯೊಂದಿಗೆ ಸದಾಕಾಲವೂ ಸಜ್ಜಾಗಿರಬೇಕು. 'ವಾರ್ತೆಗಳ' ತಯಾರಿ ಸಂಪಾದಕನ ನೇರ ಜವಾಬ್ದಾರಿಯೇ ಆದರೂ, ವರದಿಗಾರ, ಕ್ಯಾಮೆರಾಮನ್ ಮತ್ತು ತಂಡದವರು, ಕಡೆಪಕ್ಷ ವಾಹನದ ಚಾಲಕ, ವಾರ್ತೆ ಓದುವವರು, ನಿರ್ಮಾಪಕರು, ತಾಂತ್ರಿಕ ಸಿಬ್ಬಂದಿ, ಸ್ಟೂಡಿಯೋದ ಒಳ ಹೊರಗೆ ದುಡಿಯುವ ಎಲ್ಲರೂ ಪರೋಕ್ಷವಾಗಿ ತಮ್ಮ ಜವಾಬ್ದಾರಿಯನ್ನು ತಿಳಿದಿರಬೇಕು. ಆಗಲೇ 'ವಾರ್ತೆಗಳು' ವಾರ್ತೆಗಳೆನಿಸಿಕೊಳ್ಳುತ್ತವೆ.

## ೪. ದೂರದರ್ಶನ ಕ್ಷೇತ್ರದ ಸವಾಲುಗಳು

ಇತ್ತೀಚಿನವರೆಗೂ ಸರ್ಕಾರಿ ಒಡೆತನದಲ್ಲಿದ್ದು ಈಗ ಸ್ವಾಯತ್ತತೆ ಪಡೆಯುವ ಹಂತದಲ್ಲಿರುವ ಡಿಡಿ-೧ ಹಾಗೂ ಚಂದನ ವಾಹಿನಿಗಳು, ಖಾಸಗಿ ವಲಯದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಉದಯ, ಈಟೀವಿ ಕನ್ನಡ, ಸುಪ್ರಭಾತ, ಕಾವೇರಿ, ಉಷೆ ಹೀಗೆ ಒಟ್ಟು ೭ ವಾಹಿನಿಗಳು ವಾರ್ತೆ ಹಾಗೂ ಕನ್ನಡ ಕಾರ್ಯಕ್ರಮಗಳನ್ನು ಪ್ರಸಾರ ಮಾಡುತ್ತಿವೆ. ಉದಯ ನ್ಯೂಸ್ ಎನ್ನುವ ಒಂದು ವಾಹಿನಿ ನಿರಂತರವಾಗಿ ಅಹೋರಾತ್ರಿ ಕನ್ನಡ ಹಾಗೂ ಇಂಗ್ಲಿಷ್ ಭಾಷೆಗಳಲ್ಲಿ ವಾರ್ತೆಗಳನ್ನು ಪ್ರಸಾರ ಮಾಡುತ್ತಿದೆ. ೨೦೦೧ರ ಫೆಬ್ರವರಿ ತಿಂಗಳಿನಲ್ಲಿ (ಫೆ. ೫ರಿಂದ ೧೧ರವರೆಗೆ) ದೂರದರ್ಶನದ ಎಲ್ಲ ವಾಹಿನಿಗಳ ಪ್ರಸಾರ ವೈಖರಿಯನ್ನು, ಕಾರ್ಯಕ್ರಮ ವೈವಿಧ್ಯವನ್ನು ಈ ಮಹಾಪ್ರಬಂಧಕ್ಕಾಗಿ ನಡೆಸಿದ ಅಧ್ಯಯನದ ಸಂದರ್ಭದಲ್ಲಿ ಪಟ್ಟಿ ಮಾಡಲಾಯಿತು. ಈ ಪಟ್ಟಿಗಳನ್ನು ಗಮನಿಸಿ ನೋಡಿದಾಗ ಒಂದು ದೂರದರ್ಶನ ವಾಹಿನಿ ಯಶಸ್ವಿಯಾಗಬೇಕಾದರೆ ಏನು ಮಾಡಬೇಕು ಏನು ಮಾಡಬಾರದು ಎನ್ನುವ ಹತ್ತು ಹಲವು ಅಂಶಗಳು ತೋರಿಬಂದವು. ವಾಹಿನಿ ವಾಹಿನಿಗಳ ನಡುವೆ ನಡೆಯುತ್ತಿರುವ ಮೇಲಾಟವನ್ನು, ಅವು ಪ್ರಸಾರ ಮಾಡುತ್ತಿರುವ ಕಾರ್ಯಕ್ರಮ / ಸುದ್ದಿಗಳನ್ನು, ಪ್ರೇಕ್ಷಕನನ್ನು ಹಿಡಿದಿಟ್ಟುಕೊಳ್ಳುವ ಬಗೆಯನ್ನು ವಿವರಿಸಿ ತುಲನಾತ್ಮಕ ಅಧ್ಯಯನ ನಡೆಸಿ ಗುರುತಿಸಿಕೊಂಡ ಅಂಶಗಳನ್ನು ಇಲ್ಲಿ ಮಂಡಿಸಲಾಗಿದೆ.

ಸಂವಹನೆ ಎನ್ನುವುದು ಏಕಮುಖೀ ಸಂಚಾರವಲ್ಲ. ಆದ್ದರಿಂದಲೇ ಮಾಧ್ಯಮ ಹಾಗೂ ಪ್ರೇಕ್ಷಕ ಅಂತರ್ ಸಂಬಂಧವಿರುವ ಎರಡು ಮುಖ್ಯ ತುದಿಗಳಾಗುತ್ತಾರೆ. ಮಾಧ್ಯಮ ನೀಡಿದ ವಸ್ತು ವೀಕ್ಷಕರನ್ನು ತಲುಪಬೇಕಾದ್ದು ಸಂವಹನ ಪ್ರಕ್ರಿಯೆಯ ಒಂದು ಹಂತವಾದರೆ, ಅದನ್ನು ಸ್ವೀಕರಿಸಿದ ವೀಕ್ಷಕ ನೀಡುವ ಪ್ರತಿಕ್ರಿಯೆ ಅದರ ಎರಡನೆ ಹಾಗೂ ಅಂತಿಮ ಹಂತ. ಸಂವಹನ ಪ್ರಕ್ರಿಯೆಯಲ್ಲಿ "ಕ್ರಿಯೆ-ಪ್ರತಿಕ್ರಿಯೆ"ಯೇ ಮೂಲತತ್ವವಾಗುವುದರಿಂದ ಮಾಧ್ಯಮಗಳ ಕಾರ್ಯಕ್ರಮ ನಿರ್ವಾಹಕರು, ನಿರೂಪಕರು ಅನೇಕ ಸೂಕ್ಷ್ಮ ಅಂಶಗಳತ್ತ ಗಮನ ಹರಿಸಬೇಕು. ತನಗೆ ಲಭ್ಯವಿರುವ ಮಾಹಿತಿಯನ್ನು ತನ್ನ ಗ್ರಾಹಕನಿಗೆ ರವಾನಿಸಿಬಿಡುವುದಷ್ಟೇ ತನ್ನ ಕೆಲಸ ಎಂದು ಒಂದು ಮಾಧ್ಯಮ ಸುಮ್ಮನಾಗಿಬಿಟ್ಟರೆ, ಅಲ್ಲಿಂದಲೇ ಅದರ ಅವನತಿ ಆರಂಭವಾಗುತ್ತದೆ ಎಂದೇ ಹೇಳಬಹುದು.

ಒಂದು ಮಾಧ್ಯಮ - ದೂರದರ್ಶನ, ರೇಡಿಯೋ, ಪತ್ರಿಕೆ ಅದು ಯಾವುದೇ ಇರಲಿ ಮೊದಲು ತನ್ನ ಗ್ರಾಹಕನನ್ನು ಗುರುತಿಸಿಕೊಳ್ಳಬೇಕು. ಡಿಡಿ-೧ ಬೆಂಗಳೂರಿನಿಂದ ಕನ್ನಡ ಕಾರ್ಯಕ್ರಮ ಪ್ರಸಾರ ಪ್ರಾರಂಭಿಸಿದಾಗ ಬೇರೆ ಯಾವುದೇ ವಾಹಿನಿ ಇರಲಿಲ್ಲ. ಹಾಗಾಗಿ ಡಿಡಿ-೧ ಸಹಜವಾಗಿಯೇ ಜನಾಕರ್ಷಣೆಗೆ ಒಳಗಾಯಿತು. ಪ್ರಾರಂಭದ ದಿನಗಳಲ್ಲಿ ಟೆಲಿವಿಷನ್ ಸೆಟ್‌ಗಳ

ಅಲಭ್ಯತೆ ಕಾರಣ ಎಲ್ಲ ವರ್ಗಗಳ ಜನರೂ ಟಿವಿ ಕಾರ್ಯಕ್ರಮಗಳನ್ನು ನೋಡುವುದು ಸಾಧ್ಯವಾಗುತ್ತಿರಲಿಲ್ಲ. ಹಾಗಾಗಿ ಪ್ರೇಕ್ಷಕರ ಸಂಖ್ಯೆ ಅಧಿಕವಾಗಿಯೂ ಇರಲಿಲ್ಲ. ಆದರೆ ಸೆಟ್‌ಗಳಿದ್ದ ಪ್ರೇಕ್ಷಕರು (ಸೆಟ್‌ಗಳಿರದ ಅವರ ನೆರೆಹೊರೆಯ ಪ್ರೇಕ್ಷಕರೂ) ಪ್ರಸಾರವಾಗುತ್ತಿದ್ದ ಎಲ್ಲ ಕಾರ್ಯಕ್ರಮಗಳನ್ನೂ ಕುತೂಹಲಕ್ಕಾಗಿ ವೀಕ್ಷಿಸುತ್ತಿದ್ದದ್ದು ಗಮನಾರ್ಹ. ತದನಂತರದ ದಿನಗಳಲ್ಲಿ ಕಪ್ಪು-ಬಿಳುಪು ಟಿವಿ ಸೆಟ್‌ಗಳು ಸರಳ ಬೆಲೆಗೆ ಉಪಲಬ್ಧವಾದಾಗ ಟಿವಿ ವೀಕ್ಷಕರ ಸಂಖ್ಯೆ ಹೆಚ್ಚಾಯಿತು. ೯೦ರ ದಶಕದ ಮೊದಲರ್ಧಭಾಗ ಡಿಡಿ-೧ರ ಸುವರ್ಣಕಾಲ. ಟಿವಿ ಬಳಕೆ ವಿಸ್ತಾರಗೊಂಡಿತ್ತು, ಬೇರೆ ಯಾವುದೇ ವಾಹಿನಿಯಿರದಿದ್ದರಿಂದ ಪ್ರೇಕ್ಷಕನಿಗೆ ಆಯ್ಕೆಯ ಸ್ವಾತಂತ್ರ್ಯ ಅಥವಾ ಅವಕಾಶವೇ ಇರಲಿಲ್ಲ.

ಆವಾಗಲೇ ಡಿಡಿ-೧ರ ಪ್ರೇಕ್ಷಕವರ್ಗ ನಿರ್ಮಾಣವಾಯಿತು. ಈ ವಾಹಿನಿಯೂ ಅತ್ಯಂತ ಉಪಯುಕ್ತ ಕಾರ್ಯಕ್ರಮಗಳನ್ನು, ಉದಾಹರಣೆಗೆ, ಮೌಲ್ಯಿಕವಾದ ಸಾಕ್ಷ್ಯಚಿತ್ರಗಳು, ಕೃಷಿ, ಮಹಿಳೆ, ಆರೋಗ್ಯ, ಕ್ರೀಡೆ, ಕಲೆ, ನೇರ ಪ್ರಸಾರಗಳು, ರಸಪ್ರಶ್ನೆಗಳು, ಚಲನಚಿತ್ರಗಳು ಹೀಗೆ ಶಿಕ್ಷಣ, ಮಾಹಿತಿ, ಮನರಂಜನೆಯ ವಿವಿಧ ಮಜಲುಗಳನ್ನು ಯಶಸ್ವಿಯಾಗಿ ತೆರೆದಿಟ್ಟಿತು. ಕಾರ್ಯಕ್ರಮ ಸಿದ್ಧಪಡಿಸುವವರಿಗೂ ವಿಪುಲ ಅವಕಾಶಗಳಿದ್ದವು. ಏನು ನಿರ್ಮಿಸಿದರೂ ಅದು ಹೊಸದೇ ಆಗಿತ್ತು. ಹೊಸ ಕಲ್ಪನೆ, ಹೊಸ ಆಲೋಚನೆಯೇ ಆಗಿತ್ತು. ಅದಕ್ಕಿಂತ ಮೊದಲು ಬೇರೆ ಆಲೋಚನೆ, ಕಲ್ಪನೆಯನ್ನು ಸಾದೃಶಗೊಳಿಸುವ ಸಂದರ್ಭವೇ ಇರದಿದ್ದುದರಿಂದ ಡಿಡಿ-೧ಕ್ಕೆ ಮೊದಲ ಒಂದೂವರೆ ದಶಕ ಉಚ್ಛ್ರಾಯದ ಸಂದರ್ಭವಾಗಿತ್ತು.

ಪರಿಸ್ಥಿತಿ ಹಾಗಿದ್ದಾಗಲೇ ಬದಲಾಗುತ್ತಿದ್ದ ಸಾಮಾಜಿಕ ಸಂದರ್ಭಕ್ಕೆ ತಕ್ಕಂತೆ ವೀಕ್ಷಕನ ನಾಡಿಮಿಡಿತವನ್ನು ಈ ವಾಹಿನಿ ಗ್ರಹಿಸಿಕೊಳ್ಳಬೇಕಾಗಿತ್ತು. ವೀಕ್ಷಕ ನೀಡುವ 'ಪ್ರತಿಕ್ರಿಯೆ'ಯ ಕಡೆ ಈ ವಾಹಿನಿ ಹೆಚ್ಚು ಗಮನ ಹರಿಸಲಿಲ್ಲ. ಹಾಗಾಗಿ ೯೦ರ ದಶಕದ ಕೊನೆ ಕೊನೆಗೆ ಹುಟ್ಟಿಕೊಂಡ ಖಾಸಗಿ ವಾಹಿನಿಗಳ ಕಡೆಗೆ ಅವನು ಹಂಚಿ ಹರಿದು ಹೋದ ಎನ್ನುವುದು ಅಧ್ಯಯನದ ಸಂದರ್ಭದಲ್ಲಿ ತಿಳಿದು ಬಂದಿತು. ಉದಾಹರಣೆಗಾಗಿ ದಿನಪತ್ರಿಕೆಯೊಂದನ್ನು ನೋಡಬಹುದು.

> *ನಮ್ಮ ಚಂದನ ವಾಹಿನಿ ತನ್ನ ಅಂದವನ್ನು ಕೆಡಿಸಿಕೊಂಡು ಎಷ್ಟೋ ದಿನಗಳಾದವು. ಈ ಬಗ್ಗೆ ಯಾರೇ ಎಷ್ಟು ಬರೆದರೂ ಡಿಡಿ-೧ ಹಾಗೂ ಚಂದನ ವಾಹಿನಿಗಳು ಚೇತರಿಸಿಕೊಳ್ಳುವ ಸೂಚನೆಗಳೇ ಕಂಡುಬರುತ್ತಿಲ್ಲ. ಕನ್ನಡ ವಾಹಿನಿಗಳ ಪೈಕಿ ಇವು 'ಆಟಕ್ಕುಂಟು ಲೆಕ್ಕಕ್ಕಿಲ್ಲ' ಎಂಬಂತೆ ಸಾಗುತ್ತಿರುವುದು ಶೋಚನೀಯ. ಡಿಡಿ - ೧ ಹಾಗೂ ಚಂದನ ವಾಹಿನಿಗಳಿಗೆ ಕಾಯಕಲ್ಪ ನೀಡುವ ಶಿಲ್ಪಿ ಈ ತಹಲ್ಪರವಿಗೂ ಸಿಕ್ಕದಿರುವುದು ಅಚ್ಚರಿ ಮೂಡಿಸುವ ಸಂಗತಿ.*[೯]

ಖಾಸಗಿ ವಾಹಿನಿಗಳು ಮನರಂಜನೆಯನ್ನೇ ತಳಹದಿಯನ್ನಾಗಿ ಮಾಡಿಕೊಂಡದ್ದೇ ಪ್ರೇಕ್ಷಕ ಡಿಡಿ-೧ರಿಂದ ವಿಮುಖನಾಗುವುದಕ್ಕೆ ಮುಖ್ಯ ಕಾರಣವೇ? ಹಾಗೂ ಹಾಗೆ ವಿಮುಖನಾದ ಪ್ರೇಕ್ಷಕ ಹೊಸ ವಾಹಿನಿಯಿಂದ ತೃಪ್ತಗೊಂಡನೇ? ಖಾಸಗಿ ವಾಹಿನಿಗಳು ಹಿಡಿದಿರುವ ಹಾದಿ ಸುದೀರ್ಘವಾದುದೇ? ಎಂದು ತಿಳಿಯುವ ಪ್ರಯತ್ನ ಮಾಡಲಾಯಿತು.

ಯಾವುದೇ ಮಾಧ್ಯಮವಾಗಲೀ ಪ್ರೇಕ್ಷಕನನ್ನು ಹಿಡಿದಿಟ್ಟುಕೊಳ್ಳದ ಹೊರತು ಉದ್ದೇಶಿತ ಗುರಿ ಸಾಧಿಸುವುದು ಅಸಾಧ್ಯ. ಹಾಗಾದರೆ ಪ್ರೇಕ್ಷಕನನ್ನು ಹೇಗೆ ಹಿಡಿದಿಟ್ಟುಕೊಳ್ಳಬೇಕು ಎನ್ನುವುದಕ್ಕೆ ಈ ಪ್ರಶ್ನೆಗಳು ಉತ್ತರ ನೀಡಬಹುದು.

೧. ಪ್ರೇಕ್ಷಕನಿಗೇನು ಬೇಕು?

೨. ಪ್ರೇಕ್ಷಕನಿಗೆ ಅದು ಹೇಗೆ ಬೇಕು?

೩. ಪ್ರೇಕ್ಷಕನಿಗೆ ಅದು ಯಾವಾಗ ಬೇಕು?

೪. ಪ್ರೇಕ್ಷಕನಿಗೆ ಅದು ಎಷ್ಟು ಬೇಕು?

೫. ಪ್ರೇಕ್ಷಕನಿಗೆ ಅದು ಯಾಕೆ ಬೇಕು?

೬. ಪ್ರೇಕ್ಷಕ ಏನು ಹೇಳುತ್ತಾನೆ?

ಇವುಗಳ ಉತ್ತರವನ್ನು ಸಮರ್ಥವಾಗಿ ಅಳವಡಿಸಿಕೊಳ್ಳುವ ಮಾಧ್ಯಮ ಯಶಸ್ವಿಯಾಗುವುದು ಖಚಿತ.

**ಪ್ರೇಕ್ಷಕನಿಗೆ ಏನು ಬೇಕು :** "ಲೋಕೋಭಿನ್ನರುಚಿಃ"; ಎಂದು ಹೇಳುವ ಹಾಗೆ ಸಮಸ್ತ ಜನರಲ್ಲಿ ಭಿನ್ನ ಅಭಿರುಚಿಗಳಿರುವುದು ಸ್ವಾಭಾವಿಕ. ಒಬ್ಬ ಪ್ರೇಕ್ಷಕನಿಗೆ ಕ್ರೀಡಾ ಕಾರ್ಯಕ್ರಮದಲ್ಲಿ ಆಸಕ್ತಿಯಾದರೆ, ಮತ್ತೊಬ್ಬರಿಗೆ ಒಳಾಂಗಣ ಅಲಂಕರಣದ ವಿಷಯ ಇಷ್ಟವಾಗಬಹುದು. ಆದ್ದರಿಂದ ಒಂದು ಮಾಧ್ಯಮ ತನ್ನ ವೀಕ್ಷಕನ ಆಸೆ, ಆಸಕ್ತಿ, ಅಭಿರುಚಿ, ಅವಶ್ಯಕತೆ ಹಾಗೂ ಅಭಿಪ್ರಾಯವನ್ನು ಪರಿಗಣಿಸಿಕೊಂಡು ಒಂದು ದಿನದ ಕಾರ್ಯಕ್ರಮಗಳನ್ನು ರೂಪಿಸಬೇಕು. ಅದರಲ್ಲಿ ಎಲ್ಲ ಸಾಮಾಜಿಕಾರ್ಥಿಕ ಸ್ತರದ ಪ್ರೇಕ್ಷಕರು, ವಿವಿಧ ಕಸುಬುಗಳನ್ನು ಆಶ್ರಯಿಸಿದ ಪ್ರೇಕ್ಷಕರು, ಲಿಂಗ, ಧರ್ಮ, ವಯೋಮಾನ, ವಿದ್ಯಾರ್ಹತೆ, ಹಾಗೂ ಪ್ರಾದೇಶಿಕತೆಗನ್ವಯ ಗುರುತಿಸಲ್ಪಡುವ ಪ್ರೇಕ್ಷಕರು ಹೀಗೆ ಎಲ್ಲ ಗುಂಪುಗಳ ಪ್ರೇಕ್ಷಕರಿಗೆ ಬೇಕಾಗುವ ಕಾರ್ಯಕ್ರಮಗಳನ್ನು ಅಳವಡಿಸಿರಬೇಕು. ಉದಾಹರಣೆಯಾಗಿ ಕೆಲವು ವಾಹಿನಿಗಳ ಕಾರ್ಯಕ್ರಮ ಪಟ್ಟಿಗಳನ್ನು ಗಮನಿಸೋಣ. (ಪಟ್ಟಿ ೬ರಿಂದ ೧೪ರವರೆಗೆ)

ಉದಯ ಟಿವಿ ಪ್ರತಿ ಮುಂಜಾನೆ ಎಲ್ಲ ಧರ್ಮದ ಹಾಡುಗಳನ್ನೊಳಗೊಂಡ (ಒಂದೊಂದು ದಿನ ಒಂದು ಧಾರ್ಮಿಕ ಪದ್ಧತಿಯ ಗೀತೆಗಳು) ಕಾರ್ಯಕ್ರಮದೊಂದಿಗೆ ದಿನ ಆರಂಭಿಸುತ್ತದೆ. ನಂತರ ಯೋಗಾಭ್ಯಾಸ, ಆ ಮೇಲೆ ದಿನಭವಿಷ್ಯ, ತದನಂತರ ಕುಮಾರವ್ಯಾಸ ಭಾರತ ಕಾವ್ಯವಾಚನ, ಅದಾದ ಮೇಲೆ ಸಂಗೀತ ಕಾರ್ಯಕ್ರಮ, ಬೆಳಗಿನ ವಾರ್ತೆಗಳು, ಗಣ್ಯ ವ್ಯಕ್ತಿಯೊಬ್ಬರ ಸುದೀರ್ಘ ಪರಿಚಯ, ನಂತರ ಮಹಿಳೆಯರಿಗಾಗಿ ಅಡಿಗೆ, ಕಸೂತಿ, ಪ್ರಸಾಧನ ಮುಂತಾದ ವಿಷಯಗಳಲ್ಲಿ ತಿಳುವಳಿಕೆ ನೀಡುವ 'ವನಿತೆ' ನಂತರ ಕೆಲವು ಚಿತ್ರಗೀತೆಗಳು. ೧೦ ಗಂಟೆಯಿಂದ ೧೨ರವರೆಗೆ ಮನೆಯಲ್ಲೇ ಇರುವವರಿಗಾಗಿ ಹಿಂದಿನ ರಾತ್ರಿ ಪ್ರಸಾರ ಮಾಡಿದ ಅರ್ಧಗಂಟೆಯ ೪ ಧಾರಾವಾಹಿಗಳು. ಇದರಲ್ಲಿ ಲಘು ಆಸ್ವಾದನೆಯ ವನಿತೆ ಕಾರ್ಯಕ್ರಮವೊಂದನ್ನು ಬಿಟ್ಟರೆ ಉಳಿದ ಎಲ್ಲ ಕಾರ್ಯಕ್ರಮಗಳೂ ಎಲ್ಲ ವೀಕ್ಷಕರಿಗೂ ಹಿಡಿಸಬಹುದಾದ ಸಾಮಾನ್ಯ ಕಾರ್ಯಕ್ರಮಗಳೇ. ದಿನದ ಉಳಿದ ಭಾಗದಲ್ಲಿ ೨ ವಾರ್ತಾ ಪ್ರಸಾರ, ೧೦ ದೈನಿಕ ಧಾರಾವಾಹಿಗಳು, ವಾರಕ್ಕೊಂದು ಸಿನಿಮಾರಂಗದ 'ಚಿತ್ರವಾರ್ತೆ', 'ಪ್ರಪಂಚ ಪರ್ಯಟನೆ'ಯಂತಹ ಜಗತ್ತಿನ ಸುದ್ದಿ, ಜ್ಯೋತಿಷ್ಯ, ಮನರಂಜನೆಯ 'ಆದರ್ಶ ದಂಪತಿ', ಟಾಪ್-೧೦, ಅಕ್ಷರಮಾಲೆ, ಹಾಸ್ಯಲಾಸ್ಯ, ಮಕ್ಕಳಿಗಾಗಿ ದಿನವೂ ಕಾರ್ಟೂನ್ಸ್, ದಿನಕ್ಕೆರಡು ಚಲನಚಿತ್ರ, ಈ ಮೂಲಕ ಎಲ್ಲ ಬಗೆಯ ಪ್ರೇಕ್ಷಕರನ್ನು ತಲುಪುವ ಪ್ರಯತ್ನವನ್ನು ಉದಯ ವಾಹಿನಿ ಮಾಡುತ್ತಿದೆಯಾದರೂ ಕೆಲವು ನಿರ್ದಿಷ್ಟ ವರ್ಗವನ್ನು ಗಮನಿಸಿದಂತಿಲ್ಲ. ಅವುಗಳಲ್ಲಿ ಗ್ರಾಮೀಣ ಜನತೆ ಬಹಳ ಮುಖ್ಯವಾದ ಒಂದು ವರ್ಗ. ಹಾಗೂ ಮಾಧ್ಯಮವೊಂದರ ಜವಾಬ್ದಾರಿಗಳಲ್ಲಿ ಗ್ರಾಮೀಣ ಸಮಾಜಕ್ಕೆ ಮಾಹಿತಿ/ ತಿಳುವಳಿಕೆ ನೀಡುವುದೂ ಒಂದಾಗಿದೆ. ಹಾಗಾಗಿ ನಾಡಿನ ಕೃಷಿ ಬದುಕಿನ, ಕೃಷಿಕರ ಬದುಕು - ಬವಣೆಯ, ಅವುಗಳಿಗೆ ವೈಜ್ಞಾನಿಕ, ಸಾಮಾಜಿಕ, ಆರ್ಥಿಕ ಪರಿಹಾರಗಳನ್ನು ಸೂಚಿಸುವ ಕೆಲಸವನ್ನು ಈ ಚಾನೆಲ್ ಒಳಗೊಳ್ಳಬೇಕಾದ ಅವಶ್ಯಕತೆಯಿದೆ. ಹಾಗೆಯೇ ವಿಶೇಷ ಪ್ರೇಕ್ಷಕ ವರ್ಗವೆನಿಸಿದ ಮಹಿಳೆಯರಿಗಾಗಿ ಪ್ರಸಾರ ಮಾಡುವ ಕಾರ್ಯಕ್ರಮಗಳು ಲಘುವಾದ ಕಾರ್ಯಕ್ರಮಗಳಾಗಿದ್ದು, ವೈಚಾರಿಕ, ಚಿಂತನಶೀಲ ನೆಲೆಗಳಲ್ಲಿ ನಿಲ್ಲುವುದಿಲ್ಲ. ಹಾಗೆಯೇ ಮಕ್ಕಳಿಗಾಗಿ ಕಾರ್ಟೂನ್ಸ್ ಬಿಟ್ಟರೆ, ವೈಜ್ಞಾನಿಕ ಆಸಕ್ತಿಯ ಮನರಂಜನೀಯ ಸಾಹಿತ್ಯಕ ಅಂಶಗಳುಳ್ಳ ಅಥವಾ ನೀತಿ ಬೋಧಕ ಕಾರ್ಯಕ್ರಮಗಳೂ ಪಟ್ಟಿಯಲ್ಲಿಲ್ಲ. ಇನ್ನು ಕ್ರೀಡೆ ಬಹುತೇಕ ನಿರ್ಲಕ್ಷಿತ ವಲಯವೇ ಆಗಿ ಹೋಗಿರುವಂತಿದೆ.

ಬೆಳಿಗ್ಗೆ, ಮಧ್ಯಾಹ್ನ ಹಾಗೂ ರಾತ್ರಿ ಅರ್ಧಗಂಟೆಯ ಮೂರು ಸುದೀರ್ಘ ವಾರ್ತಾ ಪ್ರಸಾರ ಈಗ ಉದಯ ವಾಹಿನಿಯಲ್ಲಿ ಪ್ರಸಾರವಾಗುತ್ತಿದೆ. ೨೪ ಗಂಟೆಗಳ ಉದಯ ನ್ಯೂಸ್ ವಾಹಿನಿ ಕಾರ್ಯಾರಂಭ ಮಾಡುವುದಕ್ಕೆ ಮೊದಲು ಸಂಜೆ ೬ ಹಾಗೂ ರಾತ್ರಿ ೧೦ ಗಂಟೆಗೆ ಇನ್ನೆರಡು ವಾರ್ತಾ ಬುಲೆಟಿನ್ ಪ್ರಸಾರವಾಗುತ್ತಿದ್ದವು. ಮೌಲ್ಯಿಕವಾದ, ನಾಡು ನುಡಿಯ ಬಗ್ಗೆ ಅರಿವು ಕಾಳಜಿ ಮೂಡಿಸುವ ಸಾಕ್ಷ್ಯಚಿತ್ರಗಳನ್ನು ಪ್ರಸಾರ ಮಾಡದೇ ಇರುವುದೂ ಈ ವಾಹಿನಿಗೆ ಹೆಚ್ಚಿನ ಮೌಲ್ಯ ತಂದುಕೊಡುತ್ತಿಲ್ಲ.

ಇದೇ ಅಂಶಗಳನ್ನು ನಾವು ಈಟೀವಿ ವಾಹಿನಿಯ ಕಾರ್ಯಕ್ರಮಗಳ ಪಟ್ಟಿಯಲ್ಲಿಯೂ ಗಮನಿಸಬಹುದು. ಪ್ರಾರ್ಥನೆಯೊಂದಿಗೆ ದಿನವನ್ನು ಪ್ರಾರಂಭಿಸಿ, ರೈತಾಪಿ ಬಂಧುಗಳಿಗಾಗಿ 'ಅನ್ನದಾತ' ಎಂಬ ಕಾರ್ಯಕ್ರಮವನ್ನು ವಾರದ ಏಳು ದಿನಗಳೂ ತಪ್ಪದೇ ಪ್ರಸಾರ ಮಾಡಲಾಗುತ್ತದೆ. ಅದರ ನಂತರ ಅರ್ಧಗಂಟೆಗಳ ವಾರ್ತಾಪ್ರಸಾರ, ಆಮೇಲೆ ಅರ್ಧ ಗಂಟೆಯ 'ಹಲೋ ಇಂಡಿಯಾ' ಎನ್ನುವ ಮಾಹಿತಿ/ಪ್ರಚಲಿತ ವಿದ್ಯಮಾನದ ಕಾರ್ಯಕ್ರಮ ದಿನವೂ ಪ್ರಸಾರವಾಗುತ್ತಿದೆ. ವಾರಕ್ಕೆ ಐದು ದಿನ ಯುವ ಜನಾಂಗಕ್ಕಾಗಿ 'ಚುರುಮುರಿ', ಲಘು ಆಸ್ವಾದನೆಯ ಹುರಿಗಾಳು, ಕಾಫಿಕ್ಲಬ್ಬು, ಸಿಂಹಾವಲೋಕನ, ಅಧಿಕ ಪ್ರಸಂಗ, ಆ್ಯಡ್‌ಚಾಟ್, ಉಲ್ಟಾಪಲ್ಟಾ ಕಾರ್ಯಕ್ರಮಗಳು ಪ್ರಸಾರವಾಗುತ್ತಿವೆ. ಮಕ್ಕಳನ್ನೂ ಪ್ರೇಕ್ಷಕ ವರ್ಗದಲ್ಲಿ ಹಿಡಿದಿಟ್ಟುಕೊಳ್ಳಲು 'ಪುಟಾಣಿ ಡಾಟ್‌ಕಾಮ್', 'ಚಿಗುರು', ಮಹಿಳೆಯರಲ್ಲಿ ಹಾಗೂ ಮಹಿಳೆಯರ ಬಗ್ಗೆ ಚಿಂತನೆಗೆ ಪ್ರಚೋದಿಸುವ 'ಸಖೀ' ಕಾರ್ಯಕ್ರಮದಲ್ಲಿ ಕಲ್ಯಾಣಿ, ಪಂಚಮಿ, ಮುಂತಾದ ವಿವಿಧ ಶೀರ್ಷಿಕೆಗಳಲ್ಲಿ ಮಹಿಳೆಯರ ವಿವಿಧ ಆಯಾಮಗಳು ಉದಾಹರಣೆಗೆ: ಅವಳ ಸಮಸ್ಯೆ, ಅವಳ ಸೋಲು ಗೆಲುವು, ಅವಳ ಆರೋಗ್ಯ, ಅವಳ ವೃತ್ತಿ ಬದುಕು, ಅವಳ ಅಂತರಂಗದೊಂದಿಗೆ ಸಮಾಲೋಚನೆ ಎಲ್ಲವೂ ಸೇರಿವೆ. ಹಾಗೆ ನೋಡಿದರೆ ಈ ವಾಹಿನಿಯಲ್ಲಿ ಪ್ರಸಾರವಾಗುತ್ತಿರುವ 'ಸಖೀ' ಕಾರ್ಯಕ್ರಮಗಳು ಗಂಭೀರ ಚಿಂತನೆಯ ಕಾರ್ಯಕ್ರಮಗಳೇ ಆಗಿದ್ದು, ಸರಳ, ಲಘು ಆಸ್ವಾದನೆಯ ಕಾರ್ಯಕ್ರಮಗಳು ಇದರಲ್ಲಿ ಸೇರಿಲ್ಲ.

ವಿಶೇಷವೆಂದರೆ ಈ ವಾಹಿನಿಯ ವಾರ್ತಾ ಪ್ರಸಾರಗಳು. ಪ್ರತಿ ಗಂಟೆಗೊಮ್ಮೆ ಒಂದು ಚಿಕ್ಕ 'ಮುಖ್ಯಾಂಶ'ಗಳಂತಹ ವಾರ್ತಾ ಪ್ರಸಾರ. ಬೆಳಿಗ್ಗೆ, ಮಧ್ಯಾಹ್ನ, ಸಂಜೆ ಹಾಗೂ ರಾತ್ರಿ ಒಟ್ಟು ೪, ಅರ್ಧ ಗಂಟೆಯ ಸುದೀರ್ಘ 'ವಾರ್ತೆಗಳು' ಅದರಲ್ಲೂ ಸಂಜೆ ೭ರ ಪ್ರಸಾರದಲ್ಲಿ ಸಾಮಾನ್ಯ ವಾರ್ತೆಗಳು ನಂತರ 'ಕನ್ನಡನಾಡಿ' ಎನ್ನುವ ಸಂಪೂರ್ಣವಾಗಿ ಪ್ರಾದೇಶಿಕ ವಾರ್ತಾ ಸಂಚಿಕೆ, ಬಜೆಟ್‌ನಂತಹ ಸಂದರ್ಭದಲ್ಲಿ ಸುದ್ದಿ ವಿಶ್ಲೇಷಣೆ ಹೀಗೆ ಈಗಷ್ಟೇ ಹುಟ್ಟಿ ಬಂದ ಈಟೀವಿ ಕನ್ನಡ ವಾಹಿನಿ ಸಾಕಷ್ಟು ಭರವಸೆ ಮೂಡಿಸಿದ ವಾಹಿನಿ ಎನಿಸಿಕೊಂಡಿದೆ.

'ಸರೋಜಿನಿ', 'ಬೆಳ್ಳಿತೆರೆ', 'ಸೃಷ್ಟಿ' ಮೂರು ದೈನಿಕ ಧಾರಾವಾಹಿಗಳು, ೭ ಸಾಪ್ತಾಹಿಕ ಧಾರಾವಾಹಿಗಳು, ದಿನಕ್ಕೆರಡು ಚಲನಚಿತ್ರ, ರಂಗಭೂಮಿಯನ್ನು ಪರಿಚಯಿಸುವ ಮೌಲ್ಯಿಕವಾದ 'ನೇಪಥ್ಯ', 'ಮಾಸ್ಟರ್', ಸುಗಮ ಸಂಗೀತದ 'ನಾದಲೀಲೆ', 'ಮಾತುಕತೆ', 'ಅಚ್ಚುಮೆಚ್ಚು', 'ಏಕ-ಅನೇಕ' ಇವು ವಾರಕ್ಕೊಂದು ಕಾರ್ಯಕ್ರಮಗಳು. ಬೆಳಿಗ್ಗೆ ೬ ರಿಂದ ಮಧ್ಯರಾತ್ರಿ ೧ ರವರೆಗೆ ನಿರಂತರವಾಗಿ ಜರುಗುವ ಕಾರ್ಯಕ್ರಮಗಳಲ್ಲಿ ಫಿಲ್ಲರ್ಸ್ (ಕಾಲ ತುಂಬಲು ಬಳಸುವ ಲಘು ಕಾರ್ಯಕ್ರಮಗಳು) ಇರದೇ ಇರುವುದು ಒಟ್ಟಾರೆ ದಿನವಹೀ ಕಾರ್ಯಕ್ರಮದ ಬಂಧವನ್ನು ಸಡಿಲಗೊಳಿಸುವುದಿಲ್ಲ. ರಾತ್ರಿ ೧೧ರಿಂದ ಬೆಳಿಗ್ಗೆ ೬ರವರೆಗೆ ಹೆಚ್ಚಿನ ವೀಕ್ಷಕರಿಲ್ಲದ ಸಮಯದಲ್ಲಿ 'ಚಿತ್ರಯಾಮಿನಿ' ಎನ್ನುವ ಕಾರ್ಯಕ್ರಮದಲ್ಲಿ ಚಿತ್ರಗೀತೆಗಳ ಪ್ರಸಾರ ಫಿಲ್ಲರ್‌ನಂತೆ ಬಳಕೆಯಾದರೂ ಇತಿಮಿತಿಯಲ್ಲಿದೆ ಎನ್ನಬಹುದು. ಈಟೀವಿ ವಾಹಿನಿಯ ಪಟ್ಟಿಯಲ್ಲಿ ಮಹಿಳೆ, ಮಕ್ಕಳು, ಯುವಕರು, ಕೃಷಿಕರು, ಸಂಗೀತ ಪ್ರಿಯರು, ಸುದ್ದಿ ಬಯಸುವವರು, ಕಥಾ ವೀಕ್ಷಕರು, ರಂಗ ಕಲಾವಿದರು, ಹೀಗೆ ಬಹುತೇಕ ಎಲ್ಲ ಅಭಿರುಚಿ, ವಯೋವರ್ಗದ ಜನರಿಗೆ ಹಿಡಿಸಬಹುದಾದ ಕಾರ್ಯಕ್ರಮಗಳಿವೆ. ಕ್ರೀಡೆ, ಆರೋಗ್ಯ ಹಾಗೂ ಮುಖ್ಯ ಘಟನೆ, ಸಭೆ, ಸಮಾರಂಭಗಳ ನೇರ ಪ್ರಸಾರವಿಲ್ಲದೇ ಇರುವುದು ಗಮನಾರ್ಹ.

ಈ ಎರಡು ವಾಹಿನಿಗಳನ್ನೇ ಡಿಡಿ-೧ರ ಜೊತೆ ಹೋಲಿಸಿ ನೋಡಿದಾಗ ಒಂದು ಕಾಲಕ್ಕೆ ಜನಮನ ಗೆದ್ದಿದ್ದ ಡಿಡಿ-೧ ಬರು ಬರುತ್ತಾ ಯಾಕೆ ಸೊರಗುತ್ತಿದೆ ಎಂದು ಗುರುತಿಸಬಹುದು. ಇಷ್ಟೆಲ್ಲಾ ಖಾಸಗಿ ವಾಹಿನಿಗಳು ಕಾರ್ಯಾರಂಭ ಮಾಡಿದ್ದರೂ ಡಿಡಿ-೧ ಕನ್ನಡಿಗರಿಗಾಗಿ ೨೪ ಗಂಟೆ ಕನ್ನಡದ ಕಾರ್ಯಕ್ರಮ ನೀಡುವುದು ಸಾಧ್ಯವಾಗಿಲ್ಲ. ಇಲ್ಲಿ ಲಭ್ಯವಿರುವ ಪಟ್ಟಿಯ ಪ್ರಕಾರ ಭಾನುವಾರ ಹೊರತುಪಡಿಸಿ ಉಳಿದ ವಾರದ ಆರು ದಿನಗಳೂ ಬೆಳಿಗ್ಗೆ ೫.೨೫ರಿಂದ ಮಧ್ಯಾಹ್ನ ೨.೩೦ವರೆಗೆ ದೆಹಲಿ ಕೇಂದ್ರದಿಂದ ಪ್ರಸಾರ ಮಾಡುವ ರಾಷ್ಟ್ರೀಯ ಕಾರ್ಯಕ್ರಮಗಳನ್ನೇ ಕನ್ನಡಿಗರಿಗೂ ನೀಡುತ್ತಿರುವುದು ವೇದ್ಯವಾಗುತ್ತಿದೆ. ಶನಿವಾರವಂತೂ ಮೂರನೇ ಟ್ರಾನ್ಸ್‌ಮಿಷನ್‌ನಲ್ಲಿ (೬.೩೦ ರಿಂದ ೮ ರವರೆಗೆ) ಕೇವಲ ೨ ಗಂಟೆಗಳ ಅವಧಿಯ ಕನ್ನಡ ಕಾರ್ಯಕ್ರಮಗಳ ಪ್ರಸಾರ ಮಾತ್ರ ಕನ್ನಡಿಗರಿಗೆ ಲಭ್ಯವಾಗುತ್ತಿದೆ. ಸಾಧಾರಣವಾಗಿ ಜನರೆಲ್ಲ ಆರಾಮವಾಗಿ ಮನೆಯಲ್ಲೇ ಇದ್ದು ಟಿವಿ ನೋಡಬಹುದಾದ ಭಾನುವಾರದ ದಿನ ಬೆಳಿಗ್ಗೆ ಅರ್ಧಗಂಟೆ (೮.೩೦ ರಿಂದ ೯ ಸಿನಿಮಾ ಸಂಚಿಕೆ ಕಾರ್ಯಕ್ರಮ) ಮಧ್ಯಾಹ್ನ ೧ ಗಂಟೆ ಹಾಗೂ ಸಂಜೆ ೪ರಿಂದ ೬.೪೫ರವರೆಗೆ ೨ ಗಂಟೆ ೪೫ ನಿಮಿಷಗಳ ಕಾಲ ಮಾತ್ರ ಅಂದರೆ ಒಟ್ಟು ೪ ಗಂಟೆ ೧೫ ನಿಮಿಷ ಅವಧಿಯ ಕನ್ನಡ ಕಾರ್ಯಕ್ರಮಗಳನ್ನು ಡಿಡಿ-೧ ಪ್ರಸಾರ ಮಾಡಿದೆ.

ಕನ್ನಡಿಗರಿಗೆ ಅದರಲ್ಲೂ ಮುಖ್ಯವಾಗಿ ಗ್ರಾಮೀಣ ಕನ್ನಡಿಗರಿಗೆ, ಬಹುತೇಕ ಹಿಂದಿಯಲ್ಲೇ ಪ್ರಸಾರಗೊಳ್ಳುವ ರಾಷ್ಟ್ರೀಯ ಕಾರ್ಯಕ್ರಮಗಳು ಎಷ್ಟು ಪ್ರಿಯವಾಗಬಹುದು? ಕನ್ನಡದ ಕಾರ್ಯಕ್ರಮಗಳನ್ನೇ ದಿನವಿಡೀ ಪ್ರಸಾರ ಮಾಡುವ ಖಾಸಗಿ ವಾಹಿನಿಗಳ ಕಡೆಗೆ ಅವರು ಹೋಗದೇ ಇರಬಹುದೇ? ಇನ್ನು ಉಳಿದ ದಿನಗಳಲ್ಲಿ ಮಧ್ಯಾಹ್ನ ೨.೩೦ಯಿಂದ ರಾತ್ರಿ ೮ ಗಂಟೆಯವರೆಗೆ ಪ್ರಸಾರವಾಗುವ ಕನ್ನಡದ ಕಾರ್ಯಕ್ರಮಗಳಲ್ಲಿ ೧೫ ನಿಮಿಷಗಳ ಒಂದು ವಾರ್ತಾ ಪ್ರಸಾರ, ಅರ್ಧಗಂಟೆಯ ದೈನಿಕ ಧಾರಾವಾಹಿಗಳು, ವಾರಕ್ಕೊಂದು ಕೊಂಕಣಿ-ಕೊಡವ, (೨೦ ನಿಮಿಷ) ಮಹಿಳೆಯರಿಗಾಗಿ 'ಭಗಿನಿ' (೨೦ ನಿಮಿಷ), ಆರೋಗ್ಯ, ಮಕ್ಕಳ ಹಾಗೂ ಯುವಕರಿಗಾಗಿ ವಾರಕ್ಕೆ ಒಂದೊಂದು ಕಾರ್ಯಕ್ರಮ, ರೈತರಿಗಾಗಿ ವಾರಕ್ಕೆರಡು (೧/೨ ಗಂಟೆಯ) ಕಾರ್ಯಕ್ರಮಗಳು, ೫ ಸಾಪ್ತಾಹಿಕ ಧಾರಾವಾಹಿಗಳು, ಒಂದು ೧/೨ ಗಂಟೆಯ ಸುಗಮಸಂಗೀತ ಕಾರ್ಯಕ್ರಮ ಪ್ರಸಾರವಾಗುತ್ತಿವೆ. ಕನ್ನಡಿಗರ ಜ್ಞಾನದಾಹಕ್ಕೆ, ಕನ್ನಡಿಗರಿಗೆ ಕೈ ತುಂಬಿ ಕೊಡಲು ಮಾಧ್ಯಮಗಳ ಬಳಿ ಇರುವ ಸರಕಿಗೆ ಡಿಡಿ-೧ರ ಇಷ್ಟು ಕಾರ್ಯಕ್ರಮಗಳು ಸಾಕೆ? ಹಾಗೆ ನೋಡಿದರೆ ಡಿಡಿ-೧ ತನ್ನ ಉಚ್ಛ್ರಾಯದ ದಿನಗಳಲ್ಲಿ ನಾಟಕ, ಸಾಹಿತ್ಯ, ಕಲೆ, ಕ್ರೀಡೆ, ನೃತ್ಯ, ಸಂಗೀತ, (ಲಘು, ಶಾಸ್ತ್ರೀಯ, ವಾದ್ಯ) ಆರೋಗ್ಯ, ಮಹಿಳೆ ಮತ್ತು ಮಕ್ಕಳು ಯುವ ಜನತೆ, ಪ್ರತಿಭಾಶೋಧ, ಗಣ್ಯವ್ಯಕ್ತಿಗಳ ಜೀವನ-ಸಾಧನೆ, ಕೈಗಾರಿಕೆ, ಅನೇಕಾನೇಕ ಸಾಕ್ಷ್ಯಚಿತ್ರಗಳನ್ನು ನೀಡಿದ ಹೆಗ್ಗಳಿಕೆ ಹೊಂದಿರುವ ವಾಹಿನಿಯೂ ಆಗಿದ್ದು, ಅದನ್ನು ಇನ್ನಷ್ಟು ರೂಢಿಸಿಕೊಳ್ಳದೆ ಹಿನ್ನಡೆಯಿಡಲು ಕಾರಣವೇನು ಎಂದೂ ಗಮನಿಸಬೇಕು. ಇಷ್ಟೆಲ್ಲಾ ಕಾರ್ಯಕ್ರಮಗಳನ್ನು ನೀಡುತ್ತಿದ್ದ ಈ ವಾಹಿನಿ ತನ್ನ ವೀಕ್ಷಕನ ಆಸೆಯಂತೆ ಕಾರ್ಯಕ್ರಮಗಳನ್ನು ನೀಡುತ್ತಿತ್ತೇ? ಅವನಿಗೇನು ಬೇಕು ಎನ್ನುವುದರತ್ತ ಗಮನ ಹರಿಸಿತ್ತೆ? ಎಂದೂ ಒರೆಹಚ್ಚಿ ನೋಡಬೇಕಾಗಿದೆ.

**ಪ್ರೇಕ್ಷಕನಿಗೆ ಹೇಗೆ ಬೇಕು? :** ತನಗೇನು ಬೇಕು ಅದನ್ನು ಹುಡುಕಿಕೊಂಡು ಹೋಗುವ ಆಯ್ಕೆಯ ಸ್ವಾತಂತ್ರ್ಯ ಹಾಗೂ ಅವಕಾಶ ಎರಡೂ ಇಂದಿನ ದಿನ ವೀಕ್ಷಕನಿಗಿದೆ. ತನಗೇನು ಬೇಕು ಎಂದಷ್ಟೇ ಅಲ್ಲ ತನಗೆ ಹೇಗೆ ಬೇಕು ಎಂದೂ ಅವನು ತಿಳಿಸುತ್ತಾನೆ. ತನಗೆ ಬೇಕಾದ ಹಾಗೆ ಆ ಕಾರ್ಯಕ್ರಮವಿರದಿದ್ದರೆ, ಅದರ ವಸ್ತು ತನಗೆ ಬೇಕಾದ್ದಾಗಿದ್ದರೂ ವಾಹಿನಿಯನ್ನು ಬದಲಿಸಲು ಅವನು ಹಿಂಜರಿಯುವುದಿಲ್ಲ.

ಹಾಗಾದರೆ ವೀಕ್ಷಕನಿಗೆ ಕಾರ್ಯಕ್ರಮ ಹೇಗೆ ಬೇಕು?

ಕಾರ್ಯಕ್ರಮಕ್ಕೆ ಕಾಲದ ಪರಿಮಿತಿ ಇರಬೇಕಾದ್ದು ಅತ್ಯವಶ್ಯಕ. ಕನ್ನಡದ ಪ್ರತಿಯೊಂದು ಕಾರ್ಯಕ್ರಮಕ್ಕೂ ೧/೨ ಗಂಟೆ ಸೂಕ್ತ ಕಾಲಾವಧಿ. ಅರ್ಧಗಂಟೆಗಿಂತ ಕಡಿಮೆಯಾದರೆ ಅನೇಕ ಸಂದರ್ಭಗಳಲ್ಲಿ ಹೇಳಬೇಕಾದ್ದನ್ನು ಹೇಳಲಾರದೆ

ಬಿಡಬೇಕಾಗುತ್ತದೆ. ಉದಾಹರಣೆಗೆ ಡಿಡಿ-೧ರಲ್ಲಿ ಮೂರನೇ ಪ್ರಸಾರದಲ್ಲಿ ಮಂಗಳವಾರ ೫.೪೦ಕ್ಕೆ ಆರೋಗ್ಯ ಕಾರ್ಯಕ್ರಮ, ಬುಧವಾರ ಅದೇ ಸಮಯಕ್ಕೆ ಯುವ ಕಾರ್ಯಕ್ರಮ, ಶುಕ್ರವಾರವೂ ಅದೇ ವೇಳೆಗೆ ಮಕ್ಕಳ ಕಾರ್ಯಕ್ರಮ ಪ್ರಸಾರವಾಗುತ್ತದೆ. ಈ ಕಾರ್ಯಕ್ರಮಗಳಿಗೆ ನೀಡಿರುವ ಕಾಲಾವಧಿ ಕೇವಲ ೨೦ ನಿಮಿಷಗಳು (೫.೪೦ ರಿಂದ ೬ ಗಂಟೆವರೆಗೆ). ಇಷ್ಟು ಸಣ್ಣ ಅವಧಿಯಲ್ಲಿ ಎಷ್ಟು ವಿಚಾರಗಳನ್ನು ತಿಳಿಸಬಹುದು? ಹಾಗೆಯೇ ವಾರ್ತಾ ಪ್ರಸಾರ. ಖಾಸಗಿ ವಾಹಿನಿಗಳು ದಿನವಿಡೀ ೨೪ ಗಂಟೆಗಳೂ, ಕೆಲವು ಗಂಟೆಗೊಂದರಂತೆಯೂ ವಾರ್ತೆಗಳನ್ನು ಪ್ರಸಾರ ಮಾಡುತ್ತಿರುವ ಇಂದಿನ ದಿನಗಳಲ್ಲಿ ಡಿಡಿ-೧ರಲ್ಲಿ ದಿನಕ್ಕೆ ಒಂದೇ ಒಂದು ವಾರ್ತಾ ಪ್ರಸಾರ. ಅದೂ ಕೇವಲ ೧೫ ನಿಮಿಷಗಳ ಅವಧಿಯದು. ಚಂದನದಲ್ಲಿ ಅದೂ ಸೇರಿದಂತೆ ಬೆಳಿಗ್ಗೆ ಮತ್ತೊಂದು ವಾರ್ತಾಪ್ರಸಾರ ಮಾತ್ರ ನಡೆಯುತ್ತಿರುವುದು ಗಮನಾರ್ಹ. ಇಂದಿನ ಮಾಹಿತಿ ಯುಗದಲ್ಲಿ ಇಷ್ಟು ಸಾಕೆ? ಪ್ರೇಕ್ಷಕನನ್ನು ಡಿಡಿ-೧ರಲ್ಲಿ ೨೪ ಗಂಟೆ ಹಾಗೂ ಚಂದನದಲ್ಲಿ ಸುಮಾರು ೧೨ ಗಂಟೆಗಳ ಕಾಲ ಕಾಯಿಸಬೇಕೆ? ಎಂದೂ ಯೋಚಿಸಬೇಕಾಗುತ್ತದೆ.

ಇನ್ನು ಕೆಲವು ಕಾರ್ಯಕ್ರಮಗಳನ್ನು ದೀರ್ಘವಾಗಿ ಎಳೆಯುವುದೂ ಸರಿಯಲ್ಲ. ಈ ಬಗ್ಗೆ ಖಾಸಗಿ ವಾಹಿನಿಗಳು ವಹಿಸುವ ಎಚ್ಚರವನ್ನು ಗಮನಿಸಬಹುದು. ಉದಾಹರಣೆಗೆ ಉದಯ ವಾಹಿನಿಯ ಮೊದಲ ಪ್ರಸಾರದ ಕಾರ್ಯಕ್ರಮಗಳನ್ನು ಪಟ್ಟಿಯಲ್ಲಿ ಇರುವ ಕುಮಾರವ್ಯಾಸ ಭಾರತ ವಾಚನವನ್ನು ಇನ್ನಷ್ಟು ದೀರ್ಘಗೊಳಿಸಿದರೆ ಪ್ರೇಕ್ಷಕನಿಗೆ ಬೇಜಾರಾಗಬಹುದು. ಅಂತಹ ಕಾರ್ಯಕ್ರಮಗಳು ಚುಟುಕಾಗಿಯೂ, ಅರ್ಥಪೂರ್ಣವಾಗಿಯೂ ಇರಬೇಕು.

ಪ್ರೇಕ್ಷಕನ ನಾಡಿ ಮಿಡಿತಕ್ಕೆ ಅನುಗುಣವಾಗಿಯೇ ಕಾರ್ಯಕ್ರಮಗಳು ನಿರೂಪಿತವಾಗಬೇಕು. ಕಾರ್ಯಕ್ರಮವನ್ನು ಪ್ರಸ್ತುತ ಪಡಿಸುವವರು ಪ್ರೇಕ್ಷಕನಿಗೆ ಅಭಿಮುಖವಾಗಿ ಕುಳಿತು ಕಣ್ಣು ಕಣ್ಣಿನ ನಡುವೆ ಸಂಪರ್ಕ ಸಾಧಿಸುವಂತಿರಬೇಕು. ವೀಕ್ಷಕನ ಕಣ್ಣಲ್ಲಿ ಕಣ್ಣಿಟ್ಟು ನೋಡದ ಹೊರತು, ವೀಕ್ಷಕನಿಗೆ ಅವರು ತಮ್ಮೊಂದಿಗೆ ಮಾತಾಡುತ್ತಿದ್ದಾರೆ ಎಂದೆನಿಸುವುದೇ ಇಲ್ಲ. ಹುಬ್ಬಿನ ಏರಿಳಿಯುವಿಕೆಯೂ, ಮಾತಿನಲ್ಲಿ ನಿರ್ದಿಷ್ಟ ಪದಗಳಿಗೆ ಹೆಚ್ಚಿನ ಒತ್ತು ನೀಡುವುದೂ ಪ್ರಸ್ತುತಪಡಿಸುವ ಸಾಮರ್ಥ್ಯವನ್ನು ಹೆಚ್ಚಿಸುತ್ತದೆ. ನಿರೂಪಣೆ, ಹೇಳಿಕೆ ನೀಡುವವರ ತಾಜಾತನ, ಮಾತಿನ ಸ್ಪಷ್ಟತೆ, ಪುನರಾವರ್ತನಗೊಳ್ಳದ ವಿಷಯ ಮಂಡನೆ, ಉಡುಗೆ-ತೊಡುಗೆಯ ಅಚ್ಚುಕಟ್ಟುತನ, ತಕ್ಕಮಟ್ಟಿನ ಹಸನ್ಮುಖತೆಯನ್ನು ಪ್ರೇಕ್ಷಕ ಬಯಸುತ್ತಾನೆ. ಅಂದ ಮಾತ್ರಕ್ಕೆ ಗಣ್ಯ ವ್ಯಕ್ತಿಯೊಬ್ಬರ ನಿಧನವನ್ನೋ, ಕ್ರೀಡೆಯಲ್ಲಿ ಉಂಡ ಸೋಲನ್ನೋ, ಭೂಕಂಪದಂತಹ ದುಃಖದ ಸಂಗತಿಯನ್ನೋ ಹೇಳುವಾಗಲೂ ತುಟಿಯ ಮರೆಯಲ್ಲಿ ನಗುವನ್ನು ತಂದುಕೊಳ್ಳದಂತೆ ಎಚ್ಚರ ವಹಿಸಬೇಕು. ಆದ್ದರಿಂದಲೇ ಕಾರ್ಯಕ್ರಮ ಪ್ರಸ್ತುತ ಪಡಿಸುವವರು ಆದಷ್ಟು ನಿರ್ಲಿಪ್ತರಾಗಿರುವುದೇ ಸೂಕ್ತ ಎನ್ನಬಹುದು.

ಕಾರ್ಯಕ್ರಮದ ವಸ್ತು ಹಾಗೂ ಮಂಡಿಸುವ ವಿಧಾನ ಪ್ರೇಕ್ಷಕನಿಗೆ ಸಮಸ್ಯೆಗಳಂತೆ ಕಾಡುವ ವಿಷಯಗಳನ್ನು ಕುರಿತು ಚರ್ಚಿಸುತ್ತಾ ಅವುಗಳನ್ನು ಸಮಸ್ಯೆಗಳಾಗಿಯೇ ಉಳಿಸದೆ ಅವುಗಳಿಗೊಂದು ಪರಿಹಾರವನ್ನು ಸೂಚಿಸಬೇಕಾದ್ದು ಅತ್ಯಂತ ಅವಶ್ಯಕ. ಸಂದರ್ಶನ ಕಾರ್ಯಕ್ರಮಗಳಲ್ಲಿ ಸಂದರ್ಶನ ಮಾಡುವವರು ಮತ್ತು ವ್ಯಾಖ್ಯಾನ ನೀಡುವವರು ಇಬ್ಬರು ಮಾತ್ರ ಇರುವುದು ಹೆಚ್ಚು ಫಲಕಾರಿಯಾಗಲಾರದು. ಸಂದರ್ಶನಗಳು ಪ್ರಶ್ನೋತ್ತರದ ಮಾದರಿಯಲ್ಲಿರಬಾರದು. ಸಂದರ್ಶಕರು ಇಬ್ಬರಿದ್ದರೂ ಒಳ್ಳೆಯದೇ. ಪ್ರೇಕ್ಷಕನಲ್ಲಿ ಹುಟ್ಟುವ ಸಂದೇಹಗಳು ಇಬ್ಬರಲ್ಲಿ ಒಬ್ಬರಿಗಾದರೂ ಮೂಡಬಹುದು. ಅದೇ ರೀತಿ ಚರ್ಚಾ ಕಾರ್ಯಕ್ರಮ ಸಹ.

ಒಂದು ಚರ್ಚಾ ಕಾರ್ಯಕ್ರಮವನ್ನು ನೋಡುತ್ತಾ ಕುಳಿತ ಪ್ರೇಕ್ಷಕನ ಮನಸ್ಸಿನಲ್ಲಿ ಅನೇಕ ಸಂದೇಹಗಳು ಮೂಡಬಹುದು. ಆದರೆ ಆತ ಅವನ್ನು ನಿವಾರಿಸಿಕೊಳ್ಳುವುದು ಹೇಗೆ? ಆ ಕೂಡಲೆ ಕೇಳುವುದಂತೂ ಅಸಾಧ್ಯದ ಮಾತು. ಇನ್ನು ಉಳಿದಂತೆ ಕಾಗದ ಬರೆದು ಕೇಳಿದರೆ ಅದಕ್ಕೆ ಉತ್ತರ ಹೇಗೆ ಸಿಕ್ಕೀತು? ಬದಲಿಗೆ ಸಮಾಜದ ವಿವಿಧ ವರ್ಗಗಳ ಆ ಪ್ರೇಕ್ಷಕರಂತಹ

ಅನೇಕರನ್ನು ಕಾರ್ಯಕ್ರಮದಲ್ಲೇ ತೊಡಗಿಸಿಕೊಂಡರೆ, ಸಾಧಾರಣವಾಗಿ ಸಮಾಜ ಎದುರಿಸುವ ಅನೇಕ ಸಂದರ್ಭಗಳನ್ನು ಕುರಿತು ಸ್ಟುಡಿಯೋ ಒಳಗಿನ ಪ್ರೇಕ್ಷಕ ವರ್ಗ ಪ್ರಶ್ನೆಗಳನ್ನು ಕೇಳಬಹುದು. ಹಾಗೂ ಆ ಕೂಡಲೇ ಉತ್ತರಗಳನ್ನು ಪಡೆಯಬಹುದು. ಇಂತಹ ಪ್ರಯೋಗಾತ್ಮಕ ಪ್ರಯತ್ನಗಳನ್ನು ಈಟೀವಿ ವಾಹಿನಿ ಯಶಸ್ವಿಯಾಗಿ ಮಾಡುತ್ತಿರುವುದು ಗಮನಾರ್ಹ. ಉದಾಹರಣೆಗೆ ಸಖೀ ಮಹಿಳಾ ಸಂಚಿಕೆಗಳು, ಪುಟಾಣಿ ಡಾಟ್ ಕಾಮ್ ಮತ್ತಿತರ ಕಾರ್ಯಕ್ರಮಗಳು ಸಮಾಜದ ಒಂದು ಪುಟ್ಟ ಪ್ರಾತಿನಿಧಿಕ ವರ್ಗದ ಜೊತೆ ಸಂವಾದಿಸುವುದು, ಟಿವಿಯ ಆಚೆಗೆ ಕುಳಿತ ಇಡೀ ಸಮಾಜದ ಜೊತೆಯೇ ಸಂವಾದಿಸಿದಂತಹ ಅನುಭವ ನೀಡುವುದು ಖಚಿತ.

ಟಿವಿ ದೃಶ್ಯ - ಶ್ರವ್ಯ ಮಾಧ್ಯಮ. ದೃಶ್ಯ ಅಥವಾ ಶ್ರವ್ಯ ಸಾಮರ್ಥ್ಯ ಎರಡರಲ್ಲಿ ಒಂದನ್ನು ಬಿಟ್ಟರೂ ಈ ಮಾಧ್ಯಮದ ಪ್ರಭಾವ ಕುಗ್ಗುವುದು ಖಂಡಿತ. ಉದಾಹರಣೆಗೆ ವಾರ್ತಾವಾಚಕಿಯೇ, ಯಾವ ಸುದ್ದಿ ಚಿತ್ರವೂ ಇಲ್ಲದೆ, ಘಟನೆಗಳ ಸಹಜ ಧ್ವನಿಯೂ ಇಲ್ಲದೆ ವಾರ್ತಾ ಸಂಚಿಕೆಯನ್ನು ಓದಿದರೆ, ಕಣ್ಣ ಮುಂದೆ ಆಕೆಯ ಚಿತ್ರವಿದೆ ಅನ್ನುವುದನ್ನು ಬಿಟ್ಟರೆ, ರೇಡಿಯೊಗಿಂತ ಭಿನ್ನವಾಗೇನೂ ಇರುವುದಿಲ್ಲ. ಹಾಗಾಗಿ ಸುದ್ದಿಗೆ ಸಂಬಂಧಿಸಿದ ಅಥವಾ ಸುದ್ದಿಯೇ ಆದ ದೃಶ್ಯಗಳು ಈ ಮಾಧ್ಯಮಕ್ಕೆ ಬೇಕೇ ಬೇಕು. ಹಾಗೆ ಧ್ವನಿ ಕೂಡ. ಘಟನೆಗಳ ಸಹಜ ಧ್ವನಿಯೇ (ambiance Sound) ಈ ಮಾಧ್ಯಮದ ಜೀವಾಳ. ಗುಜರಾತಿನ ಭೂಕಂಪದ ದೃಶ್ಯಗಳನ್ನು ಅಲ್ಲಿನ ಸಹಜ ಸದ್ದು-ಗದ್ದಲ, ಧ್ವನಿ, ಜನರ ರೋಧನಗಳ ಜೊತೆಗೆ ಬಿತ್ತರಿಸಿದರೆ, ಆ ಘಟನೆಯನ್ನು ಕಣ್ಣೆದುರೇ ಪ್ರತ್ಯಕ್ಷವಾಗಿ ನೋಡಿದಂತಹ ಅನುಭವ ಟಿವಿಯ ಪ್ರೇಕ್ಷಕನಿಗಾಗುತ್ತದೆ. ಇಂತಹದಕ್ಕೆ ಯಾವುದೇ ವೀಕ್ಷಕ ವಿವರಣೆ ಬೇಕಾಗುವುದಿಲ್ಲ. ಅದರಲ್ಲೂ ಇಬ್ಬರ ನಡುವಿನ ಮಾತುಕತೆಯಲ್ಲಿ ಸಂದರ್ಭೋಚಿತವಾಗಿ ದೃಶ್ಯಗಳನ್ನು ಸಂಯೋಜಿಸುವುದು ಫಲಕಾರಿ.

**ಪ್ರೇಕ್ಷಕನಿಗೆ ಅದು ಯಾವಾಗ ಬೇಕು? :** ಟಿವಿ ನೋಡುತ್ತಾ ಕೂರುವುದೇ ಒಬ್ಬ ಪ್ರಾಮಾಣಿಕ ಪ್ರೇಕ್ಷಕನ ಕೆಲಸವಲ್ಲ. ತನ್ನ ಇತರೆಲ್ಲ ಕೆಲಸಗಳನ್ನು ಪೂರೈಸಿಕೊಂಡು ನಂತರ ತನ್ನ ಬಿಡುವು ಎನ್ನಬಹುದಾದ ವೇಳೆಯಲ್ಲಿ, ಹಲವೊಮ್ಮೆ ನಿರ್ದಿಷ್ಟ ಕಾರ್ಯಕ್ರಮಗಳನ್ನು ನೋಡುವುದಕ್ಕಾಗಿಯೇ ಬಿಡುವು ಮಾಡಿಕೊಂಡು ಅವುಗಳನ್ನು ವೀಕ್ಷಿಸುತ್ತಾನೆ. ಆದಷ್ಟು ಮಟ್ಟಿಗೆ ಹೆಚ್ಚಿನ ಸಂಖ್ಯೆಯ ಜನರಿಗೆ ಅನುಕೂಲವಾಗುವ ರೀತಿಯಲ್ಲೇ ನಿರ್ದಿಷ್ಟ ಕಾರ್ಯಕ್ರಮಗಳನ್ನು ಸೂಕ್ತ ಸಮಯ/ವೇಳೆಯಲ್ಲಿ ಪ್ರಸಾರ ಮಾಡಬೇಕು. ಉದಾಹರಣೆಗೆ ವಿಶೇಷ ಪ್ರೇಕ್ಷಕ ವರ್ಗವಾದ ಮಹಿಳೆಯರ ಕಾರ್ಯಕ್ರಮಗಳನ್ನು ಉದ್ಯೋಗಸ್ಥ ಮಹಿಳೆಯರೂ ಕೆಲಸದಿಂದ ಹಿಂತಿರುಗಿದ ನಂತರ ನೋಡಲು ಸಿಗುವಂತೆ ವೇಳಾಪಟ್ಟಿ ಸಿದ್ಧಪಡಿಸಬೇಕು. ಉದಾಹರಣೆಗೆ : ಈಟೀವಿಯಲ್ಲಿ ಮಧ್ಯಾಹ್ನ ೧.೩೦ಕ್ಕೆ ಮನೆಯಲ್ಲೇ ಇರುವ ಮಹಿಳೆಯರಿಗಾಗಿ ಸಖೀ ಮಹಿಳಾ ಸಂಚಿಕೆಯನ್ನು ಪ್ರಸಾರ ಮಾಡಲಾಗುತ್ತದೆ. ಆದರೆ ಉದ್ಯೋಗಸ್ಥ ಮಹಿಳೆಯರಿಗೆ ಈ ಕಾರ್ಯಕ್ರಮವನ್ನು ಮಧ್ಯಾಹ್ನದ ಹೊತ್ತು ನೋಡುವುದು ಸಾಧ್ಯವಾಗುವುದಿಲ್ಲ. ಆದ್ದರಿಂದ ಮರುಸಂಜೆ ೫.೩೦ಕ್ಕೆ ಮರುಪ್ರಸಾರ ಮಾಡಲಾಗುತ್ತಿದೆ. ಇನ್ನು ಉದಯ ಟಿವಿಯಲ್ಲಿ ಮಹಿಳೆಯರಿಗಾಗಿ 'ವನಿತೆ' ಎನ್ನುವ ಕಾರ್ಯಕ್ರಮವನ್ನು ಬೆಳಿಗ್ಗೆ ೮.೩೦ಕ್ಕೆ ಪ್ರಸಾರ ಮಾಡಲಾಗುತ್ತಿದೆ. ಆ ಸಮಯ ಉದ್ಯೋಗಸ್ಥ ಮಹಿಳೆಯಾಗಲೀ, ಗಂಡ ಮಕ್ಕಳನ್ನು ಕಛೇರಿ, ಶಾಲೆಗೆ ಕಳಿಸಿಕೊಡುವ ಮನೆಯಲ್ಲಿರುವ ಮಹಿಳೆಯರಾಗಲೀ ಆರಾಮವಾಗಿ ಟಿವಿ ನೋಡುವ ಸಮಯವಲ್ಲ. ಜೊತೆಗೆ ಈ ಕಾರ್ಯಕ್ರಮದ ಮರುಪ್ರಸಾರವೂ ಆಗುತ್ತಿಲ್ಲ.

ಕೃಷಿ ಮಿತ್ರರಿಗಾಗಿ ಬಹುತೇಕ ಎಲ್ಲ ಖಾಸಗಿ ವಾಹಿನಿಗಳೂ ಬೆಳಿಗ್ಗೆ ೭ ಗಂಟೆಯ ಒಳಗೆ ಅಂದರೆ ರೈತಾಪಿ ವರ್ಗ ಹೊಲ ಗದ್ದೆಗೆ ತೆರಳುವ ಮೊದಲೇ ಮಾಹಿತಿ ಪೂರ್ಣ ಕಾರ್ಯಕ್ರಮಗಳನ್ನು ಪ್ರಸಾರ ಮಾಡುತ್ತಿವೆ. ಡಿಡಿ-೧ ಗ್ರಾಮಮಂಗಳ ಎನ್ನುವ ಕಾರ್ಯಕ್ರಮವನ್ನು ರೈತರು ದುಡಿಮೆಯಿಂದ ಮರಳಿದ ಮೇಲೆ ವಿಶ್ರಾಂತರಾಗಿ ಕುಳಿತು ನೋಡುವಂತೆ ಪ್ರಸಾರ ಮಾಡುತ್ತಿದೆ.

ಇನ್ನು ಮನರಂಜನೆ. ಮನಸ್ಸಿಗೆ ಮುದ ಕೊಡುವ, ಸಾಕಪ್ಪಾ ಎನಿಸದ ಹಾಗೆ ಮನರಂಜನೆ ಅಗತ್ಯ. ಬೆಳಿಗ್ಗೆಯಿಂದ ರಾತ್ರಿಯವರೆಗೂ ಅದರಲ್ಲೂ ಪ್ರಮುಖ ಸಮಯದಲ್ಲಿ ಚಲನಚಿತ್ರಗೀತೆಗಳನ್ನೇ ಪ್ರಸಾರ ಮಾಡಿದರೆ ಬೇಸರ ಮೂಡಿಸಬಹುದು. ಸದಾಕಾಲವೂ ಏಕ ರೀತಿಯ ಕಾರ್ಯಕ್ರಮವನ್ನೇ ನೀಡುತ್ತಿದ್ದ ಜೈನ್ ಟಿವಿ (ಆಧ್ಯಾತ್ಮಿಕ ಕಾರ್ಯಕ್ರಮಗಳು) ಕೆಲದಿನಗಳ ನಂತರ ವೀಕ್ಷಕರನ್ನೇ ಕಳೆದುಕೊಂಡಿದ್ದು ಗಮನಾರ್ಹ. ಹಾಗೇ ಮುಖ್ಯವಾಗಿ ಇಡೀ ಕಾರ್ಯಕ್ರಮ ಪಟ್ಟಿಯಲ್ಲೇ ಒಂದು ಅಚ್ಚುಕಟ್ಟುತನವಿರಬೇಕು. ಸಮಯ ಸಮಯಕ್ಕೆ 'ಇಂಥದೇ' ಎಂಬ ನಿರ್ದಿಷ್ಟ ಕಾರ್ಯಕ್ರಮವನ್ನು ನಿಗದಿ ಪಡಿಸಿ, ಅದನ್ನು ಪ್ರಸಾರ ಮಾಡುವ ದಿನ, ಸಮಯದ ಬಗ್ಗೆ ಮುಂಚಿತವಾಗಿಯೇ ಸಾಕಷ್ಟು ಪ್ರಚಾರ ಕೊಟ್ಟಿರಬೇಕು.

ಇಲ್ಲಿ ನೀಡಿರುವ ಪಟ್ಟಿಗಳನ್ನೆ ಗಮನಿಸೋಣ. ಉದಯ ಟಿವಿ ಬೆಳಿಗಿನ ಪ್ರಸಾರದಲ್ಲಿ (ಭಾನುವಾರ ಹೊರತು ಪಡಿಸಿ) ಒಂದೇ ಸಮಯದಲ್ಲಿ ನಿರ್ದಿಷ್ಟವಾಗಿ 'ಇಂಥದೇ' ಎಂಬ ಕಾರ್ಯಕ್ರಮ ಪ್ರಸಾರ ಮಾಡುತ್ತಿದೆ. ಉದಾಹರಣೆಗೆ: ಬೆಳಿಗ್ಗೆ ೬.೩೦ಕ್ಕೆ ಭಕ್ತಿ ಸುಧಾ, ೭.೩೦ಕ್ಕೆ ವಾರ್ತೆಗಳು, ೮ ಗಂಟೆಗೆ ಪರಿಚಯ ಮುಂತಾಗಿ. ಸಮಯ ನೆನಪಿಟ್ಟುಕೊಂಡ ಪ್ರೇಕ್ಷಕ ಹೊತ್ತಿಗೆ ಸರಿಯಾಗಿ ಟಿವಿ ಮುಂದೆ ಆಸೀನನಾಗುವುದು ಸಾಧ್ಯವಾಗುತ್ತದೆ. ಕ್ರಮೇಣ ಅದೇ ರೂಢಿಯೂ ಆಗುತ್ತದೆ. ಆತ 'ಪರಿಚಯ' ಕಾರ್ಯಕ್ರಮ ನೋಡಬಯಸುವ ವೀಕ್ಷಕನಾದರೆ ತನ್ನೆಲ್ಲ ಇತರ ಕೆಲಸ ಕಾರ್ಯಗಳನ್ನು ಮುಗಿಸಿ ೮ ಗಂಟೆಗೆ ಬಿಡುವು ಮಾಡಿಕೊಂಡು ಬಂದು ಟಿವಿ ಚಾಲೂ ಮಾಡಿದರೆ ತನಗೆ ಬೇಕಾದ ಆ ಕಾರ್ಯಕ್ರಮ ನೋಡಬಹುದು. ಒಂದು ವೇಳೆ ಉದಯ ವಾಹಿನಿಯವರು ಆ ಕಾರ್ಯಕ್ರಮಕ್ಕೆ ಬದಲಾಗಿ ಬೇರೆ ಯಾವುದೋ ಕಾರ್ಯಕ್ರಮವನ್ನೂ, ಅದರಲ್ಲೂ ಪೂರ್ವಸೂಚನೆ ಇಲ್ಲದೆ ಪ್ರಸಾರ ಮಾಡಿದರೆ ಆತನಿಗೆ ನಿರಾಶೆಯೂ ಆಗಬಹುದು. ಇಂಥದೇ ಪ್ರಸಂಗ ಆಗಿಂದಾಗ್ಗೆ ಆಗುತ್ತಿದ್ದರೆ ಆತ ಆ ಕಾರ್ಯಕ್ರಮವನ್ನು ಮರೆತೂ ಬಿಡಬಹುದು. ಈ ಬಗೆಯ ವೇಳಾಪಟ್ಟಿಯನ್ನು ಸಿದ್ಧಪಡಿಸಿಕೊಳ್ಳುವುದೂ ಹಾಗೂ ಅದನ್ನು ಪರಿಪಾಲಿಸುವುದು ವೀಕ್ಷಕರನ್ನು ಹಿಡಿದಿಟ್ಟುಕೊಳ್ಳುವ ದೃಷ್ಟಿಯಿಂದ ಲಾಭದಾಯಕ. ಎಂದರೆ ಮೊದಲನೆಯದಾಗಿ ವೀಕ್ಷಕ, ವಾಹಿನಿಗಳು ಕಾಲಕಾಲಕ್ಕೆ ಬಿತ್ತರಿಸುವುದಾಗಿ ಹೇಳಿದ ಕಾರ್ಯಕ್ರಮಗಳನ್ನು ಆಯಾಕಾಲಕ್ಕೆ ಸರಿಯಾಗಿಯೇ ಬಿತ್ತರಿಸಬೇಕೆಂದು ಬಯಸುತ್ತಾನೆ.

ಡಿಡಿ-೧ರ ಕಾರ್ಯಕ್ರಮ ಪಟ್ಟಿಯನ್ನು ನೋಡಿದಾಗ ಅಂತಹ ಸಮಯಪಾಲನೆ ಆ ವಾಹಿನಿಗೆ ಒಗ್ಗಿರುವಂತೆ ಕಾಣುವುದಿಲ್ಲ. ಬಹಳ ಕಾತರ ನಿರೀಕ್ಷೆಗಳಿಗೆ ಎಡೆಮಾಡುವ 'ವಾರ್ತೆಗಳು' ಅನ್ನೇ ಸೋಮವಾರದಿಂದ ಶನಿವಾರದವರೆಗೆ ರಾತ್ರಿ ೭ ಗಂಟೆಗೂ, ಭಾನುವಾರದಂದು ಸಂಜೆ ೬.೩೦ಕ್ಕೂ ಪ್ರಸಾರ ಮಾಡಲಾಗುತ್ತಿದೆ. ದೈನಿಕ ಧಾರವಾಹಿಗಳನ್ನು ಹೊರತುಪಡಿಸಿ ಉಳಿದಂತೆ ವಿಶೇಷ ಶ್ರೋತೃಗಳಿಗಾಗಿ ಸಿದ್ಧಪಡಿಸಿದ ಕಾರ್ಯಕ್ರಮಗಳನ್ನು ಎಲ್ಲೆಲ್ಲಿ ಕಾಲವಕಾಶ ಸಿಕ್ಕುತ್ತದೋ ಆಗ ಫಿಲ್ಲರ್‌ನಂತೆ ಬಳಕೆ ಮಾಡುತ್ತಿರುವಂತೆ ಭಾಸವಾಗುತ್ತಿದೆ. ಒಂದೊಂದು ಪ್ರಸಾರದಲ್ಲೂ ಕ್ರಮಬದ್ಧತೆ ಕಾಣುವುದಿಲ್ಲ.

ಗಮನಿಸಬೇಕಾದ ಮತ್ತೊಂದು ಅಂಶವೆಂದರೆ ಒಂದೊಂದು ಕಾರ್ಯಕ್ರಮಕ್ಕೂ ಕಾಲದ ಚೌಕಟ್ಟು ಅಗತ್ಯ. ಅರ್ಧಗಂಟೆಗೆ ಒಂದು ಕಾರ್ಯಕ್ರಮ ಎಂದು ನಿಗದಿಪಡಿಸಿದರೆ ಈಟೀವಿ ವಾಹಿನಿಯಂತೆ ಗಂಟೆಗೆರಡು ಕಾರ್ಯಕ್ರಮ, ನಂತರ ಒಂದು ವಾರ್ತಾ ಮುಖ್ಯಾಂಶ ಮತ್ತೆ ಅರ್ಧ ಗಂಟೆಯ ಎರಡು ಕಾರ್ಯಕ್ರಮಗಳು ನಂತರ ವಾರ್ತಾ ಮುಖ್ಯಾಂಶ ಹೀಗೆ ನಿರಂತರವಾಗಿ, ಕ್ರಮಬದ್ಧವಾಗಿ ಕಾರ್ಯಕ್ರಮಗಳು ಸಾಗುತ್ತಿರುತ್ತವೆ. ಇದೂ ಸಹ ವೀಕ್ಷಕನಲ್ಲಿ ಕ್ರಮಬದ್ಧ ವೀಕ್ಷಣೆ (Systematic Viewing) ಯನ್ನು ಬೆಳೆಸಲು ಅನುಕೂಲಕರವಾಗುತ್ತದೆ. ಹಾಗೂ ವಾಹಿನಿಗೂ ಒಂದು ಮೌಲ್ಯ ಸಿಕ್ಕಂತಾಗುತ್ತದೆ.

**ಪ್ರೇಕ್ಷಕನಿಗೆ ಅದು ಎಷ್ಟು ಬೇಕು? :** ಚಲನಚಿತ್ರ ಗೀತೆಗಳು ಜನರನ್ನು ಆಕರ್ಷಿಸುವ ಅತ್ಯಂತ ಆಕರ್ಷಣೀಯ ಕಾರ್ಯಕ್ರಮ ಎಂದು ಪರಿಗಣಿತವಾಗಿದೆ. ಮಾಧ್ಯಮಗಳಿಗೆ ಜನರನ್ನು ಹಿಡಿದಿಟ್ಟುಕೊಳ್ಳುವುದೇ ಮುಖ್ಯ ಗುರಿಯಾದ್ದರಿಂದ ಸಹಜವಾಗಿಯೇ

ಜನಪ್ರಿಯ ಕಾರ್ಯಕ್ರಮಗಳನ್ನೇ ಪ್ರಸಾರ ಮಾಡುವುದು ಅವುಗಳ ಆದ್ಯತೆಯಾಗಿದೆ. ಸಮಯ ಸಿಕ್ಕಾಗಲೆಲ್ಲ ಫಿಲ್ಲರ್‌ನಂತೆ ಚಿತ್ರದ ಹಾಡುಗಳನ್ನೇ ಬಿತ್ತರಿಸಲಾಗುತ್ತಿದೆ. ಹಾಗಾಗಿ ಯಾವ ವಾಹಿನಿಯನ್ನು ಚಾಲೂ ಮಾಡಿದರೂ ಒಂದಲ್ಲಾ ಒಂದು ಚಲನಚಿತ್ರ ಆಧಾರಿತ ಕಾರ್ಯಕ್ರಮಗಳೇ ಹೆಚ್ಚಾಗಿ ಪ್ರಸಾರವಾಗುತ್ತಿರುವುದು ಗಮನಾರ್ಹ. ಅದರಲ್ಲೂ ಜಾಹಿರಾತಿಗಾಗಿ ಚಿತ್ರ ನಿರ್ಮಾಪಕರು, ಹಂಚಿಕೆದಾರರು ನೀಡಿದ ಒಂದೇ ಹಾಡು ಏಕಕಾಲಕ್ಕೆ ಒಂದಕ್ಕಿಂತ ಹೆಚ್ಚು ವಾಹಿನಿಗಳಲ್ಲಿ ಪ್ರಸಾರ ಕಾಣುತ್ತಿದೆ. ಉದಾಹರಣೆಗೆ 'ಲಂಕೇಶ' ಚಿತ್ರದ 'ರನ್ನೆ ಓ ರನ್ನೆ' ಹಾಡು ಸುಪ್ರಭಾತ ಹಾಗೂ ಕಾವೇರಿ ವಾಹಿನಿಯಲ್ಲಿ (೨೮-೨-೨೦೦೧ರಂದು) ಅಕ್ಷರಶಃ ಒಂದೇ ವೇಳೆ ಪ್ರಸಾರವಾಯಿತು. ಹೀಗೆ ಎಲ್ಲ ವಾಹಿನಿಗಳಲ್ಲೂ ಒಂದೇ ಬಗೆಯ ಕಾರ್ಯಕ್ರಮಗಳು ಪ್ರಸಾರವಾದರೆ ಆ ಕಾರ್ಯಕ್ರಮ ಸೊಬಗು ಕಳೆದುಕೊಳ್ಳುವುದರ ಜೊತೆಗೆ ಆ ವಾಹಿನಿ ವೀಕ್ಷಕರನ್ನೂ ಕಳೆದುಕೊಳ್ಳುತ್ತದೆ. ಈ ರೀತಿಯ ಹೇರುವಿಕೆಯಿಂದಾಗಿ ಜೈನ್ ಟಿವಿ ಜನಪ್ರಿಯಗೊಳ್ಳದಿದ್ದನ್ನು ಈ ಮುಂಚೆ ತಿಳಿಸಿದ್ದೇನೆ.

ಅದೇ ರೀತಿ ಡಿಡಿ-೧ ಸುಗಮ ಸಂಗೀತವನ್ನು ಮಾಮೂಲು ಬಿಟ್ಟಿರುವುದು ಗಮನಾರ್ಹ. ಕಾರ್ಯಕ್ರಮಗಳ ನಡುವೆ ಸಮಯ ಸಿಕ್ಕಾಗಲೆಲ್ಲ ಫಿಲ್ಲರ್‌ನಂತೆ ಬಳಸುತ್ತಾ, ಮುಂದಿನ ಕಾರ್ಯಕ್ರಮಕ್ಕೆ ಸಮಯವಾಯಿತು ಎಂದಾಕ್ಷಣ ಪ್ರಸಾರವಾಗುತ್ತಿದ್ದ ಹಾಡನ್ನು ಅರ್ಧಕ್ಕೆ ನಿಲ್ಲಿಸಿಬಿಟ್ಟರೆ ಪ್ರೇಕ್ಷಕನ ಮನಃಸ್ಥಿತಿ ಹೇಗಾಗುತ್ತದೆ ಎಂದೂ ನೋಡಬೇಕಾಗುತ್ತದೆ. ಕಡೇ ಪಕ್ಷ ಒಂದು ಹಾಡನ್ನು ಸಂಪೂರ್ಣವಾಗಿ ಪ್ರಸಾರ ಮಾಡುವುದಕ್ಕಾದರೂ ಸಮಯ ಸಾಕಾಗುತ್ತದೆಯೇ ಎಂದು ಲೆಕ್ಕಹಾಕಿಕೊಂಡು ಅದನ್ನು ಬಳಸಿದರೆ ಒಂದು ಶಿಸ್ತಿರುತ್ತದೆ. ಅದೇ ರೀತಿ 'ಚಿತ್ರಮಂಜರಿ' ಎನ್ನುವ ಕಾರ್ಯಕ್ರಮ ೧೯೮೫ರ ವೇಳೆಗೆ ಅತ್ಯಂತ ಜನಪ್ರಿಯವಾಗಿದ್ದ ಕಾರ್ಯಕ್ರಮ. ಆಗ ಇದ್ದ ಏಕೈಕ ವಾಹಿನಿಯಲ್ಲಿ ವಾರಕ್ಕೆ ಒಂದೇ ಒಂದು ದಿನ ಅದೂ ಅರ್ಧಗಂಟೆ ಕಾಲ ಮಾತ್ರ ಪ್ರಸಾರವಾಗುತ್ತಿದ್ದ ಈ ಕಾರ್ಯಕ್ರಮದಲ್ಲಿ ಕಡೆಯ ಹಾಡನ್ನು, ದೆಹಲಿಯ ರಾಷ್ಟ್ರೀಯ ಪ್ರಸಾರಕ್ಕೆ ಲಿಂಕ್ ಮಾಡುವುದಕ್ಕಾಗಿ ಎಲ್ಲೆಂದರಲ್ಲಿ ನಿಲ್ಲಿಸಿಬಿಡಲಾಗುತ್ತಿತ್ತು. ಪ್ರೇಕ್ಷಕರು ಇದು ಚಿತ್ರಮಂಜರಿಯೋ ಕತ್ರಿ ಮಂಜರಿಯೋ ಎಂದು ಅಪಹಾಸ್ಯ ಮಾಡಿದ್ದೂ ನಡೆದಿದೆ. ಅಂದರೆ ಒಂದು ವಾಹಿನಿ ತನ್ನ ವೀಕ್ಷಕನಿಗೆ ಒಂದು ಕಾರ್ಯಕ್ರಮವನ್ನು ಎಷ್ಟು ಕೊಡಬೇಕು ಎಂದು ಲೆಕ್ಕ ಹಾಕುವ ಕೆಲಸವನ್ನು ಮೊದಲು ಮಾಡಬೇಕು. ಕಾರ್ಯಕ್ರಮಗಳ ಮಧ್ಯೆ ಖಾಲಿ ಸಮಯ ಬಿಡದಂತೆ ಕಾರ್ಯಕ್ರಮದ ಸಮಯವನ್ನು ನಿಯಂತ್ರಣದಲ್ಲಿಟ್ಟುಕೊಂಡಿರಬೇಕು. ಪೂರ್ವ ನಿಯೋಜಿತ ಕಾರ್ಯಕ್ರಮಗಳು ಸಮಯದ ವಿಷಯದಲ್ಲಿ ಯಾವುದೇ ರಾಜಿಗೆ ಒಳಪಡದೆ ಅರ್ಧಗಂಟೆ ಎಂದರೆ ಅರ್ಧಗಂಟೆಯೇ ಪ್ರಸಾರವಾಗಬೇಕು. ಒಂದು ವೇಳೆ ಒಂದು ಕಾರ್ಯಕ್ರಮ ೨೫ ನಿಮಿಷ ಅಥವಾ ೩೫ ನಿಮಿಷಕ್ಕೆ ಹಿಂದುಮುಂದಾದರೆ ಅದರ ಪರಿಣಾಮ ಆ ದಿನದ ಇತರ ಎಲ್ಲಾ ಕಾರ್ಯಕ್ರಮಗಳ ಮೇಲೂ ಆಗಿ ವೇಳಾಪಟ್ಟಿ ಏರುಪೇರಾಗುತ್ತದೆ. ಇಲ್ಲವೆ ಮಧ್ಯದಲ್ಲಿ ಖಾಲಿ ಸಮಯ ಉಳಿದು ಫಿಲ್ಲರ್‌ಗಳನ್ನು ಬಳಸುವ ಸಂದರ್ಭ ಒದಗುತ್ತದೆ.

ಇದೇ ರೀತಿ ಕಾರ್ಯಕ್ರಮ ವೇಳಾಪಟ್ಟಿಯನ್ನು ಅನುಸರಿಸುವಲ್ಲಿ ಬರುವ ಇನ್ನೊಂದು ಮುಖ್ಯ ಆತಂಕ ಜಾಹೀರಾತುಗಳು. ಕ್ರಮಬದ್ಧವಾಗಿ ದಿನಕ್ಕೆ ಅಥವಾ ಒಂದು ಟ್ರಾನ್ಸ್‌ಮಿಷನ್‌ಗೆ ಅಥವಾ ಒಂದು ಗಂಟೆಗೆ ಅಥವಾ ಒಂದು ಕಾರ್ಯಕ್ರಮಕ್ಕೆ ಇಂತಿಷ್ಟೇ ಜಾಹೀರಾತುಗಳನ್ನು ಬಳಸಬೇಕು ಎಂದು ಮೊದಲೇ ನಿಗದಿಪಡಿಸಿಕೊಂಡಿರಬೇಕು. ಒಂದು ವೇಳೆ ನಿರೀಕ್ಷಿಸಿದಂತೆ ಪ್ರಾಯೋಜಕರಿಂದ ಒಂದು ಜಾಹೀರಾತು ಬರದಿದ್ದರೆ, ತಮ್ಮ ವಾಹಿನಿಯದೇ ಒಂದು ಜಾಹೀರಾತನ್ನು (ಬರಲಿರುವ ಕಾರ್ಯಕ್ರಮದ) ಅಲ್ಲಿ ಪ್ರಸಾರ ಮಾಡುವುದು ಸೂಕ್ತ. ಒಂದು ವೇಳೆ ನಿರೀಕ್ಷೆ ಮೀರಿ ಜಾಹೀರಾತು ಬಂದಾಗಲೂ ತೀರಾ ಆಮಿಷಕ್ಕೊಳಗಾಗದೆ ಮುಂದಿನ ದಿನಕ್ಕೆ ಅದನ್ನು ನೀಡುವಂತೆ ಪ್ರಾಯೋಜಕರ ಮನ ಒಲಿಸುವುದರಿಂದ ವಾಹಿನಿಗೆ ಒಂದು ಬೇಡಿಕೆಯೂ ಉಳಿಯುತ್ತದೆ. ಇಂತಹ ಸಣ್ಣ ಸಣ್ಣ ಅಂಶಗಳು ಪ್ರೇಕ್ಷಕನ ಇರಿಸುಮುರುಸಿಗೆ ದೊಡ್ಡ ದೊಡ್ಡ ಕಾರಣಗಳಾಗಬಹುದು. ಹಣ ತರುತ್ತದೆ ಎಂಬ ಕಾರಣಕ್ಕೆ ಜಾಹೀರಾತುಗಳನ್ನು ವಾಹಿನಿ ತನ್ನ ಮನ ಬಂದಂತೆ ವೀಕ್ಷಕನ

ಮೇಲೆ ಹೇರದೆ, ಅವನ ಇಚ್ಛೆಗನುಸಾರ ಸಾಕಷ್ಟು ಪ್ರಮಾಣದಲ್ಲಿ ಕಾರ್ಯಕ್ರಮಗಳನ್ನು ಕೊಟ್ಟು, ತಕ್ಕಮಟ್ಟಿಗೆ ಯೋಜಿತ ಸ್ವರೂಪದಲ್ಲಿ ಜಾಹೀರಾತುಗಳನ್ನು ಪ್ರಸಾರ ಮಾಡಬೇಕಾದ್ದು ಅತಿ ಅವಶ್ಯಕ. ಪ್ರೇಕ್ಷಕ ಕಾರ್ಯಕ್ರಮವನ್ನು ನೋಡಿದಾಗಲೇ ಜಾಹೀರಾತಿಗೂ ಬೆಲೆ ಬರುತ್ತದೆ.

**ಪ್ರೇಕ್ಷಕನಿಗೆ ಅದು ಯಾಕೆ ಬೇಕು? :** ಈ ಪ್ರಶ್ನೆಗೆ ಸರಿಯಾದ ಉತ್ತರವನ್ನು ಒಂದು ಚಾನೆಲ್ ಅರ್ಥ ಮಾಡಿಕೊಂಡರೆ ಅದರ ಉದ್ದೇಶ ಈಡೇರಿದಂತೆ. ಸಂವಹನ ಪ್ರಕ್ರಿಯೆಯ ಅಂತಿಮ ಹಾಗೂ ಮಹತ್ತರ ಘಟ್ಟ ಪ್ರೇಕ್ಷಕ. ತಾನು ಇಂತಹುದನ್ನು ನೋಡಬೇಕು, ಇಂತಹುದರ ಬಗ್ಗೆ ತಿಳಿದುಕೊಳ್ಳಬೇಕು, ಇಂತಹುದರ ಮೂಲಕ ಮನೋಲ್ಲಾಸಗೊಳಿಸಿಕೊಳ್ಳಬೇಕು ಎಂಬ ಭಾವನೆಗಳನ್ನು ಹೊಂದಿರಬೇಕು, ಹೊಂದಿರುತ್ತಾನೆ. ಒಂದು ವೇಳೆ ಆತನಿಗೆ ಅಂತಹ ಭಾವನೆಗಳೇ ಇರದಿದ್ದಲ್ಲಿ ಯಾವ ಮಾಧ್ಯಮ ತಾನೆ ಏನು ಮಾಡುವುದು ಸಾಧ್ಯ? ಉದಾಹರಣೆಗೆ ಕಾದಂಬರಿಯೊಂದನ್ನು ಮುದ್ರಿಸುವುದು ಓದುಗರಿಗಾಗಿಯೇ. ಓದುಗರಾರೂ ಅದನ್ನು ತೆಗೆದುಕೊಳ್ಳದೇ ಹೋದರೆ ಆ ಕೃತಿಯ ಉದ್ದೇಶ ಸತ್ತಂತೆ. ಹಾಗೆ ದೂರದರ್ಶನ ವಾಹಿನಿಗಳೂ ಸಹ. ಪ್ರೇಕ್ಷಕನಿಗೆ ಮಾಹಿತಿ ನೀಡುವುದು, ಮನರಂಜನೆ, ಶಿಕ್ಷಣ, ಜ್ಞಾನ, ಹೊಸ ವಿಷಯಗಳನ್ನು ನೀಡುವುದೇ ಅವುಗಳ ಗುರಿಯಾಗಬೇಕು. ಈ ಗುರಿಯತ್ತಲೇ ತಮ್ಮೆಲ್ಲ ಗಮನವನ್ನು ಒಂದು ವಾಹಿನಿ ಕೇಂದ್ರೀಕರಿಸಿ ಬಿಟ್ಟರೆ ಆಗ ಪ್ರೇಕ್ಷಕನಿಗೇನು ಬೇಕು, ಅವನಿಗೆ ಬೇಕಾದ್ದನ್ನು ಹೇಗೆ, ಎಷ್ಟು, ಯಾವಾಗ ಕೊಡಬೇಕು ಎಂದೆಲ್ಲ ತಿಳುವಳಿಕೆ ಅದಕ್ಕೆ ಮೂಡುತ್ತದೆ. ಹಾಗೆಯೇ ಒಂದು ವಾಹಿನಿ ಮಾಡಬೇಕಾದ ಮತ್ತೊಂದು ಮುಖ್ಯ ಕೆಲಸವೆಂದರೆ, ತನ್ನ ಪ್ರೇಕ್ಷಕನಿಗಾಗಿ ಇಷ್ಟೆಲ್ಲ ಕೊಟ್ಟ ಮೇಲೆ ಅವನೇನು ಹೇಳುತ್ತಾನೆ ಎಂಬುದರತ್ತ ತಿರುಗಿ ನೋಡಬೇಕು. ಪ್ರೇಕ್ಷಕರನ್ನು ನಿರ್ಲಕ್ಷಿಸಿದ ಅಥವಾ ಅಸಡ್ಡೆ ಮಾಡಿದ ವಾಹಿನಿಯ ಶಕ್ತಿ ಕುಸಿಯುವುದು ಈವರೆಗೂ ಗಮನಿಸಿದ ಸಂಗತಿಗಳಿಂದ ವೇದ್ಯವಾಗಿದೆ.

**ಪ್ರೇಕ್ಷಕ ಏನು ಹೇಳುತ್ತಾನೆ ? :** ದ್ವಿಮುಖ ಸಂವಹನ ವ್ಯವಸ್ಥೆಯಲ್ಲಿ ಈ ಭಾಗ ಅತ್ಯಂತ ಮಹತ್ವದ ಪಾತ್ರವೆನಿಸಿಕೊಳ್ಳುತ್ತದೆ. ಇದನ್ನು ಪಾರಸ್ಪರಿಕ ಗ್ರಾಹಕತೆ ಎನ್ನುವ ವಿಷಯದಡಿಯಲ್ಲಿ ಮುಂದೆ ವಿಷದವಾಗಿ ಚರ್ಚಿಸುತ್ತೇನೆ. ಆದರೆ ಒಂದು ವಾಹಿನಿಯ ವಿಷಯದಲ್ಲಿ ಪ್ರೇಕ್ಷಕನ ಅಭಿಪ್ರಾಯಕ್ಕೆ ಮನ್ನಣೆ ನೀಡಿಯೇ, ಅವನು ಬೇಡವೆಂದ ಕಾರ್ಯಕ್ರಮವನ್ನು ತೆಗೆದುಹಾಕಿ, ಅವನು ಬಯಸುವ ಕಾರ್ಯಕ್ರಮವನ್ನು ಪ್ರಸಾರ ಮಾಡಬೇಕಾಗುತ್ತದೆ. ಆಗಷ್ಟೇ ಪ್ರೇಕ್ಷಕನೂ ಸಹ ಆ ವಾಹಿನಿಯೊಂದಿಗೆ ಉಳಿಯುತ್ತಾನೆ. ಮರುಪ್ರಸಾರ ಮಾಡುವ ಸಂದರ್ಭದಲ್ಲೂ ಅದು ಆತನಿಗೆ ಬೇಕೋ ಬೇಡವೋ ಎಂದು ತಿಳಿದೇ ಮಾಡಬೇಕಾಗುತ್ತದೆ. ಈ ಕೆಲಸವನ್ನು ಆಕಾಶವಾಣಿ ಎಚ್ಚರಿಕೆಯಿಂದ ನಿರ್ವಹಿಸುತ್ತಿದೆ. ಶ್ರೋತೃಗಳಿಂದ ಬಂದ ಪತ್ರಗಳ ಆಧಾರದ ಮೇಲೆ ಒಂದು ಕಾರ್ಯಕ್ರಮವನ್ನು ಪ್ರಸಾರ ಮಾಡುವಾಗ ಅದನ್ನು ಯಾವ ಕಾರಣಕ್ಕಾಗಿ ಮರುಪ್ರಸಾರ ಮಾಡಲಾಗುತ್ತಿದೆ ಎಂದು ತಿಳಿಸಿದರೆ ಇತರ ಶ್ರೋತೃಗಳು ಈ ಕಾರ್ಯಕ್ರಮದಲ್ಲಿ ವಿಶೇಷವಾದುದ್ದೇನೋ ಇರಬೇಕು, ಆದ್ದರಿಂದ ಕೇಳುಗರ ಕೋರಿಕೆ ಈ ಕಾರ್ಯಕ್ರಮಕ್ಕಿದೆ ಎಂದು ತಿಳಿದು ಮತ್ತೊಮ್ಮೆ ಆ ಕಾರ್ಯಕ್ರಮವನ್ನು ಕೇಳುತ್ತಾರೆ, ಗ್ರಹಿಸುತ್ತಾರೆ. ಅದಕ್ಕೆ ಬದಲಾಗಿ, ಪ್ರಕಟಿಸಿದ ಕಾರ್ಯಕ್ರಮಕ್ಕೆ ಬದಲಾಗಿ, ಇನ್ನಾವುದೋ ಹಳೆಯ ಕಾರ್ಯಕ್ರಮವನ್ನು ಬಳಸುವುದು, ಫಿಲ್ಲರ್ ರೂಪದಲ್ಲಿ ಮೇಲಿಂದ ಮೇಲೆ ಮರುಪ್ರಸಾರ ಮಾಡುವುದು ಪ್ರೇಕ್ಷಕನಿಗೆ ಸಹ್ಯವಾಗುವುದಿಲ್ಲ. ಆದ್ದರಿಂದಲೇ ತಾನು ಸೃಷ್ಟಿಸಿರುವ ಕಾರ್ಯಕ್ರಮ ವೇಳಾಪಟ್ಟಿ ತನ್ನ ಪ್ರೇಕ್ಷಕನಿಗೆ ಮೆಚ್ಚುಗೆಯಾಗಿದೆಯೇ? ತಾನು ಕಾರ್ಯಕ್ರಮಗಳನ್ನು ನೀಡುತ್ತಿರುವ ರೀತಿ ಇಷ್ಟವಾಗಿದೆಯೇ? ಅದಕ್ಕಾಗಿ ನಿಗದಿ ಪಡಿಸಿರುವ ಸಮಯಾವಕಾಶ ಸಾಕೆ? ಪ್ರಸಾರದ ವೇಳೆ ಅವನಿಗೆ ಹೊಂದುತ್ತಿದೆಯೇ? ಅವನು ತನ್ನ ಕಾರ್ಯಕ್ರಮಗಳನ್ನು ಗ್ರಹಿಸುತ್ತಿದ್ದಾನೆಯೇ? ಎಂಬ ಪ್ರಶ್ನೆಗಳಿಗೆ ಅವನಿಂದಲೇ ಉತ್ತರಗಳನ್ನು ಆಗಿಂದಾಗ್ಗೆ ಪಡೆಯಬೇಕು. ಅವನ ಧ್ವನಿಗೆ ಕಿವಿಯಾಗಬೇಕು. ಅವನ ಮನಸ್ಸಿಗೆ ಕಣ್ಣಾಗಬೇಕು. ಆಗಷ್ಟೇ, ಅದು ಖಾಸಗಿಯದೇ ಆಗಿರಲಿ, ಸರ್ಕಾರದ್ದೇ ಆಗಿರಲಿ ಒಂದು ವಾಹಿನಿ ಅತ್ಯಂತ ಯಶಸ್ವಿವಾಹಿನಿಯಾಗಿ ಬೆಳೆಯುವ ಸಾಮರ್ಥ್ಯ ಪಡೆದುಕೊಳ್ಳುತ್ತದೆ.

ಒಟ್ಟಿನಲ್ಲಿ ದೂರದರ್ಶನ ವಾಹಿನಿಯೊಂದು ಯಶಸ್ವಿಯಾಗಬೇಕಾದರೆ:

- ಕಾರ್ಯಕ್ರಮ ವೇಳಾಪಟ್ಟಿಯಲ್ಲಿ ಅಚ್ಚುಕಟ್ಟುತನವಿರಬೇಕು.
- ಸಮಯಕ್ಕೆ ಸರಿಯಾಗಿ ಆರಂಭವಾಗಿ ಹಾಗೆ ಅಂತ್ಯವಾಗಬೇಕು.
- ಕಾರ್ಯಕ್ರಮದ ಔಚಿತ್ಯಕ್ಕೆ ಬೇಕಾದ ಸೂಕ್ತ ಕಾಲಾವಧಿ ಇರಬೇಕು.
- ಉದ್ದೇಶಿತ ಪ್ರೇಕ್ಷಕ ನೋಡುವ ಹೊತ್ತಿನಲ್ಲಿ ಪ್ರಸಾರ ಮಾಡಬೇಕು.
- ಪ್ರತಿ ಕಾರ್ಯಕ್ರಮವೂ ಉದ್ದೇಶಿತ ಪ್ರೇಕ್ಷಕರನ್ನು ತಲುಪಿತೇ, ಅವನಿಗೆ ಅದು ಇಷ್ಟವಾಯಿತೇ ಎಂದು ತಿಳಿದು ಅದನ್ನು/ ಅಂತಹುದನ್ನು ಮುಂದುವರೆಸುವ ಬಗ್ಗೆ ಆಲೋಚಿಸಬೇಕು.
- ಎಲ್ಲ ವಯಸ್ಸಿನ ಪ್ರೇಕ್ಷಕರಿಗೂ ಒಪ್ಪುವ ಕಾರ್ಯಕ್ರಮಗಳು ಒಂದು ದಿನದಲ್ಲಿ ಪ್ರಸಾರವಾಗಬೇಕು.
- ಒಂದು ದಿನದಲ್ಲಿ ಎಲ್ಲ ರಂಗಗಳ ಕಾರ್ಯಕ್ರಮಗಳಿರಬೇಕು. ೨೪ ಗಂಟೆಗಳೊಳಗೆ ಅಳವಡಿಸುವುದು ಕಷ್ಟವಾದಲ್ಲಿ ೪೮ ಗಂಟೆಗಳೊಳಗೆ ಪ್ರಸಾರ ಮಾಡಬೇಕು.
- ಆಗಿಂದಾಗ್ಗೆ ಸುದ್ದಿಯನ್ನು Update ಮಾಡುತ್ತಿರಬೇಕು.
- ಭಾಷೆ ಹಾಗೂ ಮಂಡನೆ ವಿಷಯದಲ್ಲಿ ಸ್ಪಷ್ಟತೆ ಹಾಗೂ ಸಂವಹನಶೀಲತೆ ಮುಖ್ಯ.
- ವಸ್ತುವಿಗೆ ಉಚಿತವಾದ ಶೈಲಿ ಹಾಗೂ ಉಪಚಾರ ಅಗತ್ಯ.
- ಫಿಲ್ಲರ್‌ಗಳನ್ನು ಕಡಿಮೆ ಮಾಡಬೇಕು ಅಥವಾ ಇರಲೇಬಾರದು.
- ಜಾಹೀರಾತುಗಳಿಗಾಗಿ ಕಾರ್ಯಕ್ರಮಗಳನ್ನು ಬಲಿ ಕೊಡಬಾರದು.

- ಎನ್ನುವ ಕೆಲವು ಪ್ರಮುಖ ಅಂಶಗಳನ್ನು ಮಾತ್ರ ಇಲ್ಲಿ ಹೇಳಿದ್ದೇನೆ. ಇದನ್ನು ಬಿಟ್ಟು ಸಾಂದರ್ಭಿಕವಾಗಿ, ಬದಲಾಗುವ ಜನಮನದ ಲಹರಿಗೆ ಅನುಗುಣವಾಗಿ, ಇತರ ಎಲ್ಲ ಮಾಧ್ಯಮಗಳು ಒಡ್ಡುವ ಪೈಪೋಟಿಗೆ ಉತ್ತರವಾಗಿ ಆಗಿಂದಾಗ್ಗೆ ಸುಧಾರಣೆ/ ಬದಲಾವಣೆಗಳಿಗೂ ಒಂದು ವಾಹಿನಿ ಸಿದ್ಧವಿರಬೇಕಾಗುತ್ತದೆ; ಕಾಲ, ಕ್ರಮ ಹಾಗೂ ಕರ್ತವ್ಯಕ್ಕೆ ಬದ್ಧವಾಗಿರಬೇಕಾಗುತ್ತದೆ.

ಹಾಗೇ ಒಂದು ವಾಹಿನಿ ಯಶಸ್ವಿಯಾಗಬೇಕಾದರೆ ಅದು ಮಾಡಲೇಬಾರದ ಒಂದು ಅಂಶವೆಂದರೆ - ತನ್ನ ವೀಕ್ಷಕನ ಅಭಿರುಚಿ, ಅಭಿಪ್ರಾಯಗಳನ್ನು ಕಡೆಗಣಿಸುವುದು.

# ಪಟ್ಟಿ - ೮ : ಡಿಡಿ-೧ ವಾಹಿನಿಯ ಕಾರ್ಯಕ್ರಮ ವೈವಿಧ್ಯ

ಮೊದಲ ಪ್ರಸಾರ : ಬೆಳಿಗ್ಗೆ ೫.೨೫ರಿಂದ ಮಧ್ಯಾಹ್ನ ೧೨ ಗಂಟೆವರೆಗೆ (೨೦೦೧ರಲ್ಲಿ ಇದ್ದಂತೆ)

| ಸಮಯ | ಸೋಮವಾರ | ಮಂಗಳವಾರ | ಬುಧವಾರ | ಗುರುವಾರ | ಶುಕ್ರವಾರ | ಶನಿವಾರ | ಸಮಯ | ಭಾನುವಾರ |
|---|---|---|---|---|---|---|---|---|
| ೫.೨೫ ರಿಂದ ೧೨ ಗಂಟೆ ವರೆಗೆ | ಪ್ರಾದೇಶಿಕ | ಪ್ರಾದೇಶಿಕ | ಪ್ರಾದೇಶಿಕ | ಪ್ರಾದೇಶಿಕ | ಪ್ರಾದೇಶಿಕ | ಪ್ರಾದೇಶಿಕ | ೫.೨೫ ರಿಂದ ೮.೩೦ | ರಾಷ್ಟ್ರೀಯ ಪ್ರಸಾರ |
| | | | | | | | ೮.೩೦ | ಸಿನಿಮಾ ಸಂಚಿಕೆ |
| | | | | | | | ೯.೦೦ | ರಾಷ್ಟ್ರೀಯ ಪ್ರಸಾರ |

ಎರಡನೆ ಪ್ರಸಾರ : ಮಧ್ಯಾಹ್ನ ೧೨ ಗಂಟೆಯಿಂದ ಸಂಜೆ ೫.೩೦ರವರೆಗೆ

| ಸಮಯ | ಸೋಮವಾರ | ಮಂಗಳವಾರ | ಬುಧವಾರ | ಗುರುವಾರ | ಶುಕ್ರವಾರ | ಶನಿವಾರ | ಸಮಯ | ಭಾನುವಾರ |
|---|---|---|---|---|---|---|---|---|
| ೧೨ ರಿಂದ ೨.೩೦ | ರಾಷ್ಟ್ರೀಯ ಪ್ರಸಾರ | ರಾಷ್ಟ್ರೀಯ ಪ್ರಸಾರ | ರಾಷ್ಟ್ರೀಯ ಪ್ರಸಾರ | ರಾಷ್ಟ್ರೀಯ ಪ್ರಸಾರ | ರಾಷ್ಟ್ರೀಯ ಪ್ರಸಾರ | ಪ್ರಾದೇಶಿಕ | ೧.೦೦<br>೧.೩೫ | ಡಾ. ರಾಜ್ ರಸಪ್ರಶ್ನೆ<br>ಇಂದಿರಾ - ಧಾರಾವಾಹಿ |
| ೨.೩೦ | ಭಾಗ್ಯಚಕ್ರ | ಭಾಗ್ಯಚಕ್ರ | ಭಾಗ್ಯಚಕ್ರ | ಭಾಗ್ಯಚಕ್ರ | ಭಾಗ್ಯಚಕ್ರ | | ೪.೦೦ | ಕನ್ನಡ ಚಲನಚಿತ್ರ |
| ೩.೦೩ | ಸಮಾಗಮ | ಸಮಾಗಮ | ಸಮಾಗಮ | ಸಮಾಗಮ | ಸಮಾಗಮ | | | |
| ೩.೨೫ | ಸ್ತ್ರೀಲೋಕ | ಸ್ತ್ರೀಲೋಕ | ಸ್ತ್ರೀಲೋಕ | ಸ್ತ್ರೀಲೋಕ | ಸ್ತ್ರೀಲೋಕ | | | |
| ೩.೩೫ | ಸಾಧನೆ | ಸಾಧನೆ | ಸಾಧನೆ | ಸಾಧನೆ | ಸಾಧನೆ | | | |
| ೪.೦೦ | ಚಂದ್ರಬಿಂಬ | ಚಂದ್ರಬಿಂಬ | ಚಂದ್ರಬಿಂಬ | ಚಂದ್ರಬಿಂಬ | ಚಂದ್ರಬಿಂಬ | | | |
| ೪.೨೫ | ಮಾಂಗಲ್ಯಂ ತಂತುನಾನೇನ | ಮಾಂಗಲ್ಯಂ ತಂತುನಾನೇನ | ಮಾಂಗಲ್ಯಂ ತಂತುನಾನೇನ | ಮಾಂಗಲ್ಯಂ ತಂತುನಾನೇನ | ಮಾಂಗಲ್ಯಂ ತಂತುನಾನೇನ | | | |
| ೪.೩೫ | ಅರ್ಧಸತ್ಯ | ಅರ್ಧಸತ್ಯ | ಅಧ್ಯಸತ್ಯ | ಅರ್ಧಸತ್ಯ | ಅರ್ಧಸತ್ಯ | | | |
| ೫.೦೦ | - - - | ಸುತ್ತಮುತ್ತ | ಜನಪದ ಕಾರ್ಯಕ್ರಮ | ಕ್ರೀಡಾ ಜಗತ್ತು | ಕೊಂಕಣಿ ಕಾರ್ಯಕ್ರಮ | | | |
| ೫.೨೦ | - - - | ಸಂಸ್ಕೃತ ಸೌರಭ | ಸುತ್ತಮುತ್ತ | - - - | ಭಗಿನಿ | | | |

## ಮೂರನೆ ಪ್ರಸಾರ : ೫.೩೦ ಗಂಟೆಯಿಂದ ರಾತ್ರಿ ೮ ಗಂಟೆವರೆಗೆ

| ಸಮಯ | ಸೋಮವಾರ | ಮಂಗಳವಾರ | ಬುಧವಾರ | ಗುರುವಾರ | ಶುಕ್ರವಾರ | ಶನಿವಾರ | ಸಮಯ | ಭಾನುವಾರ |
|---|---|---|---|---|---|---|---|---|
| ೫.೪೦ | - | ಆರೋಗ್ಯಕಾರ್ಯಕ್ರಮ | ಯುವ ಕಾರ್ಯಕ್ರಮ | ಉದ್ಯೋಗ ವಾರ್ತೆ | ಅರಳುಮಲ್ಲಿಗೆ | ರಾಷ್ಟ್ರೀಯ ಪ್ರಸಾರ | | - ಅದೇ - |
| ೬.೦೦ | ಗ್ರಾಮಮಂಗಳ | ಅವಲೋಕನ | ಪ್ರಾಯೋಜಿತ ಕಾರ್ಯಕ್ರಮ | ಸಿರಿ ಕರ್ನಾಟಕ | ಗ್ರಾಮಮಂಗಳ | - ಅದೇ - | | - ಅದೇ - |
| ೬.೩೦ | ನಿತ್ಯೋತ್ಸವ | ನಿತ್ಯೋತ್ಸವ | - ಅದೇ - | ಸಾಕ್ಷಾತ್ಕಾರ | ನಿತ್ಯೋತ್ಸವ | ನಿತ್ಯೋತ್ಸವ | ೬.೩೦ | ವಾರ್ತೆಗಳು |
| ೬.೫೫ | ಬೀಳಲಿರುವ ಹನಿಗಳು | ಬೀಳಲಿರುವ ಹನಿಗಳು | ಬೀಳಲಿರುವ ಹನಿಗಳು | ಬೀಳಲಿರುವ ಹನಿಗಳು | ಬೀಳಲಿರುವ ಹನಿಗಳು | - | ೬.೪೫ | ಜನಗಣತಿ |
| ೭.೦೦ | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ೭-೦೦ | ರಾಷ್ಟ್ರೀಯ ಪ್ರಸಾರ |
| ೭.೧೫ | ಹೂವು ಮುಳ್ಳು | ರುಚಿ | ಪೋಲಿಸ್ ಸಂಚಿಕೆ | ಡಾ||ರಾಜ್ ಜಂಗಲ್ ಡೈರಿ | ಚಿತ್ರಮಂಜರಿ | ಮಮತೆಯ ಮಡಿಲು | | - ಅದೇ - |
| ೭.೩೦ | ನಚಿಕೇತ | ವಧುದಕ್ಷಿಣೆ | ರಾಷ್ಟ್ರೀಯ ಪ್ರಸಾರ | ಅಂಕುರ | - ಅದೇ - | - ಅದೇ - | | - ಅದೇ - |
| ೮.೦೦ | ರಾಷ್ಟ್ರೀಯ ಪ್ರಸಾರ | ರಾಷ್ಟ್ರೀಯ ಪ್ರಸಾರ | - ಅದೇ - | ರಾಷ್ಟ್ರೀಯ ಪ್ರಸಾರ | ರಾಷ್ಟ್ರೀಯ ಪ್ರಸಾರ | ರಾಷ್ಟ್ರೀಯ ಪ್ರಸಾರ | | - ಅದೇ - |

## ನಾಲ್ಕನೆ ಪ್ರಸಾರ : ರಾತ್ರಿ ೮ ಗಂಟೆಯಿಂದ

| | | | | | | | | |
|---|---|---|---|---|---|---|---|---|
| ೮ ರ ನಂತರ | ರಾಷ್ಟ್ರೀಯ ಪ್ರಸಾರ | ರಾಷ್ಟ್ರೀಯ ಪ್ರಸಾರ | ರಾಷ್ಟ್ರೀಯ ಪ್ರಸಾರ | ರಾಷ್ಟ್ರೀಯ ಪ್ರಸಾರ | ರಾಷ್ಟ್ರೀಯ ಪ್ರಸಾರ | ರಾಷ್ಟ್ರೀಯ ಪ್ರಸಾರ | | ರಾಷ್ಟ್ರೀಯ ಪ್ರಸಾರ |

## ಪಟ್ಟಿ - ೯ : ಚಂದನ ವಾಹಿನಿ ಕಾರ್ಯಕ್ರಮ ವೈವಿಧ್ಯ

ಮೊದಲ ಪ್ರಸಾರ : ಬೆಳಿಗ್ಗೆ ೬ ಗಂಟೆಯಿಂದ ಮಧ್ಯಾಹ್ನ ೧೨ ಗಂಟೆವರೆಗೆ (೨೦೦೧ರಲ್ಲಿ ಇದ್ದಂತೆ)

| ಸಮಯ | ಸೋಮವಾರ | ಮಂಗಳವಾರ | ಬುಧವಾರ | ಗುರುವಾರ | ಶುಕ್ರವಾರ | ಶನಿವಾರ | ಭಾನುವಾರ |
|---|---|---|---|---|---|---|---|
| ೬.೦೦ | ದಿವ್ಯಗಾನ | ದಿವ್ಯಗಾನ | ದಿವ್ಯಗಾನ | ದಿವ್ಯಗಾನ | ದಿವ್ಯಗಾನ | ದಿವ್ಯಗಾನ | ದಿವ್ಯಗಾನ |
| ೬.೨೫ | ಚೆನ್ನುಡಿ | ಚೆನ್ನುಡಿ | ಚೆನ್ನುಡಿ | ಚೆನ್ನುಡಿ | ಚೆನ್ನುಡಿ | ಚೆನ್ನುಡಿ | ಚೆನ್ನುಡಿ |
| ೬.೩೦ | ಯೋಗ | ಜೈವಿಕ ಗೊಬ್ಬರ | ಯೋಗ | ಕಾಯಕಲ್ಪ | ಯೋಗ | ಕೃಷಿ ಕಾರ್ಯಕ್ರಮ | ಕೃಷಿ ಕಾರ್ಯಕ್ರಮ |
| ೭.೦೦ | ಗಾಯನ | ಶಾಸ್ತ್ರೀಯ ಸಂಗೀತ | ಗಾಯನ | ಗಾಯನ | ನಾದಸ್ವರ | ಶಾಸ್ತ್ರೀಯ ಸಂಗೀತ | ಗಾಯನ |
| ೭.೩೦ | ಕಾರ್ಯಕ್ರಮ ವಿವರಣೆ | ಕಾರ್ಯಕ್ರಮ ವಿವರಣೆ | ಕಾರ್ಯಕ್ರಮ ವಿವರಣೆ | ಕಾರ್ಯಕ್ರಮ ವಿವರಣೆ | ಕಾರ್ಯಕ್ರಮ ವಿವರಣೆ | ಕಾರ್ಯಕ್ರಮ ವಿವರಣೆ | ಕಾರ್ಯಕ್ರಮ ವಿವರಣೆ |
| ೭.೪೫ | ಕನ್ನಡವಾರ್ತೆ | ಕನ್ನಡವಾರ್ತೆ | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ವಾರ್ತೆಗಳು |
| ೮.೦೦ | ಕರ್ನಾಟಕ ವಾಹಿನಿ | ಕರ್ನಾಟಕ ವಾಹಿನಿ | ಕರ್ನಾಟಕ ವಾಹಿನಿ | ಕರ್ನಾಟಕ ವಾಹಿನಿ | ಕರ್ನಾಟಕ ವಾಹಿನಿ | ಕರ್ನಾಟಕ ವಾಹಿನಿ | ಕರ್ನಾಟಕ ವಾಹಿನಿ |
| ೮.೧೫ | ನೆಟ್‌ವರ್ಕ್ ಕಾರ್ಯಕ್ರಮ | ಕಥಾಕೀರ್ತನೆ | ನೆಟ್‌ವರ್ಕ್ ಕಾರ್ಯಕ್ರಮ | ನೆಟ್‌ವರ್ಕ್ | ಪ್ರಸ್ತುತ | ಪ್ರಾದೇಶಿಕ ನೆಟ್‌ವರ್ಕ್ | ಜೋಕ್ಸ್ |
| ೮.೩೦ | - - - | - - - | - - - | | - - - | - - - | ಡಿಡಿ-೧ರ ಕಾರ್ಯಕ್ರಮ |
| ೯.೦೦ | ಚಿತ್ರಲಹರಿ | ಚಿತ್ರಲಹರಿ | - - - | ವೈದ್ಯಶಾಸ್ತ್ರ ದರ್ಶನ | ಚಿತ್ರಲಹರಿ | - - - | ಫ್ಯಾಷನ್ ಫ್ಯಾಷನ್ |
| ೯.೩೦ | ನಾಟಕ | ವೈದ್ಯಶಾಸ್ತ್ರ ದರ್ಶನ | - - - | ಸಾಕ್ಷಿ ಕಲ್ಲು | ಅಂಧಯುಗ | ಬೆಳ್ಳಿ ಬೆಡಗು | ವೈದ್ಯಶಾಸ್ತ್ರ ದರ್ಶನ |
| ೧೦.೦೦ | - ಅದೇ - | ನಾಟಕ | ಏರ್ ಷೋ - ವರದಿ | - ಅದೇ - | - ಅದೇ - | - ಅದೇ - | ಫೋನ್-ಇನ್ ಕಾರ್ಯಕ್ರಮಗಳು |
| ೧೦.೩೦ | - ಅದೇ - | - ಅದೇ - | ನಾಟಕ | - ಅದೇ - | - ಅದೇ - | ತುಳು ಕಾರ್ಯಕ್ರಮ | - ಅದೇ - |
| ೧೧.೦೦ | ಲಘುಸಂಗೀತ | - ಅದೇ - | ಇಂಚರ | ಲಘುಸಂಗೀತ | - ಅದೇ - | - - - | ಲಘುಸಂಗೀತ |
| ೧೧.೩೦ | ಚಲನಚಿತ್ರ | ಚಲನಚಿತ್ರ | ಚಲನಚಿತ್ರ | ಚಲನಚಿತ್ರ | ಚಲನಚಿತ್ರ | ಚಲನಚಿತ್ರ | ಎವಿಆರ್‌ಸಿ - ಶೈಕ್ಷಣಿಕ ಕಾರ್ಯಕ್ರಮ |
| ೧೨.೦೦ | - ಅದೇ - | - ಅದೇ - | - ಅದೇ - | - ಅದೇ - | - ಅದೇ - | - ಅದೇ - | ನಾಟಕ |

ಎರಡನೆ ಪ್ರಸಾರ : ಮಧ್ಯಾಹ್ನ ೧೨ ಗಂಟೆಯಿಂದ ಸಂಜೆ ೫.೩೦ರವರೆಗೆ

| ಸಮಯ | ಸೋಮವಾರ | ಮಂಗಳವಾರ | ಬುಧವಾರ | ಗುರುವಾರ | ಶುಕ್ರವಾರ | ಸಮಯ | ಶನಿವಾರ | ಭಾನುವಾರ |
|---|---|---|---|---|---|---|---|---|
| ೧೨.೦೦ | ಡಿಡಿ-೧ರ ಕಾರ್ಯಕ್ರಮಗಳು | ಡಿಡಿ-೧ರ ಕಾರ್ಯಕ್ರಮಗಳು | ಡಿಡಿ-೧ರ ಕಾರ್ಯಕ್ರಮಗಳು | ಡಿಡಿ-೧ರ ಕಾರ್ಯಕ್ರಮಗಳು | ಡಿಡಿ-೧ರ ಕಾರ್ಯಕ್ರಮಗಳು | ೧.೦೦ | - - - | ಡಿಡಿ-೧ರ ಕಾರ್ಯಕ್ರಮ |
| | | | | | ಸಿನೆಮಾ ಸಿನೆಮಾ | ೨.೦೦ | - - - | ನಾಟಕ |
| ರಿಂದ | | | | | ಡಿಡಿ-೧ರ ಕಾರ್ಯಕ್ರಮ | ೨.೩೦ | ನಾಟಕ | ಮಕ್ಕಳ ನಾಟಕ |
| | | | | | | ೩.೦೦ | ಅದೇ | ಮಲೆನಾಡ ಮಡಿಲಿಂದ |
| | | | | | | ೩.೩೦ | ಅದೇ | ಕೊಡವ ಕಾರ್ಯಕ್ರಮ |
| ೨.೩೦ | | | | | | ೪.೩೦ | ದೇಶಭಕ್ತಿಗೀತೆ | ಡಿಡಿ-೧ರ ಕಾರ್ಯಕ್ರಮ |
| | | | | | | ೫.೦೦ | ಯಕ್ಷಗಾನ | ಅದೇ |

ಮೂರನೆ ಪ್ರಸಾರ : ಸಂಜೆ ೫.೩೦ರಿಂದ ರಾತ್ರಿ ೮ ಗಂಟೆವರೆಗೆ

| ಸಮಯ | ಸೋಮವಾರ | ಮಂಗಳವಾರ | ಬುಧವಾರ | ಗುರುವಾರ | ಶುಕ್ರವಾರ | ಸಮಯ | ಶನಿವಾರ | ಭಾನುವಾರ |
|---|---|---|---|---|---|---|---|---|
| ೭.೩೦ | ಡಿಡಿ-೧ರ ಕಾರ್ಯಕ್ರಮಗಳು | ಡಿಡಿ-೧ರ ಕಾರ್ಯಕ್ರಮಗಳು | ಡಿಡಿ-೧ರ ಕಾರ್ಯಕ್ರಮಗಳು | ಡಿಡಿ-೧ರ ಕಾರ್ಯಕ್ರಮಗಳು | ಡಿಡಿ-೧ರ ಕಾರ್ಯಕ್ರಮಗಳು | ೬.೦೦ | ಲಘು ಸಂಗೀತ | ಡಿಡಿ-೧ರ ಕಾರ್ಯಕ್ರಮ |
| | | | | | | ೬.೩೦ | ಡಿಡಿ-೧ರ ಕಾರ್ಯಕ್ರಮ | ಅದೇ |
| | | | | | | ೭.೦೦ | ಸಂಗೀತ ಸಂಭ್ರಮ | ಹೊಂಗಿರಣ |
| | | | | | | ೭.೩೦ | ಅದೇ | ವಿಶೇಷ ವರದಿ |

ನಾಲ್ಕನೆ ಪ್ರಸಾರ : ರಾತ್ರಿ ೮ ಗಂಟೆಯಿಂದ

| ಸಮಯ | ಸೋಮವಾರ | ಮಂಗಳವಾರ | ಬುಧವಾರ | ಗುರುವಾರ | ಶುಕ್ರವಾರ | ಸಮಯ | ಶನಿವಾರ | ಭಾನುವಾರ |
|---|---|---|---|---|---|---|---|---|
| ೮.೦೦ | ಪ್ರಾಯೋಜಿತ ಕಾರ್ಯಕ್ರಮ | ಜನನಿ | ನಾಟಕ | ಸಾವಿನ ಸುಳಿಯಲ್ಲಿ | ಕೋಟೆನ ರಹಸ್ಯ | ೮.೦೦ | ಏರ್ ಶೋ ಮದಿ | ಷಾ.ಡಾಕ್ ಷ್ಟೆರಿ |
| ೯.೦೦ | ಅದೇ | ಸಂಪ್ರತಿ | ಪ್ರಾಯೋಜಿತ ಕಾರ್ಯಕ್ರಮ | ಎಳೆಯ ಮನಸಿನ ಎಳೆಗಳು | ಎಳೆಯ ಮನಸಿನ ಎಳೆಗಳು | ೮.೩೦ | ಹಾಸ್ಯ ಚಕ್ರವರ್ತಿ | ಮಿತ್ರಮಿತ್ರ |
| ೯.೩೦ | ಲಘು ಸಂಗೀತ | ಲಘು ಸಂಗೀತ | ಎಳೆಯ ಮನಸ್ಸಿನ ಎಳೆಗಳು | ಫೋನ್ ಇನ್ ಮರುಪ್ರಸಾರ | ಪ್ರಸ್ತುತ | ೯.೦೦ | ಚಿತ್ರರಂಜನಿ | ಮಿ. ಸೀತಾಪತಿ |
| ೧೦.೦೦ | ಪ್ರಾಯೋಜಿತ ಕಾರ್ಯಕ್ರಮ | ಮಾಯಾಮೃಗ | ಲಘು ಸಂಗೀತ | ಯಕ್ಷಗಾನ | ಯಕ್ಷಗಾನ | ೯.೩೦ | ನೂಪುರ ನಾದ | ಧಾರಾವಾಹಿ |
| ೧೦.೩೦ | ಚಲನಚಿತ್ರ | ಚಲನಚಿತ್ರ | ಚಿತ್ರಸಾಗರ | ಚಿತ್ರಸಾಗರ | ಚಲನಚಿತ್ರ | ೧೦.೦೦ | ಸ್ವರಸಂಗಮ | - - - |
| | | | | | | ೧೦.೩೦ | ಚಲನಚಿತ್ರ | ಚಲನಚಿತ್ರ |

# ಪಟ್ಟಿ - ೧೦ : ಉದಯ ದೂರದರ್ಶನ ವಾಹಿನಿಯ ಕಾರ್ಯಕ್ರಮ ವೈವಿಧ್ಯ

ಮೊದಲ ಪ್ರಸಾರ : ಬೆಳಿಗ್ಗೆ ೬.೩೦ ರಿಂದ ಮಧ್ಯಾಹ್ನ ೧೨ ಗಂಟೆವರೆಗೆ (೨೦೦೧ರಲ್ಲಿ ಇದ್ದಂತೆ)

| ಸಮಯ | ಸೋಮವಾರ | ಮಂಗಳವಾರ | ಬುಧವಾರ | ಗುರುವಾರ | ಶುಕ್ರವಾರ | ಶನಿವಾರ | ಸಮಯ | ಭಾನುವಾರ |
|---|---|---|---|---|---|---|---|---|
| ೬.೩೦ | ಭಕ್ತಿಸುಧಾ | ಭಕ್ತಿ ಸುಧಾ | ಭಕ್ತಿ ಸುಧಾ | ಭಕ್ತಿ ಸುಧಾ | ಭಕ್ತಿ ಸುಧಾ | ಭಕ್ತಿಸುಧಾ | ೬.೩೦ | ಭಕ್ತಿಸುಧಾ |
| ೬.೪೫ | ಯೋಗ | ಯೋಗ | ಯೋಗ | ಯೋಗ | ಯೋಗ | ಯೋಗ | ೬.೪೫ | ಯೋಗ |
| ೬.೫೫ | ಈ ದಿನ ಹೇಗೆ? | ಈ ದಿನ ಹೇಗೆ? | ಈ ದಿನ ಹೇಗೆ? | ಈ ದಿನ ಹೇಗೆ? | ಈ ದಿನ ಹೇಗೆ? | ಈ ದಿನ ಹೇಗೆ? | ೬.೫೫ | ಈ ದಿನ ಹೇಗೆ? |
| ೭.೦೦ | ಕಾವ್ಯವಾಚನ | ಕಾವ್ಯವಾಚನ | ಕಾವ್ಯವಾಚನ | ಕಾವ್ಯವಾಚನ | ಕಾವ್ಯವಾಚನ | ಕಾವ್ಯವಾಚನ | ೭.೦೦ | ನೇಗಿಲಯೋಗಿ |
| ೭.೧೫ | ನಾದ | ನಾದ | ನಾದ | ನಾದ | ನಾದ | ನಾದ | | ಅದೇ |
| ೭.೩೦ | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ೭.೩೦ | ವಾರ್ತೆಗಳು |
| ೮.೦೦ | ಪರಿಚಯ | ಪರಿಚಯ | ಪರಿಚಯ | ಪರಿಚಯ | ಪರಿಚಯ | ಪರಿಚಯ | ೮.೦೦ | ಈ ಕ್ಷಣ |
| ೮.೩೦ | ವನಿತೆ | ವನಿತೆ | ವನಿತೆ | ವನಿತೆ | ವನಿತೆ | ವನಿತೆ | ೮.೩೦ | ಬ್ಯಾಚುಲರ್ ಭೀಮಣ್ಣ |
| ೮.೪೫ | ಚಿತ್ರಗೀತೆ | ಚಿತ್ರಗೀತೆ | ಚಿತ್ರಗೀತೆ | ಚಿತ್ರಗೀತೆ | ಚಿತ್ರಗೀತೆಗಳು | ಚಿತ್ರಗೀತೆ | ೯.೦೦ | ಅನುರಾಗ |
| | | | | | | | ೯.೩೦ | ನಿಮ್ಮ ಹಾಡು |
| ೧೦.೦೦ | ಧಾರಾವಾಹಿಗಳು | ಧಾರಾವಾಹಿಗಳು | ಧಾರಾವಾಹಿಗಳು | ಧಾರಾವಾಹಿಗಳು | ಧಾರಾವಾಹಿಗಳು | ಧಾರಾವಾಹಿಗಳು | ೧೦.೦೦ | ಪ್ರೀತಿ ಮಾಡು |
| ರಿಂದ | (೧/೨ ಗಂಟೆಯ | (೧/೨ ಗಂಟೆಯ | (೧/೨ ಗಂಟೆಯ | (೧/೨ ಗಂಟೆಯ | (೧/೨ ಗಂಟೆಯ | (೧/೨ ಗಂಟೆಯ | | ತಮಾಷೆ ನೋಡು |
| ೧೨ ಗಂಟೆ | ೪ ಧಾರಾವಾಹಿಗಳು) | ೪ ಧಾರಾವಾಹಿಗಳು) | ೪ ಧಾರಾವಾಹಿಗಳು) | ೪ ಧಾರಾವಾಹಿಗಳು) | ೪ ಧಾರಾವಾಹಿಗಳು) | ೪ ಧಾರಾವಾಹಿಗಳು) | ೧೦.೩೦ | ಆದರ್ಶ ದಂಪತಿಗಳು |
| ವರೆಗೆ | | | | | | | ೧೧.೦೦ | ಡ್ಯಾನ್ಸ್ ಡ್ಯಾನ್ಸ್ |
| | | | | | | | ೧೧.೩೦ | ಆಲ್ ರೌಂಡರ್ |
| | | | | | | | | ಹನುಮಂತು |
| ಇದೆಲ್ಲದರ ಜೊತೆಗೆ ೨೪ ಗಂಟೆಗಳ ಪ್ರತ್ಯೇಕ ಸುದ್ದಿವಾಹಿನಿಯನ್ನೇ ಹೊಂದಿದೆ. | | | | | | | | |

ಎರಡನೆ ಪ್ರಸಾರ : ಮಧ್ಯಾಹ್ನ ೧೨ ಗಂಟೆಯಿಂದ ಸಂಜೆ ೫.೩೦ರವರೆಗೆ

| ಸಮಯ | ಸೋಮವಾರ | ಮಂಗಳವಾರ | ಬುಧವಾರ | ಗುರುವಾರ | ಶುಕ್ರವಾರ | ಶನಿವಾರ | ಭಾನುವಾರ |
|---|---|---|---|---|---|---|---|
| ೧೨.೦೦ | ಪಿತ್ರಾರ್ಜಿತ | ಮಹಾನದಿ (ಮರುಪ್ರಸಾರ) | ಮುಖಾಮುಖಿ (ಮರುಪ್ರಸಾರ) | ಚಿತ್ರವಾರ್ತೆ | ದೇವ್ರು ದೇವ್ರು ದೇವ್ರು | ನಾಕೌಟ್ ನೋಟ | ಚಿತ್ರವಾರ್ತೆ |
| ೧೨.೩೦ | ಕಸ್ತೂರಿ ನಿವಾಸ | ಕಸ್ತೂರಿ ನಿವಾಸ | ಕಸ್ತೂರಿ ನಿವಾಸ | ಕಸ್ತೂರಿ ನಿವಾಸ | ಕಸ್ತೂರಿ ನಿವಾಸ | ಕಸ್ತೂರಿ ನಿವಾಸ | ಸಕತ್ ಸಿನಿಮಾ |
| ೧.೦೦ | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ವಾರ್ತೆಗಳು |
| ೧.೩೦ | ಅಪರಾಜಿತೆ | ಅಪರಾಜಿತೆ | ಅಪರಾಜಿತೆ | ಅಪರಾಜಿತೆ | ಅಪರಾಜಿತೆ | ಮಿ. ಗುಂಡಣ್ಣ | ಪ್ರಪಂಚ ಪರ್ಯಟನೆ |
| ೨.೦೦ | ಸಂಕ್ರಾಂತಿ | ಸಂಕ್ರಾಂತಿ | ಸಂಕ್ರಾಂತಿ | ಸಂಕ್ರಾಂತಿ | ಸಂಕ್ರಾಂತಿ | ಸಂಕ್ರಾಂತಿ | ಸಂಕ್ರಾಂತಿ |
| ೨.೩೦ | ಜೀವನ | ಜೀವನ | ಜೀವನ | ಜೀವನ | ಜೀವನ | ಜೀವನ | ಚಲನಚಿತ್ರ |
| ೩.೦೦ | ಚಲನಚಿತ್ರ | ಚಲನಚಿತ್ರ | ಚಲನಚಿತ್ರ | ಚಲನಚಿತ್ರ | ಚಲನಚಿತ್ರ | ಚಲನಚಿತ್ರ | |

ಮೂರನೆ ಪ್ರಸಾರ : ಸಂಜೆ ೫.೩೦ರಿಂದ ರಾತ್ರಿ ೮ ಗಂಟೆಯವರೆಗೆ

| | | | | | | | |
|---|---|---|---|---|---|---|---|
| ೫.೩೦ | ಹೃದಯದಿಂದ | ಹೃದಯದಿಂದ | ಹೃದಯದಿಂದ | ಹೃದಯದಿಂದ | ಹೃದಯದಿಂದ | ಹೃದಯದಿಂದ | ಜ್ಯೋತಿಷ್ಯ |
| ೬.೦೦ | ಕಾರ್ಟೂನ್ಸ್ | ಕಾರ್ಟೂನ್ಸ್ | ಕಾರ್ಟೂನ್ಸ್ | ಕಾರ್ಟೂನ್ಸ್ | ಕಾರ್ಟೂನ್ಸ್ | ಚಲನಚಿತ್ರ | ಚಲನಚಿತ್ರ |
| ೬.೩೦ | ಸೂಪರ್‌ಸೀನ್ಸ್ | ಮುಖಾಮುಖಿ | ಓಲ್ಡ್ ಈಸ್ ಗೋಲ್ಡ್ | ಸೂಪರ್‌ಸೀನ್ಸ್ | ಹಾಸ್ಯ | ಅದೇ | ಅದೇ |
| ೭.೦೦ | ಅಭಿಮಾನ | ಅಭಿಮಾನ | ಅಭಿಮಾನ | ಅಭಿಮಾನ | ಅಭಿಮಾನ | ಅದೇ | ಅದೇ |
| ೭.೩೦ | ದಂಡಪಿಂಡಗಳು | ದಂಡಪಿಂಡಗಳು | ದಂಡಪಿಂಡಗಳು | ದಂಡಪಿಂಡಗಳು | ದಂಡಪಿಂಡಗಳು | ಅದೇ | ಅದೇ |

ನಾಲ್ಕನೆ ಪ್ರಸಾರ : ರಾತ್ರಿ ೮ ಗಂಟೆಯಿಂದ

| | | | | | | | |
|---|---|---|---|---|---|---|---|
| ೮.೦೦ | ಪ್ರೀತಿಯ ಹೂಗಳು | ಮಹಾನದಿ | ನಿಮ್ಮ ಆಯ್ಕೆ | ನಾಕ್ ಔಟ್ ನೋಟ | ಹೆಜ್ಜೆಗಳು | ಅದೇ | ಅದೇ |
| ೮.೩೦ | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ವಾರ್ತೆಗಳು |
| ೯.೦೦ | ಭಾಗ್ಯ | ಭಾಗ್ಯ | ಭಾಗ್ಯ | ಭಾಗ್ಯ | ಭಾಗ್ಯ | ಚಲನಚಿತ್ರ | ಚಲನಚಿತ್ರ |
| ೯.೩೦ | ದುರ್ಗಾ | ದುರ್ಗಾ | ದುರ್ಗಾ | ದುರ್ಗಾ | ದುರ್ಗಾ | ಅಕ್ಷರ ಮಾಲೆ | ಟಾಪ್ -೧೦ |
| ೧೦.೦೦ | ಕಾವ್ಯಾಂಜಲಿ | ಕಾವ್ಯಾಂಜಲಿ | ಕಾವ್ಯಾಂಜಲಿ | ಕಾವ್ಯಾಂಜಲಿ | ಕಾವ್ಯಾಂಜಲಿ | ಹೊಂಬೆಳಕು | ಅದೇ |
| ೧೦.೩೦ | ಚಲನಚಿತ್ರ | ಚಲನಚಿತ್ರ | ಚಲನಚಿತ್ರ | ಚಲನಚಿತ್ರ | ಚಲನಚಿತ್ರ | ಹಾಸ್ಯಲಾಸ್ಯ | ನಮ್ಮ ಸುತ್ತ |
| ನಂತರ | ಚಿತ್ರಗೀತೆ | ಚಿತ್ರಗೀತೆ | ಚಿತ್ರಗೀತೆ | ಚಿತ್ರಗೀತೆ | ಚಿತ್ರಗೀತೆ | ೧೧.೦೦ ನಿಮ್ಮ ಆಯ್ಕೆ | ಓಲ್ಡ್ ಈಸ್ ಗೋಲ್ಡ್ |

## ಪಟ್ಟಿ - ೧೧ : ಈಟೀವಿ ವಾಹಿನಿಯ ಕಾರ್ಯಕ್ರಮ ವೈವಿಧ್ಯ

ಮೊದಲ ಪ್ರಸಾರ : ಬೆಳಿಗ್ಗೆ ೬.೦೦ರಿಂದ ೧೨.೦೦ ಗಂಟೆಯವರೆಗೆ (೨೦೦೧ರಲ್ಲಿ ಇದ್ದಂತೆ)

| ಸಮಯ | ಸೋಮವಾರ | ಮಂಗಳವಾರ | ಬುಧವಾರ | ಗುರುವಾರ | ಶುಕ್ರವಾರ | ಶನಿವಾರ | ಭಾನುವಾರ |
|---|---|---|---|---|---|---|---|
| ೬.೦೦ | ನಿವೇದನೆ | ನಿವೇದನೆ | ನಿವೇದನೆ | ನಿವೇದನೆ | ನಿವೇದನೆ | ನಿವೇದನೆ | ನಿವೇದನೆ |
| ೬.೩೦ | ಅನ್ನದಾತ | ಅನ್ನದಾತ | ಅನ್ನದಾತ | ಅನ್ನದಾತ | ಅನ್ನದಾತ | ಅನ್ನಾದಾತ | ಅನ್ನದಾತ |
| ೭.೦೦ | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ವಾರ್ತೆಗಳು |
| ೭.೩೦ | ಹಲೋ ಇಂಡಿಯಾ | ಹಲೋ ಇಂಡಿಯಾ | ಹಲೋ ಇಂಡಿಯಾ | ಹಲೋ ಇಂಡಿಯಾ | ಹಲೋ ಇಂಡಿಯಾ | ಹಲೋ ಇಂಡಿಯಾ | ಹಲೋ ಇಂಡಿಯಾ |
| ೮.೦೦ | ಡಿಮ್ಯಾಂಡಪ್ಪೋ ಡಿಮ್ಯಾಂಡು | ಡಿಮ್ಯಾಂಡಪ್ಪೋ ಡಿಮ್ಯಾಂಡು | ಡಿಮ್ಯಾಂಡಪ್ಪೋ ಡಿಮ್ಯಾಂಡು | ಡಿಮ್ಯಾಂಡಪ್ಪೋ ಡಿಮ್ಯಾಂಡು | ಡಿಮ್ಯಾಂಡಪ್ಪೋ ಡಿಮ್ಯಾಂಡು | ಡಿಮ್ಯಾಂಡಪ್ಪೋ ಡಿಮ್ಯಾಂಡು | ಹುರಿಗಾಳು |
| ೯.೦೦ | ಚುರುಮುರಿ | ಚುರುಮುರಿ | ಚುರುಮುರಿ | ಚುರುಮುರಿ | ಚುರುಮುರಿ | ಆಡ್ ಬ್ಯಾಟ್ | ತಾರೆಗಳ ತೋಟ |
| ೯.೩೦ | ಉಲ್ಟಾಪಲ್ಟಾ | ಪುಟಾಣಿ ಡಾಟ್‌ಕಾಮ್ | ಗೀತ ಸಂಗೀತ | ಸಿಂಹಾವಲೋಕನ | ಕಾಫಿಕ್ಲಬ್ಬು | ಗೀತ ಸಂಗೀತ | ಮಾಸ್ಟರ್ |
| ೧೦.೦೦ | ಅಣ್ಣಾ ಬಸವಣ್ಣ | ಮಾತುಕತೆ | ನೇಪಥ್ಯ | ಅಧಿಕ ಪ್ರಸಂಗ | ದೃಶ್ಯ ಶೃಂಗ | ತಾರೆಗಳ ತೋಟ | ಅಣ್ಣ ಬಸವಣ್ಣ |
| ೧೦.೩೦ | ಅದೇ | ಏಕ ಅನೇಕ | ಮಾಸ್ಟರ್ | ಅಮರಗೀತೆಗಳು | ಹುರಿಗಾಳು | ಪ್ರೇಮಕಥೆಗಳು | ಅದೇ |
| ೧೧.೦೦ | ಅಚ್ಚುಮೆಚ್ಚು | ನಾದಲೀಲೆ | ಚಿತ್ರಸಂಗಮ | ಚಿತ್ರಸಂಗಮ | ಪ್ರಯಾಣ | ಚಿತ್ರಸಂಗಮ | ಅಧಿಕ ಪ್ರಸಂಗ |
| ೧೧.೩೦ | ಬೆಳ್ಳಿತೆರೆ ಮ. ಪ್ರ. | ಬೆಳ್ಳಿತೆರೆ ಮ. ಪ್ರ. | ಬೆಳ್ಳಿತೆರೆ ಮ. ಪ್ರ. | ಬೆಳ್ಳಿತೆರೆ ಮ. ಪ್ರ. | ಬೆಳ್ಳಿತೆರೆ ಮ. ಪ್ರ. | ಬೆಳ್ಳಿತೆರೆ ಮ. ಪ್ರ. | ಬೆಳ್ಳಿತೆರೆ ಮ. ಪ್ರ. |
| ಇದೆಲ್ಲದರ ಜೊತೆಗೆ ಪ್ರತಿ ಗಂಟೆಗೊಮ್ಮೆ ೩ ರಿಂದ ೫ ನಿಮಿಷಗಳ ವಾರ್ತಾ ಮುಖ್ಯಾಂಶಗಳು ದಿನವೂ ನಿರಂತರವಾಗಿ ಪ್ರಸಾರವಾಗುತ್ತವೆ. | | | | | | | |

ಎರಡನೆ ಪ್ರಸಾರ : ೧೨.೦೦ ಗಂಟೆಯಿಂದ ಸಂಜೆ ೫.೩೦ರವರೆಗೆ

| ಸಮಯ | ಸೋಮವಾರ | ಮಂಗಳವಾರ | ಬುಧವಾರ | ಗುರುವಾರ | ಶುಕ್ರವಾರ | ಶನಿವಾರ | ಭಾನುವಾರ |
|---|---|---|---|---|---|---|---|
| ೧೨.೦೦ | ಅಂತರಗಂಗೆ | ಕಣ್ಣಾಮುಚ್ಚಾಲೆ ಮ.ಪ್ರ | ಮೀಸೆ ಬಂದೋರು ಮ.ಪ್ರ | ಮುಸ್ಸಂಜೆ | ದಶಾವತಾರ | ದೃಶ್ಯ ಶೃಂಗ | ಉಲ್ಟಾಪಲ್ಟಾ |
| ೧೨.೩೦ | ಸರೋಜಿನಿ ಮ.ಪ್ರ. | ಸರೋಜಿನಿ ಮ.ಪ್ರ. | ಸರೋಜಿನಿ ಮ.ಪ್ರ. | ಸರೋಜಿನಿ ಮ.ಪ್ರ. | ಸರೋಜಿನಿ ಮ.ಪ್ರ. | ಸರೋಜಿನಿ ಮ.ಪ್ರ. | ಸರೋಜಿನಿ ಮ.ಪ್ರ. |
| ೧.೦೦ | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ವಾರ್ತೆಗಳು |
| ೧.೩೦ | ಸಖಿ | ಸಖಿ | ಸಖಿ | ಸಖಿ | ಸಖಿ | ಸೂರ್ಯ ಶಿಕಾರಿ | ಕಾಫಿಕ್ಲಬ್ಬು |
| | | | | | | | ೨.೦೦ ನೇಪಥ್ಯ |
| ೨.೩೦ | ಸೃಷ್ಟಿ ಮ.ಪ್ರ. | ಸೃಷ್ಟಿ ಮ.ಪ್ರ. | ಸೃಷ್ಟಿ ಮ.ಪ್ರ. | ಸೃಷ್ಟಿ ಮ.ಪ್ರ. | ಸೃಷ್ಟಿ ಮ.ಪ್ರ. | ಏಕ ಅನೇಕ | ಅಚ್ಚುಮೆಚ್ಚು |
| ೩.೦೦ | ಚಲನಚಿತ್ರ | ಚಲನಚಿತ್ರ | ಚಲನಚಿತ್ರ | ಚಲನಚಿತ್ರ | ಚಲನಚಿತ್ರ | ಚಲನಚಿತ್ರ | ಚಲನಚಿತ್ರ |

ಮೂರನೇ ಪ್ರಸಾರ : ಸಂಜೆ ೫.೩೦ರಿಂದ ರಾತ್ರಿ ೮.೦೦ ಗಂಟೆಯವರೆಗೆ

| | | | | | | | |
|---|---|---|---|---|---|---|---|
| ೫.೩೦ | ಸಖಿ ಮ.ಪ್ರ. | ಸಖಿ ಮ.ಪ್ರ. | ಸಖಿ ಮ.ಪ್ರ. | ಸಖಿ ಮ.ಪ್ರ. | ಸಖಿ ಮ.ಪ್ರ. | ಅದೇ | ಅದೇ |
| ೬.೦೦ | ಚಿಗುರು | ಚಿಗುರು | ಚಿಗುರು | ಚಿಗುರು | ಚಿಗುರು | ಪುಟಾಣಿ ಡಾಟ್ ಕಾಮ್ | ಮಾತುಕತೆ |
| ೬.೩೦ | ಚುರುಮುರಿ ಮ.ಪ್ರ. | ಚುರುಮುರಿ ಮ.ಪ್ರ. | ಚುರುಮುರಿ ಮ.ಪ್ರ. | ಚುರುಮುರಿ ಮ.ಪ್ರ. | ಚುರುಮುರಿ ಮ.ಪ್ರ. | ಸಿಂಹಾವಲೋಕನ | ನಾದಲೀಲೆ |
| ೭.೦೦ | ಕನ್ನಡ ನಾಡಿ-ವಾರ್ತೆಗಳು | ಕನ್ನಡನಾಡಿ | ಕನ್ನಡನಾಡಿ | ಕನ್ನಡನಾಡಿ | ಕನ್ನಡನಾಡಿ | ಕನ್ನಡನಾಡಿ | ಕನ್ನಡನಾಡಿ |
| ೭.೩೦ | ಸೃಷ್ಟಿ | ಸೃಷ್ಟಿ | ಸೃಷ್ಟಿ | ಸೃಷ್ಟಿ | ಸೃಷ್ಟಿ | ಪ್ರೇಮಕಥೆಗಳು | ಸೂರ್ಯಶಿಕಾರಿ |

ನಾಲ್ಕನೆ ಪ್ರಸಾರ : ರಾತ್ರಿ ೮.೦೦ ಗಂಟೆಯಿಂದ

| | | | | | | | |
|---|---|---|---|---|---|---|---|
| ೮.೦೦ | ಕಣ್ಣಾಮುಚ್ಚಾಲೆ | ಮೀಸೆ ಬಂದೋರು | ಮುಸ್ಸಂಜೆ | ದಶಾವತಾರ | ಅಂತರಗಂಗೆ | - | - |
| ೮.೩೦ | ಬೆಳ್ಳಿತೆರೆ | ಬೆಳ್ಳಿತೆರೆ | ಬೆಳ್ಳಿತೆರೆ | ಬೆಳ್ಳಿತೆರೆ | ಬೆಳ್ಳಿತೆರೆ | ಬೆಳ್ಳಿತೆರೆ | ಬೆಳ್ಳಿತೆರೆ |
| ೯.೦೦ | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ವಾರ್ತೆಗಳು |
| ೯.೩೦ | ಸರೋಜಿನಿ | ಸರೋಜಿನಿ | ಸರೋಜಿನಿ | ಸರೋಜಿನಿ | ಸರೋಜಿನಿ | ಸರೋಜಿನಿ | ಸರೋಜಿನಿ |
| ೧೦.೦೦ | ಚಲನಚಿತ್ರ | ಚಲನಚಿತ್ರ | ಚಲನಚಿತ್ರ | ಚಲನಚಿತ್ರ | ಚಲನಚಿತ್ರ | ಚಲನಚಿತ್ರ | ವಾರದ ಚಲನಚಿತ್ರ |
| ೧.೦೦ | ಚಿತ್ರಯಾಮಿನಿ | ಚಿತ್ರಯಾಮಿನಿ | ಚಿತ್ರಯಾಮಿನಿ | ಚಿತ್ರಯಾಮಿನಿ | ಚಿತ್ರಯಾಮಿನಿ | ಚಿತ್ರಯಾಮಿನಿ | |

## ಪಟ್ಟಿ - ೧೨ : ಸುಪ್ರಭಾತ ವಾಹಿನಿಯ ಕಾರ್ಯಕ್ರಮ ವೈವಿಧ್ಯ

ಮೊದಲ ಪ್ರಸಾರ : ಬೆಳಿಗ್ಗೆ ೬ರಿಂದ ಮಧ್ಯಾಹ್ನ ೧೨ರವರೆಗೆ (೨೦೦೧ರಲ್ಲಿ ಇದ್ದಂತೆ)

| ಸಮಯ | ಸೋಮವಾರ | ಮಂಗಳವಾರ | ಬುಧವಾರ | ಗುರುವಾರ | ಶುಕ್ರವಾರ | ಶನಿವಾರ | ಭಾನುವಾರ |
|---|---|---|---|---|---|---|---|
| ೬.೦೦ | ಸುಪ್ರಭಾತ | ಸುಪ್ರಭಾತ | ಸುಪ್ರಭಾತ | ಸುಪ್ರಭಾತ | ಸುಪ್ರಭಾತ | ಸುಪ್ರಭಾತ | ಸುಪ್ರಭಾತ |
| ೬.೩೦ | ಅನ್ನದಾತ ಸುಖೀಭವ | ಅನ್ನದಾತ ಸುಖೀಭವ | ಅನ್ನದಾತ ಸುಖೀಭವ | ಅನ್ನದಾತ ಸುಖೀಭವ | ಅನ್ನದಾತ ಸುಖೀಭವ | ಅನ್ನದಾತ ಸುಖೀಭವ | ಅನ್ನದಾತ ಸುಖೀಭವ |
| ೭.೦೦ | ಅಮೃತಬಿಂದು | ಅಮೃತಬಿಂದು | ಅಮೃತಬಿಂದು | ಅಮೃತಬಿಂದು | ಅಮೃತಬಿಂದು | ಅಮೃತಬಿಂದು | ಅಮೃತಬಿಂದು |
| ೭.೩೦ | ನಂ ನ್ಯೂಸ್ | ಇಂಚರ | ಇಂಚರ | ಇಂಚರ | ಇಂಚರ | ಇಂಚರ | ಇಂಚರ |
| ೮.೦೦ | ಅರುಣೋದಯ | ಅರುಣೋದಯ | ಅರುಣೋದಯ | ಅರುಣೋದಯ | ಅರುಣೋದಯ | ಅರುಣೋದಯ | ಸಿನೆಮಾ ಹಿನ್ನೋಟ |
| ೮.೩೦ | ಸೈಡ್‌ರೀಲ್ | ಸೈಡ್‌ರೀಲ್ | ಸೈಡ್‌ರೀಲ್ | ಸೈಡ್‌ರೀಲ್ | ಸೈಡ್‌ರೀಲ್ | ಸೈಡ್‌ರೀಲ್ | ಅದೇ |
| ೯.೦೦ | ಆಸೆ ಅನಿಸಿಕೆ | ಒಲವು ಗೆಲವು | ಹಾವು-ಏಣಿಯಾಟ | ಬಯೋಸ್ಕೋಪ್ | ಅನುಬಂಧ | ಕರ್ನಾಟಕ ಜೈನ ದೇವಾಲಯಗಳು | ಅದೇ |
| ೯.೩೦ | ಡಂಗುರ | ಕರುಣಾಳು ಬಾ ಬೆಳಕೆ | ಆಡೋಣ ಬಾ | ಸಂಗೀತ ಸಾಗರ | ಮಿನುಗುನಕ್ಷತ್ರ | ಸೂಪರ್-೧೦ | ಗಡಿಬಿಡಿ ಸಂಸಾರ |
| ೧೦.೦೦ | ನಾದಲಹರಿ | ಮಾತಾಡ್ ಮಾತಾಡ್ ಮಲ್ಲಿಗೆ | ರಾಗವಾಹಿನಿ | ಗೌಡತಿ ಗೌರಮ್ಮ | ಇಂಚರ | ಪ್ರಾಣಿಗಳ ಪ್ರಪಂಚ | ನೃತ್ಯದರ್ಶನ |
| ೧೦.೩೦ | ಕೆಲಸ ಬೇಕು ಕೆಲಸ | ಎದೆಯಾಳದಿಂದ | ಒಂದಾನೊಂದು ಕಾಲದಲ್ಲಿ | ಮನುಜಮತ | ಋತುಗಾನ | ಋತುಗಾನ | ಸೈಡ್‌ರೀಲ್ |
| ೧೧.೦೦ | ಸೂಪರ್-೧೦ | ಬಣ್ಣ | ಮಾನಿನಿ | ಋತುಗಾನ | ನೃತ್ಯದರ್ಶನ | ಗುರು ರಾಘವೇಂದ್ರ | ಒಂದೇತಾಳ |
| ೧೧.೩೦ | ಗುರಿ | ಗಡಿಬಿಡಿ ಸಂಸಾರ | ಪ್ರಾಣಿಗಳ ಪ್ರಪಂಚ | ಕ್ರೈಂಬೀಟ್ | ಋತುಗಾನ | ಸಂಗೀತ ಸಂಗೀತ | ಒಂದಾನೊಂದು ಕಾಲದಲ್ಲಿ |

ಎರಡನೆ ಪ್ರಸಾರ : ಮಧ್ಯಾಹ್ನ ೧೨ರಿಂದ ಸಂಜೆ ೫.೩೦ರವರೆಗೆ

| ಸಮಯ | ಸೋಮವಾರ | ಮಂಗಳವಾರ | ಬುಧವಾರ | ಗುರುವಾರ | ಶುಕ್ರವಾರ | ಶನಿವಾರ | ಭಾನುವಾರ |
|---|---|---|---|---|---|---|---|
| ೧೨.೦೦ | ಮನಸ್ಸು ಇಲ್ಲದ ಮಾರ್ಗ | ನೃತ್ಯದರ್ಶನ | ಸಂತೆಯೊಳಗೊಂದು ಮನೆಯ ಮಾಡಿ | ಋತುಗಾನ | - - - | ಈ ಸಿನಿಮಾ | ಮಾತಾಡ್ ಮಾತಾಡ್ ಮಲ್ಲಿಗೆ |
| ೧೨.೩೦ | ಚಿತ್ತಾರ | ಚಿತ್ತಾರ | ಚಿತ್ತಾರ | ಚಿತ್ತಾರ | ಚಿತ್ತಾರ | ರಾಗವಾಹಿನಿ | ಒಲವು ಚೆಲುವು |
| ೧.೦೦ | ನವನವೀನ | ಒಂದೇ ತಾಳ | ನವನವೀನ | ನವನವೀನ | ನವನವೀನ | ಅಂಕದ ಪರದೆ | ಅಭಿಮಾನಿ |
| ೨.೦೦ | ಭೂಮಿಕಾ | ಭೂಮಿಕಾ | ಭೂಮಿಕಾ | ಭೂಮಿಕಾ | ಭೂಮಿಕಾ | ಇಂಚರ | [illegible] ಆಫ್ ದಿ ವೀಕ್ |
| ೨.೩೦ | ಇಂಚರ | ಇಂಚರ | ಇಂಚರ | ಇಂಚರ | ಗುರಿ | ಮಾನಿನಿ | - ಅದೇ - |
| ೩.೦೦ | ಶುಭರಾತ್ರಿ | ಬಾಂಧವ್ಯ | ರಿಜಿಸ್ಟರ್ಡ್ ಪೋಸ್ಟ್ | ನಗುನಗುತ್ತಾ ಇರಿ | ಕೆರೆಗೆ ಹಾರ | ಮೂಳೆ ಮಾನವ | [illegible] ಬಲ್ಲವನಿಗೆ ರೋಗವಿಲ್ಲ |
| ೪.೩೦ | ಇಂಚರ | ಇಂಚರ | ಇಂಚರ | ಇಂಚರ | ಇಂಚರ | ನವನವೀನ | - - - |

ಮೂರನೆ ಪ್ರಸಾರ : ಸಂಜೆ ೫.೩೦ರಿಂದ ರಾತ್ರಿ ೮ ಗಂಟೆವರೆಗೆ

| | | | | | | | |
|---|---|---|---|---|---|---|---|
| ೫.೩೦ | ಸ್ಪೈಡ್ ರೀಲ್ | ಸ್ಪೈಡ್ ರೀಲ್ | ಸ್ಪೈಡ್ ರೀಲ್ | ಸ್ಪೈಡ್ ರೀಲ್ | ಸ್ಪೈಡ್ ರೀಲ್ | ಸ್ಪೈಡ್ ರೀಲ್ | ಹೆಜ್ಜೆ ಗೆಜ್ಜೆ |
| ೬.೦೦ | ಪ್ರಾಣಿಗಳ ಪ್ರಪಂಚ | ಇಂಚರ | ಮನುಜಮತ | ಮಿನುಗು ನಕ್ಷತ್ರ | ಈ ಸಿನಿಮಾ | ಆಸೆ - ಅನಿಸಿಕೆ | ತಿಲ್ಲಾನ ತಿಲ್ಲಾನ |
| ೬.೩೦ | ಅನ್ನದಾತ ಸುಖೀಭವ | ಅನ್ನದಾತ ಸುಖೀಭವ | ಅನ್ನದಾತ ಸುಖೀಭವ | ಅನ್ನದಾತ ಸುಖೀಭವ | ಅನ್ನದಾತ ಸುಖೀಭವ | ಅನ್ನದಾತ ಸುಖೀಭವ | ಕರುನಾಡ [illegible] ಬೆಳಕೆ |
| ೭.೦೦ | ಎದೆಯಾಳದಿಂದ | ಬಯೋಸ್ಕೋಪ್ | ಅನುಬಂಧ | ಸೂಪರ್-೧೦ | ಇಂಚರ | ಡಂಗೂರ | ಪುಸ್ತ |
| ೭.೩೦ | ಚಿತ್ತಾರ | ಚಿತ್ತಾರ | ಚಿತ್ತಾರ | ಚಿತ್ತಾರ | ಚಿತ್ತಾರ | ಕೆಲಸ ಬೇಕು ಕೆಲಸ | - ಅದೇ - |

ನಾಲ್ಕನೆ ಪ್ರಸಾರ : ರಾತ್ರಿ ೮ ಗಂಟೆಯಿಂದ

| | | | | | | | |
|---|---|---|---|---|---|---|---|
| ೮.೦೦ | ಭೂಮಿಕಾ | ಭೂಮಿಕಾ | ಭೂಮಿಕಾ | ಭೂಮಿಕಾ | ಭೂಮಿಕಾ | ಇಂಚರ | ಸಂಗೀತ ಸಾಗರ |
| ೮.೩೦ | ಜೋಜೋಕಂದ | ಜೋಜೋಕಂದ | ಜೋಜೋಕಂದ | ಜೋಜೋಕಂದ | ಜೋಜೋಕಂದ | ಸಾಕ್ಷ್ಯ ಚಿತ್ರ | - - - |
| ೯.೦೦ | ಕ್ರೈಂಬೀಟ್ | ನವನವೀನ | ನವನವೀನ | ನವನವೀನ | ಅಂಕದಪರದೆ | ಬಣ್ಣ | - - - |
| ೯.೩೦ | ಮನೆಯಂಗಳದ ಮಾತು | ಅದೇ | ಅದೇ | ಅದೇ | ಜಾಲ | ನಾದಲಹರಿ | ಗುರಿ |
| ೧೦.೦೦ | ರಾಗರಂಜನೆ | ಸ್ಪೈಡ್ ರೀಲ್ | ಸ್ಪೈಡ್ ರೀಲ್ | ಗುರು ರಾಘವೇಂದ್ರ | ಸಂಗೀತ ಸಂಜೆ | ಮನಸಿದ್ದರೆ ಮಾರ್ಗ | ಅಂತಕ |
| ೧೦.೩೦ | ಸ್ಪೈಡ್ ರೀಲ್ | ಬಾಂಧವ್ಯ ೧೧.೦೦ | ರಿಜಿಸ್ಟರ್ಡ್ ಪೋಸ್ಟ್ | ನಗುನಗುತ್ತಾ ಇರಿ | ಕೆರೆಗೆ ಹಾರ | ಮೂಳೆ ಮಾನವ | ಸ್ಪೈಡ್ ರೀಲ್ |

# ಪಟ್ಟಿ - ೧೩ : ಕಾವೇರಿ ವಾಹಿನಿಯ ಕಾರ್ಯಕ್ರಮ ವೈವಿಧ್ಯ

ಮೊದಲ ಪ್ರಸಾರ : ಬೆಳಿಗ್ಗೆ ೬.೩೦ರಿಂದ ಮಧ್ಯಾಹ್ನ ೧೨ರವರೆಗೆ (೨೦೦೧ರಲ್ಲಿ ಇದ್ದಂತೆ)

| ಸಮಯ | ಸೋಮವಾರ | ಮಂಗಳವಾರ | ಬುಧವಾರ | ಗುರುವಾರ | ಶುಕ್ರವಾರ | ಶನಿವಾರ | ಭಾನುವಾರ |
|---|---|---|---|---|---|---|---|
| ೬.೩೦ | ಶುಭದಿನ | ಶುಭದಿನ | ಶುಭದಿನ | ಶುಭದಿನ | ಶುಭದಿನ | ಶುಭದಿನ | ಶುಭದಿನ |
| ೭.೩೦ | ವಾರಭವಿಷ್ಯ | ಹೊಸಚಿತ್ರಗೀತೆ | ಹೊಸಚಿತ್ರಗೀತೆ | ಹೊಸಚಿತ್ರಗೀತೆ | ಹೊಸಚಿತ್ರಗೀತೆ | ಹೊಸಚಿತ್ರಗೀತೆ | ಪೋಸ್ಟ್‌ಬಾಕ್ಸ್ |
| ೮.೦೦ | ಶುಭದಿನ | ಶುಭದಿನ | ಶುಭದಿನ | ಶುಭದಿನ | ಶುಭದಿನ | ಶುಭದಿನ | ಶುಭದಿನ |
| ೯.೦೦ | ವಿಶೇಷ ಪ್ರತಿನಿಧಿ | ಹೊಸಚಿತ್ರಗೀತೆ | ಹೊಸಚಿತ್ರಗೀತೆ | ಹೊಸಚಿತ್ರಗೀತೆ | ಹೊಸಚಿತ್ರಗೀತೆ | ಹೊಸಚಿತ್ರಗೀತೆ | ಕೌಂಟ್ ಡೌನ್ |
| ೯.೩೦ | ಡಯಲ್ ಕಾವೇರಿ | ಕೌಂಟ್ ಡೌನ್ | ರಿಬಾಬಾರಿ | ಶೇಕ್ ಬೇಬಿ ಶೇಕ್ | ಹಿಟ್‌ಪರೇಡ್ | ತಾರಾಲೋಕ | ಅದೇ |
| ೧೦.೦೦ | ಅದೇ | ಅದೇ | ಅದೇ | ಅದೇ | ಸಿನೆಮಾ ಸಿನೆಮಾ | ಮಾತು ಮಂಥನ | ಹೆಲ್ಪ್‌ಲೈನ್ |
| ೧೦.೩೦ | ವಿಜೇತ | ವಿಜೇತ | ವಿಜೇತ | ವಿಜೇತ | ವಿಜೇತ | ರಿಬಾಬಾರಿ | ನಿಕ್ಷೇಪ |
| ೧೧.೦೦ | ಸ್ತ್ರೀ | ಸ್ತ್ರೀ | ಸ್ತ್ರೀ | ಸ್ತ್ರೀ | ಸ್ತ್ರೀ | ಅದೇ | ಕಾವೇರಿ ನಾಡಿನ ಕಾರಂಜಿಗಳು |
| ೧೧.೩೦ | ಪೋಸ್ಟ್‌ಬಾಕ್ಸ್ | ಬಿಸಿಲುಗುದುರೆ | ಷೋರೀಲ್ | ಕಾವೇರಿ ನಾಡಿನ ಕಾರಂಜಿಗಳು | ಕಟ್ಟೆ | ಅದೃಷ್ಟದ ಹೋರಾಟ | ಪೇಕ್ ಬೇಬಿ ಷೇಕ್ |

ಎರಡನೆ ಪ್ರಸಾರ : ಮಧ್ಯಾಹ್ನ ೧೨ ರಿಂದ ಸಂಜೆ ೫.೩೦ರವರೆಗೆ

| ಸಮಯ | ಸೋಮವಾರ | ಮಂಗಳವಾರ | ಬುಧವಾರ | ಗುರುವಾರ | ಶುಕ್ರವಾರ | ಶನಿವಾರ | ಭಾನುವಾರ |
|---|---|---|---|---|---|---|---|
| ೧೨.೦೦ | ಡಯಲ್ ಕಾವೇರಿ | ಡಯಲ್ ಕಾವೇರಿ | ಡಯಲ್ ಕಾವೇರಿ | ಡಯಲ್ ಕಾವೇರಿ | ಡಯಲ್ ಕಾವೇರಿ | ವಿಶೇಷ ಪ್ರತಿನಿಧಿ | ಹೊಸ ಚಿತ್ರಗೀತೆ |
| ೧೨.೩೦ | ಮನೆತನ | ಮನೆತನ | ಮನೆತನ | ಮನೆತನ | ಮನೆತನ | ಮನೆತನ | ಸೌಂಡ್ ಆಫ್ ಮ್ಯೂಸಿಕ್ |
| ೧.೦೦ | ಸೌಂಡ್ ಆಫ್ ಮ್ಯೂಸಿಕ್ | ಸ್ವೀಕಾರ | ಕ್ಷಮಾ | ಹೆಲ್ಪ್‌ಲೈನ್ | ಸುಪ್ತ ಮನಸ್ಸಿನ ಸಪ್ತ ಸ್ವರಗಳು | ಕಪ್ಪುತೆರೆ | ಡಿಸ್ಕೊ ರಾಗ ಆದಿ ತಾಳ |
| ೧.೩೦ | ವಾರ್ತಾ ಮುಖ್ಯಾಂಶಗಳು | ವಾರ್ತಾ ಮುಖ್ಯಾಂಶಗಳು | ವಾರ್ತಾ ಮುಖ್ಯಾಂಶಗಳು | ವಾರ್ತಾ ಮುಖ್ಯಾಂಶಗಳು | ವಾರ್ತಾ ಮುಖ್ಯಾಂಶಗಳು | ವಾರ್ತಾ ಮುಖ್ಯಾಂಶಗಳು | ವಾರ್ತಾ ಮುಖ್ಯಾಂಶಗಳು |
| ೧.೪೦ | ಸಂಗೀತ ಸುಧೆ | ಸಂಗೀತ ಸುಧೆ | ಸಂಗೀತ ಸುಧೆ | ಸಂಗೀತ ಸುಧೆ | ಸಂಗೀತ ಸುಧೆ | ಹೊಸ ಚಿತ್ರಗೀತೆ | ತಾರಾಲೋಕ |
| ೨.೦೦ | ಬಾಕ್ಸ್ ಆಫೀಸ್ | ಹಿಟ್‌ಪರೇಡ್ | ತಾರಾಲೋಕ | ಲೈಟ್ಸ್, ಕ್ಯಾಮೆರಾ, ಆಕ್ಷನ್ | ಹಿಟ್ ಪರೇಡ್ | ಅದೇ | ಲೈಟ್ಸ್, ಕ್ಯಾಮೆರಾ, ಆಕ್ಷನ್ |
| ೨.೩೦ | ಕನ್ನಡ ಚಲನಚಿತ್ರ | ಕನ್ನಡ ಚಲನಚಿತ್ರ | ಕನ್ನಡ ಚಲನಚಿತ್ರ | ಕನ್ನಡ ಚಲನಚಿತ್ರ | ಕನ್ನಡ ಚಲನಚಿತ್ರ | ಅದೇ | ಬಾಕ್ಸ್ ಆಫೀಸ್ |
| ೪.೦೦ | ಅದೇ | ಅದೇ | ಅದೇ | ಅದೇ | ಅದೇ | ಷೇಕ್ ಬೇಬಿ ಷೇಕ್ | ಕಾವೇರಿ ಸ್ಪೆಷಲ್ |

ಮೂರನೆ ಪ್ರಸಾರ : ಸಂಜೆ ೫.೩೦ ರಿಂದ ರಾತ್ರಿ ೮ ಗಂಟೆವರೆಗೆ

| | | | | | | | |
|---|---|---|---|---|---|---|---|
| ೫.೩೦ | ಬಿಸಿಲು ಕುದುರೆ | ಷೋ ರೀಲ್ | ಡಿಸ್ಕೋ ರಾಗ ಆದಿ ತಾಳ | ಕಟ್ಟೆ | ಅದೃಷ್ಟದ ಹೋರಾಟ | ಕೌಂಟ್‌ಡೌನ್ | ಚಲನಚಿತ್ರ |
| ೬.೦೦ | ಹಿಟ್ ಪರೇಡ್ | ತಾರಾಲೋಕ | ಲೈಟ್ಸ್,ಕ್ಯಾಮೆರಾ, ಆಕ್ಷನ್ | ಬೆಳ್ಳಿತೆರೆ | ಬಾಕ್ಸ್ ಆಫೀಸ್ | ಟೆಲಿಚಿತ್ರ | ಅದೇ |
| ೬.೩೦ | ಸ್ತ್ರೀ | ಸ್ತ್ರೀ | ಸ್ತ್ರೀ | ಸ್ತ್ರೀ | ಸ್ತ್ರೀ | ಅದೇ | ಅದೇ |
| ೭.೦೦ | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ವಾರ್ತೆಗಳು |
| ೭.೩೦ | ಸಹನ | ಸಹನ | ಸಹನ | ಸಹನ | ಸಹನ | ಹೆಜ್ಜೆಗೆಜ್ಜೆ | ಚಲನಚಿತ್ರ ಮುಂದುವರಿಕೆ |

ನಾಲ್ಕನೆ ಪ್ರಸಾರ : ರಾತ್ರಿ ೮ ಗಂಟೆಯಿಂದ

| | | | | | | | |
|---|---|---|---|---|---|---|---|
| ೮.೦೦ | ಮಹಾಯಜ್ಞ | ಮಹಾಯಜ್ಞ | ಮಹಾಯಜ್ಞ | ಮಹಾಯಜ್ಞ | ಮಹಾಯಜ್ಞ | ಸುಪ್ತ ಮನಸ್ಸಿನ ಸಪ್ತ ಸ್ವರಗಳು | ರಿಯಾಬಾರಿ |
| ೯.೦೦ | ಕಪ್ಪುತೆರೆ | ಕಥೆಗಾರ | ರಂಗವಲ್ಲಿ | ಕ್ಷಮಾ | ನಿಕ್ಷೇಪ | - | ಅದೇ |
| ೯.೩೦ | ವಿಜೇತ | ವಿಜೇತ | ವಿಜೇತ | ವಿಜೇತ | ವಿಜೇತ | ಆನೇ ಆಯಾಮ | ಆನೇ ಆಯಾಮ |
| ೧೦.೦೦ | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ವಾರ್ತೆಗಳು |
| ೧೦.೩೦ | ಡಯಲ್ ಕಾವೇರಿ | ಡಯಲ್ ಕಾವೇರಿ | ಡಯಲ್ ಕಾವೇರಿ | ಡಯಲ್ ಕಾವೇರಿ | ಡಯಲ್ ಕಾವೇರಿ | ಸಿನೆಮಾ ಸಿನೆಮಾ | ಮಾತು - ಮಂಥನ |
| ೧೧.೦೦ | ಒಂದೇ ಸುಳ್ಳು | ಒಂದೇ ಸುಳ್ಳು | ಒಂದೇ ಸುಳ್ಳು | ಒಂದೇ ಸುಳ್ಳು | ಒಂದೇ ಸುಳ್ಳು | ಒಂದೇ ಸುಳ್ಳು | ಅದೇ |

# ಪಟ್ಟಿ - ೧೪ : ಉಷೆ ವಾಹಿನಿಯ ಕಾರ್ಯಕ್ರಮ ವೈವಿಧ್ಯತೆ

ಮೊದಲ ಪ್ರಸಾರ : ಬೆಳಿಗ್ಗೆ ೬ರಿಂದ ಮಧ್ಯಾಹ್ನ ೧೨ರವರೆಗೆ (೨೦೦೧ರಲ್ಲಿ ಇದ್ದಂತೆ)

| ಸಮಯ | ಸೋಮವಾರ | ಮಂಗಳವಾರ | ಬುಧವಾರ | ಗುರುವಾರ | ಶುಕ್ರವಾರ | ಶನಿವಾರ | ಭಾನುವಾರ |
|---|---|---|---|---|---|---|---|
| ೬.೦೦ | ಹಿಟ್ ಕಲೆಕ್ಷನ್ | ಹಿಟ್ ಕಲೆಕ್ಷನ್ | ಹಿಟ್ ಕಲೆಕ್ಷನ್ | ಹಿಟ್ ಕಲೆಕ್ಷನ್ | ಹಿಟ್ ಕಲೆಕ್ಷನ್ | ಹಿಟ್ ಕಲೆಕ್ಷನ್ | ಹಿಟ್ ಕಲೆಕ್ಷನ್ |
| ೭.೦೦ | ಉಷೆ ಮ್ಯೂಸಿಕ್ | ಉಷೆ ಮ್ಯೂಸಿಕ್ | ಉಷೆ ಮ್ಯೂಸಿಕ್ | ಉಷೆ ಮ್ಯೂಸಿಕ್ | ಉಷೆ ಮ್ಯೂಸಿಕ್ | ಇನ್ ಕರೆಕ್ಟ್ | ಉಷೆ ಮ್ಯೂಸಿಕ್ |
| ೮.೦೦ | ಅಮರ ಮಧುರ | ಅಮರ ಮಧುರ | ಅಮರ ಮಧುರ | ಅಮರ ಮಧುರ | ಅಮರ ಮಧುರ | ಹಿಟ್ ಕಲೆಕ್ಷನ್ | ಅಮರಮಧುರ |
| ೯.೦೦ | ಹೃದಯದಿಂದ | ಹೃದಯದಿಂದ | ಹೃದಯದಿಂದ | ಹೃದಯದಿಂದ | ಹೃದಯದಿಂದ | ಹೃದಯದಿಂದ | ಹಲೋ ಉಷೆ |
| ೧೦.೩೦ | ಕಾಲ್-ಇನ್ | ಕಾಲ್-ಇನ್ | ಕಾಲ್ ಇನ್ | ಕಾಲ್ ಇನ್ | ಕಾಲ್ ಇನ್ | ಕಾಲ್ ಇನ್ | ಹೃದಯದಿಂದ |

ಎರಡನೇ ಪ್ರಸಾರ : ಮಧ್ಯಾಹ್ನ ೧೨ರಿಂದ ಸಂಜೆ ೫.೦೦ರವರೆಗೆ

| ಸಮಯ | ಸೋಮವಾರ | ಮಂಗಳವಾರ | ಬುಧವಾರ | ಗುರುವಾರ | ಶುಕ್ರವಾರ | ಶನಿವಾರ | ಭಾನುವಾರ |
|---|---|---|---|---|---|---|---|
| ೧೨.೦೦ | ಪ್ರೇಕ್ಷಕರ ಆಯ್ಕೆ | ಪ್ರೇಕ್ಷಕರ ಆಯ್ಕೆ | ಪ್ರೇಕ್ಷಕರ ಆಯ್ಕೆ | ಪ್ರೇಕ್ಷಕರ ಆಯ್ಕೆ | ಪ್ರೇಕ್ಷಕರ ಆಯ್ಕೆ | ಪ್ರೇಕ್ಷಕರ ಆಯ್ಕೆ | ಪ್ರೇಕ್ಷಕರ ಆಯ್ಕೆ |
| ೧.೦೦ | ಹಿಟ್ ಕಲೆಕ್ಷನ್ | ಹಿಟ್ ಕಲೆಕ್ಷನ್ | ಹಿಟ್ ಕಲೆಕ್ಷನ್ | ಹಿಟ್ ಕಲೆಕ್ಷನ್ | ಹಿಟ್ ಕಲೆಕ್ಷನ್ | ಹಿಟ್ ಕಲೆಕ್ಷನ್ | ಹಿಟ್ ಕಲೆಕ್ಷನ್ |
| ೩.೦೦ | ಅಮರ ಮಧುರ | ಅಮರ ಮಧುರ | ಅಮರ ಮಧುರ | ಅಮರ ಮಧುರ | ಅಮರ ಮಧುರ | ಅಮರ ಮಧುರ | ಅಮರ ಮಧುರ |
| ೪.೦೦ | ನಿಮ್ಮಿಂದ ನಿಮಗಾಗಿ | ನಿಮ್ಮಿಂದ ನಿಮಗಾಗಿ | ನಿಮ್ಮಿಂದ ನಿಮಗಾಗಿ | ನಿಮ್ಮಿಂದ ನಿಮಗಾಗಿ | ನಿಮ್ಮಿಂದ ನಿಮಗಾಗಿ | ಬಿ.ಬಿ.ಸಿ. ಸಾಕ್ಷ್ಯಚಿತ್ರ | ನಿಮ್ಮಿಂದ ನಿಮಗಾಗಿ |

## ಮೂರನೆ ಪ್ರಸಾರ : ಸಂಜೆ ೫ರಿಂದ ರಾತ್ರಿ ೮ರವರೆಗೆ

| ಸಮಯ | ಸೋಮವಾರ | ಮಂಗಳವಾರ | ಬುಧವಾರ | ಗುರುವಾರ | ಶುಕ್ರವಾರ | ಶನಿವಾರ | ಭಾನುವಾರ |
|---|---|---|---|---|---|---|---|
| ೫.೦೦ | ಪ್ರೇಕ್ಷಕರ ಆಯ್ಕೆ | ಪ್ರೇಕ್ಷಕರ ಆಯ್ಕೆ | ಪ್ರೇಕ್ಷಕರ ಆಯ್ಕೆ | ಪ್ರೇಕ್ಷಕರ ಆಯ್ಕೆ | ಪ್ರೇಕ್ಷಕರ ಆಯ್ಕೆ | ದಿ ಬಿಗ್ ಸ್ಕ್ರೀನ್ | ರಸಪ್ರಶ್ನೆ |
| ೫.೩೦ | ಜಂಗಲ್ ಬುಕ್ | ಜಂಗಲ್ ಬುಕ್ | ಜಂಗಲ್ ಬುಕ್ | ಜಂಗಲ್ ಬುಕ್ | ಜಂಗಲ್ ಬುಕ್ | ಜಂಗಲ್ ಬುಕ್ | ಜಂಗಲ್ ಬುಕ್ |
| ೬.೦೦ | ಹಲೋ ಉಷೆ | ಹಲೋ ಉಷೆ | ಹಲೋ ಉಷೆ | ಹಲೋ ಉಷೆ | ಹಲೋ ಉಷೆ | ಹಲೋ ಉಷೆ | ಹಲೋ ಉಷೆ |
| ೭.೩೦ | ಚಲನಚಿತ್ರ | ಚಲನಚಿತ್ರ | ಚಲನಚಿತ್ರ | ಚಲನಚಿತ್ರ | ಚಲನಚಿತ್ರ | ಫ್ಲ್ಯಾಶ್ ಸಿಟಿ | ಡೇರ್ ಡೆವಿಲ್ |

## ನಾಲ್ಕನೆ ಪ್ರಸಾರ : ರಾತ್ರಿ ೮ ಗಂಟೆಯಿಂದ

| | | | | | | | |
|---|---|---|---|---|---|---|---|
| ೮.೦೦ | ಚಲನಚಿತ್ರದ ಉಳಿದ ಭಾಗ | ಚಲನಚಿತ್ರದ ಮುಂದುವರಿಕೆ | ಚಲನಚಿತ್ರದ ಮುಂದುವರಿಕೆ | ಚಲನಚಿತ್ರದ ಮುಂದುವರಿಕೆ | ಚಲನಚಿತ್ರ ಮುಂದುವರಿಕೆ | ಆರ್ಟಿಸ್ಟ್ ಸ್ಪೆಷಲ್ | ಕ್ಯಾಂಪಸ್ ಹಿಟ್ಸ್ |
| ೮.೩೦ | ಅದೇ | ಅದೇ | ಅದೇ | ಅದೇ | ಅದೇ | ಅದೇ | ಸಿನಿಮಾ ಸುದ್ದಿ |
| ೯.೦೦ | ಅದೇ | ಅದೇ | ಅದೇ | ಅದೇ | ಅದೇ | ಅದೇ | ಕಾನ್ಸರ್ಟ್ |
| ೧೦.೦೦ | ನಿಮ್ಮಿಂದ ನಿಮಗಾಗಿ | ನಿಮ್ಮಿಂದ ನಿಮಗಾಗಿ | ನಿಮ್ಮಿಂದ ನಿಮಗಾಗಿ | ನಿಮ್ಮಿಂದ ನಿಮಗಾಗಿ | ನಿಮ್ಮಿಂದ ನಿಮಗಾಗಿ | ನಿಮ್ಮಿಂದ ನಿಮಗಾಗಿ | ನಿಮ್ಮಿಂದ ನಿಮಗಾಗಿ |
| ೧೨.೦೦ | ಉಷೆ ಮ್ಯೂಸಿಕ್ | ಉಷೆ ಮ್ಯೂಸಿಕ್ | ಉಷೆ ಮ್ಯೂಸಿಕ್ | ಉಷೆ ಮ್ಯೂಸಿಕ್ | ಉಷೆ ಮ್ಯೂಸಿಕ್ | ಉಷೆ ಮ್ಯೂಸಿಕ್ | ಉಷೆ ಮ್ಯೂಸಿಕ್ |

## ಅಡಿಟಿಪ್ಪಣಿ


೧. ವೈ.ಕೆ. ಡಿಸೋಜ, Electronic media and the internet, ೧೯೯೯, ಪು - ೨೯

೨. ಕನ್ನಡ ಪ್ರಭ ದೈನಿಕ, ೧೧.೧೨.೨೦೦೦, ಪು - ೧

೩. ಮ್ಯಾಕ್‌ಲ್ಯೂಹೆನ್, Understanding media, the Extension of mass, ೧೯೬೭, ಪು - ೩೨

೪. ದೂರದರ್ಶನ - ೧೯೯೭, ನವದೆಹಲಿಯ ವೀಕ್ಷಕ ಸಂಶೋಧನಾ ವಿಭಾಗದ ವರದಿ

೫. ರಾಣಿ ಚಾಬ್ರಾ, Television programmes for women, Ed : The Electronic media, ೧೯೯೯, ಪು - ೨೨೧

೬. ಪಾಲ್ ಡಿ. ಮೆಸೇನೀರ್, Here's the News, Ed : A Radio News Mannual, ೧೯೮೯, ಪು - ೨೦

೭. ಬಿ.ಜಿ. ವರ್ಗೀಸ್

ಉಲ್ಲೇಖ : Mass media and Journalism in India, D.S. Mehta, ೧೯೯೯, ಪು - ೧೦೭

೮. ವಿ.ಹೆಚ್. ದೇಸಾಯಿ, ಅಧ್ಯಯನಕ್ಕಾಗಿ ನೀಡಿದ ಸಂದರ್ಶನ, ೧೬.೧೨.೨೦೦೦

೯. ಹಂಸ, ಸಮೀಪದರ್ಶನ ಅಂಕಣ - ಕನ್ನಡಪ್ರಭ, ೨.೪.೨೦೦೧

ಅಧ್ಯಾಯ : ಐದು

# ಆಕಾಶವಾಣಿ

೧. ಆಕಾಶವಾಣಿಯ ಧ್ಯೇಯೋದ್ದೇಶ

೨. ಕಾರ್ಯಕ್ರಮ ವೈವಿಧ್ಯ

೩. ಸುದ್ದಿ - ಸಂಗ್ರಹಣೆ, ಮಂಡನೆ

ಸಂಗೀತ ಪೆಟ್ಟಿಗೆ ಎಂದೇ ಜನಪ್ರಿಯವಾಗಿರುವ ರೇಡಿಯೊ ಒಂದು ತ್ವರಿತ, ಸುಲಭ ಮಾಧ್ಯಮ ಎಂದು ಎನಿಸಿಕೊಂಡಿರುವುದಕ್ಕೆ ಅದರ ಶ್ರಾವಕ ಶಕ್ತಿಯೇ ಕಾರಣ ಎನ್ನಬಹುದಾಗಿದೆ. ಸ್ವಾತಂತ್ರ್ಯಾನಂತರದಲ್ಲಂತೂ ಅದೊಂದು ರಾಷ್ಟ್ರೀಯ ಸೇವಾ ಮಾಧ್ಯಮವಾಗಿ ಮಾರ್ಪಟ್ಟು ದೇಶದ ಅಭಿವೃದ್ಧಿಯ ಕೆಲಸದಲ್ಲಿ ಪ್ರಮುಖ ಪಾತ್ರವಹಿಸಿದ್ದು ಗಮನಾರ್ಹ. ಅದನ್ನೆಲ್ಲ ಮಾಡಲು ರೇಡಿಯೊಗಿದ್ದ ಸಾಧ್ಯತೆಗಳನ್ನು ಈ ರೀತಿ ಗುರುತಿಸಬಹುದು :

- ಸಮಾಜದ ಎಲ್ಲ ವರ್ಗದವರನ್ನು ಅತ್ಯಂತ ಸುಲಭವಾಗಿ ತಲುಪಬಹುದಾದ ಸಾಧನವಾಗಿತ್ತು ರೇಡಿಯೊ.
- ಸಾಮಾಜಿಕ ಬದಲಾವಣೆ ತರುವುದಕ್ಕಾಗಿಯೇ ಅನೇಕ ಕಾರ್ಯಕ್ರಮಗಳನ್ನು ರೂಪಿಸಲಾಯಿತು.
- ಅತ್ಯಂತ ಕಡಿಮೆ ಕಾಲ ಹಾಗೂ ಸೂಕ್ತ ಕಾಲಾವಧಿಯಲ್ಲಿ ಉದ್ದೇಶಿತ ಕಾರ್ಯಕ್ರಮ ಪ್ರಸಾರ.
- ಸರ್ಕಾರದ ಏಕಸ್ವಾಮ್ಯದಲ್ಲಿದ್ದು ಖಾಸಗಿ ವಾಹಿನಿಗಳ ಹೊಡೆತದಿಂದ ಮುಕ್ತವಾಗಿತ್ತು; ಈವರೆಗೂ ಆಗಿದೆ.

ಇತ್ತೀಚಿನವರೆಗೂ ಸಂಪೂರ್ಣವಾಗಿ ಸರ್ಕಾರಿ ಸ್ವಾಮ್ಯದಲ್ಲೇ ಇದ್ದ ಆಕಾಶವಾಣಿ ಕೇಳ್ಮೆಯ ಸಂಸ್ಕೃತಿಗೆ, ಮೌಖಿಕ ಪರಂಪರೆಗೆ ಒಗ್ಗಿಹೋಗಿದ್ದ ನಮ್ಮ ಜನಪದೀಯರನ್ನು ತನಗೆ ಬಹಳ ಸುಲಭವಾಗಿ ಹೊಂದಿಸಿಕೊಂಡಿದೆ. ಸ್ವಾತಂತ್ರ್ಯ ಬಂದ ಹೊಸತರಲ್ಲಿ ದೇಶದ ಜನಸಂಖ್ಯೆಯ ೭೦% ಜನ ಅನಕ್ಷರಸ್ಥರೂ, ೮೦%ರಷ್ಟು ಜನ ಗ್ರಾಮೀಣ ಪ್ರದೇಶಗಳಲ್ಲಿ ನೆಲೆಸಿದವರು ಆಗಿದ್ದರು. ಅವರಿಗೆ ಆಗ ಪತ್ರಿಕೆಗಳ ಬಳಕೆ ಸಾಧ್ಯವಾಗುತ್ತಿರಲಿಲ್ಲ. ದೂರದರ್ಶನದಂತಹ ದೃಶ್ಯ-ಶ್ರವ್ಯ ಮಾಧ್ಯಮ ಬಳಕೆಗೇ ಬಂದಿರಲಿಲ್ಲ. ಇಂತಹ ಸಂದರ್ಭದಲ್ಲಿ ರೇಡಿಯೊ ಸಹಜವಾಗಿಯೇ ಜನರ ಜೀವನ ವಿಧಾನದಲ್ಲಿ ಹಾಸು ಹೊಕ್ಕಾಗುವುದು ಸಾಧ್ಯವಾಯಿತು. ಹೀಗೆ ಜನರು ರೇಡಿಯೊಗೆ, ರೇಡಿಯೊ ಜನರಿಗೆ ಹೊಂದಿಕೊಳ್ಳುವುದರ ಹಿನ್ನೆಲೆಯಲ್ಲೇ ಅದು ಸರ್ಕಾರದ, ಅದರ ನೀತಿ - ನಿರೂಪಕರ ಅಚ್ಚುಮೆಚ್ಚಿನ ಮಾಧ್ಯಮವೂ ಆಯಿತು. ಸಮೂಹ ಮಾಧ್ಯಮಗಳಲ್ಲೇ ಪ್ರಧಾನವೆನಿಸಿದ ರೇಡಿಯೊ ಪಂಚವಾರ್ಷಿಕ ಯೋಜನೆಗಳ ಕಾರಣದಿಂದ ಅಭಿವೃದ್ಧಿಯ ಹಾದಿ ಹಿಡಿಯಿತು.

## ೧. ಧ್ಯೇಯೋದ್ದೇಶಗಳು:

ಸರ್ಕಾರದ ಸ್ವಾಮ್ಯತೆಯನ್ನು ಒಪ್ಪಿಕೊಂಡ ರೇಡಿಯೊ ಮಾಧ್ಯಮವನ್ನು ಒಂದು ಸದೃಢ ಮಾಧ್ಯಮವನ್ನಾಗಿ ಮಾಡಿದ್ದೂ ಸರ್ಕಾರವೇ. ಪಂಚವಾರ್ಷಿಕ ಯೋಜನೆಗಳ ಮೂಲಕ ಶ್ರವ್ಯ ಮಾಧ್ಯಮದ ಅಭಿವೃದ್ಧಿಗೆ ನೆರವು ನೀಡಿದ್ದಲ್ಲದೆ ಈ ಮಾಧ್ಯಮವನ್ನು ಬಳಸಿಕೊಂಡು ಜನತೆಯ ಆಶೋತ್ತರಗಳಿಗೂ ಸ್ಪಂದಿಸುವ ಕೆಲಸವನ್ನು ಸರ್ಕಾರ ಮಾಡಿರುವುದು ಗಮನಾರ್ಹ. ಇದನ್ನು ಎರಡು ಹಂತಗಳಲ್ಲಿ ಗುರುತಿಸಬಹುದು.

- ದೇಶಾದ್ಯಂತ ಜನರಿಗೆ ರೇಡಿಯೊ ಸುಲಭವಾಗಿ ಲಭ್ಯವಾಗುವಂತೆ ಪ್ರಸಾರ ಸೇವೆಯನ್ನು ವಿಸ್ತರಿಸುವುದು.

* ಹೊಸದಾಗಿ ಸ್ವಾತಂತ್ರ್ಯಗಳಿಸಿದ ರಾಷ್ಟ್ರದ ಜನತೆಯ ಅಗತ್ಯ ಹಾಗೂ ಆಗ್ರಹಗಳನ್ನು ಈಡೇರಿಸಲು ಕಾರ್ಯಕ್ರಮಗಳನ್ನು ರೂಪಿಸುವುದು ಮತ್ತು ರಾಷ್ಟ್ರದ ಪುನರ್‌ನಿರ್ಮಾಣ ಕೆಲಸಕ್ಕೆ ನೆರವಾಗುವಂತಹ ಪರಿಣಾಮಕಾರಿ ಸಂವಹನ ವ್ಯವಸ್ಥೆಯನ್ನು ಒದಗಿಸುವುದು.

ಜನರಲ್ಲಿ ಗ್ರಹಣಶಕ್ತಿ ಹೆಚ್ಚಿಸುವುದು, ಯೋಜನೆಗಳ ಮೂಲಕ ಸಾಧಿಸಿದ ಅಭಿವೃದ್ಧಿಯಿಂದಾಗಿ ಆಗುವ ಸಾಮಾಜಿಕ ಮತ್ತು ಭೌತಿಕ ಮಾರ್ಪಾಡುಗಳ ಬಗ್ಗೆ ತಿಳುವಳಿಕೆ ಮೂಡಿಸುವುದು, ನಿರ್ಣಯಗಳನ್ನು ಕೈಗೊಳ್ಳುವಲ್ಲಿ ಜನರಿಗಿರಬೇಕಾದ ಅರಿವು ಮೂಡಿಸುವುದಕ್ಕೆ ಈ ಮಾಧ್ಯಮವನ್ನು ಬಳಸಿಕೊಳ್ಳಲಾಯಿತು. ಉದಾಹರಣೆಗೆ ಪ್ರಾರಂಭದಲ್ಲಿ ಸಂಗೀತವನ್ನು ಬಿತ್ತರಿಸುತ್ತಿದ್ದ ಆಕಾಶವಾಣಿ ಕ್ರಮೇಣ ದೇಶದ ಪ್ರಧಾನ ಕಸುಬಾದ ಕೃಷಿ ಹಾಗೂ ಕೃಷಿ ಸಂಬಂಧಿ ಕಾರ್ಯಕ್ರಮಗಳ ಮೂಲಕ ರೈತಾಪಿ ವರ್ಗದವರಿಗೆ ವೈಜ್ಞಾನಿಕ ತಿಳುವಳಿಕೆ ಮೂಡಿಸುವ ಪ್ರಯತ್ನ ಮಾಡಿತು. ಹಾಗೆ ನೋಡಿದರೆ ಆಕಾಶವಾಣಿ ೧೯೩೫ರಲ್ಲೇ ಕೃಷಿ ಕಾರ್ಯಕ್ರಮ ಪ್ರಾರಂಭಿಸಿತ್ತು. ಅದಾದ ೧೦ ವರ್ಷಗಳ ನಂತರ ೧೯೪೫ರಲ್ಲಿ ಪುಣೆಯಲ್ಲಿ ಗ್ರಾಮೀಣ ರೇಡಿಯೊ ಫೋರಮ್ ಮೂಲಕ ಕೃಷಿ ಕಾರ್ಯಕ್ರಮಗಳಿಗೆ ಸಂಬಂಧಿಸಿದಂತೆ ಪ್ರತಿಕ್ರಿಯೆಗಳನ್ನು ಪಡೆಯಲಾರಂಭಿಸಿತು. ೧೯೬೦ರಲ್ಲಿ ಕೃಷಿ ವಿಭಾಗವೇ ಆರೋಗ್ಯ ಕಾರ್ಯಕ್ರಮಗಳನ್ನೂ ಆರಂಭಿಸಿತು. ೧೯೭೫-೭೬ರ ಹೊತ್ತಿಗೆ ಬಾನುಲಿಯಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನದ ಬಗ್ಗೆ ಮಾಹಿತಿ ಮೂಡಿಬರುತ್ತಿತ್ತು.

ರೇಡಿಯೊ ಒಂದು ಚಿಕ್ಕದಾದ ಯಾರು ಎಲ್ಲಿಗೆ ಬೇಕಾದರೂ ಕೊಂಡೊಯ್ಯಬಹುದಾದ ಸುಲಭ ಸಾಧನ. ಹೊಲದಲ್ಲಿ ದಿನವಿಡೀ ದುಡಿಯುವ ಬೇಸಾಯಗಾರ, ಊರಿಡೀ ಸುತ್ತಿ ಅಂಚೆ ವಿತರಿಸುವ ಪೋಸ್ಟ್‌ಮ್ಯಾನ್ ಯಾರೇ ಇರಲಿ ಬಗಲಿಗೊಂದು ಟ್ರಾನ್ಸಿಸ್ಟರ್ ನೇತು ಹಾಕಿಕೊಂಡು ಹೋಗಬಹುದಾದಷ್ಟು ಸುಲಭ ಹಾಗೂ ಸರಳ ಈ ಸಾಧನ. ಟಿವಿ. ಸೆಟ್ ಕೊಳ್ಳುವಷ್ಟು, ಅದಕ್ಕೆ ಖಾಸಗಿ ವಾಹಿನಿಗಳನ್ನು ಪಡೆಯಲು ಕೇಬಲ್ ಅಳವಡಿಸುವಷ್ಟು ಹೆಚ್ಚಿನ ಹಣ ವ್ಯಯ ಮಾಡಬೇಕಾಗಿಲ್ಲ. ಮಾದರಿಗಳನ್ನಾಧರಿಸಿದ ಭಿನ್ನ ಬೆಲೆಗಳಿದ್ದರೂ ರೇಡಿಯೊದ ಬೆಲೆ ಕಡಿಮೆಯೇ. ಹಾಗಾಗಿ ಇದೊಂದು ಅಗ್ಗದ ಅಥವಾ ಕಡಿಮೆ ಬೆಲೆಯ ಸರಳ ಆಧುನಿಕ ಸಾಧನ. ಈ ಕಾರಣದಿಂದಾಗಿಯೇ ರೇಡಿಯೊ ಎಲ್ಲ ವರ್ಗದ ಜನರಿಗೂ, ಅದರಲ್ಲೂ ಕುಶಾಗ್ರಮಟ್ಟದ ಜನರಿಗೆ ಅತಿ ಹತ್ತಿರವಾದ ಸಾಧನವಾಗಿದೆ. ೧೯೪೭ರ ಹೊತ್ತಿನಲ್ಲಿ ಕೇವಲ ಎರಡೂವರೆ ಲಕ್ಷಗಳಷ್ಟಿದ್ದ ರೇಡಿಯೊ ಸೆಟ್‌ಗಳಿಗೆ ಪ್ರತಿಯಾಗಿ ೧೯೯೮ರ ವೇಳೆಗೆ ದೇಶಾದ್ಯಾಂತ ೩ ಕೋಟಿಗೂ ಹೆಚ್ಚು ರೇಡಿಯೊ ಸೆಟ್‌ಗಳಿದ್ದವು. ಹಾಗೆ ದೇಶಾದ್ಯಾಂತ ಕೇವಲ ೬ ನಿಲಯಗಳನ್ನು, ಕೆಲವೇ ಕೆಲವು ಅಲ್ಪಶಕ್ತಿಯ ಟ್ರಾನ್ಸ್‌ಮೀಟರ್‌ಗಳನ್ನು ಹೊಂದಿದ್ದ ಆಕಾಶವಾಣಿ ರಾಷ್ಟ್ರೀಯ ಜಾಲದಲ್ಲಿ ೧೯೮೦ರ ದಶಕದಲ್ಲಿ ೯೦ ಕೇಂದ್ರಗಳು, ೨ ವಿವಿಧ ಭಾರತಿ ಕಾರ್ಯ ನಿರ್ವಹಿಸುತ್ತಿವೆ. ವಾರ್ತಾ ಮತ್ತು ಪ್ರಸಾರ ಸಚಿವಾಲಯದ ೨೦೦೦ದ ಇಸವಿಯ ವಾರ್ಷಿಕ ವರದಿಯಲ್ಲಿ ತಿಳಿಸಿರುವಂತೆ ಈಗ ಒಟ್ಟು ೧೯೮ ಕೇಂದ್ರಗಳು, ೧೮೫ ಪೂರ್ಣ ಪ್ರಮಾಣದ ಕೇಂದ್ರಗಳು, ೧೦ ಮರುಪ್ರಸಾರ ಕೇಂದ್ರಗಳು, ೩ ಪ್ರತ್ಯೇಕ ವಿವಿಧ ಭಾರತಿ ವಾಣಿಜ್ಯ ಕೇಂದ್ರಗಳು ಕಾರ್ಯ ನಿರ್ವಹಿಸುತ್ತಿವೆ. ಪ್ರಸ್ತುತ ೩೧೦ ಟ್ರಾನ್ಸ್ ಮೀಟರ್‌ಗಳಿದ್ದು, ದೇಶದ ಶೇ. ೯೦ರಷ್ಟು ಪ್ರದೇಶದ ಶೇ ೯೭.೭ರಷ್ಟು ಜನರಿಗೆ ಪ್ರಸಾರ ಸೇವೆ ನೀಡುತ್ತಿದೆ. ಇದೆಲ್ಲದರ ಜೊತೆಗೆ ರೇಡಿಯೊ ಮೂಲಕ ಜನರಿಗೆ ಬೇಕಾದ, ಅವರಿಗೆ ಅರ್ಥವಾಗುವ ಕಾರ್ಯಕ್ರಮಗಳನ್ನು ಆಕಾಶವಾಣಿ ನೀಡಿದ್ದು ಅದನ್ನು ಇನ್ನೂ ಜನಪರಗೊಳಿಸಿತು.

೧೯೫೭ರಲ್ಲಿ ಆಕಾಶವಾಣಿ ಎನ್ನುವ ಹೆಸರು ಪಡೆದ ಆಲ್ ಇಂಡಿಯಾ ರೇಡಿಯೊ ತನ್ನ ವ್ಯಾಪಕತೆ ಹಾಗೂ ಪರಿಣಾಮದಿಂದಾಗಿ ಕೇಂದ್ರ ಸರ್ಕಾರಿ ಸ್ವಾಮ್ಯದ ಅತ್ಯಂತ ದೊಡ್ಡ ಸಂಸ್ಥೆ ಎನಿಸಿತು. ಅದಕ್ಕೆ ಇದ್ದ ಮತ್ತೊಂದು ಮುಖ್ಯ ಕಾರಣ ಅದರ ತ್ವರಿತ ಕಾರ್ಯಶಕ್ತಿ. ತನ್ನ ಶೀಘ್ರ ಹಾಗೂ ದಿಢೀರ್ ಸಂವಹನ ಸಾಮರ್ಥ್ಯದಿಂದಾಗಿ ಆಕಾಶವಾಣಿ ತಾಜಾ

ಸುದ್ದಿ ಮಾಹಿತಿಗಳನ್ನು ವೇಗವಾಗಿ ಜನರಿಗೆ ತಲುಪಿಸುತ್ತದೆ. ದೂರದರ್ಶನದಂತೆ ಚಿತ್ರೀಕರಿಸಿ ತಂದ ದೃಶ್ಯಗಳನ್ನು ಸಂಕಲಿಸಿ ಅದಕ್ಕೆ ಹೊಂದುವಂತೆ ಸುದ್ದಿ ಬರೆದು ಪ್ರಸಾರ ಮಾಡಬೇಕಾಗಿಲ್ಲ ಅಥವಾ ಪತ್ರಿಕೆಗಳಂತೆ ಅಚ್ಚು, ಸಿದ್ದಗೊಳಿಸಿ, ಕರಡು ತಿದ್ದಿ, ಮುದ್ರಿಸಿ, ಮನೆ ಮನೆಗೂ ವಿತರಿಸಬೇಕಾದ್ದಿಲ್ಲ. ಇಲ್ಲಿ ವರದಿಯಾದ ಸುದ್ದಿಯನ್ನು ಆ ಕೂಡಲೇ ನೇರವಾಗಿ ಹೇಳುವುದಷ್ಟೇ ಕೆಲಸ. ಹಾಗಾಗಿ ಸಮಯ ವ್ಯಯವಾಗುವುದಿಲ್ಲ ಹಾಗೂ ಮಾಧ್ಯಮಕ್ಕೆ ಒಂದು ಚುರುಕುತನವೂ ಮೂಡಿರುತ್ತದೆ.

ಈವರೆಗೂ ಖಾಸಗಿ ವಾಹಿನಿಗಳ ಹಾವಳಿಯಿಲ್ಲದೆ, ಬಾಹ್ಯ ಸ್ಪರ್ಧೆಗಳಿಲ್ಲದೆ ಸ್ವತಂತ್ರವಾಗಿ ಒಂದೇ ಗತಿಯಲ್ಲಿ ನಿರಂತರವಾಗಿ ಸೇವೆ ನೀಡುತ್ತಿರುವ ಬಾನುಲಿ ಅಭಿವೃದ್ಧಿಪರತೆಯನ್ನೇ ತನ್ನ ಮುಖ್ಯ ಕಾರ್ಯೋದ್ದೇಶವಾಗಿ ಇರಿಸಿಕೊಂಡಿದೆ. ಅದನ್ನು ಈ ಮುಂದೆ ಸೂಚಿಸಿರುವ ಹಲವು ಹಂತಗಳಲ್ಲಿ ಮಾಡುತ್ತಲೂ ಇದೆ.

### ರಾಷ್ಟ್ರೀಯ ಪ್ರಸಾರ

ಈ ಪ್ರಸಾರ ಸೇವೆಯಲ್ಲಿ ರಾಷ್ಟ್ರಪತಿ, ಉಪರಾಷ್ಟ್ರಪತಿ ಹಾಗೂ ಪ್ರಧಾನಮಂತ್ರಿಯವರು ವಿಶೇಷ ಸಂದರ್ಭಗಳಲ್ಲಿ ರಾಷ್ಟ್ರದ ಜನತೆಯನ್ನು ಉದ್ದೇಶಿಸಿ ಮಾಡುವ ಮೂಲ ಭಾಷಣಗಳು ದೇಶಾದ್ಯಂತ ಪ್ರಸಾರಗೊಳ್ಳುತ್ತವೆ. ಆ ಭಾಷಣಗಳ ಪ್ರಾದೇಶಿಕ ಭಾಷಾ ಅನುವಾದಗಳನ್ನು ಆಯಾ ಪ್ರದೇಶಗಳಲ್ಲಿ ಬಿತ್ತರಿಸಲಾಗುತ್ತದೆ. ಇದು ಕಡ್ಡಾಯ ಪ್ರಸಾರ. ಎರಡನೇ ಜಾಗತಿಕ ಯುದ್ಧದ ಕಾಲದಿಂದಲೂ ಕೇಂದ್ರೀಯ ಜಾಲದಲ್ಲಿ ವಾರ್ತೆಗಳನ್ನು ಪ್ರಸಾರ ಮಾಡುತ್ತಿರುವ ಆಕಾಶವಾಣಿ ಈಗಲೂ ಇಂಗ್ಲೀಷ್ ಮತ್ತು ಹಿಂದಿ ವಾರ್ತೆಗಳನ್ನು ಎಲ್ಲ ಪ್ರಾದೇಶಿಕ ನಿಲಯಗಳ ಮೂಲಕ ತಪ್ಪದೇ ಪ್ರಸಾರ ಮಾಡುತ್ತಿದೆ. ಆಕಾಶವಾಣಿಯ ವಾರ್ತಾ ಸೇವಾ ವಿಭಾಗ ವಾರ್ತೆ, ವಾರ್ತಾ ಪತ್ರ, ಪ್ರಚಲಿತ ವಿದ್ಯಮಾನಗಳಿಗೆ ಸಂಬಂಧಿಸಿದ ಕಾರ್ಯಕ್ರಮಗಳಲ್ಲದೆ ನಾಡಿನ ಸಂಸ್ಕೃತಿ - ಸಂಪ್ರದಾಯಗಳನ್ನು ಸಾರುವ ಸಂಗೀತ, ನಾಟಕ, ರೂಪಕ, ಭಾಷಣಗಳನ್ನು ರಾಷ್ಟ್ರೀಯ ಜಾಲದಲ್ಲಿ ಪ್ರಸಾರ ಮಾಡುತ್ತಿದೆ. ದೇಶದ ರಕ್ಷಣೆ, ಸುಭದ್ರತೆ, ವಿಜ್ಞಾನ - ತಂತ್ರಜ್ಞಾನ, ಆರ್ಥಿಕತೆ, ಗ್ರಾಮೀಣಾಭಿವೃದ್ಧಿ ಮೊದಲಾದ ವಿಷಯಗಳಲ್ಲೂ ರಾಷ್ಟ್ರೀಯ ಪುನರ್ ನಿರ್ಮಾಣದ ವಿಚಾರದಲ್ಲೂ ಈ ಪ್ರಸಾರ ಸೇವೆ ನಡೆಯುತ್ತಿದೆ.

### ಪ್ರಾದೇಶಿಕ ಪ್ರಸಾರ

ಪ್ರಾದೇಶಿಕ ಭಾಷೆ ಹಾಗೂ ಪ್ರಾದೇಶಿಕ ಸಂಸ್ಕೃತಿಯನ್ನು ಪ್ರೋತ್ಸಾಹಿಸಿ, ಸಂರಕ್ಷಿಸಿ ದೇಶೀಯತೆಯನ್ನು ಉಳಿಸಿಕೊಳ್ಳುವ ನಿಟ್ಟಿನಲ್ಲಿ ಆಕಾಶವಾಣಿ ನಿರಂತರವಾಗಿ ಪ್ರಯತ್ನಿಸುತ್ತಿರುವುದು ಗಮನಾರ್ಹ. ಒಂದು ಪ್ರದೇಶದ ನಿವಾಸಿಗಳಿಗಾಗಿ, ನಿವಾಸಿಗಳಿಂದಲೇ ಪ್ರಮುಖವಾಗಿ ತಯಾರಿಸುವ ಕಾರ್ಯಕ್ರಮಗಳನ್ನು ಆಕಾಶವಾಣಿ ಬಿತ್ತರಿಸುತ್ತಾ ಬಂದಿದೆ. ರಾಷ್ಟ್ರೀಯ ಪ್ರಸಾರದ ವೇಳೆ ಹಾಗೂ ಅವಧಿಯನ್ನು ಹೊರತುಪಡಿಸಿ ಉಳಿದ ಸಮಯ ಪ್ರಾದೇಶಿಕ ಜನತೆಯ ಅನುಕೂಲಕ್ಕಾಗಿ ಅವರ ಭಾಷೆಯಲ್ಲೇ ಅನೇಕ ಕಾರ್ಯಕ್ರಮಗಳು ಬಿತ್ತರಗೊಳ್ಳುತ್ತಿವೆ. ಆಕಾಶವಾಣಿಯ ಕಾರ್ಯಕ್ರಮಗಳ ವೈವಿಧ್ಯವನ್ನು ಕುರಿತು ಇದೇ ಅಧ್ಯಾಯದಲ್ಲಿ ಮುಂದೆ ವಿವರಿಸಿದ್ದೇನೆ.

ಪ್ರಾದೇಶಿಕ ಪ್ರಸಾರದಲ್ಲಿ ಬೆಂಗಳೂರು ಆಕಾಶವಾಣಿ ಕೇಂದ್ರವೊಂದೇ ೬೯ ದಶಲಕ್ಷ ಜನರನ್ನು ತಲುಪುತ್ತಿದೆ ಎಂಬ ಅಂದಾಜಿದೆ. ಅಂದರೆ ಸುಮಾರು ೭೭ ಲಕ್ಷ ಮನೆಗಳಲ್ಲಿ ರೇಡಿಯೊ ಕೇಳುಗರಿದ್ದಾರೆ. ಇದರ ಶೇ. ೭೦ರಷ್ಟು ಮನೆಗಳಲ್ಲಿ ಅಂದರೆ ಸುಮಾರು ೫೪ ಲಕ್ಷ ಮನೆಗಳಲ್ಲಿ ಸ್ವಂತದ ರೇಡಿಯೊ ಇದೆ ಎಂದು ಅಧ್ಯಯನಗಳಿಂದ ತಿಳಿದು ಬಂದಿದೆ.

ರೇಡಿಯೊ ಇರುವ ೫೪ ಲಕ್ಷ ಮನೆಗಳಲ್ಲಿ ೨೮ ದಶಲಕ್ಷ ಜನಸಂಖ್ಯೆಯಿದ್ದು ಅದರಲ್ಲಿ ಶೇ. ೧೧ರಷ್ಟು ಅಂದರೂ ೨.೮ಲಕ್ಷ ಕೇಳುಗರಿದ್ದಾರೆ ಎಂದು ಹೇಳಬಹುದಾಗಿದೆ.

## ವಿವಿಧ ಭಾರತಿ - ವಾಣಿಜ್ಯ ಸೇವೆ

ರೇಡಿಯೊ ಸಿಲೋನ್ ನೀಡುತ್ತಿದ್ದ ಮನರಂಜನೆಯ ಪ್ರಸಾರ ಸೇವೆಯನ್ನು ಹೋಲುವಂತಹ ವಿವಿಧ ಭಾರತಿ ಪ್ರಸಾರ ಸೇವೆಯನ್ನು ೧೯೫೭ರ ಅಕ್ಟೋಬರ್ ೨ರಂದು ಪ್ರಾರಂಭಿಸಿದ ಆಕಾಶವಾಣಿ ಆರ್ಥಿಕ ಸ್ವಾವಲಂಬನೆಯ ದಾರಿ ಹಿಡಿಯಿತು. ೧೯೬೭ರಲ್ಲಿ ವಾಣಿಜ್ಯ ಪ್ರಕಟಣೆಗಳು, ೧೯೭೦ರಲ್ಲಿ ಪ್ರಾಯೋಜಿತ ಕಾರ್ಯಕ್ರಮಗಳು ಪ್ರಾರಂಭವಾದವು. ಪ್ರಸ್ತುತ ದೇಶಾದ್ಯಂತ ೩೦ ಕೇಂದ್ರಗಳಿಂದ ದಿನವಹಿ ೧೫ ಗಂಟೆಗಳ ಮನರಂಜನಾ ಕಾರ್ಯಕ್ರಮಗಳನ್ನು ವಾಣಿಜ್ಯ ಪ್ರಸಾರ ಸೇವೆಯ ಮೂಲಕ ನೀಡಲಾಗುತ್ತಿದೆ. ಕನ್ನಡದಲ್ಲಿ ಪ್ರಮುಖವಾಗಿ ಚಿತ್ರಗೀತೆಗಳನ್ನಾಧರಿಸಿದ ಹಲವಿಧದ ಕಾರ್ಯಕ್ರಮಗಳನ್ನು ಬಿತ್ತರಿಸಿ ಜನಪ್ರಿಯತೆ ಗಳಿಸಿದ ವಿವಿಧ ಭಾರತಿ ಈಗೀಗ ಸಂಗೀತದ ಜೊತೆಗೆ ನುಡಿರೂಪದ (Spoken word) ಕಾರ್ಯಕ್ರಮವನ್ನೂ ನೀಡುತ್ತಿದೆ. ವಿವಿಧ ಭಾರತಿಯನ್ನೇ ಒಂದು ಪ್ರತ್ಯೇಕ ವಾಹಿನಿಯನ್ನಾಗಿ ಮಾಡಿ ನುಡಿರೂಪದ ಕಾರ್ಯಕ್ರಮಗಳನ್ನು ನೀಡುವಂತೆ ಅಭಿಪ್ರಾಯ ವ್ಯಕ್ತವಾಗಿದ್ದರೂ ಈವರೆಗೂ ವಿವಿಧ ಭಾರತಿ, ಅದರಲ್ಲೂ ಕನ್ನಡದಲ್ಲಿ ವಾರ್ತೆಗಳನ್ನು ಈ ಪ್ರಸಾರ ಸೇವೆಯಲ್ಲಿ ನೀಡುವುದು ಸಾಧ್ಯವಾಗಿಲ್ಲ.

> *Vividh Bharathi should have been planned as an independent service producing its own news, Music, Sports review and commentaries and other 'spoken word' programmes to provide a real alternative to the listeners who did not care for the National regional service.*[೧]

ಹಾಗೆಯೇ ವಿವಿಧ ಭಾರತಿಯ ವೈವಿಧ್ಯಮಯ ಕಾರ್ಯಕ್ರಮಗಳನ್ನು ಗಮನಿಸಿದ ಬಿ.ಜಿ. ವರ್ಗಿಸ್ ಸಮಿತಿ ಕೇವಲ ಸಿನೆಮಾ ಗೀತೆಗಳ ಪುನರಾವರ್ತನೆಗೆ ಬದಲಾಗಿ ಈ ಪ್ರಸಾರ ಸೇವೆಯ ಕಾರ್ಯಕ್ರಮಗಳನ್ನು ಮರುಪರಿಶೀಲಿಸುವಂತೆ ಹೇಳಿರುವುದು ಉಲ್ಲೇಖನೀಯ.

ಹಾಗೆ ನೋಡಿದರೆ, ಕನ್ನಡದಲ್ಲಿ ವಿವಿಧ ಭಾರತಿಯ ಮೂಲಕ ಮೊದಮೊದಲು ಬಿತ್ತರಗೊಳ್ಳುತ್ತಿದ್ದ ಚಿತ್ರಗೀತೆಗಳ ಜೊತೆಗೆ ಕ್ರಮೇಣ ಪ್ರಸಾರ ಕಾಲಾವಧಿಯನ್ನೂ ಏರಿಸುತ್ತಾ, ಜೊತೆ ಜೊತೆಗೆ ರೂಪಕ, ನಾಟಕ, ಸಂದರ್ಶನಗಳನ್ನೊಳಗೊಂಡ ಕಾರ್ಯಕ್ರಮಗಳನ್ನು ಪ್ರಸಾರ ಮಾಡುತ್ತಿರುವುದು ಅಧ್ಯಯನದ ಸಂದರ್ಭದಲ್ಲಿ ತಿಳಿದುಬಂದಿದೆ. ಆದರೆ ಈ ಸೇವೆಯ ಮೂಲಕ ಸುದ್ದಿ ಹಾಗೂ ಪ್ರಚಲಿತ ವಿದ್ಯಮಾನಗಳನ್ನು ಕುರಿತ ಕಾರ್ಯಕ್ರಮಗಳನ್ನು ಪ್ರಸಾರ ಮಾಡದಿರುವುದೂ ತಿಳಿದುಬಂದಿತು. ಅದಕ್ಕೆ ಮುಖ್ಯ ಕಾರಣ ಇದು ವಾಣಿಜ್ಯ ಪ್ರಸಾರ ಸೇವೆಯಾಗಿದ್ದು ಆರ್ಥಿಕ ಗಳಿಕೆಯೇ ಮುಖ್ಯವಾಗಿದೆ. ಸುದ್ದಿಯಂತಹ ಕಾರ್ಯಕ್ರಮಗಳಿಗೆ ವಾಣಿಜ್ಯ ಪ್ರಕಟಣೆಗಳನ್ನು, ಪ್ರಯೋಜನೆಗಳನ್ನು ಗಳಿಸುವುದು ಸಾಧ್ಯವಿಲ್ಲ ಎಂದು ಆಕಾಶವಾಣಿ ಭಾವಿಸಿರುವಂತಿದೆ. ಆದರೆ ಇಂದು ಆಕಾಶವಾಣಿ ಒಂದು ಪ್ರಬಲ ಸುದ್ದಿ ಮಾಧ್ಯಮ. ಮತ್ತೊಂದೆಡೆ ಬಾನುಲಿಗಾಗಿಯೇ ವಾಣಿಜ್ಯ ಪ್ರಕಟಣೆ / ಜಾಹೀರಾತುಗಳನ್ನು ನೀಡುವ ಒಂದು ವರ್ಗವಿದೆ. ಅದನ್ನು ಆಲಿಸುವ ಜನರೂ ಇದ್ದಾರೆ. ಹೀಗಿರುವಾಗ, ವಿವಿಧ ಭಾರತಿಯ ಮೂಲಕ ಸುದ್ದಿ ಪ್ರಸಾರ ಪ್ರಾರಂಭಿಸುವತ್ತ ಕನ್ನಡದ ವಿವಿಧ ಭಾರತಿ ಪ್ರಸಾರ ಸೇವೆ

ಗಮನಹರಿಸಬಹುದಾಗಿದೆ. ಅದರಲ್ಲೂ ಬೆಂಗಳೂರು ಆಕಾಶವಾಣಿ ಕೇಂದ್ರವೇ ನಡೆಸಿರುವ ಶ್ರೋತೃ ಸಮೀಕ್ಷೆ ವರದಿಯಲ್ಲಿ ತಿಳಿಸಿರುವಂತೆ ಮುಂಚೆ ಇದ್ದ ಶೇ. ೩೧ರಷ್ಟು ಮಂದಿ ನಿಷ್ಠಾವಂತ ಕೇಳುಗರಲ್ಲಿ ಶೇಕಡ ೧೮ರಷ್ಟು ಮಂದಿ ಈಗೀಗ ರೇಡಿಯೊದಿಂದ ಕ್ರಮೇಣ ದೂರವಾಗುತ್ತಿರುವ ಆತಂಕವಿರುವ ಹಿನ್ನೆಲೆಯಲ್ಲಿ ವಾಣಿಜ್ಯ ಪ್ರಸಾರ ಸೇವೆಯನ್ನು ಇನ್ನಷ್ಟು ಚುರುಕುಗೊಳಿಸಬೇಕಾಗಿದೆ.

## ಅಂತರರಾಷ್ಟ್ರೀಯ ಪ್ರಸಾರ ಸೇವೆ

ಸುಮಾರು ೧೦೦ ದೇಶಗಳಿಗೆ ೨೬ ಭಾಷೆಗಳಲ್ಲಿ ಇಂದು ಸೇವೆ ನೀಡುತ್ತಿರುವ ಆಕಾಶವಾಣಿಯ ಅಂತರರಾಷ್ಟ್ರೀಯ ಪ್ರಸಾರ ೧೯೩೯ರಲ್ಲಿ ಪ್ರಾರಂಭವಾದಾಗಿನಿಂದಲೂ ವಿದೇಶಗಳಲ್ಲಿ ನೆಲೆನಿಂತ ಭಾರತೀಯರ ಮನೆಗಳಿಗೆ ತಲುಪುತ್ತಿವೆ. ಹಾಗೆ ಭಾರತದ ಸುದ್ದಿ - ಸಂದೇಶ, ಸಂಸ್ಕೃತಿ - ಸಂಗೀತಗಳನ್ನು ಕೊಂಡೊಯ್ಯುತ್ತಿದೆ. ಈ ಪ್ರಸಾರ ಸೇವೆಯ ಮುಖ್ಯ ಉದ್ದೇಶ ಭಾರತೀಯ ಪರಂಪರೆಯನ್ನು ವಿಶ್ವಮಟ್ಟದಲ್ಲಿ ಪರಿಚಯಿಸುವುದೇ ಆಗಿದೆ. ಯುನೆಸ್ಕೋದ ಒಂದು ವರದಿ ಸಹ ಇದನ್ನೇ ಪ್ರತಿಪಾದಿಸುತ್ತದೆ. ಅದೇನೆಂದರೆ, ಅಂತರರಾಷ್ಟ್ರೀಯ ಪ್ರಸಾರ ಸೇವೆಯ ಮುಖ್ಯ ಉದ್ದೇಶ :-

- ಪ್ರಸಾರ ನೀಡುವ ದೇಶದ ಸಾಂಸ್ಕೃತಿಕ ಸೊಗಡನ್ನು ಜಾಗತಿಕ ಮಟ್ಟದಲ್ಲಿ ಪರಿಚಯಿಸುವುದು.
- ಜಾಗತಿಕ ಸಮಸ್ಯೆಗಳನ್ನು ಕುರಿತಂತೆ ಪ್ರಸಾರ ನೀಡುವ ದೇಶ ತನ್ನ ಅಭಿಪ್ರಾಯವನ್ನು ಮಂಡಿಸುವುದು ಹಾಗೂ ಅಂತರರಾಷ್ಟ್ರೀಯ ಒಡಂಬಡಿಕೆಯನ್ನು ಉತ್ತೇಜಿಸುವುದು.
- ಆಯಾ ದೇಶೀಯ ಸುದ್ದಿಯನ್ನು ಪ್ರಸಾರ ಮಾಡುವುದು.

ಇತ್ತೀಚಿನ ದಿನಗಳಲ್ಲಿ ಈ ಪ್ರಸಾರ ಸೇವೆಯ ಮೂಲಕ ಅಂತರರಾಷ್ಟ್ರೀಯ ಶೃಂಗಸಭೆಗಳ ಕಲಾಪಗಳು, ಅಂತರರಾಷ್ಟ್ರೀಯ ಸುದ್ದಿಗಳು, ಸಾಂಸ್ಕೃತಿಕ ವಿನಿಮಯ ಕಾರ್ಯಕ್ರಮಗಳು ಬಿತ್ತರಗೊಳ್ಳುತ್ತಿರುವುದು ಗಮನಾರ್ಹ. ೧೯೯೯-೨೦೦೦ದ ಅವಧಿಯಲ್ಲಿ ಹಲಬಗೆಯ ವಿಚಾರಗೋಷ್ಠಿಗಳು, ಸಂಕಿರಣಗಳು, ಚಿತ್ರೋತ್ಸವ ಹಾಗೂ ವ್ಯಾಪಾರೋತ್ಸವಗಳ ವರದಿ, ವೀಕ್ಷಕ ವಿವರಣೆಗಳನ್ನು ಪ್ರಸಾರ ಮಾಡಲಾಯಿತು. ಹಾಗೆ ಭಾರತಕ್ಕೆ ಭೇಟಿ ನೀಡಿದ ವಿದೇಶೀ ಗಣ್ಯರು ಹಾಗೂ ವಿದೇಶಗಳಿಗೆ ಭೇಟಿ ನೀಡಿದ ಭಾರತೀಯ ಗಣ್ಯರ ಭೇಟಿಯ ವರದಿಗಳನ್ನೂ ಪ್ರಸಾರ ಮಾಡಲಾಯಿತು. ಅವುಗಳಲ್ಲಿ ಮುಖ್ಯವಾದವು: ಮಾನವ ಹಕ್ಕು ಶಿಕ್ಷಣ ಕುರಿತ ಏಷ್ಯಾ-ಪೆಸಿಫಿಕ್ ಸಭೆ, ಮಾಲೆಯಲ್ಲಿ ನಡೆದ ಸಾರ್ಕ್ ಶೃಂಗಸಭೆ, ಬೆಂಗಳೂರಿನಲ್ಲಿ ಜರುಗಿದ ಜಿ-೧೫ ರಾಷ್ಟ್ರಗಳ ವಾಣಿಜ್ಯ ಸಚಿವರ ಸಭೆ, ಲೋಕಸಭೆಯ ಮಧ್ಯಂತರ ಚುನಾವಣಾ ವಿವರ 'ವರ್ಡಿಕ್ಟ್ - ೧೯೯೯' ಪ್ರಮುಖವಾದವು.

## ರಾತ್ರಿ ಪ್ರಸಾರ ಸೇವೆ

ಆಕಾಶವಾಣಿಯ ರಾಷ್ಟ್ರೀಯ ವಾಹಿನಿ ೧೯೮೮ರ ಮೇ ೧೮ರಂದು ಆರಂಭವಾಯಿತು. ಸಂಜೆ ೬.೫೦ರಿಂದ ಬೆಳಗಿನ ಜಾವ ೬.೧೦ರವರೆಗೆ ರಾತ್ರಿಯಿಡೀ ಈ ವಾಹಿನಿಯಲ್ಲಿ ಕಾರ್ಯಕ್ರಮಗಳು ಪ್ರಸಾರವಾಗುತ್ತವೆ. ದೇಶದ ಶೇಕಡ ೬೪ರಷ್ಟು ಪ್ರದೇಶ ಹಾಗೂ ಶೇ. ೭೬ ರಷ್ಟು ಜನರಿಗೆ ಈ ಪ್ರಸಾರ ಸೇವೆ ಹರಡಿದೆ. ಭಾರತೀಯ ಸಾಹಿತ್ಯ ಪರಂಪರೆ, ಸಾಂಸ್ಕೃತಿಕ ವೈಭವವನ್ನು ಕುರಿತ ಕಾರ್ಯಕ್ರಮಗಳು, ಗಂಟೆಗೊಂದರಂತೆ ಹಿಂದಿ ಹಾಗೂ ಇಂಗ್ಲೀಷಿನಲ್ಲಿ ಸುದ್ದಿ ಪ್ರಸಾರ ನಡೆಯುತ್ತಿದೆ. ಸಂಸತ್ತಿನ ಕಾರ್ಯಕಲಾಪವನ್ನೂ ಧ್ವನಿಮುದ್ರಿಸಿ ಪ್ರಸಾರ ಮಾಡಲಾಗುತ್ತಿದೆ.

ಇದೆಲ್ಲದರ ಜೊತೆಗೆ ಶಿಕ್ಷಣ ಕ್ಷೇತ್ರಕ್ಕೆ ಆಕಾಶವಾಣಿ ನಿರಂತರವಾಗಿ ತನ್ನ ಕೊಡುಗೆ ನೀಡುತ್ತಿರುವುದು ಗಮನಾರ್ಹ.

## ೨. ಕಾರ್ಯಕ್ರಮ ವೈವಿಧ್ಯ

ಆಕಾಶವಾಣಿಯ ವಿಕಾಸ ಅದರ ಕಾರ್ಯಕ್ರಮಗಳಿಗೆ ವೈವಿಧ್ಯತೆಯನ್ನೂ ತಂದುಕೊಟ್ಟಿದೆ. ಹಾಗೆಯೇ ವೈವಿಧ್ಯಮಯ ಕಾರ್ಯಕ್ರಮಗಳನ್ನು ರೂಪಿಸುವ ಮೂಲಕ ಆಕಾಶವಾಣಿಯೂ ಬೆಳೆದಿದೆ. ೧೯೯೮ರ ಹೊತ್ತಿಗೆ ಆಕಾಶವಾಣಿ ದೇಶಾದ್ಯಂತ ವರ್ಷಂಪ್ರತಿ ೩.೯೧ ಲಕ್ಷ ಗಂಟೆಗಳ ಪ್ರಸಾರ ಸೇವೆಯ ಜೊತೆಗೆ ವಿವಿಧಭಾರತಿ ಮೂಲಕ ೧.೭೬ ಲಕ್ಷ ಗಂಟೆಗಳ ಸೇವೆ ನೀಡುತ್ತಿದ್ದದ್ದು ಅಧ್ಯಯನದ ಸಂದರ್ಭದಲ್ಲಿ ತಿಳಿದು ಬಂದಿತು.

ದೂರದರ್ಶನದಂತೆಯೇ ಆಕಾಶವಾಣಿ ಸಹ ಜನತೆಯ ಅಭಿರುಚಿ, ಆಸಕ್ತಿ, ಅವಶ್ಯಕತೆಗಳಿಗೆ ತಕ್ಕಂತೆ ಸ್ಪಂದಿಸುತ್ತ ಸಾಮಾಜಿಕ ಅಭಿವೃದ್ಧಿಯ ನಿಟ್ಟಿನಲ್ಲಿ ಗುರುತರ ಜವಾಬ್ದಾರಿಯನ್ನು ನಿರ್ವಹಿಸುತ್ತಿದೆ. ಹೆಚ್ಚು ಮೌಲ್ಯಿಕವೂ, ಮೌಲ್ಯಾಧಾರಿತವೂ ಆದ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ರೂಪಿಸುತ್ತಿದೆ. ನಿರೂಪಿಸುತ್ತಿದೆ.

ಆಕಾಶವಾಣಿಯ ಕಾರ್ಯಕ್ರಮಗಳನ್ನು ಮುಖ್ಯವಾಗಿ ಎರಡು ನೆಲೆಗಳಲ್ಲಿ ಗುರುತಿಸಬಹುದು.

- ಸಂಗೀತ (music)
- ನುಡಿ (spoken word)

**ಸಂಗೀತ**

ಜನಪ್ರಿಯ ಸಂಗೀತ ಪೆಟ್ಟಿಗೆ ಎಂದೇ ಹೆಸರು ಪಡೆದಿರುವ ರೇಡಿಯೊ ಮೂಲಕ ಪ್ರಸಾರವಾಗುತ್ತಿರುವ ಕಾರ್ಯಕ್ರಮಗಳಲ್ಲಿ ಶೇ. ೩೮ರಷ್ಟು ಸಂಗೀತವೇ ಆಗಿದೆ. ಇದರಿಂದ ಆಕಾಶವಾಣಿ ಸಂಗೀತಕ್ಕೆ, ಅದರಲ್ಲೂ ಶಾಸ್ತ್ರೀಯ ಸಂಗೀತಕ್ಕೆ ಹೆಚ್ಚಿನ ಪ್ರಾಶಸ್ತ್ಯ ನೀಡಿರುವುದು ವೇದ್ಯವಾಗುತ್ತದೆ. ಹಾಗೆ ನೋಡಿದರೆ ನುಡಿರೂಪದ ಕಾರ್ಯಕ್ರಮಗಳಿಗಿಂತ ತನ್ನ ಸಂಗೀತ ಕಾರ್ಯಕ್ರಮಗಳಿಂದಲೇ ಆಕಾಶವಾಣಿ ಹೆಚ್ಚು ಜನಪ್ರಿಯವಾಗಿದೆ. ಅದರಲ್ಲೂ ವಿವಿಧ ಭಾರತಿಯಂತೂ ಸಂಗೀತ ಕಾರ್ಯಕ್ರಮಗಳಿಂದಲೇ ತುಂಬಿ ಹೋಗಿದೆ. ವಿಶೇಷವಾಗಿ ಚಲನಚಿತ್ರಗೀತೆಗಳಿಂದಾಗಿ ವಾಣಿಜ್ಯ ಜಾಹಿರಾತುಗಳನ್ನೂ ಆಕರ್ಷಿಸುತ್ತಿದೆ.

ಕರ್ನಾಟಕದಲ್ಲೂ ಈ ಶ್ರವ್ಯ ಮಾಧ್ಯಮ ಸಂಗೀತಕ್ಕೆ ವಿಶೇಷ ಪ್ರಾಶಸ್ತ್ಯ ನೀಡಿದೆ. ಕರ್ನಾಟಕ ಶಾಸ್ತ್ರೀಯ ಸಂಗೀತ, ಹಾಗೂ ಹಿಂದೂಸ್ತಾನಿ ಸಂಗೀತ ಪ್ರಭೇದಗಳಿಗೆ ಪೋಷಣೆ ನೀಡಿರುವ ಕರ್ನಾಟಕದಲ್ಲಿ ಆಕಾಶವಾಣಿಯು ಸಂಗೀತ, ಸಂಗೀತಾಧಾರಿತ ಕಾರ್ಯಕ್ರಮಗಳನ್ನು ರೂಪಿಸುವುದಕ್ಕೆ ಯಾವುದೇ ಅಭಾವವೂ ಇಲ್ಲ. ಹಾಗೆಯೇ ಲಘುಶಾಸ್ತ್ರೀಯ, ದೇವರನಾಮ, ಜಾನಪದ, ಸುಗಮಸಂಗೀತಕ್ಕೂ ರೇಡಿಯೊ ಕಾರ್ಯಕ್ರಮಗಳ ಪೈಕಿ ಪ್ರಮುಖವಾದ ಸ್ಥಾನವಿದೆ. ಕನ್ನಡದಲ್ಲಿ ಸುಗಮ ಸಂಗೀತಕ್ಕೆ ಪ್ರಾಯೋಗಿಕ ಸಹಕಾರ ನೀಡಿದ್ದೇ ಆಕಾಶವಾಣಿ. ವಾದ್ಯ ಸಂಗೀತಕ್ಕೂ ಆರ್ಕೆಸ್ಟ್ರಾಗಳಿಗೂ ಈ ಮಾಧ್ಯಮದಲ್ಲಿ ಸ್ಥಾನ ಸಿಕ್ಕಿದೆ.

ಸಾಮಾನ್ಯ ಸಂಗೀತ ಕಾರ್ಯಕ್ರಮಗಳಲ್ಲದೆ, ೧೯೫೦ರಷ್ಟು ಹಿಂದೆಯೇ 'ರೇಡಿಯೊ ಸಂಗೀತ ಸಮ್ಮೇಳನ' ಎನ್ನುವ ರಾಷ್ಟ್ರೀಯ ಸಂಗೀತ ಪ್ರಸಾರ ಪ್ರಾರಂಭಿಸಿರುವುದು ಗಮನಾರ್ಹ. ಸಂಗೀತ ಪರಂಪರೆಯನ್ನು ಕಾಯ್ದುಕೊಳ್ಳುವ ದೃಷ್ಟಿಯಿಂದ ಹಿಂದೂಸ್ತಾನಿ ಹಾಗೂ ಕರ್ನಾಟಕ ಶೈಲಿಯ ಶಾಸ್ತ್ರೀಯ ಸಂಗೀತ ಸ್ಪರ್ಧೆಗಳನ್ನು / ಕಾರ್ಯಕ್ರಮಗಳನ್ನು ದೇಶಾದ್ಯಂತ ನಡೆಸಲಾಗುತ್ತಿದೆ. ಇನ್ನೂ ಮಿಗಿಲೆಂದರೆ ಪ್ರಾದೇಶಿಕ ಸಂಗೀತ ಹಾಗೂ ಲಘು ಸಂಗೀತವನ್ನೂ ರಾಷ್ಟ್ರೀಯ ಪ್ರಸಾರದಲ್ಲಿ ಬಿತ್ತರಿಸಲಾಗುತ್ತಿದೆ.

೧೯೫೨ ರಲ್ಲಿ ದೆಹಲಿ ಕೇಂದ್ರದಲ್ಲಿ ಎಐಆರ್ ವಾದ್ಯವೃಂದ ಎನ್ನುವ ವಾದ್ಯಗೋಷ್ಠಿಯನ್ನು ಸ್ಥಾಪಿಸಿ ಭಾರತೀಯ ಸಂಗೀತದಲ್ಲಿ ಅನೇಕ ಪ್ರಯೋಗಗಳನ್ನು ಮಾಡಿರುವುದು ಅಧ್ಯಯನದ ಸಂದರ್ಭದಲ್ಲಿ ತಿಳಿದುಬಂದಿತು. ಹಾಗೆಯೇ ಆಸಕ್ತ ಶ್ರೋತೃಗಳಿಗೆ ಸಂಗೀತ ಪಾಠ ಹೇಳಿಕೊಡುವ ಕಾರ್ಯವನ್ನೂ ಆಕಾಶವಾಣಿ ಮಾಡುತ್ತಿದೆ. ಇಷ್ಟು ಪ್ರಮಾಣದಲ್ಲಿ ಸಂಗೀತ, ಅದಕ್ಕೆ ಸಂಬಂಧಿಸಿದ ಕಾರ್ಯಕ್ರಮಗಳನ್ನು ಪ್ರಸಾರ ಮಾಡುವ ಮೂಲಕ ಆಕಾಶವಾಣಿ ಒಂದು ನಿರ್ದಿಷ್ಟ ಶ್ರೋತೃವರ್ಗವನ್ನು ಸೃಷ್ಟಿಸಿಕೊಂಡು ಬಿಟ್ಟಿದೆ. ಆ ಮೂಲಕ ತನ್ನ ಸಂವಹನೆಯ ಗುರಿಯನ್ನು ಈಡೇರಿಸಿಕೊಂಡಿದೆ.

## ನುಡಿ

ಮಾತಿನ ಮೂಲಕ ವ್ಯಕ್ತಪಡಿಸಬಹುದಾದ ಎಲ್ಲ ಕಾರ್ಯಕ್ರಮಗಳನ್ನೂ ಈ ಗುಂಪಿನಲ್ಲಿ ಸೇರಿಸಬಹುದು. ಇದರಲ್ಲೂ ಮುಖ್ಯವಾಗಿ ಎರಡು ಬಗೆಯನ್ನು ಕಾಣಬಹುದು.

- ವಿಶೇಷ ಶ್ರೋತೃಗಳಿಗಾಗಿ
- ಸಾಮಾನ್ಯ ಶೋತ್ರಗಳಿಗಾಗಿ

## ವಿಶೇಷ ಶ್ರೋತೃಗಳಿಗಾಗಿ ಕಾರ್ಯಕ್ರಮಗಳು

**ಕೃಷಿ :** ದೂರದರ್ಶನದಂತೆ ಆಕಾಶವಾಣಿ ಸಹ ತನ್ನ ಶ್ರೋತೃವರ್ಗದಲ್ಲಿ ಆಸಕ್ತಿ, ಅಭಿರುಚಿಯನ್ವಯ ತಂಡಗಳನ್ನು ಗುರುತಿಸಿಕೊಂಡಿದೆ. ಉದಾಹರಣೆಗೆ ಕೃಷಿರಂಗ ಕಾರ್ಯಕ್ರಮದ ಪ್ರಯೋಜನ ರೈತಾಪಿ ವರ್ಗದವರಿಗೇ ಹೆಚ್ಚಾಗಿ ಆಗುವುದರಿಂದ ಅವರು ಆ ಕಾರ್ಯಕ್ರಮದ ವಿಶೇಷ ಶ್ರೋತೃಗಳೆನಿಸುತ್ತಾರೆ. ಆಕಾಶವಾಣಿಯ ಕೃಷಿ ಕಾರ್ಯಕ್ರಮಗಳಿಗೆ ಒಂದು ವೈಶಿಷ್ಟ್ಯವಿದೆ. ರೈತರಿಗೆ ಅರ್ಥವಾಗುವ ಸರಳ, ಗ್ರಾಮ್ಯ ಸೊಗಡಿನ ಆಡುಗನ್ನಡವನ್ನು ಕೃಷಿರಂಗ ಕಾರ್ಯಕ್ರಮದಲ್ಲಿ ಬಳಸಿ ಆ ವರ್ಗದ ವಿಶೇಷ ಶ್ರೋತೃಗಳನ್ನು ಆಕರ್ಷಿಸಿಕೊಂಡಿದೆ. ಬೇಸಾಯ ಕ್ರಮದಲ್ಲಿ ಬಳಸಲಾಗುವ ರಸಗೊಬ್ಬರ, ಕ್ರಿಮಿ, ಕೀಟನಾಶಕಗಳ ಪ್ರಯೋಜನ ಹಾಗೂ ಬಳಸಬೇಕಾದ ಕ್ರಮಗಳ ಬಗ್ಗೆ ತಿಳುವಳಿಕೆ ನೀಡುವ ಪ್ರಯತ್ನವನ್ನು ಆಕಾಶವಾಣಿ ಮಾಡಿದೆ. ವೈಜ್ಞಾನಿಕ ಮಾದರಿಯಲ್ಲಿ ಮತ್ತು ತಂತ್ರಜ್ಞಾನ ಬಳಸಿ ಬೇಸಾಯ ಮಾಡಬೇಕಾದ ಕ್ರಮದ ಬಗ್ಗೆಯೂ ತಿಳಿಸಿಕೊಡಲಾಗುತ್ತಿದೆ. ಕೃಷಿರಂಗ ಕಾರ್ಯಕ್ರಮ ಅತ್ಯಂತ ಯಶಸ್ವಿಯಾಗಲು, ಅದರಲ್ಲೂ ಕೇವಲ ಕೇಳುವ ಮಾಧ್ಯಮದ ಮೂಲಕ ಯಶಸ್ವಿಯಾಗಲು ಅದರಲ್ಲಿ ಬಳಸಿದ ಭಾಷೆಯೇ ಮುಖ್ಯ ಕಾರಣ ಎಂದು ಹೇಳಬಹುದು. ಉದಾಹರಣೆಗೆ ಆಕಾಶವಾಣಿ ಈರಣ್ಣನಂತಹ ಒಂದು ಕಲ್ಪಿತ ಪಾತ್ರದ ಮೂಲಕ ಕೇಳುವರ್ಗದೊಂದಿಗೆ ಸಂವಾದ ನಡೆಸುವಂತಹ ಪ್ರಯೋಗ ಗಮನಾರ್ಹವಾದದ್ದು. ೬೦ರ ದಶಕದಲ್ಲಿ ಪ್ರತಿಸಂಜೆ 'ಗ್ರಾಮಸ್ಥರ ಕಾರ್ಯಕ್ರಮ'ದಲ್ಲಿ ಪೇಟೆಧಾರಣೆ, ಕೃಷಿ-ಕಸುಬುಗಳನ್ನು ಕುರಿತು ಸಾಮಾನ್ಯ ತಿಳುವಳಿಕೆ ನೀಡುವುದು, ಈರಣ್ಣನ ಪಾತ್ರ (ಎ.ಎಸ್.ಮೂರ್ತಿ) ಇದ್ದ 'ಮನೆಯ ಮಾತು' ಕಾರ್ಯಕ್ರಮದಲ್ಲಿ ಪರಿಸರ ನೈರ್ಮಲ್ಯ, ಆರೋಗ್ಯ ಸಂರಕ್ಷಣೆ ಮುಂತಾದ ಯಾವುದೇ ಸಾಮಾನ್ಯ ಮಾಹಿತಿ ಒದಗಿಸುವುದು. ಆಕಾಶವಾಣಿಯನ್ನು ಜನಸಾಮಾನ್ಯರ ಮಧ್ಯಕ್ಕೆ ಕೊಂಡೊಯ್ಯಿತು ಎಂದು ಹೇಳಲಾಗುತ್ತಿದೆ. ಇಂತಹ ಸಾಧನೆಗೆ ಇದ್ದ ಮುಖ್ಯ ಕಾರಣಗಳನ್ನು ಅಧ್ಯಯನದ ಸಂದರ್ಭದಲ್ಲಿ ಹೀಗೆ ಗುರುತಿಸಲಾಗಿದೆ.

- ಸಾಮಾನ್ಯ ಜನವರ್ಗಕ್ಕೆ ಆಕಾಶವಾಣಿ ಹೊರತಾಗಿ ಬೇರಾವುದೇ ಸುಲಭವಾಗಿ ಲಭ್ಯವಾಗುವ ಆಧುನಿಕ ಸಂವಹನ ಮಾಧ್ಯಮ ಆಗ ಇರಲಿಲ್ಲ. ಸಿನೆಮಾ ಸುಲಭವಾಗಿ ಲಭ್ಯವಾಗುವಂಥದ್ದಾಗಿರಲಿಲ್ಲ.

✤ ಈ ಕಾರ್ಯಕ್ರಮಗಳಲ್ಲಿ ಬಳಸಿದ ಸರಳ, ನೇರ, ಆಡುಭಾಷೆ ಜನತೆಯನ್ನು ಅಷ್ಟೇ ಸರಳವಾಗಿ, ನೇರವಾಗಿ ತಲುಪುತ್ತಿತ್ತು. ಜನರು ಸಾಮಾನ್ಯವಾಗಿ ಬಳಸುತ್ತಿದ್ದ ಉದ್ಗಾರ, ಕಾಕು, ಕೊಂಕುಗಳನ್ನು ಈ ಕಾರ್ಯಕ್ರಮಗಳಲ್ಲಿ ಧಾರಾಳವಾಗಿ ಬಳಸುತ್ತಿದ್ದುದು ಈ ಕಾರ್ಯಕ್ರಮಗಳ ಜನಪ್ರಿಯತೆಗೆ ಕಾರಣ ಎನ್ನಲಾಗುತ್ತಿತ್ತು.

ಆದರೂ, ಈ ಮಹಾಪ್ರಬಂಧದ ರಚನೆಯ ಸಂದರ್ಭದಲ್ಲಿ ಮಾಡಿದ ವಿಶ್ಲೇಷಣೆ ಹಾಗೂ ಅಧ್ಯಯನದ ಆಧಾರದ ಮೇಲೆ ವಿಷಯದ ಆಳಕ್ಕಿಳಿದಾಗ ಈ ಕಾರ್ಯಕ್ರಮಗಳು ರಾಜ್ಯದ ಒಂದು ಪ್ರದೇಶದ ಜನರನ್ನು ಮಾತ್ರ ತಲುಪುವುದು ಸಾಧ್ಯವಾಗುತ್ತಿತ್ತು ಎಂಬ ಅಂಶ ಕಂಡು ಬಂದಿತು. ಅದು ಏಕೆಂದರೆ, ಕರ್ನಾಟಕಾದ್ಯಂತ ಸಮಸ್ತ ಜನತೆ ಒಂದೇ ಬಗೆಯ ಕನ್ನಡವನ್ನು ಮಾತನಾಡುತ್ತಿಲ್ಲ ಎನ್ನುವುದು ಸ್ಪಷ್ಟ. ಪ್ರಾದೇಶಿಕ ಭಾಷಾ ಭಿನ್ನತೆ ಯಾವಾಗಲೂ ಇದ್ದೇ ಇದೆ. ಆಕಾಶವಾಣಿ ಪ್ರಾಯೋಗಿಕವಾಗಿ ಆರ್ಗ್ಯಾನಿಕ ಸೂತ್ರದ ಮೂಲಕ ನಡೆಸಿದ ಪ್ರಯತ್ನ ಹಳೇ ಮೈಸೂರಿನ ಜನರು ಮಾತನಾಡುವಂತಹ ಭಾಷಾ ಶೈಲಿಯನ್ನು ಹೊಂದಿರುತ್ತಿದ್ದುದರಿಂದ ಈ ಭಾಗದ ಜನರನ್ನು ಹೊರತುಪಡಿಸಿ ಬೇರೆಯವರಿಗೆ ತಲುಪುತ್ತಿರಲಿಲ್ಲ ಎನ್ನುವುದನ್ನು ನಿಶ್ಚಿತವಾಗಿ ಮನಗಾಣಬಹುದು. ಹಾಗಾಗಿ ಈ ಕಾರ್ಯಕ್ರಮದಲ್ಲಿ ಬಳಸಿದ ಭಾಷೆಯಿಂದಾಗಿ ಶ್ರೋತೃವಿನ ಗ್ರಾಹಕತೆ ದೃಷ್ಟಿಯಿಂದ ಇದು ಒಂದು ವಲಯಕ್ಕೇ ಸೀಮಿತವಾಯಿತು ಎನ್ನಬಹುದು.

'ರೈತರಿಗೆ ಸಲಹೆ' ಎನ್ನುವ ಕಾರ್ಯಕ್ರಮವೂ ಕೃಷಿ ಚಟುವಟಿಕೆಗಳಿಗೆ ಸಂಬಂಧಿಸಿದ ಅತ್ಯಂತ ಮುಖ್ಯ ಕಾರ್ಯಕ್ರಮಗಳಲ್ಲಿ ಒಂದು. ಹಾಸನ ಆಕಾಶವಾಣಿ ಕೇಂದ್ರ ಸಾವಯವ ಕೃಷಿಗೆ ಸಂಬಂಧಿಸಿದಂತೆ ಪ್ರಸಾರ ಮಾಡಿದ 'ಹಸಿರು ಸಿರಿ' ಕಾರ್ಯಕ್ರಮದ ಶ್ರೋತೃ ಸಮೀಕ್ಷೆ ನಡೆಸಿದಾಗ, ಆ ಕಾರ್ಯಕ್ರಮದಲ್ಲಿ ತಿಳಿಸಿದ ತಂತ್ರಜ್ಞಾನವನ್ನು ಅಳವಡಿಸಿಕೊಂಡ ೨೬ ಜನ ರೈತರು 'ಪ್ರಗತಿಪರ ರೈತರು' ಎನಿಸಿಕೊಂಡಿದ್ದು ಆಕಾಶವಾಣಿ ಶ್ರೋತೃಗಳ ಮೇಲೆ ಮಾಡಿದ ಪರಿಣಾಮದ ಘಲವಾಗಿತ್ತು.

ಮಹಿಳಾ ಕಾರ್ಯಕ್ರಮಗಳು : ಆಕಾಶವಾಣಿಯ ವಿಶೇಷ ಶ್ರೋತೃ ತಂಡಗಳಲ್ಲಿ ಮಹಿಳಾ ಸಮೂಹವೂ ಒಂದು. ದೂರದರ್ಶನ ಮಾಧ್ಯಮದಲ್ಲಿ ರೂಪಿಸುವಂತೆ ಆಕಾಶವಾಣಿ ಮಾಧ್ಯಮದಲ್ಲೂ ಮಹಿಳೆಯರಿಗಾಗಿ ರಂಜನೀಯ ಹಾಗೂ ವಿಚಾರ ಪ್ರಚೋದನೀಯ ಕಾರ್ಯಕ್ರಮಗಳನ್ನು ಪ್ರಸಾರ ಮಾಡಲಾಗುತ್ತಿದೆ. ವಾರಕ್ಕೆ ಮೂರು ಬಾರಿ ಪ್ರಸಾರವಾಗುವ 'ವನಿತಾ ವಿಹಾರ' ಕಾರ್ಯಕ್ರಮದಲ್ಲಿ ಕೌಟುಂಬಿಕ ಸ್ವಾಸ್ಥ್ಯ, ಪ್ರಚಲಿತ ವಿದ್ಯಮಾನ, ಮನರಂಜನೆಗಾಗಿ ಹಾಡು, ನಾಟಕ/ರೂಪಕ, ಈ ನಾಟಕ/ರೂಪಕಗಳಲ್ಲೂ ವೈಚಾರಿಕ ಅಂಶಗಳು, ಮಹಿಳೆಯರ ಸಮಸ್ಯೆಗಳನ್ನು ಪ್ರತಿಫಲಿಸುವ ಕಥಾರೂಪಕಗಳು, ಅನೇಕ ರಂಗಗಳಲ್ಲಿ ಯಶಸ್ವಿಯಾದ ಮಹಿಳೆಯರೊಂದಿಗೆ ಸಂದರ್ಶನ, ತೀರಾ ಗಂಭೀರವೆನಿಸಿದ ಶೈಲಿಯಲ್ಲಿ ಗಂಭೀರ ಸಮಸ್ಯೆಗಳ ಚರ್ಚೆ ಅದಕ್ಕೆ ಪರಿಹಾರದ ಶೋಧ ಹೀಗೆ ಮಹಿಳೆಯರ, ಹಾಗೂ ಸಮಾಜದ ವಿವಿಧ ಸಮಸ್ಯೆಗಳ ಎಲ್ಲ ಮಗ್ಗಲುಗಳನ್ನು ಕುರಿತು ಸಮಾಲೋಚಿಸಲಾಗುತ್ತಿದೆ. ಇಷ್ಟೆಲ್ಲ ಚಿಂತನೆಗಳ ಜೊತೆಗೆ ಪಾಕಶಾಸ್ತ್ರ ಮತ್ತಿತರ ಲಘು ಆಸ್ವಾದನೆಯ ಕಾರ್ಯಕ್ರಮಗಳನ್ನೂ ಬಿತ್ತರಿಸುತ್ತಿರುವುದರಿಂದ ಅಂತಹ ವಿಷಯಗಳಲ್ಲಿ ಆಸಕ್ತಿ ಹೊಂದಿದ ಮಹಿಳೆಯರನ್ನೂ ರೇಡಿಯೊ ಆಲಿಸುವ ಹವ್ಯಾಸಕ್ಕೆ ಒಳಪಡಿಸಿಕೊಳ್ಳಲಾಗುತ್ತಿದೆ.

'ಸಂಸಾರ ಸಾಗರ', 'ದಾಂಪತ್ಯಯಾನ' ಎನ್ನುವ ಕಥಾಧಾರಿತ ಕಾರ್ಯಕ್ರಮಗಳು, ಸಂಗೀತ ರೂಪಕ - ನಾಟಕಗಳೂ, ಸಾಕ್ಷ್ಯ - ರೂಪಕ, ಸಾಮಾನ್ಯ ವಿಷಯಗಳ ಹಾಗೂ ಪ್ರಚಲಿತ ವಿದ್ಯಮಾನಗಳ ಬಗ್ಗೆ ಅಭಿಪ್ರಾಯಗಳನ್ನಾಧರಿಸಿದ ಕಾರ್ಯಕ್ರಮಗಳನ್ನೂ ಮಹಿಳೆಯರ ಉಪಯೋಗಕ್ಕಾಗಿ ಪ್ರಸಾರ ಮಾಡಲಾಗುತ್ತಿದೆ.

ಅಧ್ಯಯನದ ಸಂದರ್ಭದಲ್ಲಿ ಗಮನಿಸಿದ ಅಂಶವೆಂದರೆ ಮುಖ್ಯವಾಗಿ ಟೆಲಿವಿಷನ್ ಮಾಧ್ಯಮದ ಪಾದಾರ್ಪಣೆಯಿಂದಾಗಿ, ಆ ಮಾಧ್ಯಮವೂ ಮನೆಯಲ್ಲೇ ಇರುವ ಗೃಹಿಣಿಯರನ್ನು ಆಕರ್ಷಿಸುವ ಮೂಲಕ ತಮ್ಮ ವೀಕ್ಷಕ ಸಮೂಹವನ್ನು ಹೊಂದುವ

ಯತ್ನದಲ್ಲಿ ನಿರಂತರವಾಗಿ ರೇಡಿಯೊ ಆಲಿಕೆಗೆ ಒಗ್ಗಿದ್ದ ಮಹಿಳೆಯರನ್ನು ತನ್ನತ್ತ ತಿರುಗಿಸಿಕೊಂಡಿದೆ. ಇಲ್ಲಿ ದೃಶ್ಯವೂ ಇರುವುದರಿಂದ, ಜೊತೆಗೆ ಅನೇಕ ಕನ್ನಡ ವಾಹಿನಿಗಳಿದ್ದು ಎಲ್ಲವೂ ಮಧ್ಯಾಹ್ನದ ಕಾರ್ಯಕ್ರಮಗಳಲ್ಲಿ ಮಹಿಳೆಯರಿಗೆ ಬೇಕಾದ ಕಾರ್ಯಕ್ರಮಗಳನ್ನು ಪ್ರಸಾರ ಮಾಡುವ ಪೈಪೋಟಿಯನ್ನು ತಮ್ಮ ತಮ್ಮಲ್ಲೇ ಹೂಡುತ್ತಿರುವುದರಿಂದಲೂ ಆಕಾಶವಾಣಿಯ ಮಹಿಳಾ ಕಾರ್ಯಕ್ರಮಗಳಿಗೆ ಹೊಸ ಸ್ವರೂಪ ನೀಡಲೇಬೇಕಾದ ತೀವ್ರ ಒತ್ತಡ ಕಂಡು ಬಂದಿದೆ. ಆಕಾಶವಾಣಿ, ಹಾಗೆ ನೋಡಿದರೆ ಮಾಹಿತಿಪೂರ್ಣವಾದ, ತನ್ನ ಮಟ್ಟಿಗೆ ಸಾಕಷ್ಟು ರಂಜನೀಯ ಅಂಶಗಳೊಂದಿಗೇ ಅತ್ಯುತ್ತಮ ಕಾರ್ಯಕ್ರಮಗಳನ್ನು ನೀಡುತ್ತಿದೆ. ಆಕಾಶವಾಣಿಯ ಕಾರ್ಯಕ್ರಮಗಳಷ್ಟು ವಿಚಾರಪೂರ್ಣವಲ್ಲದಿದ್ದರೂ, ಟೆಲಿವಿಷನ್ ಧಾರಾವಾಹಿಗಳು ಮಹಿಳೆಯರ ಮನ ಗೆಲ್ಲುತ್ತಿರುವುದಕ್ಕೆ ಆ ಮಾಧ್ಯಮಕ್ಕಿರುವ ದೃಶ್ಯ ಸಂಬದ್ಧತೆಯೇ ಕಾರಣ ಎಂದೂ ಭಾವಿಸಬೇಕಾಗಿದೆ.

ಮತ್ತೊಂದು ಗಮನಾರ್ಹ ವಿಷಯವೆಂದರೆ ಆಕಾಶವಾಣಿ ಪ್ರಸಾರ ಮಾಡುವ 'ಉದ್ಯೋಗಸ್ಥ ಮಹಿಳೆಯರ ಕಾರ್ಯಕ್ರಮ', ಮಹಿಳೆಯರು ಉದ್ಯೋಗದ ಮೇಲೆ ಮನೆಯಿಂದ ಹೊರಗಿದ್ದಾಗಲೇ ಪ್ರಸಾರವಾಗುತ್ತಿರುವುದು ಯಾರಿಗೂ ಪ್ರಯೋಜನವಾದಂತಿಲ್ಲ. ಇನ್ನು 'ವಿಕಾಸಿನಿ' ಎನ್ನುವ ಮಹಿಳಾ ಉದ್ಯಮಶೀಲತೆಯನ್ನು ಪ್ರೋತ್ಸಾಹಿಸುವ ಕಾರ್ಯಕ್ರಮ, ೩೨ ಜನ ಮಹಿಳೆಯರನ್ನು ಸ್ವಯಂ ಉದ್ಯಮಕ್ಕೆ ಹೆಚ್ಚುವುದರಲ್ಲಿ ಯಶಸ್ವಿಯಾಗಿದೆ.

ದೂರದರ್ಶನ ವಾಹಿನಿಗಳಿಗಿಂತ ಭಿನ್ನವಾಗಿ ಆಕಾಶವಾಣಿ ವಯೋವೃದ್ಧರಿಗಾಗಿ ಬಾಳಬೆಳಕು, ಸರಸ-ಸಲ್ಲಾಪ ಎನ್ನುವ ಸಂದರ್ಶನಾಧಾರಿತ ಕಾರ್ಯಕ್ರಮಗಳನ್ನೂ ಪ್ರಸಾರ ಮಾಡುತ್ತಿರುವುದು ಗಮನಾರ್ಹ. ಈ ಎರಡು ಕಾರ್ಯಕ್ರಮಗಳು ಈವರೆಗೂ ಯಶಸ್ವೀ ಹಿರಿಯರ ಸಂದರ್ಶನ, ದಾಂಪತ್ಯ ಜೀವನದ ಏಳುಬೀಳುಗಳಂತಹ ಗತಜೀವನದ ಅನುಭವಗಳನ್ನಾಧರಿಸಿದ ಕಾರ್ಯಕ್ರಮಗಳಾಗಿವೆ. ಇದನ್ನು ಇನ್ನಷ್ಟು ಆಧುನಿಕ ದೃಷ್ಟಿಕೋನದೊಂದಿಗೆ ಅವರ ಆರೋಗ್ಯ ಸಂರಕ್ಷಣೆ, ಅವರು ಇತರರಿಗೆ ಅನಗತ್ಯ ಹೊರೆಯಾಗದ ರೀತಿಯಲ್ಲಿ ಅವರ ಸಮಯ, ಸಾಮರ್ಥ್ಯ ಬಳಸಿಕೊಳ್ಳುವ ಬಗ್ಗೆ ತಿಳಿಸಿಕೊಡಬಹುದು ಎಂಬ ಸಾಧ್ಯತೆಯನ್ನು ಆಕಾಶವಾಣಿ ಕಂಡುಕೊಳ್ಳಬೇಕಾಗಿದೆ. ಹಾಗಾದಾಗ ಪೀಳಿಗೆಗಳ ನಡುವಿನ ಅಂತರ ಕುಗ್ಗಿಸುವುದು ಸಾಧ್ಯವಾಗಬಹುದು.

**ಮಕ್ಕಳ ಕಾರ್ಯಕ್ರಮ :** ಮಕ್ಕಳು ಆಕಾಶವಾಣಿಯ ವಿಶೇಷ ಶ್ರೋತೃಗಳಲ್ಲಿ ಒಂದು ಪ್ರಮುಖ ವರ್ಗ. ನಾಳಿನ ಸಮಾಜದ ಆಧಾರಸ್ತಂಭಗಳಾಗಬೇಕಾದ ಈ ಮಕ್ಕಳನ್ನು ನಾವು ಅವರು ಮಕ್ಕಳಾಗಿದ್ದಾಗಲೇ ಅಂದರೆ ಬದುಕಿನ ಪ್ರಾರಂಭದ ದಿನಗಳಲ್ಲೇ ಸದೃಢವಾಗಿ ಬೆಳೆಸಬೇಕು. ಟೆಲಿವಿಷನ್ ಬಳಕೆಯ ಇಂದಿನ ದಿನಗಳಲ್ಲಿ ಡಿಡಿ - ೧ ಪ್ರಾರಂಭವಾಗಿ ಸುಮಾರು ೨ ದಶಕಗಳ ಹೊತ್ತಿಗೆ, ಅದೂ ಖಾಸಗಿ ವಾಹಿನಿಗಳು ಕನ್ನಡದಲ್ಲಿ ಕಾರ್ಯಾರಂಭ ಮಾಡಿದ ಮೇಲೆ ಹೊಸತನ ಹಾಗೂ ಹೊಸ ವಿಚಾರಗಳಿಂದ ಕೂಡಿದ ಮಕ್ಕಳ ಕಾರ್ಯಕ್ರಮಗಳು ಪ್ರಸಾರವಾಗತೊಡಗಿವೆ. ಯಾವುದೇ ಖಾಸಗಿ ವಾಹಿನಿಯ ಪೈಪೋಟಿಯಿಲ್ಲದೆ ಸುಮಾರು ೧೫ ವರ್ಷಗಳ ಕಾಲ ಏಕಮೇವಾಧಿಪತಿ ಎನಿಸಿದ್ದ ಡಿಡಿ - ೧ ಮಕ್ಕಳಿಗೇನು ಬೇಕು ಎಂದು ಗ್ರಹಿಸದೆ ಈ ಪ್ರೇಕ್ಷಕ ವರ್ಗವನ್ನು ತನ್ನ ಹಿಡಿತಕ್ಕೆ ಅಥವಾ ತೆಕ್ಕೆಗೆ ತೆಗೆದುಕೊಳ್ಳದೇ ಹೋದ ಸಂದರ್ಭದಲ್ಲಿ ಅದರ ಪ್ರಯೋಜನವನ್ನು ಹೆಚ್ಚಾಗಿ ಪಡೆದದ್ದು ರೇಡಿಯೊ. ಹಾಗೆ ನೋಡಿದರೆ ಆಕಾಶವಾಣಿಯ ಬಾಲಜಗತ್ತು ಟೆಲಿವಿಷನ್ ಇರದೇ ಇದ್ದ ದಿನಗಳಿಂದಲೂ ಮಕ್ಕಳಿಗೆ ಪ್ರಿಯವಾದ ಕಾರ್ಯಕ್ರಮವೇ ಎನಿಸಿದೆ.

ಈ ಮಹಾಪ್ರಬಂಧದ ೪ನೇ ಅಧ್ಯಾಯದಲ್ಲಿ ದೂರದರ್ಶನದಲ್ಲಿ ಮಕ್ಕಳ ಕಾರ್ಯಕ್ರಮಗಳ ಬಗ್ಗೆ ಚರ್ಚಿಸುವಾಗ ಅವರನ್ನು ವಯೋಮಾನದ ಆಧಾರದ ಮೇಲೆ ವರ್ಗೀಕರಿಸಿಕೊಂಡರೆ ಹೆಚ್ಚು ಪ್ರಯೋಜನವಾಗುತ್ತದೆ ಎನ್ನುವ ಸೂಚನೆಯನ್ನು

ನೀಡಿದ್ದೇನೆ. ಆ ಕೆಲಸವನ್ನು ಆಕಾಶವಾಣಿ ಮಾಡಿರುವುದು ಅಧ್ಯಯನವನ್ನು ಮುಂದುವರೆಸಿದಾಗ ತಿಳಿದು ಬಂದಿದೆ. ಆಕಾಶವಾಣಿ ಮಕ್ಕಳನ್ನು ಹೀಗೆ ವರ್ಗೀಕರಿಸಿಕೊಂಡಿದೆ : -

(೧) ೩ರಿಂದ ೬ (೨) ೮ ರಿಂದ ೧೨ (೩) ೧೨ ರಿಂದ ೧೪ ವರ್ಷದವರು.

೧೨ರಿಂದ ೧೪ ವರ್ಷ ವಯೋಮಾನದ ಮಕ್ಕಳು ಗಂಭೀರವಾದ ಚಿಂತನೆಗಳನ್ನು ನಡೆಸುವ, ತರ್ಕಬದ್ಧ ವಿಶ್ಲೇಷಣೆ ಮಾಡಬಲ್ಲ, ತಮಗೇನು ಬೇಕು ಎನ್ನುವುದನ್ನು ಕೇಳಿಪಡೆಯಬಲ್ಲ ಸಾಮರ್ಥ್ಯ, ಗ್ರಾಹ್ಯಶಕ್ತಿ ಇರುವವರು. ಇವರಿಗಾಗಿ ರೇಡಿಯೊದಲ್ಲಿ 'ಬಾಲಜಗತ್ತು' ಎನ್ನುವ ಅರ್ಧಗಂಟೆಯ ಕಾರ್ಯಕ್ರಮ ವಾರಕ್ಕೊಂದು ಬಾರಿ ಪ್ರಸಾರವಾಗುತ್ತಿದೆ. ಇದರಲ್ಲಿ ರಸಪ್ರಶ್ನೆ, ಗಂಭೀರ ಚಿಂತನೆಯ ಕಥಾರೂಪಕಗಳನ್ನು, ನಾಟಕ, ಕಥೆ, ಹಾಡು ಮುಂತಾದ ಮನರಂಜನೆಯಲ್ಲದೆ, ಸಾಮಾಜಿಕ ಸಮಸ್ಯೆಗಳತ್ತ ದೃಷ್ಟಿ ಹರಿಸುವುದಕ್ಕಾಗಿ ಬೀದಿ ಮಕ್ಕಳ ಪಾಡು, ಬಾಲಕಾರ್ಮಿಕರ ಅವಸ್ಥೆಯನ್ನೂ, ಶಿಕ್ಷಣ ಮತ್ತಿತರ ಸಾಮಾಜಿಕ ಅನುಕೂಲಗಳನ್ನು ಪಡೆಯುವುದರ ಪ್ರಯೋಜನವನ್ನು ಸರಳವಾಗಿ ತಿಳಿಯಪಡಿಸಲಾಗುತ್ತಿದೆ. ಇದೇ ವರ್ಗದ ಮಕ್ಕಳಿಗಾಗಿ 'ಬಾಲಗೋಪಾಲ' ಎನ್ನುವ ವಿಶೇಷ ಕಾರ್ಯಕ್ರಮವೂ ಪ್ರಸಾರವಾಗುತ್ತಿದೆ. ಈ ಕಾರ್ಯಕ್ರಮದ ಒಳಗೇ 'ಝೇಂಕಾರ' ಎನ್ನುವ ತಿಂಗಳಿಗೊಂದು ಹಾಡು ಕಲಿಸುವ ಕಾರ್ಯಕ್ರಮವೂ 'ಹೂಗೊಂಚಲು' ಎನ್ನುವ ಇನ್ನೂ ಒಂದು ಕಾರ್ಯಕ್ರಮ (೩-೬ವರ್ಷದವರಿಗೆ)ವೂ ಸೇರಿದೆ. ಗಮನಾರ್ಹ ಅಂಶವೆಂದರೆ ಮಕ್ಕಳ ಕಾರ್ಯಕ್ರಮಗಳನ್ನು ನಿರ್ಮಿಸುವಾಗ ಆಕಾಶವಾಣಿ ಏಕತಾನತೆಗೆ ಆಸ್ಪದ ಕೊಡದೆ ಸಂಚಿಕೆಯ ರೂಪದಲ್ಲಿ ಕಾರ್ಯಕ್ರಮಗಳನ್ನು ರೂಪಿಸುತ್ತಿದೆ.

'ಹಕ್ಕಿಯ ಬಳಗ' ಎನ್ನುವ ಇನ್ನೊಂದು ಸಂಪೂರ್ಣ ಮನರಂಜನಾ ಕಾರ್ಯಕ್ರಮ ೮ರಿಂದ ೧೨ ವರ್ಷದ ಮಕ್ಕಳಿಗಾಗಿ ಪ್ರಸಾರವಾಗುತ್ತಿದೆ. ತಿಂಗಳಿಗೊಂದು 'ಮಕ್ಕಳ ಸಂಗೀತ ಸಭೆ' ಎನ್ನುವ ಕಾರ್ಯಕ್ರಮವೂ ಬಾಲಪ್ರತಿಭೆಗಳನ್ನು ಗುರುತಿಸಿ ಪೋಷಿಸುವ ನಿಟ್ಟಿನಲ್ಲಿ ಸಹಕಾರಿಯಾಗಿದೆ. ೩ರಿಂದ ೬ ವರ್ಷದ ಮಕ್ಕಳಿಗಾಗಿ 'ಬಾಲಗೋಪಾಲ'ದೊಳಗೆ 'ಹೂಗೊಂಚಲು' ಎನ್ನುವ ಕಾರ್ಯಕ್ರಮವೊಂದಿದ್ದು ಆ ವರ್ಗದ ಮಕ್ಕಳನ್ನು ದೂರವಾಣಿ ಮೂಲಕವೇ ಮಾತಾಡಿಸಿ, ಧ್ವನಿ ಮುದ್ರಿಸಿ, ಅದನ್ನು ಪ್ರಸಾರ ಮಾಡುವ ಕಾರ್ಯಕ್ರಮವಿದೆ. ಅಧ್ಯಯನದ ಸಂದರ್ಭದಲ್ಲಿ ತರ್ಕಿಸಿ ನೋಡಿದಾಗ ಈ ವರ್ಗದ ಮಕ್ಕಳಿಗಾಗಿ ಇಂತಹ ಕಾರ್ಯಕ್ರಮದ ಅಗತ್ಯವಿದೆಯೇ ಎಂದು ಪ್ರಶ್ನಿಸುವಂತಾಗುತ್ತದೆ. ಏಕೆಂದರೆ ಟೆಲಿವಿಷನ್ ಮಾಧ್ಯಮದಲ್ಲಿ ಈ ವಯೋಗುಂಪಿನ ಮಕ್ಕಳು ಪರದೆಯ ಮೇಲೆ ಮೂಡಿ ಬಂದು ತಮ್ಮನ್ನು ತಾವು ನೋಡುವಂತಾಗುತ್ತದೆ. ನೋಡಿ ಕಲಿಯುವ ಕಾರ್ಯಕ್ರಮಗಳನ್ನು ಅದರಲ್ಲೂ ನೃತ್ಯ, ಸಾಮೂಹಿಕ ನೃತ್ಯಗಳಂತಹ ಪ್ರದರ್ಶಕ ಕಲೆಗಳಲ್ಲಿ ಈ ಮಕ್ಕಳು ಭಾಗವಹಿಸುವುದರಲ್ಲಿ ಅವರ ಚಟುವಟಿಕೆ, ಲವಲವಿಕೆಗೆ ಪ್ರೋತ್ಸಾಹ ದೊರೆಯುತ್ತದೆ. ಆದರೆ ಇನ್ನೂ ತೊದಲು ಉಲಿಯುವ, ಯೋಚಿಸಿ ಯೋಚಿಸಿ ಮಧ್ಯೆ ಮಧ್ಯೆ ನಿಲ್ಲಿಸಿ ಮಾತನಾಡುವ ಈ ಮಕ್ಕಳು ಸಂಪೂರ್ಣ ಧ್ವನಿ ಮಾಧ್ಯಮವೇ ಆದ ರೇಡಿಯೊಗೆ ಏನನ್ನು ನೀಡಬಹುದು? ಅದನ್ನು ಅವರೇ ಆದರೂ ಕೇಳುವ ತಾಳ್ಮೆ, ಕೇಳಿ ಗುರುತಿಸುವ, ಗ್ರಹಿಸುವ ಶ್ರದ್ಧೆ ಇರುತ್ತದೆಯೇ? ಈ ಪ್ರಶ್ನೆಗಳಿಗೆ ಉತ್ತರ 'ಇಲ್ಲ' ಎನ್ನುವುದಾದರೆ ಆ ಕಾರ್ಯಕ್ರಮಗಳನ್ನು ಬೇರೆ ಯಾರು ಕೇಳಬೇಕು? ಯಾರಿಗಾಗಿ ಅದನ್ನು ಪ್ರಸಾರ ಮಾಡಬೇಕು? ಇದೇ ಸಮಯವನ್ನು ಹೆಚ್ಚು ಕೇಳುಗರನ್ನು ಆಕರ್ಷಿಸುವ ಕಾರ್ಯಕ್ರಮಕ್ಕೆ ನೀಡಬಾರದೇ? ಎನ್ನುವ ಪ್ರಶ್ನೆಗಳನ್ನು ಆಕಾಶವಾಣಿಯ ಮುಂದೆ ಇಡಬೇಕಾಗುತ್ತದೆ. 'ಹೂಗೊಂಚಲು'ವಿಗೂ ಮೊದಲು ಆಕಾಶವಾಣಿ ಇದೇ ವರ್ಗದ (೩-೬ ವರ್ಷ) ಮಕ್ಕಳಿಗಾಗಿ 'ಚಿಲಿಮಿಲಿ' ಎನ್ನುವ ಕಾರ್ಯಕ್ರಮವನ್ನು ಪ್ರಸಾರ ಮಾಡುತ್ತಿದ್ದದ್ದೂ, ನಂತರ ಕೇಳುಗರ ಕೊರತೆಯಿಂದಾಗಿ ಅದನ್ನು ನಿಲ್ಲಿಸಿರುವುದೂ ಅಧ್ಯಯನದ ಸಂದರ್ಭದಲ್ಲಿ ತಿಳಿದು ಬಂದಿದೆ. ಆದ್ದರಿಂದ ಟೆಲಿವಿಷನ್ನಿಗಿಂತ ಭಿನ್ನವೆನ್ನುವಂತೆ, ಆಕಾಶವಾಣಿ ೩ರಿಂದ ೬ ವರ್ಷದ ಮಕ್ಕಳಿಗಾಗಿ ಎಂದು ಕಾರ್ಯಕ್ರಮ ನಿರ್ಮಿಸದೆ ೮ರಿಂದ ೧೨ ವರ್ಷದ ಮಕ್ಕಳ ಗುಂಪನ್ನೇ ೬ರಿಂದ ೧೨

ವರ್ಷದ ಮಕ್ಕಳ ಗುಂಪು ಎಂದು ಮಾಡಿಕೊಳ್ಳಬಹುದಾಗಿದೆ. ಈ ಬಗೆಯ ಎರಡು ಗುಂಪುಗಳಷ್ಟೇ ಆಕಾಶವಾಣಿಯ ಮಕ್ಕಳ ಕಾರ್ಯಕ್ರಮಕ್ಕೆ ಸಾಕು ಎನ್ನಬಹುದು.

ವಿಶೇಷ ಶ್ರೋತೃಗಳಲ್ಲದೆ ಸಾಮಾನ್ಯ ಶ್ರೋತೃಗಳಿಗಾಗಿ ಸುದ್ದಿ, ಪ್ರಚಲಿತ ವಿದ್ಯಮಾನದ ವಿಶ್ಲೇಷಣೆ, ವಿಧಾನ ಮಂಡಲದ ಕಾರ್ಯಕಲಾಪ, ವೈಜ್ಞಾನಿಕ ಪ್ರಗತಿ, ನಾಟಕ / ರೂಪಕಗಳು, ಚಿಂತನ ಎನ್ನುವ ಹಿತ ನುಡಿಯ ಕಾರ್ಯಕ್ರಮ, ಜನಾಭಿಪ್ರಾಯದ 'ಸ್ಪಂದನ', ಕ್ರೀಡಾ ವೀಕ್ಷಕ ವಿವರಣೆ ಹೀಗೆ ಇನ್ನೂ ಅನೇಕ ಉಪಯುಕ್ತ ಕಾರ್ಯಕ್ರಮಗಳನ್ನು ಆಕಾಶವಾಣಿ ನೀಡುತ್ತಿದೆ. ಆಕಾಶವಾಣಿ ಕಾರ್ಯಕ್ರಮಗಳ ವೈವಿಧ್ಯತೆಯನ್ನು ಮುಂದೆ ಪಟ್ಟಿಯ ರೂಪದಲ್ಲಿ ನೀಡಲಾಗಿದೆ.

ಒಟ್ಟಾರೆ ಆಕಾಶವಾಣಿ ಅಥವಾ ದೂರದರ್ಶನದಂತಹ ಒಂದು ಸಂವಹನ ಮಾಧ್ಯಮ ತನಗಿರುವ ಶಕ್ತಿ (Strength), ದೌರ್ಬಲ್ಯ (Weakness), ಅವಕಾಶ (Opportunity) ಹಾಗೂ ಆತಂಕ (Threats) ಅಂದರೆ SWOT ಸಿದ್ಧಾಂತದನ್ವಯ ತನ್ನ ಕ್ಷಮತೆಯನ್ನರಿತು ಜೊತೆಗೆ ಜನತೆಯ ನಾಡಿ - ಮಿಡಿತವನ್ನರಿತು ಕಾರ್ಯಕ್ರಮಗಳನ್ನು ನಿರೂಪಿಸಬೇಕಾಗಿದೆ. ಕೇಳುಗರನ್ನು ಅಥವಾ ನೋಡುಗರನ್ನು ಮಾಧ್ಯಮಗಳು ನಿರ್ಲಕ್ಷಿಸುವುದರಿಂದ ಅವರು ಇತರ ಮಾಧ್ಯಮಗಳತ್ತ ಹರಿದು ಹೋಗುತ್ತಾರೆ ಎಂದು ಹೇಳಬಹುದು. ಒಂದು ಹಂತದಲ್ಲಿ ದೂರದರ್ಶನ ಮಾಧ್ಯಮದಲ್ಲೇ ಹಲವು ವಾಹಿನಿಗಳ ನಡುವೆ ವೀಕ್ಷಕರು ಆಯ್ಕೆಯ ಹಕ್ಕು ತಮ್ಮದು ಎಂದು ಸಾಬೀತು ಮಾಡಿದ್ದಾರೆ. ಕಳೆದ ೪ ದಶಕಗಳಿಂದಲೂ ಕನ್ನಡದಲ್ಲಿ ರೇಡಿಯೊ ಕಾರ್ಯಕ್ರಮಗಳಿದ್ದರೂ, ೨ ದಶಕಗಳಿಂದ ಟೆಲಿವಿಷನ್ ಕಾರ್ಯಕ್ರಮಗಳಿದ್ದರೂ, ಖಾಸಗಿ ಹಾಗೂ ಕೇಬಲ್ ವಾಹಿನಿಗಳ ಉಗಮದಿಂದಾಗಿ ಪ್ರೇಕ್ಷಕ / ಶ್ರೋತೃ ಈಗ ಅತಿ ಜಾಗರೂಕನಾಗಿದ್ದಾನೆ ಎನ್ನುವ ಎಚ್ಚರಿಕೆಯ ಗಂಟೆಯನ್ನು ಎಲ್ಲ ಮಾಧ್ಯಮಗಳೂ ಈಗ ಕೇಳಿಸಿಕೊಳ್ಳಬೇಕಾಗಿದೆ.

೨೦೦೧ರ ಫೆಬ್ರವರಿ ತಿಂಗಳಿನಲ್ಲಿ ಆಕಾಶವಾಣಿಯ ಒಂದು ವಾರದ ಕಾರ್ಯಕ್ರಮಗಳನ್ನು (ಫೆಬ್ರವರಿ ೫ರಿಂದ ೧೧ರವರೆಗೆ) ಅಧ್ಯಯನದ ಉದ್ದೇಶದಿಂದ ಅಭ್ಯಸಿಸಲಾಯಿತು. ಆ ಸಂದರ್ಭದಲ್ಲಿ ತೋರಿಬಂದ ಕೆಲವು ಅಂಶಗಳನ್ನು ಇಲ್ಲಿ ವಿಶ್ಲೇಷಿಸಿದ್ದೇನೆ. **(ಪಟ್ಟಿ - ೧೫)**

ಆಕಾಶವಾಣಿ ತನ್ನ ಕಾರ್ಯಕ್ರಮಗಳನ್ನು ದಿನವಹೀ ನಾಲ್ಕು ಪ್ರಸಾರಗಳಲ್ಲಿ ಬಿತ್ತರಿಸುತ್ತಿದೆ. ಈ ನಾಲ್ಕು ಪ್ರಸಾರಗಳನ್ನು ಕೂಲಂಕಷವಾಗಿ ನೋಡಿದಾಗ ಸಮಾಜದ ಎಲ್ಲ ವಯಸ್ಸಿನ, ವಿಭಿನ್ನ ಅಭಿರುಚಿಯ, ಭಿನ್ನ ಕಾರ್ಯಕ್ಷೇತ್ರದ, ಸ್ವಲ್ಪ ಮಟ್ಟಿಗೆ ಭಿನ್ನ ಭಾಷಾವರ್ಗದ ಜನತೆಗೆ, ಹಲವು ಬಾರಿ ಅವರ ಸಂಖ್ಯೆಯ ಆಧಾರದ ಮೇಲೂ - ಬೇಕೆನಿಸುವ ಕಾರ್ಯಕ್ರಮಗಳನ್ನು ನೀಡುತ್ತಿರುವುದನ್ನು ಗಮನಿಸಬಹುದು. ಕೇವಲ ಶ್ರವ್ಯ ಮಾಧ್ಯಮವಾಗಿರುವುದರಿಂದ ಕೇಳುಗರಲ್ಲಿ ಆಸಕ್ತಿಯನ್ನು ಉಳಿಸಿ, ಬೆಳೆಸಿಕೊಂಡು ಹೋಗಬೇಕಾದ ಹೊಣೆಗಾರಿಕೆಯೂ ಈ ಮಾಧ್ಯಮಕ್ಕೆ ಇರುವುದರಿಂದ ಸಂಗೀತ, ಸಂಗೀತಾಧಾರಿತ ಹಾಗೂ ಕಲಾಧಾರಿತ ಮನರಂಜಕ ಕಾರ್ಯಕ್ರಮಗಳನ್ನು ಹೆಚ್ಚಾಗಿ ಪ್ರಸಾರ ಮಾಡಬೇಕಾದ್ದು ಅನಿವಾರ್ಯ. ಆದ್ದರಿಂದಲೇ ಶಾಸ್ತ್ರೀಯ ಸಂಗೀತ, ಚಿತ್ರ ಸಂಗೀತ, ಲಘು ಹಾಗೂ ಭಕ್ತಿ ಸಂಗೀತ, ಜಾನಪದ ಹಾಗೂ ವಾದ್ಯ ಸಂಗೀತ, ಸಂಗೀತ ರೂಪಕಗಳು, ನಾಟಕಗಳು, ಸಾಹಿತ್ಯಕ ಭಾಷಣಗಳು, ಕಾವ್ಯವಾಚನ ಮುಂತಾಗಿ ಕಲಾಕೇಂದ್ರಿತ ಕಾರ್ಯಕ್ರಮಗಳು - ಅದೂ ವೈವಿಧ್ಯಮಯತೆಯೊಂದಿಗೆ ನಿರೂಪಿತಗೊಂಡಿರುವುದು ಸೂಕ್ತವೂ, ಗಮನ ಸೆಳೆವಂಥದೂ ಆಗಿದೆ. ಆಕಾಶವಾಣಿಯಂತಹ ಶ್ರವ್ಯ ಮಾಧ್ಯಮವೊಂದು ಮನರಂಜನೆಗೆ ಇದಕ್ಕಿಂತ ಹೆಚ್ಚಿನದನ್ನು ನೀಡುವುದು ಕಷ್ಟವೂ ಆಗಬಹುದು. ಅದರ ಇತಿಮಿತಿಯ ಚೌಕಟ್ಟಿನಲ್ಲೇ ಯೋಚಿಸಿದಾಗಲೂ ಒಂದಂಶ ಕಣ್ತಪ್ಪಿ ಹೋದಂತೆ ಕಾಣುತ್ತಿದೆ. ಆಕಾಶವಾಣಿ ಇಂದು ಪ್ರಮುಖವಾಗಿ ಗ್ರಾಮೀಣ ಪ್ರದೇಶದಲ್ಲಿ ಚಾಲ್ತಿಯಲ್ಲಿರುವ ಮಾಧ್ಯಮ. ಈ ಅಂಶವನ್ನು ಈ ಮಹಾಪ್ರಬಂಧದ ಮೊದಲ ಅಧ್ಯಾಯಗಳಲ್ಲಿ,

ದೂರದರ್ಶನದ ಪರಿಣಾಮವನ್ನು ವಿವರಿಸುವಾಗ ಸ್ಪಷ್ಟಪಡಿಸಲಾಗಿದೆ. ಆದ್ದರಿಂದ ಹೆಚ್ಚಿನ ಸಂಖ್ಯೆಯ ಗ್ರಾಮೀಣ ಜನತೆಯು ಅವಲಂಬನೆ ಹೊಂದಿರುವ ರೇಡಿಯೊದಲ್ಲಿ ತೀರಾ ಶಿಷ್ಟ ಸಂಪ್ರದಾಯದ ಶಾಸ್ತ್ರೀಯ ಹಾಗೂ ವಾದ್ಯ ಸಂಗೀತಕ್ಕೆ ನಿಗದಿಪಡಿಸಿರುವ ಕಾಲಾವಧಿಯನ್ನು ಕಡಿಮೆಗೊಳಿಸಿ, ಜನಪದ ಗೀತೆ, ಜನಪದ ಕಥಾರೂಪಕಗಳು, ಕಥನಕಾವ್ಯಗಳು, ಜಾನಪದ ಕಥೆಗಳನ್ನಾಧರಿಸಿದ ನಾಟಕಗಳು, ಅವುಗಳನ್ನು ಕುರಿತು ಭಾಷಣಗಳು, ಗ್ರಾಮೀಣ ಜನತೆಗೆ ಸುಲಭವಾಗಿ ಅರ್ಥವಾಗುವ ನೆಲೆಯಲ್ಲಿ ಚಿಂತನಶೀಲತೆಯನ್ನು ಹೆಚ್ಚಿಸುವ ಕಾರ್ಯಕ್ರಮಗಳನ್ನು ನಿರೂಪಿಸಿದರೆ ಸಂವಹನೆಯ ಉದ್ದೇಶ ಇನ್ನೂ ಸ್ಪಷ್ಟವೂ, ಸ್ವಾಭಾವಿಕವೂ ಆಗುತ್ತದೆ. ಇದರರ್ಥ ಶಿಷ್ಟ ಸಂಗೀತ ಸಂಪ್ರದಾಯವನ್ನು ನಿರ್ಲಕ್ಷಿಸಬೇಕೆಂದಲ್ಲ. ಏಕೆಂದರೆ ಇಂತಹ ಸಂಗೀತ ಶೈಲಿಯೂ ಒಂದು ಪರಂಪರೆಯಿಂದಲೇ ಬಂದಿದೆ. ಇದನ್ನೂ ಸಂರಕ್ಷಿಸಿಕೊಳ್ಳುವ ಹೊಣೆಯಿರುವ ಮಾಧ್ಯಮವೊಂದು ಇದರತ್ತ ಹೆಚ್ಚು ಒಲವಿನಿಂದ ವಾಲಿದೆ ಎಂದೂ ತೋರುತ್ತದೆ.

ಇದಕ್ಕಿಂತಲೂ ಹೆಚ್ಚಾಗಿ ಗ್ರಾಮೀಣ ಜನತೆ ಪಡೆಯಲು ಕಷ್ಟ ಎನ್ನಬಹುದಾದ ಸೌಲಭ್ಯವೊಂದನ್ನು ನಗರದ ಜನತೆ ಪಡೆಯುತ್ತದೆ. ಅದು ಧ್ವನಿಸುರುಳಿಗಳು. ಒಂದು ಟೇಪ್ ರೆಕಾರ್ಡರ್ ಮತ್ತು ತಮಗೆ ಪ್ರಿಯವಾದ ಕ್ಯಾಸೆಟ್‌ಗಳನ್ನು ಪಡೆಯುವುದು ನಗರದವರಿಗೆ ಕಷ್ಟವಲ್ಲ. ಹಳ್ಳಿಯ ಎಲ್ಲ ಜನರೂ ಟೇಪ್‌ರೆಕಾರ್ಡರ್ ಅನ್ನೂ, ಅದರ ಜೊತೆಗೆ ಆಗಿಂದಾಗ್ಗೆ ಬಿಡುಗಡೆಯಾಗುವ ಹೊಸ ಆಡಿಯೋ ಕ್ಯಾಸೆಟ್‌ಗಳನ್ನೂ ಖರೀದಿಸುವಂತಹ ಆರ್ಥಿಕ ಸುಭದ್ರತೆಯನ್ನು ಹೊಂದಿರುವುದಿಲ್ಲ. ಬದಲಿಗೆ ಒಂದು ರೇಡಿಯೊ ಮೂಲಕ ತಮ್ಮ ಅಭಿರುಚಿಗೆ ತಕ್ಕ ಕಾರ್ಯಕ್ರಮವನ್ನು ನಿರೀಕ್ಷಿಸಬಹುದು. ಈ ಕೊರತೆಯನ್ನು ಪೂರೈಸುವುದಕ್ಕೇ ಆಕಾಶವಾಣಿ ಹೆಚ್ಚಿನ ಪ್ರಯತ್ನ ಪಡಬಹುದು. ಈ ಎರಡೂ ಆರ್ಥಿಕ ವರ್ಗಗಳ ನಡುವಿನ ಸ್ತರದ ಜನತೆ ಟೂ-ಇನ್-ಒನ್ (ಕ್ಯಾಸೆಟ್ ಪ್ಲೇಯರ್ ಮತ್ತು ರೇಡಿಯೊ) ಬಳಸುವಂತೆ ಆಧುನಿಕ ತಂತ್ರಜ್ಞಾನದ ನೆರವು ಸಿಕ್ಕಿರುವುದು ಗಮನಾರ್ಹ. ಈ ಹಿನ್ನೆಲೆಯಲ್ಲಿ ಕೇಳುಗರ ಸಂಖ್ಯೆಯ ಆಧಾರದ ಮೇಲೆ ಶಿಷ್ಟ ಹಾಗೂ ಜನಪದ ಕಲಾ ಪ್ರಕಾರವನ್ನೊಳಗೊಂಡ ಅಥವಾ ಆಧರಿಸಿದ ಕಾರ್ಯಕ್ರಮಗಳನ್ನು ಇನ್ನಷ್ಟು ಸಂತುಲಿತಗೊಳಿಸಬೇಕಾಗಿದೆ ಎನ್ನುವ ಅಂಶ ಬೆಳಕಿಗೆ ಬಂದಿದೆ.

ಹಾಗೆಯೇ ತೋರಿಬಂದ ಮತ್ತೊಂದು ಪ್ರಮುಖ ವಿಚಾರವೆಂದರೆ ವಾರ್ತಾ ಪ್ರಸಾರ. ಪ್ರದೇಶ ಸಮಾಚಾರದ ಹೆಸರಿನಲ್ಲಿ ದಿನವಹಿ ೩ ಪ್ರಾದೇಶಿಕ ವಾರ್ತಾ ಪ್ರಸಾರ, ದೆಹಲಿಯಿಂದ ರಾಷ್ಟ್ರೀಯ ಮಟ್ಟದ ಸುದ್ದಿ / ವಾರ್ತೆಗಳನ್ನು ಪ್ರಸಾರ ಮಾಡಲಾಗುತ್ತಿದೆ. ಹಾಗೆ ಅವಲೋಕನ, ವಿಧಾನ ಮಂಡಲದ ಅಧಿವೇಶನದ ಸಂದರ್ಭದಲ್ಲಿ ಕಾರ್ಯಕಲಾಪಗಳ ವಿಶ್ಲೇಷಣೆ, ಚುನಾವಣೆ, ಬಜೆಟ್, ಆರ್ಥಿಕ ಸಮೀಕ್ಷೆಯ ಕಾಲದಲ್ಲಿ ವಿಶೇಷ ವಾರ್ತೆ, ವಿಶ್ಲೇಷಣೆ ಹಾಗೂ ಇತರ ಪ್ರಚಲಿತ ವಿದ್ಯಮಾನಗಳನ್ನು ಕುರಿತ ಕಾರ್ಯಕ್ರಮಗಳನ್ನು ಬಿತ್ತರಿಸಲಾಗುತ್ತಿದೆ. ೨೦೦೦ದ ಇಸವಿಯಲ್ಲಿ ದೂರದರ್ಶನ ಖಾಸಗಿ ವಾಹಿನಿಗಳು ದೃಶ್ಯಸಹಿತವಾಗಿ ೨೪ ಗಂಟೆಗಳ ನಿರಂತರ ವಾರ್ತೆ, ವಿಶ್ಲೇಷಣೆ, ಪ್ರಚಲಿತ ವಿದ್ಯಮಾನದಂತಹ ಕಾರ್ಯಕ್ರಮಗಳನ್ನು ಪ್ರಸಾರ ಮಾಡುತ್ತಿರುವಾಗ ಆಕಾಶವಾಣಿಯ, ಕೇವಲ ಕಿವಿಗೆ ತಲುಪುವ ದಿನಂಪ್ರತಿ ಆರು ವಾರ್ತಾ ಬುಲೆಟಿನ್‌ಗಳು ಸಾಕೆ? ಎನ್ನುವುದೂ ಒಂದು ಪ್ರಶ್ನೆ. ಆದಾಗ್ಯೂ ಆಕಾಶವಾಣಿಗೇ ಇರುವ ಅನೇಕ ಅನುಕೂಲತೆಗಳನ್ನು (ನಿರ್ಮಾಣ ವೆಚ್ಚ, ಸರಳತೆ, ಶೀಘ್ರತೆ, ಸುಲಭ ಲಭ್ಯತೆ, ರೇಡಿಯೊ ಸೆಟ್ ಬಳಕೆಯಲ್ಲಿ ಸರಳತೆ, ಪ್ರಸಾರ ವ್ಯಾಪಕತೆ) ಗಮನದಲ್ಲಿಟ್ಟುಕೊಂಡಾಗ ಒಂದು ಹಂತದಲ್ಲಿ ದೂರದರ್ಶನಕ್ಕಿಂತ ರೇಡಿಯೊ ಹೆಚ್ಚು ಅನುಕೂಲಕರ ಎಂಬಂಶವನ್ನೂ ಒಪ್ಪಬಹುದು. ಈ ಹಿನ್ನೆಲೆಯನ್ನೇ ಆಕಾಶವಾಣಿ ತನ್ನ 'ಸಾಮರ್ಥ್ಯ' ಎಂದುಕೊಂಡು ೨೪ ಗಂಟೆಗಳ ನಿರಂತರ ನ್ಯೂಸ್ / ವಾರ್ತಾ ವಾಹಿನಿಯನ್ನು ಪ್ರಾರಂಭಿಸುವುದು ಸೂಕ್ತ ಎನಿಸುತ್ತದೆ. ಇಂದಿನ ಸಂವಹನ ಯುಗದಲ್ಲಿ 'ವಾರ್ತೆ' ಎನ್ನುವುದಕ್ಕೆ ಹೊಸ ಅರ್ಥ ಹಾಗೂ ಹೊಸ ಆಯಾಮ ದೊರೆಯುತ್ತಿದ್ದು, ಸರ್ಕಾರೀ ಅಧಿಪತ್ಯದಲ್ಲಿದ್ದ 'ಪ್ರಸಾರ ಭಾರತಿ'ಯ ಎರಡೂ ಮಾಧ್ಯಮಗಳು (ಡಿಡಿ-೧ ಹಾಗೂ ಆಕಾಶವಾಣಿ)

ಅದನ್ನು ತನ್ನ ಅನುಕೂಲಕ್ಕೆ ಬಳಸಿಕೊಳ್ಳಲು ಅವಕಾಶವಿದೆ ಎನ್ನುವುದು ಅಧ್ಯಯನದ ಸಂದರ್ಭದಲ್ಲಿ ಗಮನಕ್ಕೆ ಬಂದ ಇನ್ನೊಂದು ಅಂಶ.

ಆಕಾಶವಾಣಿ ನಾಟಕಗಳದ್ದೇ ಒಂದು ಶೈಲಿಯಿದ್ದು, ಅದೂ ಒಂದು ಪ್ರಮುಖ ಸಾಹಿತ್ಯ ಪ್ರಕಾರಗಳ ಸಾಲಿಗೆ ಸೇರಬಹುದಾದ ಸಾಹಿತ್ಯಕ, ಮೌಲ್ಯಿಕ ಶಕ್ತಿ ಹೊಂದಿತ್ತು. ಆದರೆ ಅಧ್ಯಯನಕ್ಕಾಗಿ ಬಳಸಿದ ಮಾದರಿ ಪಟ್ಟಿಯಲ್ಲಿ ಗಮನಿಸಿದಂತೆ ವಾರಕ್ಕೆ ಒಂದು ದಿನ ಮಾತ್ರ ನಾಟಕಕ್ಕಾಗಿ ಕಾಲ ನಿಗದಿಪಡಿಸಿರುವುದು ಕಂಡು ಬಂದಿದ್ದು, ಇಷ್ಟು ಸಣ್ಣ ಕಾಲಾವಧಿಯಲ್ಲಿ ಒಂದು ಪ್ರಕಾರ ಬೆಳೆಯುವುದು ಸುಲಭವಲ್ಲ ಎಂದು ತಿಳಿಯುತ್ತದೆ. ಇನ್ನು ಅನೇಕ ವಿಷಯಗಳಲ್ಲಿ ಉದಾಹರಣೆಗೆ ಮಹಿಳೆ, ಮಕ್ಕಳು, ಯುವಕರು, ವಯೋವೃದ್ಧರು ಅಥವಾ ಆರೋಗ್ಯ, ಕೃಷಿ ವಿಚಾರಗಳನ್ನೂ ನಾಟಕದ ರೂಪದಲ್ಲಿ, ನಾಟಕದ ಚೌಕಟ್ಟಿನಲ್ಲಿ ಪ್ರಸ್ತುತಪಡಿಸಬಹುದು. ಅದು ಆಕಾಶವಾಣಿಯಂತಹ ಶ್ರವ್ಯ ಮಾಧ್ಯಮಕ್ಕೆ ಇರುವ ಅನಿವಾರ್ಯತೆಯೇ ಆದರೂ ಕಲೆಯ/ಸಾಹಿತ್ಯದ ಹಿನ್ನೆಲೆಯಲ್ಲಿ ಬೆಳೆದು ಬಂದ ನಾಟಕ ಅವೆನಿಸಿಕೊಳ್ಳಲಾರವು ಎಂಬುದು ಸ್ಪಷ್ಟ. ಈ ದೃಷ್ಟಿಯಿಂದ ಕನಿಷ್ಠ ವಾರಕ್ಕೆರಡಾದರೂ ನಾಟಕಗಳನ್ನು ಆಕಾಶವಾಣಿ ಪ್ರಸಾರ ಮಾಡಿದರೆ, ಕನ್ನಡ ಸಾಹಿತ್ಯದ ನಾಟಕ ಪ್ರಕಾರಕ್ಕೂ ಬೆಂಬಲ ನೀಡಿದಂತಾಗುತ್ತದೆ.

ತ್ರಿಭಾಷಾ ಸೂತ್ರದಡಿ ಹಿಂದಿ, ಇಂಗ್ಲಿಷ್ ಭಾಷೆಯ ವಾರ್ತೆ, ಕಾರ್ಯಕ್ರಮಗಳನ್ನು ಭಾಷಾ ಅಲ್ಪಸಂಖ್ಯಾತರಿಗಾಗಿ 'ಸ್ನೇಹ ಭಾರತಿ' ಕಾರ್ಯಕ್ರಮದಲ್ಲಿ ವಿಶೇಷ ಕಾರ್ಯಕ್ರಮಗಳನ್ನು ಆಕಾಶವಾಣಿ ಬಿತ್ತರಿಸುತ್ತಿರುವುದು ಅದರ ವಿಶೇಷತೆಯನ್ನು ಹೆಚ್ಚಿಸಿದೆ. ಒಟ್ಟಾರೆ ಒಂದು ವಾರದ ಪಟ್ಟಿಯಲ್ಲಿ ವಿಶೇಷ ಶೋತೃಗಳಿಗಾಗಿಯೇ ಹೆಚ್ಚಿನ ಪ್ರಮಾಣದ ಕಾರ್ಯಕ್ರಮಗಳು ಹಾಗೂ ಸೂಕ್ತ ಕಾಲಾವಧಿ ಮೀಸಲಾಗಿರುವುದು ಗಮನಾರ್ಹ. ಸಮಯಾವಧಿ ಮತ್ತು ವೈವಿಧ್ಯಮಯತೆಯ ದೃಷ್ಟಿಯಿಂದ ಗಮನಿಸಿದ ಅಂಶಗಳಲ್ಲದೆ ವೈಖರಿ ಹಾಗೂ ವಿನ್ಯಾಸದ ದೃಷ್ಟಿಯಿಂದಲೂ ಆಕಾಶವಾಣಿ ಕಾರ್ಯಕ್ರಮಗಳನ್ನು ಅಭ್ಯಸಿಸಲಾಗಿದೆ.

ಆಕಾಶವಾಣಿಯ ಕಾರ್ಯಕ್ರಮ ಪ್ರಸಾರದ ಮೂಲಸತ್ವವಿರುವುದೇ ಅದರ ಅಚ್ಚುಕಟ್ಟುತನದಲ್ಲಿ. ವಾರದ ಏಳೂ ದಿನಗಳ ಕಾರ್ಯಕ್ರಮ ಪಟ್ಟಿಯ ಒಂದು ಮಾದರಿಯನ್ನು ನೋಡಿದಾಗ (೨೦೦೧ರ ಫೆಬ್ರವರಿ ೫ರಿಂದ ೧೧ರವರೆಗೆ) ಪ್ರತಿ ಕಾರ್ಯಕ್ರಮಕ್ಕೂ ನಿಗದಿತ ಕಾಲಬಂಧವಿರುವುದೂ ದಿನವೂ ನಿಗದಿತ ಸಮಯಕ್ಕೆ ನಿರ್ದಿಷ್ಟ ಕಾರ್ಯಕ್ರಮ ಪ್ರಾರಂಭಿಸುವುದೂ ಸ್ಪಷ್ಟವಾಗುತ್ತದೆ. ಈ ಸಮಯ ಪರಿಪಾಲನೆಯ ಶಿಸ್ತಿನಿಂದಾಗಿಯೇ ಆಕಾಶವಾಣಿ ಗಡಿಯಾರದಷ್ಟೇ ಜನಪ್ರಿಯವೂ ಆಗಿತ್ತು ಎನ್ನುವುದು ಅನುಭವ ಜನ್ಯ ಮಾತು. ಇದರಿಂದ ಆಕಾಶವಾಣಿಗೆ ಆಗುತ್ತಿದ್ದ ಲಾಭವೆಂದರೆ ಜನತೆಯಲ್ಲಿ 'ಕೇಳುವ ಹವ್ಯಾಸ' ಬೆಳೆಸುವುದು, 'ವಿಶೇಷ ಶ್ರೋತೃ' ವರ್ಗವನ್ನು ಸೃಷ್ಟಿಸಿಕೊಳ್ಳುವುದು. ಬೇರೆ ಪ್ರಭಾವಿ ಮಾಧ್ಯಮಗಳು ಇರದಿದ್ದ ಅಥವಾ ಯಶಸ್ವಿಯಾಗಿರದಿದ್ದ ಕಾಲದಲ್ಲೇ ಆಕಾಶವಾಣಿ ಕೇಳುಗರಲ್ಲಿ ಆಸಕ್ತಿ ಕೆರಳಿಸಿ, ಸಮಯಕ್ಕೆ ಸರಿಯಾಗಿ ರೇಡಿಯೊ ಕೇಳುವ ಹವ್ಯಾಸಕ್ಕೆ ತೊಡಗಿಸಿ, ಆ ಮೂಲಕ ಜ್ಞಾನ ವಿನಿಯೋಗದ ಮತ್ತು ಜಾಗೃತಿ ಪ್ರಸರಣದ ಕಾರ್ಯದಲ್ಲಿ ತೊಡಗಿದ್ದು. ಬೆಳಿಗ್ಗೆ ೬.೫೫ಕ್ಕೆ ಚಿಂತನ, ೭.೩೫ಕ್ಕೆ ವಾರ್ತೆ, ೮.೩೦ಕ್ಕೆ ರೇಡಿಯೊ ಡಾಕ್ಟರ್ ಮುಂತಾದ ಕಾರ್ಯಕ್ರಮಗಳನ್ನು ಪ್ರತಿ ದಿನವೂ ತಪ್ಪದೇ ಪ್ರಸಾರ ಮಾಡುವ ಅಚ್ಚುಕಟ್ಟುತನವನ್ನು ಆಕಾಶವಾಣಿ ಮೈಗೂಡಿಸಿಕೊಂಡಿದೆ. ಸಮಯಕ್ಕೆ ಸರಿಯಾಗಿ ಎಲ್ಲಿದ್ದರಲ್ಲಿ ತನ್ನ ಆಸಕ್ತಿಗನುಸಾರ ರೇಡಿಯೊ ಕೇಳುವ ಪ್ರಜ್ಞೆ ಶ್ರೋತೃವಿನಲ್ಲಿ ಎಚ್ಚರವಾಗಿರುವುದಕ್ಕೆ ಈ ಸಮಯಬದ್ಧತೆಯೇ ಮುಖ್ಯ ಕಾರಣ ಎನ್ನಬಹುದು. ಉದಾಹರಣೆಗೆ ಆಕಾಶವಾಣಿಯ ಮಧ್ಯಾಹ್ನ ಹಾಗೂ ಸಂಜೆಯ ಪ್ರದೇಶ ಸಮಾಚಾರವನ್ನು ತಾವು ಪ್ರಯಾಣದ ಮಧ್ಯೆಯೂ ಕಾರಿಗೆ ಅಳವಡಿಸಿದ ರೇಡಿಯೊದಲ್ಲಿ ಕೇಳುವ ಪರಿಪಾಟವಿದೆ ಎಂದು ಒಂದು ವರ್ಗದ ಜನತೆ ಈ ಅಧ್ಯಯನದ ಸಂದರ್ಭದಲ್ಲಿ ತಿಳಿಸಿದರು. ಶ್ರೋತೃವೊಬ್ಬ ಒಂದು ಕಾರ್ಯಕ್ರಮ ನಿರ್ದಿಷ್ಟ ಸಮಯಕ್ಕೆ ಪ್ರಸಾರವಾಗುತ್ತದೆ ಎಂಬ ನಿರೀಕ್ಷೆಯಲ್ಲಿದ್ದು ರೇಡಿಯೊ

ಚಾಲೂ ಮಾಡಿದಾಗ ಆ ಕಾರ್ಯಕ್ರಮಕ್ಕೆ ಬದಲಾಗಿ ಬೇರೊಂದು ಕಾರ್ಯಕ್ರಮ ಪ್ರಸಾರವಾದರೆ ಆತ ನಿರಾಶನಾಗಬಹುದು. ಮೇಲಿಂದ ಮೇಲೆ ಇಂತಹುದೇ ಅನುಭವವಾದರೆ ಕಡೆಗೊಮ್ಮೆ ಆತ ರೇಡಿಯೊ ಕೇಳುವ ಅಭ್ಯಾಸ ನಿಲ್ಲಿಸಲೂಬಹುದು. ಆದ್ದರಿಂದ ಇಲ್ಲಿ ತಿಳಿದುಬರುವುದೇನೆಂದರೆ, ರೇಡಿಯೊ, ದೂರದರ್ಶನ ಅಥವಾ ಪತ್ರಿಕಾ ಮಾಧ್ಯಮ ತನಗೇನು ಬೇಕೋ ಅದನ್ನು ಪ್ರಸಾರ/ಪ್ರಕಟ ಮಾಡುವುದಕ್ಕಿಂತ ತನ್ನ ಶ್ರೋತೃ/ವೀಕ್ಷಕ/ಓದುಗನಿಗೆ ಏನು ಬೇಕೋ ಅದನ್ನರಿತು ತನ್ನ ಸ್ಪಂದನೆಯನ್ನು ನೀಡಬೇಕಾಗುತ್ತದೆ. ಆಗ ಸಂವಾಹಕನ ಆ ಸ್ಪಂದನೆಗೆ ಸಂವಹಿತ ಪ್ರತಿಸ್ಪಂದಿಸುತ್ತಾನೆ. ಸಂವಹನೆಯ ಉದ್ದೇಶ ಈಡೇರುತ್ತದೆ. ಈ ದೃಷ್ಟಿಯಿಂದ ನೋಡಿದಾಗ ಆಕಾಶವಾಣಿ ಹಾಕಿಕೊಳ್ಳುವ ಕಾರ್ಯಕ್ರಮ ಪ್ರಸಾರ ವೇಳಾಪಟ್ಟಿ ಬಹುತೇಕ ಸಮಂಜಸವೂ, ಸಮರ್ಪಕವೂ ಆಗಿದೆ. ಪ್ರಕಟಿಸಿದ ಕಾರ್ಯಕ್ರಮಗಳನ್ನು ಬದಲಿಸುವುದು, ಒಂದು ಕಾರ್ಯಕ್ರಮವನ್ನು ಅರ್ಧಕ್ಕೆ ನಿಲ್ಲಿಸಿ ಮರುದಿನ ಮತ್ತೆ ಉಳಿದ ಭಾಗವನ್ನು ಪ್ರಸಾರ ಮಾಡುವುದನ್ನು ರೇಡಿಯೊದಂತಹ ಶ್ರವ್ಯ ಮಾಧ್ಯಮದ ಕೇಳುಗರು ಒಳಗೊಳ್ಳುವುದಿಲ್ಲ ಎನ್ನುವುದು ಅಧ್ಯಯನದ ಸಂದರ್ಭದಲ್ಲಿ ಮನವರಿಕೆಯಾಯಿತು.

### ೩. ಸುದ್ದಿ ಸಂಗ್ರಹಣೆ - ಮಂಡನೆ

ಸುದ್ದಿ ಎಂದರೇನು? ಅದು ಹುಟ್ಟುವ, ಬೆಳೆಯುವ, ಗುರಿ ತಲುಪುವ ಪರಿ ಹೇಗೆ? ಸುದ್ದಿಯೊಂದು 'ಸುದ್ದಿ' ಎನಿಸಿಕೊಳ್ಳಬೇಕಾದರೆ ಇರಬೇಕಾದ ಲಕ್ಷಣಗಳೇನು? ಅದರ ಉದ್ದೇಶ ಏನು? ಸಂವಹನೆಯ ಫಲ ಏನಿರಬೇಕು? ಎನ್ನುವ ವಿಚಾರಗಳ ಬಗ್ಗೆ ಈ ಮಹಾಪ್ರಬಂಧದ ೪ನೇ ಅಧ್ಯಾಯದಲ್ಲಿ ವಿಷದವಾಗಿ ಚರ್ಚಿಸಿದ್ದೇನೆ. ಸುದ್ದಿ ಎನ್ನುವುದು ಎಲ್ಲ ಮಾಧ್ಯಮಗಳಿಗೂ ಒಂದೇ, ಎಲ್ಲ ಗ್ರಾಹಕರಿಗೂ ಒಂದೇ. ಆದರೆ ಅವುಗಳನ್ನು ಸಂಗ್ರಹಿಸುವ, ಸಂಪಾದಿಸುವ ಹಾಗೂ ಪ್ರಸ್ತುತ ಪಡಿಸುವ ವಿಧಾನದಲ್ಲಿ ವ್ಯತ್ಯಾಸಗಳಾಗುತ್ತವೆ. ಈ ವ್ಯತ್ಯಾಸಗಳಿಗೆ ಮುಖ್ಯ ಕಾರಣಗಳೇನೆಂದರೆ ಮೊದಲನೆಯದಾಗಿ ಅದನ್ನು ಸಂವಹಿಸುವ ಮಾಧ್ಯಮದ ಲಕ್ಷಣ. ಉದಾಹರಣೆಗೆ, ಪತ್ರಿಕೆಗಳ ಮೂಲಕ ಪ್ರಕಟಗೊಳ್ಳುವ ಸುದ್ದಿಗಳು ಚಿತ್ರಸಹಿತ ಪ್ರಕಟಗೊಂಡರೂ ಅಲ್ಲಿ ಬಳಸಬಹುದಾದ ಭಾಷೆ 'ಗ್ರಾಂಥಿಕ ಶೈಲಿ' ಯದಾಗಿರಬೇಕಾಗುತ್ತದೆ. ಜೊತೆಗೆ ಅದನ್ನು 'ಮುದ್ರಿತ' ರೂಪದಲ್ಲಿ ನೀಡಲಾಗುತ್ತದೆ. ಹಾಗೆ ವಿದ್ಯುನ್ಮಾನ ಮಾಧ್ಯಮಗಳಲ್ಲಿ ನೀಡಲಾಗುವ ಸುದ್ದಿ ಸಹಜವಾಗಿಯೇ 'ಮೌಖಿಕ' ಸ್ವರೂಪದ್ದಾಗಿದ್ದು ಬಳಸುವ ಭಾಷೆಯೂ ಆಡುಮಾತಿನಂತಿರಬೇಕಾಗುತ್ತದೆ. ಹಾಗಾಗಿ 'ಮುದ್ರಿತ' ಮಾಧ್ಯಮದ ಭಾಷೆ ಹಾಗೂ ವಸ್ತು ಮಂಡನೆಯ ಸ್ವರೂಪಕ್ಕಿಂತ ಮೌಖಿಕ ಮಾಧ್ಯಮದ ಸುದ್ದಿ ಮಂಡನೆ ಭಿನ್ನವಾಗಿರುತ್ತದೆ. ಎರಡನೆಯದಾಗಿ ಸುದ್ದಿಯನ್ನು ಗ್ರಹಿಸುವ ಪ್ರೇಕ್ಷಕ/ವೀಕ್ಷಕ/ಶ್ರೋತೃವನ್ನೂ ಅವಲಂಬಿಸಿ ಮಾಧ್ಯಮಗಳು ಸುದ್ದಿ ಪ್ರಸಾರ/ಪ್ರಕಟ ಮಾಡಬೇಕಾಗುವುದರಿಂದಲೂ ಮಾಧ್ಯಮಗಳ ನಡುವೆ ಮಂಡನೆ ದೃಷ್ಟಿಯಿಂದ ವ್ಯತ್ಯಾಸಗಳಾಗುತ್ತವೆ.

ಮೌಖಿಕ ಮಾಧ್ಯಮಗಳಲ್ಲೇ ಎರಡು ವಿಧದ ಸುದ್ದಿ ಮಂಡನೆಯ ರೂಪಗಳಿವೆ.

✤ <u>ದೃಶ್ಯ ಸಹಿತ ಮಾಧ್ಯಮ :</u> ಟೆಲಿವಿಷನ್ ಮುಖಾಂತರ ಸುದ್ದಿಯನ್ನು ತೋರಿಸಲಾಗುತ್ತದೆ.

✤ <u>ದೃಶ್ಯ ರಹಿತ ಮಾಧ್ಯಮ :</u> ರೇಡಿಯೊದಂತಹ ಶ್ರವ್ಯ ಮಾಧ್ಯಮ ದೃಶ್ಯರಹಿತ ಮಾಧ್ಯಮವೆನಿಸುವುದರಿಂದ, ಈ ಮೂಲಕ ಸುದ್ದಿಯನ್ನು ಬರಿದೇ ಹೇಳಲಾಗುತ್ತದೆ.

ಆಕಾಶವಾಣಿ ಅಥವಾ ಬಾನುಲಿ 'ಹೇಳುವ ಮಾಧ್ಯಮ'. ಈ ಮಾಧ್ಯಮದ ಮೂಲಕ ದೃಶ್ಯ/ಚಿತ್ರಗಳನ್ನು ತೋರಿಸುವುದು ಸಾಧ್ಯವೇ ಇಲ್ಲ. ಈ ಒಂದು ಅಂಶ ಆಕಾಶವಾಣಿಗೆ ಹೇಗೆ ಮೈನಸ್ ಪಾಯಿಂಟ್ ಆಗಬಹುದೋ ಹಾಗೆ ಪ್ಲಸ್ ಪಾಯಿಂಟೂ ಆಗುತ್ತದೆ ಎನ್ನುವುದು ಗಮನಾರ್ಹ.

ವೀಕ್ಷಕ/ಶ್ರೋತೃಗಳನ್ನು ಹಿಡಿದಿಟ್ಟುಕೊಳ್ಳುವುದೇ ಮಾಧ್ಯಮದ ಯಶಸ್ಸು. ಅದು ದೂರದರ್ಶನ, ಆಕಾಶವಾಣಿಯಂತಹ ಸಾರ್ವಜನಿಕರ ಅನುಕೂಲಕ್ಕಾಗಿ ಇರುವ ಮಾಧ್ಯಮದ ಹೊಣೆಯೂ ಆಗಿರುತ್ತದೆ. ಅದನ್ನೇ ಮೆಹ್ರಾ ಮಸಾನಿ ಹೀಗೆ ಹೇಳಿದ್ದಾರೆ.

> *Any public utility which is run by the Government under monopoly conditions, on AIR and Doordarshan are, has a responsibility not only to the Government but also to its clientele. AIR's first responsibility should be to listeners and viewers as the whole purpose of broadcasting is to serve their diverse needs.*[೨]

ಹೀಗೆ ಗ್ರಾಹಕರನ್ನು ಸೆಳೆಯುವ ಪೈಪೋಟಿಯಲ್ಲಿ ದೃಶ್ಯ ಮಾಧ್ಯಮಗಳು ದೃಶ್ಯದ ಮೂಲಕವೇ ತಮ್ಮ ಮೇಲುಗೈ ಸಾಧಿಸಿಕೊಳ್ಳುವುದು ಸಹಜ ಹಾಗೂ ಸತ್ಯ ಸಹ. ಹಲವು ವೇಳೆ ಟೆಲಿವಿಷನ್‌ನಲ್ಲಿ ಕೇವಲ ಚಿತ್ರವನ್ನು ಅದರ ನೈಜಶಬ್ದದೊಂದಿಗೆ ಪ್ರಸಾರ ಮಾಡಿದರೆ ಸಾಕು ಆ ಸುದ್ದಿಯ ಮೂಲಾಂಶ ಸಂವಹಿತವಾಗಿರುತ್ತದೆ. ಹೆಚ್ಚಿನ ವಿವರಣೆಯ ಅಗತ್ಯವೂ ಇರುವುದಿಲ್ಲ. ಆದ್ದರಿಂದಲೇ ವಿದ್ವಾಂಸರು ದೂರದರ್ಶನದ್ದು 'ದೃಶ್ಯಭಾಷೆ' ಎಂದು ಬಣ್ಣಿಸುತ್ತಾರೆ.

ಮೊದಲನೆಯದಾಗಿ ದೃಶ್ಯಕ್ಕೆ ಸಂಬಂಧಿಸಿದಂತೆಯೇ ಆಕಾಶವಾಣಿಯ ಧನಾತ್ಮಕ ಅಂಶಗಳನ್ನು ಪರಿಶೀಲಿಸಬಹುದು. ದೃಶ್ಯಗಳನ್ನು ಚಿತ್ರೀಕರಿಸಿ ತಂದು ಅದನ್ನು ಸಂಕಲಿಸಿ, ಬರೆದ ಸುದ್ದಿಗೆ ಸೂಕ್ತವಾಗಿ ಹೊಂದಿಸಿ, ವಾರ್ತಾವಾಚಕರ ಮೂಲಕ ಪ್ರಸಾರ ಮಾಡುವುದು ದೂರದರ್ಶನದ ಹೆಚ್ಚುಗಾರಿಕೆಯೇ ಆದರೂ ಅಷ್ಟು ಕೆಲಸವನ್ನು ಮಾಡುವುದಕ್ಕೆ ಆ ಮಾಧ್ಯಮಕ್ಕೆ ಬೇಕಾಗುವ ಸಮಯ ಅದರ ಋಣಾತ್ಮಕ ಅಂಶವಾಗುತ್ತದೆ. ಈಗೀಗ ದೂರದರ್ಶನದ ಖಾಸಗಿ ವಾಹಿನಿಗಳು ಪ್ರಸಾರ ಪ್ರಾರಂಭಿಸಿದ ಮೇಲೆ 'ಸುದ್ದಿ' ಎನ್ನುವುದಕ್ಕೆ ಮಹತ್ವ ದೊರೆತು ದೃಶ್ಯವಿಲ್ಲದಿದ್ದರೂ 'ಮೊದಲ ಸುದ್ದಿ'ಗೆ ಪ್ರಾಶಸ್ತ್ಯ ದೊರಕಿರುವುದು ಗಮನಾರ್ಹವಾಗಿದೆ. ೧೯೯೬ರಲ್ಲಿ ಉದಯ ಖಾಸಗಿ ವಾಹಿನಿ ಪ್ರಾರಂಭವಾಗುವವರೆಗೂ ಕನ್ನಡದ ವೀಕ್ಷಕರು ಡಿಡಿ-೧ರ ರಾತ್ರಿ ೭ ಗಂಟೆಯ ವಾರ್ತೆಗಳಿಗೇ ಮೊರೆಹೋಗಬೇಕಾಗಿತ್ತು. ಅಂದರೆ ದೃಶ್ಯಸಹಿತವಾಗಿ ಸುದ್ದಿಯನ್ನು ನೋಡಲು ಜನತೆ ೨೪ ಗಂಟೆಗಳ ಕಾಲ ಕನ್ನಡವಾರ್ತೆಗಳಿಗಾಗಿ ಕಾಯಬೇಕಾಗುತ್ತಿತ್ತು. ಇದನ್ನು ಹೊರತು ಪಡಿಸಿದರೆ ಬೆಳಿಗ್ಗೆ ಹಾಗೂ ಸಂಜೆ ದಿನಪತ್ರಿಕೆಗಳಲ್ಲಿ ಸುದ್ದಿ ದೊರೆಯುತ್ತಿತ್ತು. ಅಂದರೆ ಒಂದು ದಿನದಲ್ಲಿ ಬೆಳಿಗ್ಗೆ ಒಂದು ದಿನಪತ್ರಿಕೆ, ಸಂಜೆ ಒಂದು ಪತ್ರಿಕೆ ಹಾಗೂ ರಾತ್ರಿ ೭ ಗಂಟೆಯ ಒಂದು ಟೆಲಿವಿಷನ್ ವಾರ್ತೆ ಲಭ್ಯವಾಗುತ್ತಿದ್ದ ಕಾಲದಲ್ಲಿ ಅತ್ಯಂತ ಸುದೃಢವೂ ಸಮೃದ್ಧವೂ ಆದ ಮಾಧ್ಯಮವೆನಿಸಿಕೊಂಡಿದ್ದು ಆಕಾಶವಾಣಿ. ಬೆಳಿಗ್ಗೆ ಒಂದು ವಾರ್ತೆ ಮತ್ತು ಒಂದು ಪ್ರಾದೇಶಿಕ ವಾರ್ತೆ ಮಧ್ಯಾಹ್ನ ಒಂದು ವಾರ್ತೆ ಹಾಗೂ ಒಂದು ಪ್ರಾದೇಶಿಕ ವಾರ್ತೆ, ಸಾಯಂಕಾಲ ಒಂದು ಪ್ರಾದೇಶಿಕ ವಾರ್ತೆ ಹಾಗೂ ರಾತ್ರಿ ಒಂದು ವಾರ್ತಾ ಪ್ರಸಾರವನ್ನು ಕನ್ನಡದಲ್ಲಿ ಬಿತ್ತರಿಸುತ್ತಿದ್ದದ್ದು ಆ ಮಾಧ್ಯಮದ ಸಾಮರ್ಥ್ಯಕ್ಕೆ ಹಿಡಿದ ಕನ್ನಡಿ. ಇದು ಆಕಾಶವಾಣಿಗೆ ಮಾತ್ರ ಸಾಧ್ಯವಾಗುತ್ತಿದ್ದುದ್ದಕ್ಕೆ ಅದರ ತ್ವರಿತ ನಿರ್ಮಾಣ ಹಾಗೂ ಪ್ರಸಾರ ಶಕ್ತಿಯೇ ಮುಖ್ಯ ಕಾರಣ ಎನ್ನಬಹುದು. ಉದಾಹರಣೆಗೆ ರೇಡಿಯೊಗೆ ಚಿತ್ರಗಳು ಬೇಕಿಲ್ಲ. ಬೀದರ್‌ನಂತಹ ಕರ್ನಾಟಕದ ಉತ್ತರ ತುದಿಯಲ್ಲಿ ಘಟಿಸಬಹುದಾದ ಒಂದು ಭೀಕರ ಅಪಘಾತದ ಸುದ್ದಿಯನ್ನು ಬೆಂಗಳೂರಿನ ಆಕಾಶವಾಣಿ ಕೇಂದ್ರದಿಂದ ಅತ್ಯಂತ ಶೀಘ್ರವಾಗಿ ಪ್ರಸಾರ ಮಾಡಿಬಿಡಬಹುದು. ಇಲ್ಲಿ ಸುದ್ದಿ ಸಂಗ್ರಹಿಸುವುದಷ್ಟೇ ಮುಖ್ಯ. ಅದು ಹೇಗೆ ನಡೆಯಬಹುದೆಂದರೆ

ಬೀದರ್‌ನಲ್ಲಿರುವ ಆಕಾಶವಾಣಿ ಪ್ರತಿನಿಧಿ (stringer) ಅಲ್ಲಿಂದಲೇ ದೂರವಾಣಿ ಮೂಲಕ ಸುದ್ದಿಯನ್ನು ಬೆಂಗಳೂರಿನಲ್ಲಿರುವ ಸುದ್ದಿ ಸಂಪಾದಕನಿಗೆ ನೀಡಬಹುದು. ಅಥವಾ ಪ್ರತಿನಿಧಿಯ ಹೇಳಿಕೆಯನ್ನೇ ದೂರವಾಣಿ ಮೂಲಕವೇ ಧ್ವನಿಮುದ್ರಿಸಿಕೊಳ್ಳಬಹುದು. ಅಪಘಾತದ ಅಗಾಧತೆ ಹಾಗೂ ಭೀಕರತೆಯನ್ನು ಮಾತಿನಲ್ಲೇ ವಿವರಿಸಿ ಹೇಳಬಹುದು. ಇಲ್ಲಿ ಯಾವ ವರ್ಣನೆಯೂ ಸಚಿತ್ರವಲ್ಲ. ಆದರೆ ಭಾಷೆಯ ಮೂಲಕ ಮಾಡಿದ ವರ್ಣನೆಯೇ ಕೇಳುಗನ ಮನಸ್ಸಿನಲ್ಲಿ ಒಂದು ಕಾಲ್ಪನಿಕ ಚಿತ್ರವನ್ನು ಒಡಮೂಡಿಸುವುದು ಸಾಧ್ಯ. ಹೀಗೆ ದೂರದರ್ಶನ ಮಾಧ್ಯಮಕ್ಕೆ ಇರಬಹುದಾದ ಒಂದು ಋಣಾತ್ಮಕ ಅಂಶ (ಸಮಯದ ವ್ಯಯ) ಆಕಾಶವಾಣಿಯ ಧನಾತ್ಮಕ ಅಂಶವಾಗುತ್ತದೆ. ಶೀಘ್ರತೆಯೆ ಆಕಾಶವಾಣಿಯ ಹೆಚ್ಚುಗಾರಿಕೆ. ಹಾಗಾಗಿ ಜನತೆ ಅನೇಕ ಕಠಿಣ ಸನ್ನಿವೇಶಗಳಲ್ಲಿ ತಾಜಾಸುದ್ದಿಗಾಗಿ ರೇಡಿಯೊವನ್ನೇ ಅವಲಂಬಿಸುತ್ತಾರೆ. ಚಿತ್ರ ಸಹಿತವೋ, ಚಿತ್ರ ರಹಿತವೋ ಒಟ್ಟಿನಲ್ಲಿ ಜನರಿಗೆ ಮೊದಲು ಸುದ್ದಿ ಬೇಕು ಎನ್ನುವ ಸತ್ಯವನ್ನು ಅರಿತುಕೊಂಡಿರುವ ಖಾಸಗಿ ಟೆಲಿವಿಷನ್ ವಾಹಿನಿಗಳು ಕಳೆದ ಮೂರು ವರ್ಷಗಳಿಂದೀಚೆಗೆ ಆಕಾಶವಾಣಿಗೂ ತೀವ್ರ ಪೈಪೋಟಿ ಒಡ್ಡಿರುವುದು ಗಮನಾರ್ಹ.

ಮುದ್ರಿತ ಮಾಧ್ಯಮಗಳು ಅಂದರೆ ಪತ್ರಿಕೆಗಳಿಗೆ ಹೋಲಿಸಿದಾಗಲೂ ರೇಡಿಯೊದ ಶಕ್ತಿ ಹೆಚ್ಚು. ಅಕ್ಷರ ಜ್ಞಾನವಿರುವ, ಸಮಾಜದ ಒಂದು ವರ್ಗವನ್ನು ಮಾತ್ರ ಪತ್ರಿಕೆಗಳು ತಲುಪುವುದು ಸಾಧ್ಯ. ನಿರಕ್ಷರರೇ ಹೆಚ್ಚಾಗಿರುವ ರಾಜ್ಯದ ಗ್ರಾಮೀಣ ಪ್ರದೇಶಗಳಲ್ಲಿ ಕೇಳುಗ ಮಾಧ್ಯಮವಾದ ರೇಡಿಯೊ ಅತ್ಯಂತ ಪ್ರಭಾವಿ ಸಂವಹನ ಮಾಧ್ಯಮವೆನಿಸಿತ್ತು. ಕೇಬಲ್ ಮೂಲಕ ಖಾಸಗಿ ವಾಹಿನಿಗಳೂ ಗ್ರಾಮೀಣ ಜನರನ್ನು ತಲುಪುತ್ತಿರುವ ಪರ್ವಕಾಲ ಇದಾಗಿದ್ದು, ಆಕಾಶವಾಣಿಯ ಶಕ್ತಿ ಹಾಗೂ ಪ್ರಭಾವ ಮುಂಚಿನಂತೆಯೇ ಇರುತ್ತದೆಯೇ ಎನ್ನುವುದನ್ನು ಕಾಲಾಂತರದಲ್ಲಿ ನೋಡಬೇಕಾಗಿದೆ. ಆದರೂ ಸರಳವಾದ, ಅಗ್ಗವಾದ, ಸಂಚಾರಿಯೂ ಆದ ರೇಡಿಯೊವನ್ನು ಜನತೆ ಸುಲಭವಾಗಿ ತಳ್ಳಿಹಾಕಿಬಿಡುವುದು ಸಾಧ್ಯವೂ ಇಲ್ಲ, ಸಾಧುವೂ ಅಲ್ಲ.

ಅದಕ್ಕೂ ಕಾರಣಗಳಿವೆ. ರೇಡಿಯೊದ ಗುಣಾತ್ಮಕ ಅಂಶಗಳನ್ನು ಗಮನಿಸಿದರೆ ಈ ಸಾಧನ ಜನಪರ/ಜನಪ್ರಿಯ ಸಾಧನವಾಗಿ ಉಳಿಯುತ್ತದೆ ಎಂದು ಹೇಳಬಹುದು.

೧. **ಅತ್ಯಂತ ವೇಗವಾಗಿ ಸುದ್ದಿಯನ್ನು ಬಿತ್ತರಿಸುವ ಮಾಧ್ಯಮ :** ಉದಾಹರಣೆಗೆ, ಚುನಾವಣೆಯ ಫಲಿತಾಂಶಗಳು, ಕ್ರೀಡಾ ಲೋಕದ ಸುದ್ದಿಗಳು, ಎಸ್.ಎಸ್.ಎಲ್.ಸಿ., ಪಿ.ಯು.ಸಿ. ಫಲಿತಾಂಶದಲ್ಲಿ ರ್‍ಯಾಂಕು ವಿಜೇತರ ಹೇಳಿಕೆಗಳು, ಸಾಹಿತಿ/ಕಲಾವಿದರ ಹೇಳಿಕೆಗಳು ಏನೇ ವಿಷಯವಾದರೂ ಕಾರ್ಯಕ್ರಮ ನಿರ್ಮಾಣದ ಕೆಲಸ ಸರಳವೂ, ಸುಲಭವೂ ಆದದ್ದರಿಂದ ಪ್ರಸಾರವೂ ಅತ್ಯಂತ ಶೀಘ್ರವಾಗುತ್ತದೆ.

೨. **ವಿದ್ಯುತ್ ಸೌಲಭ್ಯವಿರದ ಪ್ರದೇಶಗಳಲ್ಲಿಯೂ ರೇಡಿಯೋ ಬಳಕೆ :** ಉದಾಹರಣೆಗೆ, ೨೦೦೦ ದ ಜುಲೈ ೩೦ ರಂದು ಕನ್ನಡದ ಮೇರು ನಟ ಡಾ. ರಾಜ್‌ಕುಮಾರ್ ಅವರನ್ನು ಕಾಡುಗಳ್ಳ ವೀರಪ್ಪನ್ ಅಪಹರಿಸಿ ಕಾಡಿನಲ್ಲಿ ೧೦೮ ದಿನಗಳ ಕಾಲ ಒತ್ತೆಯಾಳಾಗಿ ಇರಿಸಿಕೊಂಡ ಸಂದರ್ಭದಲ್ಲಿ ಆಕಾಶವಾಣಿ ಮೂಲಕ ೨೦ ಕ್ಕೂ ಹೆಚ್ಚು ಬಾರಿ ಸಂದೇಶ ರವಾನಿಸಿದ ದಾಖಲೆಯಿದೆ. ಆಗಸ್ಟ್ ೧, ೨೦೦೦ ರಂದು ರವಾನೆಯಾದ ಮೊದಲ ಆಕಾಶವಾಣಿ ಸಂದೇಶವೇ ಕಾಡು-ನಾಡಿನ ನಡುವಿನ ಮೊದಲ ಸಂದೇಶದ ಸೇತುವೆಯನ್ನು ನಿರ್ಮಿಸಿತು. ಇದರಿಂದ ಸ್ಪಷ್ಟಪಡುವುದೇನೆಂದರೆ ವಿದ್ಯುತ್ ವ್ಯವಸ್ಥೆಯಿಲ್ಲದ ಕಡೆಗೂ, ವೀರಪ್ಪನ್‌ನಂತಹ ಸದಾ ಸಂಚಾರನಿರತ ವ್ಯಕ್ತಿಗೂ ರೇಡಿಯೊ ಸುಲಭವಾಗಿ ಲಭ್ಯವಿದೆ.

೩. **ರೇಡಿಯೊಗಾಗಿ ಕಾರ್ಯಕ್ರಮ ಅಥವಾ ವಾರ್ತಾ ಸಂಚಿಕೆ ನಿರ್ಮಾಣ ದುಬಾರಿಯಲ್ಲ :** ದೂರದರ್ಶನದಂತೆ ಭಾರೀ ಕ್ಯಾಮೆರಾಗಳು ಬೇಕಿಲ್ಲ. ಒಂದು ಸಾಮಾನ್ಯ ಪುಟ್ಟ ಟೇಪ್‌ರೆಕಾರ್ಡರ್ ಇದ್ದರೂ ಸಾಕು. ಆಕಾಶವಾಣಿಯ ಪ್ರಸಾರಯೋಗ್ಯ ಟೇಪುಗಳ ಹಾಗೂ ಧ್ವನಿಮುದ್ರಕಗಳ ಗಾತ್ರವೂ ಚಿಕ್ಕದಿದ್ದು ಅವುಗಳನ್ನು ಕೊಂಡೊಯ್ಯುವುದು, ಬಳಸುವುದು ತೀರಾ ಸರಳವಾಗಿರುವುದರಿಂದ ಹೆಚ್ಚಿನ ಸಂಖ್ಯೆಯ ಕೆಲಸಗಾರರ ಅವಶ್ಯಕತೆಯೂ ಇದಕ್ಕಿಲ್ಲ.

೪. **ಎಲ್ಲರಿಗೂ ರೇಡಿಯೋ ಸೆಟ್‌ಗಳ ಲಭ್ಯತೆ :** ವಿವಿಧ ಬೆಲೆಯ ರೇಡಿಯೋ ಸೆಟ್‌ಗಳು ಮಾರುಕಟ್ಟೆಯಲ್ಲಿ ಸಿಗುವುದರಿಂದ ಜನ ತಮ್ಮ ಆರ್ಥಿಕ ಸ್ಥಿತಿಗನುಗುಣವಾಗಿ ಅದನ್ನು ಕೊಳ್ಳಬಹುದು. ಮತ್ತೊಂದು ಮುಖ್ಯ ಅಂಶವೆಂದರೆ ರೇಡಿಯೊ ಕೇಳುಗ ರೇಡಿಯೊ ಸೆಟ್ ಒಂದರ ಮಾಲೀಕನಾಗಿರಬೇಕೆಂದೇನೂ ಇಲ್ಲ. ನೆರೆಹೊರೆಯವರು ತಾವು ಆಲಿಸುವುದಕ್ಕಾಗಿ ರೇಡಿಯೊವನ್ನು ಚಾಲೂಗೊಳಿಸಿದ್ದರೆ ಅಲ್ಲಿಂದಲೂ ಕಾರ್ಯಕ್ರಮಗಳು ಕಿವಿಯ ಮೇಲೆ ಬೀಳಬಹುದು. ಇಂಥದೇ ನಿರ್ದಿಷ್ಟ ಕಾರ್ಯಕ್ರಮವನ್ನು /ಸುದ್ದಿಯನ್ನು ಕೇಳಬೇಕೆನ್ನುವವರು ಸಾಧಾರಣವಾಗಿ ಒಂದು ಸೆಟ್ ಹೊಂದಿರುತ್ತಾರೆ.

೫. **ಪ್ರತ್ಯಕ್ಷ ವರದಿ/ವೀಕ್ಷಕ ವಿವರಣೆ/ಸುದ್ದಿಯ ನೇರಪ್ರಸಾರ ಸೌಲಭ್ಯ :** ಟೆಲಿವಿಷನ್ ಸವಲತ್ತು ಲಭಿಸುವ ಮುನ್ನ ಕ್ರಿಕೆಟ್ ಪಂದ್ಯದ ವೀಕ್ಷಕ ವಿವರಣೆಗಾಗಿಯೇ ಜನತೆ ರೇಡಿಯೊ ಸೆಟ್‌ಗಳನ್ನು ಹೊಂದಿರುತ್ತಿದ್ದರು. ಇತಿಹಾಸ ಪ್ರಸಿದ್ಧ ಮೈಸೂರು ದಸರಾ ಮೆರವಣಿಗೆಯನ್ನೂ ಸಹ ವೀಕ್ಷಕ ವಿವರಣೆಯ ರೂಪದಲ್ಲಿ ಪ್ರಸಾರ ಮಾಡಲಾಗುತ್ತಿದೆ. 'ವೀಕ್ಷಕ ವಿವರಣೆ' ಎನ್ನುವ ಶಬ್ದ ಹುಟ್ಟಿಕೊಂಡಿದ್ದೇ ಆಕಾಶವಾಣಿಯ ಸಂದರ್ಭದಲ್ಲಿ. ಈಗಲೂ ಅದು ಆಕಾಶವಾಣಿಯದೇ ವೈಶಿಷ್ಟ್ಯ.

೬. **ಅನಕ್ಷರತೆಯ ಹೊಡೆತದಿಂದ ರೇಡಿಯೊ ಮುಕ್ತ :** ರೇಡಿಯೊ ಹೇಳುವ ಮಾಧ್ಯಮ. ಶ್ರೋತೃ ಹೇಳಿದ್ದೆಲ್ಲವನ್ನೂ ಕೇಳುವವನು (ಕಿವುಡುತನದ ತೊಂದರೆ ಇರದಿದ್ದರೆ). ಇಲ್ಲಿ ಓದಬೇಕಾದ್ದು ಏನೂ ಇರದೇ ಇರುವುದರಿಂದ ಅಂದರೆ ಕೇವಲ ಹೇಳುವವನ ಕಂಠ, ನಾಲಗೆ ಹಾಗೂ ಕೇಳುವವನ ಕಿವಿ ಬಳಕೆಯಾಗುವುದರಿಂದ ರೇಡಿಯೊಗೆ ಸಾಕ್ಷರಿಯೂ ನಿರಕ್ಷರಿಯೂ ಒಂದೇ ಆಗುತ್ತಾರೆ.

ಆದರೆ ವಿಜ್ಞಾನ - ತಂತ್ರಜ್ಞಾನ ಬೆಳೆದಂತೆ ರೇಡಿಯೊ ಬಳಕೆಯಲ್ಲಿ, ಅದರಲ್ಲೂ ನಗರ ಪ್ರದೇಶಗಳಲ್ಲಿ ಹಿನ್ನಡೆ ಉಂಟಾಗಿರುವುದು ಅಧ್ಯಯನದ ಸಂದರ್ಭದಲ್ಲಿ ಗಮನಕ್ಕೆ ಬಂದಿತು. ಅದಕ್ಕೆ ಕಾರಣಗಳನ್ನೂ ಗುರುತಿಸಲಾಯಿತು.

- ಟೆಲಿವಿಷನ್‌ನಂತೆ ಈ ಮಾಧ್ಯಮ ದೃಶ್ಯಾಧಾರಿತ ಮಾಧ್ಯಮವಲ್ಲ.
- ಪ್ರಸಾರಕೇಂದ್ರ ಹಾಗೂ ಕೇಳುಗನ ನಡುವಿನ ಅಂತರ (ದೂರ) ಹೆಚ್ಚಾದಷ್ಟು ವಾತಾವರಣದ ಇತರ ಶಬ್ದ ತರಂಗಗಳಿಂದಾಗಿ ಪ್ರಸಾರಕ್ಕೆ ಅಡಚಣೆಯಾಗುತ್ತದೆ. ಪ್ರಸಾರದಲ್ಲಿ ಸ್ಪಷ್ಟತೆ ಇರುವುದಿಲ್ಲ.,
- ಧ್ವನಿಯೇ ಈ ಮಾಧ್ಯಮದ ಜೀವಾಳವಾದ್ದರಿಂದ ವಾರ್ತಾವಾಚನದ ಶೈಲಿ, ಸ್ಪಷ್ಟತೆ, ಧ್ವನಿಯ ಏರಿಳಿತ, ಉಚ್ಚಾರಣೆ, ಭಾವ ಇವು ಅತ್ಯಂತ ಗರಿಷ್ಠ ಪ್ರಾಮುಖ್ಯತೆಯನ್ನು ಪಡೆದುಕೊಳ್ಳುತ್ತವೆ.

ಸಮಯಬದ್ಧತೆ, ನಿಖರತೆ, ಸ್ಥಳೀಯತೆ, ಗ್ರಾಹಕಾಭಿರುಚಿ, ಮುಂತಾದ ವಿಷಯಗಳಲ್ಲಿ ಆಕಾಶವಾಣಿ, ದೂರದರ್ಶನ ಹಾಗೂ ಪತ್ರಿಕಾ ಮಾಧ್ಯಮಗಳು ಯಾವ ಭಿನ್ನತೆಯನ್ನೂ ಅನುಭವಿಸುವುದಿಲ್ಲ. ಹಾಗೆಯೇ ಅವು ಅವಲಂಬಿಸುವ ಸುದ್ದಿ ಮೂಲಗಳೂ ಬಹುತೇಕ ಒಂದೇ ಆಗಿರುತ್ತವೆ. ಮತ್ತು ಅವು ಮೂರೂ ಪರಸ್ಪರ ಅವಂಬಿತವೂ ಆಗಿರುತ್ತದೆ. ಸುದ್ದಿ ಸಂಗ್ರಹಣೆಯ ವಿಚಾರದಲ್ಲೂ ಒಂದೇ ಸೂತ್ರದ ತಳಹದಿ ಈ ಮೂರೂ ಮಾಧ್ಯಮಗಳಿಗಿದೆ (೫W ಮತ್ತು ೧H) ಚಿತ್ರ/ದೃಶ್ಯ ಸಂಗ್ರಹವನ್ನು ಹೊರತು ಪಡಿಸಿದರೆ ಆಕಾಶವಾಣಿ ಸಹ ತನ್ನ ವರದಿಗಾರರು ಮತ್ತು ಬಾತ್ಮೀದಾರರನ್ನು ಅವಲಂಬಿಸಿರುತ್ತದೆ.

## ಸುದ್ದಿ ಸಂಪಾದನೆ

ಆಕಾಶವಾಣಿಯ ಸುದ್ದಿ ಸಂಪಾದನೆಯ ಬಗ್ಗೆ ಈಗ ಪ್ರಸ್ತಾಪ ಮಾಡುತ್ತಿರುವುದರಿಂದ ಮೇಲಿಂದ ಮೇಲೆ ಖಚಿತ ಪಡಿಸಬೇಕಾದ ಒಂದೇ ಒಂದು ಅಂಶ ಇದು ಶಬ್ದದ, ಕೇವಲ ಶಬ್ದದ ಮಾಧ್ಯಮ. ಇಲ್ಲಿ ಪತ್ರಿಕೆ, ದೂರದರ್ಶನದಂತೆ ನೋಡುವುದೇನೂ ಇರುವುದಿಲ್ಲ. ಶ್ರೋತೃಗಳು ಸುದ್ದಿಗಳನ್ನು ರೇಡಿಯೊದಲ್ಲಿ 'ಕಿವಿಯಿಂದಲೇ ನೋಡಬೇಕು.' ಹಾಗಾಗಿ ರೇಡಿಯೊಗಾಗಿ ಬರೆಯುವ ಸುದ್ದಿಗಳು ಕಣ್ಣಿಗಾಗಿ ಬರೆದವಲ್ಲ, ಕಿವಿಗಾಗಿ ಬರೆದವು, ಬರೆಯಬೇಕಾದವು ಎಂಬುದೇ ಮುಖ್ಯ. ಹಾಗೆ ಸುದ್ದಿ ಸಂಪಾದಕ ಗಮನಿಸಬೇಕಾದ ಮತ್ತೊಂದು ಪ್ರಮುಖ ಅಂಶವೇನೆಂದರೆ ಇದು ಪತ್ರಿಕೆಯಂತೆ ಕಾಗದದ ಮೇಲೆ 'ಉಳಿಯುವ' ಬರಹವಲ್ಲ. ಗಾಳಿಯಲ್ಲಿ ತೇಲಿಹೋಗುವ ಬರಹ. ಅರ್ಥವಾಗದಿದ್ದರೆ ಶ್ರೋತೃ ಮತ್ತೊಮ್ಮೆ rewind ಮಾಡಿಕೊಂಡು ಕೇಳುವ ಸೌಲಭ್ಯವಿಲ್ಲ. ಆದ್ದರಿಂದ ರೇಡಿಯೊ ವಾರ್ತೆಗಳ ಭಾಷೆ ಸರಳವಾಗಿ, ಆಡುಮಾತಿನಂತೆ ಸುಲಲಿತವಾದರೂ ಭಾಷೆಯ ಸಾಹಿತ್ಯಕ ಗುಣವನ್ನು ಕಳೆದುಕೊಳ್ಳದ ಮಧ್ಯಸ್ತರದ ಬರವಣಿಗೆಯಾಗಿದ್ದರೆ ಒಳಿತು. ಹಾಗೆ ನೋಡಿದರೆ ಕನ್ನಡದಲ್ಲಿ ಅಂತಹ ಸ್ತರವನ್ನು ಆಕಾಶವಾಣಿ ಕಾಪಾಡಿಕೊಂಡು ಬಂದಿದೆ ಎಂದೇ ಹೇಳಬಹುದು. 'ಆಕಾಶವಾಣಿ ಭಾಷೆ' ಎಂದೇ ಗುರುತಿಸಿಕೊಳ್ಳುವ, ಸಾಹಿತ್ಯಕ ಮೌಲ್ಯದ ಭಾಷೆ ಈ ಮಾಧ್ಯಮಕ್ಕೆ ಒದಗಲು ಕನ್ನಡದ ಅನೇಕ ಹಿರಿಯ ವಿದ್ವಾಂಸರು, ಸಾಹಿತಿಗಳು ಈ ಮಾಧ್ಯಮದೊಂದಿಗೆ ನಿಕಟಸಂಪರ್ಕ ಹೊಂದಿದ್ದೂ ಕಾರಣವೆನ್ನಬಹುದು. ತೀರಾ ಗ್ರಾಂಥಿಕವಲ್ಲದ ಭಾಷೆಯಾದ್ದರಿಂದ ಗ್ರಾಮೀಣ ಶ್ರೋತೃಗಳಿಗೂ ತೀರಾ ಆಡುನುಡಿಯಲ್ಲದ್ದರಿಂದ ಶಿಷ್ಟ ಶ್ರೋತೃಗಳಿಗೂ ಒಪ್ಪುವ ರೀತಿಯಲ್ಲಿ ಬರೆಯಬೇಕು.

ದೂರದರ್ಶನದಲ್ಲಿರುವಂತೆ ಶುಷ್ಕ, ಸಚಿತ್ರ ವರದಿಗಳೆಂಬ ವಿಶೇಷತೆಗಳು ಆಕಾಶವಾಣಿಗಿಲ್ಲ. ಇಲ್ಲಿ ಎಲ್ಲವೂ ಶುಷ್ಕ (ಚಿತ್ರರಹಿತ) ಸುದ್ದಿಯೇ. ಈ ಶುಷ್ಕ ಎನ್ನುವುದು ಅದರ ಒಳಾರ್ಥವನ್ನು ಪ್ರದರ್ಶಿಸುವಂತಾಗಬಾರದು ಎಂಬ ಎಚ್ಚರಿಕೆ ಸಂಪಾದಕನಿಗಿರಬೇಕು. ಇಲ್ಲಿ ಸುದ್ದಿ ಸುದ್ದಿ ಮಾತ್ರ. ದೂರದರ್ಶನಕ್ಕೆ ಸಿಗುವಂತೆ ಮಾಹಿತಿಗಳು ಆಕಾಶವಾಣಿಗೂ ಸಿಗುತ್ತವೆ. ಆದರೆ ಇಲ್ಲಿ ವಿಡಿಯೋ ಕ್ಯಾಸೆಟ್‌ನ ಹಾವಳಿಯಿಲ್ಲ. ಚಿತ್ರ/ದೃಶ್ಯಗಳನ್ನು ನೋಡಿ ಅದಕ್ಕೆ ತಕ್ಕಂತೆ ಸುದ್ದಿಯನ್ನು ಹೊಂದಿಸಿ ಬರೆಯಬೇಕಾದ ಪ್ರಮೇಯವೂ ಇಲ್ಲ. ಹೆಚ್ಚೆಂದರೆ ಕೆಲವೊಮ್ಮೆ ಧ್ವನಿಮುದ್ರಿಕೆಗಳನ್ನು ಬಳಸಬೇಕಾಗಬಹುದು. ಹಾಗೆ ಬಳಸುವುದರಿಂದ ವಾರ್ತಾಪ್ರಸಾರದಲ್ಲಿ ಏಕತಾನತೆಯನ್ನು ನಿವಾರಿಸಬಹುದು. ಹಾಗೆ ಸಹಜ ಧ್ವನಿಗಳನ್ನು ಪ್ರಸಾರ ಮಾಡಬಹುದು. ಉದಾಹರಣೆಗೆ : ಮಂತ್ರಿ ಮಹೋದಯರ ಪ್ರಮಾಣವಚನ ಸಮಾರಂಭದ ಸುದ್ದಿ ನೀಡುವಾಗ ಮೊದಲು ಆಕಾಶವಾಣಿ ಪ್ರತಿನಿಧಿ ಒಂದು ಸಣ್ಣ ಪೀಠಿಕೆ ನೀಡಿ ನಂತರ ರಾಜ್ಯಪಾಲರು ಪ್ರಮಾಣವಚನ ಬೋಧಿಸುವ ಹಾಗೂ ಮಂತ್ರಿಗಳು ಅದನ್ನು ಸ್ವೀಕರಿಸುವ ನೈಜಧ್ವನಿಗಳನ್ನು ವಾರ್ತೆಯಲ್ಲಿ ಪ್ರಸಾರ ಮಾಡಿದರೆ ಅದಕ್ಕೆ ವೈವಿಧ್ಯತೆ ಮೂಡುತ್ತದೆ. ವಾರ್ತೆಗಳಂತೆ ಇದನ್ನು ವಾರ್ತಾ ವರದಿಗಳಲ್ಲೂ ಮಾಡಲು ಅವಕಾಶವಿದೆ.

ಸಾಮಾನ್ಯವಾಗಿ ಒಂದು ವಾರ್ತಾಪ್ರಸಾರದ ಅವಧಿ ೧೦ ನಿಮಿಷಕ್ಕಿಂತ ಹೆಚ್ಚಾಗಿರುವುದಿಲ್ಲ. ಹಾಗಾಗಿ, ಹೇಳಬೇಕಾದ್ದನ್ನು ನೇರವಾಗಿ, ಸರಳ ಚಿಕ್ಕ ವಾಕ್ಯಗಳಲ್ಲಿ ಹೇಳಬೇಕು. ಅದನ್ನು ಪ್ರೊ. ಎ.ಎನ್. ಮೂರ್ತಿರಾಯರು ಹೀಗೆ ಹೇಳಿದ್ದಾರೆ.

> *News ಅನ್ನು ಓದುವವನ ಉದ್ದೇಶ, ನಿರ್ದಿಷ್ಟ ಅವಧಿಯಲ್ಲಿ ನಡೆದ*
> *ಮುಖ್ಯ ವಿಷಯಗಳನ್ನು ತಿಳಿಸುವುದು; ಅವುಗಳ ಮೇಲೆ ವ್ಯಾಖ್ಯಾನ*
> *ಮಾಡುವುದಲ್ಲ; ಘಟನೆಗಳು ಒಳ್ಳೆಯವೇ ಕೆಟ್ಟವೇ ಅವುಗಳ*

*ಪರಿಣಾಮವೇನು - ಇದನ್ನೆಲ್ಲ ಚರ್ಚಿಸುವುದಲ್ಲ. ವಸ್ತುನಿಷ್ಠ ನಿರೂಪಣೆ ಮಾತ್ರ ಅವನ ಕೆಲಸ. ಆದ್ದರಿಂದ ಬರವಣಿಗೆ ಬಳಸುಬಳಸಾಗಿರದೆ, ನೇರವಾಗಿರಬೇಕು. ಓದುವವನ ದನಿ ಮಟ್ಟಸವಾಗಿರಬೇಕು; ಪದಗಳು ಕಲಸಿ ಹೋಗದಂತೆ ಸ್ವಚ್ಛವಾದ ಉಚ್ಚಾರಣೆಯಿರಬೇಕು. ದನಿ ಏಕತಾನವಾಗಬಾರದು.*[೩]

ಎಂದು ಸುದ್ದಿ ಸಂಪಾದಕನ, ಓದುಗನ ಜವಾಬ್ದಾರಿಯನ್ನು ನೇರವಾಗಿ ತಿಳಿಸಿದ್ದಾರೆ. ಶ್ರವ್ಯ ಮಾಧ್ಯಮವಾದ ರೇಡಿಯೊಗಾಗಿ ಸುದ್ದಿ ಬರೆಯುವಾಗ ಅನುಸರಿಸಬೇಕಾದ ಅಂಶಗಳನ್ನು ಇಲ್ಲಿ ತಿಳಿಸಲಾಗಿದೆ.

- ವಾಕ್ಯ ರಚನೆ ನೇರವಾಗಿ, ಚಿಕ್ಕದಾಗಿರಬೇಕು.
- ಹೊಸ ಪದಗಳಿಗಿಂತ, ಪರಿಚಿತ ಪದಗಳ ಬಳಕೆ ಒಳಿತು.
- ಒಬ್ಬನೇ ಶ್ರೋತೃವಿಗೆ ನೇರವಾಗಿ ಹೇಳುತ್ತಿರುವಂತೆ ಪ್ರಥಮ ಪುರುಷನ ಸ್ಥಾನದಿಂದ ಹೇಳಬೇಕು.
- ವರ್ತಮಾನ ಕಾಲದಲ್ಲಿದ್ದು ನೇರ ಸಂಬೋಧನೆ ಒಳಿತು.
- ವಾರ್ತಾಪ್ರಸಾರದ ಕಾಲಾವಧಿ ಕಡಿಮೆ ಇರುವುದರಿಂದ ಸುದ್ದಿಯ ಕೇಂದ್ರ ವಸ್ತುವಿಗೆ ಹೆಚ್ಚು ಒತ್ತು ನೀಡಿ ಬರೆಯಬೇಕು. ವಿವರಣೆ ಅನಗತ್ಯ.
- ೪೦ ರಿಂದ ಗರಿಷ್ಠ ೬೦ ಸೆಕೆಂಡಿನೊಳಗೆ ಒಂದು ಸುದ್ದಿ ಹೇಳಿಬಿಡಬೇಕು.
- ಸುದ್ದಿ ನಿಷ್ಪಕ್ಷಪಾತವಾಗಿರಬೇಕು. ಒಬ್ಬ ವ್ಯಕ್ತಿ, ಒಂದು ಸಂಸ್ಥೆ, ರಾಜಕೀಯ ಪಕ್ಷ ಹೀಗೆ ಏಕಪಕ್ಷೀಯವಾಗಿರುವುದು ಅಪಾಯಕಾರಿ.
- ಸುದ್ದಿಯನ್ನು ತಿಳಿಸುವ ರೀತಿ ಯಾವ ಕಾರಣಕ್ಕೂ ಟೆಲಿಗ್ರಾಫಿಕ್ ಆಗಿರಬಾರದು.
- ಸಂಕ್ಷಿಪ್ತ ಅಕ್ಷರಗಳನ್ನು ಬಳಸಬಾರದು. ಪ್ರೊ. ಎನ್ನುವುದನ್ನೂ ಪ್ರೊಫೆಸರ್ ಎಂದೇ ಬರೆಯಬೇಕು.
- ಮುಖ್ಯಾಂಶಗಳ ನಡುವೆ ತಡೆ ಇರುವುದಿಲ್ಲವಾದ್ದರಿಂದ ಪ್ರತಿಯೊಂದು ಮುಖ್ಯಾಂಶವನ್ನೂ ಪೂರ್ಣವಾಕ್ಯದಲ್ಲಿ ತಿಳಿಸಿದರೆ ಸೂಕ್ತ. ದೂರದರ್ಶನದಲ್ಲಿ ಬಳಸಿದಂತೆ ಕೊನೆಯಲ್ಲಿ ಕ್ರಿಯಾಪದಗಳನ್ನು ಬಳಸದಿದ್ದರೆ ಗೊಂದಲವಾಗುತ್ತದೆ. ೫ ನಿಮಿಷದ ಅವಧಿಯ ವಾರ್ತಾಪ್ರಸಾರದಲ್ಲಿ ಮುಖ್ಯಾಂಶಗಳ ಅಗತ್ಯವೇ ಇರುವುದಿಲ್ಲ.
- ವಾರ್ತಾ ಪ್ರಸಾರದಲ್ಲಿ ಪ್ರತಿ ಸುದ್ದಿಯ ನಡುವೆಯೂ ಒಂದು ಸಣ್ಣ ನಿಲುಗಡೆ ಇರಬೇಕು. ಇಲ್ಲದಿದ್ದರೆ ಸುದ್ದಿ ಬದಲಾದುದು ತಿಳಿಯುವುದಿಲ್ಲ.
- ರೇಡಿಯೋ ವಾರ್ತೆ ದೂರದರ್ಶನ ವಾರ್ತೆಯಂತೆ ವಾರ್ತಾವಾಚಕ/ಕಿ, ಸುದ್ದಿಯ ದೃಶ್ಯಗಳು ಮುಂತಾದವುಗಳಿಂದ ಏಕತಾನವನ್ನು ನಿವಾರಿಸುವಂಥದ್ದೂ ಆಕರ್ಷಕವೂ ಆಗದೇ ಹೋಗುವುದರಿಂದ, ಇಲ್ಲಿ ವಾರ್ತಾವಾಚನದ ಶೈಲಿಯೇ ಅತ್ಯಂತ ಮುಖ್ಯವಾಗುತ್ತದೆ. ನಾಲಗೆ ತೊಡರದ, ಅಕ್ಷರ, ಪದಗಳು ಕಲಸಿಕೊಳ್ಳದ ಸ್ಪಷ್ಟ ಉಚ್ಚಾರಣೆ ನಿರೂಪಕರಿಗಿರಬೇಕು. ಹಾಗೆ ಭಾಷಾಜ್ಞಾನ, ಭಾಷೆಯ ಮೇಲೆ ಸಂಪೂರ್ಣ ಹತೋಟಿ, ಅಗತ್ಯಬಿದ್ದರೆ ಆಶುಭಾಷಣ ಮಾಡುವ ಸಾಮರ್ಥ್ಯವೂ ವಾಚಕರಿಗಿರಬೇಕು. ನಾಟಕ/ರೂಪಕಗಳಂತೆ ಭಾವೋದ್ಗಾರ, ಕಾಕು ಮತ್ತಿತರ ಭಾವ ರೂಪಗಳ ಅಗತ್ಯ ಸುದ್ದಿಗೆ ಬೇಡ. ಧ್ವನಿಯ ಮಾಧುರ್ಯ ವಾರ್ತಾ ಶೈಲಿಗೇ ತಕ್ಕುದಾದ ನಿರೂಪಣಾ ಸಾಮರ್ಥ್ಯವಿರಬೇಕು.

✣ ಸಂಪಾದಕರು ಗಮನಿಸಬೇಕಾದ ಒಂದು ಅಂಶವೆಂದರೆ, ಒಂದು ಸುದ್ದಿಯ ಪ್ರತಿವಾಕ್ಯದ ಕೊನೆಯೂ ಒಂದೇ ಬಗೆಯ ಸ್ವರೋಚ್ಚಾರದೊಂದಿಗೆ ಮುಗಿಯದಂತಿರಬೇಕು. ಉದಾಹರಣೆಗೆ :

ಮುಖ್ಯಮಂತ್ರಿಯವರು........ ಹೊರಡಲಿದ್ದಾರೆ

ಅಲ್ಲಿಂದ ................................ ತೆರಳಲಿದ್ದಾರೆ

ವಿದೇಶ ಪ್ರವಾಸ ಮುಗಿಸಿ............. ಮರಳಲಿದ್ದಾರೆ

ಹೀಗೆ ಸುದ್ದಿಯ ವಾಕ್ಯಗಳು ಕೊನೆಗೊಂಡರೆ ಒಂದೇ ಲಯವಿದ್ದು ಕೇಳುಗನಿಗೆ ಜೋಗುಳ ಹಾಡಿದಂತಾಗುತ್ತದೆ, ಓದುವವನೂ ಕೂಡ ಲಯಕ್ಕೆ ತಕ್ಕಂತೆ ನಿರ್ವಾಹವಿಲ್ಲದೆ ನಿಲುಗಡೆ ನೀಡಬೇಕಾಗುತ್ತದೆ.

ವಾರ್ತಾವಾಚಕನ ಜವಾಬ್ದಾರಿಯನ್ನು ಲಘುವಾಗಿ ಪರಿಗಣಿಸುವಂತಿಲ್ಲ. ೧೦ ನಿಮಿಷದ ಒಂದು ವಾರ್ತಾ ಪ್ರಸಾರಕ್ಕಾಗಿ ೮ ಸುದ್ದಿಗಳ ಅಗತ್ಯವಿರಬಹುದು. ವಾಚಕನ ಓದುವ ವೇಗವನ್ನವಲಂಬಿಸಿ ಒಂದೆರಡು ಸುದ್ದಿಗಳನ್ನು ಹೆಚ್ಚಾಗೇ ನೀಡಿರಬೇಕಾಗುತ್ತದೆ. ಅದನ್ನು ಓದುವಾಗ ವಾಚಕ ಸ್ಟುಡಿಯೊದಲ್ಲಿ ಇರಿಸಿದ ಗಡಿಯಾರದ ಮುಳ್ಳುಗಳತ್ತಲೂ ಗಮನವಿರಿಸಿಕೊಂಡು, ಇತ್ತ ನಿರ್ಮಾಪಕನತ್ತಲೂ ನಿಗಾ ಇರಿಸಿಕೊಂಡಿರಬೇಕಾಗುತ್ತದೆ. ಹಾಗಿರುವಾಗ ಆತ ಅತ್ತಿತ್ತ ತಿರುಗುತ್ತ ಮೈಕ್ ಅನ್ನು ಮರೆತರೆ ಧ್ವನಿ ಕುಗ್ಗುತ್ತದೆ. ಮೈಕ್‌ಗೆ ಬಾಯೊಡ್ಡಿ ಕುಳಿತ ಮೇಲೆ ಆತನ ಚಟುವಟಿಕೆಯೆಲ್ಲ ಕಣ್ಣಳತೆಯಲ್ಲೇ ನಡೆಯಬೇಕು. ಮೈಕ್ ಎನ್ನುವ ಸಾಧನವೇ ಸಂವಾಹಕನಿಗೂ ಸಂವಹಿತನಿಗೂ ಇರುವ ನೇರಕೊಂಡಿ ಎನ್ನುವುದನ್ನು ಮರೆಯಲೇಬಾರದು.

ವಾರ್ತಾವಾಚಕ ಅತ್ಯಂತ ಜಾಗೃತನಾಗಿರಬೇಕಾದ್ದು ಇಲ್ಲೇ. ಒಮ್ಮೆ ಬೆಂಗಳೂರು ಆಕಾಶವಾಣಿಯ ಪ್ರದೇಶ ಸಮಾಚಾರದಲ್ಲಿ ಆದ ಒಂದು ಪ್ರಮಾದವನ್ನು ಇಲ್ಲಿ ಉದಾಹರಿಸುತ್ತೇನೆ. ವಾರ್ತಾವಾಚಕ ೧೦ ನಿಮಿಷದ ವಾರ್ತಾ ಪ್ರಸಾರದ ಕೊನೆಯ ಹಂತದಲ್ಲಿದ್ದಾಗ, ಗಡಿಯಾರ ನೋಡಿ ಇನ್ನೆಷ್ಟು ಓದಬೇಕೆನ್ನುವುದನ್ನು ಅಂದಾಜು ಮಾಡುವುದು ಆತನಿಗೆ ಸಾಧ್ಯವಾಗಲಿಲ್ಲ. ಸಮಯ ಮುಗಿದು ಹೋಯಿತೋ ಅಥವಾ ಇನ್ನೊಂದು ಸುದ್ದಿ ಹೇಳಿಬಿಡಬಹುದೋ ಎಂಬ ಗೊಂದಲದಲ್ಲಿ, ಅಲ್ಲೇ ಇದ್ದ ನಿರ್ಮಾಪಕನನ್ನು ನೋಡಿ 'ಸಾಕಾ, ಇನ್ನೂ ಬೇಕ' ಎಂದು ಕೇಳಿದ್ದು ಮುಂದೆ ಮೈಕ್ ಇದ್ದುದರಿಂದ ನೇರವಾಗಿ ಪ್ರಸಾರವಾಗಿಬಿಟ್ಟಿತು. ಆತ ಆ ಕ್ಷಣ ಮೈಕ್ ಅನ್ನು ಮರೆತಿದ್ದ. ಇಂತಹ ಅಭಾಸಗಳು ವಾರ್ತಾವಾಚಕರಿಂದ ಆಗದಂತೆ ಸಂಸ್ಥೆಯೂ ಎಚ್ಚರವಹಿಸಬೇಕು. ಗುರುತರ ಜವಾಬ್ದಾರಿ ಇರುವ ಆತನ ಮೇಲೆ ಗಡಿಯಾರ ನೋಡಿಕೊಳ್ಳುತ್ತಾ ಓದುವ ಭಾರವೂ ಇರಬಾರದು. ಅದನ್ನು ಮತ್ತೊಬ್ಬರು ನಿಯಂತ್ರಿಸುವ ವ್ಯವಸ್ಥೆಯಾಗಬೇಕು.

೧೯೩೦ರಲ್ಲಿ ರಾಯಿಟರ್ ಸಂಸ್ಥೆಯಿಂದ ಸುದ್ದಿ ಸಂಗ್ರಹಿಸಿ ಕಲ್ಕತ್ತಾ, ಬೊಂಬಾಯಿ ನಿಲಯಗಳಿಂದಲೂ ನಂತರ ೧೯೩೬ರಲ್ಲಿ ದೆಹಲಿ ಕೇಂದ್ರದಿಂದಲೂ ಪ್ರಸಾರ ಕಂಡಾಗ ವಾರ್ತೆಗಳಿಗೆ ಅಂತಹ ಹೆಚ್ಚಿನ ಬೇಡಿಕೆ ಏನೂ ಇರಲಿಲ್ಲ. ಬೆಳಗಿನ ವಾರ್ತೆಗಳೊಂದಿಗೆ ಸಾಯಂಕಾಲ ಇನ್ನೊಂದು ಸಂಚಿಕೆ ಪ್ರಾರಂಭಿಸಿದಾಗ ಅದರ ಅಗತ್ಯವಿಲ್ಲ ಎಂಬ ಅಭಿಪ್ರಾಯವೂ ಶ್ರೋತೃಗಳಿಂದ ವ್ಯಕ್ತವಾಯಿತೆನ್ನಲಾಗಿದೆ. ಈಗ ದೇಶಾದ್ಯಂತ ಆಕಾಶವಾಣಿಯ ಸುದ್ದಿ ಸೇವಾ ವಿಭಾಗ ದಿನವಹಿ ೩೧೫ ವಾರ್ತಾ ಸಂಚಿಕೆಗಳನ್ನು ಪ್ರಸಾರ ಮಾಡುತ್ತಿದೆ. (ವಾರ್ತಾ ಮತ್ತು ಪ್ರಸಾರ ಸಚಿವಾಲಯ ೧೯೯೯-೨೦೦೦ದ ವಾರ್ಷಿಕ ವರದಿಯನ್ವಯ) ಒಟ್ಟು ೪೯ ಗಂಟೆ ೪೯ ನಿಮಿಷಗಳ ಅವಧಿಯ ಈ ವಾರ್ತೆಗಳಲ್ಲಿ ೮೮ ಬುಲೆಟಿನ್‌ಗಳು ರಾಷ್ಟ್ರೀಯ

ಪ್ರಸರಣದಲ್ಲೂ, ೪೨ ಪ್ರಾದೇಶಿಕ ವಾರ್ತಾ ಘಟಕಗಳಿಂದ ಸುಮಾರು ೧೩೭ ಬುಲೆಟಿನ್‌ಗಳೂ ಪ್ರಸಾರವಾಗುತ್ತಿವೆ. ದೆಹಲಿಯ ಎಫ್‌ಎಂ ವಾಹಿನಿಯಿಂದ ೨೪ ಗಂಟೆಗಳ ಮುಖ್ಯಾಂಶಗಳ ಪ್ರಸಾರವೂ ನಡೆಯುತ್ತಿದೆ. ಆಕಾಶವಾಣಿ ಕನ್ನಡದಲ್ಲಿ 'ಪ್ರದೇಶ ಸಮಾಚಾರ' ಎನ್ನುವ ಹೆಸರಿನಿಂದ ಪ್ರಾದೇಶಿಕ ವಾರ್ತಾಪ್ರಸಾರ ಮಾಡುತ್ತಿದೆ. ದಿನವಹಿ ೩ ಪ್ರಸಾರಗಳಿದ್ದು ಅದರಲ್ಲಿ ಒಂದು ಅಂದರೆ ಬೆಳಗ್ಗಿನ 'ಪ್ರದೇಶ ಸಮಾಚಾರ' ಧಾರವಾಡ ಕೇಂದ್ರದಿಂದ ಪ್ರಸಾರವಾಗುತ್ತಿದೆ. ದೆಹಲಿಯಿಂದ ಪ್ರಸಾರವಾಗುವ ವಾರ್ತೆಗಳಲ್ಲಿ ಹೆಚ್ಚಾಗಿ ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಸುದ್ದಿಗಳೇ ತುಂಬಿಕೊಂಡಿರುತ್ತದೆ ಮತ್ತು ಆ ಪ್ರಸಾರದ ಕಾಲಾವಧಿ ಸೀಮಿತವೂ ಆಗಿರುತ್ತದೆ. ಈ ಹಿನ್ನೆಲೆಯಲ್ಲಿ ಕರ್ನಾಟಕದಲ್ಲಿ ಕನ್ನಡ ವಾರ್ತೆಗಳನ್ನು ೨೪ ಗಂಟೆಗಳ ಸತತ ಪ್ರಸಾರ ಮಾಡಬೇಕಾದ ಅಗತ್ಯ ಆಕಾಶವಾಣಿಗೆ ಇದೆ ಎನ್ನುವುದು ಅಧ್ಯಯನ ಸಂದರ್ಭದಲ್ಲಿ ಅರಿವಾಗಿದೆ.

## ಇದೀಗ ಬಂದ ಸುದ್ದಿ

**ಈ** ಮಹಾಪ್ರಬಂಧವನ್ನು ಬೈಂಡಿಂಗಿಗೆ ಕಳಿಸುವ ಹಂತದಲ್ಲಿದ್ದಾಗ ಲಭ್ಯವಾಗಿರುವ ಮಾಹಿತಿಯಂತೆ, ದೇಶದ ಮೊಟ್ಟ ಮೊದಲ ಖಾಸಗಿ ಎಫ್‌ಎಂ ರೇಡಿಯೋ ವಾಹಿನಿ (ರೇಡಿಯೋ ಸಿಟಿ) ಜುಲೈ ೩, ೨೦೦೧ರಂದು ಕಾರ್ಯಾರಂಭ ಮಾಡಿದೆ. ಈ ವಾಹಿನಿ ದಿನದ ೨೪ ಗಂಟೆಯೂ ನಿರಂತರ ಸೇವೆ ನೀಡಲಿದೆ. ಈವರೆಗೂ ಪ್ರಸಾರ ಭಾರತಿಯ ರೇಡಿಯೊ ಸೇವೆಗೆ ಯಾವುದೇ ಖಾಸಗಿ ವಾಹಿನಿಗಳ ಸವಾಲು ಇರದಿದ್ದದ್ದನ್ನು ಅಧ್ಯಯನದ ಸಂದರ್ಭದಲ್ಲಿ ಗಮನಿಸಲಾಗಿತ್ತು. ಆದರೆ, ಈ ಹೊಸ ಬೆಳವಣಿಗೆಯೊಂದಿಗೆ ಆಕಾಶವಾಣಿಯ ಮುಂದಿನ ಕಾರ್ಯನಿರ್ವಹಣೆಯನ್ನು ಸೂಕ್ಷ್ಮವಾಗಿ ಗಮನಿಸಬೇಕಾಗುತ್ತದೆ.

### ಮೊದಲ ಖಾಸಗಿ ಎಫ್‌ಎಂ ರೇಡಿಯೊ ಪ್ರಸಾರ ಶುರು

ಬೆಂಗಳೂರು. ಜುಲೈ 3– ದಿನದ 24 ಗಂಟೆಗಳೂ ಕಾರ್ಯನಿರ್ವಹಿಸುವ ದೇಶದ ಮೊದಲ ಖಾಸಗಿ ವಲಯದ ಎಫ್‌ಎಂ ರೇಡಿಯೊ ಸ್ಟೇಷನ್ 'ರೇಡಿಯೊ ಸಿಟಿ' ಇಂದು ಬೆಳಿಗ್ಗೆ 9 ಗಂಟೆಯಿಂದ ಬೆಂಗಳೂರಿ ನಲ್ಲಿ ಕಾರ್ಯಾರಂಭ ಮಾಡಿತು.

'ರೇಡಿಯೊ ಸಿಟಿ' ಕೇಂದ್ರದ ಆರಂಭದಿಂದಾಗಿ ರೇಡಿಯೋ ಕ್ಷೇತ್ರಕ್ಕೆ ಇದೇ ಪ್ರಪ್ರಥಮ ಬಾರಿಗೆ ಖಾಸಗಿ ಕಂಪೆನಿಯ ಪ್ರವೇಶ ಆದಂತಾಗಿದೆ. ಸ್ಟಾರ್ ಟಿವಿ ನೇತೃತ್ವದ ಮ್ಯೂಸಿಕ್ ಬ್ರಾಡ್‌ಕಾಸ್ಟ್ ಲಿಮಿಟೆಡ್ ಸಂಸ್ಥೆಯು (ಎಂಬಿಪಿಎಲ್) ಈ ಕೇಂದ್ರವನ್ನು ಆರಂಭಿ ಸಿದೆ. ಸ್ಟಾರ್ ಟಿವಿ. ಈ ಕೇಂದ್ರಕ್ಕೆ ಮಾಹಿತಿ ಹಾಗೂ ಮಾರುಕಟ್ಟೆ ಒದಗಿಸಲಿದೆ.

ಬೆಂಗಳೂರು ಸೇರಿದಂತೆ ದೆಹಲಿ. ಮುಂಬೈ. ಪಟ್ನಾ. ನಾಗಪುರ ಮತ್ತು ಲಖನೌ ನಗರಗಳಲ್ಲಿ ಎಫ್‌ಎಂ ಕೇಂದ್ರಗಳ ಆರಂಭಕ್ಕೆ ಎಂಬಿಪಿಎಲ್ ಈಗಾಗಲೆ ಸರಕಾರದಿಂದ ಅನುಮತಿ ಪಡೆದಿದೆ.

'ಉಳಿದ ಐದು ಕೇಂದ್ರಗಳನ್ನು ಮುಂದಿನ 6 ರಿಂದ 9 ತಿಂಗಳಲ್ಲಿ ಆರಂಭಿ ಸಲಾಗುವುದು' ಎಂದು ಎಂಬಿಪಿಎಲ್ ನಿರ್ದೇಶಕ ಅಶೋಕ್ ಖಿಸ್ವಾಸರ ಅವರು ಇಂದು ಇಲ್ಲಿ ಪತ್ರಿಕಾಗೋಷ್ಠಿಯಲ್ಲಿ ತಿಳಿಸಿದರು.

ರೇಡಿಯೊ ಸಿಟಿ ಯು ಇಂಗ್ಲಿಷ್ ಮತ್ತು ಹಿಂದಿ ಭಾಷೆಗಳಲ್ಲಿ ಕಾರ್ಯಕ್ರಮ ಆರಂಭಿಸಿದೆ. ಉಳಿದ ಪ್ರಾದೇಶಿಕ ಭಾಷೆ ಗಳಲ್ಲಿ ಪ್ರಸಾರ ಮಾಡುವ ಬಗ್ಗೆ ಈಗಲೇ ಏನೂ ನಿರ್ಧಾರ ಕೈಗೊಂಡಿಲ್ಲ ಎಂದು ಅವರು ಹೇಳಿದರು.

'ಸದ್ಯಕ್ಕೆ ಒಂದು ಗಂಟೆಯ ಕಾರ್ಯ ಕ್ರಮದಲ್ಲಿ ಸುಮಾರು 10 ನಿಮಿಷಗಳ ವಾಣಿಜ್ಯ- ಜಾಹೀರಾತು ಪ್ರಸಾರ ಆಗ ಲಿದೆ' ಎಂದು ಸ್ಟಾರ್ ಇಂಡಿಯಾ ಲಿಮಿಟೆಡ್‌ನ ಮುಖ್ಯ ಕಾರ್ಯ ನಿರ್ವಾಹಕ ಪೀಟರ್ ಮುಖರ್ಜಿ ತಿಳಿಸಿದರು.

ಎಫ್‌ಎಂ ರೇಡಿಯೊ ಪ್ರಸಾರ ವ್ಯಾಪ್ತಿ 40ರಿಂದ 60 ಕಿ.ಮೀವರೆಗೆ ಇರುತ್ತದೆ.

ಪ್ರಜಾವಾಣಿ ೪.೭.೨೦೦೧, ಪುಟ ೯

# ಪಟ್ಟಿ - ೧೫ : ಆಕಾಶವಾಣಿಯ ಕಾರ್ಯಕ್ರಮ ವೈವಿಧ್ಯ

ಮೊದಲ ಪ್ರಸಾರ : ಬೆಳಿಗ್ಗೆ ೫.೫೫ರಿಂದ ಮಧ್ಯಾಹ್ನ ೧೦ ಗಂಟೆವರೆಗೆ

(೨೦೦೧ರಲ್ಲಿ ಇದ್ದಂತೆ)

| ಸಮಯ | ಸೋಮವಾರ | ಮಂಗಳವಾರ | ಬುಧವಾರ | ಗುರುವಾರ | ಶುಕ್ರವಾರ | ಶನಿವಾರ | ಭಾನುವಾರ |
|---|---|---|---|---|---|---|---|
| ೫.೫೫ | ಮಂಗಳ ಧ್ವನಿ | ಮಂಗಳ ಧ್ವನಿ | ಮಂಗಳ ಧ್ವನಿ | ಮಂಗಳ ಧ್ವನಿ | ಮಂಗಳ ಧ್ವನಿ | ಮಂಗಳ ಧ್ವನಿ | ಮಂಗಳ ಧ್ವನಿ |
| ೬.೦೦ | ಕಾರ್ಯಕ್ರಮ ವಿವರಣೆ | ಕಾರ್ಯಕ್ರಮ ವಿವರಣೆ | ಕಾರ್ಯಕ್ರಮ ವಿವರಣೆ | ಕಾರ್ಯಕ್ರಮ ವಿವರಣೆ | ಕಾರ್ಯಕ್ರಮ ವಿವರಣೆ | ಕಾರ್ಯಕ್ರಮ ವಿವರಣೆ | ಕಾರ್ಯಕ್ರಮ ವಿವರಣೆ |
| ೬.೦೫ | ಇಂಗ್ಲಿಷ್ ವಾರ್ತೆ | ಇಂಗ್ಲಿಷ್ ವಾರ್ತೆ | ಇಂಗ್ಲಿಷ್ ವಾರ್ತೆ | ಇಂಗ್ಲಿಷ್ ವಾರ್ತೆ | ಇಂಗ್ಲಿಷ್ ವಾರ್ತೆ | ಇಂಗ್ಲಿಷ್ ವಾರ್ತೆ | ಇಂಗ್ಲಿಷ್ ವಾರ್ತೆ |
| ೬.೧೦ | ಗೀತಾರಾಧನ | ಗೀತಾರಾಧನ | ಗೀತಾರಾಧನ | ಗೀತಾರಾಧನ | ಗೀತಾರಾಧನ | ಗೀತಾರಾಧನ | ಗೀತಾರಾಧನ |
| ೬.೩೫ | ಚಿಂತನ | ಚಿಂತನ | ಚಿಂತನ | ಚಿಂತನ | ಚಿಂತನ | ಚಿಂತನ | ಚಿಂತನ |
| ೬.೪೫ | ಸಂಗೀತ ಗುಚ್ಛ | ಸಂಗೀತ ಗುಚ್ಛ | ಸಂಗೀತ ಗುಚ್ಛ | ಸಂಗೀತ ಗುಚ್ಛ | ಸಂಗೀತ ಗುಚ್ಛ | ಸಂಗೀತ ಗುಚ್ಛ | ಸಂಗೀತ ಗುಚ್ಛ |
| ೭.೦೫ | ಪ್ರದೇಶ ಸಮಾಚಾರ | ಪ್ರದೇಶ ಸಮಾಚಾರ | ಪ್ರದೇಶ ಸಮಾಚಾರ | ಪ್ರದೇಶ ಸಮಾಚಾರ | ಪ್ರದೇಶ ಸಮಾಚಾರ | ಪ್ರದೇಶ ಸಮಾಚಾರ | ಪ್ರದೇಶ ಸಮಾಚಾರ |
| ೭.೧೫ | ಸ್ಪಂದನ | ಅವಲೋಕನ | ಸ್ಪಂದನ | ಕಂಪನಿಯ ಪೆಂಪು - ಇಂಪು | ಅಕ್ಕ ಕೇಳವ್ವ | ಅವಲೋಕನ | ಕಾವ್ಯವಾಹಿನಿ |
| ೭.೨೫ | ಕೃಷಿ ಲೋಕ | ಶಾಸ್ತ್ರೀಯ ಸಂಗೀತ | ನವಸುಮ | - ಅದೇ - | - - - | ಪಕ್ಷಿನೋಟ | - - - |
| ೭.೩೦ | ವಿಜ್ಞಾನದ ಮುನ್ನಡೆ | - ಅದೇ - | - ಅದೇ - | - ಅದೇ - | - - - | ರಸವಾರ್ತೆ | - - - |
| ೭.೩೫ | ಕನ್ನಡ ವಾರ್ತೆ | ಕನ್ನಡ ವಾರ್ತೆ | ಕನ್ನಡ ವಾರ್ತೆ | ಕನ್ನಡ ವಾರ್ತೆ | ಕನ್ನಡ ವಾರ್ತೆ | ಕನ್ನಡ ವಾರ್ತೆ | ಕನ್ನಡ ವಾರ್ತೆ |
| ೭.೪೫ | ಚಿತ್ರಗೀತೆ | ಚಿತ್ರಗೀತೆ | ಚಿತ್ರಗೀತೆ | ಚಿತ್ರಗೀತೆ | ಚಿತ್ರಗೀತೆ | ಚಿತ್ರಗೀತೆ | ಚಿತ್ರಗೀತೆ |
| ೭.೫೮ | ಹಿಂದಿ + ಇಂಗ್ಲಿಷ್ ವಾರ್ತೆಗಳು | ಹಿಂದಿ + ಇಂಗ್ಲಿಷ್ ವಾರ್ತೆಗಳು | ಹಿಂದಿ + ಇಂಗ್ಲಿಷ್ ವಾರ್ತೆಗಳು | ಹಿಂದಿ + ಇಂಗ್ಲಿಷ್ ವಾರ್ತೆಗಳು | ಹಿಂದಿ + ಇಂಗ್ಲಿಷ್ ವಾರ್ತೆಗಳು | ಹಿಂದಿ + ಇಂಗ್ಲಿಷ್ ವಾರ್ತೆಗಳು | ಹಿಂದಿ + ಇಂಗ್ಲಿಷ್ ವಾರ್ತೆಗಳು |
| ೮.೩೦ | ರೇಡಿಯೊ ಡಾಕ್ಟರ್ | ರೇಡಿಯೊ ಡಾಕ್ಟರ್ | ರೇಡಿಯೊ ಡಾಕ್ಟರ್ | ರೇಡಿಯೊ ಡಾಕ್ಟರ್ | ರೇಡಿಯೊ ಡಾಕ್ಟರ್ | ರೇಡಿಯೊ ಡಾಕ್ಟರ್ | ರೇಡಿಯೊ ಡಾಕ್ಟರ್ |
| ೮.೩೫ | ಶಾಸ್ತ್ರೀಯ ಸಂಗೀತ | ಶಾಸ್ತ್ರೀಯ ಸಂಗೀತ | ಶಾಸ್ತ್ರೀಯ ಸಂಗೀತ | ಶಾಸ್ತ್ರೀಯ ಸಂಗೀತ | ಶಾಸ್ತ್ರೀಯ ಸಂಗೀತ | ಶಾಸ್ತ್ರೀಯ ಸಂಗೀತ | ಶಾಸ್ತ್ರೀಯ ಸಂಗೀತ |
| ೯.೦೫ | ಚಿತ್ರಲಹರಿ | ಚಿತ್ರಲಹರಿ | ಚಿತ್ರಲಹರಿ | ಚಿತ್ರಲಹರಿ | ಚಿತ್ರಲಹರಿ | ಚಿತ್ರಲಹರಿ | ಚಿತ್ರಲಹರಿ |
| ೯.೩೦ | ಶಾಸ್ತ್ರೀಯ ಸಂಗೀತ | ಶಾಸ್ತ್ರೀಯ ಸಂಗೀತ | ಶಾಸ್ತ್ರೀಯ ಸಂಗೀತ | ಶಾಸ್ತ್ರೀಯ ಸಂಗೀತ | ಶಾಸ್ತ್ರೀಯ ಸಂಗೀತ | ಶಾಸ್ತ್ರೀಯ ಸಂಗೀತ | ಪಕ್ಷಿಯ ಬಳಗ |
| ೯.೫೦ | - - - | - - - | - - - | - - - | - - - | - - - | ಚಿಲ್ಡ್ರನ್ಸ್ ಅವರ್ |
| ೧೦.೧೦ | - - - | - - - | - - - | - - - | - - - | - - - | ಶಾಸ್ತ್ರೀಯ ಸಂಗೀತ |
| ೧೨.೦೦ | - - - | - - - | - - - | - - - | - - - | - - - | ಪಾಶ್ಚಿಮಾತ್ಯ ಸಂಗೀತ |

ಎರಡನೆ ಪ್ರಸಾರ : ಮಧ್ಯಾಹ್ನ ೧೨.೩೦ರಿಂದ ಮಧ್ಯಾಹ್ನ ೩ರವರೆಗೆ

| ಸಮಯ | ಸೋಮವಾರ | ಮಂಗಳವಾರ | ಬುಧವಾರ | ಗುರುವಾರ | ಶುಕ್ರವಾರ | ಶನಿವಾರ | ಭಾನುವಾರ |
|---|---|---|---|---|---|---|---|
| ೧೨.೩೦ | ಗ್ರಾಮಲಕ್ಷ್ಮಿ | ವನಿತಾ ವಿಹಾರ | ಶಾಸ್ತ್ರೀಯ ಸಂಗೀತ | ಗ್ರಾಮಲಕ್ಷ್ಮಿ | ವನಿತಾ ವಿಹಾರ | ಬಾಲ ಜಗತ್ತು | ವನಿತಾ ವಿಹಾರ |
| ೧.೦೦ | ಗೀತ ಲಹರಿ | ಕಾವ್ಯವಾಚನ | ಭಾವಗೀತೆ | ಗೀತಲಹರಿ | ಗೀತಲಹರಿ | ಗೀತಲಹರಿ | ಗೀತಲಹರಿ |
| ೧.೧೦ | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ವಾರ್ತೆಗಳು |
| ೧.೨೦ | ದೇವರ ನಾಮ | ಶಾಸ್ತ್ರೀಯ ಸಂಗೀತ | ಜಾನಪದ ಸಂಗೀತ | ದೇವರನಾಮ | ಕಾವ್ಯವಾಚನ | ಸಂಸ್ಕೃತ ಪಾಠ | ದೇವರನಾಮ |
| ೧.೩೦ | - - - | - - - | ಶಾಸ್ತ್ರೀಯ ಸಂಗೀತ | ಶಾಸ್ತ್ರೀಯ ಸಂಗೀತ | - - - | ಪಾಶ್ಚಿಮಾತ್ಯ ಸಂಗೀತ | - - - |
| ೧.೪೫ | ಹಿಂದಿ ಪಾಠ | - - - | - - - | - - - | ಹಿಂದಿ ಪಾಠ | - - - | ಹಿಂದಿ ಪಾಠ |
| ೨.೦೦ | ಇಂಗ್ಲಿಷ್ ವಾರ್ತಾ ಸಂಚಿಕೆ | ಇಂಗ್ಲಿಷ್ ವಾರ್ತಾ ಸಂಚಿಕೆ | ಇಂಗ್ಲಿಷ್ ವಾರ್ತಾ ಸಂಚಿಕೆ | ಇಂಗ್ಲಿಷ್ ವಾರ್ತೆ ಸಂಚಿಕೆ | ಇಂಗ್ಲಿಷ್ ವಾರ್ತಾ ಸಂಚಿಕೆ | ಇಂಗ್ಲಿಷ್ ವಾರ್ತಾ ಸಂಚಿಕೆ | ಇಂಗ್ಲಿಷ್ ವಾರ್ತಾ ಸಂಚಿಕೆ |
| ೨.೩೦ | ಪ್ರದೇಶ ಸಮಾಚಾರ | ಪ್ರದೇಶ ಸಮಾಚಾರ | ಪ್ರದೇಶ ಸಮಾಚಾರ | ಪ್ರದೇಶ ಸಮಾಚಾರ | ಪ್ರದೇಶ ಸಮಾಚಾರ | ಪ್ರದೇಶ ಸಮಾಚಾರ | ಪ್ರದೇಶ ಸಮಾಚಾರ |
| | ಹವಾ ವರ್ತಮಾನ | ಹವಾ ವರ್ತಮಾನ | ಹವಾ ವರ್ತಮಾನ | ಹವಾ ವರ್ತಮಾನ | ಹವಾ ವರ್ತಮಾನ | ಹವಾ ವರ್ತಮಾನ | ಹವಾ ವರ್ತಮಾನ |
| ೨.೪೦ | ಬಾನ್ದನಿ - ಶೈಕ್ಷಣಿಕ ಕಾರ್ಯಕ್ರಮ | ಬಾನ್ದನಿ | ಬಾನ್ದನಿ | ಬಾನ್ದನಿ | ಸ್ನೇಹ ಭಾರತಿ | ಬಾಳ ಬೆಳಕು | ಕನ್ನಡ ಚಲನಚಿತ್ರ ಧ್ವನಿ ಮುದ್ರಿಕೆ |

ಮೂರನೆ ಪ್ರಸಾರ : ಸಂಜೆ ೬ ಗಂಟೆಯಿಂದ ರಾತ್ರಿ ೮ ಗಂಟೆವರೆಗೆ

| | | | | | | | |
|---|---|---|---|---|---|---|---|
| ೬.೦೦ | ಇಂಗ್ಲಿಷ್ ವಾರ್ತೆ | ಇಂಗ್ಲಿಷ್ ವಾರ್ತೆ | ಇಂಗ್ಲಿಷ್ ವಾರ್ತೆ | ಇಂಗ್ಲಿಷ್ ವಾರ್ತೆ | ಇಂಗ್ಲಿಷ್ ವಾರ್ತೆ | ಇಂಗ್ಲಿಷ್ ವಾರ್ತೆ | ಇಂಗ್ಲಿಷ್ ವಾರ್ತೆ |
| ೬.೦೫ | ಕಾರ್ಮಿಕರಿಗಾಗಿ | ಕಾರ್ಮಿಕರಿಗಾಗಿ | ಕಾರ್ಮಿಕರಿಗಾಗಿ | ಕಾರ್ಮಿಕರಿಗಾಗಿ | ಕಾರ್ಮಿಕರಿಗಾಗಿ | ಕಾರ್ಮಿಕರಿಗಾಗಿ | ಮನೆಯ ಮಾತು |
| ೬.೨೦ | - ಅದೇ - | - ಅದೇ - | - ಅದೇ - | - ಅದೇ - | - ಅದೇ - | - ಅದೇ - | ಜನಪದ ಗೀತೆ |
| ೬.೩೦ | ಲಘು ಸಂಗೀತ | ಲಘು ಸಂಗೀತ | ಲಘು ಸಂಗೀತ | ಲಘು ಸಂಗೀತ | ಲಘು ಸಂಗೀತ | ಲಘು ಸಂಗೀತ | - ಅದೇ - |
| ೬.೪೦ | ಪ್ರದೇಶ ಸಮಾಚಾರ | ಪ್ರದೇಶ ಸಮಾಚಾರ | ಪ್ರದೇಶ ಸಮಾಚಾರ | ಪ್ರದೇಶ ಸಮಾಚಾರ | ಪ್ರದೇಶ ಸಮಾಚಾರ | ಪ್ರದೇಶ ಸಮಾಚಾರ | ಪ್ರದೇಶ ಸಮಾಚಾರ |
| ೬.೫೦ | ಕೃಷಿ ರಂಗ | ಕೃಷಿ ರಂಗ | ಕೃಷಿ ರಂಗ | ಕೃಷಿ ರಂಗ | ಕೃಷಿ ರಂಗ | ಕೃಷಿ ರಂಗ | ಕೃಷಿ ರಂಗ |
| ೭.೩೫ | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ವಾರ್ತೆಗಳು | ವಾರ್ತೆಗಳು |

ನಾಲ್ಕನೆ ಪ್ರಸಾರ : ರಾತ್ರಿ ೮ ಗಂಟೆಯಿಂದ

| | | | | | | | |
|---|---|---|---|---|---|---|---|
| ೮.೦೦ | ಯುವವಾಣಿ | ಯುವವಾಣಿ | ಯುವವಾಣಿ | ಯುವವಾಣಿ | ಕ್ರೀಡಾಲೋಕ | ಯುವವಾಣಿ | ಯುವವಾಣಿ |
| ೮.೪೫ | ಹಿಂದಿ+ಇಂಗ್ಲಿಷ್ ವಾರ್ತೆ | ಹಿಂದಿ+ಇಂಗ್ಲಿಷ್ ವಾರ್ತೆ | ಹಿಂದಿ+ಇಂಗ್ಲಿಷ್ ವಾರ್ತೆ | ಹಿಂದಿ+ಇಂಗ್ಲಿಷ್ ವಾರ್ತೆ | ಹಿಂದಿ+ಇಂಗ್ಲಿಷ್ ವಾರ್ತೆ | ಹಿಂದಿ+ಇಂಗ್ಲಿಷ್ ವಾರ್ತೆ | ಹಿಂದಿ+ಇಂಗ್ಲಿಷ್ ವಾರ್ತೆ |
| ೯.೧೬ | ಕನ್ನಡದಲ್ಲಿ ಭಾಷಣ | ಶಾಸ್ತ್ರೀಯ ಸಂಗೀತ | ಶಾಸ್ತ್ರೀಯ ಸಂಗೀತ | ಕನ್ನಡ ಭಾಷಣ | ಸಂದರ್ಶನ ಇಂಗ್ಲಿಷ್ | ಕನ್ನಡ ಭಾಷಣ | ಪ್ರಚಲಿತ ವಿದ್ಯಮಾನ |
| ೯.೩೦ | ಬೆಳಕಿನಂಗಳ | ನಾಟಕ | - ಅದೇ - | ಫೋನ್ -ಇನ್ | ರೇಡಿಯೊ ಸ್ಕೋಪ್ | ಧಾರಾವಾಹಿ | ರಸಮಂಜರಿ |
| ೧೦.೦೦ | ಉರ್ದು ಕಾರ್ಯಕ್ರಮ | ಪಾಶ್ಚಾತ್ಯ ಸಂಗೀತ | - ಅದೇ - | - ಅದೇ - | - ಅದೇ - | ರಾಷ್ಟ್ರೀಯ ಸಂಗೀತ ಕಾರ್ಯಕ್ರಮ | ಅಖಿಲ ಭಾರತ ಸಂಗೀತ ಸಭಾ |
| ೧೦.೩೦ | ಶಾಸ್ತ್ರೀಯ ಸಂಗೀತ | - ಅದೇ - | ಸವಿನೆನಪು | ಶಾಸ್ತ್ರೀಯ ಸಂಗೀತ | ಪಾಶ್ಚಿಮಾತ್ಯ ಸಂಗೀತ | - ಅದೇ - | - ಅದೇ - |

## ಅಡಿಟಿಪ್ಪಣಿ

೧. ಮೆಹ್ರಾ ಮಸಾನಿ, Broadcasting and the people, ೧೯೭೫, ಪು - ೨೫

೨. ಮೆಹ್ರಾ ಮಸಾನಿ, Broadcasting and the people, ೧೯೭೫, ಪು - ೧೨೪

೩. ಎ.ಎನ್. ಮೂರ್ತಿರಾವ್, ರೇಡಿಯೊ ಮಾಧ್ಯಮ, ಸಂ : ಬಾನುಲಿ ಬರವಣಿಗೆ, ೧೯೭೯, ಪು - ೧೦

ಅಧ್ಯಾಯ : ಆರು

# ಪತ್ರಿಕೆ

೧. ಪತ್ರಿಕೆಗಳ ಧ್ಯೇಯೋದ್ದೇಶ

೨. ವಿಚಾರ ವೈವಿಧ್ಯ

೩. ಸುದ್ದಿ - ವರದಿಗಾರಿಕೆ, ಸಂಪಾದನೆ, ಪ್ರಸ್ತುತಿ

೪. ಪತ್ರಿಕಾ ರಂಗದ ಸವಾಲುಗಳು

ಈ ಮಹಾಪ್ರಬಂಧದ ರಚನೆಯ ಹಿನ್ನೆಲೆಯಲ್ಲಿ ಕೈಗೊಂಡ ಅಧ್ಯಯನಕ್ಕಾಗಿ ಆಧುನಿಕ ಸಮೂಹ ಸಂವಹನ ಮಾಧ್ಯಮಗಳ ಪೈಕಿ ಮೂರನ್ನು ಆಯ್ಕೆ ಮಾಡಿಕೊಂಡಿದ್ದೇನೆ. 'ಪತ್ರಿಕೆಗಳು' ಅವುಗಳಲ್ಲೊಂದು. ಉಳಿದೆರಡು ಮಾಧ್ಯಮಗಳಾದ ದೂರದರ್ಶನ (ದೃಶ್ಯ - ಶ್ರವ್ಯ ಮಾಧ್ಯಮ) ಹಾಗೂ ಆಕಾಶವಾಣಿ (ಶ್ರವ್ಯ ಮಾಧ್ಯಮ)ಯ ಧ್ಯೇಯೋದ್ದೇಶ, ಕಾರ್ಯವೈಖರಿ ಮತ್ತು ಕಾರ್ಯಕ್ರಮ ವೈವಿಧ್ಯ, ಸುದ್ದಿ - ಸಂಪಾದನೆ, ಮಂಡನೆ ಮುಂತಾದ ವಿಷಯಗಳನ್ನು ಕುರಿತು ಈ ಮುಂಚಿನ ಅಧ್ಯಾಯಗಳಲ್ಲಿ ವಿಷದವಾಗಿ ವಿವರಿಸಿದ್ದೇನೆ. ವಿಶ್ಲೇಷಿಸಿದ್ದೇನೆ. ಈಗ ಪ್ರಸ್ತುತ ಅಧ್ಯಾಯದಲ್ಲಿ ಪತ್ರಿಕಾ ಮಾಧ್ಯಮವನ್ನು ಕುರಿತು ವಿಷಯ ವಿಶ್ಲೇಷಣೆ ಮಾಡಬಯಸುತ್ತೇನೆ.

## ೧. ಪತ್ರಿಕೆಗಳ ಧ್ಯೇಯೋದ್ದೇಶ

'ಸಾವಿರ ಯುದ್ಧ ಸೈನಿಕರನ್ನು ಎದುರಿಸುವುದಕ್ಕಿಂತ ವಿರೋಧ ಮಾಡುವ ನಾಲ್ಕು ಪತ್ರಿಕೆಗಳನ್ನು ಎದುರಿಸುವುದಕ್ಕೆ ಹೆದರಬೇಕಾಗುತ್ತದೆ' ಎಂದು ನೆಪೋಲಿಯನ್‌ನಂತಹ ಸರ್ವಾಧಿಕಾರಿ ಹೇಳುತ್ತಿದ್ದ. ಪತ್ರಿಕೆಗಳು ಭಯೋತ್ಪಾದಕರಲ್ಲ. 'ಅವುಗಳಿಗೆ ಹೆದರಬೇಕು' ಎನ್ನುವುದರ ಅರ್ಥವೇ ಬೇರೆ. ಸಾಮಾಜಿಕ ಸಂದರ್ಭದಲ್ಲಿ ವಸ್ತು ನಿಷ್ಠ, ಶುದ್ಧ ವರದಿಗಳಿಂದಾಗಿ ನೈತಿಕತೆಯ ತಿಳುವಳಿಕೆಯನ್ನು ಬಿತ್ತುವ, ಸಮಾಜವನ್ನು ಸದಾ ಜಾಗೃತ ಸ್ಥಿತಿಯಲ್ಲಿಡುವ ಶಕ್ತಿ ಪತ್ರಿಕೆಗಳಿಗಿದೆ. ಆದ್ದರಿಂದಲೇ ಎಂಥ ಸರ್ವಾಧಿಕಾರಿಯಾದರೂ ಪತ್ರಿಕೆಗಳ ಎದುರು ನೈತಿಕ ಧೈರ್ಯ ಉಳಿಸಿಕೊಳ್ಳಲು ಹೆಣಗಬೇಕಾಗುತ್ತದೆ. ಇಂತಹ ಶಕ್ತಿ ಪತ್ರಿಕೆಗಳಿಗೆ ಲಭ್ಯವಾಗುವುದು ಅವು ಮಾಡುವ ಕೆಲಸದಿಂದಲೇ, ಅವು ಪಾಲಿಸುವ ನಿಯಮಗಳಿಂದಲೇ ಎಂದು ಪ್ರತಿಪಾದಿಸಬಹುದು.

ಪತ್ರಿಕೋದ್ಯಮ ಒಂದು ಕಲೆ. ಇತರ ಎಷ್ಟೋ ಕಲೆಗಳಂತೆ ಇದು ಸೃಜನಾತ್ಮಕ ಹಾಗೂ ಸಂವಹನಾತ್ಮಕ. ಆದರೆ ಅವುಗಳಿಗಿಂತ ಭಿನ್ನವಾಗಿ ಇದು ಸಾಮಾಜಿಕ ಪ್ರಕ್ರಿಯೆ. ಸಾಮುದಾಯಿಕವಾದದ್ದು, ಸಮಾಜಮುಖಿಯಾದದ್ದು. ಯಾವುದೇ ಮೂಲದಿಂದ ಹುಟ್ಟಿದರೂ ಸಮಾಜಾಭಿಮುಖವಾದ ಸಂವಹನ ಶೈಲಿ ಪತ್ರಿಕೆಗಳದ್ದು.

ಪತ್ರಿಕೋದ್ಯಮ ಎನ್ನುವುದನ್ನು ಇಂಗ್ಲಿಷಿನಲ್ಲಿ(ಮೂಲ ಫ್ರೆಂಚ್) Journalism ಎಂದು ಕರೆಯಲಾಗುತ್ತದೆ. Journal, Journalist ಎನ್ನುವ ಪದ ಲ್ಯಾಟಿನ್‌ನ diurnalis ಎಂಬ ಶಬ್ದದಿಂದ ಹುಟ್ಟಿದೆ. ಹಾಗೆಂದರೆ daily, 'ದಿನನಿತ್ಯದ್ದು' ಎಂದರ್ಥ. ಕ್ರಿಸ್ತಪೂರ್ವ ೧೩೦ರಲ್ಲಿ ರೋಮ್‌ನ ಸಾರ್ವಜನಿಕ ವೃತ್ತದಲ್ಲಿ ಕೈಯಲ್ಲಿ ಬರೆದ ಎರಡು ಬುಲೆಟಿನ್‌ಗಳನ್ನು (ಕರಪತ್ರಗಳಂತೆ) ಅಂಟಿಸುವ ಪದ್ಧತಿ ಹುಟ್ಟಿಬಂದಿತು. Acta Diurna ಎಂದು ಕರೆಯಲ್ಪಡುತ್ತಿದ್ದ ಈ ಪತ್ರಗಳು ದಿನವೂ ಘಟಿಸುವ ಆಸಕ್ತಿಯ ಹಾಗೂ ಮುಖ್ಯ ವಿಷಯಗಳನ್ನು ಜನರಿಗಾಗಿಯೂ ಸೆನೆಟ್ ಸದಸ್ಯರಿಗಾಗಿಯೂ ಪ್ರಕಟಪಡಿಸುತ್ತಿತ್ತು. ಆ ಸಾಮ್ರಾಜ್ಯದ ವಿವಿಧ ಮುಖ್ಯ ಸ್ಥಳಗಳಲ್ಲಿ ಹಂಚುವುದಕ್ಕಾಗಿ ಇನ್ನೂರು ಪ್ರತಿಗಳನ್ನು ಆ ಕಾಲದಲ್ಲಿ ಸಿದ್ಧಗೊಳಿಸಲಾಗುತ್ತಿತ್ತು. ಬಹುಶಃ

Acta diurnaವೇ ವಿಶ್ವದ ಮೊದಲ ಪತ್ರಿಕೆ ಎನ್ನಬಹುದು. ಪತ್ರಿಕೋದ್ಯಮವನ್ನು ಅನೇಕ ವಿದ್ವಾಂಸರು ಹೀಗೆ ಬಣ್ಣಿಸುತ್ತಾರೆ. ಬಾಂಡ್ ಎಫ್. ಫ್ರೇಜರ್ ತನ್ನ *ಆನ್ ಇನ್‌ಟ್ರಡಕ್ಷನ್ ಟು ಜರ್ನಲಿಸಂ* ಪುಸ್ತಕದಲ್ಲಿ

> *Today the term journalism embraces all the forms in which & through which the news and the comments on the news reach the people.*[೧]

ಎಂದು ಹೇಳಿದ್ದಾರೆ. ಟೈಮ್ ಸಂಚಿಕೆಯ ಎರಿಕ್ ಹಾಡ್ಗಿನ್ಸ್ ಹೇಳುವಂತೆ

> *Journalism is the conveying of information from here to there with accuracy, insight and dispatch, and in such a manner that the truth is served and the rightness of things is made slowly, even if not immediately, more evident.*[೨]

ಹಾಗೆ ಪತ್ರಿಕೋದ್ಯಮವನ್ನು ದಿಢೀರ್ ಇತಿಹಾಸವೆಂದೂ ಜನತೆಗೆ ತಮ್ಮ ಸುತ್ತ ಏನಾಗುತ್ತಿದೆ ಎಂದು ತಿಳಿಸುವ ಸಮಕಾಲೀನ ವರದಿ ಎಂದೂ ಹೇಳುವುದಿದೆ. ಇದನ್ನೆಲ್ಲ ಗಮನಿಸಿದಾಗ ಪತ್ರಿಕೋದ್ಯಮ ಎನ್ನುವುದಕ್ಕೆ ಸತ್ಯ ಸಂಗತಿಗಳನ್ನು ಸಮಾಜಕ್ಕೆ ವರದಿ ಮಾಡುವ ವ್ಯವಸ್ಥೆ ಎಂಬ ವ್ಯಾಖ್ಯೆ ನೀಡಬಹುದು. ಈ ಸತ್ಯಾಂಶ ವರದಿ ಮಾಡುವ ಸಲುವಾಗಿ ಸರ್ಕಾರದ ಅಥವಾ ಸಾಮಾಜಿಕ ಸಂಕೋಲೆಗಳಿಂದ ಮುಕ್ತವಾದ ಸ್ಥಿತಿ ಪತ್ರಿಕೋದ್ಯಮಕ್ಕೆ ಬೇಕು. ಸಂಪೂರ್ಣ ಮಟ್ಟದ ಅಭಿವ್ಯಕ್ತಿ ಸ್ವಾತಂತ್ರ್ಯ ಪತ್ರಿಕೆಗಳಿಗೆ, ಇಂದಿನ ಉನ್ನತ-ತಂತ್ರಜ್ಞಾನದ ಸಂದರ್ಭದಲ್ಲಿ ಎಲ್ಲ ಮಾಧ್ಯಮಗಳಿಗೆ ಮೂಲಭೂತ ಅಗತ್ಯವೆನಿಸುತ್ತದೆ. ಇಂತಹ ಸ್ವಾತಂತ್ರ್ಯವನ್ನು ಅನುಭವಿಸುವ ಪತ್ರಿಕೆ/ಮಾಧ್ಯಮಗಳಿಗೆ ಅವು ನಿರ್ವಹಿಸಬೇಕಾದ ಹೊಣೆಗಾರಿಕೆಗಳೂ ರೂಢಿಗತವಾಗಿಯೇ ನಿಗದಿಗೊಂಡಿವೆ.

## ಪತ್ರಿಕೆಗಳ ಕಾರ್ಯ

ಎಲ್ಲ ಮಾಧ್ಯಮಗಳಿಗೂ ಇರುವಂತೆ ಪತ್ರಿಕೆಗಳಿಗೂ ಹಲವು ಮಿತಿಗಳಿವೆ. ಇದು ಕೇವಲ ದೃಶ್ಯ ಮಾಧ್ಯಮ. ಅದರಲ್ಲೂ ಅಕ್ಷರ ಸ್ವರೂಪಿ. ಅಕ್ಷರಜ್ಞಾನವಿರುವವ ಖುದ್ದಾಗಿ ತಾನೇ ಓದಿದಾಗ ಇದು ಕಣ್ಣಿನ ಮೂಲಕ ಬುದ್ಧಿಗೆ ನಿಲುಕುತ್ತದೆ. ನಿರಕ್ಷರಸ್ಥನಿಗೆ ಯಾರಾದರೂ ಓದಿ/ಗ್ರಹಿಸಿ ಹೇಳಬೇಕು. ಹಾಗಾಗಿ ಆಕಾಶವಾಣಿಯಂತೆ ಕೇಳುಗರ ಕಿವಿಗೋ, ಚಲಿಸುವ ಚಿತ್ರಗಳ ಮೂಲಕ ನೋಡುಗರ ಕಂಗಳಿಗೋ ನೇರ ಆಹಾರ ಒದಗಿಸುವ ಮಾಧ್ಯಮ ಇದಾಗಲಾರದು. ಪತ್ರಿಕೆಯ ಗ್ರಾಹಕ ಅಕ್ಷರಜ್ಞಾನವಿರುವ ಓದುಗನೇ ಆಗಿರಬೇಕು ಎನ್ನುವುದೇ ಈ ಮಾಧ್ಯಮದ ಮೊದಲ ಮಿತಿ. ಇಂತಹ ಮಿತಿಯ ಮಧ್ಯೆಯೂ ಪತ್ರಿಕೆಗಳು ನಿರ್ವಹಿಸುವ ಕಾರ್ಯ, ಅವುಗಳ ಧ್ಯೇಯ, ಉದ್ದೇಶಗಳನ್ನು ಹೀಗೆ ಉಲ್ಲೇಖಿಸಬಹುದು:-

**ಮಾಹಿತಿ ನೀಡುವುದು :** ವೈಜ್ಞಾನಿಕ ದೃಷ್ಟಿಕೋನದಿಂದ ಸಾಮಾಜಿಕ ಪರಿವರ್ತನೆಯ ಸಾಧನವಾಗುವ ಪತ್ರಿಕೆಗಳ ಮೊದಲ ಕೆಲಸ ಜಗತ್ತಿನ ಯಾವುದೇ ಮೂಲೆಯಲ್ಲಿ ಘಟಿಸುವ ಮುಖ್ಯ ವಿಚಾರ/ಸುದ್ದಿಗಳನ್ನು ಜನಸಮೂಹಕ್ಕೆ ಲಿಖಿತ ರೂಪದಲ್ಲಿ ತಲುಪಿಸುವುದು.

**ವಿಶ್ಲೇಷಿಸುವುದು :** ಜನತೆಗೆ ಒಂದು ಸುದ್ದಿಯನ್ನು ಒದಗಿಸಿಕೊಟ್ಟರಷ್ಟೇ ಸಾಲದು, ಆ ವಿಚಾರದ ಹಿನ್ನೆಲೆಯಲ್ಲಿ ಅದರ ಆಗುಹೋಗುಗಳ ವಿಮರ್ಶೆ ಮಾಡುವ ಹೊಣೆಯನ್ನೂ ಪತ್ರಿಕೆ ಹೊರುತ್ತದೆ. ಅದರಿಂದ ಸಮಾಜವನ್ನು ಚಿಂತನೆಗೆ ಹಚ್ಚುವ ಕೆಲಸ ಮಾಡಿದಂತಾಗುತ್ತದೆ. ಚಿಂತನೆ ಸ್ಪಷ್ಟದಿಸೆಯಲ್ಲಿ ಆದಾಗ ಮಾತ್ರ ಸಾಮಾಜಿಕ ಬದಲಾವಣೆಯನ್ನು ನಿರೀಕ್ಷಿಸಬಹುದು.

**ಮಾರ್ಗದರ್ಶನ ಮಾಡುವುದು :** ಒಂದು ಸಮುದಾಯದ ಸಂಸ್ಕೃತಿಯನ್ನು ಪೀಳಿಗೆಯಿಂದ ಪೀಳಿಗೆಗೆ ಕೊಂಡೊಯ್ಯುವ ವಾಹನವಾಗಿ ಪತ್ರಿಕಾ ಮಾಧ್ಯಮ ಕೆಲಸ ಮಾಡುತ್ತದೆ. ಹಾಗಾಗಿ ಕಿರಿಯ ಪೀಳಿಗೆಗೆ ಸಹಜವಾಗಿಯೇ ಸೂಕ್ತ ಮಾರ್ಗದರ್ಶನ ನೀಡಬೇಕಾದ ಜವಾಬ್ದಾರಿಯನ್ನು ಈ ಮಾಧ್ಯಮ ಭರಿಸುತ್ತದೆ.

**ಮನರಂಜನೆ ಒದಗಿಸುವುದು :** ಪತ್ರಿಕಾ ಮಾಧ್ಯಮದಲ್ಲಿ ಪ್ರದರ್ಶಕ ಕಲೆಗಳಿಗೆ ಅಂದರೆ ನೃತ್ಯ, ನಾಟಕ, ಹರಿಕಥೆಯಂತಹ ಕಲಾಪ್ರಕಾರಗಳಿಗೆ ಅವಕಾಶವಿಲ್ಲ. ಬದಲಿಗೆ ಪ್ರದರ್ಶಕ ಕಲಾ ಪ್ರಕಾರಗಳ ರಸಗ್ರಹಣ, ವಿಶ್ಲೇಷಣೆ, ವಿಮರ್ಶೆಗಳನ್ನು ಮಾಡಬಹುದು. ಅದನ್ನು ಪತ್ರಿಕೆಗಳು ಮಾಡುತ್ತಲೂ ಇವೆ. ಉಳಿದಂತೆ ಸಾಹಿತ್ಯ, ಚಿತ್ರಕಲೆಯಂತಹ ಪ್ರಕಾರಗಳ ಮೂಲಕ ಮನರಂಜಿಸುವ ಕೆಲಸವನ್ನೂ ಮಾಡುತ್ತವೆ.

ಸುದ್ದಿ ಪ್ರಸರಣವೇ ಪತ್ರಿಕೋದ್ಯಮದ ಮೂಲಮಂತ್ರ. ಅದನ್ನೇ ಅಮೆರಿಕದ ರೋಲೆಂಡ್.ಇ. ವುಲ್‌ಸೆಲ್ ಸಾರ್ವಜನಿಕ ಸುದ್ದಿಗಳನ್ನು, ಸಾರ್ವಜನಿಕ ಅಭಿಪ್ರಾಯಗಳನ್ನು ಮತ್ತು ಸಾರ್ವಜನಿಕ ವಿನೋದಗಳನ್ನು ಆಧುನಿಕ ಪ್ರಚಾರ ಮಾರ್ಗಗಳ ಮೂಲಕ ಕ್ರಮಬದ್ಧವಾಗಿ ನಂಬಿಕೆಗೆ ಅರ್ಹವಾಗುವಂತೆ ಪ್ರಸಾರ ಮಾಡುವ ಸಾಧನವೇ ಪತ್ರಿಕೆ ಎಂದು ಹೇಳಿದ್ದಾರೆ.

ಇಂಗ್ಲೆಂಡಿನ ಸ್ಟೇಟ್ಸ್‌ಮನ್ ಪತ್ರಿಕೆ ಸಂಪಾದಕರಾಗಿದ್ದ ಕಿಂಗ್ಲೆ ಮಾರ್ಟಿನ್ ಈ ಪ್ರಪಂಚದಲ್ಲಿ ಜೀವನ ಮಾಡುವ ಪ್ರತಿಯೊಬ್ಬ ವ್ಯಕ್ತಿಯೂ ಪ್ರಪಂಚದ ಆಗುಹೋಗುಗಳ ಮೇಲೆ ತನ್ನ ಪ್ರಭಾವವನ್ನು ಬೀರುತ್ತಾನೆ. ಅಪ್ರತ್ಯಕ್ಷವಾಗಿ ಪ್ರಪಂಚದ ನಡವಳಿಕೆಗಳು ವ್ಯಕ್ತಿಯ ಮೇಲೆ ತನ್ನ ಪ್ರಭಾವವನ್ನು ಬೀರುತ್ತದೆ. ಹೀಗಿರುವಾಗ ಜಗತ್ತಿನಲ್ಲಿ ನಡೆಯುವ ಆಂದೋಲನದ ಬಗ್ಗೆ ವಿಷಯಗಳನ್ನು ತಿಳಿಸಿ ಶಿಕ್ಷಣ ಕೊಡುವ ಕರ್ತವ್ಯವು ಪತ್ರಿಕೆಯದಾಗಿರುತ್ತದೆ ಎಂದಿದ್ದಾರೆ.

ಬ್ರಿಟನ್ನಿನ ರಾಜ್ಯಶಾಸ್ತ್ರಜ್ಞ ಹೆರಾಲ್ಡ್ ಜೆ. ಲಾಸ್ಕಿ ಹೇಳುವಂತೆ ನಂಬಿಕೆಗೆ ಅರ್ಹವಾದ ಸುದ್ದಿಯನ್ನು ಪಡೆಯದ ಜನರು ಇಂದೋ ನಾಳೆಯೋ ಸ್ವಾತಂತ್ರ್ಯದ ತಳಪಾಯವನ್ನೇ ಹೊಂದದ ಜನರಂತಾಗುತ್ತಾರೆ. ಹೀಗೆ ಪತ್ರಿಕೆಗಳ ಕರ್ತವ್ಯ, ಜವಾಬ್ದಾರಿಯನ್ನು ಅನೇಕ ವಿದ್ವಾಂಸರು ಗುರುತಿಸಿದ್ದಾರೆ. ಪತ್ರಿಕಾರಂಗ ಇಂತಹ ಗುರುತರ ಜವಾಬ್ದಾರಿಗಳನ್ನು ಹೊತ್ತಿರುವುದರಿಂದಲೇ ಅದೊಂದು ಸಂಪೂರ್ಣ ಸಬಲ ಸಂಸ್ಥೆ ಎನಿಸಿಕೊಂಡಿದೆ.

ಪೂರ್ವ ದೇಶದ ಸಂಸ್ಕೃತಿಯಲ್ಲಿ 'ಏಷ್ಯಾ ದೇಶದ ರಾಜ ಮಹಾರಾಜರು ಅಕ್ಬರನ ಕತ್ತಿಗಿಂತ ಅಬುಲ್ ಫಜಲ್‌ನ ಲೇಖನಿಗೆ ಹೆದರುತ್ತಿದ್ದರು' ಎಂಬ ನಾಣ್ಣುಡಿ ಇದೆ. ಲೇಖನಿ ಕತ್ತಿಗಿಂತ ಹರಿತವೇ ಇರಬಹುದು. ಶಕ್ತಿಶಾಲಿಯೂ ಇರಬಹುದು. ಅಂತಹ ಹರಿತ, ಶಕ್ತಿ ಲೇಖನಿಗೆ ಅರ್ಥಾತ್ ಪತ್ರಿಕೆಗಳಿಗೆ ಬರುವುದಕ್ಕೆ ಅವು ಸಮಾಜವನ್ನು ಹಸನುಗೊಳಿಸುವ ಕೆಲಸ ಮಾಡುವುದೇ ಮುಖ್ಯ ಕಾರಣ. ಪತ್ರಿಕೆಗಳು ಅನ್ಯಾಯ, ಅನೀತಿಯ ವಿರುದ್ಧ ಸಿಡಿದೇಳುತ್ತವೆ. ಸಮಾಜದಲ್ಲಿ ತುಳಿತಕ್ಕೊಳಗಾದವರ ಜೊತೆಗೆ ನಿಲ್ಲುತ್ತವೆ. ಆಳುವವರ ಹಾಗೂ ಆಳಿಸಿಕೊಳ್ಳುವವರ ನಡುವಿನ ಕೊಂಡಿಯಾಗುತ್ತವೆ. ಆಳುವವನ ಬಗ್ಗೆ, ಅವನ ಆಳ್ವಿಕೆಯ ವೈಖರಿಯ ಬಗ್ಗೆ ಜನರಿಗೆ ಮಾಹಿತಿ ನೀಡಿ, ಅವರಲ್ಲಿ ತಿಳುವಳಿಕೆ ಮೂಡಿಸಿ, ತಮ್ಮನ್ನು ಆಳುವವರ ಬಗ್ಗೆ ಜನತೆ ಒಂದು ಅಭಿಪ್ರಾಯ ತಳೆಯಲು ಅವು ಸಹಕಾರಿಯಾಗುತ್ತವೆ. ಆದ್ದರಿಂದಲೇ, ಆ ಮೂಲಕವೇ, ಅವು ಸಮಾಜದ ರಕ್ಷಕರಂತೆಯೂ, ಸರ್ಕಾರದ ಪರೀಕ್ಷಕರಂತೆಯೂ ನಿರಂತರವಾಗಿ ಕೆಲಸ ಮಾಡುತ್ತಿರುತ್ತವೆ.

ಅಂದರೆ ಪತ್ರಿಕಾ ಮಾಧ್ಯಮ ಸಮಾಜದ ಮೇಲೆ ತೀವ್ರತರವಾದ ಪರಿಣಾಮವನ್ನೇ ಬೀರುತ್ತದೆ ಎನ್ನಬಹುದು. ಸಾರ್ವಜನಿಕ ವಿಷಯಗಳನ್ನು ತನ್ನದಾಗಿಸಿಕೊಂಡು ಮತ್ತೆ ಅದನ್ನು ಸಾರ್ವಜನಿಕರಿಗೇ ನೀಡುವ ದಿಸೆಯಲ್ಲಿ ಈ ಮಾಧ್ಯಮ ತೊಡಗಿಕೊಳ್ಳುವುದರಿಂದಲೇ ಇದು ಸಂಪೂರ್ಣ ಸಮಾಜಮುಖಿಯಾದ ಮಾಧ್ಯಮ. ವಿದ್ಯುನ್ಮಾನ ಮಾಧ್ಯಮಗಳ ಕಲ್ಪನೆಯೂ ಇರದಿದ್ದ ಕಾಲದಲ್ಲೇ ಪತ್ರಿಕಾರಂಗ ದೃಢವಾಗಿ ಬೆಳೆದು ನಿಂತಿರುವುದು ಇತಿಹಾಸದಿಂದ ತಿಳಿಯುತ್ತದೆ. ಪತ್ರಿಕೆ ಜನಸಾಮಾನ್ಯರ ಜೀವನದಲ್ಲಿ ಎಷ್ಟು ಹಾಸುಹೊಕ್ಕಾಗಿದೆ ಎಂದರೆ, ದಿನಬೆಳಗಾದರೆ ಪತ್ರಿಕೆಯಿಲ್ಲದೆ ದೈನಂದಿನ ಕೆಲಸಕಾರ್ಯಗಳು ಪ್ರಾರಂಭವಾಗುವುದಿಲ್ಲ. ವಿದ್ಯುನ್ಮಾನ ಮಾಧ್ಯಮಗಳು ಇಡೀ ಸಮಾಜವನ್ನು ಸಾರಾಸಗಟಾಗಿ ಆವರಿಸಿಕೊಂಡಿದ್ದರೂ ಪತ್ರಿಕೆಗಳು ಈಗಲೂ ಲಕ್ಷೋಪಲಕ್ಷ ಸಂಖ್ಯೆಯಲ್ಲಿ ಜನರ ಕೈ ಸೇರುತ್ತಿರುವುದಕ್ಕೆ ಅವು ಹಾಕಿಕೊಂಡು ಬಂದಿರುವ ಪರಂಪರೆ, ಆ ಪರಂಪರೆ ಸಮಾಜದ ಮೇಲೆ ಮೂಡಿಸಿರುವ ಗಾಢವಾದ ಪ್ರಭಾವವೇ ಕಾರಣ.

ಪತ್ರಿಕೆಗಳು ಓದುಗರ ಕೈಯಲ್ಲೇ ಉಳಿಯುವ ಸಾಕ್ಷಿ-ಪುರಾವೆಗಳು. ರೇಡಿಯೊ ಅಥವಾ ದೂರದರ್ಶನದಲ್ಲಿ ಒಮ್ಮೆ ಹೇಳುವುದನ್ನು ತದೇಕಚಿತ್ತರಾಗಿ ಕುಳಿತು ಕೇಳಿಸಿಕೊಂಡರಷ್ಟೇ ವಿಷಯ ಗ್ರಾಹ್ಯವಾಗುತ್ತದೆ. ಯಾವುದೇ ಕಾರಣಕ್ಕೆ ಒಮ್ಮೆ ಕಳೆದುಕೊಂಡರೆ ಮತ್ತೆ ಸಿಗುವ ಸಾಧ್ಯತೆಗಳು ಕಡಿಮೆ. ಆದರೆ ಒಂದು ಪತ್ರಿಕೆ ಒಂದು ದಾಖಲೆಯಾಗಿಯೂ, ಆಕರವಾಗಿಯೂ ಉಳಿಯುವುದು ಸಾಧ್ಯ. ಒಮ್ಮೆ ಓದಿದಾಗ ಅರ್ಥವಾಗದಿದ್ದರೆ ಮತ್ತೊಮ್ಮೆ ಪುಟ ಮಗುಚಿ ಓದಬಹುದಾದ ಸಾಧ್ಯತೆ ಪತ್ರಿಕೆಗಳ ಸಂದರ್ಭದಲ್ಲಿ ಇದೆ.

ಸಮಾಜವನ್ನು ಕಾಡುತ್ತಿರುವ ಅನಕ್ಷರತೆಯ ನಡುವೆಯೂ ಪತ್ರಿಕೆಗಳೂ ಜೀವಂತವಾಗಿರುವುದೇ ಅವುಗಳ ಕಾರ್ಯಕ್ಷಮತೆಗೆ ಸಾಕ್ಷಿ. ಸಮಾಜದ ಒಳಿತನ್ನು ಕಾಯ್ದುಕೊಳ್ಳುವ ಪತ್ರಿಕೆಗಳು ಸ್ವತಂತ್ರವಾಗಿರಬೇಕು, ವಸ್ತುನಿಷ್ಠವಾಗಿರಬೇಕು, ನಿಷ್ಪಕ್ಷಪಾತವಾಗಿರಬೇಕು, ಪ್ರಾಮಾಣಿಕವಾಗಿರಬೇಕು, ಜವಾಬ್ದಾರಿಯುತವಾಗಿರಬೇಕು, ಸಮಾಜಕ್ಕೆ ಉತ್ತರದಾಯಿಯಾಗಿರಬೇಕು. ಜನರಲ್ಲಿ ಅರಿವು ಮೂಡಿಸುವುದೇ ಪತ್ರಿಕೆಗಳ ಮೂಲಕರ್ತವ್ಯವಾಗಿರುವುದರಿಂದ ಪತ್ರಿಕೆಗಳೇ ಇಲ್ಲದ ಸಮಾಜ ನಿಷ್ಕ್ರಿಯವಾಗಿರುತ್ತದೆ. ಇದನ್ನೇ ಹೆಚ್.ಜಿ. ವೆಲ್ಸ್

> *The Roman empire could not endure because there were no newspapers - no methods of apprising the outlying peoples of the behaviour of the centre.*[2]

ಎಂದಿದ್ದಾರೆ. ಸಮಾಜ ಹಾಗೂ ಸರ್ಕಾರವನ್ನು ಕಟ್ಟೆಚ್ಚರದಿಂದ ಕಾಯುವ ರಾಷ್ಟ್ರಾಡಳಿತದ ನಾಲ್ಕನೆಯ ಅಂಗ ಎನಿಸಿಕೊಂಡಿರುವ ಪತ್ರಿಕಾರಂಗವನ್ನು ನಾಡಿಗ ಕೃಷ್ಣಮೂರ್ತಿಯವರು ಪ್ರಜಾಪ್ರಭುತ್ವ ರಾಜ್ಯ ಪದ್ಧತಿಯ ರಕ್ಷಾಕವಚ ಎಂದು ಕರೆದಿದ್ದಾರೆ. ಆದ್ದರಿಂದಲೇ ಒಂದು ಜನಾಂಗದಲ್ಲಿ ಅದರ ಸದಸ್ಯರು ಏನು ಮಾಡುತ್ತಾರೆ, ಏನು ಭಾವಿಸುತ್ತಾರೆ ಹಾಗೂ ಏನು ಆಲೋಚಿಸುತ್ತಾರೆ ಎನ್ನುವುದನ್ನು ಆ ಜನಾಂಗಕ್ಕೇ ತಿಳಿಸುವ ಪ್ರಾಥಮಿಕ ಕರ್ತವ್ಯ ಪತ್ರಿಕೆಗಳದ್ದು. ಸಮಾಜದ ಒಳಿತು ಕೆಡುಕುಗಳೆರಡನ್ನು ಅವು ಇದ್ದ ಹಾಗೆಯೇ ಪ್ರತಿಬಿಂಬಿಸುವುದರಿಂದ ಪತ್ರಿಕೆಗಳು ಸಮಾಜದ ಮೇಲೆ ತೀವ್ರ ಸ್ವರೂಪದ ಪರಿಣಾಮವನ್ನು ಮೂಡಿಸುತ್ತವೆ ಎನ್ನುವುದು ನಿಶ್ಚಿತ.

## ೨. ಪತ್ರಿಕೆಗಳಲ್ಲಿ ವೈವಿಧ್ಯತೆ

ಇಪ್ಪತ್ತನೆ ಶತಮಾನದ ಆರಂಭದಲ್ಲಿ ಕನ್ನಡ ಪತ್ರಿಕೋದ್ಯಮದ ಹೊಸಶಕೆ ಪ್ರಾರಂಭವಾಗಿ ಇಪ್ಪತ್ತೊಂದನೆ ಶತಮಾನದ ಆರಂಭದ ವೇಳೆಗೆ ಅಂದರೆ ಈಗ ತನ್ನ ಉತ್ತುಂಗವನ್ನು ತಲುಪಿ ಆಧುನಿಕತೆಯ ಹೊಸ ಮೆರುಗಿನಿಂದ ರಂಜಿಸುತ್ತಿದೆ. ಅತ್ಯಾಧುನಿಕತೆಯ ಆವಿಷ್ಕಾರಗಳು ಇದನ್ನು ಇನ್ನೂ ಯಾವ ಎತ್ತರಕ್ಕೆ ಕೊಂಡೊಯ್ಯಬಹುದೋ ಈಗಲೇ ಹೇಳಲಾಗುವುದಿಲ್ಲ. ಆದರೆ ವಿದ್ಯುನ್ಮಾನ ಮಾಧ್ಯಮಗಳು ಸಮಾಜವನ್ನು ಸಾರಾಸಗಟಾಗಿ ಆಕ್ರಮಿಸಿಕೊಳ್ಳ ಹೊರಟಿರುವ ಹಿನ್ನೆಲೆಯಲ್ಲಿ ಮುದ್ರಣರಂಗವೂ ಕಂಪ್ಯೂಟರ್‌ನಂತಹ ವಿದ್ಯುನ್ಮಾನ ಮಾಧ್ಯಮವನ್ನೂ ಅತ್ಯಾಧುನಿಕ ಮುದ್ರಣ ಯಂತ್ರಗಳನ್ನೂ ಅವಲಂಬಿಸಿ ಇತರ ಮಾಧ್ಯಮಗಳ ಸವಾಲಿಗೆ ತೀಕ್ಷ್ಣ ಜವಾಬು ನೀಡುತ್ತಿರುವ ಸ್ಥಿತಿಯನ್ನಂತೂ ಈಗ ತಲುಪಿದೆ. ಇದಲ್ಲದೆ ಪತ್ರಿಕಾ ವಲಯದೊಳಗೇ ಅನೇಕ ಬಗೆಯ ಸವಾಲುಗಳಿರುವುದೂ ಅಧ್ಯಯನದ ಸಂದರ್ಭದಲ್ಲಿ ತಿಳಿದು ಬಂದಿದೆ. ಇದನ್ನೆಲ್ಲ ವಿಶ್ಲೇಷಿಸುವುದಕ್ಕೆ ಮುನ್ನ ಕನ್ನಡದಲ್ಲಿ ಹೊರಬರುತ್ತಿರುವ ಪತ್ರಿಕಾ ವರ್ಗಗಳನ್ನು ತಿಳಿಯಬಹುದು.

ಕನ್ನಡದ ಪತ್ರಿಕೆಗಳನ್ನು ನಾವು ಮುಖ್ಯವಾಗಿ ಮೂರು ವಿಧಗಳಲ್ಲಿ ಗುರುತಿಸಬಹುದು.

- ಅವು ಹೊರಡುವ ಸಮಯದ ಆಧಾರದ ಮೇಲೆ.
- ಅವು ಆವರ್ತನಗೊಳ್ಳುವ ಸಂಖ್ಯೆಯ ಆಧಾರದ ಮೇಲೆ.
- ಅವು ನೀಡುವ ವಸ್ತು ವಿಷಯದ ಆಧಾರದ ಮೇಲೆ.

<u>ಹೊರಡುವ ಸಮಯದ ಆಧಾರದ ಮೇಲೆ :</u> ಮುಖ್ಯ ಪತ್ರಿಕೆಗಳು ಸಾಧಾರಣವಾಗಿ ಪ್ರಕಟಗೊಳ್ಳುವುದು ಬೆಳಗ್ಗೆಯೇ. ಪ್ರಾತಃಕಾಲದಲ್ಲೇ ನಿದ್ದೆಯಿಂದೆದ್ದ ಜನತೆಗೆ ಹೊಸ ಸುದ್ದಿಗಳನ್ನು ತಲುಪಿಸುವುದರಿಂದಲೇ ಅವು ಪ್ರಾಮುಖ್ಯತೆ ಗಳಿಸಿಕೊಳ್ಳುತ್ತವೆ ಎಂದೂ ಹೇಳಬಹುದು. ಬೆಳಗಿನ ಪ್ರಮುಖ ಪತ್ರಿಕೆಗಳಲ್ಲಿ ಉದಾಹರಣೆಯಾಗಿ ಸಂಯುಕ್ತ ಕರ್ನಾಟಕ, ಕನ್ನಡಪ್ರಭ, ಪ್ರಜಾವಾಣಿ, ಉದಯವಾಣಿ, ವಿಜಯ ಕರ್ನಾಟಕ ಮುಂತಾದುವನ್ನು ಹೆಸರಿಸಬಹುದು. ಇವು ರಾಜಧಾನಿ ಬೆಂಗಳೂರಿನಿಂದ ಹಾಗೂ ಇವುಗಳಲ್ಲಿ ಕೆಲವು, ಕೆಲವು ಜಿಲ್ಲೆಗಳಿಂದಲೂ ಪ್ರಕಟಗೊಳ್ಳುತ್ತಿವೆ. ಇವಲ್ಲದೆ ಬೆಳಗಿನ ಪತ್ರಿಕೆಗಳಲ್ಲಿ ಜಿಲ್ಲಾ ಮಟ್ಟದ ಪತ್ರಿಕೆಗಳೂ ಸೇರಿರುತ್ತವೆ. ಉದಾಹರಣೆಗೆ ಆಂದೋಲನ, ಕ್ರಾಂತಿ, ಕನ್ನಡ ಜನ ಅಂತರಂಗ, ಮೈಸೂರು ಮಿತ್ರ ಮುಂತಾದವು. ಇವುಗಳಲ್ಲಿ ಕೆಲವು ಒಂದಕ್ಕಿಂತಲೂ ಹೆಚ್ಚು ಜಿಲ್ಲೆಗಳಿಗೂ ವ್ಯಾಪಿಸಿವೆ.

ಬೆಳಗಿನ ಪತ್ರಿಕೆಗಳಲ್ಲದೆ, ಸಂಜೆ ಪತ್ರಿಕೆಗಳೂ ಜನರನ್ನು ತಲುಪುತ್ತಿವೆ. ಆದರೆ ಸಹಜವಾಗಿಯೇ ಸಂಜೆ ಪತ್ರಿಕೆಗಳ ಆವರ್ತನೆ ಹೆಚ್ಚಾಗಿರುವುದಿಲ್ಲ. ಅದಕ್ಕೆ ಕಾರಣ ಬೆಳಗ್ಗಿನ ಪತ್ರಿಕೆಗಳ ಮೂಲಕ ಸುದ್ದಿಗಳನ್ನು ಗ್ರಹಿಸಿಕೊಂಡ ವ್ಯಕ್ತಿ ರಾತ್ರಿ ನಿದ್ದೆಗೆ ಹೋಗುವವರೆಗೂ ಹಲವು ಮೂಲಗಳಿಂದ, ತನಗೆ ತಿಳಿದೋ ತಿಳಿಯದೆಯೋ ಒಂದಿಷ್ಟು ಸುದ್ದಿ-ಮಾಹಿತಿ ಸಂಗ್ರಹಿಸಿರುತ್ತಾನೆ. ಉದಾಹರಣೆಗೆ ಜನಪ್ರಿಯ ಚಿತ್ರನಟ ಸತ್ತುಹೋದನಂತೆ, ಬೆಂಗಳೂರು-ಹುಬ್ಬಳ್ಳಿ ರೈಲಿನಲ್ಲಿ ಬಾಂಬ್ ಇತ್ತಂತೆ ಇಂತಹ ಸುದ್ದಿಗಳು ತಾವೇ ತಾವಾಗಿ ಬಾಯಿಂದ ಬಾಯಿಗೆ ಹರಿಯುತ್ತವೆ. ಅಂತಹ ಪ್ರಮುಖ ಸುದ್ದಿಯ ಸೂಚನೆ ಸಿಕ್ಕಿದಾಗ ಅದನ್ನೂ ಖಾತ್ರಿಪಡಿಸಿಕೊಂಡು ಕುತೂಹಲ ತಣಿಸಿಕೊಳ್ಳುವುದಕ್ಕಾಗಿ ಆ ತಕ್ಷಣಕ್ಕೆ ದೊರೆಯಬಹುದಾದ ಸಂಜೆ ಪತ್ರಿಕೆಗಳನ್ನೋ, ರೇಡಿಯೊ ಹಾಗೂ ಇತ್ತೀಚಿನ ದಿನಗಳಲ್ಲಿ ದೂರದರ್ಶನವನ್ನೋ ಅವಲಂಬಿಸುತ್ತಾರೆ. ಹಾಗಾಗಿ ಸಂಜೆ ಪತ್ರಿಕೆಗಳಿಗೆ ಬೇಡಿಕೆ ಇದೆ. ಆದರೂ ಬೆಳಿಗ್ಗೆ ಪತ್ರಿಕೆ ಜನರ ಕೈ ಸೇರಿದ ಮೇಲೆ ಸಂಜೆ ಪತ್ರಿಕೆ ಜನರ ಕೈ ಸೇರುವವರೆಗೆ (ಸಾಧಾರಣವಾಗಿ ಮಧ್ಯಾಹ್ನದ ೨ ಗಂಟೆ) ಸಂಭವಿಸಬಹುದಾದ ಸುದ್ದಿಗಳನ್ನು ಮಾತ್ರ 'ಬಿಸಿ ದೋಸೆ'ಯಂತೆ ಮಾರಾಟ ಮಾಡಬೇಕಾಗುತ್ತದೆ. ಹಾಗಾಗಿ ಸಂಜೆ

ಪತ್ರಿಕೆಯೊಂದರ ಆಯುಸ್ಸು ಬೆಳಗಿನ ಪತ್ರಿಕೆಯ ಆಯುಸ್ಸಿಗಿಂತಲೂ ಕಡಿಮೆಯೇ. ಕಾಲದ ವಿರುದ್ಧ ಓಡುವುದರಿಂದಲೇ ಸಂಜೆ ಪತ್ರಿಕೆಗಳು ಭೌಗೋಳಿಕವಾಗಿಯೂ ಒಂದು ಮಿತಿ ಹೊಂದಿರುತ್ತವೆ. ಸಾಧಾರಣವಾಗಿ ರಾಜಧಾನಿ ಅಥವಾ ಜಿಲ್ಲಾ ಮುಖ್ಯ ಆಡಳಿತವಿರುವ ಸ್ಥಳಗಳಲ್ಲಿ ಅಂದರೆ ಸುದ್ದಿ ಹುಟ್ಟುವ ಸ್ಥಳಗಳಲ್ಲಿ ಮಾತ್ರ ಸಂಜೆ ಪತ್ರಿಕೆಗಳು ಯಶಸ್ವಿಯಾಗುತ್ತವೆ. ಉದಾಹರಣೆಗೆ, ಬೆಂಗಳೂರಿನಿಂದ ಹೊರಡುವ ಈ ಸಂಜೆ, ಸಂಜೆವಾಣಿ, ಇಂದು ಸಂಜೆಯಂತಹ ಪತ್ರಿಕೆಗಳನ್ನು ಬೆಂಗಳೂರಿನಿಂದ ಹೊರಗೆ ಸಾಗಾಟ ಮಾಡುವಷ್ಟರಲ್ಲಿಯೇ ಅವು ತಾಜಾತನ ಕಳೆದುಕೊಂಡಿರುತ್ತವೆ. ಅದೇ ರೀತಿ ಈ ಪತ್ರಿಕೆಗಳ ಆವರ್ತನೆಯೂ ಒಂದೇ ರೀತಿ ಇರುವುದಿಲ್ಲ. ಉದಾಹರಣೆಗೆ ಇವು ಅಚ್ಚಾಗಿರುವ ಸಮಯದಲ್ಲಿ ಒಂದು ಅತ್ಯಂತ ಮುಖ್ಯ ಘಟನೆ ಸಂಭವಿಸಿಬಿಟ್ಟರೆ ಆ ಸಂಜೆಯ ಪತ್ರಿಕೆಗಳಿಗೆ ಏಕಾಏಕಿ ಬೇಡಿಕೆ ಹೆಚ್ಚಾಗುತ್ತದೆ. ಸುದ್ದಿಯ ದೃಷ್ಟಿಯಿಂದ ಅದೊಂದು ನೀರಸ ದಿನವಾದರೆ ಆ ಸಂಜೆಯ ಪತ್ರಿಕೆಗಳ ಆವರ್ತನೆ ಕುಸಿಯುತ್ತದೆ.

ಬೆಳಗಿನ ಹಾಗೂ ಸಂಜೆ ಪತ್ರಿಕೆಗಳಲ್ಲದೆ, ಅವು ಪ್ರಕಟಗೊಳ್ಳುವ ಸಮಯದ ಆಧಾರದ ಮೇಲೆ ನಿಯತಕಾಲಿಕೆಗಳನ್ನು ಗುರುತಿಸಬಹುದು. ವಾರಕ್ಕೊಮ್ಮೆ ಪ್ರಕಟವಾಗುವ ಸಾಪ್ತಾಹಿಕ ಪತ್ರಿಕೆಗಳು, ೧೫ ದಿನಗಳಿಗೊಮ್ಮೆ ಹೊರಬರುವ ಪಾಕ್ಷಿಕ, ತಿಂಗಳ ಪತ್ರಿಕೆ ಮಾಸಿಕ ಅಲ್ಲದೆ ಸಾಂದರ್ಭಿಕವಾಗಿ ಹೊರಬರುವ ವಿಶೇಷ ಸಂಚಿಕೆಗಳನ್ನು ಈ ಗುಂಪಿನಲ್ಲಿ ಗಮನಿಸಬಹುದು.

**ವಾರ ಪತ್ರಿಕೆಗಳು :** ಸಾಧಾರಣವಾಗಿ ಇವು ಸುದ್ದಿ ಪತ್ರಿಕೆಗಳಲ್ಲ. ಆದರೆ ಸುದ್ದಿ ವಿಶ್ಲೇಷಣೆಗಳನ್ನು ಈ ಪತ್ರಿಕೆಗಳು ಒಳಗೊಳ್ಳುತ್ತವೆ. ಒಂದು ವಾರದ ಅವಧಿಯಲ್ಲಿ ಘಟಿಸಬಹುದಾದ ಒಂದು ಮುಖ್ಯ ಪ್ರಸಂಗವನ್ನು, ಪ್ರಚಲಿತ ವಿದ್ಯಮಾನದಂತೆ ವಿಶ್ಲೇಷಣೆಗೆ, ಅಭಿಪ್ರಾಯ ಸೃಷ್ಟಿಗೆ ಒಳಪಡಿಸಲು ಸಾಧ್ಯ. ಉದಾಹರಣೆಗೆ 'ಕರಣಂ ಮಲ್ಲೇಶ್ವರಿಗೆ ಒಲಂಪಿಕ್ಸ್‌ನ ತೂಕ ಎತ್ತುವ ಸ್ಪರ್ಧೆಯಲ್ಲಿ ಕಂಚಿನ ಪದಕ' ಎನ್ನುವ ಸುದ್ದಿಯ ಹಿನ್ನೆಲೆಯಲ್ಲಿ ಆಕೆಯ ಬದುಕು ಸಾಧನೆಗಳ, ಒಲಂಪಿಕ್ಸ್‌ನಲ್ಲಿ ಭಾರತದ ಸಾಧನೆಯ ಪಕ್ಷಿನೋಟವನ್ನು ವಾರಪತ್ರಿಕೆಯಲ್ಲಿ ಪ್ರಕಟಿಸಬಹುದು. ಹಾಗೆ '೨೦೦೧-೨೦೦೨ನೇ ಸಾಲಿನ ಬಜೆಟ್' ಮೇಲೆ ಒಂದು ವಿಶ್ಲೇಷಣೆಯನ್ನು ಪ್ರಕಟಿಸಬಹುದು. ಇಂತಹ ಕೆಲವು ವಿದ್ಯಮಾನಗಳನ್ನು ಹೊರತುಪಡಿಸಿದರೆ ಮುಖ್ಯವಾಗಿ ವಾರಪತ್ರಿಕೆಗಳು ರಂಜನೀಯ ಪತ್ರಿಕೆಗಳು. ಅವುಗಳಲ್ಲಿ ಕಥೆ, ಕಾದಂಬರಿ, ಕಾವ್ಯ, ಹಾಸ್ಯ ಸಿನೆಮಾ ಲೋಕದ ಸುದ್ದಿ-ವದಂತಿಗಳು, ಸಾಮಾಜಿಕ ಪಿಡುಗುಗಳಂತಹ ಜ್ವಲಂತ ಸಮಸ್ಯೆಗಳ ಬಗ್ಗೆ ತಿಳುವಳಿಕೆ ನೀಡುವ ಲೇಖನಗಳು ಪ್ರಕಟಗೊಳ್ಳುತ್ತವೆ. ಇಂತಹ ಪತ್ರಿಕೆಗಳ ಪೈಕಿ ಸುಧಾ, ತರಂಗ, ಕರ್ಮವೀರ, ಮಂಗಳಗಳಲ್ಲದೆ ಲಂಕೇಶ್ ಪತ್ರಿಕೆ, ಹಾಯ್ ಬೆಂಗಳೂರ್‌ನಂತಹ ಟ್ಯಾಬ್ಲಾಯ್ಡ್‌ಗಳನ್ನೂ ಉಲ್ಲೇಖಿಸಬಹುದು. ಆದರೆ ಲಂಕೇಶ್ ಪತ್ರಿಕೆ ಹಾಗೂ ಹಾಯ್ ಬೆಂಗಳೂರ್ ಹೆಚ್ಚಾಗಿ ರಾಜಕೀಯ ಮತ್ತು ಸಾರ್ವಜನಿಕ ಸಂಸ್ಥೆಗಳನ್ನು, ವ್ಯವಸ್ಥೆಯನ್ನು ಟೀಕಿಸುವ, ಅಪರಾಧವನ್ನು ಬಯಲಿಗೆಳೆವ ತನಿಖಾವರದಿಗಳಿಂದ ಕೂಡಿರುತ್ತವೆ.

**ಪಾಕ್ಷಿಕಗಳು:** ಎರಡು ವಾರಕ್ಕೊಮ್ಮೆ ಪ್ರಕಟಗೊಳ್ಳುವ ಪಾಕ್ಷಿಕಗಳು ಸಾಧಾರಣವಾಗಿ ವಾರಪತ್ರಿಕೆಗಳಿಗಿಂತ ಭಿನ್ನವಾಗಿರುವುದಿಲ್ಲ. ಇವೂ ಸಹ ಮನರಂಜನೆಯ ಜೊತೆಗೆ ಮಾಹಿತಿ, ವಿಮರ್ಶೆ, ವಿಶ್ಲೇಷಣೆಗಳನ್ನು ಹೊತ್ತು ತರುತ್ತವೆ. ಕನ್ನಡದಲ್ಲಿ ಈಗ ಉದಾಹರಿಸಬಹುದಾದ ಪ್ರಮುಖ ಪಾಕ್ಷಿಕ ಪತ್ರಿಕೆ ಇಲ್ಲ ಎಂದೇ ಹೇಳಬಹುದು.

**ಮಾಸ ಪತ್ರಿಕೆ :** ಇವು ಸಂಪೂರ್ಣವಾಗಿ ಸೃಜನ ನೆಲೆಯ ಪತ್ರಿಕೆಗಳು. ತಿಂಗಳಿಗೊಮ್ಮೆ ಪ್ರಕಟಗೊಳ್ಳುವ ಮಾಸ ಪತ್ರಿಕೆಗಳು ಧಾರಾವಾಹಿಗಳನ್ನು ಪ್ರಕಟಿಸುವುದು ಸಾಧ್ಯವಿಲ್ಲ. ಓದುಗ ಒಂದೊಂದು ಕಂತಿಗೂ ಒಂದೊಂದು ತಿಂಗಳು ಕಾಯುವ ವ್ಯವಧಾನ ಹೊಂದಿರಲಾರ. ಹಾಗಾಗಿ ಬಿಡಿ ಕಥೆ, ಕವಿತೆ, ಹನಿಗವಿತೆ, ಹೆಚ್ಚಾಗಿ ಚಿನಕುರುಳಿ, ಹಾಸ್ಯ ವಿಡಂಬನೆಗಳನ್ನು ಒಳಗೊಳ್ಳುವ ಮಾಸಪತ್ರಿಕೆಗಳು ಲಘು ಓದಿಗೆ ಒಪ್ಪುತ್ತವೆ. ಕೆಲವು ಮಾಸಪತ್ರಿಕೆಗಳು ಕನ್ನಡ ಸಾಹಿತ್ಯ ಪರಂಪರೆ ಕುರಿತಂತೆ ಗಂಭೀರ ಚಿಂತನೆ

ನಡೆಸುವ ನಿಟ್ಟಿನಲ್ಲೂ ಪ್ರಯತ್ನಿಸುತ್ತವೆ. ಕನ್ನಡದ ಮಾಸ ಪತ್ರಿಕೆಗಳ ಪೈಕಿ ಮಯೂರ, ಮಲ್ಲಿಗೆ, ತುಷಾರ, ಕಸ್ತೂರಿ, ಚಂದಮಾಮ ಮುಂತಾದ ಪತ್ರಿಕೆಗಳನ್ನು ಹೆಸರಿಸಬಹುದು.

**ದ್ವೈಮಾಸಿಕ ಪತ್ರಿಕೆಗಳು :** ಎರಡು ತಿಂಗಳಿಗೊಮ್ಮೆ ಬೆಳಕು ಕಾಣುವ ಪತ್ರಿಕೆಗಳು ಹೆಚ್ಚಾಗಿ ಸಾಹಿತ್ಯಕ ಪತ್ರಿಕೆಗಳೇ ಆಗಿರುತ್ತವೆ. ವಿಶ್ವವಿದ್ಯಾಲಯಗಳ ಪ್ರಸಾರಾಂಗಗಳು, ವಿವಿಧ ಸಾಹಿತ್ಯ ಮತ್ತು ಭಾಷಾ ಸಂಸ್ಥೆಗಳು ಪ್ರಕಟಿಸುವ ದ್ವೈಮಾಸಿಕ ಪತ್ರಿಕೆಗಳಿಗೆ ಖಾಯಂ ಚಂದಾದಾರರಿದ್ದು ಸಾಧಾರಣವಾಗಿ ಸಾಮಾನ್ಯ ಮಾರುಕಟ್ಟೆಗಳಲ್ಲಿ ಲಭ್ಯವಿರುವುದಿಲ್ಲ. ಇದೇ ರೀತಿ ತ್ರೈಮಾಸಿಕ ಹಾಗೂ ಅರ್ಧವಾರ್ಷಿಕ ಪತ್ರಿಕೆಗಳು, ಸಂಘ, ಸಂಸ್ಥೆಗಳ ಚಟುವಟಿಕೆಗಳನ್ನು ಪ್ರತಿಬಿಂಬಿಸುವ ಮುಖಪತ್ರಿಕೆ (News letters) ಗಳೂ ಕನ್ನಡದಲ್ಲಿ ಪ್ರಕಟಗೊಳ್ಳುತ್ತವೆ.

**ವಿಶೇಷ ಸಂಚಿಕೆ ಹಾಗೂ ಸ್ಮರಣ ಸಂಚಿಕೆಗಳು :** ಯುಗಾದಿ, ದೀಪಾವಳಿಯಂತಹ ವಿಶೇಷ ಸಂದರ್ಭಗಳಲ್ಲಿ ವಿಶೇಷ ಸಂಚಿಕೆಗಳನ್ನು ಪ್ರಕಟಿಸಲಾಗುತ್ತದೆ. ಇಂತಹ ವಿಶೇಷಾಂಕಗಳನ್ನು ಸಾಧಾರಣವಾಗಿ ದಿನಪತ್ರಿಕೆಗಳನ್ನು ಪ್ರಕಟಿಸುವ ಸಂಸ್ಥೆಗಳೇ ಹೊರಡಿಸುತ್ತವೆ. ಇದಕ್ಕಾಗಿ ಹೆಚ್ಚು ವ್ಯಯಮಾಡದೆ, ಇರುವ ಸೌಲಭ್ಯಗಳನ್ನೇ ಬಳಸಿಕೊಂಡು ವಿಶೇಷಾಂಕಗಳನ್ನು ಓದುಗರಿಗೆ ನೀಡುತ್ತವೆ. ವರ್ಷಕ್ಕೆ ಒಂದೋ ಎರಡೋ ವಿಶೇಷಾಂಕಗಳನ್ನು ಪ್ರಕಟಿಸುವುದಕ್ಕಾಗಿಯೇ ಪುಸ್ತಕೋದ್ಯಮವನ್ನು ಹಿಡಿಯುವುದು ಜಾಣತನವಲ್ಲವಾದ್ದರಿಂದ, ಈಗಾಗಲೇ ಪತ್ರಿಕಾವಲಯದಲ್ಲಿ ಪ್ರತಿಷ್ಠಾಪಿತವಾದ ಪತ್ರಿಕಾ ಸಂಸ್ಥೆಗಳು ಇಂತಹ ವಿಶೇಷಾಂಕಗಳನ್ನು ಪ್ರಕಟಿಸಿ ತಮ್ಮ ಓದುಗರನ್ನು ಇನ್ನಷ್ಟು ಹತ್ತಿರ ಸೆಳೆಯುತ್ತವೆ. ವಿಶೇಷಾಂಕಗಳಂತೂ ಉತ್ತಮ, ಸಾಹಿತ್ಯಕ ಮೌಲ್ಯದ ಕತೆ, ಕವನ ಮತ್ತಿತರ ಸೃಜನ ಸಾಹಿತ್ಯ, ಸಿನಿಮಾದಂತಹ ಗ್ಲಾಮರಸ್ ಮಾಧ್ಯಮದ ಸುದ್ದಿ, ಸಂದರ್ಶನಗಳನ್ನು, ಹಾಸ್ಯ, ಕಲೆ, ಕ್ರೀಡೆ ಮುಂತಾದ ಸದಭಿರುಚಿಯ ವಿಭಾಗಗಳನ್ನು ಒಳಗೊಂಡಿರುತ್ತವೆ.

ಸ್ಮರಣ ಸಂಚಿಕೆಗಳು ಕೆಲವು ಅನನ್ಯ, ಸ್ಮರಣೀಯ ಸಂದರ್ಭಗಳಲ್ಲಿ ಹೊರಬರುತ್ತವೆ. ಗಣ್ಯವ್ಯಕ್ತಿಗಳ ಸನ್ಮಾನ, ಅಭಿನಂದನೆ, ಸಂಘ-ಸಂಸ್ಥೆಗಳ ವಾರ್ಷಿಕೋತ್ಸವ, ರಜತ, ಸ್ವರ್ಣ, ವಜ್ರ, ಶತಮಾನ ಹಾಗೂ ಅಮೃತೋತ್ಸವಗಳು, ಶಾಲಾ-ಕಾಲೇಜಿನ ವಾರ್ಷಿಕೋತ್ಸವಗಳ ಸಂದರ್ಭಗಳಲ್ಲಿ ಪ್ರಕಟಗೊಳ್ಳುತ್ತವೆ. ಸಮಾರಂಭಗಳಿಗೆ ನಿಧಿ ಸಂಗ್ರಹಿಸುವ ಮೂಲವಾಗಿಯೂ ಸ್ಮರಣ ಸಂಚಿಕೆಗಳು ಪ್ರಕಟಗೊಳ್ಳುವುದರಿಂದ ಇವುಗಳಲ್ಲಿ ಜಾಹೀರಾತುಗಳೇ ಹೆಚ್ಚಾಗಿರುವುದು ಸ್ವಾಭಾವಿಕ.

<u>**ಆವರ್ತನ ಸಂಖ್ಯೆಯ ಆಧಾರದ ಮೇಲೆ :**</u> ಪತ್ರಿಕೆಗಳ ಆವರ್ತನ ಸಂಖ್ಯೆಯ ಆಧಾರದ ಮೇಲೆ ಬೆಳಗಿನ ಪತ್ರಿಕೆಗಳನ್ನು ೩ ವರ್ಗಗಳಾಗಿ ಮಾಡಬಹುದು.

- ಸಣ್ಣ ಪತ್ರಿಕೆ
- ಮಧ್ಯಮ ಪತ್ರಿಕೆ
- ದೊಡ್ಡ ಪತ್ರಿಕೆ

**ಸಣ್ಣ ಪತ್ರಿಕೆಗಳು :** ಸಾಧಾರಣವಾಗಿ ದೈನಿಕ ಪತ್ರಿಕೆಗಳೇ ಈ ಮೂರೂ ವರ್ಗಗಳಲ್ಲಿ ಸೇರಿರುತ್ತವೆ. ಪ್ರಕಟಣಾ ದಿನವೊಂದಕ್ಕೆ ೨೫,೦೦೦ ಪ್ರತಿಗಳವರೆಗೆ ಆವರ್ತನೆ ಹೊಂದುವ ಪತ್ರಿಕೆಗಳೇ ಸಣ್ಣ ಪತ್ರಿಕೆಗಳು ಎನಿಸಿಕೊಳ್ಳುತ್ತವೆ. ಸಾಧಾರಣವಾಗಿ ಈ ಪತ್ರಿಕೆಗಳು ತಾಲ್ಲೂಕು ಮಟ್ಟದಲ್ಲಿ ಚಲಾವಣೆಗೊಳ್ಳುತ್ತಿರುತ್ತವೆ. ಪ್ರಮುಖವಾಗಿ ಸ್ಥಳೀಯ ಸುದ್ದಿಗಳಿಗೆ ಸಣ್ಣ ಪತ್ರಿಕೆಗಳು ಪ್ರಾಶಸ್ತ್ಯ ನೀಡುತ್ತವೆ. ಹಾಗೆ ಸಣ್ಣ ಪತ್ರಿಕೆಗಳು ಆದಷ್ಟು ಕಡಿಮೆ ಪುಟಗಳಿಗೆ ಸೀಮಿತಗೊಂಡಿರುತ್ತವೆ. ೨ ಪುಟಗಳಿದ್ದ 'ಸಾಧ್ವಿ' ಪತ್ರಿಕೆ ಮೈಸೂರು ನಗರದಲ್ಲಿ ಅತ್ಯಂತ ಜನಪ್ರಿಯವಾಗಿದ್ದ ಪತ್ರಿಕೆಯಾಗಿತ್ತು. ಅಗಲವಾದ ಭಿತ್ತಿಪತ್ರದ ರೂಪದಲ್ಲಿ ಸಣ್ಣ ಪತ್ರಿಕೆಗಳು ಜನರನ್ನು ತಲುಪುತ್ತವೆ.

**ಮಧ್ಯಮ ಪತ್ರಿಕೆಗಳು :** ಪ್ರಕಟಣಾ ದಿನವೊಂದಕ್ಕೆ ೨೫,೦೦೧ ರಿಂದ ೭೫,೦೦೦ ಪ್ರತಿಗಳಷ್ಟು ಆವರ್ತನೆಗೊಳ್ಳುವ ಪತ್ರಿಕೆಗಳು ಮಧ್ಯಮ ಪತ್ರಿಕೆಗಳು ಎನಿಸಿಕೊಳ್ಳುತ್ತವೆ. ಜಿಲ್ಲಾ ಕೇಂದ್ರಗಳಿಂದ ಪ್ರಕಟಗೊಳ್ಳುವ ಈ ಪತ್ರಿಕೆಗಳು ಸ್ಥಳೀಯ ಆಸಕ್ತಿಯ ವಿಶೇಷ ವಿಷಯಗಳತ್ತ ಕೇಂದ್ರೀಕೃತವಾಗಿದ್ದರೂ ರಾಜ್ಯದ ಪ್ರಮುಖ ಸುದ್ದಿಗಳನ್ನು ಕಡೆಗಣಿಸುವುದಿಲ್ಲ. ಒಂದು ದೃಷ್ಟಿಯಿಂದ ನೋಡಿದರೆ ಮಧ್ಯಮ ಪತ್ರಿಕೆಗಳು ಭಾರೀ ಪತ್ರಿಕೆಗಳಿಗೆ ಪೈಪೋಟಿ ಒಡ್ಡುತ್ತಿರುವುದು ಗೋಚರವಾಗುತ್ತದೆ. ಈ ವಿಚಾರವನ್ನು ಇದೇ ಅಧ್ಯಾಯದಲ್ಲಿ ಮುಂದೆ ಪ್ರಸ್ತಾಪಿಸುತ್ತೇನೆ.

ಭಾರೀ ಪತ್ರಿಕೆಗಳು : ರಾಜ್ಯಾದ್ಯಂತ ಪ್ರಸಾರವಿರುವ ಪತ್ರಿಕೆಗಳಿವು. ಏಕಕಾಲಕ್ಕೆ ಹಲವು ಆವೃತ್ತಿಗಳಲ್ಲಿ ಮುದ್ರಣಗೊಂಡು ವಿವಿಧ ವಿಭಾಗಗಳಲ್ಲಿ ಆವರ್ತನೆಗೊಳ್ಳುತ್ತವೆ. ರಾಜ್ಯ, ರಾಷ್ಟ್ರಮಟ್ಟದ ಸುದ್ದಿಗಳನ್ನಷ್ಟೇ ಅಲ್ಲದೆ ಅಂತರರಾಷ್ಟ್ರೀಯ ಮಟ್ಟದ ಸುದ್ದಿಗಳಿಗೂ ಭಾರೀ ಪತ್ರಿಕೆಗಳಲ್ಲಿ ಪ್ರಾಶಸ್ತ್ಯವಿರುತ್ತದೆ. ಆದರೂ ಸ್ಥಳೀಯತೆಯ ದೃಷ್ಟಿಯಿಂದಾಗಿ, ಸುದ್ದಿಯ ಗಂಭೀರತೆಯ ಆಧಾರದ ಮೇಲೆ ರಾಜ್ಯದ ಸುದ್ದಿಗಳಿಗೇ ಪ್ರಾಶಸ್ತ್ಯ ಹಾಗೂ ಆದ್ಯತೆ ನೀಡಲಾಗುತ್ತದೆ. ಪ್ರಕಟಣಾ ದಿನವೊಂದಕ್ಕೆ ೭೫,೦೦೦ ಕ್ಕಿಂತಲೂ ಹೆಚ್ಚು ಪ್ರತಿಗಳು ಆವರ್ತನೆ ಗೊಳ್ಳುತ್ತವೆ. ಉದಾಹರಣೆಯಾಗಿ ಪ್ರಜಾವಾಣಿ, ಸಂಯುಕ್ತ ಕರ್ನಾಟಕ, ಉದಯ ವಾಣಿ, ಇವುಗಳನ್ನು ಹೆಸರಿಸಬಹುದು.

ವಸ್ತು ವಿಷಯದ ಆಧಾರದ ಮೇಲೆ : ಪತ್ರಿಕೆಗಳು ಒಳಗೊಳ್ಳುವ ವಿಷಯಗಳ ಆಧಾರದ ಮೇಲೆಯೂ ಅವನ್ನು ಗುರುತಿಸಬಹುದು. ವಿಶೇಷ ಓದುಗರನ್ನು ಸೆಳೆಯುವ ನಿಟ್ಟಿನಲ್ಲಿ ಇಂತಹ ಪತ್ರಿಕೆಗಳು ಪ್ರಕಟಗೊಳ್ಳುತ್ತವೆ. ಸಾಧಾರಣವಾಗಿ ಇವು ನಿಯತಕಾಲಿಕೆಗಳು. ಮಹಿಳೆ, ಮಕ್ಕಳು, ಕ್ರೀಡಾ ಪ್ರೇಮಿಗಳು, ಮುಂತಾದ ನಿರ್ದಿಷ್ಟ ವರ್ಗಗಳನ್ನು ಇವು ತಲುಪುತ್ತವೆ. ಇವನ್ನು ಕ್ರೀಡಾ ಪತ್ರಿಕೆ, ಆರ್ಥಿಕ ಪತ್ರಿಕೆ, ಸಿನೆಮಾ ಪತ್ರಿಕೆ, ಮಕ್ಕಳ ಮನರಂಜನಾ ಪತ್ರಿಕೆ, ಆರೋಗ್ಯ ಪತ್ರಿಕೆ, ಮಹಿಳಾ ಪತ್ರಿಕೆ, ಕೃಷಿ ಪತ್ರಿಕೆ ಮುಂತಾಗಿ ಗುರುತಿಸಬಹುದು.

## ಪತ್ರಿಕೆಗಳು ಒಳಗೊಳ್ಳುವ ಶೀರ್ಷಿಕೆಗಳು

ಈ ಮಹಾಪ್ರಬಂಧದ ರಚನೆಗಾಗಿ ಭಾರಿ ಹಾಗೂ ಮಧ್ಯಮ ಪತ್ರಿಕೆಗಳ ಮಟ್ಟಿಗೆ ಮಾತ್ರ, ಅದರ ಶೀರ್ಷಿಕೆ ಹಾಗೂ ವಿಷಯಕ್ಕೆ ಸಂಬಂಧಿಸಿದಂತೆ ಅಧ್ಯಯನ ನಡೆಯಿಸಲಾಯಿತು. ಈ ಸಂದರ್ಭದಲ್ಲಿ ಗಮನಿಸಿದ ಸಂಗತಿಯೆಂದರೆ, ದೂರದರ್ಶನ ರೇಡಿಯೊಗಳಂತೆ ತನ್ನ ಓದುಗರನ್ನು ಪತ್ರಿಕೆಗಳು ಸಾಮಾನ್ಯ ಓದುಗರು, ವಿಶೇಷ ಓದುಗರು ಎಂದು ವರ್ಗೀಕರಿಸಿಕೊಳ್ಳುವುದಿಲ್ಲ. ಒಂದು ಪತ್ರಿಕೆಯಲ್ಲಿರುವ ಎಲ್ಲ ಮಾಹಿತಿಯನ್ನು ಎಲ್ಲರೂ ಗ್ರಹಿಸುವಂಥದಾಗಿರುತ್ತವೆ. ಪತ್ರಿಕೆಯ ವಿಷಯಗಳನ್ನು ಓದುಗರೇ ವರ್ಗೀಕರಿಸಿಕೊಳ್ಳುತ್ತಾರೆ ಅಥವಾ ತಮ್ಮ ಆಸಕ್ತಿಗನುಸಾರ ಆಯ್ಕೆ ಮಾಡಿಕೊಳ್ಳುತ್ತಾರೆ. ಆಸಕ್ತಿ ಇರಲಿ ಇಲ್ಲದಿರಲಿ ಒಮ್ಮೆ ಕಣ್ಣು ಹಾಯಿಸುವುದರಿಂದಲೂ ಭಾರೀ ನಷ್ಟವೇನೂ ಆಗುವುದಿಲ್ಲ ಎಂದು ಓದುಗರಿಗೂ ಗೊತ್ತಿದೆ.

ಈ ಮಹಾಪ್ರಬಂಧದ ಸಂದರ್ಭದಲ್ಲಿ ಅಧ್ಯಯನಕ್ಕಾಗಿ ೨೦೦೧ರ ಮಾರ್ಚ್ ೧೯ರಿಂದ ಮಾರ್ಚ್ ೨೫ರವರೆಗಿನ ೫ ದೊಡ್ಡ ದಿನಪತ್ರಿಕೆಗಳು, ೫ ಮಧ್ಯಮ ಪತ್ರಿಕೆಗಳನ್ನು ಆಯ್ಕೆ ಮಾಡಿಕೊಳ್ಳಲಾಯಿತು. ಈ ಒಂದು ವಾರದ ಅವಧಿಯಲ್ಲಿ ಯಾವ ಯಾವ ಪತ್ರಿಕೆಗಳು ಏನೇನು ಶೀರ್ಷಿಕೆಗಳನ್ನು ಹೊಂದಿವೆ ಎಂದು ಅಧ್ಯಯನ ಮಾಡಲಾಯಿತು.

ವೃತ್ತ ಪತ್ರಿಕೆಗಳು ಮುಖ್ಯವಾಗಿ ಸುದ್ದಿ ವಾಹಕಗಳಾಗಿರುವುದರಿಂದ ರೇಡಿಯೊ, ದೂರದರ್ಶನ ಕಾರ್ಯಕ್ರಮಗಳಂತೆ ನಿಗದಿತ ವಿಷಯಗಳನ್ನು ಮೊದಲೇ ಸಿದ್ಧಮಾಡಿಕೊಂಡಿರುವುದು ಸಾಧ್ಯವಿಲ್ಲ. ಅನಿರೀಕ್ಷಿತ ಘಟನೆಗಳು, ರಾಜಕೀಯದ ತಿರುವುಗಳು,

ತಂತ್ರಗಳು, ಸಾಮಾಜಿಕ ವರದಿಗಳು, ಅಪರಾಧ ಹಾಗೂ ಶಿಕ್ಷೆ ಮುಂತಾಗಿ ಒಟ್ಟಿನಲ್ಲಿ ಎಲ್ಲವೂ ಅನಿರೀಕ್ಷಿತವಾಗಿ ದೊರೆಯುವ ಸುದ್ದಿಗಳೇ ಎಲ್ಲ ಪತ್ರಿಕೆಗಳಲ್ಲೂ, ಎಲ್ಲ ದಿನದ ಪತ್ರಿಕೆಗಳಲ್ಲೂ ಎದ್ದು ತೋರುತ್ತವೆ. ಆದರೂ ಕೆಲವು ನಿರ್ದಿಷ್ಟ ವಿಷಯಗಳಲ್ಲಿ ನಿರ್ದಿಷ್ಟ ಮಾಹಿತಿಗೆ ಸಂಬಂಧಪಟ್ಟಂತೆಯೂ ನಿರ್ದಿಷ್ಟ 'ಶೈಲಿ'ಯನ್ನು ಎಲ್ಲ ಪತ್ರಿಕೆಗಳೂ ರೂಪಿಸಿಕೊಂಡಿರುವುದು ಗಮನಾರ್ಹ.

ಕನ್ನಡದ ದೊಡ್ಡ ಪತ್ರಿಕೆಗಳ ಸಾಲಿಗೆ ಸೇರಿರುವ ಪ್ರಜಾವಾಣಿ, ಕನ್ನಡಪ್ರಭ, ಸಂಯುಕ್ತ ಕರ್ನಾಟಕ, ಉದಯವಾಣಿ ಹಾಗೂ ವಿಜಯ ಕರ್ನಾಟಕ ಪತ್ರಿಕೆಗಳು ಓದುಗರನ್ನು ಆಕರ್ಷಿಸಲು ನಡೆಸಿರುವ ಪ್ರಯತ್ನಗಳನ್ನು ಗಮನಿಸಿದಾಗ, ಈ ದೊಡ್ಡ ಪತ್ರಿಕೆಗಳ ನಡುವೆಯೇ ಪರಸ್ಪರ ತೀವ್ರ ಪೈಪೋಟಿ ಇರುವುದೂ ಗೋಚರವಾಗುತ್ತದೆ. ಓದುಗರನ್ನು ಆಕರ್ಷಿಸುವುದಕ್ಕಾಗಿ ಇವೆಲ್ಲ ಎಷ್ಟು ವಿಷಯಗಳ ಕಡೆ ಗಮನಹರಿಸಿವೆ ಎನ್ನುವುದನ್ನು ಪಟ್ಟಿ - ೧೬ರಲ್ಲಿ ಕೊಡಲಾಗಿದೆ.

ಸೋಮವಾರದಂದು ಸಂಯುಕ್ತ ಕರ್ನಾಟಕ ಹೊರತುಪಡಿಸಿ ಉಳಿದ ೪ ಪತ್ರಿಕೆಗಳೂ ಕ್ರೀಡೆ, ಆರ್ಥಿಕತೆ, ನಾಡು-ನುಡಿಗೆ ಸಂಬಂಧಿಸಿದಂತೆ ಹೆಚ್ಚುವರಿ ಪುರವಣಿಗಳನ್ನು ನೀಡಿವೆ. ಮಂಗಳವಾರ ಎಲ್ಲಾ ೫ ಪತ್ರಿಕೆಗಳೂ ಕೇವಲ ೧೦-೧೨ ಪುಟಗಳನ್ನು ಹೊಂದಿದ್ದು ಯಾವುದೇ ಪುರವಣಿಯನ್ನು ಹೊತ್ತಿಲ್ಲ. ಬುಧವಾರ, ಗುರುವಾರ ಪತ್ರಿಕೆಗಳ ನಡುವೆ ಸಮತೋಲನ ಮಾಡಿಕೊಳ್ಳುವಂತೆ ಪುರವಣಿಗಳನ್ನು ನೀಡಲಾಗಿದೆ. ಆದರೆ ಶುಕ್ರವಾರ ಮಾತ್ರ ಎಲ್ಲ ಪತ್ರಿಕೆಗಳೂ ಸಿನೆಮಾ ಪುರವಣಿಗಳನ್ನು, ಜಾಹೀರಾತುಗಳನ್ನು ವೈಭವೀಕರಿಸಿರುವುದು ದೃಷ್ಟಿ ಗೋಚರವಾಗುತ್ತದೆ. ಕನ್ನಡ ಚಿತ್ರರಂಗದಲ್ಲೂ ಶುಕ್ರವಾರವೇ ಚಿತ್ರಮಂದಿರಗಳಲ್ಲಿ ಸಿನೆಮಾ ಬಿಡುಗಡೆ ಮಾಡುವ ಪರಿಪಾಟ ನಡೆದು ಬಂದಿರುವುದೂ ಪತ್ರಿಕೆಗಳೂ ಸಿನೆಮಾ ವಿಚಾರಗಳನ್ನು ಪುರವಣಿಗಳಾಗಿ ನೀಡುವಂತೆ ಮಾಡಿವೆ ಎನ್ನಬಹುದು. ಒಟ್ಟಾರೆ ಓದುಗನನ್ನು ದೂರದರ್ಶನ, ರೇಡಿಯೊಗಳು ಸಿನೆಮಾಲೋಕದ ಮನರಂಜನೆ ನೀಡಿ ತಣಿಸುತ್ತಿರುವಂತೆಯೇ ಪತ್ರಿಕೆಗಳೂ ಸಿನೆಮಾ ಸುದ್ದಿಯನ್ನು, ಚಿತ್ರಗಳನ್ನು ಹೆಚ್ಚುಹೆಚ್ಚಾಗಿ ಬಳಸಿಕೊಳ್ಳುತ್ತಿರುವುದು ಗಮನಾರ್ಹ. ಭಾನುವಾರದ ಪುರವಣಿಗಳಲ್ಲೂ ಸಿನೆಮಾಕ್ಕಾಗಿ ಒಂದು ಅಂಕಣವಾದರೂ ಮೀಸಲಿರುತ್ತದೆ. ಭಾನುವಾರದ ಪುರವಣಿಗಳಲ್ಲಿ ಕಥೆ, ಕಾವ್ಯ, ಸಾಹಿತ್ಯಕ ಚರ್ಚೆ, ಮಹಿಳೆ, ಮಕ್ಕಳು, ಲಲಿತಕಲೆ, ಪ್ರತಿಭೆ, ಜ್ಯೋತಿಷ್ಯ, ಪ್ರಚಲಿತ ವಿದ್ಯಮಾನ ಕುರಿತ ಫೀಚರ್‌ಗಳು, ಸಾಧ್ಯವಾದಷ್ಟು ಮಟ್ಟಿಗೆ ಚಿತ್ರಗಳು, ವ್ಯಂಗ ಚಿತ್ರಗಳು, ಫೋಟೋಗಳನ್ನು ಪ್ರಕಟಿಸಲಾಗುತ್ತದೆ. ಬಣ್ಣದ ಚಿತ್ರಗಳನ್ನು ಬಳಸುವುದು, ಕೆಲವು ಪತ್ರಿಕೆಗಳು ಉತ್ತಮ ಗುಣಮಟ್ಟದ ಕಾಗದ ಬಳಸುವುದು, ಅಚ್ಚುಕಟ್ಟಾದ ಸುಂದರ ಮುದ್ರಣ ಹಾಗೂ ಪುಟ ವಿನ್ಯಾಸಗಳಿಂದಾಗಿ ಓದುಗರನ್ನು ಸೆಳೆಯುತ್ತವೆ.

ಪುರವಣಿಗಳಲ್ಲೂ ವಿಷಯ ವೈವಿಧ್ಯತೆಯನ್ನು ಗುರುತಿಸಬಹುದು. ಕೃಷಿ, ಕ್ರೀಡೆ, ಆರೋಗ್ಯ, ಶಿಕ್ಷಣ, ವಿಜ್ಞಾನ-ತಂತ್ರಜ್ಞಾನ, ಯುವಕರು, ಮಹಿಳಾ ಹಾಗೂ ಮಕ್ಕಳ ವಿಚಾರ, ಆರ್ಥಿಕ ಸ್ಥಿತಿಗತಿ, ವ್ಯಾಪಾರ-ವಾಣಿಜ್ಯ, ನಾಡು-ನುಡಿ ಹಾಗೂ ಸಾಹಿತ್ಯ-ಕಲೆ-ಸಂಗೀತ ವಿಮರ್ಶೆ ಹಾಗೂ ಇತರ ಮಾಧ್ಯಮಗಳ ಕಾರ್ಯವೈಖರಿ ಮೇಲೆ ಬೆಳಕು ಚೆಲ್ಲುವ ಕಾರ್ಯವನ್ನು ಮಾಡಲಾಗುತ್ತಿದೆ.

ದಿನವಹೀ ಪತ್ರಿಕೆಗಳಲ್ಲೂ ಇಂತಹ ವಸ್ತು ವಿಶೇಷಗಳು ದಿನವೂ ಪ್ರಕಟವಾಗುತ್ತವೆ. ಉದಾಹರಣೆಗೆ ಕ್ರೀಡೆಗಾಗಿ ಪ್ರತಿದಿನವೂ ಒಂದರಿಂದ ಎರಡು ಪುಟಗಳನ್ನು ಎಲ್ಲಾ ಪತ್ರಿಕೆಗಳು ಮೀಸಲಿರಿಸಿವೆ. ಹಾಗೆ ಪೇಟೆ ಧಾರಣೆ, ಚಿತ್ರಮಂದಿರಗಳಲ್ಲಿರುವ ಚಲನಚಿತ್ರಗಳ ಮಾಹಿತಿ, ಆಕಾಶವಾಣಿ, ದೂರದರ್ಶನದ ಕಾರ್ಯಕ್ರಮ ವಿವರಣೆ, ದಿನಭವಿಷ್ಯ, ನಗರದಲ್ಲಿ ಜರುಗುವ ಆಯಾ ದಿನದ ಪ್ರಮುಖ ಕಾರ್ಯಕ್ರಮದ ವಿವರ, ಮಾಧ್ಯಮಗಳ ವಿಶ್ಲೇಷಣೆ, ಪ್ರಮುಖವಾಗಿ ಸಂಪಾದಕೀಯ ಹಾಗೂ ದ್ವಿಮುಖ ಸಂವಹನೆಗೆ ಅನುಕೂಲವಾಗುವ 'ಓದುಗರ ಪತ್ರ' ಎಲ್ಲ ಪತ್ರಿಕೆಗಳಲ್ಲೂ ಪ್ರಕಟವಾಗುತ್ತವೆ. ಕನ್ನಡದ ಎಲ್ಲ ಪತ್ರಿಕೆಗಳೂ ಜನಪರ, ಹಾಗೂ ಜನಾಸಕ್ತಿಯ ಧೋರಣೆ ಹೊಂದಿರುವುದು ಗಮನಾರ್ಹವಾಗಿದೆ. ಅಧ್ಯಯನದ ಆಧಾರದ ಮೇಲೆ ದೊಡ್ಡ, ಮಧ್ಯಮ ಹಾಗೂ ಸಣ್ಣ ಪತ್ರಿಕೆಗಳ ಹಾಗೂ ಸಾಮಾಜಿಕ ಸಂದರ್ಭದಲ್ಲಿ ಅವುಗಳ ಪೈಪೋಟಿಯ ವಿಶ್ಲೇಷಣೆ ನಡೆಸಿದ್ದೇನೆ.

## ೩. ಸುದ್ದಿ - ವರದಿಗಾರಿಕೆ, ಸಂಪಾದನೆ, ಪ್ರಸ್ತುತಿ

ದೂರದರ್ಶನ, ರೇಡಿಯೊಗಳಲ್ಲಿರುವಂತೆ ಸುದ್ದಿ ಎನ್ನುವುದು ಪತ್ರಿಕೆಗಳ ಸಂದರ್ಭದಲ್ಲೂ ಅದೇ ಆಗಿದೆ. ಆದರೆ ಪ್ರದರ್ಶಕ ಕಲೆಗಳಿಗೆ ಅವಕಾಶವಿರದ ಪತ್ರಿಕಾ ಮಾಧ್ಯಮ ಬಹುತೇಕ ಸುದ್ದಿ ಮಾಧ್ಯಮವೇ ಆಗಿದೆ. ಸುದ್ದಿಯೇ ವೃತ್ತ ಪತ್ರಿಕೆಯ ಜೀವಾಳ. ಪ್ರಚಲಿತ ವಿದ್ಯಮಾನ/ಸುದ್ದಿಯನ್ನು ಹೊರತುಪಡಿಸಿದರೆ ಪತ್ರಿಕೆಗಳು ಬೇರೆ ಯಾವ ವಿಷಯಗಳ ಬಗ್ಗೆ ಜನರಲ್ಲಿ ಅರಿವು ಮೂಡಿಸಬಹುದು? ಸಾಹಿತ್ಯ, ಕಲಾವಿಮರ್ಶೆ, ಮುಂತಾದ ವಿಷಯಗಳ ಪತ್ರಿಕೆಗಳು ಆಯಾ ದಿನದಂದೇ ಓದಬೇಕೆಂಬ ಬೇಡಿಕೆಯನ್ನು ಒಡ್ಡಲಾರವು. ಉದಾಹರಣೆಗೆ ಚಂದಮಾಮದಂತಹ ಕಥಾಮಾಸಿಕ, ತರಂಗದಂತಹ ವಾರ ಪತ್ರಿಕೆಯನ್ನು ಅವು ಹೊರಬಂದ ಒಂದೆರಡು ದಿನದ ನಂತರವೂ ಓದಿದರೆ ನಷ್ಟವಿಲ್ಲ. ಆದರೆ ಒಂದು ದೈನಿಕ ಪತ್ರಿಕೆಯನ್ನು ಅದು ಪ್ರಕಟಗೊಂಡ ಎರಡು ದಿನಗಳ ನಂತರ ಓದಲು ಬರುವುದಿಲ್ಲ. ಹಾಗಾಗಿ ಅದರ ತಾಜಾತನ ಒಂದೇ ದಿನದ್ದು, ಅಷ್ಟರ ಮಟ್ಟಿಗೆ ಅದರ ಆಯುಷ್ಯವೂ ಕಡಿಮೆಯೇ. ಆದರೂ ವಿದ್ಯುನ್ಮಾನ ಮಾಧ್ಯಮಗಳಿಗಿಂತ ಕಡಿಮೆಯಾಗದೆ ದಾಖಲೆ ರೂಪದಲ್ಲಿ ಓದುಗನ ಕೈಯಲ್ಲೇ ಉಳಿದಿರುತ್ತವೆ, ಈ ಮುದ್ರಿತ ಸಾಮಾಗ್ರಿಗಳು.

ವರ್ತಮಾನ ಪತ್ರಿಕೆ ಒಂದೇ ದಿನದ ರಾಜ. ಅಂತಹ ಪ್ರಭುತ್ವ ದೊರೆಯುವುದಕ್ಕೆ ಅದರ ಸುದ್ದಿ ಗ್ರಾಹಿತನವೇ ಕಾರಣ. 'ಸುದ್ದಿ' ಯಾರಿಗಾದರೂ 'ಸುದ್ದಿ'ಯೇ. ಆದರೆ ಅದನ್ನೇ ಮುಖ್ಯವಾಗಿ ಅವಲಂಬಿಸುವ ಮಾಧ್ಯಮ ಪತ್ರಿಕೆಯೇ. ಅದು ರೇಡಿಯೊದಂತೆ ಚಿತ್ರಗೀತೆಗಳನ್ನು, ಶಾಸ್ತ್ರೀಯ ಸಂಗೀತವನ್ನು, ನಾಟಕವನ್ನು ಪ್ರಸಾರ ಮಾಡಲಾರದು. ದೂರದರ್ಶನದಂತೆ, ಶಿಲ್ಪಕಲೆ, ಸಿನೆಮಾ, ಕಾಲ್ಚೆಂಡಾಟಗಳನ್ನು ಪ್ರಸಾರ ಮಾಡಲಾರದು. ಏನಿದ್ದರೂ ಎಲ್ಲ ರಂಗಗಳಲ್ಲಿ ಘಟಿಸುವ ಸುದ್ದಿಗಳನ್ನಷ್ಟೇ ಪ್ರಕಟಿಸಬಹುದು, ಪ್ರಕಟಿಸಬೇಕಾಗುತ್ತದೆ, ಪ್ರಕಟಿಸುತ್ತವೆ.

ಕಾರ್ಲ್ ಜಿ. ಮಿಲ್ಲರ್ ಹೇಳುವಂತೆ News, as you may know, is the substance of a news paper ಎನಿಸಿಕೊಳ್ಳುತ್ತದೆ. ಸುದ್ದಿ ಎನ್ನುವುದನ್ನು ಸಾರ್ವತ್ರಿಕವಾಗಿ ಇನ್ನೂ ಹಲವು ವ್ಯಾಖ್ಯೆಗಳ ಮೂಲಕ ಅರ್ಥೈಸಲಾಗುತ್ತಿದೆ.

- News is every information received from N = North, E = East, W = West and S = South.
- News is anything timely that interests a number of persons, and the best news is that which has the greatest interest for greatest number.
- News is usually stimulating information from which the Ordinary human being derives satisfaction or stimulation.
- News is the timely report of facts or opinion that holds interest or importance, or both, for a considerable number of people. ಹೀಗೆಲ್ಲಾ ಒಂದು ಘಟನೆಯ ಮಹತ್ವದಿಂದಾಗಿ ಸುದ್ದಿ ಮಹತ್ವ ಪಡೆಯುತ್ತದೆ ಎಂಬುದನ್ನು ಮನಗಾಣಬಹುದು. ಎಲ್ಲಕ್ಕಿಂತ ಹೆಚ್ಚಾಗಿ ಅದು ಗತಿಶೀಲವಾದದ್ದು.

ಇಂದು ಹುಟ್ಟುವ ಒಂದು ಸುದ್ದಿ ನಾಳೆಗೆ ಬೆಳೆಯಬಹುದೂ ಕೂಡ. ಅಥವಾ ನಾಳೆ ಇನ್ನಷ್ಟು ಹೊಸ ಸುದ್ದಿಗಳೂ ಹುಟ್ಟಿಕೊಳ್ಳಬಹುದು. ಆದ್ದರಿಂದಲೇ ಆಯಾ ದಿನದ ಸುದ್ದಿ ಆದಷ್ಟು ಶೀಘ್ರವೇ ಓದುಗರನ್ನು ತಲುಪಬೇಕು. ಅದೇ ಪತ್ರಿಕೆಗಳ ಮೊದಲ ಕೆಲಸ. ಹೆನ್ರಿ ಹೆಚ್. ಲ್ಯೂಸ್ ಹೇಳುವಂತೆ 'The difficulty in keeping well informed today is not that news is scarce, but that there is so much 'news' each day than the average man can assimilate. ಈಗಷ್ಟೇ ಹುಟ್ಟಿರುವ ಅಥವಾ ಹುಟ್ಟಲಿರುವ ವಿಷಯವೇ ಆ ಬಗ್ಗೆ ತಿಳಿದಿರದ ಸಮಾಜಕ್ಕೆ 'ಸುದ್ದಿ'ಯಾಗುತ್ತದೆ. ಅದನ್ನು ಆ

ಕೂಡಲೇ ತಲುಪಿಸಬೇಕಾದ್ದೇ ಅದರ ಮುಖ್ಯ ಅಗತ್ಯ. ಉದಾಹರಣೆಗೆ ೨೦೦೧ ಮಾರ್ಚ್ ೧೩ ರಂದು ಭಾರತ ಸರ್ಕಾರದ ನೇತೃತ್ವ ಹಿಡಿದಿದ್ದ ರಾಜಕೀಯ ಪಕ್ಷದ ಅಧ್ಯಕ್ಷ, ರಕ್ಷಣಾ ಶಸ್ತ್ರಾಸ್ತ್ರ ಖರೀದಿಸುವ ವ್ಯವಹಾರಕ್ಕೆ ಸಂಬಂಧಿಸಿದಂತೆ ಲಂಚ ಪ್ರಕರಣದಲ್ಲಿ ಭಾಗಿಯಾಗಿದ್ದಾರೆಂಬ ಆರೋಪ ಹೊರಬಂದು ಸುದ್ದಿಯಾಯಿತು. ಅದನ್ನು ಅದರ ತಾಜಾತನ ಹೋಗುವ ಮೊದಲೇ ಜನರಿಗೆ ತಲುಪಿಸಬೇಕು. ಎರಡು ದಿನಗಳ ನಂತರ ಅದನ್ನು ಪ್ರಕಟಿಸಲು ಸಾಧ್ಯವಿಲ್ಲ. ಯಾಕೆಂದರೆ ಅದೇ ಘಟನೆಯ/ಸುದ್ದಿಯ ತಳಹದಿಯ ಮೇಲೆ ಆ ಪಕ್ಷದ ಅಧ್ಯಕ್ಷ ಸ್ಥಾನಕ್ಕೆ ಅವರ ರಾಜೀನಾಮೆ, ಅದರ ಮಿತ್ರ ಪಕ್ಷವೊಂದರ ಅಧ್ಯಕ್ಷ ಸ್ಥಾನಕ್ಕೆ ಮತ್ತೊಬ್ಬರ ರಾಜೀನಾಮೆ, ರಕ್ಷಣಾ ಇಲಾಖೆಯ ಅಧಿಕಾರಿಗಳ ಅಮಾನತ್ತು, ರಕ್ಷಣಾ ಸಚಿವರ ರಾಜೀನಾಮೆ, ಸಂಸತ್ತಿನಲ್ಲಿ ಕೋಲಾಹಲ ಹೀಗೆ ಅನೇಕ ಸುದ್ದಿಗಳು/ಘಟನಾವಳಿಗಳು ಬೆಳೆದುಬಿಟ್ಟವು. ಆದ್ದರಿಂದ ಸುದ್ದಿಯನ್ನು ಅದು ಸುದ್ದಿಯಾಗಿರುವಾಗಲೇ ತಲುಪಿಸಬೇಕಾದ್ದು ಪತ್ರಿಕೆಗಳಿಗೆ (ಮಾಧ್ಯಮಗಳಿಗೂ) ಅನಿವಾರ್ಯ. ಸುದ್ದಿಯ ಸಾಂದರ್ಭಿಕತೆ ಹಲವು ವೇಳೆ ಭೌತಿಕವಾಗಿರುತ್ತದೆ. ಉದಾಹರಣೆಗೆ ಗುಜರಾತ್‌ನಲ್ಲಿ ಭೂಕಂಪದಿಂದ ಕಟ್ಟಡಗಳ ಕುಸಿತ, ಸಾವು; ಇನ್ನೂ ಹಲವು ವೇಳೆ ಸುದ್ದಿ ಬೌದ್ಧಿಕವಾಗಿರುತ್ತದೆ. ಉದಾಹರಣೆಗೆ ಮಾರಕ ರೋಗವೊಂದಕ್ಕೆ ಗುಣಕಾರಿ ಚಿಕಿತ್ಸೆ; ವಿಷಯ ಏನೇ ಇರಲಿ ಅದನ್ನು ಪ್ರಕಟಿಸುವಲ್ಲಿ ಸಮಯದ ಪಾತ್ರ ಅತ್ಯಂತ ಮಹತ್ವದ್ದು.

ಹಾಗೆ ಸುದ್ದಿ ಸತ್ಯವಾಗಿರಬೇಕು. ಜನರು ನಂಬುವಂತಿರಬೇಕು. ಪತ್ರಿಕೆಗಳು ನೀಡುವ ಸುದ್ದಿಯ ಆಧಾರದ ಮೇಲೆ ಓದುಗ ಅದನ್ನು ಅಳೆಯುತ್ತಾನೆ, ತಾನು ಮಾಡಬೇಕಾದ್ದನ್ನು ನಿರ್ಧರಿಸುತ್ತಾನೆ. ಸತ್ಯಕ್ಕೆ ದೂರವಾದ ಸುದ್ದಿ ನೀಡಿ ಓದುಗನನ್ನು ತಪ್ಪು ದಾರಿಗೆ ಎಳೆಯುವ ಪತ್ರಿಕೆಗಳ ಪಾತ್ರ ಸಮಾಜದಲ್ಲಿ ಅಪಾಯಕಾರಿಯಾದದ್ದು. ಪೀತ ಪತ್ರಿಕೋದ್ಯಮದಲ್ಲಿ ಇಂತಹ ಸಾಧ್ಯತೆಗಳು ಹೆಚ್ಚಾಗಿರುತ್ತವೆ. ಪತ್ರಿಕೆಯೇ ಸುದ್ದಿ ಸಂಗ್ರಹಣೆಯಲ್ಲಿ ನಿಷ್ಠೆಯನ್ನು ಮರೆತಿದ್ದರೆ - ಅದು ಉದ್ದೇಶ ಪೂರ್ವಕವೇ, ಅನುದ್ದೇಶಿತವೇ ಆಗಿದ್ದರೂ, ಅದು ಸಮಾಜದ ಮೇಲೆ ತೀಕ್ಷ್ಣ ಪರಿಣಾಮ ಮಾಡುವುದು ಸಾಧ್ಯ. ಉದಾಹರಣೆಗೆ ಎರಡು ಭಿನ್ನ ಜನಾಂಗಕ್ಕೆ ಸೇರಿದ ನೆರೆಹೊರೆಯವರ ಸಣ್ಣ ಪುಟ್ಟ ಜಗಳವನ್ನು ಕೋಮು ಗಲಭೆ ಎಂದು ಪತ್ರಿಕೆಗಳು ಹೆಸರಿಸಿಬಿಟ್ಟರೆ ಊರಿಗೆ ಊರೇ ಉರಿದು ಹೋಗುವ ಆತಂಕವಿರುತ್ತದೆ. ಹಾಗಾಗಿ ಪತ್ರಿಕೆಯ ಜವಾಬ್ದಾರಿ ಗುರುತರವಾದದ್ದು. ಕೆಲವು ಸಂದರ್ಭಗಳಲ್ಲಿ ಮಾಧ್ಯಮಗಳೇ ಸತ್ಯಕ್ಕೆ ದೂರವಾಗಿವೆ ಎಂದೂ ಆಪಾದಿಸುವ ಪ್ರಸಂಗಗಳಿವೆ. ಉದಾಹರಣೆ ಭ್ರಷ್ಟಾಚಾರದ ಆರೋಪದ ಪ್ರಕರಣವನ್ನು ಮಾಧ್ಯಮಗಳು ಸುದ್ದಿಯಾಗಿ ಬಿತ್ತರಿಸುತ್ತವೆ. 'ಅದರ ಬಗ್ಗೆ ತನಿಖೆ ನಡೆಸಿ, ಮಾಧ್ಯಮಗಳು ಪ್ರಕರಣವನ್ನು ತಿರುಚುತ್ತಿವೆ' ಎನ್ನುವ ಕೂಗು ಆಗಾಗ ಕೇಳುತ್ತಿರುತ್ತದೆ. ಆದರೆ ಅಂತಹ ತಿರುವುಗಳಿಗೆ ಸಿಕ್ಕಿಕೊಳ್ಳುವುದು ಪ್ರಕರಣವೇ ಹೊರತು, ಮಾಧ್ಯಮಗಳು ನೀಡುವ ಸುದ್ದಿಗಳಲ್ಲ. ಪ್ರಕರಣದ ಎಲ್ಲ ತಿರುವುಗಳನ್ನು, ಆ ಸಂಬಂಧದ ಎಲ್ಲ ತನಿಖೆ, ಆರೋಪ, ತೀರ್ಪುಗಳನ್ನು, ಮಾಧ್ಯಮಗಳು ಸುದ್ದಿಯಾಗಿಸಿಕೊಳ್ಳುತ್ತವಷ್ಟೆ. ಸತ್ಯಕ್ಕೆ ಹತ್ತಿರ ಅಥವಾ ದೂರವಾಗುವುದು ಆರೋಪವೇ ಹೊರತು, ಸುದ್ದಿಯಲ್ಲ. ಆದರೆ ಅನೇಕ ವೇಳೆ ವದಂತಿಗಳೂ ಸುದ್ದಿಯಂತಾಗಿಬಿಡಬಹುದು. ಅಂತಹ ಸಂದರ್ಭಗಳಲ್ಲಿ ಮಾಧ್ಯಮಗಳು ಕಟ್ಟೆಚ್ಚರದಿಂದಲೂ ನೈತಿಕತೆಯನ್ನು ಮೀರದೆಯೂ ವರ್ತಿಸಬೇಕಾಗುತ್ತದೆ.

ಸುದ್ದಿಗಳಲ್ಲೂ ವ್ಯಕ್ತಿಯಾಧಾರಿತ ಸುದ್ದಿ ಹಾಗೂ ವಿಷಯಾಧಾರಿತ ಸುದ್ದಿಗಳನ್ನು ನಾವು ಗುರುತಿಸಬಹುದು. ಉದಾಹರಣೆಗೆ ಒಂದು ಅಪಘಾತದ ವಿಷಯ ಜನತೆಯ ಆಸಕ್ತಿಗೆ, ಮಾಹಿತಿಗೆ ಬೇಕಾದ ವಿಷಯ. ಅಪಘಾತಕ್ಕೊಳಗಾದವರಲ್ಲಿ ಓದುಗರ ಕಡೆಯವರೂ ಇರಬಹುದು. ಇಂತಹ ವಿಷಯಾಧಾರಿತ ಸುದ್ದಿಗಳು ಸಮಾಜದೊಂದಿಗೆ ನೇರ ಸಂವಾದ ನಡೆಸುತ್ತವೆ. ವೈಯಕ್ತಿಕತೆಯನ್ನೂ ಕಂಡುಕೊಳ್ಳುತ್ತವೆ. ಇನ್ನೂ ಅತ್ಯಂತ ಜನಪ್ರಿಯ, ಗಣ್ಯ ವ್ಯಕ್ತಿಗೆ ಸಂಬಂಧಿಸಿದ ಅವರ ವೈಯಕ್ತಿಕ ಅಥವಾ ಖಾಸಗಿ ವಿಷಯವೂ ಸುದ್ದಿಯಾಗಿಬಿಡುತ್ತವೆ. ಇತ್ತೀಚೆಗೆ ಬೆಂಗಳೂರಿನಲ್ಲಿ ಜರುಗಿದ ಹಿಂದಿ ಚಿತ್ರನಟ ಹೃತಿಕ್ ರೋಷನ್ ವಿವಾಹ. ಅದಕ್ಕೆ ಆತನ ಜನಪ್ರಿಯತೆಯೆ ಕಾರಣವೇ ಹೊರತು ಮದುವೆ ಎನ್ನುವ ವಿಷಯ ಕಾರಣವಲ್ಲ. ಜಗತ್ತಿನಲ್ಲಿ ನೂರಾರು

ಮಕ್ಕಳು ಹುಟ್ಟುತ್ತವೆ. ಆದರೆ ಪ್ರಿಯಾಂಕ ಗಾಂಧಿಗೆ ಮಗು ಹುಟ್ಟುವುದು ಸುದ್ದಿಯಾಗುವುದಕ್ಕೆ ಆಕೆಯ ವೈಯಕ್ತಿಕ ಜನಪ್ರಿಯತೆಯೇ ಕಾರಣ. ಆದರೆ ಡಯಾನಾಳಂತ ಅತ್ಯಂತ ಜನಪ್ರಿಯ ವ್ಯಕ್ತಿಯ ಸಾವಿನ ಸುದ್ದಿ, ಕನ್ನಡದ ಮೇರುನಟ ರಾಜಕುಮಾರ್ ಅಪಹರಣದ ಸುದ್ದಿ - ವ್ಯಕ್ತಿ ಹಾಗೂ ವಿಷಯ ಎರಡೂ ಕಾರಣಗಳಿಂದಾಗಿ ಮೌಲ್ಯಿಕ ಸುದ್ದಿಯಾಗುತ್ತವೆ. ಸುದ್ದಿಯನ್ನು ಹುಡುಕಿ, ಗ್ರಹಿಸಿ ಜನರಿಗೆ ತಲುಪಿಸುವ ಪ್ರಕ್ರಿಯೆಯಲ್ಲಿ ಪತ್ರಿಕಾ ವರದಿಗಾರನ ಪಾತ್ರ ಅಸಾಧಾರಣವಾದುದಾಗಿರುತ್ತದೆ.

## ವರದಿಗಾರಿಕೆ

ಸುದ್ದಿಯನ್ನು ಆಘ್ರಾಣಿಸದ ಹೊರತು ಒಬ್ಬ ಉತ್ತಮ ವರದಿಗಾರ ಹುಟ್ಟುವುದಿಲ್ಲ. ಆತನಿಗೆ ಸುದ್ದಿಯನ್ನು ಗ್ರಹಿಸುವ 'nose for news' ಇರಬೇಕು. ಇದು ಸುದ್ದಿಯಾಗಬಲ್ಲುದು, ಇಲ್ಲಿ ಸುದ್ದಿ ದೊರೆಯಬಲ್ಲದು ಎಂದು ಆಲೋಚಿಸುವವ ಮಾತ್ರ ಚಾಣಾಕ್ಷ ವರದಿಗಾರ ಆಗಬಲ್ಲ. ಹಾಗಾದರೆ ವರದಿಗಾರಿಕೆ ಎಂದರೇನು? ವರದಿಗಾರನ ಕೆಲಸವೇನು?

ವರದಿಗಾರಿಕೆ ಒಂದು ಕಲೆ. ಸುದ್ದಿ ವಿಶೇಷಗಳನ್ನು ಹುಡುಕಿ ತಂದು ಅದಕ್ಕೊಂದು ಭಾಷಾ ಸ್ವರೂಪ ನೀಡಿ, ಅದು ಜನರನ್ನು ತಲುಪುವಂತೆ ಮಾಡುವ ಕುತೂಹಲ. ವರದಿಗಾರಿಕೆ ಕಣ್ಣಿಗೆ ಕಂಡದ್ದನ್ನು, ಕಿವಿಯಲ್ಲಿ ಕೇಳಿದ್ದನ್ನು, ಪತ್ರಿಕಾ ಕಚೇರಿಗೆ ತಿಳಿಸುವ 'ಪ್ರತ್ಯಕ್ಷ ವರದಿ'ಯಿದ್ದಂತೆ. ಹೇಗೆಂದರೆ ಪತ್ರಿಕಾ ಸಂದರ್ಶನವೊಂದರಲ್ಲಿ ತಿಳಿದು ಬರುವ ವಿಷಯವನ್ನು ಗ್ರಹಿಸಿದ ವರದಿಗಾರ ಅದರ ಮೂಲ ವರದಿಯನ್ನೂ ನೇರವಾಗಿ ತನ್ನ ಪತ್ರಿಕಾ ಕಾರ್ಯಾಲಯಕ್ಕೆ ತಲುಪಿಸುತ್ತಾನೆ. ವರದಿಗಾರಿಕೆಯಲ್ಲೂ ಎರಡೂ ಬಗೆಯಿದೆ. ಒಂದು, ನಡೆದದ್ದನ್ನು ನಡೆದಂತೆ ವರದಿ ಒಪ್ಪಿಸುವುದು. ಇನ್ನೊಂದು ವಿಶ್ಲೇಷಣಾತ್ಮಕ ವರದಿ ನೀಡುವುದು. ನೇರ ವರದಿಗಾರಿಕೆಯಲ್ಲಿ ಘಟನೆಗಳೇ ಮುಖ್ಯ. ಉದಾಹರಣೆಗೆ, ರೈಲು ಅಪಘಾತ ಸಂಭವಿಸಿದೆ, ೧೦೦ ಜನ ಮರಣ ಹೊಂದಿದ್ದಾರೆ. ಎಲ್ಲಾ ಶವಗಳನ್ನು ಗುರುತು ಹಚ್ಚಲಾಗಿದೆ ಮುಂತಾಗಿ ಮಾಹಿತಿಪೂರ್ಣ ನಿಖರ, ಸ್ಪಷ್ಟ, ನೇರ ಸುದ್ದಿಗಳು. ಹಾಗೆ ವಿಶ್ಲೇಷಣಾತ್ಮಕ ವರದಿ ಒಂದು ವಿಷಯವನ್ನು ವಿಶ್ಲೇಷಿಸುತ್ತದೆ. ಅದರ ತಪ್ಪು-ಸರಿ, ಒಳಿತು-ಕೆಡಕುಗಳನ್ನು ತರ್ಕಿಸುತ್ತದೆ. ಉದಾಹರಣೆಗೆ ಬಜೆಟ್ ಮಂಡನೆಯಾದ ಸಂದರ್ಭದಲ್ಲಿ, ಅದನ್ನು ಕುರಿತಾದ ವಿಶ್ಲೇಷಣೆಯ ವರದಿ.

ಸುದ್ದಿ ಎಂದರೇನು ಎಂದು ಸರಿಯಾಗಿ ಗ್ರಹಿಸಿದ ವ್ಯಕ್ತಿ ಮಾತ್ರ ಒಳ್ಳೆಯ ವರದಿಗಾರನಾಗಬಲ್ಲ. ಯಾವುದರಿಂದ ಸುದ್ದಿ ಹುಟ್ಟಬಹುದು ಅಥವಾ ಯಾವುದು ಸುದ್ದಿಯಾಗಬಹುದು ಎನ್ನುವ ನಿರಂತರ ಶೋಧದಲ್ಲಿ ಅವನಿರುತ್ತಾನೆ. ಸುದ್ದಿ ದೊರೆಯುವುದಕ್ಕೆ ಈ ಕೆಳಗಿನ ಅಂಶಗಳನ್ನು ಅರಸಬಹುದು.

- ದೊಡ್ಡ ವ್ಯಕ್ತಿಗಳು = Big names
- ಸಾಹಸ, ವಿಪ್ಲವ ಹಾಗೂ ಒತ್ತಡ = Adventure, Conflict, Tension
- ಸ್ಥಳೀಯತೆ = Proximity
- ಸಾವು, ನೋವುಗಳು = Pathos
- ಅಸಾಧಾರಣ ಹಾಗೂ ವಿಚಿತ್ರವಾದದ್ದು = Unusual and odd
- ಹಾಸ್ಯ = Humour
- ಮಾನವಾಸಕ್ತಿ ವಿಚಾರಗಳು = Human Interest

ಇದನ್ನೆಲ್ಲ ಗಮನದಲ್ಲಿಟ್ಟುಕೊಂಡ ವರದಿಗಾರ ತನ್ನ ಪತ್ರಿಕೆ ಹಾಗೂ ಓದುಗರ ದೃಷ್ಟಿಯಿಂದ ಇನ್ನೂ ಕೆಲವು ಅಂಶಗಳತ್ತ ಗಮನವಿರಿಸಿಕೊಳ್ಳಬೇಕು.

✤ ತನ್ನ ಮಾಧ್ಯಮ ಹಾಗೂ ಅದರ ಅಗತ್ಯಗಳನ್ನು ಅದರ ಶೈಲಿಯನ್ನು ಚೆನ್ನಾಗಿ ಅರಿತಿರಬೇಕು.

✤ ತನ್ನ ಗ್ರಾಹಕರ ಮನೋಮಿಡಿತವನ್ನು ಬಲ್ಲವನಾಗಿರಬೇಕು.

✤ ತನ್ನ ಸಂಪಾದಕ, ಪ್ರಕಾಶಕ, ಸ್ಥಳೀಯ ಸಮುದಾಯ, ಇಡೀ ಸಮಾಜ ಹಾಗೂ ದೇಶದ ವಿಷಯದಲ್ಲಿ ತನ್ನ ಜವಾಬ್ದಾರಿ ತಿಳಿದಿರಬೇಕು.

✤ ಸಾಮಾಜಿಕವಾದದ್ದು ಹಾಗೂ ಸ್ಥಳೀಕವಾದುದ್ದರ ತಿಳುವಳಿಕೆ ಇರಬೇಕು.

✤ ತಾನು ವರದಿ ನೀಡಬೇಕಾದ ಭಾಷೆಯ ಮೇಲೆ ಪ್ರಭುತ್ವವಿರಬೇಕು.

✤ ಆತ ಸ್ವತಃ ಶ್ರಮಜೀವಿ, ಸೂಕ್ಷ್ಮಮತಿ, ಬುದ್ಧಿಶಾಲಿ, ವ್ಯವಧಾನಿ, ಕುತೂಹಲಿ, ಅಗಾಧ ಆತ್ಮವಿಶ್ವಾಸವಿರುವ ಹಸನ್ಮುಖಿಯಾಗಿರಬೇಕು.

ಒಂದು ಸುದ್ದಿ ೫W ಮತ್ತು ೧H ಆಧಾರದ ಮೇಲೆ ನಿಂತಿರುತ್ತದೆ.

| | | |
|---|---|---|
| ಏನಾಯಿತು | = | **W**hat happened? |
| ಯಾವಾಗ ಆಯಿತು | = | **W**hen happened? |
| ಯಾಕೆ ಆಯಿತು | = | **W**hy happened? |
| ಯಾರಿಗೆ ಆಯಿತು | = | **W**ho were involved? |
| ಎಲ್ಲಿ ಆಯಿತು | = | **W**here happened? |
| ಹೇಗೆ ಆಯಿತು | = | **H**ow it happened? |

ಈ ೬ ಪ್ರಶ್ನೆಗಳಿಗೆ ಸೂಕ್ತ ಉತ್ತರ ಸಿಕ್ಕಿದರೆ ಒಂದು ಉತ್ತಮ ವರದಿ ಸಿದ್ಧವಾದಂತೆಯೇ ಸರಿ. ಓದುಗರ ಕುತೂಹಲಕ್ಕೆ ಈ ಎಲ್ಲ ಪ್ರಶ್ನೆಗಳಿಗೂ ಉತ್ತರ ಅಗತ್ಯ. ಅದೇ ರೀತಿ, ಈ ಎಲ್ಲಾ ೬ ಪ್ರಶ್ನೆಗಳ ಉತ್ತರವನ್ನು ಸುದ್ದಿಯ ಮೊದಲ ಪ್ಯಾರಾದಲ್ಲೇ ನೀಡಬೇಕಾಗುತ್ತದೆ. ಅಂದರೆ ಅದರ ಪೀಠಿಕೆಯಂತೆಯೇ ಮುಖ್ಯಸುದ್ದಿಯಿರುತ್ತದೆ. ಪತ್ರಿಕೆಗಳಲ್ಲಿ ಪ್ರಕಟಗೊಂಡ ಸುದ್ದಿ ಜನತೆಗೆ ನೇರವಾಗಿ ಮುಟ್ಟುವುದಕ್ಕೆ ಅದು ಎದ್ದು ಕಾಣುವಂತೆ ತೋರಿಸುವ ಈ ಮೊದಲ ಪ್ಯಾರಾವೇ ಕಾರಣ ಆಗಿರುತ್ತದೆ. ಆದ್ದರಿಂದಲೇ ಸುದ್ದಿ ಬರೆಯುವ ಶೈಲಿಯನ್ನು ತಲೆಕೆಳಗು ಮಾಡಿದ ಪಿರಮಿಡ್ (Inverted Pyramid)ಗೆ ಹೋಲಿಸಲಾಗುತ್ತದೆ. ಆದರೆ ಈಗೀಗ ಸಾಂದರ್ಭಿಕತೆಯ ದೃಷ್ಟಿಯಿಂದ, ಬರವಣಿಗೆಯ ಶೈಲಿಯ ದೃಷ್ಟಿಯಿಂದ ೫ W + ೧ H ಸಿದ್ಧಾಂತ ಬದಲಾಗುತ್ತಿರುವುದು ಕಂಡುಬರುತ್ತಿದೆ.

ವಿಷಯದ ಪ್ರಾಮುಖ್ಯತೆಯ ಮೇಲೆ ಇನ್ವರ್ಟೆಡ್ ಪಿರಮಿಡ್ ಮಾದರಿ



ವರದಿಗಾರಿಕೆಯಲ್ಲಿ ೬ ವಿಧಗಳನ್ನು ಗುರುತಿಸಬಹುದು.

**ಸಾಮಾನ್ಯ ವರದಿಗಾರಿಕೆ**

ಸಾಮಾನ್ಯವಾಗಿ ನಡೆಯುವ ಸಭೆ, ಸಮಾರಂಭಗಳು, ದಿನವಹೀ ಕಾರ್ಯಕ್ರಮಗಳು, ಭಾಷಣಗಳು ಈ ವರ್ಗದಲ್ಲಿರುತ್ತವೆ. ಬಹುತೇಕ ಇಂತಹವು ಪೂರ್ವ ನಿಗದಿತವಾಗಿದ್ದು ಆಹ್ವಾನಪತ್ರಿಕೆ, ಪತ್ರಿಕಾ ಹೇಳಿಕೆ, ಜಾಹಿರಾತುಗಳ ಮೂಲಕ ಸುದ್ದಿಗಾರರಿಗೆ ತಿಳಿದಿರುತ್ತವೆ. ಅಲ್ಲಿ ಏನು ನಡೆಯಿತೆನ್ನುವುದನ್ನು ಪ್ರತ್ಯಕ್ಷವಾಗಿ ವರದಿ ಮಾಡಬೇಕಾಗುತ್ತದೆ.

**ವಿಶೇಷ ವರದಿಗಾರಿಕೆ**

ನಿರ್ದಿಷ್ಟವಲಯದ ಆಧಾರದ ಮೇಲೆ ವಿಷಯಗಳನ್ನು ವರ್ಗೀಕರಿಸಿಕೊಂಡು ಅಲ್ಲಿನ ವಿಶೇಷ ಸುದ್ದಿಗಳನ್ನು ವರದಿ ಮಾಡಲಾಗುತ್ತದೆ. ಇದರಲ್ಲಿ ಅಪರಾಧ, ಕ್ರೀಡೆ, ಕಾನೂನು, ಶಿಕ್ಷಣ, ಪೌರಸಂಸ್ಥೆ, ಕಲೆ ಜೊತೆಗೆ ಇತ್ತೀಚಿನ ದಿನಗಳಲ್ಲಿ ಕೃಷಿ, ಆರ್ಥಿಕ ಹಾಗೂ ರಾಜಕೀಯ ವರದಿಗಾರಿಕೆಯೂ ಪ್ರಾಮುಖ್ಯ ಪಡೆದಿವೆ. ರಾಜಕೀಯ ವರದಿಗಾರಿಕೆಯಂತೂ ಒಂದು ಹೊಸ ಆಯಾಮವೇ ಆಗಿ ಬೆಳೆದಿದೆ.

**ಸಂದರ್ಶನ**

ಸಂದರ್ಶನಗಳ ಮೂಲಕ ಹಾಗೂ ಸಂದರ್ಶನಗಳನ್ನಾಧರಿಸಿ ವರದಿ ಮಾಡುವ ಕಲೆಗಾರಿಕೆಯೂ ರೂಢಿಯಲ್ಲಿದೆ. ದೂರದರ್ಶನ ಮಾಧ್ಯಮವಂತೂ ಅಧಿಕವಾಗಿ ಈ ತಂತ್ರವನ್ನೇ ಅವಲಂಬಿಸುತ್ತದೆ. ಇದರಲ್ಲಿ ಸುದ್ದಿಯ ಆಧಾರದ ಮೇಲೆ ಸಂದರ್ಶನ (News Ineterview), ಗಣ್ಯವ್ಯಕ್ತಿಗಳ ಸಂದರ್ಶನ (Personality interview), ಹಾಗೂ ವೈಚಾರಿಕತೆ ನೆಲೆಯ ಸಂದರ್ಶನ (Symposium interview)ಗಳನ್ನು ನಡೆಸಿಯೂ ವರದಿಗಳನ್ನು ಸಿದ್ಧಪಡಿಸಬಹುದು.

**ವಿಶ್ಲೇಷಣಾತ್ಮಕ ವರದಿಗಾರಿಕೆ**

ಒಂದು ವಿಷಯದ ಹಿಂದಿನ ಹಾಗೂ ಮುಂದಿನ ಆಗು-ಹೋಗುಗಳ ಸಮಗ್ರ ಚಿತ್ರವನ್ನು ಹೊಸ ದೃಷ್ಟಿಕೋನದೊಂದಿಗೆ ತೆರೆದಿಡುವುದು ಇಂತಹ ವರದಿಗಾರಿಕೆಯಿಂದ ಸಾಧ್ಯವಾಗುತ್ತದೆ. ಈ ಬಗೆಯ ವರದಿಗಾರಿಕೆಯನ್ನು ಕಾರಣ ಮತ್ತು ಪರಿಣಾಮ ಸಂಬಂಧಿ ಪತ್ರಿಕೋದ್ಯಮ (Journalisms of cause and effect relationship) ಎಂದು ಗುರುತಿಸಬಹುದು. ಮಾಹಿತಿ ಕ್ರಾಂತಿ ಇಡೀ ಜಗತ್ತನ್ನೇ ಆವರಿಸಿಕೊಳ್ಳುತ್ತಿರುವ ಇಂದಿನ ಸಂದರ್ಭದಲ್ಲಿ ಮುಖ್ಯ ಬೆಳವಣಿಗೆಗಳನ್ನು ಆಳವಾಗಿ ವಿಶ್ಲೇಷಿಸಬೇಕಾದ ಅಗತ್ಯವೂ ಎದ್ದುತೋರುತ್ತಿದೆ. ಹಾಗಾಗಿಯೇ ವಿಶ್ಲೇಷಣಾತ್ಮಕ ವರದಿಗಾರಿಕೆ ಹೆಚ್ಚು ಮಹತ್ವ ಪಡೆಯುತ್ತಿದೆ. ಇದಕ್ಕೆ ಉದಾಹರಣೆಯಾಗಿ ಸಂಪಾದಕೀಯಗಳು, ಸುದ್ದಿ ವಿಶ್ಲೇಷಣೆ , ಅಂಕಣ ಮತ್ತು ಹಿನ್ನೆಲೆಗಳನ್ನು ಇಲ್ಲಿ ಹೆಸರಿಸಬಹುದು.

**ತನಿಖಾ ವರದಿಗಾರಿಕೆ**

ಸಾಮಾನ್ಯ ವರದಿಗಾರಿಕೆಗಿಂತ ತನಿಖಾ ವರದಿಗಾರಿಕೆ ಹಲವು ವಿಧದಲ್ಲಿ ಭಿನ್ನ ಎನ್ನಬಹುದು. ತನಿಖಾ ವರದಿಗಳು ಸಾಧಾರಣವಾಗಿ ಸಾರ್ವಜನಿಕ ವಿಚಾರಗಳಿಗೆ ಸಂಬಂಧಿಸಿರುತ್ತವೆ. ಪ್ರಮುಖ ಸಮಸ್ಯೆಗಳು, ಸಾರ್ವಜನಿಕ ಸಂಸ್ಥೆಗಳು ಮತ್ತು ರಾಷ್ಟ್ರೀಯ ವಿಚಾರಗಳ ಆಳವನ್ನು ಕೆದಕಿ ಸತ್ಯ ಸಂಗತಿಗಳನ್ನು ಹೊರಗೆಳೆದು ತರುವುದೇ ಈ ಬಗೆಯ ವರದಿಗಾರಿಕೆಯ ವೈಶಿಷ್ಟ್ಯ. ತನಿಖಾ ವರದಿಗಾರಿಕೆಯಲ್ಲಿ ಸಾಮಾನ್ಯವಾಗಿ ಎರಡು ವಿಧಗಳಿರುತ್ತವೆ.

- ಸಾರ್ವಜನಿಕ ಸೇವಾಸಂಸ್ಥೆಗಳಲ್ಲಿ/ಸ್ಥಳಗಳಲ್ಲಿ ಭ್ರಷ್ಟಾಚಾರವನ್ನು ಗುರುತಿಸಿ, ಅದನ್ನು ನಿರ್ಮೂಲನಗೊಳಿಸುವತ್ತ ಪ್ರಯತ್ನಿಸುವುದು.
- ಸಾಮಾಜಿಕ ಆಸಕ್ತಿ ಕೆರಳಿಸುವ ಪ್ರಕರಣಗಳ ತನಿಖೆ.

ತನಿಖಾ ವರದಿಗಾರ ಸಂದರ್ಭವನ್ನು ಚೆನ್ನಾಗಿ ಅರಿಯಬೇಕಾದ್ದೇ ಮೊದಲ ಆದ್ಯತೆ. ಈ ಸಂದರ್ಭದಲ್ಲಿ ಕೇಳಬಹುದಾದ ಪ್ರಶ್ನೆಗಳನ್ನು ಗುರುತಿಟ್ಟುಕೊಂಡು, ಅವುಗಳಿಗೆ ಉತ್ತರ ನೀಡಬಹುದಾದ ಮೂಲಗಳನ್ನು ತಡಕಿ ಕೂಲಂಕಷ ಸ್ಪಷ್ಟನೆ ಪಡೆಯಬೇಕು. ತನಿಖಾ ವರದಿಗಾರಿಕೆಯಲ್ಲಿ ಹೆಚ್ಚಿನ ಸಮಯ, ಸಂಪನ್ಮೂಲ ಹಾಗೂ ಶಕ್ತಿ ವ್ಯಯವಾಗುವುದೂ ಸತ್ಯ. ಹಲವು ಸಂದರ್ಭಗಳಲ್ಲಿ ವಿಷಯ ಹೊರಬರುವುದಕ್ಕೆ ದೀರ್ಘಾವಧಿಯೂ ಬೇಕಾಗುತ್ತದೆ. ಅದನ್ನು ಬೆನ್ನಟ್ಟುವ ತಾಳ್ಮೆಯೂ ವರದಿಗಾರನಿಗೆ ಅಗತ್ಯ. ಕೆಲವು ಟ್ಯಾಬ್ಲಾಯ್ಡ್‌ಗಳು, ಸಣ್ಣ ಪತ್ರಿಕೆಗಳು ತನಿಖಾ ವರದಿಗಾರಿಕೆ ಮೂಲಕ ಪೀತ ಪತ್ರಿಕೋದ್ಯಮ ನಡೆಸುವ ಆತಂಕಕಾರಿ ಅಂಶ ಕಾಣಬರುತ್ತದೆ.

## ರಾಜಕೀಯ ವರದಿಗಾರಿಕೆ

ವಿಶೇಷ ವರದಿಗಾರಿಕೆಯಲ್ಲೇ ರಾಜಕೀಯ ವರದಿಗಾರಿಕೆಯನ್ನು ಸೇರಿಸಲಾಗಿದ್ದರೂ, ಈ ಪ್ರಕಾರದ ವರದಿಗಾರಿಕೆಯೇ ಒಂದು ವಿಶೇಷವಾಗಿದೆ. ರಾಷ್ಟ್ರ ಹಾಗೂ ರಾಜ್ಯದ ರಾಜಧಾನಿಗಳಿಂದ ಮೊದಲ್ಗೊಂಡು ಗ್ರಾಮೀಣ ಮಟ್ಟದ ಪಂಚಾಯತ್ ರಾಜ್ ವ್ಯವಸ್ಥೆಯವರೆಗೂ ರಾಜಕೀಯ ಸುದ್ದಿಗಳನ್ನು ಅರಸಬಹುದಾಗಿದೆ. ಸಂಸತ್ತು ಹಾಗೂ ಶಾಸನ ಸಭೆಗಳಲ್ಲಿ, ಸಚಿವಾಲಯಗಳಲ್ಲಿ ರಾಜಕೀಯ ಪಕ್ಷಗಳು ಹಾಗೂ ಪ್ರತಿನಿಧಿಗಳಲ್ಲಿ, ವಿದೇಶೀ ಗಣ್ಯರಲ್ಲಿ, ಗಣ್ಯರ ನಿಯೋಗಗಳಲ್ಲಿ, ವಿದೇಶೀ ಪ್ರತಿನಿಧಿಗಳ ಭೇಟಿಗಳಲ್ಲಿ ರಾಜಕೀಯ ಸುದ್ದಿಗಳು ಲಭ್ಯವಾಗುತ್ತವೆ. ಸಾಧಾರಣವಾಗಿ ಹಿರಿಯ ಪತ್ರಕರ್ತರು, ವರದಿಗಾರರು, ವಿಶೇಷ ಪ್ರತಿನಿಧಿಗಳು, ಸುದ್ದಿಬ್ಯೂರೋದ ಮುಖ್ಯಸ್ಥರು, ಸಹ ಸಂಪಾದಕರು ಮತ್ತು ಸಂಪಾದಕರು ರಾಜಕೀಯ ವರದಿಗಾರಿಕೆಯಲ್ಲಿ ನುರಿತಿರುತ್ತಾರೆ. ರಾಜಕೀಯ ವರದಿಗಾರಿಕೆಯಲ್ಲಿ ವಿಶ್ಲೇಷಣೆಗೆ, ಸಂದರ್ಶನಗಳಿಗೆ ತನಿಖೆಗೂ ಸಹ ಸಾಕಷ್ಟು ಅವಕಾಶವಿರುತ್ತದೆ. ಇಡೀ ದೇಶದ ಆಡಳಿತವೇ ರಾಜಕೀಯದ ನೆಲೆಗಟ್ಟಿನ ಮೇಲೆ ನಿಂತಿರುವುದರಿಂದ ಈ ವಲಯವೇ ಅತ್ಯಂತ ಅಧಿಕ ಪ್ರಮಾಣದಲ್ಲಿ ಸುದ್ದಿಗೆ ಗ್ರಾಸವಾಗುತ್ತಿರುವುದು ಇಂದು ಕಂಡು ಬರುತ್ತಿದೆ. ಹಾಗಾಗಿ ರಾಜಕೀಯ ವರದಿಗಾರಿಕೆ ಎಲ್ಲ ಬಗೆಯ ವರದಿಗಾರಿಕೆಗಳ ಪೈಕಿ ಪ್ರಮುಖಸ್ಥಾನ ಪಡೆಯುತ್ತದೆ.

೧೬ನೇ ಶತಮಾನದಲ್ಲಿಯೂರೋಪಿನಲ್ಲಿ ಮೊದಮೊದಲು ವೃತ್ತ ಪತ್ರಿಕೆಗಳು ಪ್ರಕಟಗೊಂಡಾಗ ಆ ಕಾಲಕ್ಕೆ ಸುದ್ದಿ ಎನ್ನುವುದು ಭಯಂಕರ ಅಪರಾಧಗಳು, ಕೋರ್ಟಿನ ವ್ಯವಹಾರಗಳು, ಯುದ್ಧ, ಶಾಂತಿ ಮಾತುಕತೆಗಳು, ಪವಾಡ, ಮಾಟ ಮಂತ್ರಗಳು, ತೀರ್ಥಯಾತ್ರೆ, ಆಚರಣೆ, ಆವಿಷ್ಕಾರ ಹಾಗೂ ಜನರಲ್ಲಿ ಆಸಕ್ತಿ ಮೂಡಿಸುವ ವಿಚಾರಗಳಿಗೆ ಸೀಮಿತವಾಗಿತ್ತು. ಈವತ್ತಿನ ಪತ್ರಿಕೆಗಳಲ್ಲಿ ನಾವು ಗುರುತಿಸುವ ಮಹತ್ತರ ಬದಲಾವಣೆ ಎಂದರೆ ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ರಾಜಕೀಯದ ಸುದ್ದಿಗಳೂ ವೃತ್ತಪತ್ರಿಕೆಯ ಬಹುಪಾಲು ಜಾಗವನ್ನು ಆಕ್ರಮಿಸಿಕೊಳ್ಳುತ್ತಿರುವುದು. ಅದರ ಪ್ರಮಾಣ ಎಷ್ಟರ ಮಟ್ಟಿಗಿದೆ ಎಂದರೆ ಹಲವು ವೇಳೆ ಜನರ ನೋವು ನಲಿವುಗಳು, ಅಪಾಯಕಾರಿ ಪ್ರಕರಣಗಳು, ಶಾಂತಿ ಸಂಧಾನಗಳು, ಆರ್ಥಿಕ ಸ್ಥಿತಿಗತಿಗಳ ವಿಶ್ಲೇಷಣೆಗಳು ಪತ್ರಿಕೆಗಳ ಕಣ್ ತಪ್ಪಿಸಿರುತ್ತವೆ.

ಸಮಾಜಕ್ಕೆ ಬೇಕಾದ, ಸಮಾಜವೇ ಸಹಭಾಗಿಯಾಗುವ ಎಲ್ಲ ವಲಯಗಳಲ್ಲಿ ಪತ್ರಿಕಾ ವರದಿಗಾರರು ಕಲೆ ಹಾಕಿದ ವರದಿ, ನುಡಿಚಿತ್ರ, ಸುದ್ದಿಗಳೇ ವೃತ್ತ ಪತ್ರಿಕೆಗಳ ಮೂಲಾಧಾರ.

**ಸುದ್ದಿ ಸಂಪಾದನೆ**

ಸುಮಾರು ೨ ಶತಮಾನಗಳಿಗೂ ಮೀರಿದ ಅನುಭವದ ಆಧಾರದ ಮೇಲೆ ವೃತ್ತ ಪತ್ರಿಕೆಗಳ ಸುದ್ದಿ ಸಂವಹನ ವಿಧಾನ ವಿಶಿಷ್ಟವಾಗಿ ಬೆಳೆದು ನಿಂತಿದೆ. ಅದರ ವೈಶಿಷ್ಟ್ಯವಿರುವುದು ಅದನ್ನು ಬರೆದಿರುವ ರೀತಿಯಲ್ಲೂ, ಅದು ಕೊಡುವ ಪರಿಣಾಮದಲ್ಲೂ. ಸಾಧಾರಣವಾಗಿ ಒಂದು ಪತ್ರಿಕಾ ಸುದ್ದಿಗೆ ಒಂದು ಪೀಠಿಕೆ (lead) ಮತ್ತು ಪಠ್ಯ (body) ಎನ್ನುವ ಎರಡು ಭಾಗಗಳಿರುತ್ತವೆ. ಒಂದು ಸಣ್ಣಕಥೆಯಲ್ಲಾದರೆ ಅದರ ಕ್ಲೈಮಾಕ್ಸ್ ಕಥೆಯ ಕೊನೆಭಾಗದಲ್ಲಿರುತ್ತದೆ. ಆದರೆ ಅದಕ್ಕಿಂತ ಭಿನ್ನವಾಗಿ ಪತ್ರಿಕೆಯ ಸುದ್ದಿ ಕ್ಲೈಮಾಕ್ಸ್‌ನೊಂದಿಗೇ ಪ್ರಾರಂಭಗೊಳ್ಳುತ್ತದೆ. ನಂತರ ಇತರ ವಿಚಾರಗಳು ಬರೆಯಲ್ಪಟ್ಟಿರುತ್ತವೆ. ಅಂದರೆ ಪತ್ರಿಕಾ ಸುದ್ದಿಯ ಮೊಟ್ಟ ಮೊದಲ ವಸ್ತುವೇ ಅದರ ಪೀಠಿಕೆ. ಅದು ಇಡೀ ಸುದ್ದಿಯ ಮುಖ್ಯ ಸಾರಾಂಶವನ್ನು ತನ್ನ ಮೊದಲ ಒಂದೆರಡು ವಾಕ್ಯಗಳಲ್ಲೇ ಹಿಡಿದಿರುತ್ತದೆ. ಸುದ್ದಿಯ ಪಠ್ಯ ಎಷ್ಟೇ ದೊಡ್ಡದಿರಲಿ ಪೀಠಿಕೆಯ ಭಾಗವೇ ನಿಜವಾದ 'ಸುದ್ದಿ', ಗಮನ ಸೆಳೆವ ಸುದ್ದಿ. ಓದುಗನ ಆಸಕ್ತಿಯನ್ನು ತಣಿಸುವ ೫W ಮತ್ತು ೧H ಪ್ರಶ್ನೆಗಳಿಗೆಲ್ಲ ಈ ಪೀಠಿಕೆಯಲ್ಲಿ ಉತ್ತರಗಳು ಸಿಕ್ಕುವಂತಿರುತ್ತವೆ.

ಸುದ್ದಿಯ ಎರಡನೆ ಭಾಗ ಅಂದರೆ ಪಠ್ಯದಲ್ಲಿ ಆ ವಿಷಯಕ್ಕೆ ಸಂಬಂಧಿಸಿದ ಇತರ ಅನೇಕ ವಿವರಗಳನ್ನು ನೀಡಲಾಗಿರುತ್ತದೆ. ಈ ವಿಚಾರಗಳು ಓದುಗನ ಆಸಕ್ತಿಯ ದೃಷ್ಟಿಯಿಂದ ಕಡಿಮೆ ಪ್ರಾಶಸ್ತ್ಯ ಉಳ್ಳವಾಗಿರುತ್ತವೆ. ಆದ್ದರಿಂದಲೇ ಪತ್ರಿಕೆಗಳ ಸುದ್ದಿಯನ್ನು ತಲೆಕೆಳಗು ಮಾಡಿದ ಪಿರಿಮಿಡ್‌ಗೆ ಹೋಲಿಸಲಾಗುವುದು. ಸುದ್ದಿ ಬರೆಯುವಾಗ ಹಲವು ಮುಖ್ಯ ಅಂಶಗಳನ್ನು ಗಮನದಲ್ಲಿರಿಸಿಕೊಳ್ಳಬೇಕಾಗುತ್ತದೆ.

**ಸಂಕ್ಷಿಪ್ತತೆ :** ಆದಷ್ಟು ಕಡಿಮೆ ಪದಗಳನ್ನು ಬಳಸಿ ಸುದ್ದಿ ಬರೆಯಬೇಕು. ವಿದ್ಯುನ್ಮಾನ ಮಾಧ್ಯಮಗಳಲ್ಲಿ ಕ್ಷಣಕ್ಷಣವನ್ನೂ ವ್ಯಯಮಾಡದೆ ಸಮಯವನ್ನು ಬಳಸುವಂತೆ, ಪತ್ರಿಕೆಯ ಸಂದರ್ಭದಲ್ಲಿ ಇಂಚಿಂಚು ಸ್ಥಳವನ್ನೂ ಬಳಸಿಕೊಳ್ಳಬೇಕಾದ ಅಗತ್ಯವಿರುತ್ತದೆ. ಆದ್ದರಿಂದಲೇ ಸುದ್ದಿಗಳನ್ನು ಸಂಕ್ಷಿಪ್ತವಾಗಿ ಬರೆಯಬೇಕಾಗುತ್ತದೆ.

**ಸ್ಪಷ್ಟತೆ :** ಸುದ್ದಿಯ ಘಟನಾವಳಿಗಳು ಸಂಕೀರ್ಣವಾಗಿದ್ದರೂ ಅದನ್ನು ಸರಳವಾಗಿ, ಸ್ಪಷ್ಟವಾಗಿ ಅರಿವಾಗುವಂತೆ ಬರೆಯಬೇಕು. ಕ್ಲಿಷ್ಟ ಹಾಗೂ ಸಂಕೀರ್ಣ ವಾಕ್ಯ ರಚನೆ, ಅಪರಿಚಿತ ಪದಗಳ ಬಳಕೆಯಿಂದ ಸುದ್ದಿಗಳು ಸ್ಪಷ್ಟತೆಯನ್ನು ಕಳೆದುಕೊಳ್ಳುತ್ತವೆ. ಪ್ರತಿಯೊಬ್ಬ ಸಾಧಾರಣ ಓದುಗನಿಗೂ ಅರಿವಾಗುವಂತೆ ಸಾಮಾನ್ಯ ಭಾಷೆಯಲ್ಲಿ ಸುದ್ದಿಗಳನ್ನು ಬರೆಯಬೇಕು.

**ಪರಿಣಾಮಕಾರಿ ಅಭಿವ್ಯಕ್ತಿ :** ಓದುಗನಲ್ಲಿ ಒಂದು ಪರಿಣಾಮವನ್ನು ಮೂಡಿಸುವ ಪ್ರಭಾವ ಸುದ್ದಿಯ ಅಭಿವ್ಯಕ್ತಿಯಲ್ಲಿರಬೇಕು. ಸುದ್ದಿಯ ಪ್ರಭಾವಿ ಘಟನೆಯನ್ನು ಹುಡುಕಿ ತೆಗದು, ಅದನ್ನು ಅಷ್ಟೇ ಪ್ರಭಾವಶಾಲಿಯಾಗಿ ಶಬ್ದಗಳಲ್ಲಿ ಹಿಡಿದಿಡಬೇಕಾದ ಜಾಣ್ಮೆ ಅದನ್ನು ಬರೆಯುವ ಉಪಸಂಪಾದಕರಿಗಿರಬೇಕು. ಪ್ರಭಾವಿ ಘಟನೆಯನ್ನು ಪೇಲವವಾಗಿ ಹೇಳಿಬಿಟ್ಟರೆ ಓದುಗನಲ್ಲಿ ಯಾವುದೇ ಪರಿಣಾಮ ಅಥವಾ ಆಗಬೇಕಾದ ಮಟ್ಟದ ಪರಿಣಾಮ ಆಗದೇ ಹೋಗುತ್ತದೆ.

**ನಿಖರತೆ :** ಸುದ್ದಿ ನಿಖರವಾಗಿರಬೇಕು, ಸತ್ಯವಾಗಿರಬೇಕು. ಮುದ್ರಣದ ಯಾವುದೇ ಹಂತದಲ್ಲಿ ಆಗುವ ಭಾಷಾದೋಷ ಸುದ್ದಿಯ ನಿಖರತೆಯನ್ನು ಬದಲಿಸಿಬಿಡುತ್ತದೆ. ಆದ್ದರಿಂದಲೇ ವರದಿಗಾರರು ಕೊಟ್ಟ ಕಚ್ಚಾ ಸುದ್ದಿಗೆ ಒಂದು ಸ್ವರೂಪ ನೀಡುವ ಉಪಸಂಪಾದಕರಿಗೆ ಭಾಷೆಯ ಮೇಲೆ ಪ್ರಭುತ್ವ, ಸುದ್ದಿಯನ್ನು ಆಳವಾಗಿ ಅರಿಯುವ ಮನಸ್ಸು ಬಹಳ ಮುಖ್ಯ.

ಅನಗತ್ಯ ವಿಚಾರಕ್ಕೆ ಹೆಚ್ಚು ಒತ್ತು ನೀಡುವುದು, ಅಗತ್ಯ ವಿಷಯಗಳನ್ನು ಗುರುತಿಸದೇ ಅಥವಾ ತೇಲಿಸಿಕೊಂಡು ಹೋಗುವಂತೆ ಬರೆಯುವುದರಿಂದ ಸುದ್ದಿಯ ಶಕ್ತಿ ಕಡಿಮೆಯಾಗುತ್ತದೆ.

ಎಲ್ಲಾ ಮಾಧ್ಯಮಗಳಲ್ಲೂ ಈ ಬಗೆಯ ಎಚ್ಚರ ಅತ್ಯಂತ ಅವಶ್ಯವಾದರೂ, ಆದ ದೋಷವನ್ನು ಮುಚ್ಚಿಕೊಳ್ಳುವ ಅಥವಾ ಓದುಗನ ಗಮನವನ್ನು ಬೇರೆಡೆಗೆ ಸೆಳೆಯುವ ಅವಕಾಶಗಳು ಇಲ್ಲಿ ತೀರಾ ಕಡಿಮೆ. ಉದಾಹರಣೆಗೆ, ದೂರದರ್ಶನ ಮಾಧ್ಯಮದಲ್ಲಿ ವೀಕ್ಷಕನ ಗಮನ ದೃಶ್ಯಗಳ ಕಡೆಗೂ ಇರುತ್ತದೆ. ಶಬ್ದಗಳಲ್ಲಿ ಹೇಳಲಾಗದ ಪ್ರಭಾವವನ್ನು ದೃಶ್ಯಗಳು ಬೀರಬಹುದು. ಆದರೆ ಪತ್ರಿಕೆಗಳಲ್ಲಿ, ಹಾಗೆ ರೇಡಿಯೊದಲ್ಲೂ ಸಹ ಅಂತಹ ಪರ್ಯಾಯ ಆಕರ್ಷಣೆಗಳಿಲ್ಲ. ಅದರಲ್ಲೂ ಪತ್ರಿಕೆಗಳಲ್ಲಂತೂ ಅವು ದಾಖಲೆಗಳಾಗಿ ಉಳಿದು ಬಿಡುತ್ತವೆ. ಹಾಗೆಂದ ಮಾತ್ರಕ್ಕೆ ಪತ್ರಿಕೆಯನ್ನು ಹೊರತುಪಡಿಸಿ ಇತರ ಮಾಧ್ಯಮಗಳು ಲೋಪ-ದೋಷಗಳಿಗೆ ಪರವಾನಗಿ ಪಡೆದಿವೆ ಎಂದು ಭಾವಿಸಬಾರದು. ಯಾವುದೇ ಕಾರಣಕ್ಕೂ ಸುದ್ದಿಗಳಲ್ಲಿ ವೈಭವೀಕರಣ ಸಲ್ಲದು. ಹಾಗೂ ಸುದ್ದಿ ಬರೆಯುವವರು ಓದುಗನ ಸ್ಥಾನದಲ್ಲಿ ನಿಂತೇ ಅದನ್ನು ಬರೆದಿರಬೇಕು.

ಹಾಗೆ ಶೀರ್ಷಿಕೆಗಳೂ ಸಹ. ಓದುಗನ ದೃಷ್ಟಿಯನ್ನೂ ಹಿಡಿದಿಟ್ಟುಕೊಳ್ಳುವಲ್ಲಿ ಶೀರ್ಷಿಕೆ ಬಹಳ ಮುಖ್ಯ. ಟೆಲಿಗ್ರಾಫಿಕ್ ಆಗಿ ಅತ್ಯಂತ ಕಡಿಮೆ ಪದಗಳಲ್ಲಿ ಆದರೆ ಸುದ್ದಿಯ ಮೂಲ ವಸ್ತುವನ್ನೇ ತನ್ನಲ್ಲಿ ಒಳಗೊಳ್ಳುವಂತೆ ಶೀರ್ಷಿಕೆಗಳಿರಬೇಕು. ಸುದ್ದಿಗೂ ಶೀರ್ಷಿಕೆಗೂ ನಡುವೆ ಅಂತರವೇ ಇರಬಾರದು. ಉದಾಹರಣೆಗೆ ಕಾವ್ಯ, ಕಥೆ, ಮುಂತಾದ ಸೃಜನ ನೆಲೆಯ ಸಾಹಿತ್ಯಕೃತಿಗೆ ಅದರ ಒಟ್ಟಾರೆ ಸಾರವನ್ನು ಎತ್ತಿ ಹಿಡಿವ ಸೂಚ್ಯಾರ್ಥದ ಶೀರ್ಷಿಕೆಯನ್ನು ನೀಡಬಹುದು, ಅದು ಅಷ್ಟೇ ಕಲಾತ್ಮಕವೂ ಆಗಿರಬಹುದು. ಆದರೆ ಸುದ್ದಿಯೊಂದಕ್ಕೆ ಅಂತಹ ಸ್ಯೂಚ್ಯಾರ್ಥದ ಶೀರ್ಷಿಕೆ ಅಥವಾ ಕಲಾತ್ಮಕ ಶೀರ್ಷಿಕೆ ಬೇಕಾಗುವುದಿಲ್ಲ. ಸುದ್ದಿ ಸುದ್ದಿಯೇ. ಅದು ವಾಚ್ಯವೇ ಆಗಿರಬೇಕು. ಅದನ್ನು ಅದರ ಶೀರ್ಷಿಕೆಯೇ ಹೇಳಿಬಿಡಬೇಕು. ಆದರೆ ಸುದ್ದಿಯನ್ನು ಸೂಚಿಸುವ ಚಿಕ್ಕ ಶಬ್ದಗಳ, ಕ್ರಿಯಾಪದರಹಿತ ಟೆಲಿಗ್ರಾಫಿಕ್ ಶೈಲಿ ಶೀರ್ಷಿಕೆಗೆ ಅತ್ಯಂತ ಸೂಕ್ತ.

ಶೀರ್ಷಿಕೆಗಳಲ್ಲಿ ಸಂದೇಹವನ್ನು ವ್ಯಕ್ತಪಡಿಸುವ ಪ್ರಶ್ನಾರ್ಥಕ ಚಿನ್ಹೆಯನ್ನು ಕನ್ನಡ ಪತ್ರಿಕೋದ್ಯಮದ ಸಂದರ್ಭದಲ್ಲಿ ಆಗಾಗ್ಗೆ ಬಳಸಲಾಗುತ್ತದೆ. ಪತ್ರಿಕೆ ತನಗಿರುವ ಸಂದೇಹವನ್ನು 'ಹೀಗಾಗಬಹುದೇ?' ಎಂದು ಸೂಚಿಸಿ ನೀಡುವ ಶೀರ್ಷಿಕೆ ಓದುಗನನ್ನೇ ಪ್ರಶ್ನೆ ಕೇಳಿದಂತಾಗುತ್ತದೆ. ಪತ್ರಿಕೆಗಳಿರುವುದು ಓದುಗನಿಗೆ ಹೇಳುವುದಕ್ಕೆ, ಅವನನ್ನೇ ಕೇಳುವುದಕ್ಕಲ್ಲ. ಹಾಗೊಂದು ವೇಳೆ ಅಂತಹ ಸಂದೇಹವಿದ್ದರೆ ಅದನ್ನು ಆದಷ್ಟು ಶೀಘ್ರ ಬಗೆಹರಿಸಿಕೊಳ್ಳಬೇಕಾದ್ದು ಪತ್ರಿಕೆಯ ಸಾಮರ್ಥ್ಯವನ್ನವಲಂಬಿಸುತ್ತದೆ. ಬೇಗ ಸುದ್ದಿ ನೀಡಬೇಕೆನ್ನುವ ತರಾತುರಿಯಲ್ಲಿ ಇಂತಹ ಸುದ್ದಿ 'ಘಟಿಸಬಹುದೇ?' ಎಂಬ ನಿರೀಕ್ಷೆಯೊಂದಿಗೆ ಶೀರ್ಷಿಕೆ ಬರೆಯುವುದು ಪತ್ರಿಕೆಗೇ ಕ್ಷೇಮವಲ್ಲ.

ಸುದ್ದಿ ಸಂಪಾದನೆಯಲ್ಲಿ ಸಂಪಾದಕನದೇ ಬಹು ಮುಖ್ಯ ಪಾತ್ರ. ತಮ್ಮ ಪತ್ರಿಕಾ ವರದಿಗಾರರೂ ಮೊದಲ್ಗೊಂಡು ವಿವಿಧ ಸುದ್ದಿ ಮೂಲಗಳ ಮೂಲಕ ಸಂಗ್ರಹಗೊಳ್ಳುವ 'ಸುದ್ದಿ ರಾಶಿ' ಯಲ್ಲಿ ಸಂಪಾದಕನ ನಿರ್ಣಯವನ್ನವಲಂಬಿಸಿಯೇ ಸುದ್ದಿಗಳು ಆಯ್ಕೆಗೊಳ್ಳುತ್ತವೆ. ಅವನ ನಿರ್ಣಯಗಳಿಗೆ ಪರ್ಯಾಯ ಪರಿಹಾರಗಳೇ ಇರುವುದಿಲ್ಲವಾದ್ದರಿಂದ ಅವನ ಹೆಗಲಮೇಲಿನ ಹೊಣೆಯ ಪ್ರಮಾಣವೂ ಹಗುರವಾದುದಲ್ಲ. ಸುದ್ದಿ ಸಂಪಾದಕನ ಹೊಣೆಗಾರಿಕೆಯನ್ನು ಹೀಗೆ ಗುರುತಿಸಬಹುದು.

- ಹಳೆಯ ಸುದ್ದಿಗಳ ಬೆಳವಣಿಗೆ ಹಾಗೂ ಹೊಸ ಸುದ್ದಿಗಳನ್ನು, ಅವುಗಳ ಜಾಡನ್ನು ನಿರಂತರವಾಗಿ ಅರಸುತ್ತಿರಬೇಕು.
- ಸುದ್ದಿ ಸಂಸ್ಥೆಗಳು ಹಾಗೂ ತನ್ನ ವರದಿಗಾರರಿಂದ ಯಾವುದೇ ಸುದ್ದಿಯನ್ನು ಅದು ತಪ್ಪಿಹೋಗದಂತೆ ಸಂಗ್ರಹಿಸಬೇಕು.

- ತನ್ನ ವರದಿಗಾರರಿಗೆ, ಬಾತ್ಮೀದಾರರಿಗೆ ಕೆಲಸ ವಹಿಸಿಕೊಡುತ್ತಾ ಯಾವ ಸುದ್ದಿಗೆ ಯಾವ ಬಗೆಯ ವರದಿಗಾರಿಕೆ ಮಾಡಬೇಕು, ಯಾರನ್ನು ಸಂದರ್ಶಿಸಬೇಕು, ಮಾಹಿತಿ ಸಂಗ್ರಹಿಸಬಹುದಾದ ಸ್ಥಳಗಳು, ವ್ಯಕ್ತಿಗಳು ಯಾವುವೆಂದು ಯೋಜನೆ ಮಾಡಿಕೊಡಬೇಕು.
- ತೀವ್ರ ಪೈಪೋಟಿ ಒಡ್ಡುವ, ಪ್ರತಿಸ್ಪರ್ಧಿಯಂತಹ ಪತ್ರಿಕೆಗಳನ್ನು ಆಳವಾಗಿ ಗಮನಿಸುತ್ತಾ ತನ್ನ ಪತ್ರಿಕೆಯನ್ನು ಅದರೊಂದಿಗೆ ಹೋಲಿಸಿ ನೋಡಬೇಕು. ಲೋಪದೋಷಗಳು, ನ್ಯೂನತೆಗಳು ಕಂಡು ಬಂದಲ್ಲಿ ಅದನ್ನು ತಿದ್ದಿಕೊಳ್ಳುವ ಔದಾರ್ಯ ಆತನಿಗೆ ಒಳ್ಳೆಯದು.
- ಛಾಯಾಚಿತ್ರಕಾರರು, ವರದಿಗಾರರು, ಬಾತ್ಮೀದಾರರೊಂದಿಗೆ ನಿರಂತರ ಸಂಪರ್ಕ ಇರಿಸಿಕೊಂಡಿದ್ದು, ಸಹಾಯಕ ಹಾಗೂ ಉಪಸಂಪಾದಕರು, ಬೆರಳಚ್ಚುಗಾರರವರೆಗೆ ನೇರ ಸಂಪರ್ಕ ಹೊಂದಿರಬೇಕು. ಹಾಗೆ ಪತ್ರಿಕೆಯ ಪ್ರಧಾನ ಸಂಪಾದಕ, ಆಡಳಿತ ಮಂಡಲಿಯ ಜೊತೆಗೂ ಸಂಪರ್ಕ ಇರಿಸಿಕೊಂಡಿರಬೇಕಾಗುತ್ತದೆ.
- ಮುಖ್ಯ ವರದಿಗಾರರಿದ್ದರೆ, ಅವರೊಂದಿಗೆ ಸಮಾಲೋಚಿಸಿ ತನಗೆ ಬೇಕಾದ ಸುದ್ದಿ, ಮಾಹಿತಿಯನ್ನು ವರದಿಗಾರರಿಂದ ತರಿಸಿಕೊಳ್ಳಲು ಪ್ರಯತ್ನಿಸಬೇಕು.

ಒಟ್ಟಿನಲ್ಲಿ ಸುದ್ದಿ ಸಂಪಾದಕನದು ಯಾವಾಗಲೂ ಜಾಗೃತನಾಗಿರಬೇಕಾದ ಕೆಲಸ. ಅವ ಒಬ್ಬ ಸಾರ್ವಜನಿಕ ಸಂಪರ್ಕಾಧಿಕಾರಿ ಇದ್ದಂತೆ, ಭಾಷಾ ತಜ್ಞನಿದ್ದಂತೆ, ಗೂಢಚಾರಿಯಿದ್ದಂತೆ, ಎಲ್ಲಕ್ಕಿಂತ ಹೆಚ್ಚಾಗಿ ಒಬ್ಬ ನಿಷ್ಠ ಓದುಗನಿದ್ದಂತೆ ಇರಬೇಕಾಗುತ್ತದೆ.

### ನುಡಿಚಿತ್ರಗಳು (Features)

ಸುದ್ದಿಗಳಷ್ಟೇ ಅಲ್ಲದೇ ಅನೇಕ ಸರಳ ಲಘು ಘಟನೆಗಳು ದಿನನಿತ್ಯ ಸಂಭವಿಸುತ್ತಿರುತ್ತವೆ. ಎಲ್ಲವನ್ನು ಸುದ್ದಿ ಬರೆದಂತೆಯೇ ಬರೆಯುವುದು ಆ ಘಟನೆಯ ಜಾಯಮಾನಕ್ಕೆ ಹೊಂದುವುದಿಲ್ಲ. ಅಂತಹ ಬರವಣಿಗೆಗಳು ಸರಳವಾಗಿ, ಹಗುರವಾಗಿ, ಆಕರ್ಷಕವಾಗಿ ಓದುಗನನ್ನು ಸೆಳೆದುಕೊಳ್ಳುವಂತೆ ರೂಪುಗೊಂಡಿರುತ್ತವೆ. ಇವುಗಳನ್ನೇ ನುಡಿಚಿತ್ರಗಳು ಎಂದು ಕರೆಯಲಾಗುತ್ತದೆ. ನುಡಿಚಿತ್ರಗಳು ಸಾಧಾರಣವಾಗಿ ಕಥಾತ್ಮಕತೆ, ಕಲಾತ್ಮಕತೆ ಅಥವಾ ಕಾವ್ಯಾತ್ಮಕತೆಯ ಮೈ ಹೊಂದಿರುತ್ತವೆ. ತೀರಾ ಮಹತ್ವವಲ್ಲದ ಆದರೆ ಮಾನವಾಸಕ್ತಿಯ ವಿಚಾರಗಳನ್ನು ನುಡಿಚಿತ್ರಗಳಾಗಿ ಸಿದ್ಧಪಡಿಸಬಹುದು. ಹೆಚ್ಚು ಸೃಜನಶೀಲವೆನಿಸುವ ನುಡಿಚಿತ್ರಗಳು ತಮ್ಮೊಳಗೆ ಸುದ್ದಿಯ ಅಂಶವನ್ನು ಒಳಗೊಂಡಿರುತ್ತವೆ ಎನ್ನುವುದು ಸ್ಪಷ್ಟ. ಉದಾಹರಣೆಗೆ ಕಾಳಿಂಗ ಸರ್ಪದ ಹನ್ನೆರಡು ಮೊಟ್ಟೆಗಳನ್ನು ಕಳವು ಮಾಡಲಾಗಿದ್ದು ಅದನ್ನು ಕಂಡು ಹಿಡಿಯುವಲ್ಲಿ ಪೊಲೀಸರು ಯಶಸ್ವಿಯಾದರು ಎನ್ನುವ ವಿಷಯವನ್ನು ತೀರಾ ಗಂಭೀರ ಸುದ್ದಿಯನ್ನಾಗಿಸದೇ ನುಡಿಚಿತ್ರದ ರೂಪದಲ್ಲಿ ಚಿತ್ರಸಹಿತವಾಗಿ ಪ್ರಕಟಿಸಿದರೆ ಓದುಗನ ದೃಷ್ಟಿಯಿಂದ ಅದು ಹೆಚ್ಚು ಆಕರ್ಷಣೆಗೆ ಒಳಗಾಗುತ್ತದೆ. ಇಂತಹ ಸುದ್ದಿಗಳಲ್ಲಿ ನುಡಿಚಿತ್ರವಾಗುವ ಗುಣ ಸಹಜವಾಗಿಯೇ ಇರುತ್ತದೆ ಎನ್ನುವುದು ಗಮನಾರ್ಹ. ಪತ್ರಿಕೆಗಳಿಗೆ ಮಾತ್ರವಲ್ಲದೆ ದೂರದರ್ಶನದಂತಹ ದೃಶ್ಯ ಮಾಧ್ಯಮವೂ ಸಹ ನುಡಿಚಿತ್ರಗಳನ್ನು ರಚಿಸುವುದಕ್ಕೆ ವಿಪುಲ ಅವಕಾಶಗಳಿರುತ್ತವೆ.

### ಅಂಕಣ ಬರಹ

ಪತ್ರಿಕಾ ಮಾಧ್ಯಮದ ವೈಶಿಷ್ಟ್ಯವೇ ಎನಿಸುವ ಅಂಕಣ ಬರಹ ಕನ್ನಡ ಸಾಹಿತ್ಯದ ಒಂದು ಪ್ರಕಾರವಾಗಿಯೂ ಸ್ಥಳ ಪಡೆಯುತ್ತದೆ. ಅಂಕಣಗಳು ಒಂದು ನಿರ್ದಿಷ್ಟ ದಿನದಂದು, ಸಾಧಾರಣವಾಗಿ ನಿಯತಕಾಲಿಕವಾಗಿ ವರ್ತಮಾನ ಪತ್ರಿಕೆಗಳಲ್ಲೂ ಇತರ ನಿಯತಕಾಲಿಕೆಗಳಲ್ಲೂ ಪ್ರಕಟವಾಗುತ್ತಿರುತ್ತವೆ. ಇವು ಒಂದು ವಾರದ ಸುದ್ದಿ ವಿಶ್ಲೇಷಣೆ, ಒಂದು ವಿಚಾರದ ಒಳ

ಹೊರಗುಗಳನ್ನು ಧಾರಾವಾಹಿಯ ರೂಪದಲ್ಲಿ ಓದುಗರಿಗೆ ಕೊಡುತ್ತವೆ. ಉದಾಹರಣೆಗೆ ಪ್ರಜಾವಾಣಿಯಲ್ಲಿ ಪ್ರಕಟವಾಗುತ್ತಿದ್ದ ಸಿದ್ಧಲಿಂಗಪಟ್ಟಣಶೆಟ್ಟಿಯವರ 'ಚಹಾದ ಜೋಡಿ ಚೂಡಾದ್ಹಾಂಗ', ಸುಧಾ ಪತ್ರಿಕೆಯಲ್ಲಿ ನಿರಂತರವಾಗಿ ಪ್ರಕಟಗೊಳ್ಳುತ್ತಿರುವ ಎಚ್ಚೆಸ್ಕೆಯವರ 'ವಾರದ ವ್ಯಕ್ತಿ', ಹಾ.ಮಾ. ನಾಯಕರ 'ಸಂಪ್ರತಿ' ಮೊದಲಾದ ಅಂಕಣಗಳನ್ನು ಹೆಸರಿಸಬಹುದು.

## ಚಿತ್ರಗಳು

ಅಕ್ಷರಗಳೇ ಮಾಧ್ಯಮವಾದ ಪತ್ರಿಕೆಗಳಿಗೆ ರಂಗುಕೊಡುವ ಅಂಶವೆಂದರೆ ಚಿತ್ರಗಳು. ಓದುಬಾರದವರೂ ಪತ್ರಿಕೆಯ ಚಿತ್ರಗಳನ್ನು ನೋಡಿ ಸುದ್ದಿಯನ್ನು ಸ್ವಲ್ಪಮಟ್ಟಿಗೆ ಗ್ರಹಿಸಬಹುದು. ಓದು ಬರುವವರು ಸುದ್ದಿಯನ್ನು ಓದಿ ಚಿತ್ರಗಳನ್ನು ನೋಡಿ ಸುದ್ದಿ ಗಹನತೆಯನ್ನು ತಿಳಿಯಬಹುದು. ಹಲವು ವೇಳೆ ಪದಗಳಿಗಿಂತಲೂ ಚಿತ್ರಗಳು ಹೆಚ್ಚು ಪರಿಣಾಮಕಾರಿಯಾಗುತ್ತವೆ. ಸಾಧಾರಣವಾಗಿ ಪತ್ರಿಕೆಗಳು ಮೂರು ಬಗೆಯ ಚಿತ್ರಗಳನ್ನು ಬಳಸುತ್ತವೆ.

**ಛಾಯಾಚಿತ್ರಗಳು :** ಛಾಯಾಚಿತ್ರಗಾರಿಕೆ ಪತ್ರಿಕೋದ್ಯಮದ ಒಂದು ಪ್ರಮುಖ ಅಂಗವೇ ಆಗಿದೆ. ದೂರದರ್ಶನ ಮಾಧ್ಯಮದ ಸವಾಲುಗಳನ್ನು ಸ್ವೀಕರಿಸುತ್ತಿರುವ ಪತ್ರಿಕಾರಂಗ ಛಾಯಾಚಿತ್ರಗಳನ್ನು ಸುಂದರ ವಿನ್ಯಾಸ, ಲೇಔಟ್‌ಗಳೊಂದಿಗೆ ಯಶಸ್ವಿಯಾಗಿ ಬಳಸಿಕೊಳ್ಳುತ್ತಿದೆ. ಹಾಗೆಯೇ ಅತ್ಯಾಧುನಿಕ ಸ್ಥಿರ ಚಿತ್ರ ಕ್ಯಾಮೆರಾಗಳು, ಮುದ್ರಕ ಯಂತ್ರಗಳು, ಬಣ್ಣದ ಮುದ್ರಣದ ಸೌಲಭ್ಯ ಪತ್ರಿಕೆಗಳಿಗೆ ಹೊಸ ಕಳೆ ನೀಡಿವೆ.ಇತ್ತೀಚಿನ ಸಂದರ್ಭಗಳಲ್ಲಿ ಸುದ್ದಿಯ ಜೊತೆ ಘಟನೆಯ ಚಿತ್ರಗಳೇ ಬಳಕೆಯಾಗುತ್ತಿರುವುದೂ ಉತ್ತಮ ಬೆಳವಣಿಗೆ. ಫೋಟೋಗಳ ಜೊತೆಗೆ ಅದಕ್ಕೆ ನೀಡಲಾಗುವ ಶೀರ್ಷಿಕೆಗಳೂ ಅರ್ಥಪೂರ್ಣವಾಗಿರುತ್ತವೆ. ಒಮ್ಮೊಮ್ಮೆ ಛಾಯಾಚಿತ್ರಕ್ಕಿಂತಲೂ ಶೀರ್ಷಿಕೆಗಳೇ ಮಹತ್ವ ಪಡೆಯುವುದೂ ಉಂಟು. ಏಕತಾನತೆಯನ್ನು ದೂರತಳ್ಳುವ ಛಾಯಾಚಿತ್ರಗಳು ಅತೀ ಹೆಚ್ಚಾಗಿ ಕ್ರೀಡೆ, ಸಿನೆಮಾ, ಕೃಷಿ ಮುಂತಾದ ರಂಗಗಳಿಂದ ಬರುತ್ತಿವೆಯಾದರೂ ವಿಶೇಷ ಪುರವಣಿ, ನಿಯತಕಾಲಿಕೆ, ಟ್ಯಾಬ್ಲಾಯ್ಡ್, ವಿಶೇಷ ಸಂಚಿಕೆಗಳಲ್ಲಿ ಛಾಯಾಚಿತ್ರ ಬಳಕೆ ಗಮನಾರ್ಹವಾಗಿ ಅಧಿಕವಾಗಿದೆ.

**ವ್ಯಂಗ್ಯಚಿತ್ರಗಳು :** ವ್ಯಂಗ್ಯಚಿತ್ರಗಳ ಪ್ರಾಬಲ್ಯವಿರುವುದೂ ಪತ್ರಿಕೆಗಳಲ್ಲೇ. ಎಲ್ಲ ಸುದ್ದಿಗಳಿಗೂ ಛಾಯಾಚಿತ್ರಗಳನ್ನು ಬಳಸುವುದು ಸಾಧ್ಯವಾಗದಿರಬಹುದು. ಉದಾಹರಣೆಗೆ ಒಂದು ವಿಶೇಷ ವರದಿಗೆ ಛಾಯಾಚಿತ್ರ ಬಳಕೆ ಅಸಹಜವೆನಿಸಬಹುದು. ಒಂದು ವಿಡಂಬನಾ ವರದಿಗೆ ಛಾಯಾಚಿತ್ರ ಒಗ್ಗುವುದಿಲ್ಲ. ಅನೇಕ ರಾಜಕೀಯ, ಸಾಮಾಜಿಕ, ಪ್ರಾಕೃತಿಕ, ಸಂದರ್ಭಗಳಲ್ಲೂ ಛಾಯಾಚಿತ್ರಗಳನ್ನು ಬಳಸಲಾಗದು. ಆಗೆಲ್ಲ ವ್ಯಂಗ್ಯಚಿತ್ರಗಳು ಉಪಯೋಗಕ್ಕೆ ಬರುತ್ತವೆ. ಅದರಲ್ಲೂ ಗಣ್ಯವ್ಯಕ್ತಿಗಳ ಬಗ್ಗೆ ವದಂತಿಗಳನ್ನೋ ಸುದ್ದಿಗಳನ್ನೋ ಬಳಸುವಾಗ ವ್ಯಂಗ್ಯಚಿತ್ರಗಳು ಸಾಂಕೇತಿಕವಾಗಿ ಜೊತೆಗೆ ನಿಲ್ಲುತ್ತವೆ. ಅಷ್ಟೇ ಗಂಭೀರದ ಸಂದರ್ಭಗಳನ್ನೂ ಅತ್ಯಂತ ಸಮಂಜಸ ವ್ಯಂಗ್ಯಚಿತ್ರಗಳೊಂದಿಗೆ ಗಮನ ಸೆಳೆಯುವಂತೆ ಮಾಡಬಹುದು.

ಸಾಧಾರಣವಾಗಿ ವ್ಯಂಗ್ಯಚಿತ್ರಗಳಿಗೆ ಶೀರ್ಷಿಕೆಗಳಿರುವುದಿಲ್ಲ. ಹಾಗೂ ಸೂಚ್ಯಾರ್ಥ, ಗೂಡಾರ್ಥಗಳನ್ನೇ ಒಳಗೊಳ್ಳುವುದರಿಂದ ಜನತೆಯನ್ನು ತನ್ನತ್ತ ಆಕರ್ಷಿಸಿದರೂ ಅವರಿಗೆ ಅರ್ಥವಾಗದೆ ಉಳಿಯಬಹುದು. ಒಂದು ಅರ್ಥದಲ್ಲಿ ವ್ಯಂಗ್ಯ ಚಿತ್ರಗಳು ಒಂದು ನಿರ್ದಿಷ್ಟ ವರ್ಗದ ಓದುಗರಿಗೆ ಮಾತ್ರ ಮೀಸಲೆನಿಸುತ್ತವೆ. ಛಾಯಾಚಿತ್ರಗಳಂತೆ ಇವು ಎಲ್ಲ ಮಟ್ಟದ ಜನತೆಯನ್ನು ತಲುಪುವುದಿಲ್ಲ. ಪತ್ರಿಕೆಗಳಿಗೆ ಆಕರ್ಷಣೆ ನೀಡುತ್ತವೆ ಎಂದಷ್ಟೇ ಹೇಳಬಹುದು.

**ಚಿತ್ರಕಲೆ :** ಕಲಾವಿದರು ಬರೆದ ಚಿತ್ರಗಳನ್ನು ಮುದ್ರಣ ಮಾಧ್ಯಮ ಒಳಗೊಳ್ಳುತ್ತದೆ. ಆದರೆ ಸುದ್ದಿಗೆ ಸಂಬಂಧಿಸಿದಂತೆ ಇಂತಹ ಚಿತ್ರಗಳ ಬಳಕೆ ಇಲ್ಲವೇ ಇಲ್ಲ ಎನ್ನುವಷ್ಟರ ಮಟ್ಟಿಗೆ ಕಡಿಮೆ ಬಳಕೆಯಾಗುತ್ತದೆ. ಸಾಧಾರಣವಾಗಿ ಪುರವಣಿಗಳು,

ನಿಯತಕಾಲಿಕೆಗಳು, ಕಥಾ ಮಾಸಿಕ, ಸೃಜನಶೀಲ ಸಾಹಿತ್ಯ ಕೃತಿಗಳು ಚಿತ್ರಗಳನ್ನು ಹೆಚ್ಚಾಗಿ ಬಳಸುತ್ತವೆ. ಕಲಾತ್ಮಕವಾದ ಈ ಚಿತ್ರಗಳು ಸೃಜನಶೀಲ ಸಾಹಿತ್ಯದ ಜೊತೆಗೆ ಪ್ರಕಟಗೊಳ್ಳುವುದರಿಂದ ಅಂತಹ ಮ್ಯಾಗಜಿನ್‌ಗಳು ಹೆಚ್ಚು ಆಕರ್ಷಣೀಯವೆನಿಸುತ್ತವೆ. ಅನೇಕ ಸಂದರ್ಭಗಳಲ್ಲಿ (ಸುದ್ದಿಗಳಲ್ಲೂ) ರೇಖಾಚಿತ್ರಗಳು ಬಳಕೆಯಾಗುತ್ತವೆ.

**ಕಂಪ್ಯೂಟರ್ ಗ್ರಾಫಿಕ್ಸ್ ಮತ್ತು ಫಿಕ್ಟೋರಲ್ ಚಾರ್ಟ್‌ಗಳು :** ಅಂಕಿ ಸಂಖ್ಯೆಗಳ ಜೊತೆ ಗ್ರಾಫ್‌ಗಳನ್ನು, ಚಾರ್ಟ್‌ಗಳನ್ನು ಬಳಸಿದರೆ ಹೆಚ್ಚು ಮಾಹಿತಿ ಪೂರ್ಣ ಎನಿಸಿಕೊಳ್ಳುತ್ತದೆ. ಇತ್ತೀಚೆಗೆ ಕಂಪ್ಯೂಟರ್ ಬಳಕೆ ಆರಂಭವಾದ ಮೇಲೆ ಗ್ರಾಫ್, ಚಾರ್ಟ್‌ಗಳ ಬಳಕೆ ಸುಲಭವೂ ಅಧಿಕವೂ ಆಗಿರುವುದು ಗಮನಾರ್ಹ. ಅದರಲ್ಲೂ ವಾಣಿಜ್ಯಕ ಹಾಗೂ ಆರ್ಥಿಕ ವಿಷಯಗಳು, ಚುನಾವಣಾ ಮತ ಎಣಿಕೆಯ ಸಂದರ್ಭಗಳಲ್ಲೂ ಇವನ್ನು ಹೆಚ್ಚಾಗಿ ಬಳಸುತ್ತಿರುವುದು ಉಪಯುಕ್ತವೂ ಆಗಿದೆ.

ದೂರದರ್ಶನ ಮಾಧ್ಯಮ ತನ್ನ ಪ್ರಾಬಲ್ಯವನ್ನು ಸ್ಥಾಪಿಸಿರುವ ಹಿನ್ನೆಲೆಯಲ್ಲಿ ಪತ್ರಿಕೆಗಳು ತಮ್ಮ ಉಳಿವಿಗಾಗಿ ಹೊಸತನವನ್ನು ತುಂಬಿಕೊಳ್ಳಲೇಬೇಕಾಗಿದೆ. ಈ ದೃಷ್ಟಿಯಿಂದ ಚಿತ್ರಗಳ ಬಳಕೆ ಅತ್ಯಂತ ಯಶಸ್ವಿಯೂ ಆಗಿದೆ. ಬಣ್ಣದ ಮುದ್ರಣದ ಸೌಲಭ್ಯವೂ ಪತ್ರಿಕೆಗಳಿಗೆ ಹೊಸ ಮೆರಗು ತಂದಿದೆ. ಎಲ್ಲದಕ್ಕಿಂತಲೂ ಮುಖ್ಯವಾಗಿ ದಾಪುಗಾಲಿಟ್ಟು ಬೆಳೆಯುತ್ತಿರುವ ತಂತ್ರಜ್ಞಾನವನ್ನು ಮುದ್ರಣರಂಗವೂ ಸಾಕಷ್ಟು ಒಳಗೊಂಡಿದೆ. ಅದರ ಫಲವಾಗಿ ಫ್ಯಾಕ್ಸ್, ಇಂಟರ್‌ನೆಟ್ ಮೂಲಕ ತಾಜಾ ಮಾಹಿತಿಯ ಚಿತ್ರಗಳನ್ನು ಪಡೆಯುವುದೂ ಸಾಧ್ಯವಾಗುತ್ತದೆ. ಹೊಸ ವಿನ್ಯಾಸ, ಹೊಸ ವೈಖರಿಗಳು ಪತ್ರಿಕೆಗಳಿಗೆ ದೊರೆಯುತ್ತಿವೆ. ಪತ್ರಿಕೆ - ಪತ್ರಿಕೆಗಳ ನಡುವಿನ ಪೈಪೋಟಿ, ಪತ್ರಿಕೆ ಮತ್ತು ಇತರ ಮಾಧ್ಯಮಗಳ ನಡುವಿನ ಪೈಪೋಟಿ ತೀವ್ರಗೊಳ್ಳುತ್ತಿರುವ ಇಂದಿನ ದಿನಗಳಲ್ಲಿ ಪ್ರತಿಯೊಂದು ಪತ್ರಿಕೆಯೂ ಹೊಸದಿಕ್ಕುಗಳತ್ತ ಮುಖದೆರೆಯಬೇಕಾಗಿದೆ.

## ೪. ಪತ್ರಿಕಾರಂಗದ ಸವಾಲುಗಳು

ಆಧುನಿಕ ಜಗತ್ತಿಗೆ ಗ್ರಾಹಕನೇ ದೊರೆ. ಸಮೂಹ ಮಾಧ್ಯಮ ಸಹಜವಾಗಿಯೇ ಈ ವಾಸ್ತವಿಕತೆಯನ್ನು ಅರಿತು ಮುಂದಡಿಯಿಡಬೇಕಾಗುತ್ತದೆ. ಒಂದು ಕಾಲದಲ್ಲಿ ಓದುಗರ ಮೇಲೆ ಸೀಮಿತ ಸಂಖ್ಯೆಯ ಪತ್ರಿಕೆಗಳು ಪ್ರಭಾವ ಬೀರಿದವು. ಆದರೆ ಈವತ್ತು ಯಾವ ಪತ್ರಿಕೆಗಳೂ ಪೈಪೋಟಿಯ ಮನೋಭಾವವಿಲ್ಲದೆ ಮುಂದಡಿಯಿಡಲು ಸಾಧ್ಯವಿಲ್ಲ.

ಮಹಾಪ್ರಬಂಧದ ದೃಷ್ಟಿಯಿಂದ ಅಧ್ಯಯನ ನಡೆಸಿದ ಸಂದರ್ಭದಲ್ಲಿ ನಿರ್ವಿವಾದವಾಗಿ ಸಾಬೀತಾದ ಅಂಶವೆಂದರೆ ವಿದ್ಯುನ್ಮಾನ ಮಾಧ್ಯಮದ ಪೈಪೋಟಿಯ ನಡುವೆ ತಮ್ಮ ನೆಲೆಯನ್ನು ಬಲಪಡಿಸಿಕೊಳ್ಳಲು ಪತ್ರಿಕೆಗಳು ಹೋರಾಡುತ್ತಿವೆ. ಪತ್ರಿಕೆಗಳ ಪೈಕಿ ಮಧ್ಯಮ-ಸಣ್ಣ ಪತ್ರಿಕೆಗಳು ದೊಡ್ಡ ಪತ್ರಿಕೆಗಳಿಗೆ ಪೈಪೋಟಿ ನೀಡುತ್ತಿದ್ದರೆ, ದೊಡ್ಡ ಪತ್ರಿಕೆಗಳು ಮಧ್ಯಮ-ಸಣ್ಣ ಪತ್ರಿಕೆಗಳಿಗೆ ಪ್ರತಿ ಪೈಪೋಟಿ ನೀಡಿ ಜಿಲ್ಲೆ, ತಾಲ್ಲೂಕು ಮಟ್ಟಗಳಲ್ಲೂ ಬಲವಾದ ನೆಲೆ ಪಡೆಯಲು ಹೋರಾಡುತ್ತಿವೆ ಎಂಬುದು ಗಮನಾರ್ಹ.

ಪರಿಣಾಮವಾಗಿ ಯಾವುದೋ ಒಂದೆರಡು ಪತ್ರಿಕೆಗಳು ಓದುಗನ ಮೇಲೆ ಏಕಸ್ವಾಮ್ಯ ಸಾಧಿಸುವ ಸ್ಥಿತಿ ಈಗಿಲ್ಲ. ಆದ್ದರಿಂದ ಈ ಅಂಶವನ್ನು ಗಮನಿಸುವಾಗ ಸಮೂಹ ಮಾಧ್ಯಮಗಳ ನಡುವಣ ಪೈಪೋಟಿ ಯಾವ ಸ್ವರೂಪದಲ್ಲಿದೆ? ಎಂಬುದನ್ನು ವಿಶೇಷವಾಗಿ ಚರ್ಚಿಸಬೇಕಾಗುತ್ತದೆ. ಇದನ್ನು ವರ್ಗೀಕರಿಸಿ ನೋಡಿದರೆ ಈ ಅಂಶಗಳು ಪ್ರಧಾನ ಎನ್ನಬಹುದು.

- ದೊಡ್ಡ ಪತ್ರಿಕೆಗಳ ನಡುವಣ ಪೈಪೋಟಿ
- ದೊಡ್ಡ-ಮಧ್ಯಮ ಪತ್ರಿಕೆಗಳ ನಡುವಣ ಪೈಪೋಟಿ

✤ ದೊಡ್ಡ-ಸಣ್ಣ ಪತ್ರಿಕೆಗಳ ನಡುವಣ ಪೈಪೋಟಿ

✤ ವಿದ್ಯುನ್ಮಾನ ಮಾಧ್ಯಮ ಹಾಗೂ ಪತ್ರಿಕೆಗಳ ನಡುವಣ ಪೈಪೋಟಿ

**ದೊಡ್ಡ ಪತ್ರಿಕೆಗಳ ನಡುವಣ ಪೈಪೋಟಿ :** ಈವತ್ತು ಆಧುನಿಕ ಜಗತ್ತಿನ ಪೈಪೋಟಿಯ ನಡುವೆ ರಾಜ್ಯ ಮಟ್ಟದಲ್ಲಿ ತಳವೂರಿದ ಪತ್ರಿಕೆಗಳು ಹಲವಾರಿವೆ. ಪ್ರಜಾವಾಣಿ, ಸಂಯುಕ್ತ ಕರ್ನಾಟಕ, ಉದಯವಾಣಿ, ಕನ್ನಡಪ್ರಭ, ವಿಜಯ ಕರ್ನಾಟಕ, ಜನವಾಹಿನಿ ಹೀಗೆ ಆರೇಳು ಪತ್ರಿಕೆಗಳು ರಾಜ್ಯದ ಉದ್ದಗಲ ಪ್ರಸಾರ ಹೊಂದಿವೆ.

ಪ್ರಸಾರ ಸಂಖ್ಯೆಯಲ್ಲಿ ವ್ಯತ್ಯಾಸವಿದ್ದರೂ ಈ ಎಲ್ಲ ಪತ್ರಿಕೆಗಳು ಪೈಪೋಟಿಯ ಮೂಲಕವೇ ಬಲಗೊಂಡಿರುವಂಥವು. ಗಮನಾರ್ಹ ಸಂಗತಿ ಎಂದರೆ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಎಲ್ಲ ಪತ್ರಿಕೆಗಳೂ ಒಂದಕ್ಕಿಂತ ಹೆಚ್ಚು ಆವೃತ್ತಿಯನ್ನು ಹೊಂದಿರುವಂಥವು. ಈ ತೆರನಾಗಿ ಪ್ರಜಾವಾಣಿ, ಸಂಯುಕ್ತ ಕರ್ನಾಟಕ, ಕನ್ನಡಪ್ರಭ, ವಿಜಯಕರ್ನಾಟಕ, ಉದಯವಾಣಿ ಯಂತಹ ಪತ್ರಿಕೆಗಳು ಪ್ರಸಾರ ಸಂಖ್ಯೆಯನ್ನು ಹೆಚ್ಚಿಸಿಕೊಳ್ಳಲು ನಡೆಸುತ್ತಿರುವ ಪ್ರಯತ್ನ, ಆ ಪ್ರಯತ್ನದ ಅಂಗವಾಗಿ ಆಧುನಿಕ ತಂತ್ರಜ್ಞಾನವನ್ನು ಬಳಸಿಕೊಳ್ಳುತ್ತಿರುವ ಪರಿ, ಓದುಗನನ್ನು ಸೆಳೆಯಲು ವಾರದಲ್ಲಿ ಬಹುತೇಕ ದಿನ ವಿಶೇಷ ಪುರವಣಿಗಳನ್ನು ನೀಡುತ್ತಿರುವ ರೀತಿ ಅವು ಪೈಪೋಟಿಗಿಳಿದಿರುವುದನ್ನು ಸ್ಪಷ್ಟಪಡಿಸುತ್ತಿವೆ.

ದಾಖಲಾರ್ಹ ಸಂಗತಿ ಎಂದರೆ ಕರ್ನಾಟಕದ ಓದುಗ ಸಮೂಹವನ್ನು ಮೂರು ನೆಲೆಗಳಲ್ಲಿ ವರ್ಗೀಕರಿಸಿ ಪತ್ರಿಕೆಗಳು ಪೈಪೋಟಿಗಿಳಿದಿವೆ. ಈ ಪೈಕಿ ಒಂದು, ಹಳೆ ಮೈಸೂರು ಭಾಗದ ಓದುಗ ಸಮೂಹ; ಎರಡು, ಉತ್ತರ ಕರ್ನಾಟಕ ಭಾಗದ ಓದುಗ ಸಮೂಹ; ಮೂರು, ಕರಾವಳಿ ಭಾಗದ ಓದುಗ ಸಮೂಹ. ಒಂದು ಕಾಲದಲ್ಲಿ ಹಳೇ ಮೈಸೂರು ಭಾಗಕ್ಕೆ ಪ್ರಜಾವಾಣಿ ತನ್ನ ಸರ್ವ ಗಮನವನ್ನು ಕೇಂದ್ರೀಕರಿಸಿದ್ದರೆ, ಸಂಯುಕ್ತ ಕರ್ನಾಟಕ ಉತ್ತರ ಭಾರತದ ಓದುಗ ಸಮೂಹವನ್ನು ಮುಖ್ಯವಾಗಿ ಕೇಂದ್ರೀಕರಿಸಿಕೊಂಡಿತ್ತು. ಒಂದು ದೃಷ್ಟಿಯಿಂದ ಪ್ರಜಾವಾಣಿ, ಸಂಯುಕ್ತ ಕರ್ನಾಟಕ ಪತ್ರಿಕೆಗಳಿಗೂ ರಾಜ್ಯಾದ್ಯಂತ ಓದುಗ ಸಮೂಹವಿದ್ದರೂ ಅವುಗಳ ಗಮನ ಒಂದೊಂದು ಕಡೆಗೆ ಕೇಂದ್ರೀಕೃತವಾಗಿದ್ದದ್ದು ನಿಜ. ಹೀಗೆ ಹಳೇ ಮೈಸೂರು, ಉತ್ತರ ಕರ್ನಾಟಕ ಭಾಗದ ಓದುಗ ಸಮೂಹದ ಮೇಲೆ ಪ್ರಜಾವಾಣಿ ಹಾಗೂ ಸಂಯುಕ್ತ ಕರ್ನಾಟಕ ತಮ್ಮದೇ ಸ್ವಾಮ್ಯ ಸಾಧಿಸಿದರೆ; ಕರಾವಳಿ ಕರ್ನಾಟಕ ಭಾಗದ ಓದುಗ ಸಮೂಹದ ಮೇಲೆ ಅಂತಹದೊಂದು ಛಾಪನ್ನು ಬಿತ್ತಿದ್ದು ಉದಯವಾಣಿ.

ಈ ಪೈಕಿ ಸಂಯಕ್ತ ಕರ್ನಾಟಕ ೧೯೫೦ರಷ್ಟು ಹಿಂದೆಯೇ ಬೆಂಗಳೂರಿನಲ್ಲಿ ಆವೃತ್ತಿ ಪ್ರಾರಂಭಿಸಿದರೆ, ೮೦ರ ಸುಮಾರಿಗೆ ಪೈಪೋಟಿಯ ಅನಿವಾರ್ಯತೆಯನ್ನರಿತ ಪ್ರಜಾವಾಣಿ ಹುಬ್ಬಳ್ಳಿಯಿಂದ ಮತ್ತೊಂದು ಆವೃತ್ತಿಯನ್ನು ಪ್ರಕಟಿಸತೊಡಗಿತು. ಮುಂದೆ ಉತ್ತರ ಕರ್ನಾಟಕದ ವೈಶಾಲ್ಯದ ಹಿನ್ನೆಲೆಯಲ್ಲಿ ಗುಲ್ಬರ್ಗಾದಿಂದ ಮತ್ತೊಂದು ಆವೃತ್ತಿಯನ್ನು ಪ್ರಕಟಿಸತೊಡಗಿದ (೨೦೦೧) ಪ್ರಜಾವಾಣಿ ಕರಾವಳಿ ಕರ್ನಾಟಕ ಭಾಗಕ್ಕೊಂದು ಮಂಗಳೂರಿನಿಂದ (೨೦೦೧) ಒಂದು ಆವೃತ್ತಿಯನ್ನು ಹೊರ ತಂದು ಸುಭದ್ರ ಪೈಪೋಟಿಗೆ ವೇದಿಕೆ ಸೃಷ್ಟಿಸಿಕೊಂಡಿತು.

ಹೀಗೆ ಕರ್ನಾಟಕದ ಮೂರು ಓದುಗ ಸಮೂಹಗಳ ಮೇಲೆ ಗಮನ ಕೇಂದ್ರೀಕರಿಸಿದ ಪ್ರಜಾವಾಣಿ, ಸಂಯುಕ್ತ ಕರ್ನಾಟಕ ಹಾಗೂ ಉದಯವಾಣಿಗಳ ನಡುವೆ ಕನ್ನಡಪ್ರಭ ಪ್ರಬಲ ಪೈಪೋಟಿ ನೀಡಿದ್ದು, ಅಸ್ತಿತ್ವ ಉಳಿಸಿಕೊಂಡಿದ್ದು ಸ್ಪಷ್ಟ. ಕುತೂಹಲದ ಸಂಗತಿ ಎಂದರೆ ಆರಂಭಿಕ ದಿನಗಳಲ್ಲಿ ತನ್ನ ಗಮನವನ್ನು ನಿರ್ದಿಷ್ಟ ಓದುಗ ಸಮೂಹದ ಮೇಲೆ ಕೇಂದ್ರೀಕರಿಸಿಕೊಳ್ಳದಿದ್ದರೂ ೯೦ರ ದಶಕದ ಪೈಪೋಟಿಗೆ ಅದು ಕೂಡಾ ಹೆಗಲು ಕೊಡಬೇಕಾಯಿತು. ಈವತ್ತು ಬೆಂಗಳೂರು, ಬೆಳಗಾಂ, ಹಾಗೂ ಮಲೆನಾಡಿನ ಕೇಂದ್ರ ಬಿಂದುವಾದ ಶಿವಮೊಗ್ಗದಲ್ಲಿ ೩ ಆವೃತ್ತಿಗಳನ್ನು ಕನ್ನಡಪ್ರಭ ಪ್ರಕಟಿಸುತ್ತಿರುವುದು ಅದಕ್ಕೆ ಉದಾಹರಣೆ.

ಈ ನಿಟ್ಟಿನಲ್ಲಿ ಉದಯವಾಣಿ ಬೆಂಗಳೂರು ಆವೃತ್ತಿಯನ್ನು ಹೊರತರುವ ಮೂಲಕ ಪೈಪೋಟಿ ಮುಂದುವರಿಸಿದರೆ; ೯೯ರ ಸುಮಾರಿಗೆ ಆರಂಭವಾದ ವಿಜಯ ಕರ್ನಾಟಕ ರಾಜ್ಯದ ಆರು ಭಾಗಗಳಿಂದ ಆವೃತ್ತಿಗಳನ್ನು ಹೊರತರುವ ಮೂಲಕ ಅಂತಹ ಪೈಪೋಟಿಯ ನೆಲೆಯನ್ನು ವಿಸ್ತರಿಸಿದ್ದು ನಿಜ. ಸಂಯುಕ್ತ ಕರ್ನಾಟಕದಂತಹ ಪತ್ರಿಕೆ ಗುಲ್ಬರ್ಗಾದಿಂದ ಆವೃತ್ತಿಯನ್ನು ಪ್ರಕಟಿಸುವ ಮೂಲಕ ಬಲವನ್ನು ಹಿಗ್ಗಿಸಿಕೊಳ್ಳಲು ಯತ್ನಿಸಿದ್ದನ್ನು ಗಮನಿಸಿದರೆ ದೊಡ್ಡ ಪತ್ರಿಕೆಗಳ ನಡುವಣ ಪೈಪೋಟಿ ಯಾವ ಹಂತ ತಲುಪಿದೆ, ಮತ್ತದು ಎಷ್ಟು ಅನಿವಾರ್ಯವಾಗಿದೆ ಎಂಬುದು ನಿಚ್ಚಳವಾಗುತ್ತದೆ.

ಈವತ್ತು ಈ ಎಲ್ಲ ಪತ್ರಿಕೆಗಳು ತಾಜಾ ಸುದ್ದಿಯನ್ನು ನೀಡಲು ಹೇಗೆ ಹೋರಾಡುತ್ತವೋ ಹಾಗೆಯೇ ಓದುಗನನ್ನು ಸೆಳೆಯಲು ವಿಶೇಷ ಪುರವಣಿಗಳನ್ನು ನೀಡುವ, ಸಂದರ್ಭಕ್ಕನುಸಾರವಾಗಿ ವಿಶೇಷ ಮಾಹಿತಿಗಳನ್ನು ನೀಡುವ, ವಿವಿಧ ಬಗೆಯ ಸ್ಪರ್ಧೆಗಳನ್ನು ಮುಂದೊಡ್ಡುವ ಕೆಲಸವನ್ನು ಮಾಡುತ್ತವೆ. ಅದರ ಪರಿಣಾಮವಾಗಿ ಓದುಗ ಕ್ರೀಡೆ, ಸಂಸ್ಕೃತಿ, ಕಲೆಗಳಿಗೆ ಸಂಬಂಧಿಸಿದ ವಿಶೇಷ ಬೆಳವಣಿಗೆಗಳ ವಿವರ ಪಡೆಯುವಂತೆ ವಿವಿಧ ವರ್ಗಗಳ ಆಸಕ್ತಿಗೆ ಕಾರಣವಾಗುವ ಮಹಿಳೆ, ಮಕ್ಕಳು, ಆರೋಗ್ಯ ಹೀಗೆ ಹಲ ವಿಭಾಗಗಳಿಗೆ ಸಂಬಂಧಿಸಿದ ಮಾಹಿತಿಯನ್ನೂ ಪಡೆಯುತ್ತಾನೆ.

ಹೀಗೆ ವಿವಿಧ ಮಾರ್ಗಗಳ ಮೂಲಕ ಪತ್ರಿಕೆಯ ಪ್ರಸಾರ ಸಂಖ್ಯೆಯನ್ನು ಹೆಚ್ಚಿಸುವ ದೊಡ್ಡ ಪತ್ರಿಕೆಗಳು ಹೇಗೆ ತಮ್ಮ-ತಮ್ಮೊಳಗೆ ಪೈಪೋಟಿ ನಡೆಸುತ್ತವೆಯೋ ಹಾಗೆಯೇ ಮಧ್ಯಮ ಪತ್ರಿಕೆಗಳೊಂದಿಗೂ ಪೈಪೋಟಿ ನಡೆಸುವುದು ಅನಿವಾರ್ಯವಾಗುತ್ತದೆ. ಮತ್ತೆ ಇದೂ ಕೂಡಾ ಅದರ ಬೆಳವಣಿಗೆಯ ದೃಷ್ಟಿಯಿಂದ ಮುಖ್ಯವಾದರೆ, ಅಂತಹ ಪೈಪೋಟಿಗೆ ತನ್ನದೇ ಸಾಮರ್ಥ್ಯದ ಪೈಪೋಟಿ ನೀಡಿ ಬಚಾವಾಗುವ ಅನಿವಾರ್ಯತೆಯೂ ಮಧ್ಯಮ ಪತ್ರಿಕೆಗಳ ಮೇಲಿರುತ್ತದೆ. ಅದರಿಂದಲೇ ಅದನ್ನು ವಿಶೇಷವಾಗಿ ಗಮನಿಸಬೇಕು.

**ದೊಡ್ಡ ಹಾಗೂ ಮಧ್ಯಮ ಪತ್ರಿಕೆಗಳ ಪೈಪೋಟಿ :** ದೊಡ್ಡ ಪತ್ರಿಕೆಗಳು ವಿಸ್ತಾರವಾದ ಓದುಗ ವರ್ಗವನ್ನು ಗಮನದಲ್ಲಿಟ್ಟುಕೊಂಡು ಬೆಳೆದಿದೆ. ಮಧ್ಯಮ ಪತ್ರಿಕೆಗಳು ವಿಶೇಷವಾಗಿ ಜಿಲ್ಲೆ ಅಥವಾ ವಿಭಾಗವನ್ನು ಗಮನದಲ್ಲಿಟ್ಟುಕೊಂಡು ಅಸ್ತಿತ್ವ ಪಡೆದವು.

ಈ ದೃಷ್ಟಿಯಿಂದ ಅಧ್ಯಯನಕ್ಕಾಗಿ ಗಮನಿಸಿದ್ದು ಆಂದೋಲನ, ಕನ್ನಡ ಜನ ಅಂತರಂಗ, ಹೊಸದಿಗಂತ, ಈ ಸಂಜೆಯಂತಹ ಪತ್ರಿಕೆಗಳನ್ನು. ಆ ಪೈಕಿ ಆಂದೋಲನ ಮೈಸೂರು, ಮಂಡ್ಯ, ಕೊಡಗು ಜಿಲ್ಲೆಗಳಿಂದ ಆವೃತ್ತಿಗಳನ್ನು ಪ್ರಕಟಿಸುತ್ತಿದ್ದರೆ, ಕನ್ನಡಮ್ಮ, ಬೆಳಗಾವಿ, ಬಿಜಾಪುರ, ಧಾರವಾಡ ಹಾಗೂ ಕಾರವಾರ ಜಿಲ್ಲೆಗಳ ಓದುಗರನ್ನು ಗಮನದಲ್ಲಿರಿಸಿಕೊಂಡು ಮುನ್ನಡೆಯುತ್ತಿರುವ ಪತ್ರಿಕೆ.

ಕನ್ನಡ ಜನ ಅಂತರಂಗ ಮಂಗಳೂರಿನಿಂದ, ಹೊಸ ದಿಗಂತ ಬೆಂಗಳೂರು - ಮಂಗಳೂರುಗಳಿಂದ, ಈ ಸಂಜೆ ರಾಜಧಾನಿಯಿಂದ ಪ್ರಕಟವಾಗುತ್ತಿರುವ ಪತ್ರಿಕೆಗಳು. ಈವತ್ತು ದೊಡ್ಡ ಪತ್ರಿಕೆಗಳಿಗೆ ರಾಜ್ಯದ ಗಮನವನ್ನು ಸೆಳೆಯುವ ಸುದ್ದಿ ಮುಖ್ಯವಾದರೆ ಮಧ್ಯಮ ಪತ್ರಿಕೆಗಳಿಗೆ ಆಯಾ ಜಿಲ್ಲೆ ವಿಭಾಗದ ಗಮನ ಸೆಳೆಯುವ ಸುದ್ದಿ Lead ಆಗುತ್ತದೆ. ಮತ್ತು ತನ್ನ ವ್ಯಾಪ್ತಿಗೆ ಸೀಮಿತವಾದ ಪ್ರದೇಶಗಳ ಸುದ್ದಿಗೆ ಮಧ್ಯಮ ಪತ್ರಿಕೆಗಳು ಆದ್ಯತೆ ನೀಡುತ್ತವೆ. ಅದರ ಪರಿಣಾಮವಾಗಿ ನಿರ್ದಿಷ್ಟ ಪ್ರದೇಶದ ಓದುಗರಿಗೆ ಮಧ್ಯಮ ಪತ್ರಿಕೆಗಳು ಪ್ರಮುಖ ಆಕರ್ಷಣೆ. ಗಮನಾರ್ಹ ಸಂಗತಿ ಎಂದರೆ ಇಂತಹ ಪತ್ರಿಕೆಗಳು ರಾಜ್ಯ ಹಾಗೂ ರಾಷ್ಟ್ರದ ಗಮನ ಸೆಳೆಯುವ ಸುದ್ದಿಗಳಿಗೂ ಆದ್ಯತೆ ನೀಡುತ್ತವೆ. ಅದು ಕಾಲಕ್ಕೆ ಪ್ರಾದೇಶಿಕತೆಯನ್ನು ಹೆಚ್ಚಾಗಿ ಮೈಗೂಡಿಸಿಕೊಳ್ಳುವ ಮೂಲಕ ನಿರ್ದಿಷ್ಟ ಪ್ರದೇಶದ ಓದುಗರಿಗೆ ಇದು ನಮ್ಮ ಪತ್ರಿಕೆ ಎಂಬ ಭಾವನೆಯನ್ನು ಮೂಡಿಸುತ್ತವೆ.

ಅಧ್ಯಯನದ ದೃಷ್ಟಿಯಿಂದ ಗಮನಿಸಲಾದ ಐದು ಪತ್ರಿಕೆಗಳನ್ನು ತುಲನೆ ಮಾಡಿದರೆ ಮೇಲೆ ಹೇಳಿದ ಅಂಶ ಸ್ಪಷ್ಟವಾಗುತ್ತದೆ. ೨೦೦೧ರ ಮಾರ್ಚ್ ೧೯ ರಿಂದ ೨೫ ರವರೆಗಿನ ಅವಧಿಯ ಆಂದೋಲನ, ಕನ್ನಡಮ್ಮ, ಈ ಸಂಜೆ, ಕನ್ನಡ ಜನ ಅಂತರಂಗ, ಹೊಸ ದಿಗಂತ ಪತ್ರಿಕೆಗಳ ಮಾದರಿಯನ್ನು ಅಭ್ಯಸಿಸಿದಾಗ ಅವೆಲ್ಲ ಏಕಕಾಲಕ್ಕೆ ರಾಜ್ಯ, ರಾಷ್ಟ್ರ ಹಾಗೂ ಪ್ರಾದೇಶಿಕ ಸುದ್ದಿಗಳಿಗೆ ಮಹತ್ವ ನೀಡಿದ್ದನ್ನು ಮನನ ಮಾಡಿಕೊಳ್ಳಲಾಯಿತು.

ಮಾರ್ಚ್ ೧೯ರಂದು ಪ್ರಕಟವಾದ 'ಆಂದೋಲನ' ಬೆಂಗಳೂರಿನ ಎಐಸಿಸಿ ಅಧಿವೇಶನಕ್ಕೆ ಮಹತ್ವ ನೀಡಿದಂತೆಯೇ ಮೈಸೂರು, ಚಾಮರಾಜನಗರ ಜಿಲ್ಲೆಯ ವ್ಯಾಪ್ತಿಯಲ್ಲಿನ ಸುದ್ದಿಗಳಿಗೂ ಹೆಚ್ಚು ಆದ್ಯತೆ ನೀಡಿದೆ. ಅದು ಭುವನಹಳ್ಳಿ ಎಂಬಲ್ಲಿ ಸಾರಾಯಿ ಮಾರಾಟದ ವಿರುದ್ಧ ನಡೆದ ಪ್ರತಿಭಟನೆ ಅಥವಾ ಮೈಸೂರಿನಲ್ಲಿ ನಡೆದ ವಿಚಾರ ಸಂಕಿರಣದ ವಿಚಾರಗಳನ್ನು ಒಳಗೊಂಡಿದೆ. ಒಟ್ಟಿನಲ್ಲಿ ರಾಜ್ಯ, ರಾಷ್ಟ್ರ ಮಟ್ಟದ ಸುದ್ದಿಗಳನ್ನು ದಾಖಲಿಸಿ ಅದೇ ಕಾಲಕ್ಕೆ ಆಯಾ ಪ್ರದೇಶದ ಸುದ್ದಿಗಳಿಗೆ 'ಆಂದೋಲನ' ಹೆಚ್ಚು ಮಹತ್ವ ನೀಡಿದೆ.

ಮಾರ್ಚ್ ೨೦ರಂದು ಪ್ರಕಟವಾದ 'ಕನ್ನಡಮ್ಮ' ಪತ್ರಿಕೆ ತೆಹಲ್ಕಾ ಡಾಟ್ ಕಾಮ್ ಬಹಿರಂಗಪಡಿಸಿದ ಹಗರಣವನ್ನು ದಾಖಲಿಸಿದೆ. ಅದೇ ಕಾಲಕ್ಕೆ ಇಡೀ ಬೆಳಗಾವಿಯನ್ನು ತಲ್ಲಣಗೊಳಿಸಿದ ಕಮಾಂಡೋ ರಾಜನ ಕೊಲೆ ಪ್ರಕರಣವನ್ನು Lead ಆಗಿ ಛಾಪಿಸಿದೆ. ಬೆಳಗಾವಿ, ನಾಗಸೂರು, ಸಂತೆ ಬಸ್ತಿವಾಡ, ಬಾಗಲಕೋಟೆ, ಕಾರಲೆ, ಹುಕ್ಕೇರಿ ಹೀಗೆ ಆಯಾ ಪ್ರದೇಶದ ಪರಿಧಿಯಲ್ಲಿ ನಡೆಯುವ ಬೆಳವಣಿಗೆಗಳ ಬಗ್ಗೆ; ಸ್ಥಳೀಯ ಸಮಸ್ಯೆಗಳ ಬಗೆಗಿನ ದೂರುಗಳ ಬಗ್ಗೆ ಸಂಬಂಧ ಪಟ್ಟ ಆಡಳಿತದ ಗಮನ ಸೆಳೆಯಲು ಸಾಧ್ಯವಾಗುವುದರಿಂದ ಸಹಜವಾಗಿಯೆ ಆ ಭಾಗದ ಕನ್ನಡಮ್ಮ ಪತ್ರಿಕೆ ರಾಜ್ಯ ಮಟ್ಟದ ಪತ್ರಿಕೆ ಎನಿಸಿಕೊಳ್ಳುತ್ತದೆ.

ಮಾರ್ಚ್ ೨೧ರ ಆಂದೋಲನ ಮಂಡ್ಯದಲ್ಲಿ ನಡೆದ ಬಾಲಕಿಯ ಸಾವಿನ ಪ್ರಕರಣಕ್ಕೆ, ಮೈಸೂರು ಮಹಾನಗರ ಪಾಲಿಕೆಯಲ್ಲಿ ಅವ್ಯವಹಾರ ನಡೆದಿದೆ ಎಂಬ ದೂರುಗಳ ಬಗ್ಗೆ, ಕುಡಿಯುವ ನೀರಿನ ಸರಬರಾಜಿನಲ್ಲಾದ ವ್ಯತ್ಯಯದ ಬಗೆಗಿನ ಸುದ್ದಿಗಳಿಗೆ ಆದ್ಯತೆ ನೀಡಿದರೆ, ಅದೇ ದಿನದ ಹೊಸ ದಿಗಂತ ಪತ್ರಿಕೆ ತೆಹಲ್ಕಾ ಡಾಟ್‌ಕಾಮ್ ಬಹಿರಂಗಪಡಿಸಿದ ಹಗರಣಕ್ಕೆ ಸಂಬಂಧಿಸಿದಂತೆ ಸಂಸತ್‌ನಲ್ಲಿ ನಡೆದ ಕೋಲಾಹಲ, ಬೆಂಗಳೂರಿನ ಸಮಸ್ಯೆಗಳಿಗೆ ಹೆಚ್ಚು ಆದ್ಯತೆ ನೀಡಿದೆ. ಅದೇ ದಿನದ ಕನ್ನಡಮ್ಮ ಪತ್ರಿಕೆಗೆ ಗಡಿ ಸಮಸ್ಯೆಯ ಬಗ್ಗೆ ಕನ್ನಡ ಮತ್ತು ಸಂಸ್ಕೃತಿ ಸಚಿವೆ ರಾಣಿ ಸತೀಶ್ ನೀಡಿದ ಹೇಳಿಕೆ ಮುಖ್ಯವಾಗಿದೆ.

ಇನ್ನು ಮಾರ್ಚ್ ೨೪ರಂದು ಪ್ರಕಟವಾದ ಕನ್ನಡ ಜನ ಅಂತರಂಗ ಪತ್ರಿಕೆಗೆ ತೆಹಲ್ಕಾ ಡಾಟ್‌ಕಾಮ್ ಬಹಿರಂಗಪಡಿಸಿದ ಹಗರಣದಂತೆಯೇ ಕಲ್ಲಡ್ಕ ಸಮೀಪ ನಡೆದ ಲಾರಿ-ಕಾರು ಡಿಕ್ಕಿಯ ಪರಿಣಾಮವಾಗಿ ಈರ್ವರು ಅಸು ನೀಗಿದ ಘಟನೆ, ಬಂಟ್ವಾಳ್ ತಾಲ್ಲೂಕು ಪಂಚಾಯ್ತಿಯಲ್ಲಿ ನಡೆದ ಚರ್ಚೆ, ಉಡುಪಿಯಲ್ಲಿ ನಡೆದ ಉದ್ಯಾವರ ಮಾಧವಚಾರ್ಯ ಷಷ್ಠ್ಯಬ್ದ ಸಮಾರಂಭ ಮಂಗಳೂರಿನ ಜಗನ್ನಾಥ ರಥ ಯಾತ್ರೆಯ ಸುದ್ದಿಗಳು ಮುಖ್ಯವಾಗಿವೆ. ಮಾರ್ಚ್ ೨೪ ರಂದು ಪ್ರಕಟವಾಗಿರುವ ಸಂಜೆ ಪತ್ರಿಕೆ ಈ ಸಂಜೆಗೆ ತೆಹಲ್ಕಾ ಡಾಟ್‌ಕಾಮ್ ಬಹಿರಂಗಪಡಿಸಿದ ಹಗರಣದ ಬಗ್ಗೆ ಸಂಸತ್ತಿನಲ್ಲಿ ನಡೆದ ಚರ್ಚೆ, ರಾಜ್ಯದ ಸ್ಥಳೀಯ ಸಂಸ್ಥೆ ಚುನಾವಣೆಗಳಿಗೆ ಸಂಬಂಧಿಸಿದಂತೆ ಉಚ್ಚ ನ್ಯಾಯಾಲಯದಲ್ಲಿ ನಡೆದ ವಿಚಾರಣೆ ಮತ್ತು ಬೆಂಗಳೂರು, ಮೈಸೂರು, ಮಂಡ್ಯ, ಕೋಲಾರ, ಮಂಗಳೂರು ಗ್ರಾಮಾಂತರ ಜಿಲ್ಲೆಗಳ ವ್ಯಾಪ್ತಿಯಲ್ಲಿನ ಸುದ್ದಿಗಳು ಮುಖ್ಯವಾಗಿವೆ.

ಪ್ರಸ್ತುತ ಅಧ್ಯಯನದಿಂದ ಖಚಿತವಾಗಿರುವ ಅಂಶವೆಂದರೆ ಆಯಾ ಪ್ರದೇಶದ ಸುದ್ದಿಗಳಿಗೆ ನೀಡುವ ಆದ್ಯತೆಯ ಕಾರಣದಿಂದಾಗಿ ಮಧ್ಯಮ ಪತ್ರಿಕೆಗಳು ಹೆಚ್ಚು ಸಬಲ. ದೊಡ್ಡ ಪತ್ರಿಕೆಗಳ ಸ್ಥಳೀಯ ಪ್ರಸಾರಕ್ಕೆ ಹೋಲಿಸಿದರೆ ಮಧ್ಯಮ

ಪತ್ರಿಕೆಗಳ ಸ್ಥಳೀಯ ಪ್ರಸಾರ ಹಲವು ಪಟ್ಟು ಹೆಚ್ಚು. ಈವತ್ತು ಮೈಸೂರು, ಮಂಡ್ಯ, ಕೊಡಗು ಜಿಲ್ಲೆಗಳಿಂದ ಪ್ರಸಾರವಾಗುವ ಆಂದೋಲನದ ಒಟ್ಟಾರೆ ಪ್ರಸಾರದ ಸಂಖ್ಯೆ ಅರವತ್ತು ಸಹಸ್ರಕ್ಕಿಂತ ಹೆಚ್ಚು. ಕನ್ನಡಮ್ಮ ಪತ್ರಿಕೆಯ ಪ್ರಸಾರ ಸಂಖ್ಯೆ ಐವತ್ತು ಸಾವಿರಕ್ಕೂ ಹೆಚ್ಚು. ಇದೇ ರೀತಿ ಹೊಸ ದಿಗಂತ, ಕನ್ನಡ ಜನ ಅಂತರಂಗ, ಈ ಸಂಜೆ ಪತ್ರಿಕೆಗಳ ಪ್ರಸಾರ ವ್ಯಾಪ್ತಿಯೂ ಅದರ ಆಸುಪಾಸಿನಷ್ಟು ಇರುವುದನ್ನು ಗಮನಿಸಿದರೆ ಮಧ್ಯಮ ಪತ್ರಿಕೆಗಳ ಜನಪ್ರಿಯತೆಯ ಅರಿವಾಗುತ್ತದೆ.

ಮಧ್ಯಮ ಪತ್ರಿಕೆಗಳಿಗಿಂತ ಹೆಚ್ಚು ಸಬಲವಾಗಬಯಸುವ ದೊಡ್ಡ ಪತ್ರಿಕೆಗಳು ಆಯಾ ಜಿಲ್ಲೆಯ ಪ್ರಾದೇಶಿಕ ಸುದ್ದಿಗಳಿಗೆ ಹೆಚ್ಚು ಆದ್ಯತೆ ನೀಡಬೇಕಾಗುತ್ತದೆ. ದರದ ವಿಷಯದಲ್ಲಿ ಪೈಪೋಟಿ ನಡೆಸಬೇಕಾಗುತ್ತದೆ. ತಾಂತ್ರಿಕವಾಗಿಯೂ ಪೈಪೋಟಿ ಎದುರಿಸಬೇಕಾಗುತ್ತದೆ. ಕುತೂಹಲದ ಅಂಶವೆಂದರೆ ಪ್ರಜಾವಾಣಿ, ಕನ್ನಡಪ್ರಭ, ವಿಜಯ ಕರ್ನಾಟಕ, ಉದಯವಾಣಿ, ಸಂಯುಕ್ತ ಕರ್ನಾಟಕದಂತಹ ಪತ್ರಿಕೆಗಳು ಈ ಪೈಪೋಟಿಯ ಮೂಲಕ ಆಯಾ ಜಿಲ್ಲೆ, ಪ್ರದೇಶದಲ್ಲಿ ಓದುಗರ ಸಂಖ್ಯೆಯನ್ನು ವಿಸ್ತರಿಸಿಕೊಂಡಿವೆ. ಅಷ್ಟಾದರೂ ಆಯಾ ಜಿಲ್ಲೆ ಅಥವಾ ಪ್ರದೇಶದ ಮಟ್ಟಿಗೆ ಮಧ್ಯಮ ಪತ್ರಿಕೆಗಳು ಮುಂಚೂಣಿಯವೇ.

**ದೊಡ್ಡ ಹಾಗೂ ಸಣ್ಣ ಪತ್ರಿಕೆಗಳ ನಡುವಣ ಪೈಪೋಟಿ :** ಹಾಗೆ ನೋಡಿದರೆ ದೊಡ್ಡ ಹಾಗೂ ಸಣ್ಣ ಪತ್ರಿಕೆಗಳ ನಡುವಣ ಪೈಪೋಟಿ ಕೂಡಾ ಮೇಲೆ ಹೇಳಿರುವ ಪೈಪೋಟಿಗೆ ಹೋಲಿಕೆಯಾಗುವಂಥದ್ದು. ಉದಾಹರಣೆಗೆಂದು ಗಮನಿಸಿದರೆ ಶಿವಮೊಗ್ಗದಿಂದ ಪ್ರಕಟವಾಗುವ ನಾವಿಕ, ಜನವಾರ್ತೆ, ಮಂಡ್ಯದ ಪೌರವಾಣಿ, ಕೋಲಾರದ ಕೋಲಾರ ಪತ್ರಿಕೆ, ಬೆಳಗಾವಿಯ ಹಸಿರು ಕ್ರಾಂತಿ, ಕೊಡಗಿನ ಶಕ್ತಿ, ರಾಯಚೂರಿನ ಸುದ್ದಿಮೂಲ, ರಾಯಚೂರು ವಾಣಿ, ಹುಬ್ಬಳಿಯ ಸಂಜೆ ದರ್ಪಣ, ಗುಲ್ಬರ್ಗಾದ ಸಂಧ್ಯಾಕಾಲ, ಕ್ರಾಂತಿ: ತುಮಕೂರಿನ ಸೊಗಡು, ಪ್ರಜಾಪ್ರಗತಿ, ಹಾಸನದ ಮಧುರವಾಣಿ, ಬಾಗಲಕೋಟೆಯಿಂದ ಪ್ರಕಟಗೊಳ್ಳುವ ಸಮಾಜವೀರ ಹೀಗೆ ಬಹುತೇಕ ಜಿಲ್ಲಾ ಕೇಂದ್ರಗಳಿಂದ ಪ್ರಕಟಗೊಳ್ಳುವ ಸಣ್ಣ ಪತ್ರಿಕೆಗಳ ಪ್ರಸಾರ ಸಂಖ್ಯೆ ಐದರಿಂದ ಇಪ್ಪತ್ತೈದು ಸಾವಿರದ ಆಸುಪಾಸಿನಲ್ಲಿದೆ.

ಹೀಗೆ ಬಹುತೇಕವಾಗಿ ಜಿಲ್ಲಾಕೇಂದ್ರಗಳಿಂದ ಪ್ರಕಟವಾಗುವ ಸಣ್ಣ ಪತ್ರಿಕೆಗಳು ನಿಶ್ಚಿತವಾಗಿಯೂ ಪೈಪೋಟಿಯ ಮನೋಭಾವವನ್ನೇ ಹೊಂದಿವೆ. ಅಧ್ಯಯನದ ದೃಷ್ಟಿಯಿಂದ ಗಮನಿಸಿದರೆ ರಾಯಚೂರು ವಾಣಿ, ನಾವಿಕ, ಕರಾವಳಿ ಅಲೆ, ಪ್ರಜಾಪ್ರಗತಿ ಪತ್ರಿಕೆಗಳಿಗೆ ರಾಷ್ಟ್ರ, ರಾಜ್ಯ ಮಟ್ಟದ ಸುದ್ದಿಗಳಿಗಿಂತ ತಮ್ಮ ವ್ಯಾಪ್ತಿಯ ಸುದ್ದಿಗಳೇ ಹೆಚ್ಚು ಮಹತ್ವದವು.

ಮಾರ್ಚ್ ೧೮ರ ರಾಯಚೂರು ವಾಣಿ ಪತ್ರಿಕೆಗೆ ಎಐಸಿಸಿ ಅಧಿವೇಶನದಂತೆ ಅಲ್ಲಿನ ಥರ್ಮಲ್ ಘಟಕದಲ್ಲಿ ಹಾರುಬೂದಿಯ ಧೂಳು ಕಾಣಿಸಿಕೊಂಡಿದ್ದೂ ಮುಖ್ಯ ವಸ್ತು. ಅದೇ ರೀತಿ ರಾಯಚೂರಿನ ಕುಡಿವ ನೀರಿನ ಸಮಸ್ಯೆ ಪರಿಹರಿಸಲು ಹಣ ಒದಗಿಸಿದ ವರದಿ ಅದಕ್ಕೆ ಮುಖ್ಯ. ಗಮನಾರ್ಹ ಸಂಗತಿ ಎಂದರೆ ಸಣ್ಣ ಪತ್ರಿಕೆಗಳ ಶೇಕಡ ಎಂಭತ್ತರಷ್ಟು ಜಾಗವನ್ನು ಸ್ಥಳೀಯ ಸುದ್ದಿಗಳೇ ಆವರಿಸಿಕೊಳ್ಳುತ್ತವೆ.

ಮಾರ್ಚ್ ೧೯ರ ನಾವಿಕ ಪತ್ರಿಕೆ ರಾಷ್ಟ್ರಮಟ್ಟದ ಒಂದು ಸುದ್ದಿ, ರಾಜ್ಯ ಮಟ್ಟದ ಎರಡು ಸುದ್ದಿ, ಕ್ರೀಡೆಗೆ ಸಂಬಂಧಿಸಿದ ಒಂದು ಸುದ್ದಿಯನ್ನು ಹೊರತುಪಡಿಸಿದರೆ ಇನ್ನುಳಿದಂತೆಲ್ಲ ಸ್ಥಳೀಯ ಸುದ್ದಿಗಳಿಗೇ ಆದ್ಯತೆ ನೀಡಿದೆ. ಹೀಗೆ ಒಂದು ರಾಜ್ಯ ಮಟ್ಟದ ಪತ್ರಿಕೆ ಯಾವ ಪ್ರಮಾಣದಲ್ಲಿ ಸ್ಥಳೀಯ ಸುದ್ದಿಗಳಿಗೆ ಆದ್ಯತೆ ನೀಡಲು ಸಾಧ್ಯವಾಗುವುದಿಲ್ಲವೋ ಆ ಪ್ರಮಾಣದ ಸ್ಥಳೀಯ ಸುದ್ದಿಗಳಿಗೆ ಆದ್ಯತೆ ನೀಡುವ ಕೆಲಸ ಸಣ್ಣ ಪತ್ರಿಕೆಗಳಿಂದಾಗುತ್ತದೆ. ಮತ್ತದರ ಪರಿಣಾಮವಾಗಿಯೇ ಸಣ್ಣ ಪತ್ರಿಕೆಗಳು ಜಿಲ್ಲಾ ಮಟ್ಟಗಳಲ್ಲಿ ಭದ್ರವಾಗಿ ನೆಲೆಯೂರಲು ಸಾಧ್ಯವಾಗಿದೆ.

ಗಮನಾರ್ಹ ಸಂಗತಿ ಎಂದರೆ ರಾಯಚೂರು ವಾಣಿ, ಪ್ರಜಾಪ್ರಗತಿಯಂತಹ ಪತ್ರಿಕೆಗಳು ಭಾನುವಾರ ವಿಶೇಷ ಪುರವಣಿಯನ್ನು ನೀಡುತ್ತವೆ. ಶುಕ್ರವಾರ ಚಲನಚಿತ್ರರಂಗಕ್ಕೆ ಸಂಬಂಧಿಸಿದ ವಿವರಗಳನ್ನುಳ್ಳ ಸಿನೆಮಾ ಪುರವಣಿಯನ್ನು ಒದಗಿಸುತ್ತವೆ. ಇದೇ

ಕೆಲಸ ಬಹುತೇಕ ಸಣ್ಣ ಪತ್ರಿಕೆಗಳು ಮಾಡುತ್ತಿದೆ. ಅದರರ್ಥ ಸಮೂಹ ಮಾಧ್ಯಮಗಳ ನಡುವಣ ಪೈಪೋಟಿಗೆ ಈಗ ಹಿಂದೆಂದಿಗಿಂತಲೂ ವ್ಯಾಪಕತೆಯಿದೆ, ತೀವ್ರತೆಯಿದೆ, ಶಕ್ತಿಯಿದೆ.

ಈ ನಡುವೆಯೇ ಗಮನಿಸಬೇಕಾದ ಮತ್ತೊಂದು ಸಂಗತಿ ಎಂದರೆ ದೊಡ್ಡ, ಮಧ್ಯಮ ಹಾಗೂ ಸಣ್ಣ ಪತ್ರಿಕೆಗಳಿಗೆ ಸಂಜೆ ಪ್ರಕಟವಾಗುವ ಪತ್ರಿಕೆಗಳು ನೀಡುವ ಪೈಪೋಟಿ. ಇದನ್ನು ಮತ್ತಷ್ಟು ಸ್ಪಷ್ಟಪಡಿಸಿ ಹೇಳಬೇಕೆಂದರೆ ದಿನ ಪತ್ರಿಕೆಗಳಿಗೆ ಸಂಜೆ ಪತ್ರಿಕೆಗಳು ನೀಡುವ ಪೈಪೋಟಿ.

ದಿನಪತ್ರಿಕೆ-ಸಂಜೆ ಪತ್ರಿಕೆಗಳ ನಡುವಣ ಪೈಪೋಟಿ : ಸುದ್ದಿಗಾಗಿ ಇಪ್ಪತ್ನಾಲ್ಕು ಗಂಟೆ ಕಾಯುವುದು ಅಸಹನೀಯ ಎಂಬ ಮನಸ್ಥಿತಿಗೆ ಪೂರಕವಾಗಿ ಸೃಷ್ಟಿಯಾದ ಸಂಜೆ ಪತ್ರಿಕೆಗಳೂ ಈವತ್ತು ದಿನಪತ್ರಿಕೆಗಳಿಗೆ ಪೈಪೋಟಿ ನೀಡುತ್ತಿವೆ. ಗಮನಾರ್ಹ ಸಂಗತಿಯೆಂದರೆ ಇಂತಹ ಪೈಪೋಟಿ ಆರೋಗ್ಯಕರವಾಗಿರುವುದು. ಯಾಕೆಂದರೆ ಮಧ್ಯಾಹ್ನದೊಳಗೆ ಘಟಿಸುವ ಬೆಳವಣಿಗೆಗಳ ವಿವರವನ್ನು ಸಂಜೆ ವೇಳೆಗೆ ಸಂಜೆ ಪತ್ರಿಕೆಗಳು ಒದಗಿಸಿದರೂ ಓದುಗ ವರ್ಗ ಮುಂಜಾನೆಯ ವೇಳೆಗೆ ದಿನಪತ್ರಿಕೆ ಓದುವ ಹವ್ಯಾಸವನ್ನು ಕೈ ಬಿಡುವ ಉದಾಹರಣೆ ಇಲ್ಲ. ಅಂದರೆ ತ್ವರಿತಗತಿಯಲ್ಲಿ ಸುದ್ದಿಯ ವಿವರ ಪಡೆಯುವ ಕುತೂಹಲ ಸಂಜೆ ಪತ್ರಿಕೆಗಳ ಪಾಲಿಗೆ ಮೂಲಾಧಾರ.

ಹಾಗೆಂದು ಸಂಜೆ ಪತ್ರಿಕೆಗಳಿಗೆ ದಿನ ಪತ್ರಿಕೆಗಳ ರೀತಿ ನಿಶ್ಚಿತ ಪ್ರಸಾರ ಸಂಖ್ಯೆಯಿರುವುದಿಲ್ಲ. ಸುದ್ದಿಯ ಮಹತ್ವದ ಹಿನ್ನಲೆಯಲ್ಲಿ ಅದು ಯಾವುದೇ ಮಟ್ಟದ ಪ್ರಸಾರಕ್ಕೇರಬಹುದು. ಇಲ್ಲವೇ ಕಡಿಮೆಯೂ ಆಗಬಹುದು. ಅಧ್ಯಯನದ ದೃಷ್ಟಿಯಿಂದ ಗಮನಿಸಿದ ಹತ್ತಕ್ಕೂ ಹೆಚ್ಚು ಸಂಜೆ ಪತ್ರಿಕೆಗಳ ವಿಷಯದಲ್ಲಿ ಇದು ಸ್ಪಷ್ಟವಾಗಿದೆ.

ಭೂಗತ ಜಗತ್ತಿನ ದೊರೆ ಜಯರಾಜ್ ಹತ್ಯೆ ನಡೆದ ಸಂದರ್ಭದಲ್ಲಿ ರಾಜಧಾನಿಯಿಂದ ಪ್ರಕಟವಾಗುವ ಸಂಜೆ ವಾಣಿ ಪತ್ರಿಕೆ ಐವತ್ತೈದು ಸಾವಿರದಷ್ಟು ಪ್ರಸಾರಕ್ಕೇರಿತ್ತು. ಇತ್ತೀಚೆಗೆ ಕುಖ್ಯಾತ ನರಹಂತಹ ವೀರಪ್ಪನ್ ಮೇರುನಟ ರಾಜಕುಮಾರ್‌ರವರನ್ನು ಅಪಹರಿಸಿದ ದಿನಗಳಲ್ಲಿ ಸಂಜೆ ಪತ್ರಿಕೆಗಳಾದ ಈ ಸಂಜೆ, ಸಂಜೆವಾಣಿ ಐವತ್ತರಿಂದ ಎಂಭತ್ತು ಸಹಸ್ರ ಪ್ರತಿಗಳನ್ನು ಮುದ್ರಿಸಿದವು. ಇದೇ ಸಂದರ್ಭದಲ್ಲಿ ಮೈಸೂರಿನ ಆಂದೋಲನ ದಿನಪತ್ರಿಕೆ ಆ ದಿನದ ಮಟ್ಟಿಗೆ ಸಂಜೆ ಆವೃತ್ತಿಯನ್ನು ಹೊರಡಿಸಿ ಲಾಭ ಮಾಡಿಕೊಂಡಿತು. ಅಂದರೆ ಕುತೂಹಲ ಕೆರಳಿಸುವ ಸುದ್ದಿಯೇ ಸಂಜೆ ಪತ್ರಿಕೆಗಳ ಪ್ರಸಾರ ಸಂಖ್ಯೆಯನ್ನು ಹೆಚ್ಚಿಸುತ್ತವೆ. ಅಂತಹ ಸುದ್ದಿ ಲಭ್ಯವಾಗದ ದಿನಗಳಲ್ಲಿ ಪ್ರಸಾರ ಸಂಖ್ಯೆ ಗಣನೀಯವಾಗಿ ಕುಗ್ಗಿ ಬಿಡುತ್ತದೆ.

ಈ ದೃಷ್ಟಿಯಿಂದ ಸಂಜೆ ಪತ್ರಿಕೆ ಹಾಗೂ ದಿನಪತ್ರಿಕೆಗಳ ನಡುವಣ ಪೈಪೋಟಿ ಪ್ರಸಾರ ಸಂಖ್ಯೆಯ ಮೇಲೆ ವ್ಯತಿರಿಕ್ತ ಪರಿಣಾಮಗಳನ್ನುಂಟು ಮಾಡದಿದ್ದರೂ ಸುದ್ದಿಯ ವಿಷಯದಲ್ಲಿ ಪೈಪೋಟಿ ನಡೆದೇ ನಡೆಯುತ್ತಿದೆ. ಉದಾಹರಣೆಗೆ ರಾಜಕುಮಾರ್ ಅಪಹರಣ ನಡೆದ ದಿನ ಸಂಜೆ ಪತ್ರಿಕೆಗಳ ಪೈಪೋಟಿಯನ್ನೆದುರಿಸಲು ಪ್ರಜಾವಾಣಿಯಂತಹ ದೊಡ್ಡ ಪತ್ರಿಕೆ, ಆಂದೋಲನದಂತಹ ಮಧ್ಯಮ ಪತ್ರಿಕೆಗಳೂ ಸಂಜೆಯ ಆವೃತ್ತಿಯನ್ನು ಪ್ರಕಟಿಸಿದವು. ಒಂದು ಸುದ್ದಿಯನ್ನು ಇತರೆಲ್ಲ ಪತ್ರಿಕೆಗಳಿಗಿಂತ ಮುಂಚಿತವಾಗಿ ಓದುಗನಿಗೆ ರವಾನಿಸುವುದು ಯಾವುದೇ ಪತ್ರಿಕೆಯ ಮೂಲ ಗುರಿಯಾಗಿರುತ್ತದೆ. ಆ ಗುರಿಯಿಲ್ಲದ ಪತ್ರಿಕೆ ಪೈಪೋಟಿಯ ಕಣದಲ್ಲುಳಿಯಲು ಸಾಧ್ಯವಿಲ್ಲ.

ಈವತ್ತು ರಾಜಧಾನಿಯಿಂದ ಪ್ರಕಟವಾಗುವ ಸಂಜೆ ವಾಣಿ, ಈ ಸಂಜೆ, ಮೈಸೂರಿನ ಮೈಸೂರು ದಿಗಂತ, ಗುಲ್ಬರ್ಗಾದ ಸಂಧ್ಯಾಕಾಲ, ಹುಬ್ಬಳಿಯ ಸಂಜೆ ದರ್ಪಣ, ಶಿವಮೊಗ್ಗದ ನಾವಿಕ, ಜನವಾರ್ತೆ, ಬೀದರ್‌ನ ಮಧುರವಾಣಿ, ಮಂಗಳೂರಿನ ಮಂಗಳೂರು ಮಿತ್ರ, ಕರಾವಳಿ ಅಲೆ ಮುಂತಾಗಿ ರಾಜ್ಯದ ಬಹುತೇಕ ಜಿಲ್ಲೆಗಳಲ್ಲಿ ಪ್ರಕಟವಾಗುವ ಸಂಜೆ ಪತ್ರಿಕೆಗಳು

ದಿನಪತ್ರಿಕೆಗಳಿಗೆ ಹೋಲಿಸಿದರೆ ತಳಮಟ್ಟದ ಜನರನ್ನು ತಲುಪುವುದಿಲ್ಲ. ಆದರೆ ಒಂದು ನಿರ್ದಿಷ್ಟ ಸ್ತರದವರೆಗೆ ತಲುಪುವಲ್ಲಿ ಯಶಸ್ವಿಯಾಗಿವೆ.

ಆ ಪೈಕಿ ಸಂಜೆವಾಣಿ, ಈ ಸಂಜೆಯಂತಹ ಪತ್ರಿಕೆಗಳು ಗ್ರಾಮಾಂತರ, ನಗರ ಆವೃತ್ತಿಗಳನ್ನು ಪ್ರಕಟಿಸುತ್ತವೆ. ಬಹುತೇಕವಾಗಿ ಮುಂಜಾನೆ ಐದೂವರೆಯ ಒಳಗೆ ನಡೆಯುವ ಸುದ್ದಿ, ಬೆಳವಣಿಗೆಗಳು ಗ್ರಾಮಾಂತರ ಆವೃತ್ತಿಗೆ ಆಹಾರವಾದರೆ ಮಧ್ಯಾಹ್ನ ಎರಡೂವರೆ-ಮೂರು ಗಂಟೆಯವರೆಗೆ ನಡೆಯುವ ಬೆಳವಣಿಗೆಗಳು ನಗರ ಆವೃತ್ತಿಗೆ ಆಹಾರವಾಗುತ್ತಿವೆ. ಆ ದೃಷ್ಟಿಯಿಂದ ಸಂಜೆ ಪತ್ರಿಕೆಗಳು ಎದುರಿಸುವ ತೊಡಕು ದಿನ ಪತ್ರಿಕೆಗಳಿರುವುದಿಲ್ಲ. ಯಾಕೆಂದರೆ ಸುದ್ದಿ, ತಾಂತ್ರಿಕತೆಯ ಹೊಂದಾಣಿಕೆಯೊಂದಿಗೆ ನಿಶ್ಚಿತ ವೇಳೆಯೊಳಗಾಗಿ ಓದುಗನ ಕೈಯಲ್ಲಿರಬೇಕಾದ ಅನಿವಾರ್ಯತೆ ಸಂಜೆ ಪತ್ರಿಕೆಗಳದು. ಆದರಿಂದ ಸಂಜೆ ಪತ್ರಿಕೆಗಳ ಪೈಪೋಟಿ ಸಮಯದೊಂದಿಗೂ ನಡೆಯಬೇಕಾಗುತ್ತದೆ.

**ವಿದ್ಯುನ್ಮಾನ ಮಾಧ್ಯಮ ಹಾಗೂ ಪತ್ರಿಕೆಗಳ ನಡುವಣ ಪೈಪೋಟಿ :** ಟೆಲಿವಿಷನ್, ಆಕಾಶವಾಣಿಯಂತಹ ಮಾಧ್ಯಮಗಳು ಪತ್ರಿಕೆಗಳೊಂದಿಗೆ ನಡೆಸುವ ಪೈಪೋಟಿ ನಿಶ್ಚಿತವಾಗಿಯೂ ಗಮನಾರ್ಹವಾದದ್ದು. ಈವತ್ತು ಖಾಸಗಿ ವಾಹಿನಿಗಳು ಪ್ರತಿ ಘಂಟೆಗೂ ಸ್ಥಳೀಯ, ರಾಜ್ಯ, ರಾಷ್ಟ್ರ ಹಾಗೂ ಅಂತರರಾಷ್ಟ್ರೀಯ ಸುದ್ದಿಗಳನ್ನು ಗ್ರಾಹಕರಿಗೆ ಒದಗಿಸುತ್ತಿವೆ. ಸಮೂಹ ಮಾಧ್ಯಮಗಳ ಪೈಕಿ ವಾರ ಪತ್ರಿಕೆಗಳು, ಪಾಕ್ಷಿಕಗಳು, ಮಾಸಿಕಗಳು ಇಂತಹ ಪೈಪೋಟಿಯ ತೆಕ್ಕೆಗೆ ನಿಲುಕುವುದಿಲ್ಲವಾದರೂ ದೊಡ್ಡ, ಮಧ್ಯಮ ಹಾಗೂ ಸಣ್ಣ ದಿನಪತ್ರಿಕೆಗಳು ಈ ಪೈಪೋಟಿಯನ್ನೆದುರಿಸುವುದು ಅನಿವಾರ್ಯವಾಗುತ್ತದೆ. ಯಾಕೆಂದರೆ ದಿನಪತ್ರಿಕೆಗಳ ಮೂಲಧಾರವೇ ಸುದ್ದಿ.

ಉದಾಹರಣೆಗೆ ತೆಹಲ್ಕಾ ಡಾಟ್ ಕಾಮ್ ರಕ್ಷಣಾ ವಲಯದ ಹಗರಣವನ್ನು ಬಯಲಿಗೆಳೆದ ಬೆಳವಣಿಗೆ ಟಿವಿಯಂತಹ ಮಾಧ್ಯಮದ ಮೂಲಕ ವೀಕ್ಷಕರನ್ನು ತಲುಪುವ ವೇಗ, ಪತ್ರಿಕೆಗಳು ತಲುಪುವ ವೇಗಕ್ಕಿಂತ ತೀವ್ರವಾಗಿರುತ್ತವೆ. ಅದೇ ರೀತಿ ಇಂತಹ ಬೆಳವಣಿಗೆಯೊಂದರ ಹಿನ್ನೆಲೆಯಲ್ಲಿ ವಿವಿಧ ಪಕ್ಷಗಳ, ವಿವಿಧ ಸ್ತರಗಳ ಮುಖಂಡರನ್ನು ಚರ್ಚೆಗೆಳೆದು ನಿಕಷಕ್ಕೆ ಬಿಡುವ ಕೆಲಸ ಟಿವಿಯಂತಹ ಮಾಧ್ಯಮಕ್ಕೆ ಸುಲಭವಾಗಿ ಬಿಡುತ್ತದೆ ಮತ್ತು ನೋಡುಗನ ಮೇಲೆ ಗಾಢ ಪರಿಣಾಮ ಬೀರಲೂ ಸಾಧ್ಯವಾಗುತ್ತದೆ.

ಮರುಬೆಳಿಗ್ಗೆ ಇಂತಹ ಸುದ್ದಿಯನ್ನು ಓದುವ ಬದಲು ಮುಂಚಿತವಾಗಿಯೇ ಗ್ರಹಿಸುವ ಆಸಕ್ತಿ ಬಹು ಸಂಖ್ಯಾತರಲ್ಲಿರುತ್ತಾದ್ದರಿಂದ ಪತ್ರಿಕೆಗಳು ಅಂತಹ ಪೈಪೋಟಿಯನ್ನೆದುರಿಸಲು ಪರ್ಯಾಯ ಮಾರ್ಗಗಳನ್ನು ಕಂಡುಕೊಳ್ಳುವುದು ಅನಿವಾರ್ಯವಾಗುತ್ತದೆ. ತಾನು ಕೂಡಾ ಸ್ಕೂಪ್‌ಗಳನ್ನು ಪ್ರಕಟಿಸುವ ಪ್ರಯತ್ನದಲ್ಲಿ ನಿರಂತರವಾಗಿ ತೊಡಗಿಕೊಂಡಿರಬೇಕಾಗುತ್ತದೆ. ಇದೇ ರೀತಿ ಖಾಸಗಿ ವಾಹಿನಿಗಳು ಯಾವುದೋ ಜಿಲ್ಲಾ ಕೇಂದ್ರದಲ್ಲಿ ಬೆಳಿಗ್ಗೆ ನಡೆದ ಬೆಳವಣಿಗೆಗಳ ವಿವರವನ್ನು ಕೆಲವೇ ಘಂಟೆಗಳೊಳಗಾಗಿ ನೋಡುಗನಿಗೆ ದೃಶ್ಯ ಸಹಿತವಾಗಿ ಒದಗಿಸುವುದು ಕಷ್ಟವಾಗುತ್ತದಾದರೂ ಬರೀ ಸುದ್ದಿಯನ್ನು ನೀಡುವುದಕ್ಕಂತೂ ಯಾವುದೇ ಅಡ್ಡಿಯಿಲ್ಲ.

ಕುತೂಹಲದ ಸಂಗತಿ ಎಂದರೆ ಇಂತಹ ಪೈಪೋಟಿಗಳೆಲ್ಲದರ ನಡುವೆಯೂ ಪತ್ರಿಕೆಗಳಿಗೆ ವರದಾನವಾಗಿರುವ ಅಂಶವೆಂದರೆ ಅದರ ದಾಖಲು ಸ್ಥಿತಿ. ವಿದ್ಯುನ್ಮಾನ ಮಾಧ್ಯಮಗಳು ಒಂದು ಸುದ್ದಿಯನ್ನು ಗಂಟೆಗೊಂದು ಬಾರಿಯಂತೆ ಇಪ್ಪತ್ನಾಲ್ಕು ಗಂಟೆಗಳ ಕಾಲ ಬಿತ್ತರ ಮಾಡಿದರೂ ಮರುದಿನದವರೆಗೆ ಅಥವಾ ಸುದ್ದಿಯ ತೀವ್ರತೆಯಿರುವವರೆಗಷ್ಟೆ ಅದಕ್ಕಂಟಿಕೊಳ್ಳಬೇಕಾಗುತ್ತದೆ. ಆದರೆ ಒಂದು ಬಾರಿ ಪ್ರಕಟವಾದ ಪತ್ರಿಕೆ ಓದುಗ ಬಯಸಿದಾಗಲೆಲ್ಲಾ ಗಮನಿಸಬಹುದಾದ ದಾಖಲೆ. ಈ ಮಧ್ಯೆ ಅಧ್ಯಯನದ

ಸಂದರ್ಭದಲ್ಲಿ ಗಮನಿಸಲಾದ ಮತ್ತೊಂದು ಅಂಶವೆಂದರೆ ವಿದ್ಯುನ್ಮಾನ ಮಾಧ್ಯಮಗಳ ನೋಡುಗರು, ಕೇಳುಗರ ಸಂಖ್ಯೆ ಮುಂಜಾನೆಗಿಂತ ಸಂಜೆಯ ವೇಳೆ ಹೆಚ್ಚು. ಆದಕ್ಕೆ ಮನುಷ್ಯನಿಗಿರುವ ದೈನಂದಿನ ಒತ್ತಡ ಪ್ರಮುಖ ಕಾರಣ. ಈ ಅಂಶ ಕೂಡಾ ಪತ್ರಿಕೆಗಳ ಪಾಲಿಗೆ ಅನುಕೂಲಕರ. ಹೀಗೆ ವಿದ್ಯುನ್ಮಾನ ಮಾಧ್ಯಮ ಹಾಗೂ ಸಣ್ಣ ಪತ್ರಿಕೆಗಳ ನಡುವಿನ ಪೈಪೋಟಿ ಒಟ್ಟಾರೆಯಾಗಿ ಸಮೂಹ ಮಾಧ್ಯಮದ ಶಕ್ತಿಯನ್ನು ಹಿಗ್ಗಿಸಿದೆ ಎಂಬುದು ನಿಸ್ಸಂದೇಹ.

ಪರಸ್ಪರ ಪೈಪೋಟಿಯ ನಡುವೆ ಬದುಕುಳಿಯಬೇಕಾದ ಅನಿವಾರ್ಯತೆಯ ನಡುವೆ ಎರಡು ಮಾಧ್ಯಮಗಳು ಹೊಸ ಹೊಸದರ ಅನ್ವೇಷಣೆಗೆ ಮುಂದಾಗುವಂತೆ ಮಾಡಿವೆ. ಆ ದೃಷ್ಟಿಯಿಂದ ಗ್ರಾಹಕನಿಗೆ ಆಯ್ಕೆಯ ಸೌಲಭ್ಯವಿದೆ. ಆತನಿಗೆ ಅಂತಹ ಸೌಲಭ್ಯವಿದೆ ಎನ್ನುವುದು ಅರ್ಥವಾಗಿರುವುದರಿಂದ ಸಮೂಹ ಮಾಧ್ಯಮಗಳ ನಡುವಣ ಪೈಪೋಟಿಗೆ ವಿಸ್ತೃತ ಮಜಲೂ ದೊರೆಯುತ್ತಿದೆ.

ಈ ಎಲ್ಲದರ ನಡುವೆ ದಾಖಲಿಸಬೇಕಾದ ಮತ್ತೊಂದು ಪೈಪೋಟಿಯ ಸ್ವರೂಪವೆಂದರೆ ನಿಯತ ಕಾಲಿಕೆಗಳ ನಡುವಿನದು. ನಿಯತಕಾಲಿಕೆಗಳು ವಿದ್ಯುನ್ಮಾನ ಮಾಧ್ಯಮ ಹಾಗೂ ದಿನಪತ್ರಿಕೆಗಳ ಜೊತೆ ಪೈಪೋಟಿಯ ಕಣದಲ್ಲಿರದೇ ಹೋದರೂ, ಅಥವಾ ನಡೆಯಬಹುದಾದ ಪೈಪೋಟಿ ಪರೋಕ್ಷವಾಗಿದ್ದರೂ ತಮ್ಮದೇ ಗುಣಾತ್ಮಕ ಧೋರಣೆಯಿಂದ ಮುಂದಡಿಯಿಡಬೇಕಾಗುತ್ತದೆ. ಈವತ್ತು ಸುಧಾ, ತರಂಗ, ಲಂಕೇಶ ಪತ್ರಿಕೆ, ಹಾಯ್ ಬೆಂಗಳೂರು, ಅಗ್ನಿಯಂತಹ ವಾರಪತ್ರಿಕೆಗಳಿಗೆ ; ತುಷಾರ, ಮಯೂರ, ಕಸ್ತೂರಿ, ಭಾವನಾದಂತಹ ಮಾಸಿಕಗಳು ತಮ್ಮ ತಮ್ಮ ನಡುವಣ ಪೈಪೋಟಿಯ ಮೂಲಕ ಮುಂದಡಿಯಿಡಬೇಕಾಗುತ್ತದೆ. ಇಂತಹ ಪೈಪೋಟಿ ಕಾರಣದಿಂದಲೇ ಸಾಕಷ್ಟು ಸುಂದರವಾಗಿಯೇ ಮೂಡಿಬರುತ್ತಿದ್ದ ಭಾವನ ಮಾಸಪತ್ರಿಕೆ ಇದೀಗ ಅಂತ್ಯ ಕಂಡಿದೆ. ಇದನ್ನು ಗಮನಿಸಿದರೆ ನಿಯತಕಾಲಿಕೆಗಳ ಪೈಪೋಟಿ ಅವುಗಳ ಚೌಕಟ್ಟಿನಲ್ಲಿ ಸಹಜ.

ಆ ಪೈಕಿ ಸುಧಾ, ತರಂಗ, ಮಂಗಳದಂತಹ ವಾರಪತ್ರಿಕೆಗಳು Home Readers ಮೇಲೆ ಕಣ್ಣಿಟ್ಟು, ಆ ಮೂಲಕವೇ ಪೈಪೋಟಿಯ ಕಣದಲ್ಲಿ ಉಳಿಯುತ್ತವಾದರೆ ಲಂಕೇಶ ಪತ್ರಿಕೆ, ಹಾಯ್ ಬೆಂಗಳೂರ್, ಅಗ್ನಿ ಟ್ಯಾಬ್ಲಾಯ್ಡ್ ಪತ್ರಿಕೆಗಳು ತೀರಾ Exclusive ಎನ್ನುವಂತಹ ವರದಿಗಳನ್ನೋ ರಾಜಕೀಯದ ವರದಿಗಳನ್ನೋ ಕೇಂದ್ರೀಕರಿಸಿಕೊಂಡು ಪೈಪೋಟಿ ನಡೆಸುತ್ತವೆ.

ಹೀಗೆ ವಿದ್ಯುನ್ಮಾನ ಮಾಧ್ಯಮ, ಪತ್ರಿಕಾ ಮಾಧ್ಯಮಗಳ ನಡುವೆ ಒಂದಲ್ಲ ಒಂದು ರೀತಿಯ ಪೈಪೋಟಿ ಸಹಜ. ಗ್ರಾಹಕನಿಗೆ ಹೊಸತನ್ನು, ವೈವಿಧ್ಯವನ್ನು ಒದಗಿಸುವುದು ಅನಿವಾರ್ಯ ಎಂಬ ಅಂಶವೇ ಪೈಪೋಟಿಯ ಮೂಲಾಧಾರ ಎಂಬುದು ಈ ಸಂದರ್ಭದಲ್ಲಿ ಮುಖ್ಯವಾಗಿ ದಾಖಲು ಆಗಬೇಕಾದ ವಿಚಾರ.

ಈ ಮಧ್ಯೆ ಆಂಗ್ಲ ದಿನಪತ್ರಿಕೆಗಳ ಪೈಪೋಟಿಯ ಮೂಲಕ ಕನ್ನಡ ಪತ್ರಿಕೋದ್ಯಮದ ಮೇಲಾದ ಪರಿಣಾಮವನ್ನು ಮರೆಯಲು ಸಾಧ್ಯವಿಲ್ಲ. ಅದೆಂದರೆ ಟೈಮ್ಸ್ ಆಫ್ ಇಂಡಿಯಾದಂತಹ ಪತ್ರಿಕೆ ತನ್ನ ಪ್ರಸಾರ ಗತಿಯನ್ನು ತೀವ್ರಗೊಳಿಸಿಕೊಳ್ಳಲು ಏಕಾಏಕಿಯಾಗಿ ಪತ್ರಿಕೆಯ ದರವನ್ನು ಕುಗ್ಗಿಸಿತು. ಆ ಮೂಲಕ ಮುಂಚೂಣಿಯತ್ತ ದಾಪುಗಾಲು ಹಾಕಿತು. ಈವತ್ತು ಕನ್ನಡ ಪತ್ರಿಕೆಗಳೂ ಇಂತಹ ಪೈಪೋಟಿಗಿಳಿಯುತ್ತವೆ. ಉದಯವಾಣಿ, ವಿಜಯಕರ್ನಾಟಕದಂತಹ ಪತ್ರಿಕೆಗಳು ದರ ಕಡಿಮೆ ಮಾಡಿ ಗ್ರಾಹಕರನ್ನು ಆಕರ್ಷಿಸಲು ಯತ್ನಿಸುತ್ತಿವೆ. ಇಂತಹದೊಂದು ಅಂಶವನ್ನು ಗಮನಿಸಿದರೆ ಪತ್ರಿಕೆಗಳ ನಡುವಣ ಪೈಪೋಟಿ ಕಾಲ ಕ್ರಮೇಣ ತೀವ್ರವಾಗುವುದು ಸಹಜ. ಮತ್ತದು ಬೆಳವಣಿಗೆಯ ದೃಷ್ಟಿಯಿಂದಲೂ ತೀರಾ ಅನಿವಾರ್ಯ.

# ಪಟ್ಟಿ - ೧೬ : ಕನ್ನಡ ದಿನಪತ್ರಿಕೆಗಳ ಮಾದರಿ

(೧೯.೩.೨೦೦೧ರಿಂದ ೨೫.೩.೨೦೦೧)

| ಪತ್ರಿಕೆಗಳು | ಸೋಮವಾರ | ಮಂಗಳವಾರ | ಬುಧವಾರ | ಗುರುವಾರ | ಶುಕ್ರವಾರ | ಶನಿವಾರ | ಭಾನುವಾರ |
|---|---|---|---|---|---|---|---|
| ಪ್ರಜಾವಾಣಿ | ೧೪ ಪುಟ + ೪ ಪುಟಗಳ ಕ್ರೀಡಾ-ಯುವ ಪುರವಣಿ | ೧೨ ಪುಟಗಳು | ೧೨ + ೪ ಪುಟಗಳ ವಾಣಿಜ್ಯ-ಕೃಷಿ ಪುರವಣಿ | ೧೬ ಪುಟಗಳು | ೧೪ ಪುಟ + ೪ಪುಟಗಳ ಸಿನಿಮಾ ಪುರವಣಿ | ೧೪ ಪುಟ + ೪ ಪುಟ ಕರ್ನಾಟಕ ಪುರವಣಿ | ೧೨ ಪುಟ + ೮ ಪುಟ ಸಾಮಾನ್ಯ ಪುರವಣಿ |
| ಕನ್ನಡಪ್ರಭ | ೧೨ ಪುಟ + ೪ ಪುಟಗಳ ಆರ್ಥಿಕ ಪುರವಣಿ | ೧೨ ಪುಟಗಳು | ೧೪ ಪುಟಗಳು | ೧೨ ಪುಟಗಳು | ೧೬ ಪುಟ + ೪ ಪುಟಗಳ ಸಿನೆಮಾ ಪುರವಣಿ | ೧೨ ಪುಟ | ೧೬ ಪುಟ + ೨೦ ಪುಟ ಸಿನೆಮಾ ಜಾಹೀರಾತು + ೬ ಪುಟ ಸಾಮಾನ್ಯ ಪುರವಣಿ |
| ಸಂಯುಕ್ತ ಕರ್ನಾಟಕ | ೧೨ ಪುಟಗಳು | ೧೦ ಪುಟಗಳು | ೧೨ ಪುಟ + ೪ಪುಟಗಳು ವ್ಯಾಪಾರ ಪುರವಣಿ | ೧೨ ಪುಟಗಳು | ೧೨ ಪುಟ + ೪ ಪುಟ ಸಿನೆಮಾ ಪುರವಣಿ | ೧೨ ಪುಟ | ೧೨ ಪುಟ + ೬ ಪುಟ ಸಾಮಾನ್ಯ ಪುರವಣಿ |
| ಉದಯವಾಣಿ | ೧೨ ಪುಟ + ೪ + ೪ ಪುಟಗಳ ನಾಡು ನುಡಿ ಕುರಿತ ಪುರವಣಿ | ೧೨ ಪುಟಗಳು | ೧೨ ಪುಟಗಳು | ೧೨ ಪುಟ + ೪ ಪುಟ ಬೆಂಗಳೂರು ಪುರವಣಿ | ೧೨ ಪುಟ + ೪ ಪುಟಗಳ ಸಿನೆಮಾ ಪುರವಣಿ + ೧೨ಪುಟಗಳ ಸಿನೆಮಾ ಜಾಹೀರಾತು | ೧೨ ಪುಟ + ೪ ಪುಟ ಬೆಂಗಳೂರು ಪುರವಣಿ + ೪ ಪುಟ ಕ್ರೀಡೆ + ೪ ಪುಟ ಮಹಿಳಾ ಪುರವಣಿ | ೧೨ ಪುಟ + ೪ ಪುಟ ಸಾಮಾನ್ಯ ಪುರವಣಿ + ೧೦ ಪುಟ ಜಾಹಿರಾತು ವಿಶೇಷ |
| ವಿಜಯ ಕರ್ನಾಟಕ | ೧೨ ಪುಟ + ೪ ಪುಟಗಳ ಬೆಂಗಳೂರು ಕುರಿತ ಪುರವಣಿ | ೧೨ ಪುಟಗಳು | ೧೨ ಪುಟ + ೪ ಪುಟಗಳ ಮಹಿಳಾ ಪುರವಣಿ | ೧೨ ಪುಟ + ೪ ಪುಟ ಬೆಂಗಳೂರು ಕುರಿತ + ೮ ಪುಟ ಯುವಕರಿಗಾಗಿ | ೧೨ ಪುಟ + ೪ ಪುಟಗಳ ಸಿನೆಮಾ ಪುರವಣಿ | ೧೨ ಪುಟ + ಮಕ್ಕಳಿಗಾಗಿ ಕಿರು ಹೊತ್ತಿಗೆ | ೧೨ ಪುಟ + ೬ ಪುಟ ಸಾಮಾನ್ಯ ಪುರವಣಿ |

**ಅಡಿಟಿಪ್ಪಣಿ**

೧. ಬಾಂಡ್ ಎಫ್ ಫ್ರೇಜರ್

ಉಲ್ಲೇಖ : Journalism - Concept and controversy, Gian Singh mann, ೧೯೮೮, ಪು - ೧೬

೨. ಎರಿಕ್ ಹೋಡ್ಗಿನ್ಸ್

ಉಲ್ಲೇಖ : Journalism - Concept and controversy, Gian Singh mann, ೧೯೮೮, ಪು - ೧೪

೩. ಹೆಚ್.ಜಿ. ವೆಲ್ಸ್

ಉಲ್ಲೇಖ : Journalism - Concept and controversy, Gian Singh mann, ೧೯೮೮, ಪು - ೧೯

ಅಧ್ಯಾಯ : ಏಳು

# ಸಂವಹನ ಮಾಧ್ಯಮಗಳ ಅನಿವಾರ್ಯತೆ

ಮಾಧ್ಯಮವನ್ನು ಒಂದು ಉದ್ಯಮವಾಗಿ ಪರಿಗಣಿಸುತ್ತಿರುವ ಇಂದಿನ ದಿನಗಳಲ್ಲಿ ಅವು ಕೆಲ ಅನಿವಾರ್ಯತೆಗಳನ್ನು ಎದುರಿಸುತ್ತಿರುವುದು ಗಮನಾರ್ಹ. ಮಾಹಿತಿ ಯುಗದಲ್ಲಿ ಮಾಹಿತಿ, ಮನರಂಜನೆ ಪ್ರಸಾರವನ್ನು ಮಾಡುತ್ತಿರುವ ಮಾಧ್ಯಮಗಳು ಲಾಭದ ಆಸೆ ಬಿಟ್ಟು ಕೆಲಸ ಮಾಡುವುದು ಒಪ್ಪಲಾಗದ ಮಾತು. ಕಡೇ ಪಕ್ಷ ಅವು ಕಾರ್ಯಸ್ಥಗಿತಗೊಳಿಸದಂತೆ ನೋಡಿಕೊಳ್ಳುವುದಕ್ಕಾದರೂ ಆರ್ಥಿಕ ಭದ್ರತೆ ಅವುಗಳಿಗೆ ಅಗತ್ಯ. ಅದೇ ಕಾರಣದಿಂದಾಗಿ ಅವು ಮುಖ್ಯವಾಗಿ ಅವಲಂಬಿಸಿಕೊಳ್ಳುವುದು ಜಾಹೀರಾತುಗಳನ್ನು. ಜಾಹೀರಾತು ಮಾಧ್ಯಮಗಳ ಹಾಗೂ ಪೋಷಕನ ಜೀವನದಲ್ಲಿ ಎದ್ದು ತೋರುವಂತಹ ಪಾತ್ರವಹಿಸುವುದರಿಂದಲೇ ಇದನ್ನು ಈ ಮಹಾಪ್ರಬಂಧದ ವ್ಯಾಪ್ತಿಯಲ್ಲಿ ಪ್ರಸ್ತಾಪಿಸಲಾಗಿದೆ. ಜೊತೆಗೆ ಜಾಹೀರಾತುಗಳೂ ಕನ್ನಡ ಭಾಷಾವೃದ್ಧಿಯ ಕೆಲಸದಲ್ಲಿ ತಮ್ಮದೇ ಕೊಡುಗೆ ನೀಡುತ್ತಿರುವುದನ್ನು ಇಲ್ಲಿ ಗಮನಿಸಬಹುದಾಗಿದೆ.

ಮಾಧ್ಯಮಗಳಿಗಿರುವ ಇನ್ನೊಂದು ಮುಖ್ಯ ಅನಿವಾರ್ಯತೆ ಗ್ರಾಹಕ. ಗ್ರಾಹಕನೇ ಇಲ್ಲ ಅಂದರೆ ಮಾಧ್ಯಮಗಳ ವ್ಯಾಪಾರ ಯಾರಿಗಾಗಿ? ಗ್ರಾಹಕನಿಗೆ ಅಂದರೆ ಸಮಾಜಕ್ಕೆ ಮಾಧ್ಯಮಗಳು ಹೇಗೆ ಅನಿವಾರ್ಯವೋ ಹಾಗೆ ಮಾಧ್ಯಮಗಳಿಗೂ ಅವನು ಬೇಕು ಎಂಬ ಕಾರಣದಿಂದಲೇ ಮಾಧ್ಯಮ ಗ್ರಾಹಕನ ನಡುವಿನ ಸಂಬಂಧವನ್ನು ಈ ಅಧ್ಯಾಯದಲ್ಲಿ ಪ್ರಸ್ತಾಪಿಸಲಾಗಿದೆ.

## ೧. ಸಂವಹನ ಮಾಧ್ಯಮಗಳಲ್ಲಿ ಜಾಹೀರಾತು

ಖಾಸಗಿ ವಲಯದಲ್ಲಿ ಪ್ರಾರಂಭವಾದ ಆಕಾಶವಾಣಿ ತನ್ನ ಇತಿಹಾಸದಲ್ಲಿ ಎರಡು ಬಾರಿ ಸರ್ಕಾರದ ಆಸರೆ ಬಯಸಿಹೋದದ್ದನ್ನು ನಾವು ನೋಡಿದ್ದೇವೆ. ಇದಕ್ಕೆ ಮುಖ್ಯ ಕಾರಣವಾದದ್ದು ಹಣಕಾಸಿನ ಮುಗ್ಗಟ್ಟು ಎಂದೂ ಗೊತ್ತಾಗಿದೆ. ಅಂದ ಮೇಲೆ ಎಲ್ಲ ಕೆಲಸಕ್ಕೂ ಎಲ್ಲ ವಲಯಕ್ಕೂ ಬೇಕಾದಂತೆ ಮಾಧ್ಯಮಗಳನ್ನು ನಡೆಸಲೂ ಹಣಬೇಕು. ಈ ಹಿನ್ನೆಲೆಯಲ್ಲಿ ನೋಡಿದಾಗ 'ವೃತ್ತಿ' ಎನಿಸಿಕೊಂಡ ಮಾಧ್ಯಮೋದ್ಯಮ ಏಕಾಏಕಿ 'ವ್ಯಾಪಾರಿ ಸಂಸ್ಥೆ' ಎನಿಸಿಕೊಂಡು ಬಿಡುತ್ತದೆ. ಯಾವುದೇ ಒಂದು ಮಾಧ್ಯಮ ಸಾಯದೆ ಉಳಿಯಬೇಕಾದರೆ ಅದು ಆರ್ಥಿಕವಾಗಿ ಸಬಲವೂ ಸ್ವಾವಲಂಬಿಯೂ ಆಗಿರಬೇಕು. ಈ ಕಾರಣಕ್ಕಾಗಿಯೆ ಅದು ವ್ಯಾಪಾರಕ್ಕಿಳಿಯಬೇಕಾಗುತ್ತದೆ. ಹಾಗಾಗಿ ಈ ವ್ಯಾಪಾರವೇ ವೃತ್ತಿಯೂ ಆಗುತ್ತಿದೆ.

ಮಾಧ್ಯಮಗಳು ತಮ್ಮ ವಲಯದೊಳಗೂ ಹೊರಗೂ ತೀವ್ರ ಪೈಪೋಟಿಗಳನ್ನು ಎದುರಿಸುತ್ತಿರುವ ಇಂದಿನ ಸಂದರ್ಭಗಳಲ್ಲಿ ತಮ್ಮ ಆರ್ಥಿಕ ಶಕ್ತ್ಯಕ್ಕಾಗಿ ಜಾಹೀರಾತುಗಳನ್ನು ಅವಲಂಬಿಸಿರುವುದು ಗಮನಾರ್ಹ. ಜಾಹೀರಾತುಗಳು ಮಾಧ್ಯಮಗಳ ಜೀವನಾಡಿಯಾಗಿವೆ. ಜಾಹೀರಾತುಗಳನ್ನೇ ಅವಲಂಬಿಸದೆ ನಡೆಯುವ ಯಾವುದೇ ಮಾಧ್ಯಮ ಬಹಳ ದೂರ ನಡೆಯಲಾರದು. ಮಹಾತ್ಮಾ ಗಾಂಧಿಯಂತಹವರೇ ತಮ್ಮ 'ಹರಿಜನ' ಪತ್ರಿಕೆಗೆ ಜಾಹೀರಾತು ಸಂಗ್ರಹಿಸದೆ ಸೋತ ಪ್ರಸಂಗ ನಮ್ಮ ಕಣ್ಮುಂದೆ ಇದೆ. ಜಾಹೀರಾತುಗಳನ್ನೇ ಅವಲಂಬಿಸದೆ, ಸಾಗುತ್ತಿದ್ದ ಆಧ್ಯಾತ್ಮಿಕ ವಿಚಾರಗಳ ದೂರದರ್ಶನ ವಾಹಿನಿಯಾದ ಜೈನ್ ಟಿವಿ ಹೇಳ ಹೆಸರಿಲ್ಲದೆ ಮಾಯವಾಗಿಬಿಟ್ಟಿದೆ.

ಜಾಹೀರಾತುಗಳಲ್ಲದಿದ್ದರೂ ಬೇರಾವುದೇ ಮೂಲದಿಂದಲಾದರೂ ಸಂಸ್ಥೆಗೆ ಹಣಬೇಕು. ವಿದ್ಯುನ್ಮಾನ ಮಾಧ್ಯಮಗಳಲ್ಲಿ ಸಿಬ್ಬಂದಿ, ಕಾರ್ಯಕ್ರಮ ನಿರ್ಮಾಣ ವೆಚ್ಚಕ್ಕಾದರೂ ಪತ್ರಿಕೆಗಳ ಸಂದರ್ಭದಲ್ಲಿ ಕಚ್ಚಾ ವಸ್ತು, ಸಿಬ್ಬಂದಿ, ಮುದ್ರಣ, ಸಾಗಣೆಯ ವೆಚ್ಚಕ್ಕಾದರೂ ಹಣ ಬೇಕು. ಪತ್ರಿಕೆಗಳು ಆವರ್ತನೆಯ ಮೂಲಕ ಸ್ವಲ್ಪ ದುಡಿದುಕೊಳ್ಳಬಹುದು. ಖಾಸಗಿಯವರು ನಿರ್ಮಿಸಿದ ಕಾರ್ಯಕ್ರಮಗಳಿಂದ ಪ್ರಸಾರ ಶುಲ್ಕವನ್ನು ದೂರದರ್ಶನ ವಾಹಿನಿಗಳು ಪಡೆಯಬಹುದು. ಆದರೂ ಅಷ್ಟು ಸಾಕಾಗುವುದಿಲ್ಲ ಮತ್ತು ಮಾಡಿದ ಖರ್ಚಿಗೂ ಪಡೆದ ಆದಾಯಕ್ಕೂ ಹೊಂದಾಣಿಕೆಯೂ ಆಗುವುದಿಲ್ಲ. ಆದ್ದರಿಂದಲೇ ಜಾಹೀರಾತುಗಳು ಮಾಧ್ಯಮಗಳಿಗೆ ಬಹಳ ಮುಖ್ಯವಾಗುತ್ತವೆ, ಅನಿವಾರ್ಯವಾಗುತ್ತವೆ.

ಜಾಹೀರಾತುಗಳನ್ನು ಎನ್‌ಸೈಕ್ಲೋಪೀಡಿಯಾ ಬ್ರಿಟಾನಿಕ a form of paid announcement intended to promote the sale of commodity or service, to advance an idea or to bring about some other effet desired by the advertiser ಎಂದು ವರ್ಣಿಸಿದೆ. ಇದಕ್ಕೆ ಅಮೆರಿಕನ್ ಮಾರ್ಕೆಟಿಂಗ್ ಅಸೋಸಿಯೇಷನ್ ಹೀಗೆ ವ್ಯಾಖ್ಯೆ ನೀಡಿದೆ. any paid form of non-personal presentation and promotion of ideas, goods or services by an identified sponsor. ಅಂದರೆ , ಜಾಹೀರಾತು ಎನ್ನುವುದು ರೇಡಿಯೊ, ಟೆಲಿವಿಷನ್, ಸಿನೆಮಾ, ಪತ್ರಿಕೆ ಮುಂತಾದ ಯಾವುದೇ ಸಂವಹನ ವ್ಯವಸ್ಥೆಗೆ ಹಣ ನೀಡಿ, ಜಾಹೀರಾತುದಾರರು ತಮ್ಮ ಉತ್ಪನ್ನ, ಸೇವೆ ಅಥವಾ ಆಲೋಚನೆಗಳನ್ನು ಬಳಸುವಂತೆ ಜನತೆಗೆ ಜಾಹೀರುಗೊಳಿಸುವ ಪ್ರಕ್ರಿಯೆ. ಒಂದು ವಿಧದಲ್ಲಿ ತಮ್ಮ ಉತ್ಪನ್ನ, ಸೇವೆ ಮತ್ತು ಆಲೋಚನೆಗಳಿಗೆ ಪ್ರಚಾರವನ್ನು ದುಡ್ಡುಕೊಟ್ಟು ಖರೀದಿಸುವುದು.

ಜಾಹೀರಾತುಗಳನ್ನು ಭಿತ್ತಿಪತ್ರಗಳಾಗಿ, ಬ್ಯಾನರ್, ಹೋರ್ಡಿಂಗ್‌ಗಳಾಗಿ, ಸಾಗುವ ಬಸ್ಸಿನ ಹೊರಮೈ ಮೇಲೆ ಕಡೆಗೆ ಗಾಳಿಯಲ್ಲಿ ತೇಲುವ ಗಾಳಿಪಟ, ಬಲೂನುಗಳ ಮೇಲೂ ಪ್ರಕಟಿಸುವುದನ್ನು ನೋಡುತ್ತಿದ್ದೇವೆ. ಯಾವುದೇ ಬಗೆಯ ಸಮೂಹ ಮಾಧ್ಯಮವಿರಲಿ, ಜಾಹೀರಾತನ್ನು ಹೊರುವ ಸಾಮರ್ಥ್ಯ ಅದಕ್ಕಿರುತ್ತದೆ. ಇದಕ್ಕೆ ಕಾರಣ ಜಾಹೀರಾತು ಸಮೂಹವನ್ನು ತಲುಪಬೇಕು ಎನ್ನುವುದೇ ಆಗಿದೆ. ಒಂದು ಉದಾಹರಣೆ ಗಮನಿಸೋಣ. ಜನಪ್ರಿಯ ಕ್ರಿಕೆಟ್ ಆಟಗಾರರು ಜನರ ಆಕರ್ಷಣ ಕೇಂದ್ರಗಳಾಗಿರುವುದರಿಂದ ಅವರು ತೊಡುವ ಷರ್ಟ್, ಪ್ಯಾಂಟ್, ಶ್ಯೂಸ್‌ಗಳಿಗೂ ಬ್ಯಾಟ್‌ಗಳಿಗೂ ಪ್ರಾಯೋಜಕರಿದ್ದು ಆಟಗಾರರ ಉಡುಗೆ-ತೊಡುಗೆಗಳ ಮೇಲೆ ಕಂಪೆನಿಯ ಚಿಹ್ನೆ ಜಾಹೀರಾಗುತ್ತಿರುತ್ತದೆ. ಈ ಆಟಗಾರರೂ ಸಮೂಹ ಮಾಧ್ಯಮಗಳಿಗಾಗಿ ಸಿದ್ಧಪಡಿಸುವ ಜಾಹೀರಾತು ಕಾರ್ಯಕ್ರಮಗಳಲ್ಲೂ ರೂಪದರ್ಶಿಗಳಾಗಿ ಪ್ರಚಾರ ಮಾಡುತ್ತಾರೆ. ಜಾಹೀರಾತು ಎಂದರೆ ಪ್ರಚಾರ, ಪ್ರಚಾರ ಎಂದರೆ ಮಾರಾಟ, ಮಾರಾಟ ಎಂದರೆ ಗ್ರಾಹಕನ ಪಾಲ್ದಾರಿಕೆ ಎಂಬ ಸತ್ಯ ಸಾಬೀತಾಗುತ್ತದೆ.

ಜಾಹೀರಾತುಗಳನ್ನು ಮುಖ್ಯವಾಗಿ ಮೂರು ಬಗೆಯಲ್ಲಿ ಗುರುತಿಸಬಹುದು.

- ವಾಣಿಜ್ಯಕ ಜಾಹೀರಾತುಗಳು
- ವಾಣಿಜ್ಯೇತರ ಜಾಹೀರಾತುಗಳು
- ಪ್ರಕಟಣೆಗಳು

<u>ವಾಣಿಜ್ಯಕ ಜಾಹೀರಾತುಗಳು :</u> ವಿದ್ಯುನ್ಮಾನ ಮಾಧ್ಯಮಗಳಲ್ಲಿ ಕಾಲವನ್ನು, ಪತ್ರಿಕೆಗಳಲ್ಲಿ ಜಾಗವನ್ನು ಹಣ ಕೊಟ್ಟು ಖರೀದಿಸಿ ತಮ್ಮ ಉತ್ಪನ್ನ, ಸೇವೆ ಅಥವಾ ಆಲೋಚನೆಯನ್ನು ಮಾರಿಕೊಳ್ಳುವುದು ವಾಣಿಜ್ಯಕ ಜಾಹೀರಾತುಗಳಿಗೆ ನೀಡಬಹುದಾದ ಉದಾಹರಣೆಗಳು. ಸಾಬೂನು, ಕೈಗಡಿಯಾರ, ಚಿನ್ನಾಭರಣ ಮುಂತಾದ ವಸ್ತುಗಳ ಮಾರುಕಟ್ಟೆಯನ್ನು ಪ್ರೋತ್ಸಾಹಿಸುವುದಕ್ಕಾಗಿ ನೀಡಲಾಗುವ ಜಾಹೀರಾತುಗಳು ಈ ಗುಂಪಿಗೆ ಸೇರುತ್ತವೆ.

ವಾಣಿಜ್ಯಕ ಜಾಹೀರಾತುಗಳಲ್ಲಿ ಮೂರು ವಿಧಗಳಿರುತ್ತವೆ.

**ಉತ್ಪನ್ನಗಳಿಗೆ ಜಾಹೀರಾತು :** ಕಾರು ತಯಾರಿಕಾ ಕಂಪೆನಿಯೊಂದು ತಾನು ತಯಾರಿಸುವ ಕಾರುಗಳ ಮಾರಾಟವನ್ನು ಹೆಚ್ಚಿಸಿಕೊಳ್ಳುವ ದೃಷ್ಟಿಯಿಂದ ಜಾಹೀರಾತುಗಳನ್ನು ನೀಡುತ್ತದೆ. ಇಂತಹುದೊಂದು ಕಾರು ಮಾರುಕಟ್ಟೆಯಲ್ಲಿದೆ, ಅದರ ನಿರ್ವಹಣಾ ಸಾಮರ್ಥ್ಯ ಹೀಗೆಲ್ಲಾ ಇದೆ, ಅದರ ಅಂದ ಚೆಂದ ಎಲ್ಲವನ್ನೂ ವರ್ಣಿಸಿ ಪತ್ರಿಕೆಗಳಲ್ಲಿ ಅದರ ಸ್ಥಿರಚಿತ್ರವನ್ನೂ, ದೂರದರ್ಶನದಲ್ಲಿ ಆಕರ್ಷಕ ದೃಶ್ಯಗಳನ್ನು ತೋರಿಸಿ, ಕೊಳ್ಳುವವರನ್ನು ತಮ್ಮತ್ತ ಸೆಳೆದುಕೊಳ್ಳುವ ಕೆಲಸವನ್ನು ಕಂಪೆನಿಗಳು ಮಾಡುತ್ತವೆ.

ಈ ಬಗೆಯ ಜಾಹೀರಾತುಗಳಿಗೆ ಇಂಥದೇ ಉತ್ಪನ್ನವಾಗಬೇಕು ಎಂದಿಲ್ಲ. ಜಾಹೀರಾತಿಗೆ ನೀಡಲು ಬೇಕಾದ ಹಣವೊಂದಿದ್ದರೆ ಸಾಕು. ಚಪ್ಪಲಿ, ಪೊರಕೆ, ಮೊದಲ್ಗೊಂಡು ಯಾವುದೇ ಉತ್ಪನ್ನಕ್ಕೆ ಜಾಹೀರಾತು ನೀಡಬಹುದು.

**ಸಂಸ್ಥೆಗಳಿಗೆ ಜಾಹೀರಾತು :** ಕೈಗಾರಿಕೆಗಳಲ್ಲಿ ಟಾಟಾ ಕಂಪೆನಿಯ ಹೆಸರು ಭಾರೀ ಜನಪ್ರಿಯವಾಗಿದೆ. ತನ್ನ ವರ್ಚಸ್ಸನ್ನು ಕಾಪಾಡಿಕೊಳ್ಳುವ ಮೂಲಕವೇ ಆ ಕಂಪೆನಿ ತನ್ನೆಲ್ಲ ಉತ್ಪನ್ನಗಳಿಗೂ ಬೇಡಿಕೆ ಸೃಷ್ಟಿಸಿಕೊಳ್ಳಬಲ್ಲುದು. ಟಾಟಾ ಕಂಪೆನಿಯ ಉಪ್ಪಿನಿಂದ ಹಿಡಿದು ಕಾರಿನವರೆಗೆ ಅದು ತಯಾರಿಸುವ ಎಲ್ಲ ಉತ್ಪನ್ನಗಳಿಗೆ ಸೂಕ್ತ ಮಾರುಕಟ್ಟೆ ಒದಗುವುದಕ್ಕೆ ಆ ಸಂಸ್ಥೆಗಿರುವ ಹೆಸರೂ ಬಹು ಮುಖ್ಯ ಪಾತ್ರವಹಿಸುತ್ತದೆ.

**ಸಾರ್ವಜನಿಕ ಹಿತಾಸಕ್ತಿಯ ಜಾಹೀರಾತುಗಳು :** ಸಾರ್ವಜನಿಕರಿಗೆ ಒಳಿತಾಗಬಹುದಾದ ಮಾಹಿತಿಯೊಂದನ್ನು ನೀಡುವ ಮೂಲಕ ತಯಾರಿಕಾ ಸಂಸ್ಥೆಯೊಂದು ತನ್ನ ಉತ್ಪನ್ನಕ್ಕೂ ಜಾಹೀರಾತು ಕೊಟ್ಟುಕೊಳ್ಳಬಹುದು. ಉದಾಹರಣೆಗೆ ಅಯೋಡಿನ್‌ನ ಕೊರತೆಯಿಂದ ಗಾಯಿಟರ್‌ನಂತಹ ರೋಗಕ್ಕೆ ದಾರಿಯಾಗಬಹುದು, ಹೆಚ್ಚಾಗಿ ಅಯೋಡಿನ್ ಬಳಸಿದರೆ ಆರೋಗ್ಯಕರ ಎನ್ನುವ ಮಾಹಿತಿ ನೀಡುತ್ತಲೇ, ಅಯೋಡಿನ್ ಬೆರೆಸಿ ತಮ್ಮ ಸಂಸ್ಥೆಯು ತಯಾರಿಸಿದ ಉಪ್ಪು ಬಳಸಿ ಎಂದು ಜಾಹೀರಾತು ನೀಡಬಹುದು. ಹಾಗೆ ಆಟೋಮೊಬೈಲ್‌ನ ಸಂಸ್ಥೆಯೊಂದು ರಸ್ತೆ ಸಂಚಾರ ನಿಯಮಗಳ ಬಗ್ಗೆ ಜನರಿಗೆ ತಿಳಿವಳಿಕೆ ನೀಡುವಂತಹ ಜಾಹೀರಾತು ನೀಡಬಹುದು. ಇದಕ್ಕೆಲ್ಲಾ ಆಯಾ ತಯಾರಿಕಾ ಸಂಸ್ಥೆಗಳು ಹಣ ನೀಡಬೇಕಾಗುತ್ತದೆ.

ಸಾರ್ವಜನಿಕ ಹಿತಾಸಕ್ತಿಯ ಜಾಹೀರಾತುಗಳನ್ನು ಕೇಂದ್ರ ಹಾಗೂ ರಾಜ್ಯ ಸರ್ಕಾರಗಳೂ ನೀಡುತ್ತವೆ. ಕೇಂದ್ರ ಸರ್ಕಾರದ ಎಲ್ಲ ಇಲಾಖೆಗಳ, ಎಲ್ಲ ಯೋಜನೆ/ಕಾರ್ಯಕ್ರಮಗಳ ಜಾಹೀರಾತುಗಳನ್ನು ನೀಡಬಹುದಾದ ಸಂಸ್ಥೆಯಾಗಿ ಕೇಂದ್ರ ವಾರ್ತಾ ಮತ್ತು ಪ್ರಸಾರ ಸಚಿವಾಲಯದಡಿ 'ಜಾಹೀರಾತು ಮತ್ತು ದೃಶ್ಯ ಪ್ರಚಾರ ನಿರ್ದೇಶನಾಲಯ' ಎನ್ನುವ ಸಂಸ್ಥೆಯೊಂದು ಕಾರ್ಯ ನಿರ್ವಹಿಸುತ್ತಿದೆ. ಇದೇ ರೀತಿ ರಾಜ್ಯ ಸರ್ಕಾರದ ಸಾಧನೆ, ಯೋಜನೆಗಳ ಬಗ್ಗೆ ಜಾಹೀರಾತು ನೀಡುವ ಜವಾಬ್ದಾರಿ ರಾಜ್ಯ ವಾರ್ತಾ ಮತ್ತು ಪ್ರಚಾರ ಇಲಾಖೆಗೂ ಸೇರಿದೆ. ಈ ಸಂದರ್ಭಗಳಲ್ಲಿ ಸರ್ಕಾರ ನಿಗದಿಪಡಿಸಿದ ಬೆಲೆ ನೀಡಲಾಗುತ್ತಿದೆಯೇ ಹೊರತು ಪ್ರಸಾರ ಸಂಸ್ಥೆಗಳು/ಮಾಧ್ಯಮಗಳು ಕೇಳುವ ಬೆಲೆ ನೀಡಲಾಗುವುದಿಲ್ಲ.

ಅದೇ ರೀತಿ ರಾಷ್ಟ್ರೀಯ ಭಾವೈಕ್ಯತೆ, ಸಮಗ್ರತೆಯನ್ನು ಪ್ರತಿಬಿಂಬಿಸಲು ಗೀತಚಿತ್ರಗಳಂತಹ ಜಾಹೀರಾತುಗಳನ್ನು ದೂರದರ್ಶನ ಬಳಸಿಕೊಳ್ಳುತ್ತಿದೆ. ಸಾಧಾರಣವಾಗಿ ಕನ್ನಡ ಗೀತೆಗಳನ್ನೂ, ಡಿಡಿ-೧ರ ರಾಷ್ಟ್ರೀಯ ಪ್ರಸಾರದಲ್ಲಿ ಪ್ರಸಿದ್ಧ ಕಲಾವಿದರು ಪ್ರಸ್ತುತ ಪಡಿಸುವ ರಾಷ್ಟ್ರಭಕ್ತಿ ಗೀತೆಗಳನ್ನು ಬಿಡುವಿನ ವೇಳೆಯಲ್ಲಿ ಫಿಲ್ಲರ್‌ಗಳಂತೆ ಬಳಸಲಾಗುತ್ತಿದೆ.

ವಾಣಿಜ್ಯೇತರ ಜಾಹೀರಾತುಗಳು : ಸಾರ್ವಜನಿಕರಲ್ಲಿ ತಿಳುವಳಿಕೆ ಮೂಡಿಸಲೆಂದೇ ಹಲವು ಸಾಮಾನ್ಯ ವಿಚಾರಗಳನ್ನು ಯಾವುದೇ ಆರ್ಥಿಕ ನಿರೀಕ್ಷೆಯಿಲ್ಲದೆ ಮಾಧ್ಯಮಗಳು ಪ್ರಸಾರ ಮಾಡುವ ನೈತಿಕ ಜವಾಬ್ದಾರಿ ಹೊರುತ್ತವೆ. ಉದಾಹರಣೆಗೆ

ಡಿಡಿ-೧ರಲ್ಲಿ ಮಹಿಳಾ-ಮಕ್ಕಳ ಆರೋಗ್ಯ, ಕುಟುಂಬ ಯೋಜನೆ, ಏಯ್ಡ್ಸ್ ಬಗ್ಗೆ ಜಾಗೃತಿ ಮುಂತಾಗಿ ಹಲವು ಸಾರ್ವಜನಿಕ ಹಾಗೂ ರಾಷ್ಟ್ರೀಯ ಅಭಿವೃದ್ಧಿಯ ವಿಚಾರಗಳನ್ನು ಜಾಹೀರಾತುಗಳ ರೂಪದಲ್ಲಿ ಪ್ರಸಾರ ಮಾಡುತ್ತಾ ಬಂದಿರುವುದು ಗಮನಾರ್ಹ. ಸರ್ಕಾರದ ಆರೋಗ್ಯ ಇಲಾಖೆ ಸಿದ್ಧಪಡಿಸಿಕೊಡುವ ಈ ಜಾಹಿರಾತುಗಳನ್ನು ಡಿಡಿ-೧ ಹಾಗೂ ಆಕಾಶವಾಣಿಯಂತಹ ಸರ್ಕಾರಿ ಸ್ವಾಮ್ಯದಲ್ಲಿದ್ದ ಮಾಧ್ಯಮಗಳು ಪ್ರಸಾರ ಮಾಡಬೇಕೆನ್ನುವ ನೈತಿಕ ಹೊಣೆಯನ್ನು ಅಂತರ ಮಾಧ್ಯಮ ಪ್ರಚಾರ ಸಮನ್ವಯ ಸಮಿತಿ (IMPCC) ಹೊರಿಸಿದೆ. ಈ ಜಾಹೀರಾತುಗಳನ್ನು ನಿರ್ಮಿಸುವ ವೆಚ್ಚವೂ ಮಾಧ್ಯಮಗಳದ್ದಲ್ಲ. ಹಾಗೆ ಅದನ್ನು ಸಾರ್ವಜನಿಕ ಹಿತಾಸಕ್ತಿಯಿಂದ ಪ್ರಸಾರ ಮಾಡುವುದರಿಂದ ಅದಕ್ಕೆ ಹಣದ ಬೆಂಬಲವನ್ನು ನಿರೀಕ್ಷಿಸುವುದೂ ಸರ್ಕಾರಿ ಸ್ವಾಮ್ಯದ ಮಾಧ್ಯಮಗಳಿಗೆ ಸಾಧ್ಯವಿಲ್ಲ.

<u>ಪ್ರಕಟಣೆಗಳು</u> : ಸಾರ್ವಜನಿಕರ ನೋವು-ನಲಿವುಗಳಿಗೆ ಸ್ಪಂದಿಸುವ ಮಾಧ್ಯಮಗಳು ಆಗಿಂದಾಗ್ಗೆ ಪ್ರಸಾರ ಮಾಡುವ ಅನೇಕ ಪ್ರಕಟಣೆಗಳನ್ನು ಜಾಹೀರಾತಿನ ವರ್ಗಕ್ಕೆ ಸೇರಿಸಬಹುದು. ಉದಾಹರಣೆಗೆ ಮಕ್ಕಳು, ಮಾನಸಿಕ ಅಸ್ವಸ್ಥರು ತಮ್ಮ ಪಾಲಕ ಪೋಷಕರಿಂದ ಕಣ್ಮರೆಯಾಗಿ ಹೋದರೆ, ಅಥವಾ ತಂದೆ ತಾಯಿಯರಿಂದ ದೂರವಾದ ಹಸುಳೆ ಸಿಕ್ಕಿರುವ ವಿಚಾರವನ್ನು ಪೋಲಿಸರು ಅಥವಾ ರಿಮ್ಯಾಂಡ್ ಹೋಂನಂತಹ ಜವಾಬ್ದಾರಿಯುತ ಸಂಸ್ಥೆ ಮಾಧ್ಯಮದ ಗಮನಕ್ಕೆ ತಂದರೆ ಅಂತಹ ಪ್ರಕಟಣೆಗಳನ್ನು ಪ್ರಸಾರ ಮಾಡಲಾಗುತ್ತದೆ. ರಾಷ್ಟ್ರ ವಿರೋಧಿ ವ್ಯಕ್ತಿಗಳ ಬಗ್ಗೆ ಸಾರ್ವಜನಿಕರ ಗಮನ ಸೆಳೆಯುವುದು, ಸಾರ್ವಜನಿಕ ವಿಚಾರಗಳಿಗೆ ಸಂಬಂಧಿಸಿದಂತೆ ಮಾಹಿತಿ ಸಂಗ್ರಹಿಸುವುದು, ಚುನಾವಣೆ, ಜನಗಣತಿ ಮೊದಲಾದ ಸಂದರ್ಭಗಳಲ್ಲಿ ಸಾರ್ವಜನಿಕರಲ್ಲಿ ತಿಳುವಳಿಕೆ ಮೂಡಿಸುವ ಪ್ರಕಟಣೆಗಳನ್ನು ಹಣಕಾಸಿನ ಲಾಭ ಮರೆತು ಪ್ರಸಾರ ಮಾಡಬೇಕಾಗುತ್ತದೆ. ಅಧ್ಯಯನದ ಸಂದರ್ಭದಲ್ಲಿ ಒಂದು ಮುಖ್ಯ ವಿಷಯವನ್ನು ಗಮನಿಸಲಾಯಿತು. ಅದೇನೆಂದರೆ ದೂರದರ್ಶನ ಖಾಸಗಿ ವಾಹಿನಿಗಳು, ಖಾಸಗಿ ಪತ್ರಿಕೆಗಳು ಈ ಕೆಲಸ ಸರ್ಕಾರಿ ಮಾಧ್ಯಮಗಳ ಕೆಲಸ ಎಂದು ಭಾವಿಸಿರುವಂತಿದೆ. ಇಂತಹ ಕೆಲಸವನ್ನು ಅವು ಮಾಡುತ್ತಿರುವ ಪ್ರಮಾಣವೂ ನಗಣ್ಯವೇ ಆಗಿದೆ. ಆದರೆ ಆಕಾಶವಾಣಿ ಹಾಗೂ ಡಿಡಿ-೧ ಈ ಕೆಲಸವನ್ನು ನಿರಂತರವಾಗಿ ಮಾಡುತ್ತಾ ಬಂದಿವೆ.

### ಜಾಹೀರಾತುಗಳಲ್ಲಿ ಭಾಷೆ

ಜಾಹೀರಾತುಗಳನ್ನು ದೂರದರ್ಶನದಲ್ಲಿ ಕಾರ್ಯಕ್ರಮಗಳನ್ನೋ, ಪತ್ರಿಕೆಗಳಲ್ಲಿ ಸುದ್ದಿಗಳನ್ನೋ ಕೊಡುವ ಹಾಗೆ ನಿಮಿಷಗಟ್ಟಲೆ ಅಥವಾ ಪುಟಗಟ್ಟಲೆ ಕೊಡಲಾಗುವುದಿಲ್ಲ. ಏಕೆಂದರೆ ರೇಡಿಯೊ, ಟೆಲಿವಿಷನ್ ಸಂದರ್ಭದಲ್ಲಿ ಒಂದೊಂದು ಸೆಕೆಂಡೂ, ಪತ್ರಿಕೆಗಳ ಸಂದರ್ಭದಲ್ಲಿ ಒಂದೊಂದು ಸೆಂಟಿಮೀಟರ್ ಜಾಗವೂ ಹಣವಾಗಿ ಮಾರ್ಪಡುತ್ತವೆ. ಹಾಗಾಗಿ ವಿದ್ಯುನ್ಮಾನ ಮಾಧ್ಯಮಗಳಲ್ಲಿ ಹತ್ತೋ ಇಪ್ಪತ್ತೋ ಸೆಕೆಂಡುಗಳಿಗೆ ಹಾಗೂ ಪತ್ರಿಕೆಗಳಲ್ಲಿ ಇಂತಿಷ್ಟು ಕಾಲಂಗಳಿಗೆ ಅವಕಾಶ ಪಡೆಯಬೇಕಾಗುತ್ತದೆ. ಎಲ್ಲ ಸಂದರ್ಭಗಳಲ್ಲೂ ಕಡಿಮೆ ವೆಚ್ಚದಲ್ಲಿ ಅತ್ಯಂತ ಆಕರ್ಷಣೀಯವಾಗಿಯೂ, ಪರಿಣಾಮಕಾರಿಯಾಗಿಯೂ, ಹೇಳಬೇಕಾದ್ದನ್ನು ಬೆರಳಿಟ್ಟು ತೋರಿಸುವಷ್ಟು ನಿಖರವಾಗಿಯೂ ಹೇಳಬೇಕಾಗುತ್ತದೆ. ಇದಕ್ಕಾಗಿ ಸಮರ್ಥವಾದ ಭಾಷಾ ಬಳಕೆ, ಪರಿಣಾಮಕಾರಿ ಅಭಿವ್ಯಕ್ತಿಬೇಕು.

ರೇಡಿಯೊ ಕೇವಲ ಶ್ರವ್ಯ ಮಾಧ್ಯಮ. ಇಲ್ಲಿ ಭಾಷೆ ಮೇಲೆ ಒತ್ತಡ ಜಾಸ್ತಿ. ಒಂದು ಚಿಕ್ಕ ಕಥೆಯಂತೆ, ಹಾಡಿನಂತೆ, ಕೆಲವೊಮ್ಮೆ ಘೋಷಣೆ, ಪ್ರಕಟಣೆಗಳಂತೆ ಜಾಹೀರಾತು ನೀಡಬಹುದು. ಅತ್ಯಂತ ಕಡಿಮೆ ಸಮಯದಲ್ಲಿ ಹೆಚ್ಚು ವಿಷಯ ಹೇಳುವ ತರಾತುರಿಯಲ್ಲಿ ಜಾಹೀರಾತಿನ ಕಲಾವಿದರು ಉಚ್ಚಾರಣೆ ಸ್ಪಷ್ಟತೆ ಕಳೆದುಕೊಳ್ಳುವ ಸಾಧ್ಯತೆ ಇಲ್ಲದಿಲ್ಲ. ಜಾಹೀರಾತು ಪ್ರಸಾರ ಮಾಡುವ ಉದ್ದೇಶ ಜನತೆಗೆ ಮಾಹಿತಿ/ವಿಷಯ ತಿಳಿಸುವುದು. ಸಮಯದೊಂದಿಗೆ ಓಡಲು ಹೋಗಿ, ಒಂದೇ ಉಸಿರಿನಲ್ಲಿ

ಆತುರಾತುರವಾಗಿ ಹೇಳಿಬಿಟ್ಟರೆ ಜನರು ಅದನ್ನು ಗ್ರಹಿಸುವುದು ಸಾಧ್ಯವೇ ಎಂದು ನಿರ್ಮಾಪಕರು ಮೊದಲೇ ಯೋಚಿಸಬೇಕಾಗುತ್ತದೆ. ಉದಾಹರಣೆಗೆ ಯಾವುದಾದರೂ ವಿಳಾಸವನ್ನು, ಫೋನ್ ನಂಬರ್‌ಗಳನ್ನು ಜಾಹೀರಾತಿನಲ್ಲಿ ಪ್ರಸಾರ ಮಾಡುವಾಗ ವೇಗವಾಗಿ ಎಡೆಬಿಡದೆ ಹೇಳಿಬಿಟ್ಟರೆ ಶ್ರೋತೃವಿಗೆ ಅದು ಮನದಟ್ಟಾಗದೆ ಹೋಗುತ್ತದೆ. ಜಾಹೀರಾತಿನ ಉದ್ದೇಶ ಈಡೇರುವುದಿಲ್ಲ.

ರೇಡಿಯೊ ಸಂದರ್ಭದಲ್ಲಿ ಹಾಗಾದರೆ ದೂರದರ್ಶನದಲ್ಲಿ ದೃಶ್ಯ ಸಹಿತ ಪ್ರಸಾರ ಸಾಧ್ಯವಿರುವುದರಿಂದ ಪರಿಣಾಮ ಇನ್ನಷ್ಟು ನೇರವೂ ತೀಕ್ಷ್ಣವೂ ಆಗಿರುತ್ತದೆ. ಸಾಮಾನ್ಯವಾಗಿ ಇಲ್ಲಿ ಭಾಷೆಗಿಂತಲೂ ದೃಶ್ಯ, ಮುಖಭಾವ, ಅ್ಯನಿಮೇಷನ್‌ನಂತಹ ಪರ್ಯಾಯ ಅಭಿವ್ಯಕ್ತಿ ಸಾಧ್ಯ. ಉದಾಹರಣೆಗೆ ಒಂದು ಜಾಹೀರಾತು ಹೀಗಿದೆ. ನಲ್ಲಿಯಲ್ಲಿ ನೀರು ಹರಿಯುತ್ತಿರುತ್ತದೆ. ವ್ಯಕ್ತಿಯೊಬ್ಬ ಮುಖಕ್ಕೆ ನೀರು ಎರೆಚಿಕೊಂಡು, ಸೋಪು ಹಚ್ಚಿ ಮುಖ ಉಜ್ಜಿಕೊಳ್ಳುವವರೆಗೂ ನೀರು ಹರಿಯುತ್ತಿರುತ್ತದೆ. ನಂತರ ಅವನು ಮತ್ತೆ ನೀರಿಗಾಗಿ ಬೊಗಸೆ ಚಾಚುವ ವೇಳೆಗೆ ನೀರು ಹರಿಯುವುದು ನಿಂತು ಹೋಗಿಬಿಡುತ್ತದೆ. ಇಲ್ಲಿ ಒಂದೇ ಒಂದೂ ಮಾತಿಲ್ಲ. ಆದರೆ ಇಡೀ ದೃಶ್ಯವೇ ನೀರನ್ನು ಸಂರಕ್ಷಿಸಿ ಎಂದು ಸೂಚಿಸುತ್ತದೆ. 'ದೃಶ್ಯ ಭಾಷೆ'ಯ ಮೂಲಕವೇ ಜಾಹೀರಾತಿನ ಸಂದೇಶ ಪ್ರೇಕ್ಷಕನಿಗೆ ತಲುಪಿರುತ್ತದೆ.

ದೃಶ್ಯದ ಸಾಂಗತ್ಯ ಇರುವುದರ ಜೊತೆಗೆ ಭಾಷೆಯೂ ಪ್ರಭಾವಿಯಾಗಿದ್ದರೆ ಪರಿಣಾಮ ಪ್ರೇಕ್ಷಕನ ಮನಮುಟ್ಟುವಂತೆ ಇರುತ್ತದೆ. ಭಾಷೆಯಲ್ಲಿ ಸರಳತೆ, ಚುರುಕುತನ, ಆಕರ್ಷಣೆ ಮುಖ್ಯ. ಜಾಹೀರಾತುಗಳು ಕಾರ್ಯಕ್ರಮಗಳಂತಲ್ಲ. ಇಲ್ಲಿ ಜಾಹೀರಾತುದಾರ ಕ್ಷಣ ಕ್ಷಣಕ್ಕೂ ಹಣ ನೀಡುತ್ತಿರುತ್ತಾನೆ. ಹೇಳಬೇಕಾದ್ದನ್ನು ಗಂಟೆಗಟ್ಟಲೆ ಹೇಳಲಾಗುವುದಿಲ್ಲ. ಅತ್ಯಂತ ಕಡಿಮೆ ಸಮಯದಲ್ಲೇ ಅತ್ಯಂತ ನಿಖರ, ಸ್ಪಷ್ಟ, ಅಚ್ಚುಕಟ್ಟು ಹಾಗೂ ಆಕರ್ಷಣೀಯವಾಗಿ ಹೇಳಬೇಕಾಗುತ್ತದೆ. ಹಾಗಾಗಿಯೇ ಸಾಮಾಜಿಕ ಪ್ರಜ್ಞೆ ಇರುವ ಜಾಹೀರಾತು ಬರಹಗಾರರನ್ನು ಬಳಸಲಾಗುತ್ತದೆ. ಭಾಷೆಯನ್ನೂ ಕಾಲದ ಮಿತಿಯೊಳಗೆ, ಸ್ಥಳದ ಮಿತಿಯೊಳಗೆ ಬಳಸಿಕೊಳ್ಳಲಾಗುತ್ತದೆ.

ಇನ್ನು ಪತ್ರಿಕೆಗಳ ವೈಖರಿಯೇ ಬೇರೆ. ಸಾಮಾನ್ಯ ಜಾಹೀರಾತುಗಳು, ಹಾಗೂ ವರ್ಗೀಕೃತ ಜಾಹೀರಾತುಗಳೆಂದು ಎರಡು ವಿಧವಾಗಿ ಪ್ರಕಟಿಸಬಹುದು. ಸಾಮಾನ್ಯ ಜಾಹೀರಾತುಗಳು ತಮ್ಮ ಬಣ್ಣ, ಅಭಿವ್ಯಕ್ತಿ ಕ್ರಮ, ಬಳಸುವ ವ್ಯಕ್ತಿಗಳ ಜನಪ್ರಿಯತೆ ಎಲ್ಲಕ್ಕಿಂತ ಹೆಚ್ಚಾಗಿ ಬಳಸುವ ಭಾಷೆಯಿಂದ ಜನರ ಕಣ್ಣನ್ನು ಚಕ್ಕನೆ ಹಿಡಿಯುತ್ತವೆ. ಉದಾಹರಣೆಗೆ ಬೂಸ್ಟ್ - 'ನನ್ನ ಶಕ್ತಿಯ ರಹಸ್ಯ' ಎಂದು ಕಪಿಲ್‌ದೇವ್ ಹೇಳುವುದನ್ನು ನೋಡಿ ಕ್ರಿಕೆಟ್‌ನ ಮೋಡಿಗೆ ಒಳಗಾದ ಮಕ್ಕಳೆಲ್ಲರೂ ಬೂಸ್ಟ್ ಕುಡಿದು ತೃಪ್ತಿಪಟ್ಟದ್ದೂ ಉಂಟು. ಜಾಹೀರಾತುದಾರರೂ ಸಹ ಬಹಳ ಚಾತುರ್ಯದಿಂದಲೇ ಮಕ್ಕಳು ಹಾಗೂ ಮಹಿಳೆಯರ ಮೇಲೆ ಪ್ರಭಾವ ಬೀರಬಹುದಾದ ರೀತಿಯಲ್ಲಿ ಜಾಹೀರಾತುಗಳನ್ನು ರಚಿಸಿರುತ್ತಾರೆ.

ಸಾಧಾರಣವಾಗಿ ಜಾಹೀರಾತಿನ ಭಾಷೆ ಚಿಕ್ಕದು, ಚೊಕ್ಕದು, ಅಕರ್ಷಕವೂ ಆಗಿರುತ್ತದೆ. ಟೆಲಿಗ್ರಾಫಿಕ್ ಆಗಿದ್ದು, ಉತ್ಪನ್ನ ಅಥವಾ ಇನ್ನಾವುದೇ ವಿಚಾರದಲ್ಲಿ ಪ್ರಸಾರ ಬಯಸಿದ್ದರೆ, ಆ ವಿಚಾರದ ಸಾಮರ್ಥ್ಯದ ಮೇಲೆ ಹೆಚ್ಚು ಒತ್ತು ನೀಡಿ ಜಾಹೀರಾತು ಸಿದ್ಧಗೊಂಡಿರುತ್ತದೆ. ಹಲವು ವೇಳೆ ಚಮತ್ಕಾರಗಳೂ ಬಳಕೆಯಾಗಿರುತ್ತವೆ. ಉದಾಹರಣೆಗೆ 'ಕೋಕ ಕೋಲ ತಿನ್ನಿರಿ' ಎನ್ನುವ ಭಾಷಾಪ್ರಯೋಗ. ಕೋಕ ಕೋಲ ತಿನ್ನುವ ವಸ್ತುವಲ್ಲ. 'ಈ ಜಾಹೀರಾತಿನಲ್ಲಿ ಹೀಗೆ ಹೇಳಿದ್ದಾರಲ್ಲ ಎಂಥ ಮಹಾತಪ್ಪು' ಎಂದು ನೋಡುವುದಕ್ಕಾಗಿ ಓದುಗ ಅನಾಯಾಸವಾಗಿ ಅದರತ್ತ ಗಮನ ಹರಿಸುತ್ತಾನೆ. ಜಾಹೀರಾತುದಾರ ಓದುಗನನ್ನು ತನ್ನ ಜಾಹೀರಾತಿನ ಕಡೆಗೆ ಸೆಳೆದುಕೊಳ್ಳುವ ದಿಸೆಯಲ್ಲಿ ಯಶಸ್ವಿಯಾಗುತ್ತಾನೆ. ಆಮೇಲೆ ಕುತೂಹಲದಿಂದ ಕೂಡಿ ಓದುಗ ಅಕ್ಷರಗಳ

ಕೆಳಗಿರುವ ಪೇಯದ ಬಾಟಲಿಯನ್ನು ನೋಡಿ ಇನ್ನೂ ಕೆಳಗೆ ಕಣ್ಣು ಹರಿಸಿದರೆ, 'ಕೋಕ ಕೋಲ - ಹೊಟ್ಟೆತುಂಬ ತಿಂದಂಥ ತೃಪ್ತಿ ನೀಡುತ್ತದೆ' ಎಂಬ ವಾಕ್ಯ ಕಾಣುತ್ತದೆ. ಇದರಿಂದ ಜಾಹೀರಾತಿಗೆ ಒಂದು ಸಮರ್ಥನೆ ಸಿಕ್ಕಂತಾಗುತ್ತದೆ.

ವರ್ಗೀಕೃತ ಜಾಹೀರಾತುಗಳಲ್ಲಿ ಸಾಧಾರಣವಾಗಿ ಸಾರ್ವಜನಿಕ ಅವಶ್ಯಕತೆಗಳಿಗೆ ಸ್ಪಂದಿಸುವ ಕೆಲಸ ನಡೆಯುತ್ತದೆ. ಉದ್ಯೋಗ ಹುಡುಕುವವರಿಗೆ, ವಧು-ವರ ಹುಡುಕುವವರಿಗೆ, ಆಟೋಮೊಬೈಲ್ ಮಾರಾಟಗಾರರಿಗೆ ಮುಂತಾಗಿ ಅನೇಕ ವಿಚಾರಗಳನ್ನು ವರ್ಗೀಕರಿಸಿ ಸುಲಭವಾಗಿ ಓದುಗರ ಗಮನಕ್ಕೆ, ಒಂದೇ ವಿಭಾಗದಲ್ಲಿ ಬರುವಂತೆ ಪ್ರಕಟಿಸಲಾಗುತ್ತದೆ.

ಎಲ್ಲ ವಿಚಾರಗಳಲ್ಲೂ ಪೈಪೋಟಿ ಹೆಚ್ಚಾಗಿರುವ ಈ ದಿನಗಳಲ್ಲಿ ಒಂದೇ ಬಗೆಯ ವಸ್ತುವನ್ನು ತಯಾರಿಸುವ ಹತ್ತಾರು ಕಂಪೆನಿಗಳು ಹೆಚ್ಚಾಗಿ ಜಾಹೀರಾತಿನ ಮೊರೆ ಹೋಗುತ್ತವೆ. ಉದಾಹರಣೆಗೆ ಸ್ನಾನದ ಸಾಬೂನುಗಳು. ಲಕ್ಸ್, ರೆಕ್ಸೋನ, ಮೈಸೂರ್ ಸ್ಯಾಂಡಲ್, ಪಿಯರ್ಸ್, ಸಂತೂರ್, ಮೆಡಿಮಿಕ್ಸ್ ಮೊದಲಾದ ಅನೇಕಾನೇಕ ಸಾಬೂನುಗಳು ಮಾರುಕಟ್ಟೆಯಲ್ಲಿ ಲಭ್ಯವಿವೆ. ಇಲ್ಲಿ ಪೈಪೋಟಿ ಹೆಚ್ಚು. ಹಾಗಾಗಿ ಲಕ್ಸ್ ತಯಾರಕ ತಾವು ನಿರ್ಮಿಸುವ ಜಾಹಿರಾತಿಗೆ ಹಿಂದಿ ಚಿತ್ರಗಳ ನಂಬರ್ ಒನ್‌ತಾರೆಯರನ್ನೇ ಬಳಸುತ್ತಾರೆ. ಅದು ಎಷ್ಟರ ಮಟ್ಟಿಗಿದೆ ಎಂದರೆ ಲಕ್ಸ್ ಜಾಹೀರಾತಿಗೆ ಮಾಡೆಲ್ ಆಗುವ ಚಿತ್ರನಟಿಯೇ ನಂಬರ್ ಒನ್ ತಾರೆ ಎನ್ನುವ ಭಾವನೆಯೂ ಸಾರ್ವಜನಿಕರಲ್ಲಿ ಮೂಡುತ್ತದೆ. ಆ ಮಟ್ಟದ ತಾರೆಯರನ್ನು ಬಳಸುವಾಗ ಕಂಪೆನಿ ಅಪಾರ ಹಣವನ್ನೂ ಜಾಹೀರಾತು ನಿರ್ಮಾಣದ ಮೇಲೆ ಸುರಿಯುತ್ತದೆ. ಅಷ್ಟು ಮೊತ್ತದ ಹಣ ಖರ್ಚು ಮಾಡಲಾರದ ಇನ್ನೊಂದು ಸಂಸ್ಥೆ ತನ್ನ ಸಾಬೂನಿನ ಔಷಧೀಯ ಅಂಶಗಳನ್ನೇ ಬಂಡವಾಳವಾಗಿಸಿಕೊಳ್ಳುತ್ತದೆ. ಹೀಗೆ ಒಂದೊಂದು ಹೆಸರಿನ ಸಾಬೂನೂ ಒಂದೊಂದು ಉತ್ತಮಾಂಶಗಳು ತಮ್ಮಲ್ಲಿವೆ ಎಂದು ಹೇಳಿಕೊಳ್ಳುತ್ತವೆ.

ಉತ್ತಮ ಕಾರ್ಯಕ್ರಮಗಳನ್ನು ಪ್ರಾಯೋಜಿಸುವ ಮೂಲಕವೂ ಜಾಹೀರಾತು ಸಂಸ್ಥೆಗಳು ಜಾಹೀರಾತುಗಳನ್ನು ವಿತರಿಸುತ್ತವೆ. ಹೆಚ್ಚು ಹೆಚ್ಚು ಜಾಹೀರಾತುಗಳನ್ನು ಒಂದು ಕಾರ್ಯಕ್ರಮ ಒಳಗೊಂಡಿದ್ದರೆ ಅದು ಆ ಕಾರ್ಯಕ್ರಮದ ಹೆಗ್ಗಳಿಕೆ ಎಂದೇ ಭಾವಿಸಲಾಗುತ್ತದೆ. ಅನೇಕ ಸಂದರ್ಭಗಳಲ್ಲಿ ಪ್ರಾಯೋಜಕರನ್ನು ಸೆಳೆದುಕೊಳ್ಳುವುದಕ್ಕಾಗಿ ಖಾಸಗಿ ನಿರ್ಮಾಪಕರು ಸಿಕ್ಕಷ್ಟು ಹಣಕ್ಕೆ ತಮ್ಮ ಕಾರ್ಯಕ್ರಮದ ಪ್ರಾಯೋಜನ ಸಮಯವನ್ನು ಮಾರಿಕೊಳ್ಳುವುದೂ ಇದೆ. ಇಷ್ಟೆಲ್ಲಾ ವಹಿವಾಟು ಮಾಡುವ ಮಾಧ್ಯಮಗಳು ತಮ್ಮ ಕಾರ್ಯಕ್ರಮಗಳ ಬಗ್ಗೆಯೇ ಜನತೆಗೆ ಮಾಹಿತಿ ನೀಡಲೂ ಜಾಹೀರಾತು (Promoters)ಗಳನ್ನು ಪ್ರಸಾರ ಮಾಡಬೇಕಾಗುತ್ತದೆ.

ಜಾಹೀರಾತುಗಳನ್ನು ಪ್ರಸಾರ ಮಾಡುವ ಮಾಧ್ಯಮಗಳು ತಮ್ಮ ಗ್ರಾಹಕರನ್ನು ಎಷ್ಟರ ಮಟ್ಟಿಗೆ ಹಿಡಿದಿಟ್ಟುಕೊಂಡಿವೆ ಎಂದು ನೋಡಿದಾಗ ಅದು ನಿರಾಶದಾಯಕ ಸ್ಥಿತಿಯಲ್ಲಿದೆ ಎಂದೇ ಹೇಳಬಹುದು. ದೂರದರ್ಶನವನ್ನೇ ತೆಗೆದುಕೊಂಡರೆ, ಒಂದರ ಹಿಂದೆ ಒಂದರಂತೆ ವಿವಿಧ ಸ್ನಾನದ ಸಾಬೂನುಗಳ ಜಾಹೀರಾತುಗಳನ್ನು ಪ್ರಸಾರ ಮಾಡಿದರೆ ಪ್ರೇಕ್ಷಕ ಯಾವುದನ್ನು ಬಳಸಬೇಕು ಬಳಸಬಾರದು ಎಂಬ ಗೊಂದಲಕ್ಕೂ ಹೋಗುತ್ತಾನೆ. ಅಂತಹ ಸಂದರ್ಭಗಳಲ್ಲಿ ತನ್ನ ವಿವೇಚನೆ ಹಾಗೂ ರೂಢಿಗತವಾಗಿ ತಾನು ಬಳಸುತ್ತಾ ಬಂದಿರುವ ಸಾಬೂನನ್ನೇ ಅವನು ಆಯ್ಕೆ ಮಾಡಿಕೊಳ್ಳುತ್ತಾನೆ. ಹಲವು ವೇಳೆ ಅವನು ಬಳಸುವ ಸಾಬೂನಿಗೆ ಜಾಹೀರಾತುಗಳೇ ಇಲ್ಲದಿರಬಹುದು. ಬೇರೆ ಸಾಬೂನುಗಳಿಗೆ ಎಷ್ಟೇ ಜಾಹೀರಾತು ಇರಬಹುದು. ಆದರೂ ತನ್ನ ರೂಢಿಯನ್ನು ಅವನು ಸುಲಭವಾಗಿ ಬಿಟ್ಟುಕೊಡಲಾರ.

ಎರಡನೆಯದಾಗಿ, ಮಾಧ್ಯಮಗಳು ತಮ್ಮ ಗಳಿಕೆ ಹೆಚ್ಚಿಸಿಕೊಳ್ಳುವ ನಿಟ್ಟಿನಲ್ಲಿ ನಿರತವಾಗಿದ್ದು, ತಮ್ಮ ಪ್ರೇಕ್ಷಕನಿಗೆ ಜಾಹೀರಾತುಗಳು ಬೇಕೆ? ಎಷ್ಟು ಪ್ರಮಾಣದಲ್ಲಿ ಬೇಕು ಎಂದು ಯೋಚಿಸದೇ ಹೋಗುತ್ತಿವೆ. ಟಾಲ್ಕಂ ಪೌಡರ್ ಒಂದರ

ಜಾಹೀರಾತನ್ನು ಒಂದೇ ವೆಚ್ಚದಲ್ಲಿ ನಿರ್ಮಿಸಿ ಅದನ್ನು ಕನ್ನಡದ ಐದು ದೂರದರ್ಶನ ವಾಹಿನಿಗಳಲ್ಲಿ ಪ್ರಸಾರಕ್ಕೆ ಬಿಟ್ಟರೆ, ನೋಡಿದ್ದನ್ನೇ ನೋಡಿ ನೋಡಿ ಪ್ರೇಕ್ಷಕನಿಗೂ ಬೇಸರ ಮೂಡಬಹುದು. ಅಂತಹ ಜಾಹೀರಾತುಗಳನ್ನು ತಪ್ಪಿಸುವುದಕ್ಕಾಗಿ ಅವನು ವಾಹಿನಿಯಿಂದ ವಾಹಿನಿಗೆ ಜಿಗಿಯಲೂಬಹುದು. ಅವನು ನೋಡುತ್ತಿದ್ದ ಕಾರ್ಯಕ್ರಮ ಉತ್ತಮವಾಗಿದ್ದು ಮಧ್ಯದಲ್ಲಿ ನಾಲ್ಕಾರು ನಿಮಿಷಗಳ ಜಾಹೀರಾತು ಪ್ರಸಾರವಾಗುವಂತಿದ್ದರೆ, ಅದರ ಧ್ವನಿ ತಗ್ಗಿಸಿಯೋ ಅಥವಾ ಏನೋ ಒಂದು ಬಿಡುವು ಪಡೆದೋ ಮತ್ತೆ ತಾನು ವೀಕ್ಷಿಸುತ್ತಿದ್ದ ಮುಖ್ಯ ಕಾರ್ಯಕ್ರಮ ಶುರುವಾದ ಮೇಲೆ ಅದರತ್ತ ಗಮನ ಹರಿಸುವ ಪ್ರಸಂಗಗಳೂ ಇವೆ. ಅಂದರೆ ಪ್ರೇಕ್ಷಕ ಜಾಹೀರಾತುಗಳನ್ನು ಬಯಸುತ್ತಿಲ್ಲ, ಅದನ್ನು ಪ್ರಸಾರ ಮಾಡುವುದರಿಂದ ಅವನು ಅತ್ತಿತ್ತ ಹೊರಟು ಹೋಗುತ್ತಾನೆ ಎಂಬ ಅರಿವು ವಾಹಿನಿಗಳಿಗೂ ಇದೆ. ಹಾಗಾಗಿಯೇ 'ಈಗ ಕೆಲವು ಜಾಹೀರಾತುಗಳು, ಮತ್ತೆ ಕಾರ್ಯಕ್ರಮ ಮುಂದುವರೆಯುತ್ತದೆ. ದಯವಿಟ್ಟು ದಯವಿಟ್ಟು ಎಲ್ಲಿಗೂ ಹೊರಟುಹೋಗಬೇಡಿ' ಎಂದು ಕೇಳಿಕೊಳ್ಳುವುದೂ, ಕುತೂಹಲ ಮೂಡಿಸುವ ಘಟ್ಟಗಳಲ್ಲಿ ಜಾಹೀರಾತುಗಳನ್ನು ಪ್ರಸಾರ ಮಾಡುವುದನ್ನೂ ಗಮನಿಸಬಹುದಾಗಿದೆ. ಹಾಗೆಯೇ ಜಾಹೀರಾತುಗಳು ಮಾಧ್ಯಮಗಳಿಗೆ ಅನಿವಾರ್ಯ ಎಂಬ ಸತ್ಯ ಪ್ರೇಕ್ಷಕನಿಗೂ ತಿಳಿದಿದೆ. ಆದ್ದರಿಂದ ಮಾಧ್ಯಮ - ಗ್ರಾಹಕನ ನಡುವೆ ಅಘೋಷಿತ ರಾಜೀ ಒಪ್ಪಂದವೊಂದು ನಡೆದಿರುವಂತೆ ಭಾಸವಾಗುತ್ತದೆ.

ಜಾಹೀರಾತು ಪ್ರಪಂಚದಲ್ಲಿ ನಡೆಯುತ್ತಿರುವ ತೀವ್ರತರ ಸವಾಲುಗಳನ್ನು, ಪೈಪೋಟಿಗಳನ್ನು ಎದುರಿಸಿ ಗ್ರಾಹಕರನ್ನು ಆಕರ್ಷಿಸಲು, ಒಲಿಸಿಕೊಳ್ಳಲು ಜಾಹೀರಾತುದಾರರು ಹಿಡಿಯುವ ಅನ್ಯ ಮಾರ್ಗಗಳನ್ನು ಮಾಧ್ಯಮಗಳು ಪ್ರೋತ್ಸಾಹಿಸುತ್ತಿವೆ, ತಮ್ಮ ಆದಾಯಗಳಿಕೆಯೊಂದರತ್ತಲೇ ಗಮನ ಕೇಂದ್ರೀಕರಿಸಿ ಸದಭಿರುಚಿಯನ್ನು ಮರೆತಿವೆ ಎಂದು ಒಂದು ವರ್ಗದ ಜನತೆ ಧ್ವನಿ ಎತ್ತಿರುವುದು ಅಧ್ಯಯನದ ಸಂದರ್ಭದಲ್ಲಿ ತಿಳಿದು ಬಂತು. ಹೆಣ್ಣು ಮಕ್ಕಳನ್ನು ಕೆಳಮಟ್ಟದಲ್ಲಿ ಪ್ರದರ್ಶಿಸುವುದು, ಜಾಹೀರಾತುಗಳಲ್ಲಿ ಅವರನ್ನು ಅನಗತ್ಯವಾಗಿ ಬಳಸುವುದು, ಭಾಷೆಯಲ್ಲಿ ದ್ವಂದ್ವಾರ್ಥ, ಅಶ್ಲೀಲತೆಯ ಮಾರ್ಗಗಳನ್ನು ಜಾಹೀರಾತುದಾರರು ಹಿಡಿದಿರುವುದು ಭಾರತೀಯ ಸಂಸ್ಕೃತಿಯ ಮೇಲೆ ವ್ಯತ್ಯಸ್ಥ ಪರಿಣಾಮ ಬೀರುತ್ತದೆ ಎಂಬ ಆತಂಕವನ್ನು ಅವರು ವ್ಯಕ್ತಪಡಿಸಿದ್ದಾರೆ. ಜಾಹೀರಾತುಗಳಲ್ಲಿಗುಣಮಟ್ಟ ಕಾಪಾಡುವುದು ಸಾಮಾಜಿಕ ಹೊಣೆಗಾರಿಕೆಯೂ ಆಗುತ್ತದೆ. ಒಟ್ಟಿನಲ್ಲಿ, ವ್ಯಾಪಾರೀಕರಣ ಮಾಧ್ಯಮದ ಅನಿವಾರ್ಯತೆ ಎಂದು ಆಕಾಶವಾಣಿ ಶ್ರೋತೃ ಸಂಶೋಧನಾ ವಿಭಾಗದ ಉಪ ನಿರ್ದೇಶಕ ಎ.ಆರ್. ಚಂದ್ರಮೌಳಿ ಒಪ್ಪುತ್ತಾರೆ.

> *ಪ್ರಸಾರ ಇಂದಿನ ಸಂದರ್ಭದಲ್ಲಿ ಹೆಚ್ಚು ವ್ಯಾಪಾರೀಕರಣವಾಗುತ್ತಿದೆ. ಮನರಂಜನೆಗಿಂತ ಹೆಚ್ಚು ಬೇಡಿಕೆಯಿರುವ ಮಾಹಿತಿಯುಳ್ಳ ಕಾರ್ಯಕ್ರಮಗಳಿಗೆ ಪ್ರಾಯೋಜಕರು ಪ್ರಾಯೋಜನೆ ಮಾಡಲು ಮುಂದೆ ಬರುತ್ತಿರುವುದು ಇನ್ನೊಂದು ಗಮನಾರ್ಹ ಸಂಗತಿ. ವಾಣಿಜ್ಯೀಕರಣದಿಂದ ಕಾರ್ಯಕ್ರಮ ಮಾಹಿತಿ ಆಧಾರಿತವಾದಾಗ್ಯೂ ಅದರಲ್ಲಿ ಶ್ರೋತೃಗಳ ನೇರ ಭಾಗವಹಿಸುವಿಕೆಯನ್ನು ತರುವಂಥದ್ದು ಅನಿವಾರ್ಯವಾಗುತ್ತದೆ. ಮಾಧ್ಯಮ - ಶ್ರೋತೃ - ಪ್ರತಿಕ್ರಿಯೆ - ಮಾಧ್ಯಮ - ಪ್ರತಿಸ್ಪಂದನ ಈ ಮಾದರಿ ಬಹಳ ಆದರ್ಶಪ್ರಾಯ.* [೧]

ಒಟ್ಟಿನಲ್ಲಿ ಜಾಹೀರಾತುಗಳು ಮಾಧ್ಯಮಗಳನ್ನು ಆಶ್ರಯಿಸಿಕೊಂಡಿವೆ, ಆಳುತ್ತಿವೆ; ಮಾಧ್ಯಮಗಳ ಆಸರೆಗೋಲುಗಳಾಗಿವೆ, ಉಸಿರೇ ಆಗಿವೆ. ಜಾಹೀರಾತು ಪ್ರಪಂಚ ತೀರಾ ವಿಶಾಲವಾಗಿದ್ದು ಈ ಮಹಾಪ್ರಬಂಧದ ವ್ಯಾಪ್ತಿಯಲ್ಲಿ ಅದನ್ನು ಕೂಲಂಕಷವಾಗಿ ವಿವರಿಸುವುದು, ವಿಶ್ಲೇಷಿಸುವುದು ಅನಗತ್ಯ ಎಂದು ತಿಳಿದು, ಅದರ ಸ್ಥೂಲ ವಿವರಗಳನ್ನಷ್ಟೆ ಇಲ್ಲಿ ಹೇಳಿದ್ದೇನೆ.

## ೨. ಸಂವಹನ ಮಾಧ್ಯಮಗಳಲ್ಲಿ ಪಾರಸ್ಪರಿಕ ಗ್ರಾಹಕತೆ

ಸಂವಹಿತಗೊಳ್ಳುವ ವಿಚಾರಗಳೇ ಸಾಮಗ್ರಿಗಳಾದರೆ, ಮಾಧ್ಯಮವೇ ಮಾರಾಟಗಾರನಾಗಿ, ಅದನ್ನು ಸ್ವೀಕರಿಸುವ ವೀಕ್ಷಕ/ಶ್ರೋತೃ/ಓದುಗನೇ ಗ್ರಾಹಕನಾಗುತ್ತಾನೆ. ಗ್ರಾಹಕ ಹಾಗೂ ಅವನು ಬಳಸುವ ಮಾಧ್ಯಮದ ನಡುವಿನ ಸಂಬಂಧವೆ ಸಂವಹನೆಯ ಉದ್ದೇಶದ ಯಶಸ್ಸನ್ನು ನಿರ್ಧರಿಸುವ ಅಂಶ. ಯಾವುದೇ ಸಾಮಗ್ರಿ ಗ್ರಾಹಕ ಸ್ವೀಕರಿಸದ ಹೊರತು ಅದು ವ್ಯರ್ಥವೇ. ಅದೇ ರೀತಿ ಮಾಧ್ಯಮಗಳು ಪ್ರಸಾರ ಮಾಡುವ ಅಂಶಗಳನ್ನು ಗ್ರಾಹಕ ಗ್ರಹಿಸದೇ ಹೋದಲ್ಲಿ ಅದು ಯಾರಿಗಾಗಿ ಪ್ರಸಾರವಾಗಬೇಕು? ಆತ ಅದನ್ನು ಗ್ರಹಿಸಿದಾಗಲೇ ಸಂವಹನೆಯ ಪ್ರಕ್ರಿಯೆ ಫಲಕೊಡುತ್ತದೆ, ಆತ ಗ್ರಹಿಸಿದ್ದಾನೆ ಎಂದು ತಿಳಿದು ಬಂದಾಗ ಒಳ್ಳೆಯ ಫಲ ಸಿಕ್ಕಂತಾಗುತ್ತದೆ.

ಅಂದರೆ, ಸಂವಹನ ಪ್ರಕ್ರಿಯೆಯಲ್ಲಿ ಮಾಧ್ಯಮ ಹಾಗೂ ಅದು ನೀಡುವ ಸಂದೇಶ ಎಷ್ಟು ಮುಖ್ಯವೋ ಅಷ್ಟೇ ಮುಖ್ಯ ಅದನ್ನು ಸ್ವೀಕರಿಸಿ, 'ಸ್ವೀಕರಿಸಿದ್ದೇನೆ, ಒಪ್ಪು-ತಪ್ಪುಗಳು ಹೀಗಿವೆ' ಎಂದು ತಿಳಿಸುವ ಗ್ರಾಹಕ ಸಹ. ಒಂದು ರಾಷ್ಟ್ರದಲ್ಲಿ ಜನಾಭಿಪ್ರಾಯ ಸಂಗ್ರಹವಾಗದ ಹೊರತು ಅಲ್ಲಿ ಪ್ರಜಾಸತ್ತೆ ಸದೃಢವಾಗಿರುವುದು ಸಾಧ್ಯವಿಲ್ಲ ಎನ್ನುವ ಹಿನ್ನೆಲೆಯಲ್ಲಿ ಜನಸಮುದಾಯ ನಿರಂತರವಾಗಿ ಸಮಾಜದ ಆಗು ಹೋಗುಗಳನ್ನು ಗಮನಿಸುತ್ತಿರುತ್ತದೆ. ಮಾಧ್ಯಮಗಳೂ ನಿರಂತರವಾಗಿ ಅದನ್ನು ಒದಗಿಸುತ್ತಿರುತ್ತವೆ. ತಾನು ಗಮನಿಸಿದ್ದಕ್ಕೆ ಜನ ಸಮುದಾಯ ತನ್ನ ಪ್ರತಿಕ್ರಿಯೆಯನ್ನು ಮತ್ತೆ ಮಾಧ್ಯಮಕ್ಕೆ ಕಳುಹಿಸುತ್ತದೆ. ಅದನ್ನೇ ಮಾಧ್ಯಮ ಮತ್ತೆ ಸಮಾಜಕ್ಕೆ ಹಿಂದಿರುಗಿಸಿ ಸಾರ್ವಜನಿಕ ಚರ್ಚೆಗೆ ಅವಕಾಶ ನೀಡುತ್ತದೆ. ಪರಿಣಾಮವಾಗಿ ಸಾರ್ವಜನಿಕ ಅಭಿಪ್ರಾಯ ಸೃಷ್ಟಿಗೊಳ್ಳುತ್ತದೆ. ಚುನಾವಣೆಯಂತಹ ನಿರ್ಣಾಯಕ ಸಂದರ್ಭದಲ್ಲಿ ಕಾರ್ಯರೂಪಕ್ಕೆ ಬರುತ್ತದೆ. ಜನಸತ್ತೆಯಲ್ಲಿ ಜನ ತಮ್ಮ ಪ್ರತಿನಿಧಿಗಳನ್ನು ಸಿದ್ಧಗೊಳಿಸಿಕೊಳ್ಳುತ್ತಾರೆ.

> *ಒಂದು ಸಮೂಹ ಮಾಧ್ಯಮ ತನ್ನ ಊಹೆಗನುಗುಣವಾಗಿ ಕಾರ್ಯಕ್ರಮವನ್ನು ರೂಪಿಸಿ, ಪ್ರಸಾರಿಸಿ ತನ್ನ ಕರ್ತವ್ಯ ಮುಗಿಯಿತೆಂದು ಸಂತೋಷಪಟ್ಟರೆ ಅದು ತಪ್ಪಾಗುತ್ತದೆ. ನಮ್ಮ ಕಲ್ಪನೆಯ ಕಾರ್ಯಕ್ರಮ ಎಷ್ಟು ವಾಸ್ತವ ಎಂಬುದನ್ನು ಮಾಪನ ಮಾಡಿದಲ್ಲಿ ನಮ್ಮ ಊಹೆ ವಾಸ್ತವಕ್ಕೆ ಎಷ್ಟು ದೂರ ಅಥವಾ ಸನಿಹ ಎಂಬುದು ಅರಿವಾಗುತ್ತದೆ. ಯಾವ ಕಾರ್ಯಕ್ರಮ ಜನರಿಗೆ ಬೇಕು, ಯಾವ ನಮೂನೆಯಲ್ಲಿ ಬೇಕು ಹಾಗೂ ಅದರಲ್ಲಿ ಯಾವ ರೀತಿಯ ಮಾಹಿತಿ ಎಷ್ಟು ಪ್ರಮಾಣದಲ್ಲಿ ಕೊಡಬೇಕು ಎಂಬುದರ ಬಗ್ಗೆ ಸಮಾಲೋಚನೆ ಹಾಗೂ ಸಂಶೋಧನೆ ನಿರಂತರವಾಗಿ ಸಾಗುತ್ತಿದೆ.* [೨]

ಒಂದು ಮಾಧ್ಯಮದ ಪಾತ್ರ ಹೀಗಿರಬೇಕು. ಅದೇ ರೀತಿ ಗ್ರಾಹಕನ ಪಾತ್ರವೂ ಸ್ಪಷ್ಟವಾಗಿರಬೇಕು. ಸಂವಹನೆ ಎಂದರೆ ಮಾಧ್ಯಮ ಹಾಗೂ ಗ್ರಾಹಕನ ನಡುವಿನ ಒಪ್ಪಂದ ಅಥವಾ ಹೊಂದಾಣಿಕೆಯೇ ಆಗಿದೆ. ಉದಾಹರಣೆಯಾಗಿ ಪತ್ರಿಕೆಗಳನ್ನೇ ಮೊದಲು ನೋಡಬಹುದು. ಪತ್ರಿಕೆ ತಾನು ಪ್ರಕಟಿಸುವ ಎಲ್ಲ ಸುದ್ದಿ, ವಿಶ್ಲೇಷಣೆ, ಸಂಪಾದಕೀಯ ಪ್ರತಿಯೊಂದನ್ನೂ ಓದುಗರ ಮುಂದಿಡುತ್ತದೆ. ಅದನ್ನು ಓದುಗ ಗ್ರಹಿಸಿದ್ದೇ ಆದರೆ, ಅದು ಪ್ರತಿಕ್ರಿಯಿಸಬೇಕಾದ್ದು ಅನ್ನಿಸಿದರೆ ಕೂಡಲೇ 'ಅದಕ್ಕೆ ಹಲವು ವಿಧಗಳಲ್ಲಿ ಪ್ರತಿಕ್ರಿಯಿಸುತ್ತಾನೆ. ಪತ್ರಿಕಾ ಸಂಪಾದಕನಿಗೆ ಪತ್ರಬರೆದು ತಿಳಿಸಬಹುದು ; ಆ ವಿಷಯಕ್ಕೆ ನೇರವಾಗಿ ಸಂಬಂಧಿಸಿದ ವ್ಯಕ್ತಿಗೆ/ಸಂಸ್ಥೆಗೆ ಪ್ರತಿಕ್ರಿಯೆ ತಿಳಿಸಬಹುದು; ಸಾಮೂಹಿಕ ರ್‍ಯಾಲಿ, ಕಾರ್ಯಕ್ರಮ ಇತರ ವೇದಿಕೆಗಳ ಮೂಲಕ ಅಭಿಪ್ರಾಯ

ವ್ಯಕ್ತಪಡಿಸಬಹುದು. ಇಂತಹ ಕ್ರಿಯೆಯಿಂದಾಗಿ ಸಮಾಜವನ್ನು, ಸರ್ಕಾರವನ್ನು ತಿದ್ದುವುದು, ಸಾರ್ವಜನಿಕ ಹಿತಾಸಕ್ತಿಗನುಗುಣವಾಗಿ ಆಡಳಿತವನ್ನು ಬಳಸಿಕೊಳ್ಳುವುದು ಸಾಧ್ಯವಾಗುತ್ತದೆ. ಒಂದು ನಿದರ್ಶನ ಹೀಗಿದೆ : ೨೦೦೧ರ ಮಾರ್ಚ್ ೨೬ನೇ ತಾರೀಖು ರಾಜ್ಯ ಸರ್ಕಾರ ಮಂಡಿಸಿದ ಬಜೆಟ್‌ನಲ್ಲಿ, ಹೊಸದಾಗಿ ಪ್ರಕಟಿಸುವ ಕನ್ನಡ ಪುಸ್ತಕಗಳ ಮೇಲೆ ಶೇ. ೪ರ ತೆರಿಗೆ ವಿಧಿಸಲಾಯಿತು. ಈ ವಿಚಾರವನ್ನು ಬೇರೆಲ್ಲ ಸಾಮಾನ್ಯ ಮಾಹಿತಿಯಂತೆ ಮಾಧ್ಯಮಗಳು ಪ್ರಸಾರಿಸಿದವು. ಪತ್ರಿಕೆಗಳು ಸಂಪಾದಕೀಯದಲ್ಲಿ ಈ ವಿಷಯ ಟೀಕಿಸಿ ಬರೆದವು. ಪುಸ್ತಕ ಪ್ರಕಾಶಕರು, ಮಾರಾಟಗಾರರು, ಸಾಹಿತಿಗಳು, ಸಾರ್ವಜನಿಕರು ತಮ್ಮ ಪ್ರತಿಭಟನಾತ್ಮಕ ಪ್ರತಿಕ್ರಿಯೆ ವ್ಯಕ್ತಪಡಿಸಿದರು. ಶಾಸನಸಭೆಗಳಲ್ಲಿ ಜನಪ್ರತಿನಿಧಿಗಳೂ ಪ್ರತಿಭಟಿಸಿದರು. ಅದನ್ನೂ ಮಾಧ್ಯಮಗಳು ಪ್ರಕಟಿಸಿದವು. ಪ್ರತಿಭಟನೆಯ ಔಚಿತ್ಯ ಅರಿತ ಸರ್ಕಾರ ಮಾರ್ಚ್ ೩೦ರಂದು ಪುಸ್ತಕದ ಮೇಲೆ ತೆರಿಗೆ ವಿಧಿಸುವ ವಿಚಾರವನ್ನು ಹಿಂದೆಗೆದುಕೊಂಡಿತು. ಪೆಟ್ರೋಲ್, ಅಡಿಗೆ ಅನಿಲ, ಡೀಸೆಲ್ ಬೆಲೆ ಏರಿದಾಗ, ಸಾರ್ವಜನಿಕರಿಗೆ ತೊಂದರೆಯೆನಿಸುವ ಸಂದರ್ಭಗಳು ಬಂದಾಗ, ಇಂತಹ ಪ್ರತಿಭಟನೆಗಳು ವ್ಯಕ್ತವಾಗಬಹುದು. ಪ್ರತಿಭಟನೆಯ ಔಚಿತ್ಯಕ್ಕೆ ಅನುಸಾರ ಸ್ಪಂದಿಸುವುದನ್ನು ಸರ್ಕಾರದ ಹಿನ್ನಡೆ ಎಂದು ಭಾವಿಸದೆ, ಪ್ರಜಾಸತ್ತಾತ್ಮಕ ರೀತಿಯಲ್ಲಿ ಒಂದು ನಿರ್ಣಯ ಹೊರ ಹೊಮ್ಮಿದೆ ಎಂದು ತಿಳಿಯಬೇಕಾಗುತ್ತದೆ. ಇದಕ್ಕೆ ಮಾಧ್ಯಮಗಳು ಮುಖ್ಯ ಸೇತುವಾಗುತ್ತವೆ. ಓದುಗರ ಪತ್ರಗಳನ್ನು ಆಹ್ವಾನಿಸುವ, ಓದುಗರ ಅಭಿಪ್ರಾಯಗಳನ್ನು ಖುದ್ದಾಗಿ ಸಮೀಕ್ಷೆ ಮಾಡುವ ಮೂಲಕ ಪತ್ರಿಕೆಗಳು ತಮ್ಮ ಗ್ರಾಹಕರ ಜೊತೆ ಸಂವಹನ ಸಾಧಿಸುತ್ತವೆ. ತಾವು ನಡೆಸಿದ ಸಂವಹನೆಗೆ ತಾವೇ ಮನ್ನಣೆ ನೀಡುತ್ತವೆ.

ಆಕಾಶವಾಣಿ ಹಾಗೂ ಡಿಡಿ-೧ರಂತಹ ಮಾಧ್ಯಮಗಳು ತಮ್ಮ ಗ್ರಾಹಕರ ವಿಚಾರದಲ್ಲಿ ಕಟ್ಟೆಚ್ಚರ ವಹಿಸುತ್ತವೆ, ವಹಿಸಬೇಕಾಗುತ್ತದೆ. ಅವರ ಅಭಿಪ್ರಾಯ, ಅಭಿರುಚಿ, ಅಭಿಮತಗಳನ್ನು ತಿಳಿಯುವುದಕ್ಕಾಗಿಯೇ ಗ್ರಾಹಕ ಸಮೀಕ್ಷಾ ವಿಭಾಗಗಳನ್ನು ಸ್ಥಾಪಿಸಿವೆ. ಜೊತೆಗೆ ಪ್ರತಿಯೊಂದು ನಿರ್ಮಾಣ ಕೇಂದ್ರಗಳಲ್ಲೂ ಶ್ರೋತೃ ಸಂಶೋಧನಾ ಘಟಕಗಳನ್ನು ರೂಪಿಸಿವೆ.

ಆಕಾಶವಾಣಿ ತನ್ನ ಶ್ರೋತೃ ಸಮೀಕ್ಷೆಯ ವಿಚಾರದಲ್ಲಿ ಅನೇಕ ಪ್ರಯತ್ನಗಳನ್ನು ಮಾಡಿದೆ. ಮೊದಮೊದಲು 'ಪ್ರಶ್ನೋತ್ತರ' ಕಾರ್ಯಕ್ರಮದ ಮೂಲಕ ಶ್ರೋತೃಗಳು ಪತ್ರಮುಖೇನ/ಅಂಚೆ ಮೂಲಕ ಕಳಿಸುತ್ತಿದ್ದ ಪತ್ರಗಳಿಗೆ ಸ್ಪಂದಿಸುವ ಕೆಲಸವನ್ನು ಮಾಡುತ್ತಿತ್ತು. ಶ್ರೋತೃಗಳ ಆಸೆಯಂತೆ ಕಾರ್ಯಕ್ರಮಗಳನ್ನು ಮರುಪ್ರಸಾರ ಮಾಡಲಾಗುತ್ತಿತ್ತು. 'ಕೇಳುಗರ ಕೋರಿಕೆ' ಎನ್ನುವ ಕಾರ್ಯಕ್ರಮದಲ್ಲಿ ಜನರ ಇಷ್ಟದ ಕನ್ನಡ ಚಿತ್ರಗೀತೆಗಳನ್ನು ಪ್ರಸಾರ ಮಾಡಲಾಗುತ್ತಿತ್ತು. ಜೊತೆಗೆ ಶ್ರೋತೃಗಳ ಹೆಸರನ್ನೂ ಹೇಳುತ್ತಿದ್ದುದು ಕೇಳುಗರ ಕೌತುಕವನ್ನು ಹೆಚ್ಚಿಸಿ ಅವರನ್ನು ಹಿಡಿದಿಟ್ಟುಕೊಳ್ಳುತ್ತಿತ್ತು. ಇಡೀ ಕಾರ್ಯಕ್ರಮವನ್ನು ಕೇಳುವಂತೆ ಮಾಡುತ್ತಿತ್ತು. ಹೀಗೆ ಶ್ರೋತೃಗಳ ಮನಗೆದ್ದ ಆಕಾಶವಾಣಿ ಇನ್ನಷ್ಟು ಮುಂದೆ ಹೋಗಿ ಒಂದು ನಿರ್ದಿಷ್ಟ ಕಾರ್ಯಕ್ರಮ ಮಾಲಿಕೆಯನ್ನು ಆಲಿಸಿ ತಾವು ನೀಡುವ ಪ್ರಶ್ನೆಗಳಿಗೆ ಉತ್ತರಿಸಿದರೆ ಬಹುಮಾನ ನೀಡುವ ಯೋಜನೆಯನ್ನೂ ಪ್ರಕಟಿಸಿತು. ಅದಕ್ಕಾಗಿ ಕೇಳುಗರು ತಮ್ಮ ಹೆಸರನ್ನು ಮೊದಲೇ ನೋಂದಾಯಿಸಿಕೊಳ್ಳಬೇಕಾಗುತ್ತಿತ್ತು. ಆ ಮೂಲಕ ಒಂದು ಕೇಳುಗ ವರ್ಗ ಹಾಗೂ ಅದರ ಗಾತ್ರದ ಅಂದಾಜು ಆಕಾಶವಾಣಿಗೆ ಮೊದಲೇ ತಿಳಿದಿರುತ್ತಿತ್ತು. ಆಹ್ವಾನಿತ ಶ್ರೋತೃಗಳ ಸಮ್ಮುಖದಲ್ಲಿ ಆಕಾಶವಾಣಿ ಕಲಾವಿದರಿಂದ ವಿವಿಧ ಕಾರ್ಯಕ್ರಮಗಳನ್ನು ಏರ್ಪಡಿಸಿ ತನ್ನ ಖಾಯಂ ಕೇಳುಗರೊಂದಿಗೆ ನಿಕಟತೆ ಬೆಳೆಸಿಕೊಂಡು ಅವರನ್ನು ಶ್ರೋತೃಗಳಾಗಿಯೇ ಉಳಿಸಿಕೊಳ್ಳುವ ಶ್ರಮವನ್ನು ಆಕಾಶವಾಣಿ ತೋರಿದೆ. ತಂತ್ರಜ್ಞಾನ ವೃದ್ಧಿಯಾದಂತೆ ತನ್ನ ಕೇಳುಗರೊಂದಿಗೆ ನೇರವಾಗಿ ಸಂವಹಿಸುವ ಶಕ್ತಿಯನ್ನು ಈ ಮಾಧ್ಯಮ ಸಾಧಿಸಿಕೊಂಡಿದೆ. ತಂತ್ರಜ್ಞಾನ ಅಭಿವೃದ್ಧಿಗೊಂಡಂತೆ ದೂರವಾಣಿ ಮೂಲಕ ನೇರವಾಗಿ ಸಂವಹಿಸುವ 'ಫೋನ್-ಇನ್ ವ್ಯವಸ್ಥೆ'ಯನ್ನು ಸಾಧಿಸಿಕೊಂಡಿತಾದರೂ ಈವರೆಗೂ ಒಂದು ನಿರ್ದಿಷ್ಟ ವಿಚಾರದ ಬಗ್ಗೆ ತಜ್ಞರೊಂದಿಗೆ, ಗಣ್ಯರೊಂದಿಗೆ ಶ್ರೋತೃಗಳ ಮಾತುಕತೆ ನಡೆಸುವಷ್ಟಕ್ಕೆ ಮಾತ್ರ ಈ ವ್ಯವಸ್ಥೆಯನ್ನು

ಬಳಸಿಕೊಳ್ಳಲಾಗುತ್ತಿದೆ. ರೇಡಿಯೊ ಅಥವಾ ದೂರದರ್ಶನದ ಕಾರ್ಯಕ್ರಮಗಳ ಬಗ್ಗೆಯೇ ಗ್ರಾಹಕರು ತಮ್ಮ ಅನಿಸಿಕೆ ಅಭಿಪ್ರಾಯಗಳನ್ನು ನೇರವಾಗಿ 'ಫೋನ್-ಇನ್' ಮೂಲಕ ಕೇಂದ್ರಕ್ಕೆ ತಲುಪಿಸುವುದೂ ಸಾಧ್ಯವಾಗಬೇಕು. ಯಾವುದೇ ಕತ್ತರಿ ಪ್ರಯೋಗವಿಲ್ಲದೆ ಗ್ರಾಹಕರ ಅಭಿಪ್ರಾಯ , ಅಭಿಮತ, ಆಸಕ್ತಿ, ಆಸೆ, ಆಕಾಂಕ್ಷೆಗಳು ಪ್ರಸಾರವಾಗಬೇಕು. ಆಗಷ್ಟೇ ಕಾರ್ಯಕ್ರಮಗಳ ಗುಣಮಟ್ಟವನ್ನು ನಿಖರವಾಗಿ ಅರಿಯುವುದು ಸಾಧ್ಯವಾಗುತ್ತದೆ.

ಡಿಡಿ-೧ ಸಹ ಫೋನ್-ಇನ್ ನಂತಹ ಪ್ರೇಕ್ಷಕರೊಂದಿಗೆ ನೇರ ಸಂವಾದ ಕಾರ್ಯಕ್ರಮಗಳನ್ನು ರೂಪಿಸಿದೆ. ಇಲ್ಲೂ ಸಹ ನಿರ್ದಿಷ್ಟ ವಿಚಾರದ ಬಗ್ಗೆ ತಜ್ಞರೊಂದಿಗೆ, ಗಣ್ಯರೊಂದಿಗೆ, ಜನಪ್ರಿಯರೊಂದಿಗೆ ವಿಚಾರ ವಿನಿಮಯ, ಸಮಸ್ಯೆ-ಪರಿಹಾರ ಇತ್ಯಾದಿಗಳಿಗೇ ಫೋನ್-ಇನ್ ಕಾರ್ಯಕ್ರಮಗಳು ಸೀಮಿತವಾಗುತ್ತವೆ. ಇದರಾಚೆಗೆ ದೂರದರ್ಶನ ವಾಹಿನಿಗಳು ಪ್ರಸಾರ ಮಾಡುವ ಕಾರ್ಯಕ್ರಮಗಳ ಬಗ್ಗೆಯೇ ಈ ಮಾದರಿಯ ಗ್ರಾಹಕ ಸಮೀಕ್ಷೆಯಾಗಬೇಕು. ಅದೂ ನೇರ ಪ್ರಸಾರವೇ ಆದರೆ ಸಂಕಲನದ ಸಂದರ್ಭದಲ್ಲಿ ಟೀಕೆಗಳನ್ನು ಕಿತ್ತು ಹಾಕಿ 'ಕಾರ್ಯಕ್ರಮಗಳು ಚೆನ್ನಾಗಿದ್ದವು', 'ಚೆನ್ನಾಗಿವೆ' ಎನ್ನುವಂತಹ ಹೊಗಳಿಕೆಗಳನ್ನೇ ಪ್ರಸಾರ ಮಾಡುವುದನ್ನು ತಪ್ಪಿಸಬಹುದು. ಪ್ರತಿಕ್ರಿಯಾತ್ಮಕ (feed back) ಸಂವಹನೆ ನಡೆಯುವುದೇ ಗ್ರಾಹಕರು ತಮ್ಮ ಧ್ವನಿ ಎತ್ತಿ ಮಾತನಾಡಿದಾಗ. ಅಂತಹ ಕಾರ್ಯಕ್ರಮಗಳೇ ಸಂಕಲನದ ಕತ್ತರಿಗೆ ಸಿಕ್ಕಿಬಿದ್ದರೆ ಗ್ರಾಹಕರಲ್ಲಿ ಮಾಧ್ಯಮದ ಬಗ್ಗೆ ನಂಬಿಕೆ ನಶಿಸುವುದು ಖಂಡಿತ. ಕೆಲವು ವಾಹಿನಿಗಳು ಗ್ರಾಹಕರ ಅಭಿಪ್ರಾಯಗಳನ್ನು ಅವರನ್ನೇ ಚಿತ್ರೀಕರಿಸಿ/ ಮುದ್ರಿಸಿಕೊಂಡು ಬಂದು ಪ್ರಸಾರ ಮಾಡುವ ರೂಢಿಯೂ ಇದೆ. ಇದೂ ಸೂಕ್ತ, ಸಮಂಜಸ ಪದ್ಧತಿಯೇ ಆದರೂ ಅದನ್ನೂ ಸಂಕಲಿಸಿ ಪ್ರಸಾರ ಮಾಡುವುದು ಅಪಾಯಕಾರಿ.

ಈಟೀವಿ ಚಾನೆಲ್ ಪ್ರತಿನಿತ್ಯವೂ ಬೆಳಿಗ್ಗೆ 'ಡಿಮ್ಯಾಂಡಪ್ಪೋ ಡಿಮ್ಯಾಂಡು' ಎನ್ನುವ ವೀಕ್ಷಕರ ಪತ್ರಗಳಿಗೆ ಪ್ರತಿಕ್ರಿಯಿಸುವ ಕೆಲಸ ಮಾಡುತ್ತಿದೆ. ಈ ವಾಹಿನಿ ಪ್ರಸಾರ ಮಾಡುವ ಬಹುತೇಕ ಎಲ್ಲ ಕಾರ್ಯಕ್ರಮಗಳಿಗೂ ಜನತೆಯಿಂದ ಹೊಗಳಿಕೆಯ, ಮೆಚ್ಚುಗೆಯ ಪತ್ರಗಳೇ ಬರುತ್ತಿರುವಂತಿದ್ದು, ಒಮ್ಮೊಮ್ಮೆ ಸೂಕ್ಷ್ಮವಾಗಿ, ಬಹಳ ನವಿರಾಗಿ, ಕೆಲವು ಸಲಹೆಗಳನ್ನು ನೀಡುವಂತೆ ತೋರುತ್ತದೆ. ಆದರೆ ಅದು ಮುದ್ರಿತ ಕಾರ್ಯಕ್ರಮವಾದ್ದರಿಂದ ಅಲ್ಲಿಗೆ ಬರುತ್ತಿರುವ ವೀಕ್ಷಕರ ಪತ್ರಗಳೇ ಹಾಗಿವೆಯೋ, ಕಟು ಟೀಕೆಗಳಿಂದ ಕೂಡಿದ ಪತ್ರಗಳನ್ನು ಪ್ರಸಾರ ಮಾಡದೆ ತಡೆ ಹಿಡಿಯಲಾಗುತ್ತದೆಯೋ ಹೇಳಲಾಗದೆ ವೀಕ್ಷಕರಲ್ಲಿ ಸಂದೇಹಗಳು ಉದ್ಭವಿಸುತ್ತವೆ. ಸಂವಾಹಕ-ಸಂವಹಿತರ ನಡುವೆ ನಿಚ್ಚಳ ಪಾರದರ್ಶಕತೆ ಅಗತ್ಯ ಎನ್ನುವುದು ಈ ಅಂಶದಿಂದ ಪ್ರತಿಪಾದಿತವಾಗುತ್ತದೆ.

ಮತ್ತೊಂದು ಮುಖ್ಯ ವಿಷಯವೆಂದರೆ ಸಮಾಜವನ್ನು ಪ್ರತಿನಿಧಿಸುವ ಒಂದು ಸಣ್ಣ ಗುಂಪನ್ನು ಸಮ್ಮುಖದಲ್ಲಿರಿಸಿಕೊಂಡೇ ಈಟೀವಿ ಚರ್ಚಾ ಕಾರ್ಯಕ್ರಮಗಳನ್ನು ನಡೆಸುತ್ತಿದೆ. ಒಟ್ಟಾರೆ ವೀಕ್ಷಕರಲ್ಲಿ ಕಾರ್ಯಕ್ರಮ ವೀಕ್ಷಿಸುವಾಗ ಉದ್ಭವಿಸಬಹುದಾದ ಪ್ರಶ್ನೆಗಳನ್ನು ಸ್ಟುಡಿಯೋದೊಳಗಿರುವ ಈ ಸಮಾಜದ ಪ್ರಾತಿನಿಧಿಕ ಸದಸ್ಯರು ನೇರವಾಗಿ ಕೇಳಿ ಅದಕ್ಕೆ ಉತ್ತರ / ಪ್ರತಿಕ್ರಿಯೆ ಪಡೆಯುವುದರಿಂದ ವಾಹಿನಿಯ ವೀಕ್ಷಕನಿಗೆ ಸಮಾಧಾನವಾಗಬಹುದು. ಎಲ್ಲಕ್ಕಿಂತ ಮುಖ್ಯವಾಗಿ ಈಟೀವಿ ತನ್ನ ವಾಹಿನಿಗೆ ಇರಿಸಿಕೊಂಡಿರುವ ಹೆಸರೇ ಕುತೂಹಲಕಾರಿ ಮತ್ತು ಗ್ರಾಹಕಪರವಾದದ್ದು. 'ನಮ್ಮ ಚಾನಲ್' ಎನ್ನುವ ಉಪನಾಮವನ್ನು ಹೊಂದಿದ್ದು ಇದನ್ನು ಗ್ರಾಹಕ ಪದೇ ಪದೇ ಬಳಸಿದಾಗ ಅದು 'ತನ್ನ ಚಾನಲ್' ಎಂಬ ಆತ್ಮೀಯ ಭಾವವನ್ನೇ ಹೊಮ್ಮಿಸುತ್ತದೆ. ಹೀಗೂ ಹೆಸರುಗಳನ್ನು ಜನಪ್ರಿಯಗೊಳಿಸುವ ತಂತ್ರ ಪಾರಸ್ಪರಿಕ ಗ್ರಾಹಕತೆಯ ದೃಷ್ಟಿಯಿಂದ ಅವಶ್ಯಕವೂ ಆಗುತ್ತದೆ.

ಗ್ರಾಹಕರ ಸ್ಪಷ್ಟ ಅನಿಸಿಕೆಗಳು ಮಾಧ್ಯಮವೊಂದಕ್ಕೆ ದೊರತದ್ದೇ ಆದರೆ ಅದರ ಆಧಾರದ ಮೇಲೆ ಗ್ರಾಹಕರಿಗೆ ಬೇಕಾದ್ದನ್ನು ಕೊಡುವ ಸಾಧ್ಯತೆಗಳೂ ಮಾಧ್ಯಮಗಳಿಗಿರುತ್ತದೆ.

*ಕಾರ್ಯಕ್ರಮಗಳ ಯೋಜನೆ ಜನರ ಬೇಕು ಬೇಡಗಳ ಮೇಲೆಯೇ ಹೆಚ್ಚು ಅವಲಂಬಿತವಾಗಿರುವಂಥದ್ದು. ಆದ್ದರಿಂದ ಪ್ರಸಾರಣ ಹೆಚ್ಚು ಅರ್ಥಗರ್ಭಿತ ಹಾಗೂ ಉದ್ದೇಶ ಪೂರಿತ. It is both meaningful and purposeful.* [೩]

೧೯೮೨ರ ಡಿಸೆಂಬರ್ ಹಾಗೂ ೧೯೮೩ರ ಜೂನ್ ಅವಧಿಯಲ್ಲಿ ದೂರದರ್ಶನ ಡಿಡಿ-೧ರ ರಾಷ್ಟ್ರೀಯ ಕಾರ್ಯಕ್ರಮವನ್ನು ಕುರಿತು ನಡೆಸಿದ ರಾಷ್ಟ್ರವ್ಯಾಪಿ ಸಮೀಕ್ಷೆಯ ಆಧಾರದ ಮೇಲೆ ಆ ಕಾರ್ಯಕ್ರಮದ ಪ್ರಸಾರ ಸಮಯ, ವಿನ್ಯಾಸ, ವಿಚಾರ ಇತ್ಯಾದಿಗಳಿಗೆ ಬದಲಾವಣೆ ತಂದದ್ದೂ ಅದು ಗ್ರಾಹಕತೆಯ ದೃಷ್ಟಿಯಿಂದ ಯಶಸ್ವಿಯಾದದ್ದೂ ಉಲ್ಲೇಖಾರ್ಹ.

ಮಾಧ್ಯಮ-ಮಾಧ್ಯಮಗಳ ನಡುವಿನ ಪೈಪೋಟಿ ಹೆಚ್ಚುತ್ತಿರುವ ಇಂದಿನ ದಿನಗಳಲ್ಲಿ ಎಷ್ಟು ಪ್ರಮಾಣದ ಗ್ರಾಹಕರು ಯಾವ ಮಾಧ್ಯಮಕ್ಕೆ ಅಂಟಿಕೊಂಡಿದ್ದಾರೆ ಎಂದು ಅರಿತು ದುರ್ಬಲಗೊಳ್ಳುತ್ತಿರುವ ಮಾಧ್ಯಮಗಳು ಎಚ್ಚೆತ್ತುಕೊಳ್ಳಲು ಗ್ರಾಹಕ ಸಮೀಕ್ಷೆ ನೆರವಾಗುತ್ತದೆ. ಹಾಗೆಯೇ ಪ್ರಸಾರ ಮಾಡಿದ ಕಾರ್ಯಕ್ರಮಗಳು ಜನರಿಗೆ, ಜನ ಜೀವನಕ್ಕೆ ಉಪಯುಕ್ತವಾಗಿವೆಯೋ ಇಲ್ಲವೋ ಎಂದು ತಿಳಿಯುವುದೂ ಸಾಧ್ಯವಾಗುತ್ತದೆ. ಉದಾಹರಣೆಗೆ ಬೆಂಗಳೂರು ಆಕಾಶವಾಣಿ ಕೇಂದ್ರ ೧೮-೧-೧೯೯೮ ರಿಂದ ೧೯-೪-೯೮ರ ನಡುವೆ ಪ್ರಸಾರ ಮಾಡಿದ 'ವಿಕಾಸಿನಿ' ಸರಣಿ ಕಾರ್ಯಕ್ರಮ ಅನೇಕ ಮಹಿಳೆಯರು ಸ್ವಾವಲಂಬನೆಯ ಹಾದಿ ಹಿಡಿಯುವಂತೆ ಮಾಡಿತು ಎನ್ನುವುದು ದಾಖಲೆಯಾಗಿದೆ. ಆಕಾಶವಾಣಿ, ಕಾರ್ಯಕ್ರಮ ಪ್ರಸಾರ ಮಾಡಿ ಸುಮ್ಮನಾಗಲಿಲ್ಲ. **ಬದಲಿಗೆ ಅದು ತನ್ನ ಶ್ರೋತೃಗಳ ಮೇಲೆ ಎಂತಹ ಪರಿಣಾಮ ಬೀರಿತು, ಆ ಪರಿಣಾಮವನ್ನು ಅವರು ತಮ್ಮ ಜೀವನದಲ್ಲಿ** ತಮಗೆ ಲಾಭವಾಗುವಂತೆ ಹೇಗೆ ಬಳಸಿಕೊಂಡರು ಎಂಬುದನ್ನು ತಿಳಿದುಕೊಂಡಿತು. ಮುಂದಿನ ಹಂತದಲ್ಲಿ ಆ ಮಹಿಳೆಯರಿಗೆ ಎಂತಹ ಮಾಹಿತಿ ನೀಡಬೇಕು ಎಂದು ಯೋಜಿಸುವ ಸಾಧ್ಯತೆಯೂ ಆಕಾಶವಾಣಿಗಿದೆ.

ಹೀಗೆ ಜನತೆಗೆ ಸಂದೇಶ ನೀಡುವುದು, ಅವರ ಪ್ರತಿಕ್ರಿಯೆ ಪಡೆಯುವುದು, ಅದರ ಆಧಾರದ ಮೇಲೆ ಮುಂದುವರೆಯುವುದು ಅದಕ್ಕೂ ಜನರ ಪ್ರತಿಕ್ರಿಯೆ ಪಡೆಯುವುದು, ಇಂತಹ ನಿರಂತರ 'ಹೇಳಿ-ಕೇಳುವ' ಪ್ರಕ್ರಿಯೆ ನಡೆಸುವುದೇ ಸಂವಹನೆಯ ಮೂಲತತ್ವ, ಸಂವಹನ ಮಾಧ್ಯಮಗಳ ಜೀವಸತ್ವ.

**ಅಡಿಟಿಪ್ಪಣಿ**

೧. ಎ.ಆರ್. ಚಂದ್ರಮೌಳಿ, ಅಧ್ಯಯನಕ್ಕಾಗಿ ನೀಡಿದ ಸಂದರ್ಶನದಲ್ಲಿ, ೧೪.೧೨.೨೦೦೦.
೨. ಎ.ಆರ್. ಚಂದ್ರಮೌಳಿ, ಅಧ್ಯಯನಕ್ಕಾಗಿ ನೀಡಿದ ಸಂದರ್ಶನದಲ್ಲಿ, ೧೪.೧೨.೨೦೦೦.
೩. ಎ.ಆರ್. ಚಂದ್ರಮೌಳಿ, ಅಧ್ಯಯನಕ್ಕಾಗಿ ನೀಡಿದ ಸಂದರ್ಶನದಲ್ಲಿ, ೧೪.೧೨.೨೦೦೦.

ಅಧ್ಯಾಯ : ಎಂಟು

# ಕನ್ನಡದ ಅಭಿವೃದ್ಧಿ

೧. ಕನ್ನಡದ ಅಭಿವೃದ್ಧಿ - ಪೀಠಿಕೆ

೨. ಕನ್ನಡ ಅಭಿವೃದ್ಧಿಯ ವಿವಿಧ ಹಂತಗಳು

೩. ಕನ್ನಡದ ಅಭಿವೃದ್ಧಿ : ಆತಂಕ ಮತ್ತು ಪರಿಹಾರ

## ೧. ಕನ್ನಡದ ಅಭಿವೃದ್ಧಿ - ಪೀಠಿಕೆ

ಎರಡು ಸಹಸ್ರಮಾನಗಳ ಇತಿಹಾಸವಿರುವ ಕನ್ನಡ ಅನೇಕ ಅವಸ್ಥಾಂತರಗಳ ನಡುವೆಯೂ ಇಂದಿಗೂ ಸಶಕ್ತ, ಸದೃಢ, ಭಾಷೆಯಾಗಿಯೇ ಉಳಿದಿದೆ. ಹಾಗೆನ್ನುವುದಕ್ಕೆ ಇದು ಇಷ್ಟು ದೀರ್ಘಕಾಲ ಉಳಿದಿರುವುದೇ ಸಾಕ್ಷಿ. ಪೂರ್ವದ ಹಳಗನ್ನಡದಿಂದ ಆಧುನಿಕ ಕನ್ನಡದವರೆಗೆ ಜನ ಕನ್ನಡವನ್ನು ಬಳಸಿದ್ದಾರೆ, ಬೆಳೆಸಿದ್ದಾರೆ. ಈ ಮಧ್ಯೆ ಅನೇಕ ದ್ರಾವಿಡೇತರ ಭಾರತೀಯ ಭಾಷೆಗಳ, ವಿದೇಶೀ ಭಾಷೆಗಳ ನೆರಳೂ ಕನ್ನಡದ ಮೇಲೆ ಬಿದ್ದಿದೆ. ಇಷ್ಟಾದರೂ ಕನ್ನಡ ಅವನ್ನೆಲ್ಲ ಒಳಗೊಂಡೂ ಇನ್ನೂ ಕನ್ನಡವಾಗೇ ಉಳಿದುಕೊಂಡಿದೆ.

ಭಾಷೆ ಇರುವುದೇ ಸಂವಹನೆಗಾಗಿ. ಒಂದು ಭಾಷೆ ಸ್ಪಷ್ಟ ಅಭಿವ್ಯಕ್ತಿಯನ್ನು ತೆರೆದಿಡಬೇಕಾದರೆ ಆ ಭಾಷೆಗೆ ರೀತಿ ರಿವಾಜುಗಳ ಚೌಕಟ್ಟಿರಬಾರದು. ಉಲ್ಲಂಘನೆ ಮಾಡಲಾರದಂತಹ ಶಿಸ್ತಿನ ನಿಯಮಗಳು, ವ್ಯಾಕರಣದ ನಿರ್ಬಂಧಗಳು, ಅನ್ಯಭಾಷೆಗಳಿಂದ ದೂರ ಉಳಿಯುವ ಮಡಿವಂತಿಕೆ ಭಾಷೆಯನ್ನು ಬೆಳೆಸಲಾರವು. ಭಾಷೆ ಬೆಳೆಯುವುದು ಎಂದರೆ ಮಾರ್ಪಾಡುಗಳಿಗೆ ಒಳಗಾಗುವುದು. ಅದಕ್ಕಿಂತಲೂ ವಿಸ್ತಾರವಾಗಿ ಹೇಳುವುದಾದರೆ ಬದಲಾಗುವ ಸಮಾಜಕ್ಕೆ ತಕ್ಕಂತೆ ಹಾಗೂ ಅದಕ್ಕೆ ತಕ್ಕಷ್ಟು ತಾನೂ ಬದಲಾಗುತ್ತ ಸಮಾಜದೊಳಗೆ ಹಾಗೂ ಹೊರಗೆ ಸಂವಹನ ಸಂಪರ್ಕವನ್ನು ಏರ್ಪಡಿಸಿಕೊಡುವುದು. ಅಂದ ಮೇಲೆ ಭಾಷೆ ಬೆಳವಣಿಗೆ ಎಂದರೆ ಅದರ ಮಾರ್ಪಡುವಿಕೆ. ಅದೇ ಭಾಷೆಯ ಜೀವಂತಿಕೆ ಎಂದು ಅನೇಕ ವಿದ್ವಾಂಸರು ಪ್ರತಿಪಾದಿಸಿದ್ದಾರೆ.

ಬಳಸುವ ಭಾಷೆ ಅರ್ಥವಾಗುವಂತಿದ್ದರೆ ಮಾತ್ರ ಜನ ಅದನ್ನು ಬಳಸುತ್ತಾರೆ. ಜನ ಬಳಸಿದರೇ ಭಾಷೆ ಬೆಳೆಯುತ್ತದೆ. ಈ ಬೆಳವಣಿಗೆಯ ಹಂತದಲ್ಲೇ ಅದು ಅನೇಕ ಮಾರ್ಪಾಡುಗಳಿಗೆ ಒಳಗಾಗುತ್ತದೆ. ಉದಾಹರಣೆಗೆ, ಇಪ್ಪತ್ತೊಂದನೆಯ ಶತಮಾನದ ಇಂದಿನ ಆರಂಭಿಕ ಘಟ್ಟದಲ್ಲಿ ಕಂಪ್ಯೂಟರ್ ಪ್ರಭಾವ ಹೆಚ್ಚಾಗಿದ್ದು ಒಂದು ಪೀಳಿಗೆಯ ಜನ ಅತ್ತ ಗಮನ ಹರಿಸಿದ್ದಾರೆ. ಈ ಕಂಪ್ಯೂಟರ್ ಪ್ರಪಂಚವೇ ಹೊಸ ಹೊಸ ಶಬ್ದಗಳನ್ನು ರವಾನಿಸುತ್ತಿವೆ. ಇದರ ಪ್ರಭಾವ ನಿಸ್ಸಂದೇಹವಾಗಿಯೂ ಕನ್ನಡದ ಮೇಲೂ ಆಗುತ್ತಿದೆ. ಆಧುನಿಕ ಕ್ಷೇತ್ರಕ್ಕೆ ಸೇರಿದ ಪದಗಳನ್ನೆಲ್ಲ ಕನ್ನಡದಲ್ಲೇ ಅಥವಾ ಕನ್ನಡೀಕರಿಸಿಕೊಂಡೇ ಬಳಸಬೇಕು ಎನ್ನುವ ನಿಯಮ ಮಾಡಿಬಿಟ್ಟರೆ ಕಂಪ್ಯೂಟರ್ ಪೀಳಿಗೆಯ ಕನ್ನಡದ ಜನ ಕನ್ನಡವನ್ನೇ ಬಿಟ್ಟುಕೊಡುವ ಸಾಧ್ಯತೆಯೂ ಇಲ್ಲದಿಲ್ಲ. ಬದಲಿಗೆ ಆ ಶಬ್ದಗಳನ್ನೇ ಕನ್ನಡ ಭಾಷೆಯ ಮಧ್ಯೆ ಅಳವಡಿಸಿಕೊಂಡು ಹೋಗುತ್ತಲೇ ಕ್ರಮೇಣ ಅದಕ್ಕೆ ಸ್ವಾಭಾವಿಕವಾಗಿ ಕನ್ನಡದ ಸ್ಪರ್ಶ ಸಿಗುವಂತಾದರೆ ಅದು ಕನ್ನಡಕ್ಕೇ ಕ್ಷೇಮ ಎನ್ನಬಹುದು. 'ಕಂಪ್ಯೂಟರ್' ಎನ್ನುವ ಪದವನ್ನೇ ಗಮನಿಸೋಣ. ಗಣಕಯಂತ್ರ ಎಂದು ಕನ್ನಡದಲ್ಲಿ ಹೆಸರಿಸಿಕೊಂಡರೂ ಅದು ಜನರ ಬಳಕೆಯಲ್ಲಿ ನಿಲ್ಲದೇ ಹೋಗಿದೆ. ಗಣಕಯಂತ್ರ ಎಂದು ಕರೆಯುವುದಕ್ಕಿಂತ ಅರ್ಧಾಕ್ಷರದಲ್ಲಿ ಕೊನೆಗೊಳ್ಳುವ ಕಂಪ್ಯೂಟರ್ ಉಚ್ಚಾರಣೆಗೂ ಸುಲಭವಾಗಿದೆ. ಅದು ಎಷ್ಟು ಜನಪ್ರಿಯವೂ ಆಗಿದೆ ಎಂದರೆ ಇಂದಿನ ಪ್ರಾಥಮಿಕ ಶಾಲಾ ಮಕ್ಕಳೂ ಅದನ್ನು ಸುಲಭವಾಗಿ ಗ್ರಹಿಸುತ್ತಾರೆ. ಮಾಹಿತಿ ತಂತ್ರಜ್ಞಾನ ಇಡೀ

ವಿಶ್ವವನ್ನೇ ಏಕತ್ರಗೊಳಿಸುತ್ತಿರುವ ಹಿನ್ನೆಲೆಯಲ್ಲಿ ಸಂವಹನೆಯ ದೃಷ್ಟಿಯಿಂದ ಇಂತಹ ಮಾರ್ಪಡುವಿಕೆ ಹೆಚ್ಚು ಸಮಂಜಸವೂ ಆಗುತ್ತದೆ.

ಇತರ ಭಾಷೆಗಳಿಂದ ಶಬ್ದಗಳನ್ನು ಒಳಗೊಂಡಂತೆ ಅನೇಕ ವೇಳೆ ಕನ್ನಡವೂ ತನ್ನಲ್ಲಿದ್ದ ಅಕ್ಷರ, ಶಬ್ದ, ಪ್ರಯೋಗಗಳನ್ನು ಬಿಟ್ಟುಕೊಡುತ್ತಿರುವುದರಿಂದಲೇ ಪೂರ್ವದ ಹಳಗನ್ನಡಕ್ಕೂ ಆಧುನಿಕ ಕನ್ನಡಕ್ಕೂ ಅಗಾಧ ವ್ಯತ್ಯಾಸವಿರುವುದು ಸ್ಪಷ್ಟವಾಗುತ್ತದೆ. ಕನ್ನಡ ಭಾಷೆ ಅನೇಕ ಅವಸ್ಥಾಂತರಗಳನ್ನು ಕಂಡಿರುವುದಕ್ಕೆ ಅದರ ನಿರಂತರ ಮಾರ್ಪಡುವಿಕೆಯೇ ಕಾರಣವಾಗಿದೆ. ಇಂತಹ ಮಾರ್ಪಡುವಿಕೆ ಹಾಗೂ ಅವಸ್ಥಾಂತರ ಭಾಷೆಯ ಬೆಳವಣಿಗೆ ದೃಷ್ಟಿಯಿಂದ ಅನಿವಾರ್ಯ.

ಕನ್ನಡ ಅಕ್ಷರ ಮಾಲೆಯನ್ನೇ ಗಮನಿಸಿದರೆ ಸಂಸ್ಕೃತದ ಪ್ರಭಾವದಿಂದಾಗಿ ಅನೇಕ ಅಕ್ಷರಗಳು ಕನ್ನಡಕ್ಕೆ ಸೇರ್ಪಡೆಯಾಗಿ ನಂತರ ಅವುಗಳಿಗೊಂದು ಪರ್ಯಾಯ ದೊರೆತು ಅಥವಾ ದೊರೆಯದೆಯೂ ಅವು ಬಿಟ್ಟುಹೋದ ಉದಾಹರಣೆಗಳಿವೆ. ಉದಾಹರಣೆಗೆ ಇತ್ತೀಚಿನವರೆಗೂ ಪಟ್ಟಿಯಲ್ಲಿದ್ದ ಋ, ೠ ಸ್ವರಗಳ ಬಳಕೆ ಕನ್ನಡದಲ್ಲಿ ಇಲ್ಲವೇ ಇಲ್ಲ ಎನ್ನುವಷ್ಟರ ಮಟ್ಟಿಗೆ ಕಡಿಮೆಯಾದದ್ದೂ, 'ಋ' ಬದಲಿಗೆ 'ರು' ವನ್ನು ಬಳಸಬಹುದಾದ ಪರ್ಯಾಯ ಸ್ಥಿತಿ ಇರುವುದೂ ಋ, ೠ ಸ್ವರಗಳು ಕನ್ನಡದ ಅಕ್ಷರಮಾಲೆಯಿಂದ ನಿರ್ಗಮಿಸುವುದಕ್ಕೆ ಕಾರಣವಾಗಬಹುದು. ೠ ಅಂತೂ ಈಗಾಗಲೇ ಬಳಕೆಯಲ್ಲಿಲ್ಲ. ಕೃ, ತೃ, ಶೃ, ಪೃ ಹೀಗೆ ವ್ಯಂಜನಗಳೊಂದಿಗೆ ಸೇರುವುದಕ್ಕಾಗಿ ಋ ಇನ್ನೂ ಉಳಿದುಕೊಂಡಿದೆ. ಇಂತಹುದೇ ಕಾರಣಗಳಿಂದಾಗಿಯೂ, ಜೊತೆಗೆ ಉಚ್ಚಾರಣೆ ಕಠಿಣವಾಗಿದ್ದ ಕಾರಣವಾಗಿಯೂ ಅನೇಕ ಸ್ವರ, ವ್ಯಂಜನಗಳನ್ನು ಕನ್ನಡ ಕೈಬಿಟ್ಟ ನಿದರ್ಶನಗಳಿವೆ. ರೇಫ, ಶಕಟರೇಫ, ಐ, ಟ, ಕುಳ, ಕ್ಷಳ ಇತ್ಯಾದಿ. ಕನ್ನಡದಲ್ಲಿ ಬಳಸುವ ಸಂಸ್ಕೃತ ಪದಗಳಿಗಾಗಿಯೇ ಬಳಕೆಯಾಗುತ್ತಿರುವ ಙ, ಞ ಅನುನಾಸಿಕ ವ್ಯಂಜನಗಳೂ ಕನ್ನಡದವಲ್ಲ. ಇನ್ನು 'ಕ್ಷ' ಎನ್ನುವುದಂತೂ 'ಕ'ಗೆ 'ಷ' ಸೇರಿ ಆದ ಸಂಯುಕ್ತಾಕ್ಷರ ಎನ್ನಬಹುದು. ಇಂತಹ ಕಾರಣಗಳಿಂದಾಗಿ ಕೇಶಿರಾಜನ ಕಾಲದ ಅಕ್ಷರಮಾಲೆಯ ೪೭ ಶುದ್ಧಗೆಗಳ ಪೈಕಿ ಈಗ ೩೨ ಕನ್ನಡಕ್ಕೆ ಸಾಕಾಗಿವೆ. ಕನ್ನಡದ ಮೇಲೆ ಇಂಗ್ಲೀಷ್ ಭಾಷೆ ಈಗ ಬೀರುತ್ತಿರುವ ಪ್ರಭಾವದ ಫಲವಾಗಿ ಫ಼ (F) ಝ಼ (z) ಮಾಲೆಗೆ ಸೇರ್ಪಡೆಯಾಗುತ್ತಿವೆ. ವಿಶೇಷವೆಂದರೆ ಈ ಎರಡೂ ಅಕ್ಷರಗಳು ಸ್ವತಂತ್ರವಾಗಿ ಧ್ವನಿ ರೂಪದಲ್ಲಿ ಕನ್ನಡದ ಉಪ ಭಾಷೆ ಎನಿಸಿದ ಬಾರ್ಕೂರು ಕನ್ನಡದಲ್ಲಿ ಈಗಾಗಲೇ ಸೇರಿಕೊಂಡಿವೆ. ಉರ್ದುವಿನ ಖ಼ ಸಹ ಈವರೆಗೂ ಕನ್ನಡದಲ್ಲಿಲ್ಲ.

ಅದೇ ರೀತಿ ಕನ್ನಡದ ವಿಭಕ್ತಿ ಪ್ರತ್ಯಯಗಳೂ ಸಹ. ಕನ್ನಡಕ್ಕೀಗ ಪ್ರಥಮಾ ವಿಭಕ್ತಿ ಪ್ರತ್ಯಯ (ಉ) ಅಗತ್ಯವೇ ಇಲ್ಲ ಎನ್ನುವ ವಾದವಿದೆ. 'ರಾಮನು ಬಂದನು' ಎನ್ನುವುದಕ್ಕೆ 'ರಾಮ ಬಂದ' ಎಂದು ಸರಳವಾಗಿ ಹೇಳುವಾಗ 'ಉ' ಪ್ರತ್ಯಯದ ಅವಶ್ಯಕತೆ ತೋರಿಬರುವುದಿಲ್ಲ. ಪಂಚಮಾ ವಿಭಕ್ತಿಯಾದ 'ದೆಸೆಯಿಂದ' ಅಂತೂ ಬಹುತೇಕ ಕೈಬಿಟ್ಟೇ ಹೋಗಿದೆ. ಜೊತೆಗೆ ಸಹ ವಿಭಕ್ತಿಗಳಾಗಿ 'ಒಟ್ಟಿಗೆ', 'ಕೂಡ', 'ಜೊತೆ' 'ಸಹ' ಮತ್ತು ತೌಲನಿಕ ವಿಭಕ್ತಿಯಾಗಿ 'ಆಗಿ', 'ಓಸ್ಕರ' ಶಬ್ದಗಳು ಸೇರ್ಪಡೆಯಾಗಬೇಕು ಎನ್ನುವ ವಾದಗಳಿವೆ.

ನುಡಿಯುವಿಕೆಯೇ ಭಾಷೆಯ ಮೂಲಗುಣ. ಬರೆದ ಭಾಷೆ ಸಾಹಿತ್ಯವೆನಿಸುತ್ತದೆ. ಆಡಿದಾಗಲೇ ಅದು ಭಾಷೆ. ಭಾಷೆ ಧ್ವನಿಗೆ ಸಂಬಂಧಿಸಿದ್ದು. ಇ.ಹೆಚ್. ಸ್ಟೂರ್ಟ್‌ವೆಂಟ್ ತಮ್ಮ *ಆ್ಯನ್ ಇಂಟ್ರಡಕ್ಷನ್ ಟು ಲಿಂಗ್ವಿಸ್ಟಿಕ್ ಸೈನ್ಸ್* ಎನ್ನುವ ಪುಸ್ತಕದಲ್ಲಿ

*ಒಂದು ಸಮಾಜದ ವ್ಯಕ್ತಿಗಳು ಪರಸ್ಪರ ವ್ಯವಹಾರಕ್ಕಾಗಿ ಬಳಸುವ*
*ಯಾದೃಚ್ಛಿಕ ಧ್ವನಿ ಸಂಕೇತಗಳ ವ್ಯವಸ್ಥೆಯೇ ಭಾಷೆ* [7]

ಎಂದಿದ್ದಾರೆ. *ಸ್ಟಡಿ ಆಫ್ ಲ್ಯಾಂಗ್ವೆಜ್* ಎನ್ನುವ ಪುಸ್ತಕದಲ್ಲಿ ಜೆ.ಬಿ. ಕ್ಯಾರೆಲ್

*ಯಾದೃಚ್ಛಿಕ ಧ್ವನಿ ಸಂಕೇತಗಳ ಮತ್ತು ಧ್ವನಿಯ ಅನುಕ್ರಮಣಿಕೆಗಳ ರಚನಾ ಪದ್ಧತಿಯಿಂದ ಕೂಡಿ, ಒಂದು ಜನಸಮುದಾಯವು ಪರಸ್ಪರ ವ್ಯಕ್ತಿ ಸಂಪರ್ಕಕ್ಕೆ ಬಳಸಬಹುದಾದ ಮತ್ತು ಮಾನವ ಪರಿಸರದಲ್ಲಿನ ವಸ್ತು, ಘಟನೆ ಮತ್ತು ಕ್ರಿಯೆಗಳನ್ನು ವಿಸ್ತಾರವಾಗಿ ದಾಖಲುಗೊಳಿಸುವ ಧ್ವನಿ ವ್ಯವಸ್ಥೆಯೇ ಭಾಷೆ*[೧]

ಎಂದು ಕರೆದಿದ್ದಾರೆ.

ಜನ ಬಳಸಿದಾಗಲೇ ಭಾಷೆಗೆ ಹುಟ್ಟು, ಬದುಕು. ಜನರೇ ಅದನ್ನು ವರ್ಜಿಸಿದರೆ ಭಾಷೆ ಸತ್ತಂತೆಯೇ. ಎಲ್ಲಿಯವರೆಗೆ ಭಾಷೆಯನ್ನು ಬಳಸುವ ಸಮಾಜ, ಸಮೂಹ ಇರುತ್ತವೆಯೋ ಅಲ್ಲಿವರೆಗೆ ಭಾಷೆ ಸಾಯುವುದಿಲ್ಲ. ಡಿ.ಎನ್. ಶಂಕರಭಟ್ಟರು ಭಾಷೆಯ ಸಾವಿನ ಕಾರಣವನ್ನು ಹೀಗೆ ಗುರುತಿಸಿದ್ದಾರೆ.

*ಯಾವುದೇ ಒಂದು ಭಾಷೆಯನ್ನು ನಶ್ವರವಾಗಿಸುವಂತಹ ಒಂದು ಸಮಾಜದ ನಿರಂತರತೆ ಸಾವು ನೋವುಗಳಿಂದಾಗಿ ಕಡಿದುಹೋದಲ್ಲಿ, ಆ ಸಮಾಜದೊಡನೆ ಅದರ ಭಾಷೆಯೂ ಕೂಡ ನಷ್ಟವಾಗಿ ಹೋಗಲು ಸಾಧ್ಯವಿದೆ ಎಂಬುದನ್ನು ಗಮನಿಸಬೇಕು. ಉದಾಹರಣೆಗಾಗಿ ಅಮೆರಿಕದ ಮೂಲ ನಿವಾಸಿಗಳಲ್ಲಿ ಬಳಕೆಯಲ್ಲಿದ್ದಂತಹ ಹಲವಾರು ಭಾಷೆಗಳು ಆ ಮೂಲನಿವಾಸಿಗಳು ನಿರ್ನಾಮಗೊಂಡಾಗ ಅವರೊಡನೆಯೇ ನಷ್ಟವಾಗಿರುವುದು ಕಂಡುಬರುತ್ತದೆ.*[೨]

ಅಂದರೆ ಭಾಷೆ ಎನ್ನುವುದು ಒಬ್ಬ ಮನುಷ್ಯನ ಸಾವಿನ ಜೊತೆ, ಒಬ್ಬ ಮನುಷ್ಯ ಮಾತನಾಡಲಾರದೆ ಮೂಕನಾಗುವ ಸಂದರ್ಭದಲ್ಲಿ ಸತ್ತು ಹೋಗುವಂಥದಲ್ಲ. ಒಂದು ಭಾಷೆ ಸಾಯಬೇಕಾದರೆ ಸಮಾಜಕ್ಕೆ ಸಮಾಜವೇ ಸಾಯಬೇಕು. ಅಥವಾ ಭಾಷೆ ಸತ್ತರೆ ಸಮಾಜವೇ ಸತ್ತಂತೆ. ಭಾಷೆ ಹಾಗೂ ಸಮಾಜ ಪರಸ್ಪರ ಪೂರಕ ಹಾಗೂ ಅವಶ್ಯಕ. ಸಮಾಜ ಕೈ ಬಿಡದ ಹೊರತು ಭಾಷೆ ಸಾಯಲಾರದು. ಜನರೇ ಭಾಷೆಯನ್ನು ಬಳಸದೇ ಬಿಟ್ಟರೆ ತಂತಾನೆ ಸತ್ತು ಹೋಗುವ ಭಾಷೆಗೆ ಮತ್ತೆ ಹುಟ್ಟು ಸುಲಭವೂ ಅಲ್ಲ. ಉದಾಹರಣೆಗೆ ಒಂದು ಕಾಲಕ್ಕೆ ಆಡಳಿತ ಭಾಷೆಯ ಸ್ಥಾನಮಾನ ಪಡೆದಿದ್ದ ಸಂಸ್ಕೃತ ಇಂದು ಏನು ಮಾಡಿದರೂ ಆಡುಭಾಷೆಯಾಗಿ ಮರುಹುಟ್ಟು ಪಡೆಯುವುದು ಸಾಧ್ಯವೇ ಆಗುತ್ತಿಲ್ಲ. ಸಂಪೂರ್ಣ ಗ್ರಂಥಸ್ಥ ಭಾಷೆಯಾಗಿ ಹೋಗಿದೆ. ಸಂಸ್ಕೃತ ಭಾಷೆಯನ್ನು ಪುನರುಜ್ಜೀವನಗೊಳಿಸುವ ನಿಟ್ಟಿನಲ್ಲೂ ಸಾಕಷ್ಟು ಪ್ರಯತ್ನಗಳಾಗಿವೆ. ಶಾಲಾ ಪಠ್ಯಕ್ರಮದಲ್ಲಿ ಸಂಸ್ಕೃತವನ್ನು ಒಂದು ವಿಷಯವಾಗಿ (ಕೆಲ ಸಂದರ್ಭಗಳಲ್ಲಿ ಐಚ್ಛಿಕವಾಗಿ) ಕಲಿಸುವ ಪ್ರಯತ್ನವಾಗಿದೆ. ದೂರದರ್ಶನ ಹಾಗೂ ಆಕಾಶವಾಣಿ ಮಾಧ್ಯಮಗಳು ಸಂಸ್ಕೃತ ವಾರ್ತೆಗಳನ್ನು ಬಿತ್ತರಿಸುತ್ತವೆ. ಈಗಲೂ ವಿಶ್ವ ವಿದ್ಯಾನಿಲಯಗಳಲ್ಲಿ ಸಂಸ್ಕೃತ ವ್ಯಾಸಂಗದ ಅವಕಾಶಗಳಿವೆ. ಅಷ್ಟಾವಧಾನ, ಶತಾವಧಾನಗಳು, ಸಂಸ್ಕೃತ ಗೋಷ್ಠಿಗಳು ನಡೆಯುತ್ತಿವೆ. ಮತ್ತೂರು ಗ್ರಾಮಸ್ಥರು ತಮ್ಮ ದೈನಂದಿನ ವ್ಯವಹಾರಗಳಲ್ಲಿ ಸಂಪೂರ್ಣವಾಗಿ ಸಂಸ್ಕೃತವನ್ನೇ ಬಳಸುತ್ತಾರೆ ಎಂದು ಹೇಳಲಾಗಿದೆ. ಪೂಜೆ ಪುನಸ್ಕಾರಗಳು, ಶ್ರಾದ್ಧ ಕರ್ಮಾಚರಣೆಗಳು ಇಂದಿಗೂ ಸಂಸ್ಕೃತದ ಮಂತ್ರ, ಶ್ಲೋಕ, ಗೀತೆಗಳನ್ನು ಒಳಗೊಂಡಿವೆ. ಇಷ್ಟಾದರೂ ಸಂಸ್ಕೃತ ಮತ್ತೆ ಜನಸಾಮಾನ್ಯರ ಮನೆಮಾತಾಗಿ ಮರಳಿಬರುವುದು ಸಾಧ್ಯವಾಗಿಲ್ಲ. ಈ ಎಲ್ಲ ಪ್ರಯತ್ನಗಳನ್ನು ಎಂ.ಎಚ್. ಕೃಷ್ಣಯ್ಯ ಹೀಗೆ ಕಂಡರಿಯುತ್ತಾರೆ.

*ಆಕಾಶವಾಣಿಯಲ್ಲಿ ಸಂಸ್ಕೃತದ ಸುದ್ದಿ ಪ್ರಸಾರವಿದೆ. ಸಂಸ್ಕೃತದ ಪತ್ರಿಕೆಯೂ ಪ್ರಸಾರದಲ್ಲಿದೆ. ಒಂದು ಹಳ್ಳಿಯಲ್ಲಿ ಎಲ್ಲರೂ ಸಂಸ್ಕೃತದಲ್ಲಿ*

*ಮಾತನಾಡುತ್ತಾರೆಂದು ಹೇಳಲಾಗುತ್ತಿದೆ. ಆದರೆ ಇದೆಲ್ಲ ಅಭಿಮಾನದ,*
*ಒತ್ತಾಯದ, ಉದ್ದೇಶಪೂರ್ವಕವಾದ ಸಾಂದರ್ಭಿಕ ಒತ್ತಡದ ಕ್ರಿಯೆಗಳು.*
*ಸಂಸ್ಕೃತ ಇಂದು ಮನೆಮಾತಾಗಿ ಸಮಾಜದಲ್ಲಿ ಬಳಕೆಯಾಗುತ್ತಿಲ್ಲ.* [೬]

ಇಂತಹ ಸ್ಥಿತಿ ಸಂಸ್ಕೃತಕ್ಕೆ ಉಂಟಾಗುವುದಕ್ಕೆ ಅದು ಮಾರ್ಪಡುವಿಕೆಗೆ ಒಗ್ಗದಿರುವುದೇ ಕಾರಣ. ಅದೇ ರೀತಿ ಸಮಾಜದ ಒಂದು ವರ್ಗದ ಜನರ ಬಳಕೆಗೇ ಮೀಸಲಾಗಿ ಹೋಗಿದ್ದು, ವ್ಯಾಕರಣದ ನೀತಿ ನಿಯಮಗಳಲ್ಲಿ ಸಡಿಲಿಕೆಗೆ ಅವಕಾಶವನ್ನೇ ನೀಡದೇ ಹೋದದ್ದು ಹಾಗೂ ಇತರ ಭಾಷೆಯ ನೆರಳು ಅದರ ಮೇಲೆ ತಾಕದೇ ಹೋಗುವಂತೆ ಕಾಪಾಡಿಕೊಂಡದ್ದೂ ಆ ಭಾಷೆಯ ಬೆಳವಣಿಗೆಗೆ ಅಡ್ಡಿಯಾಯಿತೆನ್ನಬಹುದು.

ಇಂತಹ ನಿದರ್ಶನಗಳು ಕಣ್ಮುಂದೆ ಇರುವುದರಿಂದಲೇ ಕನ್ನಡ ಭಾಷಾ ಸಂರಕ್ಷಣೆ ಹಾಗೂ ಬೆಳವಣಿಗೆಯ ನಿಟ್ಟಿನಲ್ಲೂ ಎಚ್ಚರಿಕೆಯ ಹೆಜ್ಜೆಗಳನ್ನು ಇರಿಸಬೇಕೆಂಬ ಮನೋಭಿಪ್ರಾಯ ನಮ್ಮ ನೆಲದಲ್ಲಿ ವ್ಯಾಪಕವಾಗಿದೆ. ಭಾಷೆಯ ಬೆಳವಣಿಗೆಗೆ ಸಂಬಂಧಿಸಿದಂತೆ ಎಂ.ಎಂ. ಕಲಬುರ್ಗಿಯವರು

*ತನ್ನ ಆಯುರ್ವರ್ಮಾನದಲ್ಲಿ ಆರ್ಯ-ಆಂಗ್ಲ ಸಂಸ್ಕೃತಿಗಳನ್ನು*
*ಜೀರ್ಣಿಸಿಕೊಂಡು ಬಂದ ಕನ್ನಡ ಸಮಾಜ, ಉದ್ದಕ್ಕೂ ದ್ವಿಭಾಷಾ*
*ಸಂದರ್ಭದಲ್ಲಿ ಬದುಕುಮಾಡಿದೆ. ಹಿಂದಿನದು ಕನ್ನಡ-ಸಂಸ್ಕೃತ ದ್ವಿಭಾಷಾ*
*ಸಂದರ್ಭ. ಇಂದಿನದು ಕನ್ನಡ - ಇಂಗ್ಲೀಷ್ ದ್ವಿಭಾಷಾ ಸಂದರ್ಭ* [೭]

ಎಂದು ಪ್ರಸ್ತಾಪಿಸುವಾಗಲೇ ಕನ್ನಡದ ಸಂದರ್ಭದಲ್ಲಿ 'ಇಂಗ್ಲೀಷ್ ಬೆಳಕಾಗುತ್ತಲೇ ಬೆಂಕಿಯಾಗಬಹುದೇ?' ಎಂಬ ಆತಂಕವನ್ನು ವ್ಯಕ್ತಪಡಿಸಿದ್ದಾರೆ. ಕೆ.ವಿ. ನಾರಾಯಣ ಅವರ ಪ್ರಕಾರ ಕರ್ನಾಟಕದಲ್ಲಿ ಭಾಷಾಭಿವೃದ್ಧಿಯ ಯತ್ನಗಳಿವೆ; ಯಶಸ್ಸುಗಳಿಲ್ಲ. ಅಥವಾ ಇರುವ ಯಶಸ್ಸು ಸೀಮಿತವಾದದ್ದು.

ನಿಜ, ಕನ್ನಡಕ್ಕೆ ಕರ್ನಾಟಕದ ಆಡಳಿತ ಭಾಷೆಯಾಗಿ ಸೂಕ್ತ ಸ್ಥಾನಮಾನ ಸಿಗಬೇಕು. ಅದು ಕಾಗದದ ಮೇಲಲ್ಲ. ಸಂಪೂರ್ಣ ಅನುಷ್ಠಾನಕ್ಕೆ ಬರಬೇಕು. ಎಲ್ಲ ಕ್ಷೇತ್ರಗಳಲ್ಲೂ ಕನ್ನಡವನ್ನು ಬೆಳೆಸುವ ಪ್ರಯತ್ನ ತೀವ್ರಗೊಳ್ಳಬೇಕು. ಆದರೂ ಒಂದಂಶವನ್ನು ನಾವು ಗಮನಿಸಬೇಕು. ೨೦೦೦ ವರ್ಷಗಳಿಂದಲೂ ಕನ್ನಡ ಯಾವುದೇ ನಿರ್ದಿಷ್ಟ ಭಾಷಾ ನೀತಿ, ಭಾಷಾ ಯೋಜನೆ ಏನೊಂದೂ ಇಲ್ಲದೆ ಆಡುಭಾಷೆಯಾಗಿ, ಸಾಹಿತ್ಯವಾಗಿ ಬೆಳೆದು ಬಂದಿದೆ. ಆ ಬೆಳವಣಿಗೆಯ ಸಂದರ್ಭಗಳಲ್ಲೂ ಅನೇಕ ಭಾಷಾ ದಾಳಿಗಳನ್ನೂ, ಸಾಂಸ್ಕೃತಿಕ ಆಕ್ರಮಣಗಳನ್ನೂ ಸಹಿಸಿಕೊಂಡಿದೆ. ಈ ಭಾಷೆ ತಂತಾನೆ ಹುಟ್ಟಿ ತನ್ನ ಪಾಡಿಗೆ ತಾನು ಬೆಳೆಯುತ್ತಿದ್ದಾಗ ಅದರ ಬೆಳವಣಿಗೆಯ ಬಗ್ಗೆ ಯಾರು ಯೋಚಿಸುತ್ತಿದ್ದರು? ಇದಕ್ಕೆ ಸೂಕ್ತ ಉತ್ತರ ನಮ್ಮ ಸಮಾಜದಲ್ಲೇ ಇದೆ.

ಪ್ರಸ್ತುತ ಕನ್ನಡದ ಸ್ಥಿತಿ ಚಿಂತಾಜನಕವಾಗೇನೂ ಇಲ್ಲ ಎನ್ನಬಹುದು. **ಮೊದಲನೆಯದಾಗಿ**, ಕನ್ನಡ ಎಲ್ಲ ಬಗೆಯ ಮಾರ್ಪಾಡು ಬದಲಾವಣೆಗಳಿಗೆ ಒಗ್ಗಿಕೊಳ್ಳುತ್ತಿದೆ. ದಾಳಿ ಮಾಡುವ ಅನ್ಯಭಾಷಾ ಶಬ್ದಗಳನ್ನೇ ಮಡಿಲಿಗೆ ಹಾಕಿಕೊಳ್ಳುವ ಔದಾರ್ಯ ತೋರುತ್ತಿದೆ. ಜನ ಬೇಡ ಎಂದು ವರ್ಜಿಸಿದ ಪದಗಳನ್ನೋ ಅಕ್ಷರಗಳನ್ನೋ ನಿರ್ಮೋಹಿಯಂತೆ ಕೈಬಿಡುತ್ತದೆ. ಇದೆಲ್ಲ ಕನ್ನಡಕ್ಕೆ ಹೊಸತಲ್ಲ. **ಎರಡನೆಯದಾಗಿ**, ಕನ್ನಡ ಭಾಷೆಯ ಉಳಿವು, ಬೆಳವಿನ ಬಗ್ಗೆ ರಾಜ್ಯದಲ್ಲಿ ಇತ್ತೀಚಿನ ದಿನಗಳಲ್ಲಿ ವ್ಯಾಪಕ ಜಾಗೃತಿ ಮೂಡಿದೆ. ಅನೇಕ ಹಿರಿಯ ಸಾಹಿತಿಗಳು, ಭಾಷಾ ತಜ್ಞರು, ಕಲಾವಿದರು, ಚಿಂತಕರು, ಹೋರಾಟಗಾರರು ಶ್ರಮ ವಹಿಸಿದ್ದಾರೆ. ಭಾಷೆಯ ಬಳಕೆಗೆ ಪ್ರೋತ್ಸಾಹ ಹೆಚ್ಚಾಗಿದೆ. ಭಾಷಾಭಿಮಾನದ ಬಗ್ಗೆ ಜನರಲ್ಲಿ ತಿಳುವಳಿಕೆ ಮೂಡುತ್ತಿದೆ. **ಮೂರನೆಯದಾಗಿ**, ಸರ್ಕಾರ, ಸರ್ಕಾರಿ ಅಧೀನದ ಹಾಗೂ ಸರ್ಕಾರೇತರ ಸಂಸ್ಥೆಗಳು ಕನ್ನಡ ಭಾಷಾಭಿವೃದ್ಧಿಯತ್ತ ನಿಗಾ

ವಹಿಸಿವೆ. ಅದಕ್ಕಾಗಿ ಅನೇಕ ಯೋಜನೆಗಳು, ಭಾಷಾನೀತಿ, ವರದಿ, ಶಿಫಾರಸುಗಳು ರೂಪುಗೊಂಡು ಕನ್ನಡವನ್ನು ಕ್ರಮಬದ್ಧವಾಗಿ ಅಥವಾ ವೈಜ್ಞಾನಿಕವಾಗಿ ಬೆಳೆಸುವ ಪ್ರಯತ್ನಗಳು ನಡೆಯುತ್ತಿವೆ. ನಾಲ್ಕನೆಯದಾಗಿ, ಸಮೂಹ ಮಾಧ್ಯಮಗಳೂ ಕನ್ನಡಪರ ಧೋರಣೆಗಳಿಂದ ಕೂಡಿ, ಕನ್ನಡವನ್ನು ಬಳಸುವ ಮೂಲಕವೇ ಅದರ ಹೊಸ ಸ್ವರೂಪಗಳನ್ನು, ಅದರ ಬೆಳವಣಿಗೆಯ ಹೆಜ್ಜೆ ಗುರುತುಗಳನ್ನು ಪ್ರಚಾರಕ್ಕೊಡ್ಡುತ್ತಿವೆ. ಕನ್ನಡ ಆಗಿಂದಾಗ್ಗೆ ತಳೆಯುವ ಹೊಸ ರೂಪಗಳು ಮಾಧ್ಯಮಗಳ ಮೂಲಕ ಜನರಿಗೆ ತಲುಪಿ, ಅವರ ಮಧ್ಯೆ ಅವರ ಆಡುಮಾತಾಗಿ ಉಳಿಯುವುದು ಸಾಧ್ಯವಾಗಿದೆ. ಹಾಗೆ ಉಳಿಯದ್ದನ್ನು ಅನಾಮತ್ತಾಗಿ ಕಿತ್ತೊಗೆಯುವ ಜಾಯಮಾನವೂ ಕನ್ನಡಕ್ಕೆ, ಕನ್ನಡಿಗರಿಗೆ ಇದೆ ಎನ್ನುವುದಕ್ಕೂ ಉದಾಹರಣೆಗಳಿವೆ. ಈ ಎಲ್ಲ ಕಾರಣಗಳಿಂದ ಕನ್ನಡ ಅಭಿವೃದ್ಧಿಶೀಲವಾಗೇ ಇದೆ ಎನ್ನಬಹುದು.

ಕನ್ನಡದ ಅಭಿವೃದ್ಧಿ ಎನ್ನುವುದನ್ನು ಮುಖ್ಯವಾಗಿ ಅದರ 'ಬೆಳವಣಿಗೆ' ಎಂದೇ ಸುಲಭವಾಗಿ ಅರ್ಥೈಸಬಹುದು. 'ಅಭಿವೃದ್ಧಿ' ಎನ್ನುವ ಸಂಸ್ಕೃತ ಶಬ್ದ 'ನಿರಂತರವಾಗಿ (ಯಾವಾಗಲೂ) ಹೆಚ್ಚುವಂಥದ್ದು' ಎಂಬ ಅರ್ಥವನ್ನು ಹೊಂದಿದೆ. ಇದನ್ನೇ ಕನ್ನಡದಲ್ಲಿ 'ಬೆಳವಣಿಗೆ' ಎಂದು ಹೇಳಬಹುದು. ಆದರೂ ಇದು ಕನ್ನಡ ಭಾಷೆಯ ಬೆಳವಣಿಗೆ ಮಾತ್ರ ಅಲ್ಲ. ಒಂದು ಸಂಸ್ಕೃತಿಯ, ಸಮಾಜದ ಏಳ್ಗೆಯೇ ಆಗಿದೆ.

ಈ ಎಲ್ಲ ಅಂಶಗಳಿಂದ ಸ್ಪಷ್ಟಪಡುವುದೇನೆಂದರೆ, ಭೌಗೋಳಿಕ ಭಿನ್ನತೆ ಹಾಗೂ ಕಾಲಮಾನದ ವ್ಯತ್ಯಯಗಳಿಂದಾಗಿ ಭಾಷೆ ತನ್ನದೇ ಗತಿಯಲ್ಲಿ ರೂಪಾಂತರಗೊಳ್ಳುತ್ತದೆ. ಈ ಬದಲಾಗುವ ಕ್ರಿಯೆಯನ್ನೇ ಭಾಷೆಯ ಅಭಿವೃದ್ಧಿ ಅಥವಾ ಬೆಳವಣಿಗೆ ಎಂದು ಗುರುತಿಸಬಹುದಾಗಿದೆ. ಇದನ್ನೇ ಸೋಮಶೇಖರ ಗೌಡ ಹೀಗೆ ಹೇಳಿದ್ದಾರೆ.

> *ದೇಶಭೇದ (Geographical difference) ಹಾಗೂ ಕಾಲಭೇದ (temporal difference)ಗಳಿಂದ ಭಾಷೆ ರೂಪಾಂತರಗೊಳ್ಳುತ್ತಾ ಹೋಗುತ್ತದೆ. ಹೀಗೆ ಭಾಷೆ ರೂಪಾಂತರಗೊಳ್ಳುವುದನ್ನೇ ಅದರ ಬೆಳವಣಿಗೆ ಎಂದು ಕರೆಯಲಾಗಿದೆ.*[೬]

ಬೆಳವಣಿಗೆ ಹೊಂದುವ ಸಲುವಾಗಿ ಭಾಷೆ, ಬಹಳಷ್ಟನ್ನು ಕಳೆದುಕೊಳ್ಳುತ್ತದೆ, ಬಹಳಷ್ಟನ್ನು ಪಡೆದುಕೊಳ್ಳುತ್ತದೆ, ತನ್ನೊಳಗೇ ಮಾರ್ಪಡುತ್ತದೆ. ಭಾಷಾ ಬೆಳವಣಿಗೆಯ ಪ್ರಕ್ರಿಯೆ ಮುಖ್ಯವಾಗಿ ಎರಡು ನೆಲೆಗಳಲ್ಲಿ ಆಗುತ್ತವೆನ್ನಬಹುದು.

**ಆಂತರಿಕ ಕಾರಣಗಳು :** ವ್ಯಕ್ತಿಗತವಾಗಿ ಉಚ್ಚಾರಣೆಯಲ್ಲಾಗುವ ಲೋಪ/ದೋಷ/ಭೇದಗಳಿಂದಾಗಿ ಭಾಷೆ ಬದಲಾಗುತ್ತದೆ. ಅಂದರೆ, 'ತೀವ್ರ' ಎನ್ನುವ ಸಂಸ್ಕೃತ ಜನ್ಯ ಶಬ್ದ ಕಾಲಾಂತರದಲ್ಲಿ 'ತೀರಾ' ಎಂಬ ರೂಪಗಳಿಸಿದೆ. ಇಂತಹ ಅನೇಕಾನೇಕ ತತ್ಸಮ - ತದ್ಭವ ಶಬ್ದಗಳನ್ನು ನಾವು ಈಗಾಗಲೇ ಗುರುತಿಸಿದ್ದೇವೆ. ಅದೇ ರೀತಿ ಈ ರೂಪಾಂತರ ಕ್ರಿಯೆ ಅಂತರ್ಗಾಮಿಯಂತೆ ನಿರಂತರವಾಗಿ ಸಾಗುತ್ತಿದೆ. ಈ ಬಗೆಯ ಬದಲಾವಣೆಗೆ ಮುಖ್ಯ ಕಾರಣವನ್ನು ನಾವು ಈ ರೀತಿ ಗುರುತಿಸಬಹುದು. ಸಂಸ್ಕೃತದ, ಸಂಸ್ಕೃತ ಜನ್ಯವಾದ, ಅನೇಕ ಶಬ್ದಗಳು ಕನ್ನಡದಲ್ಲಿ ಕಾಲಾಂತರದಿಂದಲೂ ಮಿಳಿತಗೊಂಡಿದ್ದು, ಗ್ರಾಮೀಣ ಪ್ರದೇಶದ ಶ್ರೀ ಸಾಮಾನ್ಯನೊಬ್ಬನಿಗೆ ಅದನ್ನು ಉಚ್ಚಾರ ಮಾಡುವಲ್ಲಿ ತೊಡಕುಗಳು ಕಾಣಿಸಿಕೊಳ್ಳುವುದು ಸ್ವಾಭಾವಿಕ. ಆತ ಆ ಶಬ್ದವನ್ನು ತನ್ನ ಬಾಯಲ್ಲಾದ ಮಟ್ಟಿಗೆ ಅಭಿವ್ಯಕ್ತಿಸಲು ಪ್ರಯತ್ನಿಸುತ್ತಾನೆ. ಆದರೂ ಮಹಾಪ್ರಾಣ, ಅಲ್ಪಪ್ರಾಣ, ಅನುನಾಸಿಕ, ಹ್ರಸ್ವ, ದೀರ್ಘ, ವಿಜಾತೀಯ ಸಂಯುಕ್ತಾಕ್ಷರಗಳನ್ನು ಪ್ರಯೋಗಿಸಬೇಕಾದಾಗ ಅದು ಸಾಧ್ಯವಾಗದೇ, ಮೂಲ ಶಬ್ದಕ್ಕೆ ತತ್ಸಮಾನವಾದ ಮತ್ತೊಂದು ಪರ್ಯಾಯ ಶಬ್ದವನ್ನು ಅವನು ರೂಢಿಗತಗೊಳಿಸಿಕೊಳ್ಳುತ್ತಾನೆ. ಹಾಗಾಗಿ ಇದು ಸಂಪೂರ್ಣವಾಗಿ ನೈಸರ್ಗಿಕ ಕಾರಣವೆನಿಸುತ್ತದೆ. ಇದಕ್ಕೆ ಇನ್ನೂ ಉತ್ತಮ ಉದಾಹರಣೆ ಎಂದರೆ ಉಚ್ಚಾರಣಾ ತೊಡಕಿನಿಂದಾಗಿ 'ಱ', 'ೞ', 'ಕ್ಷಳ' ಗಳ ನಾಪತ್ತೆ. ಇಂತಹ ಸಂದರ್ಭಗಳಲ್ಲಿ ಭಾಷೆ ಒಳಗೊಳಗೇ ಮಾರ್ಪಡುವುದನ್ನು ಕಾಣಬಹುದು.

**ಬಾಹ್ಯಕಾರಣಗಳು :** ಸಹಜವಾಗಿಯೇ ಇದು ಅನ್ಯಭಾಷಾ ಸಂಸರ್ಗದಿಂದ ಘಟಿಸುವಂತಹುದು. ಇತರ ಭಾಷಾ ಜನರೊಂದಿಗೆ ಸಂವಹಿಸುವಾಗ ಆ ಭಾಷೆಯ ಶಬ್ದಗಳು ನುಸುಳಿ ಬಂದು ಅವೂ ತಮ್ಮ ಮೂಲ ರೂಪ ಕಳೆದುಕೊಂಡು ಅಥವಾ ಅದೇ ರೂಪದಲ್ಲಿ ಅಥವಾ ಅಲ್ಪಸ್ವಲ್ಪ ಮಾರ್ಪಾಡುಗಳೊಂದಿಗೆ, ಆದರೆ ಅರ್ಥ ಉಳಿಸಿಕೊಂಡು ಇಲ್ಲೇ ನೆಲೆಯಾಗುತ್ತವೆ. ಉದಾಹರಣೆಯಾಗಿ ಇಂಗ್ಲೀಷಿನ Market ಶಬ್ದ ಕನ್ನಡದಲ್ಲಿ 'ಮಾರುಕಟ್ಟೆ'ಯಾಗಿ ಉಳಿದುಕೊಂಡಿದೆ. ಒಂದು ಹಂತದಲ್ಲಿ Market ಮಾರುಕಟ್ಟೆಯಾಯಿತೋ, ಮಾರುಕಟ್ಟೆ Market ಆಯಿತೋ ಎಂದು ಯೋಚಿಸುವಷ್ಟರ ಮಟ್ಟಿಗೆ ಎರಡೂ ಅತೀ ಸಮಾನಾರ್ಥಕ, ಸಮಾನ ಉಚ್ಛಾರಣೆ ಹೊಂದಿದ ಶಬ್ದಗಳಾಗಿವೆ. ಮೂಲ ದ್ರಾವಿಡದ ಕವಲು ಭಾಷೆಗಳಿಂದ, ಆರ್ಯ ಸಂಸ್ಕೃತಿಯ ಭಾಷೆಗಳಿಂದ, ಉರ್ದು, ಅರಾಬಿಕ್, ಇಂಗ್ಲಿಷ್ ಭಾಷೆಗಳಿಂದ ಇಂತಹ 'ಎರವಲು' ಸ್ವೀಕಾರ ಕನ್ನಡಕ್ಕೆ ಸಾಧ್ಯವಾಗಿದೆ.

ಇಂತಹ ಬದಲಾವಣೆಗಳು ಸಾಮಾನ್ಯವಾಗಿ ಪ್ರಾದೇಶಿಕ ಭಿನ್ನತೆಯ ಕಾರಣಗಳಿಗಾಗಿ ಹಾಗೂ ಪೀಳಿಗೆಯಿಂದ ಪೀಳಿಗೆಗೆ ಹರಿದುಬರುವಾಗ ಅಂದರೆ ಕಾಲಚಕ್ರದ ಉರುಳಿನಲ್ಲಿ ಘಟಿಸುತ್ತವೆ. ಜೊತೆಗೆ ಜನರ ಜಾತಿ, ಮತ, ವರ್ಗ, ಅವರು ಅನುಸರಿಸುವ ವೃತ್ತಿ, ಲಿಂಗ, ವಯಸ್ಸು ಇವೂ ಸ್ವಲ್ಪ ಮಟ್ಟಿಗೆ ಕಾರಣವಾಗಬಹುದು. ಹೀಗೆ ಜನರ ಮಧ್ಯೆ ಕನ್ನಡ ತಂತಾನೆ ಬೆಳೆಯುತ್ತಿದೆ. ಈಗ ಅದನ್ನು ಒಂದಿಷ್ಟು ಕ್ರಮಬದ್ಧವಾಗಿ, ವೈಜ್ಞಾನಿಕವಾಗಿ, ಸಮರ್ಪಕವಾಗಿ ಬೆಳೆಸುವ ಪ್ರಯತ್ನಗಳೂ ಆಗುತ್ತಿವೆ. ಅದಕ್ಕಾಗಿ ಸರ್ಕಾರ, ಸರ್ಕಾರದ ಅಧೀನ ಸಂಘ ಸಂಸ್ಥೆಗಳು, ಸರ್ಕಾರೇತರ ಸಂಸ್ಥೆಗಳು ರೂಪುರೇಷೆ, ನೀತಿ ನಿಯಮಗಳನ್ನು, ಮಾರ್ಗೋಪಾಯಗಳನ್ನೂ ನಿರ್ಮಿಸಿದ್ದಾರೆ. ಅವನ್ನು ಅನುಷ್ಠಾನಗೊಳಿಸುವತ್ತ ಕಾರ್ಯೋನ್ಮುಖರಾಗಿದ್ದಾರೆ. ಕನ್ನಡ ಭಾಷಾ ಬೆಳವಣಿಗೆಯ ವಿವಿಧ ಮಗ್ಗುಲುಗಳನ್ನು ಹೀಗೆ ಗುರುತಿಸಬಹುದು.

- ಭಾಷಾ ನೀತಿ, ಭಾಷಾ ಯೋಜನೆ, ವರದಿ ಶಿಫಾರಸ್ಸುಗಳು
- ಶಿಕ್ಷಣ, ಆಡಳಿತ, ಕಾನೂನು ಮತ್ತಿತರ ವ್ಯಾವಹಾರಿಕ ವಲಯಗಳಲ್ಲಿ ಭಾಷೆ ಬಳಕೆ
- ಸಂವಹನ ಮಾಧ್ಯಮಗಳ ಪಾತ್ರ

ಈ ಮಹಾಪ್ರಬಂಧದ ವ್ಯಾಪ್ತಿಯ ದೃಷ್ಟಿಯಿಂದಾಗಿ ಕನ್ನಡ ಭಾಷೆಯ ಬೆಳವಣಿಗೆಯಲ್ಲಿ 'ಆಧುನಿಕ ಸಂವಹನ ಮಾಧ್ಯಮಗಳು ವಹಿಸುವ ಪಾತ್ರ', ಎನ್ನುವ ವಿಚಾರವನ್ನು ಇಲ್ಲಿ ವಿಷದವಾಗಿ ಚರ್ಚಿಸುತ್ತಿದ್ದೇನೆ. ಒಟ್ಟಾರೆ ವಿಷಯಕ್ಕೆ ಪೂರಕವಾಗುವಂತೆ (೧) ಭಾಷಾ ನೀತಿ, ಭಾಷಾ ಯೋಜನೆ, ವರದಿ ಶಿಫಾರಸ್ಸುಗಳು ಮತ್ತು (೨) ಶಿಕ್ಷಣ, ಆಡಳಿತ, ಕಾನೂನು ವಲಯಗಳಲ್ಲಿ ಭಾಷೆ ಬಳಕೆ ಕುರಿತು ಸ್ಥೂಲ ವಿವರಣೆಯನ್ನು ಮುಂದಿನ ಭಾಗದಲ್ಲಿ ನೀಡುತ್ತಿದ್ದೇನೆ.

## ೨. ಕನ್ನಡ ಅಭಿವೃದ್ಧಿಯ ವಿವಿಧ ಹಂತಗಳು

ಕನ್ನಡ ಪರಿವರ್ತನಾಶೀಲ ಭಾಷೆ. ಕಾಲದಿಂದ ಕಾಲಕ್ಕೆ ಅನೇಕ ತಿರುವು-ಹರವುಗಳನ್ನು ಕಂಡಿದೆ. ಕನ್ನಡ ದ್ರಾವಿಡ ಭಾಷಾ ವರ್ಗಕ್ಕೆ ಸೇರಿದ ಒಂದು ಸ್ವತಂತ್ರ ಭಾಷೆ. ದ್ರಾವಿಡ ಭಾಷಾವರ್ಗದ ೩೧ ಸ್ವತಂತ್ರ ಭಾಷೆಗಳು ಮತ್ತು ೪೨ ಉಪಭಾಷೆಗಳ (ಒಟ್ಟು ೭೩)[೬] ಪೈಕಿ ಲಿಪಿ ಸಹಿತವಾದ ೪ ಪ್ರಮುಖ ಭಾಷೆಗಳಲ್ಲಿ ಕನ್ನಡವೂ ಒಂದು ಎನ್ನುವುದು ಗಮನಾರ್ಹ. ದ್ರಾವಿಡ ಮೂಲದ ತನ್ನ ಸೋದರ ಭಾಷೆ ಹಾಗೂ ಉಪಭಾಷೆಗಳ ಛಾಯೆಯನ್ನು ಕನ್ನಡ ಈಗಲೂ ಹೊಂದಿದೆ. ಇದಲ್ಲದೆ ದ್ರಾವಿಡ ಮತ್ತು ಆರ್ಯ ಸಂಸ್ಕೃತಿಗಳ ನಡುವಿನ ಕೊಡುಕೊಳ್ಳುವಿಕೆಯ ಪರಿಣಾಮವಾಗಿ ಸಂಸ್ಕೃತ ಮತ್ತಿತರ ಆ ವರ್ಗದ ಭಾಷೆ, ಉಪಭಾಷೆಗಳು ಕನ್ನಡದ ಒಡಲು ಸೇರಿವೆ. ತದನಂತರದಲ್ಲಿ ದ್ರಾವಿಡ, ಆರ್ಯ ಸಂಸ್ಕೃತಿಗೂ ಭಿನ್ನವಾದ ವಿದೇಶಿಯ ಭಾಷೆಗೂ

ಕನ್ನಡ ವೀಳ್ಯ ನೀಡಿದೆ. ಆಂತರಿಕವಾಗಿಯೂ ಪೀಳಿಗೆಯಿಂದ ಪೀಳಿಗೆಗೆ, ಪ್ರದೇಶದಿಂದ ಪ್ರದೇಶದ ನಡುವೆ ಹರಿಯುತ್ತಲೂ ಅನೇಕ ಮಾರ್ಪಾಡುಗಳಿಗೆ ಪಕ್ಕಾಗಿದೆ. ಆದ್ದರಿಂದಲೇ ಕನ್ನಡ ಅನೇಕ ಅವಸ್ಥಾಂತರಗಳನ್ನು ಕಂಡಿದೆ. ತನ್ನೊಳಗೂ ವೈವಿಧ್ಯತೆಯನ್ನು ಹೊಂದಿದೆ; ಒಟ್ಟಾರೆಯಾಗಿ ಕನ್ನಡ ನಿರಂತರವಾಗಿ ಬೆಳೆದಿದೆ ಎನ್ನಬಹುದು.

ಪ್ರಪಂಚದಲ್ಲಿ ಈಗ ಇವೆ ಎಂದು ಹೇಳಲಾಗುವ ೩೦೦೦ ಭಾಷೆ, ಉಪಭಾಷೆಗಳನ್ನು ಭೌಗೋಳಿಕ, ಜನಾಂಗಿಕ, ರಾಚನಿಕ ಹಾಗೂ ವಾಂಶಿಕ ವರ್ಗಗಳೆಂದು ವಿಭಜಿಸುವುದುಂಟು. ಒಂದೇ ಮೂಲದಿಂದ ಹೊರಟ ಅನೇಕ ಭಾಷೆಗಳು ಶಾಖೆಗಳಾಗಿ ಒಡೆದು ಪ್ರತ್ಯೇಕ ಭಾಷೆಗಳಾಗಿ ರೂಪುಗೊಳ್ಳುವುದು ವಾಂಶಿಕ ವರ್ಗದ ಭಾಷಾ ವೈಶಿಷ್ಟ್ಯ. ದ್ರಾವಿಡ ಭಾಷಾ ವರ್ಗವೂ, ವಾಂಶಿಕ ನೆಲೆಯಲ್ಲೇ ಗುರುತಿಸಬಹುದಾದ ಒಂದು ಭಾಷಾವರ್ಗ ಎನಿಸಿಕೊಂಡಿದೆ. ಜಗತ್ತಿನ ಹಿರಿಯ ಭಾಷಾವಂಶಗಳಲ್ಲಿ ಆರನೇ ಸ್ಥಾನದಲ್ಲಿರುವ ದ್ರಾವಿಡ ಭಾಷಾವರ್ಗದಲ್ಲಿ ಸುಮಾರು ೧೫೩ ಉಪಭಾಷೆಗಳಿವೆ[೮] ಎಂದೂ ಇನ್ನೊಂದೆಡೆ ಹೇಳಲಾಗಿದೆ. ಭಾರತದ ದಕ್ಷಿಣ ಭಾಗದಲ್ಲಿ ತಮ್ಮ ಭದ್ರನೆಲೆ ಹೊಂದಿದ್ದರೂ ದ್ರಾವಿಡ ಮೂಲದ ಭಾಷೆಗಳು ಪ್ರಾಚೀನ ಕಾಲದಲ್ಲಿ ಉತ್ತರ ಭಾಗದಲ್ಲೂ ಬಳಕೆಯಾಗುತ್ತಿದ್ದವು ಎಂದು ಹೇಳಲಾಗುತ್ತದೆ. ಹರಪ್ಪ ಮಹೆಂಜೋದಾರೋ ಸಂಸ್ಕೃತಿ ದ್ರಾವಿಡ ಜನಾಂಗದ ಸಂಸ್ಕೃತಿಯಾಗಿದೆ ಎನ್ನುವ ಬಗ್ಗೆ ವಿದ್ವಾಂಸರ ಒಮ್ಮತದ ಅಭಿಪ್ರಾಯವಿದೆ. ದ್ರಾವಿಡರು ಕ್ರಿ.ಪೂ. ಸುಮಾರು ೪೦೦೦ ವರ್ಷಗಳಷ್ಟು ಹಿಂದೆಯೇ ಈಶಾನ್ಯ ಇರಾನಿನ ಗುಡ್ಡಗಾಡು ಪ್ರದೇಶದ ಕಡೆಯಿಂದ ಭಾರತಕ್ಕೆ ಬಂದು, ನಂತರ ೫೦೦-೧೦೦೦ ವರ್ಷಗಳ ಅವಧಿಯಲ್ಲಿ ಸಿಂಧೂನದಿ ತೀರದಲ್ಲಿ ಬೀಡುಬಿಟ್ಟರೆಂದು ಹೇಳಲಾಗುತ್ತದೆ. ಹಾಗೆ ನೋಡಿದರೆ ದಕ್ಷಿಣ ಭಾರತದಲ್ಲಿ ಪ್ರಬಲವಾದ ದ್ರಾವಿಡ ಭಾಷಾವರ್ಗ ಈಶಾನ್ಯ ಭಾಗದಲ್ಲಿ ಪ್ರವೇಶ ಪಡೆದಿದೆ ಎಂದು ಅಧ್ಯಯನಗಳು ಹೇಳುತ್ತವೆ. ಬಲೂಚಿಸ್ತಾನದಲ್ಲಿ ಈಗಲೂ ಕೇಳಸಿಗುವ ಬ್ರಾಹೂಈ ಭಾಷೆ ಹಿಂದೆ ದ್ರಾವಿಡರು ಉತ್ತರ ಭಾರತದಲ್ಲೆಲ್ಲಾ ನೆಲೆಸಿದ್ದರೆಂಬುದನ್ನು ಸೂಚಿಸುತ್ತದೆ.




ಪರಸ್ಪರ ಹೋಲಿಕೆ ಹಾಗೂ ಸಂಬಂಧದ ನೆಲೆಯಲ್ಲಿ ದ್ರಾವಿಡ ಭಾಷಾವರ್ಗವನ್ನು ಮತ್ತೆ ನಾಲ್ಕು ಗುಂಪುಗಳಾಗಿ ವಿಂಗಡಿಸಲಾಗಿದೆ. (೧) ಉತ್ತರ ದ್ರಾವಿಡ (೨) ಮಧ್ಯ ದ್ರಾವಿಡ (೩) ದಕ್ಷಿಣ ಮಧ್ಯ ದ್ರಾವಿಡ (೪) ದಕ್ಷಿಣ ದ್ರಾವಿಡ. ಮೇಲ್ನೋಟಕ್ಕೆ

ಪ್ರದೇಶವಾರು ವಿಂಗಡಣೆಯಾಗಿರುವಂತೆ ಕಂಡರೂ ಸೂಕ್ಷ್ಮವಾಗಿ ಗಮನಿಸಿದಾಗ ಈ ವರ್ಗದ ಎಲ್ಲ ಭಾಷೆ- ಉಪಭಾಷೆಗಳೂ ಒಂದೇ ವಂಶದ ಬೇರಿನಿಂದ ಚಿಗುರೊಡೆದಿರುವುದು ಗ್ರಾಹ್ಯವಾಗುತ್ತದೆ.

ಮೂಲ ದ್ರಾವಿಡ ಭಾಷೆಯಿಂದ ಮೂಲ ದಕ್ಷಿಣ ದ್ರಾವಿಡ ಭಾಷೆಯ ಗುಂಪಿನಲ್ಲಿ ಒಂದಾಗಿ ಕನ್ನಡ ಸರಿದುಬಂದಿದೆ ಎಂದು ನಂಬಲಾಗಿದೆ. ಕ್ರಿ.ಪೂ. ೧೫ನೇ ಶತಮಾನದ ವೇಳೆಗೆ ಈ ಬೇರ್ಪಡುವಿಕೆ ಪ್ರಾರಂಭವಾಗಿರಬೇಕು ಎಂದು ಅಧ್ಯಯನಗಳು ತಿಳಿಸುತ್ತವೆ. ಅಧ್ಯಯನದ ಆಧಾರದ ಮೇಲೆ ಎನ್.ಬಿ. ಪರಿಮಳಾಬಾಯಿಯವರು ನೀಡಿರುವ ಮಾಹಿತಿ ಹೀಗಿದೆ.

> *ಮೂಲ ದ್ರಾವಿಡ ಭಾಷೆಯಿಂದ ಮೂಲ ದಕ್ಷಿಣ ದ್ರಾವಿಡ ಭಾಷೆ ಕ್ರಿ.ಶ.ಪೂ. ಸುಮಾರು ೧೫ನೇ ಶತಮಾನದ ವೇಳೆಗೆ ಬೇರೆಯಾಗಿರಬೇಕು. ಆಂಡ್ರೋನೋವ್ ಎಂಬ ವಿದ್ವಾಂಸರ ಪ್ರಕಾರ ಮೂಲ ದ್ರಾವಿಡ ಭಾಷೆ ಕ್ರಿ.ಶ.ಪೂ. ಸುಮಾರು ೪೦೦೦ ವರ್ಷಗಳಷ್ಟು ಹಿಂದೆಯೇ ಚದುರಿ ಹೋಗಲಾರಂಭಿಸಿರಬೇಕು. 'ತೆಲುಗು, ತುಳು ಭಾಷೆಗಳು ಕ್ರಿ.ಶ.ಪೂ. ೧೦ ರಿಂದ ೬ನೇ ಶತಮಾನದ ವೇಳೆಗೆ ಬೇರೆಯಾಗಿರಬೇಕು. ಕ್ರಿ.ಶ.ಪೂ. ೫ನೇ ಶತಮಾನಕ್ಕಿಂತ ಹಿಂದೆ ದಕ್ಷಿಣ ದ್ರಾವಿಡ ಭಾಷೆ ಮೂಲ ಕನ್ನಡ ಮೂಲ ತಮಿಳು ಮೂಲ ಕೊಡಗು ಮೊದಲಾದ ಉಪಭಾಷೆಗಳನ್ನೊಳಗೊಂಡು ಬಳಕೆಯಲ್ಲಿದ್ದಿರಬೇಕು. ಕ್ರಿ.ಶ. ೫ನೇ ಶತಮಾನದಿಂದ ೧೦ನೇ ಶತಮಾನದ ವೇಳೆಗೆ ತಮಿಳಿನಿಂದ ಮಲೆಯಾಳಂ ಬೇರ್ಪಟ್ಟಿರಬೇಕು. ಮೂಲ ದಕ್ಷಿಣ ದ್ರಾವಿಡ ಭಾಷೆ ಮೂಲ ತಮಿಳು ಹಾಗೂ ಮೂಲ ಕನ್ನಡ ಭಾಷೆಗಳ ಉಪಭಾಷೆಗಳೊಂದಿಗೆ ಕ್ರಿ.ಶ.ಪೂ. ೪-೫ನೇ ಶತಮಾನದ ವೇಳೆಗೆ ಕೊನೆಗೊಂಡಿರಬೇಕು' ಎಂದು ಕಮೀಲ್ ಜ್ವಿಲೇಬಿಲ್ ಎಂಬ ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಆಂಡ್ರೋನೋವ್ 'ತಮಿಳು ಮತ್ತು ಕನ್ನಡ ಗುಂಪು ಬಹುಕಾಲದವರೆಗೂ ಜೀವಿಸಿತ್ತು. ತಮಿಳು ಹಾಗೂ ಕನ್ನಡ ಕ್ರಿ.ಶ.ಪೂ. ಸುಮಾರು ೪-೩ನೇ ಶತಮಾನದ ವೇಳೆಗೆ ಸಂಪೂರ್ಣವಾಗಿ ಬೇರ್ಪಟ್ಟಿರಬೇಕು' ಎನ್ನುತ್ತಾರೆ. ಅವರು ಕ್ ಕಾರ ತಾಲವ್ಯೀಕರಣ ಇ/ಎ, ಉ/ಒ ಪರಿವರ್ತನೆಯ ಪ್ರಕ್ರಿಯೆಗಳ ಆಧಾರದಿಂದ ಕನ್ನಡ ಮತ್ತು ತಮಿಳು ಭಾಷೆಗಳು ಮೂಲ ದಕ್ಷಿಣ ದ್ರಾವಿಡದಿಂದ ೪-೩ನೇ ಶತಮಾನದ ವೇಳೆಗೆ ಬೇರೆಯಾಗಿರಬೇಕೆಂದು ಸಿದ್ಧಪಡಿಸಿದ್ದಾರೆ.*[೯]

ಎಂ.ಎಚ್. ಕೃಷ್ಣಯ್ಯ ಅವರು

> *ದ್ರಾವಿಡ ಭಾಷೆಗಳು ಮೂಲ ದ್ರಾವಿಡದಿಂದ ಕಾಲಕ್ರಮೇಣ ಸ್ವತಂತ್ರ ಭಾಷೆಗಳಾಗಿ ರೂಪುಗೊಳ್ಳುತ್ತಾ ಬಂದುದನ್ನು ಸ್ಥೂಲವಾಗಿ ಗುರುತಿಸಬಹುದು. ಕ್ರಿ.ಪೂ. ೧೫೦೦ ವರ್ಷಗಳಷ್ಟು ಹಿಂದೆ ಮೂಲ ದ್ರಾವಿಡ ಇದ್ದು ಕವಲೊಡೆಯಲು ಪ್ರಾರಂಭವಾಯಿತು ಎಂದು ಊಹಿಸಲಾಗಿದೆ.*[೧೦]

ಎಂದಿದ್ದಾರೆ. ಮೂಲ ದ್ರಾವಿಡದಿಂದ ಕನ್ನಡ ಹೊರಬಂದ ಪರಿಯನ್ನು ಪಟ್ಟಿ - ೧೭ರಲ್ಲಿ ನೀಡಲಾಗಿದೆ.

## ಪಟ್ಟಿ - ೧೭
## ದ್ರಾವಿಡ ಭಾಷಾ ವರ್ಗೀಕರಣ




ವಿ.ಸೂ. : ದಕ್ಷಿಣ ದ್ರಾವಿಡ ಭಾಷೆಗಳು ಶಾಖೆಗಳಾಗಿ ಪ್ರತ್ಯೇಕಗೊಂಡಿರುವಂತೆ ಉತ್ತರ, ಮಧ್ಯ ದ್ರಾವಿಡ ಹಾಗೂ ದಕ್ಷಿಣ ಮಧ್ಯ ದ್ರಾವಿಡ ಗುಂಪುಗಳೂ ಶಾಖೋಪಶಾಖೆಗಳಾಗಿ ಬೆಳೆದಿವೆ. ಪೂರ್ವಿಕರ ಅಧ್ಯಯನಗಳನ್ನಾಧರಿಸಿ ಕನ್ನಡದ ಬೆಳವಣಿಗೆಯನ್ನು ಗುರುತಿಸುವ ದೃಷ್ಟಿಯಿಂದಲೂ ನನ್ನ ಅಧ್ಯಯನದ ವ್ಯಾಪ್ತಿಯ ದೃಷ್ಟಿಯಿಂದಲೂ ದಕ್ಷಿಣ ದ್ರಾವಿಡ ಭಾಷಾ ವರ್ಗೀಕರಣವನ್ನು ಮಾತ್ರ ಇಲ್ಲಿ ಪ್ರಸ್ತಾಪಿಸಿದ್ದೇನೆ.

ದ್ರಾವಿಡ ಮೂಲದ ಭಾಷೆಗಳಲ್ಲಿ ಒಂದೇ ಭಾಷಾ ವಂಶಕ್ಕೆ ಸೇರಿದವೆಂದು ತಿಳಿಸುವ ಹಾಗೂ ಅವು ಆರ್ಯಭಾಷಾ ವರ್ಗದಿಂದ ಭಿನ್ನವಾಗಿವೆ ಎಂದು ಸೂಚಿಸುವ ಕೆಲವು ಉದಾಹರಣೆಗಳನ್ನು ಪರಿಶೀಲಿಸಬಹುದು.

| ದ್ರಾವಿಡ ಭಾಷಾ ಪದಗಳು | | | | | ದ್ರಾವಿಡೇತರ ಭಾಷಾ ಪದಗಳು | | |
|---|---|---|---|---|---|---|---|
| ಕನ್ನಡ | ತಮಿಳು | ತೆಲುಗು | ಮಲೆಯಾಳಂ | ತುಳು | ಇಂಗ್ಲೀಷ್ | ಸಂಸ್ಕೃತ | ಹಿಂದಿ |
| ತಾಯಿ | ತಾಯ್ | ತಲ್ಲಿ | ಅಮ್ಮೆ | ಅಪ್ಪೆ | ಮದರ್ | ಮಾತೃ | ಮಾ |
| ಕಣ್ಣು | ಕಣ್ | ಕನ್ನು | ಕಣ್ಣು | ಕಣ್ | ಐ | ಅಕ್ಷಿ/ನಯನ | ಆಂಖ್ |
| ತಿನ್ನು | ತಿನ್ | ತಿನು | ತಿನ್ನ | ತಿನ್ | ಈಟ್ | ಅದ್ | ಖಾ |
| ನಾನು | ಯಾನ್ | ನೇನು | ಞಾನ್ | ಏನ್ | ಐ | ಅಹಂ | ಮೈ |
| ಮೂರು | ಮೂನ್ರು | ಮೂಡು | ಮೂನ್ನು | ಮೂಜಿ | ತ್ರಿ | ತ್ರಯಂ | ತೀನ್ |
| ಕಿವಿ | ಶೆವಿ | ಚೆವಿ | ಚೆವಿ | ಕೆಬಿ | ಇಯರ್ | ಕರ್ಣ | ಕಾನ್ |

ಕನ್ನಡ ತನ್ನ ಸೋದರ ಭಾಷೆಗಳಿಂದ ವಾಂಶಿಕವಾಗಿ ಪಡೆದ ಹೋಲಿಕೆಗಳನ್ನು ಗಮನಿಸಿದಂತೆ, ಭಾಷಾ ಸಂಕರದಿಂದ ಕನ್ನಡ ಸಂಸ್ಕೃತದ ನಡುವೆ ಉಂಟಾದ ಬಾಂಧವ್ಯವನ್ನೂ ಗ್ರಹಿಸಬಹುದು. ಈ ಸಂದರ್ಭದಲ್ಲಿ ಅನೇಕ ಸಂಸ್ಕೃತ ಪದಗಳು ಯಥಾವತ್ತಾಗಿಯೂ, ಇನ್ನು ಹಲವು ಅಲ್ಪ ಧ್ವನಿ ವ್ಯತ್ಯಾಸದೊಂದಿಗೆ ಕನ್ನಡದ ಜಾಯಮಾನಕ್ಕೆ ಹೊಂದುತ್ತಾ ಕನ್ನಡೀಕೃತಗೊಂಡು ಅರ್ಥವ್ಯತ್ಯಾಸವಾಗದೆ ಇಲ್ಲೇ ಉಳಿದಿವೆ. ಉದಾಹರಣೆಗೆ 'ಕುಟಿ' ಎನ್ನುವ ಸಂಸ್ಕೃತ ಶಬ್ದ. ಇದನ್ನು ಕನ್ನಡದಲ್ಲಿ ಗುಡಿ, ಗುಡಿಸಲು, ಮನೆ ಎಂಬ ಅರ್ಥದಲ್ಲಿ, ಧ್ವನಿಯಲ್ಲಿ ಕಾಣುತ್ತೇವೆ. ಇಂತಹ ಅನೇಕ ತದ್ಭವ ಪದಗಳು ಕನ್ನಡದಲ್ಲಿ ಈಗಲೂ ಇವೆ. ಉದಾಹರಣೆಗೆ

| ಕನ್ನಡ | ಸಂಸ್ಕೃತ |
|---|---|
| ಕೂಂದಲ್/ಕೂದಲು | ಕುಂತಲ |
| ಅಡವಿ/ಅಡಕಲು | ಅಟವಿ |
| ಬಳ್ಳಿ | ವಲ್ಲಿ/ವಲ್ಲರಿ |
| ಕೋಳಿ | ಕುಕ್ಕುಟ |
| ಮುಗುಳು | ಮುಕುಳ |
| ನಾರಿಕೇಳ | ನಾರಿಕೇಲ |
| ಪೂಜೆ | ಪೂಜಾ |
| ಕಳ್ಳು | ಕಲ್ಯ |

ಹೀಗೆ ಒಂದು ಸ್ವತಂತ್ರ ಭಾಷೆಯಾಗಿ ಒಡಮೂಡಿದ ಕನ್ನಡ ತನ್ನ ಸೋದರ ಭಾಷೆಗಳ ಮೇಲೆ ಅವಲಂಬಿಸಿಕೊಳ್ಳದಿದ್ದರೂ ಅವುಗಳ ಜೊತೆಗಿನ ಸಂಬಂಧವನ್ನು ಉಳಿಸಿಕೊಂಡು, ಅನ್ಯಭಾಷೆಗಳೊಂದಿಗೆ ಸಂಬಂಧ ಬೆಳೆಸಿಕೊಂಡು ತಾನೂ ಬೆಳೆಯಿತು. ಈ ರೀತಿಯಾಗಿ ಅನೇಕ ಜಾತೀಯ, ವಿಜಾತೀಯ ಭಾಷೆಗಳೊಂದಿಗೆ ಸಂಪರ್ಕ ಏರ್ಪಡಿಸಿಕೊಂಡದ್ದೇ ಅದರ ಬದಲಾವಣೆಗೂ

ಬೆಳವಣಿಗೆಗೂ ಕಾರಣವಾಯಿತು. ಕನ್ನಡವೂ ಮೌಖಿಕ ಸಂಸ್ಕೃತಿಯಲ್ಲೇ ಹುಟ್ಟಿ ಬಂದರೂ ಲಿಪಿರೂಪದಲ್ಲಿ ದಾಖಲೆಯಾಗಿ ಉಳಿದಿರುವುದು ಗಮನಾರ್ಹವೂ ಭಾಷಾ ಬೆಳವಣಿಗೆಯ ಅಧ್ಯಯನಕ್ಕೆ ಉಪಯುಕ್ತವೂ ಆಗಿದೆ.

ಒಂದು ಪ್ರತ್ಯೇಕ ಭಾಷೆಯಾಗಿ ರೂಪುಗೊಂಡ ಮೇಲೆ ಕನ್ನಡ ಕಾಲಕ್ರಮೇಣ ಅನೇಕ ಅವಸ್ಥಾಂತರಗಳಿಗೆ ಒಳಗಾಗಿರುವುದು ಗ್ರಾಂಥಿಕ ದಾಖಲೆಗಳಿಂದ, ಶಾಸನಗಳಿಂದ ತಿಳಿದುಬರುತ್ತದೆ. ಈ ಬೆಳವಣಿಗೆಯ ಘಟ್ಟಗಳು, ಸ್ವರೂಪಗಳ ಬಗ್ಗೆ ಅನೇಕ ಅಧ್ಯಯನಗಳು ನಡೆದಿವೆ. ಅಭಿಪ್ರಾಯಗಳೂ ಮೂಡಿಬಂದು ನಾಲ್ಕು ಅವಸ್ಥೆಗಳು ಒಪ್ಪಿತವಾಗಿವೆ.

- ಪೂರ್ವದ ಹಳಗನ್ನಡ
- ಹಳಗನ್ನಡ
- ನಡುಗನ್ನಡ
- ಹೊಸಗನ್ನಡ

**ಪೂರ್ವದ ಹಳಗನ್ನಡ :** ಹಳಗನ್ನಡಕ್ಕೆ ಮೊದಲು ಭಾಷೆಗೆ ಬೇರೊಂದು ರೂಪವಿತ್ತೆಂದೂ ಅದು ಪೂರ್ವದ ಹಳಗನ್ನಡವೆಂದೂ ಇಂದು ಒಪ್ಪಲಾಗುತ್ತಿದೆ. ಅದರಲ್ಲಿ ಹಳಗನ್ನಡದಲ್ಲಿ ಕಾಣಸಿಗದ ಶಬ್ದರೂಪಗಳೂ, ಹಳಗನ್ನಡ ವ್ಯಾಕರಣಕ್ಕೆ ಹೊಂದಿಕೊಳ್ಳದ ಪ್ರಯೋಗಗಳೂ ಕಾಣಸಿಗುತ್ತವೆ. ಪೂರ್ವದ ಹಳಗನ್ನಡದ ಕಾಲವನ್ನು ಈವರೆಗೂ ನಿಖರವಾಗಿ ಹೇಳುವುದು ಕಷ್ಟವಾಗಿದೆಯಾದರೂ, ಅದರ ಕಾಲವನ್ನು ನಿಗದಿಪಡಿಸುವ ವಿಚಾರದಲ್ಲಿ ಬಹಳಷ್ಟು ಅಧ್ಯಯನ, ಚರ್ಚೆ, ವಿಚಾರ-ವಿನಿಮಯಗಳು ನಡೆದಿವೆ. ಬಿ.ಎಲ್. ರೈಸ್ ಅವರು ಕ್ರಿ.ಶ. ೮ನೇ ಶತಮಾನಕ್ಕಿಂತ ಮೊದಲಿನದು ಪೂರ್ವದ ಹಳಗನ್ನಡವೆಂದೂ, ೮ ರಿಂದ ೧೪ನೇ ಶತಮಾನದವರೆಗೆ ಹಳಗನ್ನಡದ ಯುಗವೆಂದೂ ಹೇಳಿದ್ದಾರೆ. ಅದನ್ನು ಒಪ್ಪದ ಕಿಟ್ಟೆಲ್, ಕ್ರಿ.ಶ. ೬ರಿಂದ ೧೩ನೇ ಶತಮಾನದವರೆಗೆ ಇದ್ದದ್ದು ಪ್ರಾಚೀನ ಕನ್ನಡವೆಂತಲೂ ಕ್ರಿ.ಶ. ೧೩ರಿಂದ ೧೭ನೇ ಶತಮಾನದವರೆಗೆ ಮಧ್ಯಕಾಲೀನ ಕನ್ನಡವೆಂದೂ ಕ್ರಿ.ಶ. ೧೭ನೇ ಶತಮಾನದಿಂದೀಚೆಗೆ ಹೊಸಗನ್ನಡದ ಕಾಲವೆಂದೂ ಪ್ರತಿಪಾದಿಸಿದ್ದಾರೆ ಎಂದು ಅನೇಕ ಗ್ರಂಥಗಳಲ್ಲಿ ಉಲ್ಲೇಖಿಸಲಾಗಿದೆ. ಕಡೆಗೆ ರಾ. ನರಸಿಂಹಾಚಾರ್ಯರ ಅಭಿಮತದಂತೆ ಪೂರ್ವದ ಹಳಗನ್ನಡ ಅಸ್ತಿತ್ವದಲ್ಲಿತ್ತೆನ್ನುವುದನ್ನು ಒಪ್ಪಲಾದರೂ, ಅದರ ನಿಖರ ಕಾಲಮಾನದ ಬಗ್ಗೆ ಈಗಲೂ ದೃಢೀಕರಿಸಲಾಗಿಲ್ಲ.

**ಹಳಗನ್ನಡ :** ಪೂರ್ವದ ಹಳಗನ್ನಡದಂತೆ ಹೆಚ್ಚು ಗೊಂದಲಗಳಿಗೆ ಸಿಲುಕದೆ ಹಳಗನ್ನಡದ ಕಾಲಮಾನ ಸುಮಾರು ೧೦ರಿಂದ ೧೩ನೇ ಶತಮಾನ ಎಂದು ಹೇಳಲಾಗಿದೆ. ಜೈನ ಕವಿಗಳ ಪ್ರಾಬಲ್ಯವಿದ್ದ ಆ ಕಾಲದಲ್ಲಿ ಸುಂದರ ಕನ್ನಡ ಸಾಹಿತ್ಯ ಕೃತಿಗಳು ರಚಿತವಾಗಿರುವುದು ಗಮನಾರ್ಹ. ಕನ್ನಡದ ಚಂಪೂ ಕಾವ್ಯಗಳ ಮೂಲಕ ಹಳಗನ್ನಡ ಈಗಲೂ ಉಳಿದುಕೊಂಡಿದೆ. ವ್ಯಾಕರಣ ಗ್ರಂಥಗಳೂ ಇವೆ. ಸಾಮಾನ್ಯವಾಗಿ ಹಳಗನ್ನಡ ಸಂಸ್ಕೃತ ಭಾಷೆಯ ಪ್ರಭಾವದಿಂದ ಕೂಡಿರುವುದು ಸ್ಪಷ್ಟವಾಗಿದೆ. ಕಂದ, ವರ್ಣವೃತ್ತಗಳು, ಅಲ್ಲಲ್ಲಿ ಗದ್ಯ, ಅಪರೂಪಕ್ಕೆ ಕನ್ನಡ ಛಂದಸ್ಸಿನ ಅಕ್ಕರ, ಚಂಪೂ ಶೈಲಿ, ಇಂದು ಬಳಕೆಯಲ್ಲಿಲ್ಲದ ಕೆಲ ವಿಭಕ್ತಿ ಪ್ರತ್ಯಯಗಳು, ರೂಢಮೂಲ ತದ್ಭವಗಳು, ೞ, ಱಗಳ ಪ್ರಯೋಗ ಕನ್ನಡದಲ್ಲಿದ್ದುದ್ದರ ಪ್ರಸ್ತಾಪ - ಹೀಗೆ ಕನ್ನಡ ಭಾಷಾ ಸ್ವರೂಪದ ಅನೇಕ ಅಧ್ಯಯನಯೋಗ್ಯ ವಿಚಾರಗಳನ್ನೂ ಹಳಗನ್ನಡ ಗ್ರಂಥಗಳು ತಿಳಿಸುತ್ತವೆ.

**ನಡುಗನ್ನಡ :** ಹಳಗನ್ನಡಕ್ಕಿಂತ ಇನ್ನೊಂದಿಷ್ಟು ಸರಳವೆನ್ನಬಹುದಾದ ಕನ್ನಡ ನಡುಗನ್ನಡ ಎನ್ನಬಹುದು. ರಾಜಾಶ್ರಯದಲ್ಲಿ ಬೆಳೆದ ಹಳಗನ್ನಡ ವಿದ್ವಾಂಸರ, ಪಂಡಿತರ ಭಾಷೆಯಂತಿದ್ದು ಕಾಲಕ್ರಮೇಣ ಅದು ಜನಸಾಮಾನ್ಯರ ಸಂವಹನ ಭಾಷೆಯಾಗಿ ಬದಲಾಗುತ್ತ ನಡುಗನ್ನಡದ ರೂಪವನ್ನು ಪಡೆಯಿತು. ಜನ ತಮ್ಮ ಆಡುಭಾಷೆಯಲ್ಲಿ ಹಾಡುಗಬ್ಬಗಳನ್ನು ರಚಿಸುತ್ತಿದ್ದರು.

ಜಾನಪದ ಶೈಲಿಯೂ ಒಡಮೂಡಿ ಗ್ರಂಥಸ್ಥವಾಗದೇ ಹೋದದ್ದೂ ಇದೆ. ಹಳಗನ್ನಡದಲ್ಲಿದ್ದ ಱ, ೞ, ಕುಳ, ಕ್ಷಳಗಳು ಈಗ ಗೊಂದಲಕ್ಕೀಡಾದವು. ವೀರಶೈವ ವಚನಕಾರರು ತಮ್ಮ ವಚನ, ಷಟ್ಪದಿ, ತ್ರಿಪದಿಗಳ ರಚನೆಗೆ ನಡುಗನ್ನಡವನ್ನೇ ಬಳಸಿರುವುದು ಗಮನಾರ್ಹ. ವಚನಕಾರರು ಸಮಾಜಪರ ಚಿಂತಕರೂ ಸಮಾಜದೊಂದಿಗೆ ಸಂವಹಿಸಿದವರೂ ಆಗಿದ್ದುದರಿಂದ ಅವರು ಬಳಸಿದ ಭಾಷೆಯೂ ಸರಳವಾಗಿ, ದೇಶೀಯವಾಗಿ ಇದ್ದು ಜನರಿಗೆ ತಲುಪುವಂತಾದದ್ದು ಗಮನಾರ್ಹ.

**ಹೊಸಗನ್ನಡ :** ಸುಮಾರು ಕ್ರಿ.ಶ. ೧೮ನೇ ಶತಮಾನದದಿಂದೀಚೆಗೆ ಬಳಕೆಯಾಗುತ್ತಿರುವುದೇ ಹೊಸಗನ್ನಡ. ಅದಕ್ಕೂ ಮುಂಚಿನ ಕನ್ನಡಗಳಲ್ಲಿದ್ದ ಧಾತುರೂಪಗಳೂ, ನಾಮಪದಗಳೂ ಕಣ್ಮರೆಯಾಗಿವೆ. ಪ್ರತ್ಯಯಗಳ ಬಳಕೆಯೂ ಕಡಿಮೆಯಾಗಿದೆ. ಪ್ರತ್ಯಯಗಳ ರೂಪಾಂತರವೂ ನಡೆದಿದೆ. ಮರಾಠಿ, ಹಿಂದೂಸ್ಥಾನಿ ಶಬ್ದಗಳು ಸೇರ್ಪಡೆಯಾಗಿವೆ. ಆಡುಭಾಷೆಯ ಪ್ರಭಾವವೇ ಗ್ರಂಥಗಳಲ್ಲೂ ಹೆಚ್ಚಾಗಿದೆ. ಇಷ್ಟು ಹೊತ್ತಿಗಾಗಲೇ ಪ್ರಾದೇಶಿಕ ಭಾಷಾಭಿನ್ನತೆ ತೋರಿಬಂದಿರುವುದೂ ಗಮನಾರ್ಹ. ನೆರೆಹೊರೆಯ ರಾಜ್ಯ ಭಾಷೆಗಳ ಪ್ರಭಾವವೂ ಕನ್ನಡದ ಮೇಲೆ ಬಿದ್ದಿದೆ. ಉಪಭಾಷೆಗಳೂ ಹುಟ್ಟಿವೆ. ಸ್ವಾತಂತ್ರ್ಯೋತ್ತರ ಕಾಲದಲ್ಲಿ ಕರ್ನಾಟಕ ಪುನರ್ರಚನೆಗೊಂಡು ಮತ್ತೆ ಕನ್ನಡಕ್ಕೆ ಪ್ರಾಶಸ್ತ್ಯ ದೊರಕಿ ಆಡಳಿತ ಭಾಷೆಯ ರೂಪ ಪಡೆದಿದೆ. ಹೀಗೆ ಪ್ರತಿಯೊಂದು ಕಾಲಘಟ್ಟದಲ್ಲೂ ಸಿಕ್ಕ ಅವಕಾಶಗಳಿಗೆ ತಕ್ಕಂತೆ ಕನ್ನಡ, ರೂಪ ಬದಲಾವಣೆ ಹೊಂದುತ್ತ ಹೊಂದುತ್ತಲೇ ಬೆಳೆದು ಬಂದ ಗುರುತು ಸ್ಪಷ್ಟವಾಗಿದೆ.

ಕಳೆದ ಶತಮಾನದಲ್ಲಿ ಕನ್ನಡ ವ್ಯಾಪಕವಾಗಿ ಬೆಳೆದಿರುವುದನ್ನು ಗಮನಿಸಿದರೆ, ೨೦ನೇ ಶತಮಾನದಿಂದೀಚಿನ ಕಾಲವನ್ನು **ಆಧುನಿಕ ಕನ್ನಡದ ಯುಗ** ಎಂದು ಪರಿಗಣಿಸಲೂಬಹುದಾಗಿದೆ.

ಕಾಲಭೇದದಿಂದಾಗಿ ಕನ್ನಡ ಭಾಷೆ ವಿವಿಧ ಘಟ್ಟಗಳನ್ನು ಕಂಡಿರುವಂತೆ, ಪ್ರಾದೇಶಿಕ ಭಿನ್ನತೆಗಳಿಂದಾಗಿಯೂ ವ್ಯತ್ಯಾಸ ಹೊಂದಿರುವುದು ಗಮನಾರ್ಹ. ಇವು ಪ್ರಾದೇಶಿಕ ಭಾಷೆ ಮತ್ತು ಉಪಭಾಷೆಗಳು ಎಂದೆನಿಸಿಕೊಳ್ಳುತ್ತವೆ. ಅದನ್ನೇ ಆರ್.ಸಿ. ಹಿರೇಮಠ್ ಅವರು

> *ಕಾಲಾನುಕ್ರಮದಲ್ಲಿ ಉಂಟಾದ ಭಿನ್ನತೆ ಒಂದು ಭಾಷೆಯನ್ನು ಅದರ ಹಿಂದಿನ ಘಟ್ಟದಿಂದ ಅವಲೋಕಿಸುತ್ತಾ ಬಂದಾಗ, ಅಲ್ಲಿಯ ರೂಪಗಳು ಕಾಲಕಾಲಕ್ಕೆ ಬದಲಾಗಿದ್ದುದು ಕಂಡುಬರುತ್ತದೆ. ನಿರಂತರವೂ ನಡೆಯುತ್ತಿರುವ ಈ ಭಿನ್ನತೆ ಕಾಲಾನುಗತ ಭಿನ್ನತೆ. ಭಿನ್ನ ಭಿನ್ನ ಪ್ರದೇಶಕ್ಕನುಸರಿಸಿ ಭಿನ್ನವಾಗುವುದು ಪ್ರದೇಶಾನುಗತ ಭಿನ್ನತೆ. ಒಂದು ಪ್ರದೇಶದಲ್ಲಿ ಒಂದು ರೂಪ ಕಂಡರೆ ಇನ್ನೊಂದು ಪ್ರದೇಶದಲ್ಲಿ ಇನ್ನೊಂದು ರೂಪ ಕಂಡುಬರುತ್ತದೆ. ಇಂಥ ರೂಪಗಳೇ ಆಯಾ ಪ್ರಾದೇಶಿಕ ವೈಶಿಷ್ಟ್ಯಗಳು.* [೧೧]

೧, ೯೨, ೨೦೪ ಚದರ ಕಿಲೋಮೀಟರ್ ವಿಸ್ತೀರ್ಣದ ಕರ್ನಾಟಕದಲ್ಲಿ ಪ್ರಾದೇಶಿಕ ಅಂತರ ಹಾಗೂ ಸಾಮಾಜಿಕ ಅಥವಾ ಸಾಂಸ್ಕೃತಿಕ ಅಂತರದ ಕಾರಣ ಪ್ರದೇಶಾನುಗತ ಭಾಷಾಭಿನ್ನತೆ ಕಾಣಬರುತ್ತದೆ. ಈವರೆಗೂ ಒಟ್ಟು ೪ ಬಗೆಯ ಭಾಷಿಕ ಪ್ರಭೇದಗಳನ್ನು ಪಟ್ಟಿ ಮಾಡಲಾಗಿದೆ.

- ಮೈಸೂರು ಕನ್ನಡ
- ಧಾರವಾಡ ಕನ್ನಡ

✤ ಮಂಗಳೂರು ಅಥವಾ ಕರಾವಳಿ ಕನ್ನಡ

✤ ಗುಲ್ಬರ್ಗಾ ಕನ್ನಡ

ಭಾಷಾ ಭಿನ್ನತೆಯ ದೃಷ್ಟಿಯಿಂದ ಇವು ಮುಖ್ಯವೆನಿಸಿದರೂ ಇವಷ್ಟೇ ಕನ್ನಡದ ಪ್ರದೇಶಾನುಗತ ಭಾಷೆ ಎಂದು ಹೇಳಲಾಗುವುದಿಲ್ಲ. ಉದಾಹರಣೆಗೆ ಬಿಜಾಪುರದ ಕನ್ನಡವೂ ಬೇರೆ ತೆರನಾಗಿಯೇ ಇದೆ. ಹಾಗೆ ನೋಡಿದರೆ ಜಿಲ್ಲೆಯಿಂದ ಜಿಲ್ಲೆಗೆ, ಒಂದು ಜಿಲ್ಲೆಯೊಳಗೆ ತಾಲ್ಲೂಕಿನಿಂದ ತಾಲ್ಲೂಕಿಗೆ ಕನ್ನಡ ಭಾಷೆಯಲ್ಲಿ ವ್ಯತ್ಯಾಸವಿರುವುದನ್ನು ಮನಗಾಣಬಹುದು.

ಭಾಷಾ ಭಿನ್ನತೆಗೆ ಬಾಹ್ಯ ಕಾರಣಗಳೂ ಆಂತರಿಕ ಕಾರಣಗಳೂ ಇರುತ್ತವೆ. ಪ್ರಾದೇಶಿಕ ವಿಸ್ತಾರ ಹೆಚ್ಚಿದಷ್ಟೂ ಜನರ ನಡುವಿನ ಸಂವಹನ ಸಂಪರ್ಕ ಕಡಿಮೆ ಇರುತ್ತದೆ. ಚಿಕ್ಕ ಚಿಕ್ಕ ಗುಂಪು, ಸಮುದಾಯಗಳಲ್ಲೇ ವಹಿವಾಟು ನಡೆದು ಹೋಗುತ್ತದೆ. ಇದರಿಂದ ಭಾಷೆಗೆ ಸಂಬಂಧಿಸಿದಂತೆ ಏಕರೂಪತೆ ಸಾಧ್ಯವಾಗುವುದಿಲ್ಲ. ನದಿ, ಪರ್ವತ, ಕಾಡು, ಸಮುದ್ರ, ಬೆಟ್ಟ, ಕಣಿವೆಯಂತಹ ನೈಸರ್ಗಿಕ ಅಡೆತಡೆಗಳೂ ಸಂಪರ್ಕವನ್ನು ಕಡಿತಗೊಳಿಸುತ್ತವೆ. ನೆರೆಹೊರೆಯ ರಾಜ್ಯಗಳ ನಡುವೆ ಭೌಗೋಳಿಕ ಹಂಚಿಕೆ ನಡೆದಾಗಲೂ ಭಾಷಾ ಸಂಪರ್ಕ ಕತ್ತರಿಸಬಹುದು. ಇನ್ನು ಗಡಿಪ್ರದೇಶಗಳಲ್ಲಿ ಗಡಿಯಾಚೆಯ ಭಾಷೆಯ ಪ್ರಭಾವದ ತೀವ್ರತೆಯೂ ಭಾಷಾ ಭಿನ್ನತೆಗೆ ಕಾರಣವಾಗುತ್ತದೆ. ಇವೆಲ್ಲಾ ಬಾಹ್ಯ ಕಾರಣಗಳು. ಇವುಗಳೇ ಉಪಭಾಷೆಗಳಿಗೆ ಕಾರಣವಾಗುತ್ತವೆ.

ಆಂತರಿಕ ಕಾರಣಗಳು ತೀರಾ ವ್ಯಕ್ತಿಗತ ಕಾರಣಗಳು. ಒಂದು ಸಮುದಾಯದಲ್ಲಿರುವ ಎಲ್ಲರೂ ಒಂದೇ ಬಗೆಯ ಉಚ್ಚಾರಣೆ ಮಾಡುವುದು ಸಾಧ್ಯವಾಗುವುದಿಲ್ಲ. ಪ್ರತಿಯೊಬ್ಬರಿಗೂ ಅವರದೇ ಆದ ಉಚ್ಚಾರಣಾ ವೈಶಿಷ್ಟ್ಯ, ಶೈಲಿ ಇರುತ್ತದೆ. ಮಾತು ಕಲಿಕೆಯಿಂದ ಬರುವ ಕಲೆಯಾದ್ದರಿಂದ ಕಲಿಯುವಾಗಲೇ ಅನುಸರಿಸಿದ, ಅನುಕರಿಸಿದ ವಿಧಾನದಲ್ಲಿ ವ್ಯತ್ಯಾಸಗಳಿರುತ್ತವೆ. ಕಾಕು, ಏರಿಳಿತ, ರಚನಾ ವ್ಯತ್ಯಾಸ, ತುಟಿ, ನಾಲಗೆಯ ಚಲನೆಯನ್ನಾಧರಿಸಿಯೂ ಭಾಷೆ ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಬಹುದು. ಇದನ್ನು 'ವ್ಯಕ್ತಿ ಭಾಷೆ' ಎಂದೇ ಕರೆಯಲಾಗಿದೆ.

ಪ್ರಾದೇಶಿಕವಾಗಿ ಭಾಷಾ ಭಿನ್ನತೆ ಇರುವಂತೆಯೇ ಸಾಮಾಜಿಕ ಜೀವನ ವಿಧಾನವೂ ಭಾಷಿಕ ಪ್ರಭೇದ ಹಾಗೂ ಉಪಭಾಷೆಗಳಿಗೆ ಕಾರಣವಾಗುತ್ತದೆ. ಸಾಧಾರಣವಾಗಿ ಚಿಕ್ಕ ಗುಂಪಿನಲ್ಲಿ ಗುಡ್ಡಗಾಡುಗಳಲ್ಲಿ ವಾಸಿಸುವ, ಹೊರ ಸಮಾಜಗಳ ಜೊತೆ ಹೆಚ್ಚು ಸಂಪರ್ಕ ಹೊಂದದ, ಇತರ ಭಾಷೆಗಳ ಅರಿವಿಲ್ಲದ ಜನ, ತಮ್ಮದೇ ವಿಶಿಷ್ಟ ರೀತಿ ರಿವಾಜುಗಳಿಗೆ ಅನುಸಾರ ಜೀವನ ಸಾಗಿಸುವುದರಿಂದ ಭಾಷೆಯನ್ನು ಅವರು ತಮ್ಮ ಸಮಾಜದೊಳಗಿನ ಸಂಪರ್ಕಕ್ಕೆ ಮಾತ್ರ ಬಳಸುವುದು ಕಂಡು ಬರುತ್ತದೆ. ಇವುಗಳಲ್ಲಿ ಹಾಲಕ್ಕಿ ಕನ್ನಡ, ಹವ್ಯಕ ಕನ್ನಡ, ಗೌಡ ಕನ್ನಡ ಮುಂತಾದವನ್ನು ಹೆಸರಿಸಬಹುದು. ಮೊದಲೇ ತಿಳಿಸಿರುವಂತೆ ಈ ಭಿನ್ನತೆ ಇಷ್ಟಕ್ಕೇ ಸೀಮಿತವಾಗಿರದೆ, ಅತ್ಯಂತ ಕಡಿಮೆ ಪ್ರಾದೇಶಿಕ ಹಾಗೂ ಸಾಮಾಜಿಕ ಅಂತರವಿದ್ದೂ ಭಾಷಾಭಿನ್ನತೆಯನ್ನು ಗುರುತಿಸಬಹುದು. ಇದಕ್ಕೆ ಉದಾಹರಣೆಯೆಂದರೆ ಮೈಸೂರಿನಿಂದ ಸರಿಸುಮಾರು ಒಂದೇ ಅಂತರದಲ್ಲಿ ಎರಡು ದಿಕ್ಕುಗಳಲ್ಲಿರುವ ನಂಜನಗೂಡು ಹಾಗೂ ಶ್ರೀರಂಗಪಟ್ಟಣಗಳ ಭಾಷೆಯಲ್ಲಿ ಅಪಾರ ವ್ಯತ್ಯಾಸವಿರುವುದನ್ನು ಗಮನಿಸಬಹುದು. ಇಷ್ಟಲ್ಲದೆ ಸಣ್ಣಪುಟ್ಟ ಭಾಷಾಭಿನ್ನತೆಗಳು ಗೋಚರಿಸುವುದರಿಂದ ಬಾರ್ಕೂರು ಕನ್ನಡ, ಕೊರಗ ಕನ್ನಡ, ಸೋಲಿಗ ಕನ್ನಡ, ಗೋಲಾರಿ (ಹೊಲಿಯ ಕನ್ನಡ), ಕುರುಂಬ, ಬಡಗ ಮುಂತಾಗಿ ಇನ್ನೂ ಅನೇಕ ಉಪಭಾಷೆಗಳಿವೆ ಎನ್ನಲಾಗಿದೆ. ಈ ಎಲ್ಲ ಉಪಭಾಷೆಗಳ ನಡುವೆ ಭಿನ್ನತೆಗಳಿರುವಂತೆ ಮೂಲಭೂತವಾದ ಸಾಮ್ಯತೆಗಳೂ ಇರುವುದರಿಂದಲೇ ಇವೆಲ್ಲಾ ಕನ್ನಡ ಭಾಷಾ ಚೌಕಟ್ಟಿನೊಳಗೇ ಉಳಿದುಕೊಂಡಿವೆ. ಮುಖ್ಯವಾಗಿ ಇವೆಲ್ಲ ಉಪಭಾಷೆಗಳ ಲಿಪಿ (ಚಾಕ್ಷುಕ) ಕನ್ನಡವೇ ಆಗಿದ್ದು, ವ್ಯತ್ಯಾಸವಿರುವುದು ಧ್ವನಿ (ಶ್ರವಣ) ಯಲ್ಲಿ ಮಾತ್ರ.

ಮೂಲದ್ರಾವಿಡ ಭಾಷೆಯಿಂದ ಹೊರಹೊಮ್ಮಿ ಸ್ವತಂತ್ರ ಭಾಷೆಯಾದ ಕನ್ನಡ ಲಿಪಿ ರೂಪದಲ್ಲೂ ಧ್ವನಿ ರೂಪದಲ್ಲೂ ಶ್ರೀಮಂತವಾಗಿ ಬೆಳೆದಿದೆ. ತಾನೇ ಒಂದು ಹೆಮ್ಮರದಂತೆ ಭಾಷಾ ಪ್ರಭೇದ, ಭಿನ್ನತೆಗಳ ಹತ್ತಾರು ಟಿಸಿಲೊಡೆದಿದೆ. ಇವೆಲ್ಲವೂ ನಿರಂತರ ಬೆಳವಣಿಗೆಯ ಸಂಕೇತವೇ. ಈಗೀಗ ಅನ್ಯಭಾಷೆಗಳ ತೀವ್ರತರ ಪ್ರಭಾವದಿಂದ ಕನ್ನಡದ ಮೇಲಾಗಬಹುದಾದ ಪರಿಣಾಮಗಳನ್ನು ಕುರಿತು ಗಂಭೀರ ಚಿಂತನೆಗಳು, ಚರ್ಚೆಗಳು ನಡೆಯುತ್ತಿದ್ದು ಕನ್ನಡವನ್ನು ಒಂದಿಷ್ಟು ಕ್ರಮಬದ್ಧವಾಗಿ, ಸುರಕ್ಷಿತವಾಗಿ ಬೆಳಸಬೇಕೆಂಬ ಧ್ವನಿ ಎದ್ದಿದೆ. ಇದಕ್ಕೆ ನಗರೀಕರಣ, ಆಧುನೀಕರಣ, ಉದಾರೀಕರಣ, ಜಾಗತೀಕರಣದಂತಹ ಸಾಮಾಜಿಕಾರ್ಥಿಕ ಬದಲಾವಣೆಯ ಮಾರ್ಗಗಳು ನಿಚ್ಚಳವಾಗಿ ತೆರೆದುಕೊಂಡಿರುವುದೂ ಕಾರಣವೆನ್ನಬಹುದು. ಸಂಸ್ಕೃತಿ ಮಿಶ್ರಣದಿಂದಾಗಿ ಕನ್ನಡ ಕಲುಷಿತಗೊಂಡು ತನ್ನ ಮೂಲಸ್ವರೂಪವನ್ನೇ ಕಳೆದುಕೊಳ್ಳಬಹುದೇ ಎಂಬ ಆತಂಕವೂ ಕಾರಣವಿರಬಹುದು. ಇಂತಹ ಆತಂಕ, ಅನಿಸಿಕೆಗಳು ಕನ್ನಡಿಗರು ಜಾಗೃತರಾಗಿದ್ದಾರೆ, ಚಿಂತನಶೀಲರಾಗಿದ್ದಾರೆ ಎನ್ನುವುದಕ್ಕೆ ಸಾಕ್ಷೀಭೂತವಾಗಿದ್ದು, ಕನ್ನಡಕ್ಕೆ ಯಾವುದೇ ಅಪಾಯ ಒದಗದು ಎಂಬ ಭರವಸೆ ನೀಡುತ್ತಿವೆ. ಕನ್ನಡಕ್ಕೆ ಅಳಿವಿಲ್ಲದಿದ್ದರೂ ಅದರ ಬೆಳವಿನ ಬಗ್ಗೆ ಚಿಂತನೆ ನಡೆಸಬೇಕಾದ ಕಾಲ ಇದಾಗಿದೆ.

## ೩. ಕನ್ನಡದ ಅಭಿವೃದ್ಧಿ : ಆತಂಕ ಮತ್ತು ಪರಿಹಾರ

ಕನ್ನಡ ಎರಡು ಸಹಸ್ರವರ್ಷಗಳಲ್ಲಿ ಹಂತಹಂತವಾಗಿ ಬೆಳೆದುಬಂದ ಬಗೆಯನ್ನು ಸ್ಥೂಲವಾಗಿ ಗಮನಿಸಿದ್ದೇವೆ. ಭಾಷೆ ತನ್ನಷ್ಟಕ್ಕೆ ತಾನು ಬೆಳೆಯುತ್ತದೆ ಎಂಬ ಮಾತು ನಿಜವೇ ಆದರೂ ಬದಲಾಗುತ್ತಿರುವ ಸಾಮಾಜಿಕ ಸಂದರ್ಭದಲ್ಲಿ ಎದುರಾಗುತ್ತಿರುವ ಹಲಬಗೆಯ ಸವಾಲುಗಳನ್ನು ನುಂಗಿಕೊಂಡು ಬೆಳೆಯುವುದು ಕಷ್ಟವೂ ಆಗುತ್ತದೆ. ಹಾಗಾಗಿ ಕನ್ನಡವನ್ನು ಸರ್ವಾಂಗೀಣವಾಗಿ ಬೆಳೆಸುವ, ಉಳಿಸುವ ಪ್ರಯತ್ನ ಆಗಬೇಕಾಗುತ್ತದೆ. ಅಂತಹ ಅನೇಕ ಪ್ರಯೋಗ ಪ್ರಯತ್ನಗಳೂ ನಡೆಯುತ್ತಿವೆ. ಇದನ್ನೇ ಎಲ್.ಎಸ್. ಶೇಷಗಿರಿರಾವ್ ಹೀಗೆ ಹೇಳಿದ್ದಾರೆ.

> *ಕನ್ನಡ ನಾಡಿನಲ್ಲಿ ಕನ್ನಡಕ್ಕೆ ನ್ಯಾಯವಾದ ಸ್ಥಾನ ದೊರಕಬೇಕು. ಬದಲಾಗುತ್ತಿರುವ ಅಗತ್ಯವನ್ನು ಪೂರೈಸುವ ಶಕ್ತಿಯನ್ನು ಬೆಳೆಸಿಕೊಂಡು ಕನ್ನಡ ಬೆಳೆಯಬೇಕು ಎಂಬ ಕಳಕಳಿ ನಾಡಿನ ಎಲ್ಲ ಚಿಂತನಶೀಲರಲ್ಲಿ ಕಾಣುತ್ತಿದೆ. ಈ ಸಂದರ್ಭದಲ್ಲಿ ಕನ್ನಡ ಭಾಷೆ ಇತ್ತೀಚಿಗಿನ ವರ್ಷಗಳಲ್ಲಿ ಬೆಳೆದು ಬಂದ ರೀತಿ, ನಾಡಿನಲ್ಲಿ ಅದಕ್ಕೆ ದೊರೆತಿರುವ ಸ್ಥಾನಮಾನಗಳು, ಅದಕ್ಕೆ ದೊರೆಯಬೇಕಾದ ಸ್ಥಾನಮಾನಗಳು, ಕನ್ನಡ ಭಾಷೆಯ ಸರ್ವತೋಮುಖ ಅಭಿವೃದ್ಧಿಗಾಗಿ ಆಗಬೇಕಾದ ಕೆಲಸ ಇವೆಲ್ಲವನ್ನೂ ಗಂಭೀರವಾಗಿ ಕೂಲಂಕಷವಾಗಿ ಅಧ್ಯಯನ ಮಾಡಿ ಖಚಿತವೂ ಮೂರ್ತವೂ ಆದ ಸಲಹೆ ರೂಪಿಸಬೇಕಾದ ಪರ್ವಕಾಲ ಇದು ಎಂದು ನಮಗೆ ತೋರುತ್ತಿದೆ.*[೧೨]

ಇಂತಹುದೇ ಅಭಿಪ್ರಾಯವನ್ನು ಕೆ.ವಿ. ನಾರಾಯಣ ಅವರೂ ವ್ಯಕ್ತಪಡಿಸಿದ್ದಾರೆ.

> *ನಾವು ಭಾಷೆಯನ್ನು ಸ್ವಯಂ ಪರಿಪೂರ್ಣ ಘಟನೆ ಎನ್ನುವಂತೆ ಈವರೆಗೆ ವ್ಯವಹರಿಸಿದ್ದೇವೆ. ಇದರಿಂದ ಹಲವಾರು ಏರುಪೇರುಗಳಾಗಿವೆ. ಸಾಮಾಜಿಕ ಸಂಗತಿಗಳಲ್ಲಿನ ವ್ಯತ್ಯಾಸವು ಭಾಷಾಭಿವೃದ್ಧಿಯ ಗುರಿಸಾಧನೆಯಾಗದಂತೆ ಮಾಡಿವೆ.*[೧೩]

ಕನ್ನಡ ಭಾಷೆ ಉಳಿಯುವುದೇ? ಬೆಳೆಯುವುದೇ? ಎಂಬ ಬಗ್ಗೆ ಕಳವಳ ವ್ಯಕ್ತವಾಗುತ್ತಲೇ ಇದೆ. ಇಂತಹ ಕಳವಳ ಸಮಾಜದಲ್ಲಿ ಮೂಡುವುದಕ್ಕೂ ನಿರ್ದಿಷ್ಟ ಕಾರಣಗಳಿರಲೇಬೇಕು. ಅವನ್ನು ಹೀಗೆ ಗುರುತಿಸಬಹುದು.

- ಪೀಳಿಗೆಯಿಂದ ಪೀಳಿಗೆಗೆ ಹರಿದುಬರುವಾಗ ಭಾಷೆ ಎಲ್ಲ ವಲಯಗಳಲ್ಲೂ ಬಳಕೆಯಾಗದೆ ನಾಶವಾಗಬಹುದು.
- ಬೇರೊಂದು ಪ್ರಬಲವಾದ ಭಾಷೆಯ ಪ್ರಭಾವಕ್ಕೆ ಸಿಕ್ಕಿ ಮೂಲಭಾಷೆ ತೀವ್ರತರ ಬದಲಾವಣೆಗಳಿಗೆ ಗುರಿಯಾಗಬಹುದು.
- ವಲಸೆ ಪ್ರವೃತ್ತಿಯೂ ಭಾಷಾನಾಶಕ್ಕೆ ಮುಖ್ಯ ಕಾರಣವೆನ್ನಬಹುದು. ಇದರಲ್ಲೂ ಎರಡು ಬಗೆ. ಒಂದು ಕನ್ನಡಿಗರೇ ಕನ್ನಡವನ್ನಾಡದ ಇತರ ಪ್ರದೇಶಗಳಿಗೆ ವಲಸೆ ಹೋಗುವುದು. ಎರಡು ಕನ್ನಡೇತರ ಭಾಷಿಕರು ಕರ್ನಾಟಕಕ್ಕೆ ಬಂದು ನೆಲೆಸುವುದು ಮತ್ತು ಕನ್ನಡ ಬಳಸದಿರುವುದು.
- ಆಧುನಿಕತೆಯ ಹೆಸರಿನಲ್ಲಿ ಇಂಗ್ಲೀಷಿಗೆ ದೊರೆತಿರುವ ಪ್ರಾಶಸ್ತ್ಯ.
- ಕಾರ್ಯಾಂಗ, ಶಾಸಕಾಂಗ, ನ್ಯಾಯಾಂಗ, ಶಿಕ್ಷಣ ರಂಗಗಳಲ್ಲಿ ಕನ್ನಡ ಬಳಕೆಗೆ ಪ್ರೋತ್ಸಾಹದ ಕೊರತೆ.
- ದ್ವಿಭಾಷಿಕತೆ, ತ್ರಿಭಾಷಿಕತೆ ಮತ್ತು ಬಹುಭಾಷಿಕತೆಯಿಂದಾಗಿ ಕನ್ನಡದ ಬಳಕೆಯ ಕುಸಿತ.
- ಕನ್ನಡವನ್ನು ಬಳಸುವಲ್ಲಿ ಜನಸಾಮಾನ್ಯರ ಅಭಿಮಾನ ಶೂನ್ಯತೆ.
- ಕೇಂದ್ರದ ತ್ರಿಭಾಷಾ ಸೂತ್ರದಡಿಯಲ್ಲಿ ಕಾರ್ಯ ನಿರ್ವಹಿಸುವ ವಿದ್ಯುನ್ಮಾನ ಮಾಧ್ಯಮಗಳ ಇತಿಮಿತಿ.

**ಈ ಎಲ್ಲ ಅಂಶಗಳ ಹಿನ್ನೆಲೆಯಲ್ಲಿ ಕನ್ನಡ ಭಾಷೆಯ ಸ್ಥಿತಿಗತಿ, ಸ್ಥಾನಮಾನಗಳ ಬಗ್ಗೆ ಮರುಚಿಂತನೆ ನಡೆಯಬೇಕಾದ** ಅಗತ್ಯ ಎದ್ದು ಕಾಣುತ್ತಿದೆ.

> *ನಮ್ಮ ಸಾಮಾಜಿಕ ವ್ಯವಹಾರಗಳಲ್ಲಿ ಕನ್ನಡಕ್ಕೆ ದೊರಕಬೇಕಾದ ಸ್ಥಾನಮಾನಗಳು ಲಭಿಸಿಲ್ಲದಿರುವುದೇ ಈ ಆತಂಕಕ್ಕೆ ಮುಖ್ಯ ಕಾರಣವಾಗಿದೆ. ಈ ಪರಿಸ್ಥಿತಿಗೆ ಕನ್ನಡಿಗರ ಅಭಿಮಾನ ಶೂನ್ಯತೆ, ಆಡಳಿತ ಸೂತ್ರ ಹಿಡಿದ ಪಕ್ಷಗಳ ಅನಿಶ್ಚಿತ ಧೋರಣೆ, ನೌಕರಶಾಹಿಯ ವಿರೋಧಿ ನಿಲುವು, ಕೇಂದ್ರ ಸರ್ಕಾರದ ದ್ವಿಮುಖ ಭಾಷಾನೀತಿ ಇವೆಲ್ಲವೂ ಒಂದಿಲ್ಲೊಂದು ಬಗೆಯಲ್ಲಿ ಪ್ರೇರಕಗಳಾಗಿವೆಯೆಂದು ಹಲವರ ನಿಲುವು; ಮತ್ತೆ ಕೆಲವರು ಕನ್ನಡ ಭಾಷೆಗೆ ಆಧುನಿಕ ಜಗತ್ತಿನ ಅವಶ್ಯಕತೆಗಳನ್ನು ಪೂರೈಸುವ ಸಾಮರ್ಥ್ಯಗಳಿಲ್ಲವೆಂದು ತಿಳಿಯುತ್ತಾರೆ. ಹೀಗಾಗಿ ಈಗ ಇಡೀ ಸನ್ನಿವೇಶವನ್ನು ಮರುಚಿಂತನೆಗೆ ಗುರಿಪಡಿಸುವ ಅವಶ್ಯಕತೆಯಿದೆ*[೧೪]

ಎಂಬ ಅಭಿಪ್ರಾಯ ಚಿಂತಕರ ವಲಯದಲ್ಲಿ ವ್ಯಕ್ತವಾಗುತ್ತಿದೆ. ಸಾಕಷ್ಟು ಬೆಳವಣಿಗೆಯ ಜೊತೆಗೆ ಸಾವಿರಾರು ವರ್ಷಗಳನ್ನು ದಾಟಿ ಬಂದಿರುವ ಕನ್ನಡ ಭಾಷೆಯ ಅಭಿವೃದ್ಧಿಯ ಮಾರ್ಗದಲ್ಲಿ ಕಾಣಬರುತ್ತಿರುವ ಆತಂಕಗಳನ್ನು ಹೀಗೆ ಗುರುತಿಸಬಹುದು.

**ಭಾಷಾ ಸಂದರ್ಭ :** ಒಂದು ಪ್ರದೇಶದಲ್ಲಿ ವ್ಯಾಪಕ ಬಳಕೆಯಲ್ಲಿರುವುದು ಒಂದೇ ನಿರ್ದಿಷ್ಟ ಭಾಷೆಯಾಗಿದ್ದರೆ ಅದು ಏಕಭಾಷಾ ಸಂದರ್ಭವೆನಿಸುತ್ತದೆ. ಈ ಮೂಲಭಾಷೆಯ ಅಸ್ತಿತ್ವದ ಮೇಲೆ ಮತ್ತೊಂದು ಅನ್ಯಭಾಷೆಯ ಕರಿಛಾಯೆ ಹಾಸಿಕೊಂಡಾಗ ಏರ್ಪಡುವ 'ದ್ವಿಭಾಷಾ ಸಂದರ್ಭ'; ಮೂಲ ಭಾಷೆಯ ಮೇಲೆ ಮತ್ತೆರಡು ಅನ್ಯ ಭಾಷೆಗಳು ಪ್ರಭಾವ

ಬೀರುವ 'ತ್ರಿಭಾಷಾ ಸಂದರ್ಭ' ಅಥವಾ 'ಬಹುಭಾಷಾ ಸಂದರ್ಭ'ಗಳು ಮೂಲಭಾಷೆಯ ಬೆಳವಣಿಗೆಯನ್ನು ಕುಂಠಿತಗೊಳಿಸುವುದು ಸಹಜ. ಉದಾಹರಣೆಗೆ ಕನ್ನಡ ಭಾಷೆ ಒಂದು ಸ್ವತಂತ್ರ ಭಾಷೆಯಾಗಿ ರೂಪುಗೊಂಡ ಪ್ರಾರಂಭದಲ್ಲೇ ಸಂಸ್ಕೃತದಂತಹ ವಿಭಿನ್ನ ಸಂಸ್ಕೃತಿಯ ಭಾಷೆಯೊಂದು ಜನಸಮೂಹದ ನಡುವೆ ನುಸುಳಿ ದ್ವಿಭಾಷಾ ಸನ್ನಿವೇಶವನ್ನು ಸೃಷ್ಟಿಸಿತು. ಅದೇ ರೀತಿ ಈಚೀಚಿನ ವರ್ಷಗಳಲ್ಲಿ ಕನ್ನಡದ ಮಧ್ಯೆ ಇಂಗ್ಲಿಷ್ ಆಧಿಕ್ಯದಿಂದ ಮತ್ತೆ ದ್ವಿಭಾಷಾ ಸಂದರ್ಭ, ಹಾಗೆಯೇ ಹಿಂದಿ ಭಾಷೆಯ ಬಳಕೆಯಿಂದ ತ್ರಿಭಾಷಾ ಸಂದರ್ಭವೂ, ಅದೇ ಸಂದರ್ಭದಲ್ಲಿ ಕರ್ನಾಟಕದ ಗಡಿ ಪ್ರದೇಶಗಳಲ್ಲಿ ನೆರೆಹೊರೆಯ ರಾಜ್ಯ ಭಾಷೆಗಳ ಸಂಕರದಿಂದಾಗಿ ಬಹುಭಾಷಾ ಸಂದರ್ಭವೂ ಏರ್ಪಟ್ಟಿದೆ. ಅನೇಕ ಭಾಷೆಗಳ ತುಣುಕುಗಳನ್ನು ತನ್ನ ಒಡಲಿಗೆ ಸೇರಿಸಿಕೊಳ್ಳುವ ಸಂದರ್ಭದಲ್ಲಿ ಕನ್ನಡ ಬೆಳವಣಿಗೆಯ ಹಾದಿ ಹಿಡಿಯುತ್ತದೆಯಾದರೂ ಎಲ್ಲ ಭಾಷೆಗಳೂ ಕನ್ನಡಕ್ಕೆ ಸಮಾನಾಂತರವಾಗಿಯೇ ಚಾಲ್ತಿಯಲ್ಲಿದ್ದರೆ ಅದರಿಂದ ಕನ್ನಡದ ಬೆಳವಣಿಗೆಯ ಗತಿ ಕುಗ್ಗುವುದು ನಿಶ್ಚಿತ.

**ಕನ್ನಡದ ಸ್ಥಾನ :** ಪ್ರಾಚೀನ ಭಾಷೆಯಾಗಿ ಸಂಸ್ಕೃತ, ಸಂಪರ್ಕ ಭಾಷೆಯಾಗಿ ಇಂಗ್ಲೀಷ್, ರಾಷ್ಟ್ರಭಾಷೆಯಾಗಿ ಹಿಂದಿ, ಗಡಿವಲಯದ ಭಾಷೆಗಳಾದ ಮರಾಠಿ, ತಮಿಳು, ತೆಲುಗು, ಮಲೆಯಾಳಂ, ಕರ್ನಾಟಕದ ವೈಶಿಷ್ಟ್ಯಗಳೇ ಆದ ಕೊಂಕಣಿ, ತುಳು, ಕೊಡವ ಮತ್ತೊಂದೆಡೆ ಉರ್ದು ಮೊದಲಾದ ಅನೇಕ ಹಿರಿ ಕಿರಿಯ ಭಾಷೆಗಳ ನಡುವೆ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳುವುದಕ್ಕಾಗಿ, ಬೆಳೆಸಿಕೊಳ್ಳುವುದಕ್ಕಾಗಿ ಕನ್ನಡ ಹೋರಾಡಬೇಕಾದ ಸಂದರ್ಭ ಇದಾಗಿದೆ.

ಕನ್ನಡ ಮಾತನಾಡುವವರು ನೆಲೆಸಿರುವ ಪ್ರದೇಶದಲ್ಲಿ ಅನ್ಯಭಾಷಿಕರೂ ಇಂದು ವಾಸಿಸುತ್ತಿದ್ದಾರೆ. ಶೇ. ೫೮ರಷ್ಟು ಕನ್ನಡಿಗರಿರುವ ಕರ್ನಾಟಕದಲ್ಲಿ ತೆಲುಗು ಭಾಷಿಕರು ೬.೬೮%, ಮರಾಠಿ ೩.೧೦%, ತಮಿಳು ೩.೦೯%, ಮಲೆಯಾಳಂ ೧.೩೨, ಉರ್ದು ೭.೮೪% ಭಾಷಿಕರು ಇದ್ದಾರೆ (೧೯೯೧ರ ಜನಗಣತಿಯಂತೆ). ಈ ಅಂಕಿ ಅಂಶಗಳನ್ನು ಇತರ ಭಾರತೀಯ ಭಾಷೆಗಳಿಗೆ ಹೋಲಿಸಿದಾಗ ಕರ್ನಾಟಕದಲ್ಲೇ ಕನ್ನಡ ಮಾತನಾಡುವವರ ಸಂಖ್ಯೆ ಕಡಿಮೆ. ಇದರ ಜೊತೆಗೆ ದೇಶಾದ್ಯಂತ ಸಂಪರ್ಕ ಭಾಷೆ ಎನ್ನುವ ನೆವದಲ್ಲಿ ಇಂಗ್ಲಿಷ್ ಕರ್ನಾಟಕದ ಆಡಳಿತ ಕ್ಷೇತ್ರದಲ್ಲೂ ಹಸ್ತಕ್ಷೇಪ ಹೊಂದಿದ್ದದ್ದೂ ಕನ್ನಡದ ಬೆಳವಣಿಗೆಗೆ ಇದ್ದ ದೊಡ್ಡ ತೊಡಕು.

**ಕನ್ನಡದಲ್ಲಿ ವ್ಯವಹಾರ :** ಪ್ರಾಚೀನ ಕಾಲದಿಂದಲೂ ಕನ್ನಡ ಕರ್ನಾಟಕದ ಆಡಳಿತ ಭಾಷೆಯೇ ಆಗಿತ್ತು ಎನ್ನುವುದಕ್ಕೆ ಪುರಾವೆಗಳಿವೆ. ಆಂಗ್ಲರ ಆಳ್ವಿಕೆಯ ಕಾಲದಲ್ಲೂ ಕನ್ನಡವೇ ಆಡಳಿತ ಭಾಷೆಯಾಗಿದ್ದರೂ ಆಡಳಿತದಲ್ಲಿ ಒಂದು ತಾತ್ಕಾಲಿಕ ರಾಜಕೀಯ ಅಗತ್ಯವೆಂಬಂತೆ ಇಂಗ್ಲೀಷ್ ಬಳಕೆಯಾಗುತ್ತಿತ್ತು. ಹೀಗೆ ಒಳಬಂದ ಇಂಗ್ಲಿಷ್ ಆಡಳಿತ, ಶಿಕ್ಷಣ, ಕಾನೂನು, ಸಂವಹನೆ ಮುಂತಾದ ವಿವಿಧ ಕ್ಷೇತ್ರಗಳಲ್ಲಿ ಮೆಲ್ಲಮೆಲ್ಲನೆ ತನ್ನ ಅಸ್ತಿತ್ವವನ್ನು ಕುದುರಿಸಿಕೊಂಡಿದ್ದು ಗಮನಾರ್ಹ. ಆಗಿನ್ನೂ ಕನ್ನಡ ಭಾಷೆಗೆ ಸಂಬಂಧಿಸಿದಂತೆ ಭಾಷಾ ಬೆಳವಣಿಗೆಯ ಪರಿಕಲ್ಪನೆ ಒಡಮೂಡಿರಲಿಲ್ಲವಾದ್ದರಿಂದಲೂ ಇಂಗ್ಲಿಷರ ಆಳ್ವಿಕೆ ನಡೆಯುತ್ತಿದ್ದುದರಿಂದಲೂ ಕನ್ನಡದ ವ್ಯಾಪ್ತಿಯೊಳಗೂ ಇಂಗ್ಲಿಷ್ ಅತಿಕ್ರಮಣ ಮಾಡಿದ್ದು ಆಶ್ಚರ್ಯದ ಸಂಗತಿಯಲ್ಲ. ಈಗಲೂ ಇದೇ ದೊಡ್ಡ ಸಮಸ್ಯೆಯಾಗಿ ಕನ್ನಡ ಭಾಷಿಕರನ್ನು, ಚಿಂತಕರನ್ನು ಕಾಡುತ್ತಿದೆ.

**ಕಾನೂನಿನ ತೊಡಕು :** ಅದೇ ರೀತಿ ಸಂವಿಧಾನ ಅಂಗೀಕರಿಸಿದ ಮುಖ್ಯ ಭಾಷೆಗಳ ಪಟ್ಟಿಯಲ್ಲಿ ಇಂಗ್ಲಿಷ್ ಮತ್ತು ಹಿಂದಿ ಭಾಷೆಗಳಿಗೆ ವಿಶೇಷ ಸ್ಥಾನ ದೊರಕಿದ್ದು, ನಂತರ ವಿವಿಧ ಸರ್ಕಾರಗಳು ಆ ಸ್ಥಾನಮಾನಗಳನ್ನು ಹಾಗೇ ಮುಂದುವರೆಸಿಕೊಂಡು ಬಂದದ್ದೂ ಕನ್ನಡವನ್ನು ಇತರ ದೇಶಭಾಷೆಗಳಂತೆಯೇ ಇಕ್ಕಟ್ಟಿಗೆ ಸಿಲುಕಿಸಿದೆ.

*ಭಾರತದಲ್ಲಿ ಚಾಲನೆಗೆ ಬಂದ ತ್ರಿಭಾಷಾ ನೀತಿ ಫಲದಾಯಕವಾಗಿಲ್ಲ. ಆದ್ದರಿಂದ ಹಿಂದಿ ಭಾಷೆಗೆ ಪ್ರಾಧಾನ್ಯ ದೊರೆಯಿತೇ ಹೊರತು ಪ್ರಾಂತೀಯ ಭಾಷೆಗಳಿಗೆ ಅದರಲ್ಲೂ ದಕ್ಷಿಣ ಭಾರತದ ಭಾಷೆಗಳಿಗೆ ಹೆಚ್ಚು ಪ್ರಯೋಜನವಾಗಲಿಲ್ಲ. ಬಹುಭಾಷಾ ದೇಶವಾದ ಭಾರತದ ಎಲ್ಲ ಭಾಷೆಗಳ ಸತ್ವಗಳನ್ನು ಅರಿಯದೆ ಮಾಡಿದ ಈ ರಾಜಕೀಯ ಸೂತ್ರ ಈಗ ಸೋತು ಹೋಗಿದೆ*[೧೫]

ಎಂದು ಜಿ. ವೆಂಕಟಸುಬ್ಬಯ್ಯ ಅಭಿಪ್ರಾಯಪಟ್ಟಿದ್ದಾರೆ.

**ಮಾಧ್ಯಮಗಳ ಇತಿಮಿತಿ :** ಹಿಂದಿ ಭಾಷೆಗೆ ದೇಶವ್ಯಾಪೀ ಪ್ರಸಾರ ನೀಡಬೇಕು ಎನ್ನುವ ಸಂವಿಧಾನಾತ್ಮಕ ಹೇಳಿಕೆಯಿಂದಾಗಿ ಸರ್ಕಾರದ ಸ್ವಾಮ್ಯದಲ್ಲಿದ್ದ ವಿದ್ಯುನ್ಮಾನ ಮಾಧ್ಯಮಗಳು ಹಿಂದಿ ಭಾಷೆಯನ್ನು ಎಲ್ಲೆಡೆ ಪ್ರಸಾರ ಮಾಡಬೇಕಾಗಿರುವುದೂ ಕನ್ನಡ ಭಾಷಾ ಅಭಿವೃದ್ಧಿಯ ನಿಟ್ಟಿನಲ್ಲಿ ಅಡಚಣೆಯಾಗಿದೆ ಎಂದು ಅಧ್ಯಯನಗಳಿಂದ ತಿಳಿದು ಬಂದಿದೆ. ಮಧುವೆಂಕಾರೆಡ್ಡಿ ಹೇಳುವಂತೆ

*ರೇಡಿಯೊ, ದೂರದರ್ಶನ ನಾನಾ ಪರೋಕ್ಷ ವ್ಯವಸ್ಥೆಗಳ ಮೂಲಕ ಹಿಂದಿ ಭಾಷೆಯ ಪ್ರಭಾವ ಎಲ್ಲೆಡೆ ತೀವ್ರವಾಗಿ ಹರಡುತ್ತಿವೆ. ಆಕಾಶವಾಣಿ ಕೇಂದ್ರಗಳಲ್ಲಿ ಹಿಂದಿ, ಇಂಗ್ಲಿಷ್ ಕಾರ್ಯಕ್ರಮಗಳ ಮರುಪ್ರಸಾರಗಳು ನಮ್ಮ ಹಳ್ಳಿಯ ರೈತರಿಗೆ ಏನು ಪ್ರಯೋಜನ? ಪ್ರಾದೇಶಿಕ ಕೇಂದ್ರಗಳಿಗೇ ಸಂಪೂರ್ಣ ಸಮಯ ವಿನಿಯೋಗಿಸಲಾಗುತ್ತಿಲ್ಲ. ದೂರದರ್ಶನ ಕೇಂದ್ರಗಳನ್ನು ದೇಶದಾದ್ಯಂತ ಲಕ್ಷಾಂತರ ರೂಪಾಯಿ ಖರ್ಚು ಮಾಡಿ ಸ್ಥಾಪಿಸಲಾಗಿದ್ದರೂ ಪ್ರಾದೇಶಿಕ ಕಾರ್ಯಕ್ರಮಗಳು ಹಣದ ಕೊರತೆಯಿಂದ ಕಳಪೆಯಾಗುತ್ತಿವೆ*[೧೬]

**ಭಾಷಾಭಿಮಾನ :** ಕನ್ನಡ ಪುಸ್ತಕಗಳ ಪ್ರಕಟಣೆ ಮತ್ತು ಮಾರಾಟದ ವ್ಯವಸ್ಥೆ ಸೂಕ್ತವಾಗಿಲ್ಲದಿರುವುದೂ ಕನ್ನಡದ ಪ್ರಸರಣದ ದೃಷ್ಟಿಯಿಂದ ದೊಡ್ಡ ಕೊರತೆಯೇ ಆಗಿದೆ. ಎಲ್ಲಕ್ಕಿಂತ ಹೆಚ್ಚಾಗಿ ಕನ್ನಡಿಗರ ಭಾಷಾಭಿಮಾನವನ್ನು ಹೆಚ್ಚಿಸುವ ಹಾಗೂ ಕನ್ನಡದ ಬಳಕೆಯನ್ನು ಪ್ರೋತ್ಸಾಹಿಸುವ ಕೆಲಸವೂ ಆಗಬೇಕಾಗಿದೆ. ಭಾಷೆ ಬೆಳೆಸುವ ಯೋಜನೆಗಳು ಎಷ್ಟೇ ಇದ್ದರೂ ಅವು ಜನರನ್ನು ತಲುಪುವ, ಅವನ್ನು ಜನರು ಪ್ರೀತಿಯಿಂದ ಒಪ್ಪುವ ಮಟ್ಟದ ಭಾಷಾಭಿಮಾನ ಕನ್ನಡಿಗರಲ್ಲಿದೆಯೇ ಎನ್ನುವುದೇ ಇಲ್ಲಿ ಅತಿ ದೊಡ್ಡ ಪ್ರಶ್ನೆ. ಆದರೂ ಕರ್ನಾಟಕದಲ್ಲಿ ನಡೆದಿರುವ ಕನ್ನಡಪರ ಹೋರಾಟಗಳನ್ನು ಗಮನಿಸಿದರೆ, ಸೃಜನಶೀಲ ಕೃತಿಗಳ ಮೂಲಕ ಕನ್ನಡಪರ ಆಶಯಗಳನ್ನು ವ್ಯಕ್ತಪಡಿಸಿರುವುದನ್ನು ನೋಡಿದರೆ, ಕನ್ನಡಿಗರು ಅಭಿಮಾನಶೂನ್ಯರು ಎಂದು ಏಕಾಏಕಿ ನಿರ್ಣಯಿಸಿಬಿಡುವುದೂ ಕಷ್ಟವಾಗುತ್ತದೆ. ಇದನ್ನು ಬೇರೆಯೇ ನೆಲೆಯಲ್ಲಿ ನೋಡುವ ವಿದ್ವಾಂಸರು ಹೀಗೆ ಹೇಳುತ್ತಾರೆ. ಸಿ.ಪಿ. ಕೃಷ್ಣಕುಮಾರ್ ಪ್ರಕಾರ,

*ನಾವು ಮೊದಲೇ ಒಪ್ಪಿಕೊಳ್ಳಬೇಕಾದ ಒಂದು ಮುಖ್ಯ ಸಂಗತಿಯೇನೆಂದರೆ, ತಮಿಳರಿಗೆ ತಮಿಳಿನ ಮೇಲೋ, ತೆಲುಗರಿಗೆ ತೆಲುಗಿನ ಮೇಲೋ, ಮಲೆಯಾಳಿಗಳಿಗೆ ಮಲೆಯಾಳದ ಮೇಲೋ ಇರುವಂಥ ಅಕ್ಕರೆ, ಅಭಿಮಾನಗಳು ಕನ್ನಡಿಗರಿಗೆ ಕನ್ನಡದ ಮೇಲೆ ಇಲ್ಲ ಎನ್ನುವುದು. ಕವಿರಾಜಮಾರ್ಗಕಾರ ಸಾವಿರ ವರ್ಷಗಳಿಗೂ ಹಿಂದೆಯೇ ಕನ್ನಡಿಗರನ್ನು*

*'ಅತ್ಯುಗ್ರರ್ ಅಭಿಮಾನಿಗಳ್' ಎಂದು ಬಣ್ಣಿಸಿದ. ಕನ್ನಡ ನಾಡು ಕಾವೇರಿಯಿಂದ ಗೋದಾವರಿಯವರೆಗಿದೆ ಎಂದು ಘೋಷಿಸಿದ. ಅಂದಿನ ಕನ್ನಡಿಗರ ಅತ್ಯುಗ್ರತೆ, ಅಭಿಮಾನಗಳಿಗೂ ನಾಡಿನ ವ್ಯಕ್ತಿಗೂ ಬಹುಶಃ ಸಂಬಂಧವಿತ್ತು. ಇಂದಿನ ಕನ್ನಡಿಗರಾದರೋ ಅಭಿಮಾನಿಗಳಲ್ಲ, ಅತ್ಯುಗ್ರರಂತೂ ಅಲ್ಲವೇ ಅಲ್ಲ; ಆದ್ದರಿಂದ ನಾಡಿನ [illegible] ಕುಗ್ಗಿರುವುದೂ ಅಚ್ಚರಿಯಲ್ಲ.*[೧೭]

*ಸ್ವಭಾಷಾಪ್ರೇಮ ಮನುಷ್ಯನ ಸ್ವಭಾವದಲ್ಲಿ ಸೇರಿಕೊಂಡಿರುವ ಗುಣ. ಇದು ಭಾವೋದ್ರೇಕವನ್ನು ಉಂಟುಮಾಡುವ ಪ್ರಸಂಗ. ಅದನ್ನು ಬುದ್ಧಿವಂತಿಕೆಯಿಂದ ಸರಿಯಾದ ಮಾರ್ಗದಲ್ಲಿ ಒಯ್ದರೆ ದೇಶಕ್ಕೂ ಸಮಾಜಕ್ಕೂ ಒಳ್ಳೆಯದಾಗುವುದು. ದೇಶದ ಎಲ್ಲ ವ್ಯವಹಾರವೂ - ರಾಜಕೀಯ, ಸಾಮಾಜಿಕ, ಶೈಕ್ಷಣಿಕ, ದೇಶಭಾಷೆಯಲ್ಲಿಯೇ ನಡೆಯಬೇಕು. ಜನತೆಗೆಲ್ಲ ಅದು ತಿಳಿದು ಜನತೆ ಅದರಲ್ಲಿ ಭಾಗಿಗಳಾಗಬೇಕು.*[೧೮]

ಎಂದು ಗೊರೂರು ರಾಮಸ್ವಾಮಿ ಐಯ್ಯಂಗಾರ್ ಅಭಿಪ್ರಾಯ ಪಟ್ಟಿದ್ದಾರೆ.

*ಕನ್ನಡಿಗರು ಅಭಿಮಾನಿಗಳಾಗಬೇಕು, ಕನ್ನಡದಲ್ಲಿ, ಇಂಗ್ಲಿಷಿನಲ್ಲಿ, ಸಂಸ್ಕೃತದಲ್ಲಿ ಏನೇನಿದೆಯೋ ಅದನ್ನೆಲ್ಲಾ ತಿಳಿದುಕೊಂಡು ಎಲ್ಲರನ್ನೂ ಮೀರಿಹೋಗಬೇಕು. ಕನ್ನಡಿಗರಲ್ಲಿರುವ inferiority complex ಹೋಗಿ ಅವರಲ್ಲಿ superiority complex ಬೆಳೆಯುವಂತೆ ಮಾಡಬೇಕು.*[೧೯]

ಎನ್ನುವ ಹೇಳಿಕೆಯಲ್ಲಿ ಕುವೆಂಪು ಅವರು ಕನ್ನಡಿಗರಲ್ಲಿ ಅಭಿಮಾನದ ಕೊರತೆಯಿದೆ ಅಥವಾ ಇರುವ ಅಭಿಮಾನ ಸಾಲದು ಎಂದು ಆತಂಕ ಸೂಚಿಸಿದ್ದಾರೆ.

ಎಲ್ಲ ವಿದ್ವಾಂಸರ, ಚಿಂತಕರ, ಹೋರಾಟಗಾರರ ಆಸೆಯೂ ಒಂದೇ - ಕನ್ನಡ ಬಲಗೊಳ್ಳಬೇಕು. ಇದೇ ಆತಂಕವೂ ಆಗಿದೆ. ಕನ್ನಡ ಭಾಷಾ ಬೆಳವಣಿಗೆಯ ನಿಟ್ಟಿನಲ್ಲಿ ಆತಂಕಗಳೇನೇ ಇದ್ದರೂ ಅವನ್ನು ಬಗೆಹರಿಸಿಕೊಳ್ಳಬಹುದಾದ ಪರಿಹಾರ ಮಾರ್ಗಗಳೂ ನಮ್ಮ ಮುಂದಿವೆ. ಸಮಸ್ಯೆಗೆ ಕಾರಣಗಳನ್ನು ಹುಡುಕಿದ ಮೇಲೆ ಅವುಗಳ ನಿವಾರಣೆಯನ್ನು ಶೋಧಿಸಿಕೊಳ್ಳುವುದು ಕಷ್ಟದ ವಿಷಯವಲ್ಲ. ಕನ್ನಡ ಭಾಷೆ ಹೇಗೆ ಮತ್ತು ಏಕೆ ತೊಡಕಿಗೆ ಸಿಕ್ಕಿಕೊಂಡಿದೆ ಅಥವಾ ಸಿಕ್ಕಿಕೊಳ್ಳಬಹುದು ಎಂಬ ಅಂಶ ಬೆಳಕಿಗೆ ಬಂದಿರುವುದರ ಹಿನ್ನೆಲೆಯಲ್ಲಿ ಈ ಮುಂದಿನ ಪರಿಹಾರೋಪಾಯಗಳತ್ತ ಗಮನಹರಿಸಬಹುದು. ಆದ್ದರಿಂದಲೇ ಕನ್ನಡ ಭಾಷೆ ಅಳಿವು - ಉಳಿವಿನ ಆತಂಕಗಳನ್ನು ಎದುರಿಸುತ್ತಿಲ್ಲ ಎಂದೂ ಪ್ರತಿಪಾದಿಸಬಹುದು. ಮುಖ್ಯವಾದ ಪರಿಹಾರೋಪಾಯಗಳನ್ನು ಹೀಗೆ ಗುರುತಿಸಬಹುದು.

- ಆಡಳಿತ, ಶಿಕ್ಷಣ, ಕಾನೂನು ಮತ್ತಿತರ ವ್ಯಾವಹಾರಿಕ ಕ್ಷೇತ್ರಗಳಲ್ಲಿ ಕನ್ನಡದ ಬಳಕೆ.
- ಸೃಜನಶೀಲ ಸಾಹಿತ್ಯ ರಚನೆ, ಪ್ರಕಾಶನ ಮತ್ತು ಮಾರಾಟ ವ್ಯವಸ್ಥೆ.
- ಸಂವಹನ ಮಾಧ್ಯಮಗಳ ಮೂಲಕ ಕನ್ನಡ ಭಾಷಾ ಪ್ರಸಾರ.
- ಭಾಷಾ ನೀತಿ, ಭಾಷಾ ಯೋಜನೆಗಳ ರಚನೆ ಹಾಗೂ ಅನುಷ್ಠಾನ.

- ನಿಘಂಟು, ಪದಕೋಶ, ಅರ್ಥಕೋಶಗಳ ರಚನೆ, ಪರಿಷ್ಕರಣೆ ಮತ್ತು ಪೂರೈಕೆ.
- ಗಡಿನಾಡು ಹೊರನಾಡುಗಳಲ್ಲಿ ಕನ್ನಡ ಬಳಕೆಗೆ ಪ್ರೋತ್ಸಾಹ.
- ಜನಜಾಗೃತಿ ಮೂಡಿಸಿ ಭಾಷಾ ಬಳಕೆ ಹಾಗೂ ಭಾಷಾಭಿಮಾನ ಹೆಚ್ಚಿಸಲು ಪ್ರಯತ್ನಿಸುವ ಮೂಲಕ ಕನ್ನಡ ಭಾಷಾಭಿವೃದ್ಧಿಯ ನಿಟ್ಟಿನಲ್ಲಿ ದಿಟ್ಟ ಹೆಜ್ಜೆಗಳನ್ನಿಡುವುದು ಸಾಧ್ಯ.

ಸಂವಹನ ಮಾಧ್ಯಮಗಳ ಮೂಲಕ ಕನ್ನಡದ ಅಭಿವೃದ್ಧಿಯ ಸಾಧ್ಯಾಸಾಧ್ಯತೆಗಳನ್ನು ಚರ್ಚಿಸುವುದೇ ಈ ಮಹಾಪ್ರಬಂಧದ ಉದ್ದೇಶವಾಗಿರುವುದರಿಂದ ಉಳಿದೆಲ್ಲ ಮಾರ್ಗೋಪಾಯಗಳ ಬಗ್ಗೆ ಸ್ಥೂಲ ವಿವರಣೆಯನ್ನು ಮಾತ್ರ ಇಲ್ಲಿ ನೀಡುತ್ತಿದ್ದೇನೆ.

## ಭಾಷಾಭಿವೃದ್ಧಿಯ ಮಾರ್ಗಗಳು

ಭಾಷೆ ಸಮಾಜಪರವಾದದ್ದು. ಸಾಮಾಜಿಕ ಅನಿವಾರ್ಯತೆ. ಭಾಷೆಯಿಲ್ಲದ ಸಮಾಜ ಊಹೆಗೆ ದೂರ. ಭಾಷೆಯನ್ನು ಬೆಳೆಸುವ ವಿಚಾರವನ್ನೂ ಸಾಮಾಜಿಕ ನೆಲೆಯಲ್ಲೇ ಇಟ್ಟು ನೋಡಬೇಕಾಗುತ್ತದೆ. ಸಾಮಾಜಿಕ ಪರಿಸರದ ಹಿನ್ನೆಲೆಯಲ್ಲಿ ಭಾಷೆಯನ್ನು ವೈಜ್ಞಾನಿಕವಾಗಿ ಅಧ್ಯಯನ ಮಾಡುವುದೇ ಸಾಮಾಜಿಕ ಭಾಷಾವಿಜ್ಞಾನ ಎನಿಸಿಕೊಳ್ಳುತ್ತದೆ. ಒಂದು ಸಮಾಜ ಮತ್ತು ಸಂಸ್ಕೃತಿಯಲ್ಲಿ ಭಾಷೆ ಬೆಸೆದುಕೊಂಡಿರುವ ಬಗೆಯನ್ನು ವಿಶ್ಲೇಷಿಸುವುದೇ ಭಾಷಾ ವಿಜ್ಞಾನದ ಕೆಲಸ.

> *ಭಾಷಾ ವಿಜ್ಞಾನದ ಯಾವ ಭಾಗ ಭಾಷೆಯನ್ನು ಸಾಮಾಜಿಕ ಹಾಗೂ ಸಾಂಸ್ಕೃತಿಕ ಸಂಬಂಧಿಯಾಗಿ ನೋಡುತ್ತದೆಯೋ ಅದೇ ಸಾಮಾಜಿಕ ಭಾಷಾವಿಜ್ಞಾನ* [೨೦]

ಎಂದು ಪೀಟರ್ ಟ್ರುಡ್ಗಿಲ್,

> ಭಾಷಾ ವಿಜ್ಞಾನದ ಯಾವ ಒಂದು ಶಾಖೆ ಭಾಷೆಯಲ್ಲಿ ಹುದುಗಿರುವ ಸಾಮಾಜಿಕ ಅಂಶಗಳ ವಿವರವನ್ನು ಒದಗಿಸುತ್ತದೆಯೋ ಅದೇ ಸಾಮಾಜಿಕ ಭಾಷಾ ವಿಜ್ಞಾನ [೨೧]

ಎಂದು ಹಾ.ಮಾ. ನಾಯಕರೂ ವ್ಯಾಖ್ಯಾನಿಸಿದ್ದಾರೆ.

ನಮ್ಮ ಈ ಮಹಾಪ್ರಬಂಧ ಎರಡು ಹಂತಗಳಲ್ಲಿ ಸಮಾಜಮುಖತೆಯನ್ನು ಹೊಂದಿರುವುದು ಸ್ಪಷ್ಟ. ಒಂದು ಭಾಷೆ, ಎರಡು ಮಾಧ್ಯಮ. ಆದ್ದರಿಂದಲೇ ಈ ಮಹಾಪ್ರಬಂಧದ ವ್ಯಾಪ್ತಿಯನ್ನು ಸಾಮಾಜಿಕ ಭಾಷಾವಿಜ್ಞಾನದ ನೆಲೆಯಲ್ಲೇ ಗುರುತಿಸುತ್ತಾ ಸಮಾಜದ ವಿವಿಧ ಕ್ಷೇತ್ರಗಳಲ್ಲಿ ಭಾಷೆಯ ಅಭಿವೃದ್ಧಿಯ ಲಕ್ಷಣಗಳನ್ನು ಅಧ್ಯಯನ ಮಾಡಬೇಕಾಗಿದೆ. ಅದರಲ್ಲೂ ವಿಶೇಷವಾಗಿ ಮಾಧ್ಯಮಗಳ ನೆರವಿನೊಂದಿಗೆ ಭಾಷೆಯ ಬೆಳವಣಿಗೆಯನ್ನು ಗುರುತಿಸಬೇಕಾಗಿದೆ. ಪರಿವೀಕ್ಷಿಸಬೇಕಾಗಿದೆ.

ಭಾಷೆಯ ಪರಿವೀಕ್ಷಣೆ (survey)ಯಿಂದ ಆ ಭಾಷೆಯ ಶಬ್ದಸಂಪತ್ತು, ವೃತ್ತಿ, ಜಾತಿ, ಮತಗಳ ವಿಶೇಷ ಶಬ್ದಗಳ ಪಟ್ಟಿ, ಅರ್ಥದ ಛಾಯೆಗಳು, ಭೌಗೋಳಿಕವಾಗಿ ಇರುವ ವ್ಯತ್ಯಾಸಗಳನ್ನು ಸರಳವಾಗಿ ಅರ್ಥಮಾಡಿಕೊಳ್ಳುವ ಬಗೆ, ಮುಂತಾದ ವಿಚಾರಗಳು ಹೊರಬರುತ್ತವೆ. ಶಬ್ದಗಳ ಮತ್ತು ಶಬ್ದಪ್ರಯೋಗಗಳ ರಚನೆಯನ್ನು ಮಾತ್ರ ಭಾಷಾಶಾಸ್ತ್ರ ಪರಿಶೀಲಿಸುತ್ತದೆ. ಆದರೆ ಸಾಮಾಜಿಕ ಭಾಷಾಶಾಸ್ತ್ರ ಜನರ ನಡುವಿನ ವ್ಯವಹಾರದಲ್ಲಿ ಭಾಷಾ ಪ್ರಯೋಗಕ್ಕೆ ಎಂತಹ ನೆರವಿದೆ, ಅವುಗಳಲ್ಲಿ

ಯಾವುದು ಸ್ವಾಗತಾರ್ಹ, ಯಾವುದು ಶಿಷ್ಟ, ಯಾವುದು ವರ್ಜ್ಯ, ಸಾಮಾಜಿಕವಾಗಿ ಅದರ ಪ್ರಯೋಜನ, ಅವುಗಳಿಂದ ಹೊಮ್ಮುವ ಸಂಸ್ಕೃತಿಯ ಸ್ತರ, ಮುಂತಾದ ವಿಚಾರಗಳನ್ನೆಲ್ಲ ಚರ್ಚಿಸುತ್ತದೆ.

ಆದ್ದರಿಂದಲೇ ಸಾಮಾಜಿಕ ಭಾಷಾಶಾಸ್ತ್ರದ ಒಂದು ಅಧ್ಯಯನವಾಗಿ ಸಮಾಜದ ವಿವಿಧ ವಲಯಗಳಲ್ಲಿ ಕನ್ನಡದ ಬೆಳವಣಿಗೆಯ ಸಾಧ್ಯತೆಗಳನ್ನು ಇಲ್ಲಿ ಸ್ಥೂಲವಾಗಿ ಹೇಳಿದ್ದೇನೆ.

**ಆಡಳಿತ, ಶಿಕ್ಷಣ, ಕಾನೂನು ಮತ್ತಿತರ ವ್ಯಾವಹಾರಿಕ ಕ್ಷೇತ್ರಗಳಲ್ಲಿ ಕನ್ನಡದ ಬಳಕೆ**

ಸಮಾಜದ ವ್ಯಾವಹಾರಿಕ ಕ್ಷೇತ್ರಗಳು ಎಂದರೆ ಜನರನ್ನು ನೇರವಾಗಿ ಮುಟ್ಟುವ, ಜನರೊಂದಿಗೆ ಸಂವಹಿಸುವ, ಬೆರೆಯುವ, ಜನರನ್ನು ಬೆಸೆಯುತ್ತಾ ಬೆಳೆಸುವ, ಅಗತ್ಯಾಗತ್ಯಗಳನ್ನು ಚರ್ಚಿಸುವ, ಅತ್ಯಂತ ವಿಶಾಲವಾದ ಕ್ಷೇತ್ರ. ಜನರ ಸಾಮಾನ್ಯ ಜೀವನಕ್ಕೆ ಅವಶ್ಯಕವೂ ಪೂರಕವೂ ಆದ ಅಂಶಗಳನ್ನೇ ಇದು ಒಳಗೊಂಡಿದೆ. ಉದಾಹರಣೆಗೆ ಆಡಳಿತ ನಡೆಯುವುದೇ ಜನರಿಗಾಗಿ, ಜನರಿಂದ. ಅಂದಮೇಲೆ ಅದು ಅವರಿಗೆ ಅರ್ಥವಾಗುವಂತೆ, ಒಪ್ಪುವಂತೆ ನಡೆಯಬೇಕು. ವ್ಯಾವಹಾರಿಕ ಕ್ಷೇತ್ರ ಯಾವುದೇ ಇರಲಿ ಅದರಲ್ಲಿ ಜನ ಇದ್ದಾರೆ ಎನ್ನುವುದೇ ಭಾಷೆ ಬೆಳೆಯುವ ನಿಟ್ಟಿನಲ್ಲೂ ಗಮನಾರ್ಹ ಅಂಶ.

೧೯೨೮ರ ಮೋತಿಲಾಲ್ ನೆಹರು ಸಮಿತಿಯ ವರದಿ ಭಾಷಾವಾರು ಪ್ರಾಂತಗಳ ರಚನೆಯನ್ನು ಸಮರ್ಥಿಸುವ ಈ ಹೇಳಿಕೆಯನ್ನು ಒಳಗೊಂಡಿದೆ. 'ಶಿಕ್ಷಣ ಮಾಧ್ಯಮ, ವ್ಯವಹಾರ ಹಾಗೂ ಜೀವನ ವ್ಯಾಪಾರಗಳಿಗೆ ವಿದೇಶೀಯ ಭಾಷೆಯೊಂದು ಬಳಕೆಯಾಗುತ್ತಿದ್ದರೆ ದೇಶದ ಜೀವನ ಖಚಿತವಾಗಿ ಕುಂಠಿತವಾಗುತ್ತದೆ. ಈ ಉದ್ದೇಶಗಳಿಗಾಗಿ ವಿದೇಶೀಯ ಭಾಷೆಯೊಂದನ್ನು ಬಳಸುತ್ತಲಿದ್ದರೆ ಯಾವ ಜನತಂತ್ರವೂ ಉಳಿಯಲಾರದು. ಒಂದು ಜನತಾಂತ್ರಿಕ ಸಮಾಜವು ಒಳ್ಳೆಯ ತಿಳುವಳಿಕೆಯದಾಗಿರಬೇಕು. ಮತ್ತು ಸಾರ್ವಜನಿಕ ಸಂಗತಿಗಳನ್ನು ತಿಳಿದುಕೊಂಡು ಇವುಗಳನ್ನು ಅರ್ಥಮಾಡಿಕೊಳ್ಳಲು ಸಮರ್ಥವಾಗಿರಬೇಕು. ಆಗ ಮಾತ್ರ ಸಮಾಜವು ಜನತಂತ್ರದಲ್ಲಿ ಪರಿಣಾಮಕಾರಿ ಪಾತ್ರ ನಿರ್ವಹಿಸಬಲ್ಲದು.' ಇಂತಹ ಶಿಫಾರಸುಗಳಿದ್ದೂ, ಕರ್ನಾಟಕದಲ್ಲಿ ವಿವಿಧ ಕ್ಷೇತ್ರಗಳಲ್ಲಿ, ಕನ್ನಡದ ಅಭಿವೃದ್ಧಿ ಹೇಗೆ ಆಗಿದೆ ಎನ್ನುವುದನ್ನು ಇಲ್ಲಿ ವಿವರಿಸಿದ್ದೇನೆ.

**ಆಡಳಿತ :** ಜಗತ್ತಿನ ಬಹುತೇಕ ರಾಷ್ಟ್ರಗಳು ಏಕಭಾಷಾ ರಾಷ್ಟ್ರಗಳು. ಆದರೆ ಭಾರತ ಹಾಗಲ್ಲ. ಅತ್ಯಂತ ಪ್ರಾಚೀನ ಸಂಸ್ಕೃತಿಗಳ ತೊಟ್ಟಿಲಾದ ಈ ನೆಲ, ಆ ಸಂಸ್ಕೃತಿಗಳ ಅವಿಭಾಜ್ಯ ಅಂಗವೇ ಆದ ಅನೇಕಾನೇಕ ಭಾಷೆಗಳಿಗೆ ಮಡಿಲಿತ್ತಿದೆ. ಆ ಕಾರಣದಿಂದಾಗಿಯೇ ಭಾರತಕ್ಕೆ ತನ್ನದೇ ಆದ ಒಂದು ರಾಷ್ಟ್ರಭಾಷೆ ಇರಬೇಕು, ಹಿಂದಿಯೇ ಅದಾಗಿರಬೇಕು ಎನ್ನುವ ವಿಚಾರಗಳು ಸಂವಿಧಾನ ರಚನೆಯ ಸಂದರ್ಭದಲ್ಲಿ ಬಹುಚರ್ಚಿತವಾದ ವಿಷಯವಾಗಿದ್ದದ್ದು ಈಗ ಇತಿಹಾಸ. ಕಡೆಗೂ ಹಿಂದಿಯನ್ನು ರಾಷ್ಟ್ರಭಾಷೆಯೆಂದೂ, ಇಂಗ್ಲೀಷನ್ನು ಸಂಪರ್ಕ ಭಾಷೆಯೆಂದೂ ಒಪ್ಪಿ ಬಳಸುವಾಗಲೂ ೧೫ ದೇಶೀಯ ಭಾಷೆಗಳು ತಮ್ಮ ಅಸ್ತಿತ್ವವನ್ನು ಕಳೆದುಕೊಳ್ಳದೆ ದೃಢವಾಗಿ ಉಳಿದಿದ್ದರೆ, ಅವು ಆ ಹೊತ್ತಿಗಾಗಲೇ ಸದೃಢವಾಗಿ ಬೆಳೆದು ಆಳವಾಗಿ ಬೇರು ಬಿಟ್ಟಿದ್ದದ್ದೇ ಕಾರಣ ಎನ್ನಬಹುದು.

ಕನ್ನಡದ ಸಂದರ್ಭದಲ್ಲೇ ಗಮನಿಸಿದಾಗ ಶಾಸನಗಳ ಕಾಲದಿಂದಲೂ ಕನ್ನಡ ಕನ್ನಡನಾಡಿನ ಆಡಳಿತ ಭಾಷೆಯಾಗಿಯೇ ಇರುವುದು ಗಮನಾರ್ಹ. ಹಾಗೆ ಕನ್ನಡವೇ ಇಲ್ಲಿನ ಆಡಳಿತ ಭಾಷೆಯಾಗಿದ್ದಕ್ಕೆ ಅದು ಕಾವೇರಿಯಿಂದ ಗೋದಾವರಿವರೆಗಿದ್ದ ವಿಶಾಲ ಪ್ರದೇಶದ ಜನರ ಆಡುಭಾಷೆಯೇ ಆಗಿದ್ದದ್ದು ಕಾರಣ. ಅಂದರೆ ಆಡುಭಾಷೆ ಆಡಳಿತ ಭಾಷೆಯಾಗಿರಬೇಕು ಎನ್ನುವ ಸೂತ್ರ ಇಲ್ಲಿರುವುದನ್ನು ಗಮನಿಸಬಹುದು. ಕ್ರಿ.ಶ. ೪೫೦ರಲ್ಲಿ ಹೊರಟಿರುವ ಹಲ್ಮಿಡಿ ಶಾಸನ ಅಂದರೆ ಕನ್ನಡದ ಮೊಟ್ಟಮೊದಲ ಶಾಸನ ಬಹಳ ಮುಖ್ಯವಾದ ದಾಖಲೆ. ಕದಂಬವಂಶದ ಕಾಕುತ್ಸ್ಥವರ್ಮನ ರಾಜಾಜ್ಞೆ ಇದು. ರಾಜಾಜ್ಞೆಯೊಂದು ಕನ್ನಡದಲ್ಲಿ

ಲಿಖಿತವಾಗಿತ್ತೆಂದರೆ ಆ ಸಂದರ್ಭದಲ್ಲಿ ಕನ್ನಡ ಆಳುವ ಭಾಷೆಯಾಗಿತ್ತೆನ್ನುವುದು ಸ್ಪಷ್ಟವಾಗುತ್ತದೆ. ಅಲ್ಲದೆ ಬಾದಾಮಿಯ ಚಾಲುಕ್ಯರಾಗಲೀ, ರಾಷ್ಟ್ರಕೂಟರಾಗಲೀ ಕನ್ನಡವನ್ನೇ ಆಡಳಿತ ಭಾಷೆಯಾಗಿ ಬಳಸಿರುವುದು ಅವರ ಕಾಲದ ಶಾಸನಗಳಿಂದ ವೇದ್ಯವಾಗುತ್ತದೆ.

> *ಕರ್ನಾಟಕದಲ್ಲಿ ದೊರಕಿರುವ ಸುಮಾರು ೨೫,೦೦೦ ಶಾಸನಗಳಲ್ಲಿ ಶೇಕಡಾ ೮೦ಕ್ಕಿಂತ ಹೆಚ್ಚು ಕನ್ನಡ ಲಿಪಿ ಮತ್ತು ಭಾಷೆಯಲ್ಲಿವೆ. ವಿಜಯನಗರ ಸಾಮ್ರಾಜ್ಯಕ್ಕೆ ಸಂಬಂಧಿಸಿದ ಸುಮಾರು ೫,೩೫೦ ಶಾಸನಗಳಲ್ಲಿ ೨,೫೦೦ ಶಾಸನಗಳು ಕನ್ನಡದಲ್ಲಿವೆ. ಕೆಳದಿ ಮತ್ತು ಮೈಸೂರು ಅರಸರಲ್ಲಿ ಕನ್ನಡವೇ ಸಂಪೂರ್ಣ ಆಡಳಿತ ಭಾಷೆಯಾಗಿತ್ತು* [೨೨]

ಎಂದು ಮಹದೇವ ಬಣಕಾರ ಹೇಳಿದ್ದಾರೆ.

ಕನ್ನಡ ನಾಡಿನಲ್ಲಿ ಮರಾಠರ ಆಳ್ವಿಕೆಯಿದ್ದಾಗಲೂ ಆಡಳಿತ ವ್ಯವಹಾರಗಳಲ್ಲಿ ಕನ್ನಡವೇ ಹೆಚ್ಚಾಗಿ ಬಳಕೆಯಾಗುತ್ತಿತ್ತು. ಹೈದರಾಲಿ, ಟಿಪ್ಪು ಸುಲ್ತಾನರ ಆಡಳಿತದಲ್ಲೂ ಕನ್ನಡವೇ ಅಧಿಕೃತ ಭಾಷೆಯಾಗಿ ಬಳಕೆಯಾಗಿದೆ. ಇವರಿಬ್ಬರ ಕಾಲದಲ್ಲಿ ಶೃಂಗೇರಿ ಮಠದ ಶ್ರೀ ಶಂಕರಾಚಾರ್ಯರಿಗೆ ಬರೆಯಲಾದ ಪತ್ರಗಳು ಕನ್ನಡದಲ್ಲೇ ಇವೆ.

ಆಂಗ್ಲರ ಕಾಲದಲ್ಲೂ ಕನ್ನಡವೇ ಆಡಳಿತ ಭಾಷೆಯಾಗಿ ಉಳಿದದ್ದು ಮಹತ್ವದ ವಿಷಯ. ಜನರೊಂದಿಗೆ ಸಂವಹನೆ ನಡೆಸುವ ದೃಷ್ಟಿಯಿಂದ ಸ್ಥಳೀಯ ಭಾಷೆಯ ಬಳಕೆಗೆ ಪ್ರಾಶಸ್ತ್ಯ ನೀಡಿದ್ದು ಆಂಗ್ಲರ ಉದಾರ ಧೋರಣೆಗಳಲ್ಲಿ ಒಂದೆನ್ನಬಹುದು. ಕನ್ನಡದಲ್ಲಿ ಸಂವಹನ ಕೌಶಲ್ಯವನ್ನು ಗಳಿಸಿಕೊಳ್ಳುವುದಕ್ಕಾಗಿ ಆಂಗ್ಲರೇ ಕನ್ನಡವನ್ನು ಕಲಿತದ್ದಲ್ಲದೆ, ಅವರಲ್ಲೇ ಅನೇಕ ಕನ್ನಡ ವಿದ್ವಾಂಸರೂ, ಪಂಡಿತರೂ ಹುಟ್ಟಿಕೊಳ್ಳುವಂತಾಯ್ತು. ಆಂಗ್ಲರ ಕಾಲದಲ್ಲಿ ಕನ್ನಡವೇ ಆಡಳಿತ ಭಾಷೆಯಾಗಿತ್ತು ಎನ್ನುವುದಕ್ಕೆ ಬ್ರಿಟಿಷ್ ಅಧಿಕಾರಿಗಳ ಕನ್ನಡದ ಸಹಿ, ಹುಕುಂನಾಮಾಗಳು, ಕಂದಾಯ ದಾಖಲೆಗಳು, ನಕಾಶೆಗಳ ವಿವರಣೆ, ನೋಂದಣಿ ಪುಸ್ತಕಗಳು ಕನ್ನಡದಲ್ಲಿರುವುದಲ್ಲದೆ, ನಿಯಮ - ನಿಬಂಧನೆ, ಸುತ್ತೋಲೆ, ಆಡಳಿತ ಪತ್ರಗಳು, ಗೈಡ್ - ಗೆಜೆಟ್‌ಗಳು, ಅರ್ಜಿ-ಅಪೀಲುಗಳು, ನ್ಯಾಯಾಲಯದ ನಡಾವಳಿ, ತೀರ್ಪು, ಕಡತಗಳು, ಟಿಪ್ಪಣಿ, ಷರಾ-ಸಹಿಗಳೂ ಕನ್ನಡದಲ್ಲಿರುತ್ತಿದ್ದುದಕ್ಕೆ ಪುರಾವೆಗಳಿವೆ.

ಹೀಗಿದ್ದದ್ದು ಕರ್ನಾಟಕ ಏಕೀಕರಣದ ನಂತರ ರಾಜ್ಯದ ಆಡಳಿತ ಕನ್ನಡದಲ್ಲಿ ನಡೆಯುವಲ್ಲಿ ಸ್ವಲ್ಪ ಏರುಪೇರಾಗಿರುವುದು ಗಮನಾರ್ಹ. ೧೯೫೬ರಲ್ಲಿ ರಾಜ್ಯ ಏಕೀಕರಣಗೊಂಡ ಮೇಲೆ ಕನ್ನಡದ ಬಳಕೆ ಇನ್ನೂ ವ್ಯಾಪಕವೂ ಅಗಾಧವೂ ಆಗಬೇಕಾಗಿತ್ತು. ಆದರೆ ಹಿನ್ನಡೆ ಅನುಭವಿಸಿದ್ದನ್ನು ಗಮನಿಸಬಹುದು. ೧೯೬೩ರಲ್ಲಿ ಹೊರಬಂದ ಆಡಳಿತ ಭಾಷಾ ಅಧಿನಿಯಮದಲ್ಲಿ ಕನ್ನಡದ ಬಳಕೆಯನ್ನು ಕಡ್ಡಾಯ ಮಾಡಿಯೂ ಆ ಮುಂದಿನ ೧೫ ವರ್ಷಗಳವರೆಗೆ ಸುಗಮ ಆಡಳಿತಕ್ಕಾಗಿ ಇಂಗ್ಲೀಷ್ ಬಳಕೆಯನ್ನು ಮುಂದುವರೆಸಬಹುದು ಎಂದು ಹೇಳಿರುವುದೂ ಕನ್ನಡದ ಬಳಕೆ ಸಂಪೂರ್ಣವಾಗಿ ಆಗದಿರುವುದಕ್ಕೆ ಕಾರಣ ಎಂದು ತರ್ಕಿಸಬಹುದು.

ಸೂರ್ಯನಾಥ ಕಾಮತ್ ಹೇಳುವಂತೆ

> *ಏಕೀಕರಣದ ನಂತರ ಕನ್ನಡ ಆಡಳಿತ ಭಾಷೆಯಾಗುವ ವಿಚಾರದಲ್ಲಿ ಖಚಿತವಾಗಿಯೂ ಹಿನ್ನಡೆಯಾಯ್ತು. ಆಡಳಿತ ಭಾಷೆ ಕನ್ನಡವಾಗಬೇಕು. ಇದರಿಂದ ಆಡಳಿತಕ್ಕೆ ಅನುಕೂಲ ಎಂಬ ಆಶಯದಿಂದ*

*ಏಕೀಕರಣವಾಯ್ತು. ಆದರೆ ಏಕೀಕರಣವಾದ ಬಗ್ಗೆ ಉತ್ಸಾಹ, ಸಂತಸಗಳಲ್ಲಿ ಮೈಮರೆತ ಕನ್ನಡಾಭಿಮಾನಿಗಳು ಆಡಳಿತ ಭಾಷೆ ಕನ್ನಡವಾಗಬೇಕೆಂಬ ದಿಸೆಯಲ್ಲಿ ತಕ್ಷಣ ಗಮನ ನೀಡಲಿಲ್ಲ. ಆಡಳಿತವೂ ಈ ಬಗ್ಗೆ ಗಮನ ನೀಡಲಿಲ್ಲ*[೨೩]

ಇದಕ್ಕೆ ಇನ್ನೂ ಒಂದು ನಿದರ್ಶನವನ್ನು ಗುರುತಿಸುವ ಕಾಮತರು ಬೆರಳಚ್ಚು ಯಂತ್ರದ ಕೀಲಿಮಣೆ ಹೇಗಿರಬೇಕೆಂಬ ಬಗ್ಗೆ ನಡೆದ ಚರ್ಚೆಯಲ್ಲಿ ಅದಕ್ಕೆಂದೇ ನೇಮಿಸಿದ್ದ ಸಮಿತಿಯ ಸದಸ್ಯರು ಒಮ್ಮತಕ್ಕೆ ಬರಲಾರದೇ ಹೋದರು ಎಂದು ಹೇಳಿದ್ದಾರೆ.

ಮತ್ತೆ ೬೦ರ ದಶಕದಲ್ಲಿ ಕನ್ನಡವನ್ನು ಆಡಳಿತ ಭಾಷೆಯನ್ನಾಗಿಸುವ ಚಳವಳಿಗಳು ನಡೆದದ್ದು ಉಲ್ಲೇಖಾರ್ಹ. ಕನ್ನಡ ಭಾಷೆಯ ಬೆಳವಣಿಗೆಯ ಬಗ್ಗೆ ಚಳವಳಿಗಳು ವಹಿಸಿರುವ ಪಾತ್ರ ಬಹಳ ಮಹತ್ವದ್ದು ಎಂಬುದೂ ಗಮನಾರ್ಹ. 'ಕನ್ನಡ ರಾಜ್ಯಲಕ್ಷ್ಮಿಯ ಕೈಗೆ ಪೊರಕೆ ಕೊಟ್ಟರಿ' ಎಂದು ತಿ.ತಾ. ಶರ್ಮ ಖೇದ ವ್ಯಕ್ತಪಡಿಸಿದ್ದಲ್ಲದೆ ೧೯೬೦-೬೧ರ ಹೊತ್ತಿಗೆ ಮಹಾ ಚಳವಳಿಯೇ ಆರಂಭವಾಯಿತು. ಗೋಪಾಲಕೃಷ್ಣ ಅಡಿಗ, ಅ.ನ.ಕೃ., ಮ. ರಾಮಮೂರ್ತಿ, ತ.ರಾ.ಸು. ಮೊದಲಾದವರೆಲ್ಲ ಚಳವಳಿಯ ನೇತೃತ್ವವಹಿಸಿ ತೀವ್ರ ಹೋರಾಟ ನಡೆಸಿದುದರ ಫಲವಾಗಿ ೧೯೬೩ರಿಂದ ಕರ್ನಾಟಕ ರಾಜ್ಯೋತ್ಸವದ ಆಚರಣೆ ಆರಂಭವಾಯಿತು. ಶಿಕ್ಷಣ, ಆಡಳಿತ ಮತ್ತಿತರ ಎಲ್ಲ ವ್ಯಾವಹಾರಿಕ ರಂಗಗಳಲ್ಲಿಯೂ ಕನ್ನಡ ಭಾಷೆಗೆ ಪ್ರಾಧಾನ್ಯ ನೀಡಬೇಕು ಎನ್ನುವ ಒಕ್ಕೊರಲಿನ ಧ್ವನಿ ಎದ್ದು ಭಾಷಾ ವಿಚಾರಕ್ಕೆ ಜ್ವಲಂತ ಸಮಸ್ಯೆಯ ಸ್ವರೂಪ ಸಿಕ್ಕಿತು.

ಇದೆಲ್ಲದರ ತತ್ಫಲವಾಗಿ ೧೯೬೩ರಲ್ಲಿ ಕನ್ನಡ ರಾಜಭಾಷಾ ಅಧಿನಿಯಮ ಹೊರಬಿತ್ತು. ಕನ್ನಡ ಮೈಸೂರು ರಾಜ್ಯದ ರಾಜ್ಯಭಾಷೆಯಾಗಿ ಇರತಕ್ಕದ್ದು ಎನ್ನುವ ಆದೇಶ ಹೊರಟಿತು. ಕನ್ನಡಕ್ಕೆ ಆಡಳಿತ ಭಾಷೆಯ ಸ್ಥಾನಮಾನ ಸಿಕ್ಕಿತು. ಅಲ್ಲಿಂದೀಚೆಗೆ ಸುಮಾರು ೩೦ ವರ್ಷಗಳಲ್ಲಿ (೧೯೬೩-೧೯೯೩) ಕನ್ನಡವನ್ನು ಕರ್ನಾಟಕದ ಆಡಳಿತ ಭಾಷೆಯನ್ನಾಗಿ ಪುನರ್ ರೂಪಿಸುವ ದೃಷ್ಟಿಯಿಂದ ೨೮೦ ಕ್ಕೂ ಹೆಚ್ಚು ಸುತ್ತೋಲೆಗಳನ್ನು ಸರ್ಕಾರ ಹೊರಡಿಸಿದೆ.

ಈ ಅಧಿಸೂಚನೆಯನ್ವಯ ಕರ್ನಾಟಕದಲ್ಲಿ ಕನ್ನಡವೇ ರಾಜ್ಯಭಾಷೆ ಆಗಿರತಕ್ಕದ್ದು ಎಂಬ ತತ್ವವನ್ನು ೧೯೬೩ರಲ್ಲಿಯೇ ಕರ್ನಾಟಕ ಸರ್ಕಾರ ಒಪ್ಪಿಕೊಂಡಿದೆ. ಭಾಷಾವಾರು ಪ್ರಾಂತರಚನೆಯ ಉದ್ದೇಶವೂ ಇದೇ ಆಗಿತ್ತು. ೧೯೬೮ರಿಂದ ತಾಲ್ಲೂಕು ಮಟ್ಟದ ಕಛೇರಿಗಳಲ್ಲೂ, ೧೯೭೨ರಿಂದ ಜಿಲ್ಲಾಮಟ್ಟದ ಕಛೇರಿಗಳಲ್ಲೂ, ೧೯೭೮ರಿಂದ ಸಚಿವಾಲಯವೂ ಸೇರಿದಂತೆ ಆಡಳಿತದ ಎಲ್ಲ ಹಂತಗಳಲ್ಲೂ ಕನ್ನಡವನ್ನು ಜಾರಿಗೊಳಿಸಬೇಕೆಂದು ರಾಜ್ಯ ಸರ್ಕಾರ ಆದೇಶಗಳನ್ನು ನೀಡಿದೆ. ಕನ್ನಡ ಆಡಳಿತ ಭಾಷಾ ಸಮಿತಿ, ಅಧಿಕಾರಿ ಮಟ್ಟದ ಸಮಿತಿ, ಕನ್ನಡ ಆಡಳಿತ ಭಾಷಾ ಕಾವಲು ಸಮಿತಿ, ಕನ್ನಡ ಕಾವಲು ಮತ್ತು ಗಡಿ ಸಲಹಾ ಸಮಿತಿ, ಕನ್ನಡ ಅಭಿವೃದ್ಧಿ ಮಂಡಳಿ ಮುಂತಾದ ಸಮಿತಿಗಳನ್ನು ರಚಿಸಿ, ಅವುಗಳ ಸಲಹೆ ಸೂಚನೆಗಳ ಮೇರೆಗೆ ಕನ್ನಡದ ಅನುಷ್ಠಾನಕ್ಕೆ ಪ್ರಯತ್ನಿಸುತ್ತಿದೆ. ನೌಕರರಿಗೆ ಆಡಳಿತ ಕನ್ನಡದಲ್ಲಿ ತರಬೇತಿ, ಕನ್ನಡ ಬೆರಳಚ್ಚು ಮತ್ತು ಶೀಘ್ರಲಿಪಿ ತರಬೇತಿ, ಕನ್ನಡ ಬರದವರಿಗೆ ಅಂಚೆ ಮೂಲಕ ಕನ್ನಡ ಕಲಿಸುವ ಯೋಜನೆಗಳನ್ನೂ ಸರ್ಕಾರ ಹಮ್ಮಿಕೊಂಡಿದೆ. ೧೯೬೭ರಲ್ಲಿ ಆಡಳಿತ ಶಬ್ದಕೋಶ ರಚನೆಯಾಗಿ ಪರಿಷ್ಕಾರವನ್ನೂ ಕಂಡಿದೆ. ಜೊತೆಗೆ ಭಾಷಾ ಬಳಕೆಯ ಪೂರಕ ಪರಿಕರಗಳಾದ ಕಾರ್ಯಾಲಯ ಕೈಪಿಡಿ, ಕಛೇರಿ ಕೈಪಿಡಿ, ೫೩ ಇಲಾಖೆಗಳ ಪಾರಿಭಾಷಿಕ ಪದಕೋಶಗಳು ರಚನೆಯಾಗಿವೆ. ಜೊತೆಗೆ ಸೇವಾ ನಿಯಮಗಳು, ಆರ್ಥಿಕ ಸಂಹಿತೆ, ಖಜಾನೆ ಸಂಹಿತೆ, ಸಾದಿಲ್ವಾರು ನಿಯಮಗಳೂ ಸಹ ಕನ್ನಡದಲ್ಲಿ ಪ್ರಕಟವಾಗಿವೆ. ಈಗೀಗ ಕಂಪ್ಯೂಟರ್ ಬಳಕೆ ವ್ಯಾಪಕವಾಗುತ್ತಿದ್ದಂತೆ ಕನ್ನಡದ ಅನೇಕ ಸಾಫ್ಟ್‌ವೇರ್‌ಗಳು ಅಭಿವೃದ್ಧಿಯಾಗಿವೆ. ಅದನ್ನೂ ಸರ್ಕಾರ ಬಳಸಿಕೊಳ್ಳುತ್ತಿದೆ. ಸರ್ಕಾರಿ ಕಛೇರಿಗಳಲ್ಲಿ ಕನ್ನಡಿಗರ ನೇಮಕಕ್ಕೆ ಆದ್ಯತೆ ನೀಡಬೇಕೆನ್ನುವ ಸರೋಜಿನಿ ಮಹಿಷಿ ವರದಿಯೂ ಬಿಗಿ ಅನುಷ್ಠಾನಕ್ಕಾಗಿ

ಕಾಯುತ್ತಿದೆ. ದಿನನಿತ್ಯ ಹೀಗೆ ಆಡಳಿತದಲ್ಲಿ ಕನ್ನಡ ಕಡ್ಡಾಯವಾಗುವುದರಿಂದ ಅದನ್ನು ಮರೆಯುವುದಾಗಲೀ ಬಳಸದೇ ಬಿಟ್ಟುಬಿಡುವುದಾಗಲೀ ಸಾಧ್ಯವಾಗುವುದಿಲ್ಲ. ಆದರೆ ಅಂತಹ ಬಳಕೆ ಕಡ್ಡಾಯವಾಗಿ ಆಗಲೇಬೇಕು ಅಷ್ಟೆ.

**ಶಿಕ್ಷಣ :** ವಿದ್ಯಾಭ್ಯಾಸ ಪ್ರತಿಯೊಬ್ಬ ಭಾರತೀಯ ಪ್ರಜೆಯ ಮೂಲಭೂತ ಹಕ್ಕು. ಕರ್ನಾಟಕದಲ್ಲಿ ಕನ್ನಡ ಭಾಷೆಗೆ ಅಗ್ರಸ್ಥಾನವೂ, ಸಂಪೂರ್ಣ ಪ್ರಾಶಸ್ತ್ಯವೂ ಇದ್ದು, ಪ್ರಾಥಮಿಕ ಹಂತದಿಂದ ಮೊದಲ್ಗೊಂಡು ಉನ್ನತ ಶಿಕ್ಷಣದ ಕೊನೆಯ ಸ್ತರದವರೆಗೂ ಕನ್ನಡ ಮಾಧ್ಯಮದಲ್ಲೇ ವಿದ್ಯಾಭ್ಯಾಸ ನಡೆಯಲಿ ಎನ್ನುವುದು ಹಿತಚಿಂತಕರ ಅಪೇಕ್ಷೆಯೂ ಆಗಿದೆ.

ಮಾತೃಭಾಷೆಯೊಂದಿಗೆ ತಮ್ಮ ತೊದಲುನುಡಿ ಆರಂಭಿಸುವ ಮಕ್ಕಳಲ್ಲಿ ಗ್ರಹಣಶಕ್ತಿ ಹೆಚ್ಚಾಗಿರುವುದರಿಂದ ಶಿಕ್ಷಣದ ಮೊದ ಮೊದಲ ಹಂತದಲ್ಲಿ ಕನ್ನಡದ ಕಲಿಕೆಯನ್ನು ಕಡ್ಡಾಯವಾಗಿಸುವುದು ಅತ್ಯಂತ ಸಮರ್ಪಕವಾದ ವಿಚಾರ. ಆದರೆ ಶಿಕ್ಷಣ ಎಂದ ಕೂಡಲೇ ಕೇವಲ ಮಕ್ಕಳ ಪಠ್ಯ ಕಲಿಕೆಯ ಹಂತವೆಂದು ಭಾವಿಸದೆ, ನಾಲ್ಕು ಪ್ರಮುಖ ನೆಲೆಗಳಿಂದ ಇದನ್ನು ಪರಿಶೀಲಿಸಬಹುದು.

- ಶಿಕ್ಷಣ ಕ್ಷೇತ್ರದ ಆಡಳಿತ ಅಥವಾ ಬೋಧಕೇತರ ವ್ಯವಹಾರದಲ್ಲಿ ಕನ್ನಡ.
- ಬೋಧನೆಯ ಒಂದು ವಿಷಯವಾಗಿ ಕನ್ನಡ.
- ಬೋಧನಾ ಮಾಧ್ಯಮವಾಗಿ ಕನ್ನಡ.
- ಪಠ್ಯೇತರ ಚಟುವಟಿಕೆಗಳಲ್ಲಿ ಕನ್ನಡ.

ಶಿಕ್ಷಣ ಕ್ಷೇತ್ರದ ಆಡಳಿತಾತ್ಮಕ ವ್ಯವಹಾರಗಳು ರಾಜ್ಯದಲ್ಲಿ ಇಂಗ್ಲಿಷ್ ಪ್ರಾಬಲ್ಯವಿದ್ದ ಕಾಲದಲ್ಲೂ ಕನ್ನಡದಲ್ಲೇ ಸಾಗುತ್ತಿದ್ದುದಕ್ಕೆ ದಾಖಲೆಗಳಿವೆ. ಎಲ್ಲ ಕ್ಷೇತ್ರಗಳ ಆಡಳಿತದಲ್ಲೂ ಕನ್ನಡದ ಬಳಕೆಗೆ ಪ್ರಾಶಸ್ತ್ಯ ನೀಡಿದ್ದಂತೆ ಶಿಕ್ಷಣ ಕ್ಷೇತ್ರಕ್ಕೂ ಅದು ಅನ್ವಯಿಸುತ್ತಿತ್ತು. ಆದರೆ ಇಂಗ್ಲಿಷ್ ಭಾಷಾ ವ್ಯಾಮೋಹದ ಸೆಳೆತ ಉಳಿದೆಲ್ಲ ಕ್ಷೇತ್ರಗಳಿಗಿಂತ ಪಂಡಿತವರ್ಗದವರೆನಿಸಿದ ಶಿಕ್ಷಕರಲ್ಲೇ ಹೆಚ್ಚಾಗಿದ್ದು ಇತಿಹಾಸದ ಒಂದು ಸಂದರ್ಭದಲ್ಲಿ, ಈ ಕ್ಷೇತ್ರದ ಆಡಳಿತ ವ್ಯವಹಾರ ಇಂಗ್ಲಿಷಿನಲ್ಲೇ ಸಾಗುವಂತೆ ಮಾಡಿಬಿಟ್ಟಿತು.

ಮೈಸೂರಿನಲ್ಲಿ ಶಿಕ್ಷಣ ಕ್ಷೇತ್ರಕ್ಕೆ ಪೋಷಣೆ ನೀಡಿದ ಮಹಾರಾಜರ ಪೈಕಿ ಮುಮ್ಮಡಿ ಕೃಷ್ಣರಾಜ ಒಡೆಯರ್ ಅವರು ೧೮೬೫ರಲ್ಲೇ (ರಾಜಾಸ್ಕೂಲ್‌ನ ಪರಿವೀಕ್ಷಣೆ ಸಂದರ್ಭದಲ್ಲಿ) ಪ್ರಾದೇಶಿಕ ಭಾಷಾ ಶಿಕ್ಷಣಕ್ಕೆ ಪ್ರಾಮುಖ್ಯತೆ ನೀಡುವಂತೆ ಆಗಿನ ಆಂಗ್ಲ ಮುಖ್ಯೋಪಾಧ್ಯಾಯ ಜೇಮ್ಸ್ ಡನ್ನಿಂಗ್ ಅವರಿಗೆ ಸೂಚಿಸಿದ್ದರೆಂದು ಹೇಳಲಾಗಿದೆ. ಜಯಚಾಮರಾಜೇಂದ್ರ ಒಡೆಯರ್ ಅವರಂತೂ ಇಂಗ್ಲಿಷ್ ವ್ಯಾಮೋಹಿಗಳನ್ನು ತೀಕ್ಷ್ಣವಾಗಿ ಖಂಡಿಸಿದ್ದಾರೆ. 'ಇಂಗ್ಲಿಷ್ ವಿದ್ಯಾಭ್ಯಾಸ ಪಡೆದುಕೊಂಡವರು ತಾವೇ ಒಂದು ಜಾತಿ ಎನ್ನುವಂತೆ, ಮಧ್ಯಯುಗದ ವಿದ್ವಾಂಸರ ಹಾಗೆ ತಮ್ಮ ಹಿರಿಮೆಗೆ ತಾವೇ ತೃಪ್ತಿಪಟ್ಟುಕೊಂಡು ಕುಳಿತುಕೊಳ್ಳಬಾರದು. ಇಂಥವರು ಇಂಗ್ಲಿಷ್ ವಿದ್ಯಾಭ್ಯಾಸವಿಲ್ಲದವರಿಗಿಂತ ತಾವೇ ಹೆಚ್ಚಾಗಿ ಜನ ಸಂಪರ್ಕದಿಂದ ದೂರವಾಗಿರುತ್ತಾರೆ. ನಮ್ಮ ದೇಶದ ರಾಷ್ಟ್ರೀಯ ಸಾಹಿತ್ಯ, ವಾಸ್ತು, ದರ್ಶನಗಳು, ಸಿದ್ಧಾಂತಗಳಲ್ಲಿ ಮಿಗಿಲಾದ ಆಸಕ್ತಿಯನ್ನೂ ಇಂಗ್ಲಿಷ್ ಕಲಿಯದ ಜನರ ಭಾವನೆಗಳ ಆಶೋತ್ತರಗಳ ವಿಷಯದಲ್ಲಿ ಸಹಾನುಭೂತಿಯನ್ನೂ ಅವರು ತೋರಿಸಬೇಕು. ಇಂಗ್ಲಿಷ್ ವಿದ್ಯೆ ಬರಡಾಗಿ ವ್ಯರ್ಥವಾಗುವುದನ್ನು ತಡೆಯಬೇಕಾದರೆ, ದೇಶಭಾಷೆಯ ವ್ಯಾಸಂಗ ಸಾಂಗವಾಗಿ ನಡೆಯಬೇಕು' ಹೀಗೆ ಇಂಗ್ಲಿಷ್ ವ್ಯಾಮೋಹಕ್ಕೆ ಕಡಿವಾಣ ಹಾಕುವ ಅನೇಕ ಪ್ರಯತ್ನಗಳು ಚರಿತ್ರೆಯಲ್ಲಿ ದಾಖಲಾಗಿವೆ. ೧೯೬೩ರ ರಾಜಭಾಷಾ ಅಧಿನಿಯಮ ಜಾರಿಗೆ ಬಂದ ನಂತರದಲ್ಲಿ ಎಲ್ಲ ಆಡಳಿತ ಕ್ಷೇತ್ರಗಳಲ್ಲಿರುವಂತೆ ಶಿಕ್ಷಣ ಕ್ಷೇತ್ರದ ಆಡಳಿತದಲ್ಲೂ ಕನ್ನಡವೇ ಪ್ರಧಾನಭಾಷೆಯಾಗಿರುವುದು ಗಮನಾರ್ಹ.

ಒಂದು ಬೋಧನಾ ವಿಷಯವಾಗಿ ಕನ್ನಡಕ್ಕೆ ಸೂಕ್ತಸ್ಥಾನ ದೊರಕಿಸಿಕೊಡುವುದರಲ್ಲಿಯೂ ಚಳವಳಿಯಂತಹ ಪ್ರಯತ್ನಗಳು ನಡೆದಿವೆ. ಒಂದರಿಂದ ಹತ್ತನೆ ತರಗತಿಯವರೆಗೂ ಕನ್ನಡ ಕಡ್ಡಾಯ ಭಾಷೆಯಾಗಿದೆ. ಪ್ರಧಾನ ಭಾಷೆಯಾಗಿದೆ. ಎರಡನೆ ಭಾಷೆಯ ಸ್ಥಾನ ಪಡೆದಿದ್ದ ಕನ್ನಡ ಈಗ ಮೊದಲ ಭಾಷೆಯಾಗಿಯೇ ಪರಿಗಣಿತವಾಗಿರುವುದೂ ಗಮನಾರ್ಹ.

ಬೋಧನಾ ಮಾಧ್ಯಮವಾಗಿಯೇ ಕನ್ನಡವನ್ನು ಬಳಸಬೇಕು ಎನ್ನುವುದೇ ಬಹುಚರ್ಚಿತವೂ ಆಂದೋಲನಗಳಿಗೆ ಎಡೆಮಾಡಿಕೊಟ್ಟ ವಿಚಾರವೂ ಆಯಿತೆನ್ನುವುದು ನಿರ್ವಿವಾದ. ಶಿಕ್ಷಣ ಮಾಧ್ಯಮವಾಗಿ ಉಳಿಯದ ಭಾಷೆ ಒಂದು ಭಾಷೆಯಾಗಿಯೇ ತನ್ನ ಅಸ್ತಿತ್ವನ್ನು ಕಳೆದುಕೊಳ್ಳುತ್ತದೆ ಎಂಬ ಕೂಗು ಭುಗಿಲೆದ್ದು ಭಾರಿ ಚಳವಳಿಯೇ ನಡೆದಿರುವುದು ಇತಿಹಾಸದ ಭಾಗವಾಗಿದೆ. ಪ್ರಾಥಮಿಕ, ಮಾಧ್ಯಮಿಕ, ಪ್ರೌಢ, ವೃತ್ತಿಪರ ಶಿಕ್ಷಣ ಹೀಗೆ ಹಲವು ಹಂತಗಳಲ್ಲಿ ಕನ್ನಡ ಮಾಧ್ಯಮವಿರಬೇಕು ಎಂಬ ಹಲವು ಬಗೆಯ ಅಭಿಪ್ರಾಯಗಳು ಈಗಲೂ ಇರುವುದು ಗಮನಾರ್ಹ.

ಪಠ್ಯೇತರ ಚಟುವಟಿಕೆಗಳು, ಸಾಂಸ್ಕೃತಿಕ ಕಾರ್ಯಕ್ರಮಗಳು, ಪ್ರತಿಭಾ ಪ್ರದರ್ಶನ ಮತ್ತು ಕ್ರೀಡಾ ಚಟುವಟಿಕೆಗಳ ಸಂದರ್ಭದಲ್ಲೂ ಶಾಲಾ ಶಿಕ್ಷಕರು ಹಾಗೂ ವಿದ್ಯಾರ್ಥಿಗಳು ಪರಸ್ಪರ ಕನ್ನಡದಲ್ಲೇ ವ್ಯವಹರಿಸುವ, ಕನ್ನಡದ ಕಾರ್ಯಕ್ರಮಗಳಿಗೇ ಪ್ರಾಶಸ್ತ್ಯ ನೀಡುವ ಕೆಲಸ ಮಾಡಬೇಕು. ಹಾಗಾದಾಗ ಮಾತ್ರ ಶಾಲೆಗಳಲ್ಲಿ ಕನ್ನಡದ ಬಳಕೆಯನ್ನು ಸಂಪೂರ್ಣವಾಗಿ ಮಾಡಿದಂತಾಗುತ್ತದೆ.

ಹುಟ್ಟಿನಿಂದಲೇ ಕನ್ನಡಿಗರ ಮಾತೃಭಾಷೆಯಾದ ಕನ್ನಡ ಭಾಷಾ ಮಾಧ್ಯಮದಲ್ಲೇ ವಿದ್ಯಾಭ್ಯಾಸ ಕೊಡಿಸುವುದರಿಂದ ಈ ನೆಲದ ಸಂಸ್ಕೃತಿ, ಸಂಸ್ಕಾರ, ಆಲೋಚನಾ ವಿಧಾನ, ಜೀವನ ನಡೆಸುವ ವೈಖರಿ ಎಲ್ಲವೂ ಮಕ್ಕಳಲ್ಲಿ ಅಂತರ್ಗತವಾಗುತ್ತವೆ. ಆದ್ದರಿಂದಲೇ ಪ್ರಪಂಚದ ಅನೇಕ ಶಿಕ್ಷಣ ತಜ್ಞರು, ಚಿಂತಕರು ಪ್ರಾಥಮಿಕ ಶಿಕ್ಷಣವನ್ನು ಆಯಾ ಪ್ರದೇಶದ ಮಾತೃಭಾಷೆಯಲ್ಲಿಯೇ ನೀಡಬೇಕೆಂದು ಒತ್ತಿ ಹೇಳಿದ್ದಾರೆ.

ಕರ್ನಾಟಕದ ಸಂದರ್ಭದಲ್ಲಿ ಕನ್ನಡವೇ ರಾಜ್ಯದ ಅಧಿಕೃತ ಭಾಷೆ. ಇಲ್ಲಿಯ ಬಹುಸಂಖ್ಯಾತರ ಮಾತೃಭಾಷೆ. ಇಲ್ಲಿನ ಭಾಷಾ ಅಲ್ಪಸಂಖ್ಯಾತರಿಗೆ ತಮ್ಮ ಮಾತೃಭಾಷೆಯಲ್ಲಿ ಕಲಿಯುವ ಹಕ್ಕಿದ್ದರೂ ಪಠ್ಯಕ್ರಮದ ಒಂದು ಭಾಗವಾಗಿ ಕನ್ನಡವನ್ನೂ ಅವರು ಕಲಿಯಬೇಕಾದ್ದು ಅನಿವಾರ್ಯವೂ ಆಗಿದೆ. ಒಂದು ಬೋಧನಾ ವಿಷಯವಾಗಿ ಕನ್ನಡಕ್ಕೆ ಕೊಟ್ಟಿರುವ ಸ್ಥಾನವನ್ನು ಈ ಮೂಲಕ ಗುರುತಿಸಬಹುದಾಗಿದೆ.

೧೯೮೨ರಲ್ಲಿ ಗೋಕಾಕ್ ನೇತೃತ್ವದ ಸಮಿತಿ ಸಲ್ಲಿಸಿದ ವರದಿಯನ್ನಾಧರಿಸಿ, 'ಪ್ರೌಢಶಾಲಾ ಹಂತದಲ್ಲಿ ಕನ್ನಡವೇ ಏಕೈಕ ಪ್ರಥಮ ಭಾಷೆಯಾಗತಕ್ಕದ್ದೆಂದೂ ಹಾಗೂ ಈ ಆದೇಶದಲ್ಲಿ ತಿಳಿಸಿರುವಂತೆ, ಕನ್ನಡವೂ ಸೇರಿದಂತೆ ೧೦ ಭಾಷೆಗಳ ಪೈಕಿ ಇತರ ಎರಡು ಭಾಷೆಗಳನ್ನು ವಿದ್ಯಾರ್ಥಿಗಳು ಕಲಿಕೆಗಾಗಿ ಆಯ್ಕೆ ಮಾಡಿಕೊಳ್ಳಬಹುದೆಂದೂ ಕನ್ನಡೇತರ ಶಾಲೆಗಳಲ್ಲಿ ಪ್ರಾಥಮಿಕ ಶಿಕ್ಷಣದ ಪ್ರಥಮ ವರ್ಷದಿಂದಲೇ ಕನ್ನಡ ಬೋಧನೆ ಕಡ್ಡಾಯವಾಗತಕ್ಕದ್ದು' ಎಂದೂ ಸೂಚಿಸಲಾಯಿತು. ಈ ವಿಚಾರದಲ್ಲಿ ಸ್ವಲ್ಪ ಕಾಲ ಕಾನೂನು ಸಮರ ನಡೆಯಿತಾದರೂ, ೧೯೯೩ರಲ್ಲಿ ಸರ್ವೋಚ್ಚ ನ್ಯಾಯಾಲಯ 'ಭಾಷಾ ನೀತಿಯನ್ನು ಹೇಗೆ ಪರಿಣಾಮಕಾರಿಯಾಗಿ ಜಾರಿಗೊಳಿಸಬೇಕೆಂದು ರಾಜ್ಯಕ್ಕೆ ತಿಳಿದಿದೆ. ಈ ವಿಚಾರದಲ್ಲಿ ನ್ಯಾಯಾಲಯ ಹಸ್ತಕ್ಷೇಪ ಮಾಡಬಾರದು' ಎಂದು ಅಭಿಪ್ರಾಯಪಟ್ಟಿತು. ನಂತರ ೧೯೯೪ರ ಆದೇಶದಲ್ಲಿ ಸರ್ಕಾರ ಈ ಮುಂದಿನ ಅಂಶಗಳನ್ನು ಉಲ್ಲೇಖಿಸಿದೆ :

- ೧ ರಿಂದ ೪ನೇ ತರಗತಿಯವರೆಗೆ ಮಾತೃಭಾಷೆಯೇ ಶಿಕ್ಷಣ ಮಾಧ್ಯಮವಾಗಿರುತ್ತದೆ. ಕನ್ನಡೇತರ ವಿದ್ಯಾರ್ಥಿಗಳಿಗೆ ೩ನೇ ತರಗತಿಯಿಂದ ಕನ್ನಡವನ್ನು ಐಚ್ಛಿಕವಾಗಿ ಕಲಿಸಬಹುದು. ಆದರೆ ಪರೀಕ್ಷೆ ಇರುವುದಿಲ್ಲ.

- ೫ನೇ ತರಗತಿಯಿಂದ ೩ನೇ ಭಾಷೆಯನ್ನು ಜಾರಿಗೆ ತರಲಾಗುವುದು. ಒಂದು ಮತ್ತು ಎರಡನೆ ಭಾಷೆಯನ್ನು ಬಿಟ್ಟು ಮೂರನೇ ಭಾಷೆಯನ್ನು ಇಲ್ಲಿ ಆಯ್ಕೆ ಮಾಡಿಕೊಳ್ಳಬಹುದು. ಆದರೆ ಉತ್ತೀರ್ಣರಾಗುವುದು ಕಡ್ಡಾಯವಲ್ಲ.
- ಪ್ರೌಢಶಾಲಾ ಹಂತದಲ್ಲಿ ಮೂರು ಭಾಷೆಗಳನ್ನು ಕಲಿಸಲಾಗುವುದು. ಕನ್ನಡದಲ್ಲಿ ಉತ್ತೀರ್ಣರಾಗುವುದು ಕಡ್ಡಾಯ.
- ೫ನೇ ತರಗತಿಯಿಂದ ವಿದ್ಯಾರ್ಥಿಗಳ ಮಾತೃಭಾಷೆಗೆ ಹೊರತಾದ ಭಾಷಾ ಮಾಧ್ಯಮವನ್ನು ಆಯ್ಕೆ ಮಾಡಿಕೊಳ್ಳಬಹುದು. ಇಲ್ಲಿ ಮಾತೃಭಾಷಾ ಮಾಧ್ಯಮ ಕಡ್ಡಾಯವಲ್ಲ.

ಈ ಆದೇಶದ ವಿರುದ್ಧವೂ ಖಾಸಗಿ ಶಿಕ್ಷಣ ಸಂಸ್ಥೆಗಳು ನ್ಯಾಯಾಲಯದ ಮೆಟ್ಟಲೇರಿದರೂ ಅದು ಅಲ್ಲಿ ನಿಲ್ಲಲಿಲ್ಲ. ಆದರೆ ಈವರೆಗೂ (೨೦೦೧) ೧೯೯೪ರ ಆದೇಶವನ್ನು ಅನೇಕ ಆಂಗ್ಲ ಮಾಧ್ಯಮ ಶಾಲೆಗಳು ಅಳವಡಿಸಿಕೊಂಡಿಲ್ಲವೆಂದು ತಿಳಿದು ಬಂದಿದೆ. ಈ ಹಿನ್ನೆಲೆಯಲ್ಲಿಯೇ ಪ್ರಸ್ತುತ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಬರಗೂರು ರಾಮಚಂದ್ರಪ್ಪ ಶಿಕ್ಷಣ ಮತ್ತು ಮಾಧ್ಯಮ ಕುರಿತಂತೆ ಸರ್ಕಾರಕ್ಕೆ ಸಲ್ಲಿಸಿರುವ ನೀತಿ ನಿರೂಪಣಾ ವರದಿಯಲ್ಲಿ (ಜನವರಿ ೨೦೦೧) ೧೫ ಪ್ರಮುಖ ಶಿಫಾರಸ್ಸುಗಳನ್ನು ಮಾಡಿದ್ದಾರೆ. ಇವುಗಳು ಶಿಫಾರಸ್ಸುಗಳ ರೂಪದಲ್ಲೇ ಉಳಿಯದೆ ಕಾರ್ಯರೂಪಕ್ಕೆ ಬರುವುದನ್ನು ಕಾದು ನೋಡಬೇಕಾಗಿದೆ.

**ಕಾನೂನು ಮತ್ತಿತರ ವ್ಯಾವಹಾರಿಕ ಕ್ಷೇತ್ರಗಳು :** ಭಾರತದ ಸಂವಿಧಾನದಲ್ಲಿ ಉಲ್ಲೇಖಿಸಿರುವ ಅಧಿಕೃತ ಭಾಷೆಗಳ ಪೈಕಿ ಕನ್ನಡವೂ ಒಂದು. ಸಂವಿಧಾನದ ೩೪೩(೨) ಅನುಚ್ಛೇದದ ಪ್ರಕಾರ ಆಡಳಿತ ಇಲಾಖೆಗಳು ಹಾಗೂ ನ್ಯಾಯಾಲಯಗಳಲ್ಲಿ ಪ್ರಾದೇಶಿಕ ಭಾಷೆಗಳನ್ನು ಬಳಸುವಂತೆ ಸೂಚಿಸಲಾಗಿದೆ. ಅಂದರೆ ನ್ಯಾಯಾಲಯಗಳ ವ್ಯವಹಾರಗಳಲ್ಲಿ ಬಳಸುವ ಭಾಷೆಯೂ ಆಯಾ ಪ್ರಾದೇಶಿಕ ಭಾಷೆಯೇ ಆಗಿರಬೇಕು ಎನ್ನುವುದಕ್ಕೂ ಸುಭದ್ರವಾದ ಕಾನೂನೇ ಇರುವುದು ಗಮನಾರ್ಹ. ಎಲ್ಲ ಸಂದರ್ಭಗಳಲ್ಲೂ ಗುರುತಿಸಿರುವಂತೆ ನ್ಯಾಯಾಲಯಗಳ ಆಡಳಿತ ವಿಚಾರಗಳಲ್ಲೂ ಕನ್ನಡವನ್ನೇ ಬಳಸಬೇಕಾದ ನಿಯಮವೂ ಇದಾಗಿದೆ.

ನ್ಯಾಯಾಂಗ ವಿಚಾರಣೆಯಲ್ಲಿ ಖಚಿತತೆ ಇರಬೇಕಾಗುತ್ತದೆ. ಜನರ ಅಹವಾಲು, ಕುಂದುಕೊರತೆಗಳನ್ನು ಕೇಳಿ, ಅವರ ಕಷ್ಟನಷ್ಟಗಳ ನಿವಾರಣೆಯ ನಿಟ್ಟಿನಲ್ಲಿ ನ್ಯಾಯ ಒದಗಿಸುವ ಸೇವೆ ನೀಡಬೇಕಾದ್ದೇ ನ್ಯಾಯಾಲಯಗಳ ಹೊಣೆಯೂ ಆಗಿರುವುದರಿಂದ ಸಾಧಾರಣವಾಗಿ ಜನರಿಗೆ ಅರ್ಥವಾಗುವ ಭಾಷೆಯಲ್ಲಿ ಕಾರ್ಯಕಲಾಪಗಳು ನಡೆಯಬೇಕು. ನ್ಯಾಯಾಲಯದ ಒಳ ಆಡಳಿತದಲ್ಲಿ ಕನ್ನಡವನ್ನೇ ಬಳಸುವುದಾದರೆ ಆ ವಲಯಕ್ಕೆ ಬೇಕಾದ ಪಾರಿಭಾಷಿಕ ಶಬ್ದಗಳು ಸೃಷ್ಟಿಗೊಳ್ಳುವುದು ಸಾಧ್ಯ. ಕಾನೂನಿನ್ವಯ ರೂಪಿಸಲಾದ ನಿಯಮಗಳನ್ನು ಕನ್ನಡದಲ್ಲೇ ರಚಿಸುವುದರಿಂದ, ಆಡಳಿತವನ್ನು ಕನ್ನಡದಲ್ಲೇ ನಡೆಸುವುದರಿಂದ, ನ್ಯಾಯಾಲಯದ ಕಾರ್ಯಗಳಲ್ಲಿ ಪಾರದರ್ಶಕತೆ ಹೆಚ್ಚುತ್ತದೆ. ನ್ಯಾಯಾಲಯಗಳಲ್ಲಿ ಪ್ರಾದೇಶಿಕ ಭಾಷೆಯನ್ನು ಬಳಸಲು ಒತ್ತಾಯಿಸುವುದರ ಮುಖ್ಯ ಕಾರಣವೆಂದರೆ ನ್ಯಾಯಾಲಯಗಳಲ್ಲಿ ನಡೆಯುವ ವಾದ-ಪ್ರತಿವಾದಗಳನ್ನು ಕಕ್ಷಿದಾರ ವಾಸ್ತವವಾಗಿ ತಿಳಿಯುವುದು ಸಾಧ್ಯವಾಗುತ್ತದೆ ಎನ್ನುವುದು. ಜೊತೆಗೆ ನ್ಯಾಯಾಡಳಿತ ನಡೆಯುವ ಬಗೆಯನ್ನು ಜನರು ತಿಳಿದುಕೊಳ್ಳುವುದೂ ಸಾಧ್ಯವಾಗುತ್ತದೆ.

ಭಾರತದಂತಹ ಅಭಿವೃದ್ಧಿಶೀಲ ದೇಶದಲ್ಲಿ ಸಾಮಾಜಿಕ-ಆರ್ಥಿಕ ಬದಲಾವಣೆಯನ್ನು ಸಾಧಿಸುವ ಕಾರಣಕ್ಕಾಗಿಯೇ ಕಾನೂನುಗಳು ರಚಿತವಾಗುವುದರಿಂದ, ಪ್ರಾದೇಶಿಕ ಭಾಷೆಗಳಲ್ಲೇ ವ್ಯವಹಾರ ನಡೆಸಬೇಕಾದ ಅವಶ್ಯಕತೆಯಿದೆ. ೧೯೫೫ರಲ್ಲಿ ಸ್ವತಂತ್ರ ಭಾರತದ ಭಾಷಾ ಸಮಸ್ಯೆಗಳನ್ನು ಪರಾಮರ್ಶಿಸಿದ ಖೇರ್ ಆಯೋಗ ರಾಷ್ಟ್ರದ ಹಿತಾಸಕ್ತಿಗೆ ಬಾಧಕವಾಗದಂತಹ ಎಲ್ಲ ವಿಷಯಗಳಲ್ಲೂ ಇಂಗ್ಲಿಷ್ ಭಾಷೆಗೆ ಬದಲಾಗಿ ಭಾರತೀಯ ಭಾಷೆಗಳನ್ನು ಬಳಸುವಂತೆ ಶಿಫಾರಸ್ಸು ಮಾಡಿರುವುದು

ಗಮನಾರ್ಹ. ನ್ಯಾಯಾಂಗ ವ್ಯವಹಾರಗಳಲ್ಲಿ ಕನ್ನಡದ ಬಳಕೆ ಹೆಚ್ಚಾಗಬೇಕಾದರೆ ಪಾರಿಭಾಷಿಕ ಶಬ್ದಗಳ ರಚನೆ ಮತ್ತು ಬಳಕೆ ಹೆಚ್ಚಾಗಬೇಕು. ಅಂದಮಾತ್ರಕ್ಕೆ ಕನ್ನಡದ ಪಾರಿಭಾಷಿಕ ಶಬ್ದಗಳನ್ನು ಮಾತ್ರ ಬಳಸಬೇಕೆಂಬ ಮಡಿವಂತಿಕೆಯೂ ಬೇಕಿಲ್ಲ. ಸೂಕ್ತ ಪಾರಿಭಾಷಿಕ ಪದಗಳನ್ನು ಸೃಷ್ಟಿಸಲಾಗದಿದ್ದರೆ ಭಾಷಾಂತರ ಮಾಡುವುದಕ್ಕಿಂತ ಅನ್ಯದೇಶೀಯ ಪದಗಳನ್ನೇ ಕನ್ನಡದಲ್ಲಿ ಬರೆಸಿಕೊಳ್ಳಲೂಬಹುದು.

ಕಾನೂನು ಎನ್ನುವುದು ಜನ ಸಾಮಾನ್ಯರಿಗಾಗಿಯೇ ಆಗುವುದರಿಂದ ಅವರದನ್ನು ಸುಲಭವಾಗಿ ಅರ್ಥ ಮಾಡಿಕೊಳ್ಳುವ ಭಾಷೆ ಮತ್ತು ಶೈಲಿಯಿದ್ದರೆ ಒಳ್ಳೆಯದು. ಉದಾಹರಣೆಗೆ ಸಂಚಾರಿ ನಿಯಮಗಳನ್ನು ಕನ್ನಡೇತರ ಭಾಷೆಯಲ್ಲಿ ಬರೆಸಿ ಹಾಕಿದರೆ, ಕನ್ನಡಿಗ ಅದನ್ನು ಓದಿ ಅರ್ಥ ಮಾಡಿಕೊಳ್ಳುವುದಿರಲಿ, ಅದರತ್ತ ದೃಷ್ಟಿ ಹಾಯಿಸಲೂ ಹೋಗುವುದಿಲ್ಲ. ಆ ನಿಯಮ ಅರ್ಥವೇ ಆಗದೆ ಹೋದರೆ ಅದನ್ನು ಪಾಲಿಸುವುದಾದರೂ ಹೇಗೆ? ತಿಳುವಳಿಕೆಯೇ ಮೂಡದೆ ನಿಯಮವನ್ನು ಉಲ್ಲಂಘಿಸಲೂಬಹುದು. ಅಂದಮೇಲೆ ಆ ನಿಯಮ ರೂಪಿಸಿದ್ದುದರ ಹಿಂದಿನ ಉದ್ದೇಶವೇ ಸೋತಂತಾಗುತ್ತದೆ. ಕಾನೂನಿನ ಅಜ್ಞಾನ ಅಕ್ಷಮ್ಯ ಎಂದೂ ಹೇಳಲಾಗಿದೆ. ಆದ್ದರಿಂದಲೇ ರಚಿಸಿದ ಕಾನೂನು, ನೀತಿ-ನಿಯಮ-ನಿಬಂಧನೆಗಳು ಜನರ ಅರಿವಿಗೆ ಬರಬೇಕಾದರೆ ಅದನ್ನು ಕನ್ನಡದಲ್ಲೇ ರಚಿಸಬೇಕು. ನ್ಯಾಯಾಂಗದ ಒಳಾಡಳಿತ, ಪತ್ರ ವ್ಯವಹಾರ, ಜಾರಿಯಾಗುವ ನೋಟೀಸು, ಆದೇಶ, ನಡಾವಳಿ, ತೀರ್ಪು-ತೀರ್ಮಾನ, ಸಿಬ್ಬಂದಿಯೊಂದಿಗೆ ವ್ಯವಹಾರ, ಸಾರ್ವಜನಿಕರೊಂದಿಗೆ ವ್ಯವಹಾರ ಎಲ್ಲವೂ ಕನ್ನಡದಲ್ಲಿ ಆಗಬೇಕು.

ಇದೇ ರೀತಿ ಸಾಮಾನ್ಯ ಜನಜೀವನದ ಎಲ್ಲ ವ್ಯಾವಹಾರಿಕ ರಂಗಗಳಲ್ಲಿ ಮನೆಮಾತು, ಅಂದರೆ ಬಹುಸಂಖ್ಯಾತ ಕನ್ನಡಿಗರಿರುವ ಕರ್ನಾಟಕದಲ್ಲಿ ಕನ್ನಡವೇ ಬಳಕೆಯಾಗುವುದು ಹೆಚ್ಚು ಸೂಕ್ತ ಹಾಗೂ ಅರ್ಥಪೂರ್ಣ. ಭಾಷೆ ಹುಟ್ಟಿ ಬೆಳೆದಿರುವುದೇ ಸಮಾಜದೊಳಗಿನ ವ್ಯವಹಾರಕ್ಕೆ ಎಂದು ಸ್ಪಷ್ಟವಾದ ಮೇಲೂ ದೈನಂದಿನ ವ್ಯವಹಾರದಲ್ಲಿ ಸಮಾಜದ ಮೂಲಭಾಷೆಯನ್ನೇ ಬಳಸಿ ಎಂದು ಹೇಳಿಕೊಡಬೇಕೆ? ವ್ಯವಹಾರ ಸುಗಮವಾಗಬೇಕಾದರೆ, ಸಂವಹಿತವಾಗಬೇಕಾದರೆ, ಸಾರ್ವಜನಿಕರು ಬಲ್ಲ ಭಾಷೆಯಲ್ಲೇ ಅದು ಸಾಗಬೇಕು ಎನ್ನುವುದು ಸಹಜ ನಿಯಮ. ಅಂಗಡಿ ಮುಂಗಟ್ಟುಗಳಲ್ಲಿ, ಪೇಟೆ ಪರಿಷೆಗಳಲ್ಲಿ, ರೈಲು-ಬಸ್ಸು-ಸಂಚಾರ ಸಾರಿಗೆಗಳಲ್ಲಿ, ವಿಮೆ-ಬ್ಯಾಂಕು, ಅಂಚೆ ಕಛೇರಿಗಳಲ್ಲಿ, ಜನಸೇವಾ ಕೇಂದ್ರಗಳಲ್ಲಿ ಅಂದರೆ ಒಬ್ಬ ಸಾಮಾನ್ಯ ವ್ಯಕ್ತಿ ತನ್ನ ಕೆಲಸಗಳಿಗಾಗಿ ಹೋಗಬಹುದಾದ ಎಲ್ಲ ಕಡೆಯೂ ಅವನಿಗೆ ಬರುವ ಭಾಷೆ ಬಳಕೆಯಾಗಬೇಕು. ಅವನು ಅವನ ಭಾಷೆಯಲ್ಲಿ ಹೇಳಿದಂತೆಯೇ ಅವನಿಗೆ ಉತ್ತರಿಸುವವನೂ ಅವನ ಭಾಷೆಯನ್ನೇ ಬಳಸಬೇಕು. ಆಗ ಸಂವಹನೆಯೂ ಸುಲಭ. ಕನ್ನಡವೂ ಬಳಕೆಯಾದಂತಾಗುತ್ತದೆ. ಕರ್ನಾಟಕದಲ್ಲಿ ಕನ್ನಡವೇ ಜನಭಾಷೆಯೂ ಅಧಿಕೃತ ಭಾಷೆಯೂ ಆಗಿರುವುದರಿಂದ ಇಲ್ಲಿ ಕನ್ನಡವೇ ಬಳಕೆಯಾಗಬೇಕು ಎನ್ನುವ ಒತ್ತಾಯ ದುರುದ್ದೇಶದ್ದಲ್ಲ.

## ಸೃಜನಶೀಲ ಸಾಹಿತ್ಯ ರಚನೆ ಮತ್ತು ಪ್ರಕಾಶನ

ಈ ವಲಯವೂ ಕನ್ನಡ ಭಾಷಾ ಬೆಳವಣಿಗೆಯಲ್ಲಿ ಮಹತ್ವದ ಪಾತ್ರವಹಿಸುತ್ತದೆ. ಸೃಜನಶೀಲ ಸಾಹಿತ್ಯ ಎನ್ನುವುದೇ ಸೃಷ್ಟಿಶೀಲತೆಯನ್ನು ಬಿಂಬಿಸುತ್ತದೆ. ಹಾಗೆ ನೋಡಿದರೆ ಜನಸಾಮಾನ್ಯರ ಆಡುನುಡಿಗೆ ಸಮೀಪವಾದ, ಅದಕ್ಕೆ ಒಗ್ಗುವ ಹಾಗೂ ಹೊಂದುವ ಭಾಷೆ ಸೃಷ್ಟಿಯಾಗುವುದೇ ಈ ಕ್ಷೇತ್ರದಲ್ಲಿ. ಆಡಳಿತ ಅಥವಾ ಶಿಕ್ಷಣ ಕ್ಷೇತ್ರದ ಭಾಷೆಯಂತಲ್ಲದೆ ಸಂವಹನಶೀಲತೆಯನ್ನೇ ಪರಮಗುರಿಯನ್ನಾಗಿಸಿಕೊಂಡ ಕ್ಷೇತ್ರ ಇದು. ಲೇಖಕ/ಲೇಖಕಿ ಬರೆಯುವುದೇ ತನ್ನ ಸಹೃದಯನಿಗೆ ತಿಳಿಸಬೇಕು, ಬೇರೊಬ್ಬರು ತನ್ನ ಚಿಂತೆ - ಚಿಂತನೆಗಳನ್ನು ಅರ್ಥ ಮಾಡಿಕೊಳ್ಳಬೇಕು, ಅಥವಾ ತನಗನಿಸಿದ್ದನ್ನು ಇನ್ನೊಬ್ಬರಲ್ಲಿ

ಹೇಳಿಕೊಳ್ಳಬೇಕು ಎಂಬ ಮನೋಭಾವದಿಂದಲೇ. ಅಂದಮೇಲೆ ಬರವಣಿಗೆಯ ಪ್ರಯತ್ನವೇ ಸರಳ ಅಭಿವ್ಯಕ್ತಿ ಕ್ರಮವಾಗಿರುತ್ತದೆ. ಬರಹಗಾರ ತನಗೆ ತಿಳಿದ ಸರಳ, ನೇರ ಭಾಷೆಯಲ್ಲಿ ಹೇಳುವುದಲ್ಲದೆ, ತನ್ನ ಸಹೃದಯ ಯಾರಾಗಬೇಕು ಎಂದೂ ನಿರ್ಣಯಿಸಿ ಅವನಿಗೂ ತಿಳಿಯುವ ಭಾಷೆಯಲ್ಲಿ ಹೇಳಿರುತ್ತಾನೆ. ಹಾಗಾಗಿ ಈ ಕ್ಷೇತ್ರ ಭಾಷೆಯ ಅನೇಕ ಹೊಸ ಪ್ರಯೋಗ, ಪ್ರಯತ್ನಗಳಿಗೆ ದಾರಿ ಮಾಡಿಕೊಡುತ್ತದೆ.

ಸೃಜನಶೀಲ ಸಾಹಿತ್ಯದ ಸಂದರ್ಭದಲ್ಲಿ ಎರಡು ಬಗೆಯ ಪ್ರಸರಣವನ್ನು ಕಾಣಬಹುದು. ಒಂದು, ಬರಹಗಾರನ ಅಭಿವ್ಯಕ್ತಿ ಸಾಹಿತ್ಯ ಕೃತಿಯಾಗಿ ರೂಪುಗೊಳ್ಳುವುದು. ಇನ್ನೊಂದು ಪುಸ್ತಕ ರೂಪದಲ್ಲಿ ಅದು ಓದುಗರ ಕೈ ಸೇರುವುದು. ಮೊದಲನೆಯದು ಏಕವ್ಯಕ್ತಿ ಪ್ರಯತ್ನ. ಆದರೆ ಎರಡನೆಯದಕ್ಕೆ ಪ್ರಕಾಶಕರು, ಮುದ್ರಕರು, ಮಾರಾಟಗಾರರು, ಗ್ರಂಥಾಲಯ, ಸರ್ಕಾರ, ಎಲ್ಲರೂ ಸಹಾಯಹಸ್ತ ನೀಡಬೇಕಾಗುತ್ತದೆ. ಉದಾಹರಣೆಗೆ ಕನ್ನಡದ ಶ್ರೇಷ್ಠ ಕೃತಿಯೊಂದು ಪುಸ್ತಕೋದ್ಯಮದ ಅನೇಕ ತೊಡಕುಗಳಿಂದಾಗಿ ಓದುಗರನ್ನು ತಲುಪದೆ ಹೋದರೆ, ಅದರಲ್ಲಿರಬಹುದಾದ ಭಾಷಿಕವಾದ ಹೊಸ ಆಲೋಚನೆಗಳು ಜನರನ್ನು ಸೇರುವುದಾದರೂ ಹೇಗೆ? ಅವರು ಅದನ್ನು ಬಳಸುವ ಬಗೆಯಾದರೂ ಹೇಗೆ? ಎನ್ನುವ ಬಗ್ಗೆಯೂ ಯೋಚಿಸಿದಾಗಲೇ ಪುಸ್ತಕಗಳ ಪ್ರಸರಣಕ್ಕೆ ಅಥವಾ ಮಾರಾಟಕ್ಕೆ ಹೆಚ್ಚಿನ ಪ್ರಾಶಸ್ತ್ಯ ಬರುತ್ತದೆ.

ಸರ್ಕಾರ ಈ ನಿಟ್ಟಿನ ಪ್ರಯತ್ನವಾಗಿ 'ಕನ್ನಡ ಪುಸ್ತಕ ಪ್ರಾಧಿಕಾರ'ವನ್ನು ಸ್ಥಾಪಿಸಿದೆ. ಅದಕ್ಕೂ ಮೊದಲೇ ಅನೇಕ ಖಾಸಗಿ ಪ್ರಕಾಶನ ಸಂಸ್ಥೆಗಳು ಕನ್ನಡ ಪುಸ್ತಕಗಳ ಹೊಣೆ ಹೊತ್ತಿರುವುದು ತಿಳಿದಿರುವ ವಿಚಾರ. ಇತ್ತೀಚಿನ ದಿನಗಳಲ್ಲಿ ಗ್ರಂಥಾಲಯದ ಕಾರ್ಯಸ್ವರೂಪವನ್ನು ಬದಲಾಯಿಸಿರುವ ಸರ್ಕಾರ ಅದನ್ನು ಆರ್ಥಿಕವಾಗಿ ದೃಢಗೊಳಿಸಿ, ಸೃಜನಶೀಲ ಸಾಹಿತ್ಯ ಕೃತಿಗಳಿಗೆ ಮಾರುಕಟ್ಟೆ ಸೌಲಭ್ಯ ಒದಗಿಸಿದ್ದರೂ ಅದು ಸಾಕಾಗುತ್ತಿಲ್ಲ ಎಂದು ತೋರಿಬರುತ್ತಿದೆ. ಪುಸ್ತಕ ಖರೀದಿ ವಿಷಯದಲ್ಲಿ ಸಾರ್ವಜನಿಕರೂ ಪಾಲ್ಗೊಳ್ಳಬೇಕಾಗಿರುವುದೂ ಮುಖ್ಯ. ಅಪಾರ ಸಂಖ್ಯೆಯಲ್ಲಿ ಕನ್ನಡ ಪುಸ್ತಕಗಳು ಪ್ರಕಟಗೊಳ್ಳುತ್ತಿದ್ದರೂ ಅವು ಜನರ ಕೈ ಸೇರದಿರುವುದಕ್ಕೆ ಪುಸ್ತಕದ ಗುಣಮಟ್ಟ, ಪ್ರಚಾರದ ಕೊರತೆ, ಜನರ ನಿರುತ್ಸಾಹ ಇವೂ ಕಾರಣ ಎಂದು ಗುರುತಿಸಬಹುದಾಗಿದೆ.

## ಸಂವಹನ ಮಾಧ್ಯಮಗಳ ಮೂಲಕ

ಜನರನ್ನು ನೇರವಾಗಿ ತಲುಪುವ ಶಕ್ತಿ ಇರುವುದೇ ಸಂವಹನ ಮಾಧ್ಯಮಗಳಿಗೆ. ಸಂಖ್ಯೆಯಲ್ಲಿ ಕನ್ನಡಿಗರೇ ಅಧಿಕವಾಗಿರುವ ನಾಡಿನಲ್ಲಿ ಹಿಂದಿ, ಉರ್ದು, ಇಂಗ್ಲಿಷ್ ಮತ್ತಿತರ ಕನ್ನಡೇತರ ಭಾಷೆಗಳಲ್ಲಿ ಕಾರ್ಯಕ್ರಮಗಳನ್ನು ಪ್ರಸಾರ ಮಾಡಿದರೆ ಅವು ಎಷ್ಟು ಯಶಸ್ವಿಯಾಗಬಹುದು ಎಂಬಂಶವೇ ಕನ್ನಡದ ಕಾರ್ಯಕ್ರಮಗಳು ಸಾಧಿಸಬಹುದಾದ ಯಶಸ್ಸನ್ನು ತಿಳಿಸಿಹೇಳುತ್ತವೆ. ಈ ಮಾಧ್ಯಮಗಳ ಮೂಲಕ ಯಾವುದೇ ವಿಚಾರವನ್ನಾಗಲೀ ಭಾಷೆಯನ್ನಾಗಲೀ ಜನರ ಮೇಲೆ ನೇರವಾಗಿ ಹೇರುವುದು ಸುಲಭ. ಉದಾಹರಣೆಗೆ ೮೦ರ ದಶಕದ ಪ್ರಾರಂಭದಲ್ಲಿ ಡಿಡಿ-೧ರ ಕಾರ್ಯಕ್ರಮಗಳು ಕರ್ನಾಟಕದಲ್ಲಿ ಪ್ರಸಾರವಾಗುತ್ತಿದ್ದಾಗ, ಕನ್ನಡದ ಕಾರ್ಯಕ್ರಮಗಳಿಗಿಂತ ಹಿಂದಿ ಕಾರ್ಯಕ್ರಮಗಳೇ ಹೆಚ್ಚಾಗಿ ಪ್ರಸಾರವಾಗುತ್ತಿದ್ದವು. ಆ ಸಂದರ್ಭದಲ್ಲಿ ದಕ್ಷಿಣ ಭಾರತಕ್ಕೆ ತೀರಾ ಪರಿಚಿತವಲ್ಲದ ಭಾಷೆಯಾಗಿದ್ದ ಹಿಂದಿ, ಡಿಡಿ-೧ ರ ಮೂಲಕ ಮನೆ ಮನೆಗೂ ನುಗ್ಗಿ ತನ್ನ ಪರಿಚಯ ಮಾಡಿಕೊಂಡಿತಲ್ಲದೆ ಒಂದಷ್ಟು ಮಟ್ಟಿಗೆ ಇಲ್ಲೇ ತಳವೂರಿತು ಎನ್ನುವುದೂ ಗಮನಾರ್ಹ. ಇದೇ ರೀತಿ ಸಿನಿಮಾಗಳು. ಆದರೆ ಪತ್ರಿಕೆಯ ವಿಷಯದಲ್ಲಿ ಇದು ಸುಲಭವಾಗುವುದಿಲ್ಲ. ಲಿಪಿರೂಪದ ಪತ್ರಿಕೆಗಳ ಮೂಲಕ ಹಿಂದಿ ಅಥವಾ ಬೇರಾವುದೇ ಭಾಷೆ ತಮ್ಮ ಅಸ್ತಿತ್ವ ರೂಪಿಸಿಕೊಳ್ಳಬೇಕಾದರೆ ಆ ಜನರಿಗೆ ಆ ಲಿಪಿಯ ಅರಿವಿರಬೇಕಾಗುತ್ತದೆ. ಮೌಖಿಕ ಮಾಧ್ಯಮಗಳ ಸಂದರ್ಭದಲ್ಲಿ ಉಚ್ಚಾರಣೆ, ತತ್ಸಮಾನ ಪದಗಳ ಬಳಕೆ, ಅವು ಬಳಕೆಯಾಗುವ ಸನ್ನಿವೇಶ, ಸಂದರ್ಭ ಹಾಗೂ ಆ ಭಾಷೆಯ ನಿರಂತರ ಕೇಳಿಕೆಯಿಂದಾಗಿ

ಅದು ಪರಿಚಿತವಾಗುವುದು ಸುಲಭವಾಗುತ್ತದೆ. ಸ್ಥಿತಿ ಹೀಗಿರುವಾಗ ಕನ್ನಡೇತರ ಭಾಷೆಗಳಿಗೆ ಬದಲಾಗಿ ಕನ್ನಡವನ್ನೇ ನಿರಂತರವಾಗಿ ಬಳಸುವುದು ಭಾಷೆಯ ಪ್ರಸಾರ ಹಾಗೂ ಪ್ರಚಾರಕ್ಕೆ ಉತ್ತಮ ಮಾರ್ಗ. ಭಾಷೆಯ ರಚನೆಗೆ ಸಂಬಂಧಿಸಿದಂತೆಯೂ ಹೊಸ ಪ್ರಯೋಗಗಳನ್ನು ಮಾಡುವುದಕ್ಕಾಗಲೀ, ಹೊಸ ಶಬ್ದಗಳನ್ನು ಟಂಕಿಸುವುದಕ್ಕಾಗಲೀ, ಅನ್ಯಭಾಷೀಯ ಪದಗಳನ್ನು ಕನ್ನಡಕ್ಕೆ ತರುವುದು ಅಥವಾ ಅಳವಡಿಸುವುದಕ್ಕಾಗಲೀ ವಿಪುಲ ಅವಕಾಶಗಳಿರುತ್ತವೆ. ಹೇಳುವ ವಿಧಾನವಾದ್ದರಿಂದ ವಿದ್ಯುನ್ಮಾನ ಮಾಧ್ಯಮಗಳ ಭಾಷೆ ಸಂವಹನಶೀಲವೂ ಭಾಷಾಭಿವೃದ್ಧಿಗೆ ಪೂರಕವೂ ಆಗುತ್ತದೆ. ಸಂವಹನ ಮಾಧ್ಯಮಗಳ ಮೂಲಕ ಕನ್ನಡವನ್ನು ಅಭಿವೃದ್ಧಿಪಡಿಸುವ ಸಾಧ್ಯಾಸಾಧ್ಯತೆಯ ಬಗ್ಗೆಯೇ ಈ ಮಹಾಪ್ರಬಂಧದಲ್ಲಿ ಮುಖ್ಯ ಪ್ರಸ್ತಾಪವಿರುವುದರಿಂದ ಮುಂದಿನ ಭಾಗದಲ್ಲಿ ಹೆಚ್ಚು ವಿಷದವಾಗಿ ಚರ್ಚಿಸಿದ್ದೇನೆ.

## ನಿಘಂಟು - ಪದಕೋಶ - ಅರ್ಥಕೋಶಗಳ ರಚನೆ

ಈವರೆಗೂ ಅನೇಕ ನೆಲೆಗಳಲ್ಲಿ ಕನ್ನಡ ಬೆಳೆದಿದೆ. ಕನ್ನಡ ಬೆಳೆದಿದೆ ಎನ್ನುವುದಕ್ಕೆ ಅಗಾಧವಾಗಿ ಬೆಳೆದಿರುವ ಅದರ ಶಬ್ದ ಭಂಡಾರವೇ ಸಾಕ್ಷಿ. ಕನ್ನಡದ ಶಬ್ದಕೋಶ ಅಥವಾ ನಿಘಂಟುಗಳಿಂದ ಇದನ್ನು ತಿಳಿಯಬಹುದು. ಸುಮಾರು ಕ್ರಿ.ಶ. ೯೯೩ರಲ್ಲಿ ರಚಿತವಾಗಿದೆ ಎನ್ನಲಾದ 'ರನ್ನಕಂದ' ದಿಂದ ಹಿಡಿದು ಈಗಲೂ ಸೃಷ್ಟಿಗೊಳ್ಳುತ್ತಲೇ ಇರುವ ನಿಘಂಟುಗಳ ವ್ಯಾಪ್ತಿಯನ್ನು ಗಮನಿಸಬೇಕು. ರನ್ನಕಂದದಲ್ಲಿ ಹಳಗನ್ನಡದ ಕೆಲವು ಶಬ್ದಗಳಿಗೆ ಅರ್ಥ ಹೇಳಲಾಗಿದ್ದು ಅದರಲ್ಲಿ ೪ ಚಂಪಕ ಮಾಲಾವೃತ್ತ ಮತ್ತು ೪೧ ಕಂದ ಪದ್ಯಗಳಿವೆ. ಕನ್ನಡದ ನಿಘಂಟು ಇತಿಹಾಸದಲ್ಲಿ ಮಹತ್ವದ ಮೈಲಿಗಲ್ಲು ಎಂದು ಗುರುತಿಸಲಾಗುವ ೧೮೯೩ರ ರೆವರೆಂಡ್ ಫಾದರ್ ಕಿಟ್ಟೆಲ್ ಅವರ ನಿಘಂಟು ೧೭೫೦ ಪುಟಗಳಷ್ಟು ಬೃಹತ್ತಾಗಿರುವುದು ಕನ್ನಡ ಭಾಷಾ ಬೆಳವಣಿಗೆಗೆ ಹಿಡಿದ ಕನ್ನಡಿ. ಇದನ್ನು ಪ್ರಮಾಣೀಕರಿಸುವ ನಿಟ್ಟಿನಲ್ಲಿ 'ಕನ್ನಡ ಸಾಹಿತ್ಯ ಪರಿಷತ್ತು' ಈವರೆಗೂ ಹೊರತಂದಿರುವ ೮ ಸಂಪುಟಗಳಲ್ಲಿ ೨ ಲಕ್ಷಕ್ಕೂ ಹೆಚ್ಚು ಕನ್ನಡ ಪದಗಳಿರುವುದು ಗಮನಾರ್ಹ.

ಇದರಿಂದ ಒಂದಂಶವನ್ನು ಮನಗಾಣಬಹುದು. ನಿಘಂಟಿನ ವ್ಯಾಪ್ತಿ ಹೆಚ್ಚಿದಂತೆಲ್ಲ ಭಾಷೆ ಅನೇಕ ಬದಲಾವಣೆಗಳಿಗೆ ಒಳಗಾಗಿರುತ್ತದೆ. ಹೊಸ ಪದಗಳು, ಅನ್ಯದೇಶೀಯ ಪದಗಳೂ, ಅರ್ಥ ಬದಲಾವಣೆಯಾಗಿ ಹುಟ್ಟಿಕೊಂಡ ಹೊಸ ಅರ್ಥ, ಒಂದೇ ಅರ್ಥಕ್ಕೆ ಹೊಸದಾದ ಹೆಚ್ಚುವರಿ ಪದಗಳೂ ಹುಟ್ಟಿಕೊಂಡಿರುತ್ತವೆ. ಉಚ್ಚಾರಣೆ ಮತ್ತಿತರ ಕಾರಣಗಳಿಗಾಗಿ ಮತ್ತೊಂದು ಸ್ವರೂಪವನ್ನು ಪಡೆದ ಪದವೂ ಬೆಳಕಿಗೆ ಬರುತ್ತದೆ. ವಿವಿಧ ಕ್ಷೇತ್ರಗಳಲ್ಲಿ ಭಾಷೆ ಬೆಳೆಯುತ್ತಿರುವುದರಿಂದ ಆಯಾ ಕ್ಷೇತ್ರಗಳಲ್ಲಿ ಬಳಕೆಯಾಗುವ ಪಾರಿಭಾಷಿಕ ಪದಭಂಡಾರ, ಅರ್ಥ ಭಂಡಾರಗಳೂ ರಚನೆಯಾಗುತ್ತಿವೆ. ವೈದ್ಯಕೀಯ, ಕೈಗಾರಿಕೆ, ಕ್ರೀಡೆ, ಆಡಳಿತ, ವಿಜ್ಞಾನ-ತಂತ್ರಜ್ಞಾನ ಕ್ಷೇತ್ರಗಳ ಪಾರಿಭಾಷಿಕ ಪದಕೋಶಗಳು ಹುಟ್ಟಬಹುದು.

ಇಷ್ಟೆಲ್ಲಾ ಆದರೂ ಪ್ರಕಾಶಿತವಾದ ನಿಘಂಟುಗಳು ಜನತೆಯ ಕೈಸೇರಬೇಕು. ಅವರು ಅವನ್ನು ಬಳಸಬೇಕು. ಪದಗಳು ನಿಘಂಟಿನಲ್ಲಿ ಮಾತ್ರ ಉಳಿದು ಬಳಕೆಯಿಂದ ದೂರವಾದರೂ ಭಾಷೆ ದುರ್ಬಲವೇ ಆಗುತ್ತದೆ. ಒಟ್ಟಿನಲ್ಲಿ ಭಾಷೆ, ದಾಖಲೆಯ ಸ್ವರೂಪದಲ್ಲಿ ಗ್ರಾಂಥಿಕವಾಗಿಯೂ ವ್ಯಾವಹಾರಿಕ ಮಟ್ಟದಲ್ಲಿ ಮೌಖಿಕವಾಗಿಯೂ ಬದುಕಬೇಕಾಗುತ್ತದೆ.

## ಗಡಿನಾಡು - ಹೊರನಾಡುಗಳಲ್ಲಿ ಕನ್ನಡದ ಬಳಕೆಗೆ ಪ್ರೋತ್ಸಾಹ

ಕರ್ನಾಟಕದಲ್ಲಿ ಅನ್ಯಭಾಷಿಕರಿರುವಂತೆ ಹೊರನಾಡುಗಳಲ್ಲಿ, ವಿದೇಶಗಳಲ್ಲಿ ಕನ್ನಡ ಭಾಷಿಕರಿರುವುದು ಸಹಜ. ಇಲ್ಲಿ ಭಾಷಿಕ ಅಲ್ಪಸಂಖ್ಯಾತರಿರುವಂತಹ ಪ್ರಾದೇಶಿಕ ಭಾಷೆಯನ್ನೇ ಬಳಸಬೇಕೆಂಬ ನಿಯಮ ಅಲ್ಲಿ ಆ ಪ್ರದೇಶದ ಭಾಷೆ ಬಳಸುವಂತೆ ಕನ್ನಡದ ಭಾಷಿಕರಿಗೂ ಇರುತ್ತದೆ ಎಂದು ಭಾವಿಸಬೇಕು. ಅಲ್ಲಿನ ರಾಜ್ಯಭಾಷೆ ಅಥವಾ ಪ್ರಧಾನ ಭಾಷೆಯ ಪ್ರಭಾವ ಹಾಗೂ

ಹಿಡಿತ ಅಲ್ಲಿ ಭಾಷಿಕ ಅಲ್ಪಸಂಖ್ಯಾತರೆನಿಸುವ ಕನ್ನಡಿಗರ ಮೇಲೂ ಆಗುವುದು ಸಹಜ. ಹಾಗಾಗಿ ಅವರು ಕನ್ನಡವನ್ನು ಸುಲಭವಾಗಿ ಮರೆಯುವುದೂ ಸಾಧ್ಯ. ಈ ಕಾರಣದಿಂದಲೇ ಕರ್ನಾಟಕದಿಂದ ಹೊರಪ್ರದೇಶಗಳಲ್ಲಿ ನೆಲೆಸಿದ/ನೆಲೆಸುವ ಕನ್ನಡ ಭಾಷಿಕರು ತಮ್ಮ ಮಾತೃಭಾಷೆಯ ಬಗ್ಗೆ, ಅದರ ಬಳಕೆಯ ಬಗ್ಗೆ ಕಳಕಳಿ ಹೊಂದುವಂತೆ ಮಾಡಬೇಕು. ಹಾಗೆ ನೋಡಿದರೆ ಅವರೇ ಕನ್ನಡಕ್ಕೆ ಹೊಸ ಪದಗಳನ್ನು ಹೊತ್ತು ತರಬಲ್ಲರು. ದ್ವಿಭಾಷಿಕತೆ ಮತ್ತು ಕೆಲವು ಸಂದರ್ಭಗಳಲ್ಲಿ ತ್ರಿಭಾಷಿಕತೆಯ ಸ್ಥಿತಿ ಇರುವಾಗ ಅನ್ಯಭಾಷಿಕ ಪದ, ವಾಕ್ಯ ಪ್ರಯೋಗ, ಶೈಲಿ, ಸ್ವಭಾಷೆಯ ಒಳಗೂ ನುಸುಳುವುದನ್ನು ಗಮನಿಸಬಹುದು. ದ್ವಿಭಾಷಿಕರು ಅದನ್ನೊಂದು fashion ಎಂಬಂತೆ ಸ್ವೀಕರಿಸುವುದನ್ನು ಇಲ್ಲವೆ ತಾವು ಬಾಳುತ್ತಿರುವ ಭಾಷೆಯಲ್ಲಿ ಸರಾಗವೂ ಸ್ಪಷ್ಟವೂ ಆಗುವುದರಿಂದಲೂ ಆ ಭಾಷಾ ಪದಗಳನ್ನು ಹೆಚ್ಚಾಗಿ ಬಳಸುವುದನ್ನು ಗಮನಿಸಬಹುದು.

ಹೊರನಾಡು, ಗಡಿನಾಡುಗಳಲ್ಲಿ ಭಾಷಿಕವಾಗಿ ಸಮಾನವೆನಿಸುವ ಕನ್ನಡಿಗರು ಸಂಘಸಂಸ್ಥೆಗಳನ್ನು ರಚಿಸಿಕೊಂಡು ವಿಚಾರ-ವಿನಿಮಯ, ಸಾಹಿತ್ಯಕ, ಸಾಂಸ್ಕೃತಿಕ ಚಟುವಟಿಕೆಗಳ ಮೂಲಕ ಒಗ್ಗೂಡುತ್ತಾ ತಮಗೆ ಅಪ್ಯಾಯಮಾನವಾದ ತಾಯ್ನುಡಿಯಲ್ಲಿ ವ್ಯವಹರಿಸುವುದು ಕಾಣಬರುತ್ತದೆ. ಹಾಗೆ ನೋಡಿದರೆ ಅಂತಹ ಸಂದರ್ಭಗಳಲ್ಲೇ ಕನ್ನಡ ಹೆಚ್ಚಾಗಿ ಬಳಕೆಯಾಗುತ್ತದೆ. ಏಕೆಂದರೆ ಇದೊಂದು ಭಾವನಾತ್ಮಕ ವಿಚಾರ. ತನ್ನ ನೆಲ, ಜಲ, ಭಾಷೆ, ಸಂಸ್ಕೃತಿ ಎನ್ನುವುದು ಪ್ರತಿಯೊಬ್ಬನಿಗೂ ತನ್ನತನವನ್ನು ನೆನಪು ಮಾಡಿಕೊಡುವ ಅಂಶ. ಹೊರನಾಡು, ಗಡಿನಾಡುಗಳಲ್ಲಿ ಅನ್ಯ ಸಂಸ್ಕೃತಿ, ಭಾಷೆ, ಪರಿಸರಗಳಲ್ಲಿ ಜೀವಿಸುವಾಗ 'ತನ್ನದು' ಎನ್ನುವ ಅಂಶ ಅಷ್ಟಾಗಿ ಕಾಣಸಿಗುವುದಿಲ್ಲ. ಹಾಗಾಗಿ ತನ್ನವರು, ತನ್ನ ಭಾಷೆಯನ್ನಾಡುವವರು, ತನ್ನ ಊರಿನ ಬಗ್ಗೆ ಮಾತನಾಡುವವರು ಸಿಕ್ಕರೆ ಸಾಕು ಎನ್ನುವಂತಹ ತುಡಿತ ಅವರಲ್ಲಿ ಹೆಚ್ಚಾಗಿರುತ್ತದೆ. ಈ 'ಪ್ರೀತಿ'ಯೇ ಅವರಲ್ಲಿ ತಾಯ್ನುಡಿಯ ಬಗ್ಗೆ ಅಭಿಮಾನವನ್ನೂ ಅದನ್ನು ಬಳಸಬೇಕೆನ್ನುವ ತಹತಹವನ್ನು ತಂದರೆ ಅತಿಶಯವಲ್ಲ.

ಮತ್ತೊಂದೆಡೆ ಸರ್ಕಾರ ಸಹ ಹೊರನಾಡು - ಗಡಿನಾಡುಗಳಲ್ಲಿ ಕನ್ನಡಪರ ಚಟುವಟಿಕೆಗಳಿಗೆ ಪ್ರೋತ್ಸಾಹ ನೀಡುತ್ತಿದೆ. ಅಲ್ಲಿನ ಕನ್ನಡಿಗರ ಅಭಿವೃದ್ಧಿಗಾಗಿ, ಅವರ ಮೂಲಕ ಕನ್ನಡ ಭಾಷೆಯ ಅಭಿವೃದ್ಧಿಗಾಗಿ, ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ. ಚೆನ್ನೈ, ಬನಾರಸ್, ಮುಂಬೈ ಮತ್ತಿತರ ಕಡೆಗಳಲ್ಲಿ ಕನ್ನಡ ಅಧ್ಯಯನ ಪೀಠಗಳನ್ನು ವಿಶ್ವವಿದ್ಯಾನಿಲಯಗಳ ಮಟ್ಟದಲ್ಲಿ ನಡೆಸುತ್ತಿರುವುದೂ ಗಮನಾರ್ಹ.

## ಭಾಷಾನೀತಿ, ಭಾಷಾ ಯೋಜನೆಗಳನ್ನು ರೂಪಿಸುವ ಮೂಲಕ

ಒಂದು ಪ್ರಾಂತ್ಯದ ಆಡಳಿತ ಸುಗಮವಾಗಿ, ಸಮರ್ಥವಾಗಿ ನಡೆಯಬೇಕಾದರೆ ಅಲ್ಲಿನ ಪ್ರಾದೇಶಿಕ ಭಾಷೆಗೆ ಅಗ್ರಸ್ಥಾನವಿರಬೇಕು ಎನ್ನುವುದು ಸರ್ವಸಮ್ಮತ ವಾದ. ಒಟ್ಟು ಆಡಳಿತದ ಅನುಕೂಲಕ್ಕಾಗಿ ಇಂಗ್ಲಿಷ್ ಭಾಷೆಯನ್ನು ಸಂಪರ್ಕ ಭಾಷೆಯಾಗಿ ಇಟ್ಟುಕೊಂಡರೂ ಪ್ರಾದೇಶಿಕ ಮಟ್ಟದಲ್ಲಿ ಪ್ರಾದೇಶಿಕ ಭಾಷೆಯೇ ಪ್ರಮುಖವಾಗಿರಬೇಕು, ಅಧಿಕೃತ ಭಾಷೆಯಾಗಿರಬೇಕು ಎನ್ನುವುದು ಭಾರತವನ್ನು ಆಳುತ್ತಿದ್ದ ಆಂಗ್ಲರ ನೀತಿಯೂ ಆಗಿತ್ತು. ಲಾರ್ಡ್ ಕರ್ಜನ್ ಹೇಳುತ್ತಿದ್ದಂತೆ 'ಪ್ರಾದೇಶಿಕ ಭಾಷೆಗಳು ಈ ದೇಶದ ಜೀವಂತ ಭಾಷೆಗಳು. ಇಂಗ್ಲಿಷ್ ಕೆಲವೇ ಜನರ ಕಲಿಕೆಯ, ಪ್ರಗತಿಯ ಮಾಧ್ಯಮವಾಗಿದೆ. ಆದರೆ ಬಹಳಷ್ಟು ಜನರಿಗೆ ಅದು ಅನ್ಯಭಾಷೆಯೇ ಆಗಿದ್ದು ಅವರಿಗೆ ಅದನ್ನು ಓದಲು ಬರೆಯಲು ಬರುವುದಿಲ್ಲ'. ಈ ಹಿನ್ನೆಲೆಯಿಂದಾಗಿಯೇ ಆಂಗ್ಲರು ಪ್ರಾದೇಶಿಕ ಭಾಷೆಗಳಿಗೆ ಪ್ರಾಶಸ್ತ್ಯ ನೀಡಿದರು. ಪ್ರಾದೇಶಿಕ ಭಾಷೆಯೇ ಆ ಪ್ರದೇಶದ ಅಧಿಕೃತ ಭಾಷೆ ಎನ್ನುವ ಘೋಷಣೆಯೇ ಭಾಷಾ ನೀತಿ. ಸ್ವಾತಂತ್ರ್ಯೋತ್ತರ ಇತಿಹಾಸದಲ್ಲೂ ಕರ್ನಾಟಕದಲ್ಲಿ ಈ ಸೂತ್ರವನ್ನೇ ಎತ್ತಿ ಹಿಡಿಯಲಾಯಿತಾದರೂ ಕರ್ನಾಟಕದ ಏಕೀಕರಣದ ನಂತರವೂ ಈ ನೀತಿ ಅನುಷ್ಠಾನಗೊಳ್ಳುವಲ್ಲಿ ವಿಳಂಬವಾದದ್ದೂ ಇತಿಹಾಸವಾಗಿದೆ. ೧೯೫೦ರಲ್ಲಿ ಜಾರಿಗೆ ಬಂದ ಭಾರತ ಸಂವಿಧಾನದಲ್ಲಿ ಸ್ವತಂತ್ರ ಭಾರತದ ಭಾಷಾ ನೀತಿಯನ್ನು ಘೋಷಿಸಿ,

ಪ್ರಾದೇಶಿಕ ಭಾಷೆಗಳಿಗೆ ಸಂಬಂಧಿಸಿದಂತೆ, ರಾಜ್ಯದ ಶಾಸನಸಭೆಯ ಕಾನೂನಿನ ಮೂಲಕ ತನ್ನ ರಾಜ್ಯದಲ್ಲಿ ಬಳಕೆಯಲ್ಲಿರುವ ಯಾವುದೇ ಭಾಷೆ ಅಥವಾ ಭಾಷೆಗಳನ್ನು ಅಥವಾ ರಾಷ್ಟ್ರಭಾಷೆಯಾದ ಹಿಂದಿಯನ್ನು ಆಡಳಿತ ಭಾಷೆಯಾಗಿ ಸ್ವೀಕರಿಸಬಹುದೆಂದು ಹೇಳಲಾಗಿದೆ. ಇದಲ್ಲದೆ ಒಂದು ರಾಜ್ಯದ ಜನಸಂಖ್ಯೆಯಲ್ಲಿ ಗಣನೀಯ ಪ್ರಮಾಣದಲ್ಲಿರುವ ಜನರು ಬೇರೊಂದು ಭಾಷೆಯನ್ನು ಮಾತನಾಡುತ್ತಿದ್ದು ಆ ಭಾಷೆಗೂ ಆ ರಾಜ್ಯದ ಅಧಿಕೃತ ಭಾಷೆಯ ಮಾನ್ಯತೆ ದೊರಕಬೇಕೆಂಬ ಅಂಶ ಮನವರಿಕೆಯಾದಲ್ಲಿ ರಾಷ್ಟ್ರಾಧ್ಯಕ್ಷರು ಈ ಬಗೆಯ ಹಕ್ಕೊತ್ತಾಯದ ಮೇಲೆ ಸಂಪೂರ್ಣ ರಾಜ್ಯದಲ್ಲಿ ಅಥವಾ ಅದರ ಒಂದು ಭಾಗದಲ್ಲಿ ತಾವು ತಿಳಿಸಿರುವ ನಿರ್ದಿಷ್ಟ ಉದ್ದೇಶಕ್ಕಾಗಿ ಆ ಭಾಷೆಗೂ ಅಧಿಕೃತ ಭಾಷೆಯ ಸ್ಥಾನಮಾನ ಕೊಡಬೇಕೆಂದು ಆ ರಾಜ್ಯಕ್ಕೆ ನಿರ್ದೇಶನ ನೀಡಬಹುದು. ಅಲ್ಪಸಂಖ್ಯಾತರ ಮಕ್ಕಳ ಶಿಕ್ಷಣ; ಉಚ್ಚ, ಸರ್ವೋಚ್ಚ ನ್ಯಾಯಾಲಯಗಳಲ್ಲಿ ಭಾಷೆ; ಆಡಳಿತ, ಶಿಕ್ಷಣ, ನ್ಯಾಯಾಂಗ, ಶಾಸಕಾಂಗಗಳಲ್ಲಿ ಭಾಷೆ - ಹೀಗೆ ಪ್ರತಿಯೊಂದು ವಲಯದಲ್ಲೂ ಪ್ರಾದೇಶಿಕ ಭಾಷಾ ಬಳಕೆಯ ಮಹತ್ವವನ್ನು ಎತ್ತಿ ಹಿಡಿದಿರುವ ಸಂವಿಧಾನದ ಭಾಷಾ ನೀತಿಯಿಂದಾಗಿ ಕನ್ನಡದಂತಹ ಪ್ರಾದೇಶಿಕ ಭಾಷೆಯೊಂದರ ಬಳಕೆಗೆ ಒತ್ತಾಸೆ ಸಿಕ್ಕಂತಾಗಿದೆ.

೧೯೫೦ರಲ್ಲಿ ಸಂವಿಧಾನ ಅಸ್ತಿತ್ವಕ್ಕೆ ಬಂದರೂ ಅದರ ಭಾಷಾನೀತಿ ಕರ್ನಾಟಕದಲ್ಲಿ ಕಾನೂನಿನ ಪ್ರಕಾರ ಜಾರಿಗೆ ಬಂದದ್ದು ೧೯೬೩ರಲ್ಲಿ. ೧೯೬೩ರ ಅಕ್ಟೋಬರ್ ೫ ರಂದು ಜಾರಿಗೆ ಬಂದ 'ಕರ್ನಾಟಕ ರಾಜಭಾಷಾ ಅಧಿನಿಯಮ'ವು ಮೊದಲ ಬಾರಿಗೆ ಕರ್ನಾಟಕ ರಾಜ್ಯದ ಭಾಷಾನೀತಿಯನ್ನು ಘೋಷಿಸುತ್ತದೆ. ನಂತರ ೧೯೮೧ರಲ್ಲಿ ಶಾಸನ ಸಭೆಯ ವ್ಯವಹಾರಗಳ ನಿರ್ವಹಣೆಗಾಗಿ ತ್ರಿಭಾಷಾ ಸೂತ್ರ ಬಳಕೆಯನ್ನು ಸೂಚಿಸಿ ತಿದ್ದುಪಡಿ ಮಾಡಲಾಗಿದೆ. ಅದೇ ವರ್ಷ ಮತ್ತೊಂದು ತಿದ್ದುಪಡಿ ಮಾಡಿ ಸರ್ಕಾರವು ರಚಿಸುವ, ಜಾರಿಗೆ ತರುವ ಯಾವುದೇ ಮಸೂದೆ, ಅಧಿನಿಯಮ, ತಿದ್ದುಪಡಿ, ಅಧ್ಯಾದೇಶ, ನಿಯಮ, ಬೈಲಾಗಳಲ್ಲಿ ಕನ್ನಡ ಭಾಷೆಯನ್ನು ಬಳಸಬಹುದೆಂದು ಅಧಿನಿಯಮಕ್ಕೆ ಸೇರಿಸಲಾಗಿದೆ.

ಈ ಎಲ್ಲ ಹಂತಗಳನ್ನು ಗಮನಿಸಿದಾಗ ಇಂಗ್ಲಿಷಿನೊಂದಿಗೆ ಕನ್ನಡವನ್ನು ಬಳಸಬಹುದು ಎಂಬರ್ಥವೇ ತೋರುತ್ತದೆಯೇ ಹೊರತು ಕನ್ನಡವೇ ಅಧಿಕೃತ ಭಾಷೆ, ಅದನ್ನು ಮಾತ್ರ ಬಳಸಿ ಎಂದು ಹೇಳಲಾಗಿಲ್ಲ ಎನ್ನುವುದು ಗಮನಾರ್ಹ. ಇದರ ಪರಿಣಾಮವನ್ನು ಹೇಮಲತಾ ಮಹಿಷಿ ಹೀಗೆ ಹೇಳಿದ್ದಾರೆ.

> *ನಮ್ಮ ನೆರೆಹೊರೆಯ ರಾಜ್ಯಗಳೊಂದಿಗೆ ಹೋಲಿಸಿ ನೋಡಿದಾಗ ಕನ್ನಡದ ಅಭಿವೃದ್ಧಿಯ ಬಗ್ಗೆ ಪೂರ್ಣ ತೃಪ್ತಿಯಾಗುವುದಿಲ್ಲ. ಆಡಳಿತದ ಕೆಳಹಂತದಲ್ಲಿ ಸ್ವಲ್ಪಮಟ್ಟಿನ ಪ್ರಗತಿಯಾಗಿದ್ದರೂ ಸಚಿವಾಲಯ ಮಟ್ಟದಲ್ಲಿ ಪೂರ್ಣ ಪ್ರಮಾಣದಲ್ಲಿ ಆಗಿಲ್ಲ. ಕೆಳನ್ಯಾಯಾಲಯಗಳಲ್ಲಿ ಕನ್ನಡದ ಅನುಷ್ಠಾನದ ಮಟ್ಟ ತೃಪ್ತಿಕರವಾಗಿಲ್ಲ. ಒಂದೇ ಸಮನೆ ನಡೆದ ಚಳವಳಿಗಳ ಫಲವಾಗಿ ಶಾಲೆಗಳಲ್ಲಿ ಕನ್ನಡವನ್ನು ಒಂದು ವಿಷಯವಾಗಿ ಕಲಿಸುವುದು ಆರಂಭವಾಗಿದ್ದರೂ ಮಾತೃಭಾಷಾ ಮಾಧ್ಯಮದ ಪ್ರಾಥಮಿಕ ಶಾಲೆಗಳು ಇನ್ನೂ ಸಾಕಾರಗೊಂಡಿಲ್ಲ. ಆಂಗ್ಲ ವ್ಯಾಮೋಹ ಬಿಟ್ಟುಹೋಗಿಲ್ಲ.* [೨೪]

ಈ ಭಾಷಾನೀತಿಯನ್ನು ಸಂಪೂರ್ಣವಾಗಿ ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಹುಟ್ಟಿಬಂದವೇ ಭಾಷಾ ಯೋಜನೆಗಳು. ಇದು ಭಾಷಾನೀತಿ ನಿರೂಪಣೆ, ವಿವರವಾದ ಯೋಜನಾ ತಯಾರಿಕೆ, ಅದರ ಆಚರಣೆ ಅಥವಾ ಅನುಷ್ಠಾನ, ಮೌಲ್ಯಮಾಪನ,

ನೀತಿಯ ಪುನರ್ರಚನೆ ಮುಂತಾದ ಹಲವು ಹಂತಗಳನ್ನು, ಮುಖಗಳನ್ನು ಒಳಗೊಂಡಿರುತ್ತದೆ. ಭಾಷಾಭಿವೃದ್ಧಿಗೆ ನೆರವಾಗುವಂತೆ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ರಚನೆ, ಹಂಪಿಯಲ್ಲಿ ಕನ್ನಡ ವಿಶ್ವವಿದ್ಯಾನಿಲಯ ಸ್ಥಾಪನೆ, ಆಡಳಿತ ರಂಗದಲ್ಲಿ ಕನ್ನಡದ ಪರಿಕರಗಳ ಪೂರೈಕೆ, ಕನ್ನಡ ಫಲಕಗಳು, ಕನ್ನಡದ ಅಂಕಿಗಳ ಬಳಕೆ, ಕನ್ನಡ ಮಾಧ್ಯಮದಲ್ಲಿ ೧೦ನೇ ತರಗತಿವರೆಗೆ ಓದಿದವರಿಗೆ ವೃತ್ತಿಪರ ವ್ಯಾಸಂಗಕ್ಕೆ ಮೀಸಲಾತಿ, ಅಲ್ಪಸಂಖ್ಯಾತರಿಗೆ ಕನ್ನಡ ಕಲಿಕೆಗೆ ಉತ್ತೇಜನ ಹೀಗೆ ನಾನಾ ಪ್ರಕಾರದ, ನಾನಾ ಹಂತದ ಯೋಜನೆಗಳನ್ನು ರಾಜ್ಯ ಸರ್ಕಾರ ಹಮ್ಮಿಕೊಂಡಿದೆ. ಇದರ ಜೊತೆಗೆ ಕನ್ನಡವನ್ನು ಬೆಳೆಸುವ ಯೋಜನೆ, ಚಿಂತನೆಗಳಲ್ಲಿ ವಿದ್ವಾಂಸರೂ, ಚಿಂತಕರೂ ಹೋರಾಟಗಾರರು ಶ್ರಮದಾನ ಮಾಡುತ್ತಿದ್ದಾರೆ. ಭಾಷಾ ಆಧುನೀಕರಣ, ಪ್ರಮಾಣೀಕರಣದಂತಹ ಪ್ರಯತ್ನಗಳೂ ನಡೆಯುತ್ತಿವೆ. ಸರ್ಕಾರಿ, ಸರ್ಕಾರಿ ಸಾಮ್ಯದ ಮತ್ತು ಸರ್ಕಾರೇತರ ಸಂಸ್ಥೆಗಳೂ ಹೆಚ್ಚಿನ ಪರಿಶ್ರಮವಹಿಸುತ್ತಿವೆ. ಭಾಷಾಭಿವೃದ್ಧಿಯ ಕ್ಷೇತ್ರದಲ್ಲಿ ಸಾರ್ವಜನಿಕರ ಅಥವಾ ಸಮೂಹದ ಸಹಭಾಗಿತ್ವ ಅತ್ಯಂತ ಗಣನೀಯ ಪಾತ್ರ ವಹಿಸುತ್ತದೆ.

## ಭಾಷಾಭಿಮಾನ ಹಾಗೂ ಭಾಷಾ ಬಳಕೆಗೆ ಪ್ರೋತ್ಸಾಹ

ಕನ್ನಡದ ಬಗ್ಗೆ ಅಪಾರ ಅಭಿಮಾನ ಹೊಂದಿದವರನ್ನು ನಾವು ಸುಮಾರು ಹತ್ತು ಶತಮಾನಗಳಷ್ಟು ಹಿಂದೆಯೇ ಗುರುತಿಸಬಹುದು. ಆವತ್ತಿಗೆ ಇಂಗ್ಲಿಷ್ ಭಾಷೆಯ ಒತ್ತಡ ಕನ್ನಡದ ಮೇಲೆ ಇರದಿದ್ದರೂ ಸಂಸ್ಕೃತದ ಒತ್ತಡವಂತೂ ಇದ್ದೇ ಇತ್ತು. ಅಂದಿನ ಸಂದರ್ಭ ಸಂಸ್ಕೃತ - ಕನ್ನಡದ ದ್ವಿಭಾಷಿಕ ಸಂದರ್ಭ. ಅಂದೂ ಕನ್ನಡ ಅಭಿಮಾನಿಗಳು ಅನ್ಯಭಾಷೆಯೊಂದರ ಬಳಕೆಯನ್ನು ಪ್ರತಿಭಟಿಸಿರುವುದು ಸ್ಪಷ್ಟವಾಗಿ ಕಾಣಬರುತ್ತದೆ. ಇದಕ್ಕೆ ಒಂದು ಮಹತ್ತರ ನಿದರ್ಶನವಾಗಿ ಹತ್ತನೇ ಶತಮಾನದಲ್ಲಿ 'ಮಾರ್ಗ'ವನ್ನು ಧಿಕ್ಕರಿಸಿ 'ದೇಸಿ' ಶೈಲಿಯನ್ನೇ ಬಳಸುವುದಾಗಿ ಸಾರಿಕೊಂಡ ನಯಸೇನ. ಆತ ತನ್ನ *ಧರ್ಮಾಮೃತ* ಕೃತಿಯಲ್ಲಿ ಹೀಗೆ ಹೇಳಿದ್ದಾನೆ.

**ಸಕ್ಕದಮಂ ಪೇಳ್ವೊಡೆ ನೆಱೆ**
**ಸಕ್ಕದಮಂ ಪೇಳ್ಗೆ ಸುದ್ದಗನ್ನಡದೊಳ್ತಂ**
**ದಿಕ್ಕುವುದೇ ಸಕ್ಕದಮಂ**
**ತಕ್ಕುದೆ ಬೆರಸಲ್ಕೆ ಘೃತಮುಮಂ ತೈಲಮುಮಂ** (೪-೪೩)

ನಯಸೇನನ ಮಾರ್ಗವನ್ನೇ ಅನುಸರಿಸುವ ೧೨ನೇ ಶತಮಾನದ ಕವಿ ಆಂಡಯ್ಯ. ಇವನು ನಯಸೇನನಿಗಿಂತಲೂ ಹೆಚ್ಚು ಉಗ್ರ ಕನ್ನಡಾಭಿಮಾನಿ. **ಸೊಗಯಿಪ ಸಕ್ಕದಮಂ ಬೆರಸಿಲ್ಲದೆಯೆ ಕನ್ನಡದಲ್ಲಿ ಕಬ್ಬಮಂ ಬಗೆಗೊಳೆ ಪೇಟಲಾಜಿಜ್** ಎನ್ನುವ ಸವಾಲಿಗೆ ಆರೋಪವಾಗಿ ಆಂಡಯ್ಯ **ಅಚ್ಚಗನ್ನಡದಲ್ಲಿ** ಬಿಗಿವೊಂದಿರೆ ಒರೆದಂ ಎಂದು ಅಚ್ಚಗನ್ನಡದಲ್ಲೇ ಅರ್ಥಪೂರ್ಣ ಪ್ರತಿಜ್ಞೆ ಮಾಡಿದ್ದಾನೆ. ನಯಸೇನ ತನ್ನ ಪದ್ಯದಲ್ಲಿ **ತಕ್ಕುದೆ ಬೆರೆಸಲ್ಕೆ ಘೃತಮುಮಂ ತೈಲಮುಮಂ** ಎಂದು ಹೇಳುವಾಗಲೇ ಘೃತ, ತೈಲ ಎಂಬ ಸಂಸ್ಕೃತ ಪದಗಳನ್ನು ಬಳಸಿರುವುದನ್ನು ವಿದ್ವಾಂಸರು ಗುರುತಿಸಿದ್ದಾರೆ. ಆದರೆ ಆಂಡಯ್ಯ ತನ್ನ ಇಡೀ *ಕಬ್ಬಿಗರ ಕಾವ*ದಲ್ಲಿ ಶೇ. ೨೫ರಷ್ಟು ಮಾತ್ರ ತದ್ಭವಗಳನ್ನು ಬಳಸಿದ್ದಾನೆನ್ನಲಾಗಿದೆ. ತದ್ಭವಗಳನ್ನೇ ಬಳಸದ ೩೦ ಪದ್ಯಗಳೂ ಇದರಲ್ಲಿವೆ. ಆಂಡಯ್ಯ ಸಂಸ್ಕೃತಕ್ಕೆ ಸರಿಸಮಾನವಾದ ಪದಗಳನ್ನು ಕನ್ನಡದಲ್ಲೇ ಸೃಷ್ಟಿಸಿ ಅಥವಾ ಕನ್ನಡಕ್ಕೆ ಭಾಷಾಂತರಿಸಿ ಬಳಸಿರುವುದಕ್ಕೆ ಈ ಉದಾಹರಣೆಗಳನ್ನು ಗಮನಿಸಬಹುದು. ಅಪ್ಸರೆ = ಸಗ್ಗದಾಕೆ, ಕುಬೇರ = ಪೊನ್ನೊಡೆಯ, ಕೃತಕಾಚಲ = ಸಮೆದಿರ್ಪಬೆಟ್ಟ, ಮಹಾಶೇಷ = ಪಲವು ನಾಲಗೆಯುಳ್ಳವಂ, ಚಕೋರ = ಜೊನ್ನಮನುಣ್ಬ ಪಕ್ಕಿ, ಮುಂತಾದವು.

ಸೃಜನಶೀಲ ಸಾಹಿತ್ಯ ಭಾಷೆಯನ್ನು ಬೆಳೆಸಿದೆ. ಆದರಷ್ಟೇ ಸಾಲದು. ಅದನ್ನು ಬೆಳಸಬೇಕಾದ್ದು ಭಾಷೆಯನ್ನು 'ಆಡುವ' ಸಾಮಾನ್ಯರು. ಬಸವರಾಜ ಕಟ್ಟೀಮನಿಯವರ ಹೇಳಿಕೆಯಂತೆ

> *ಭಾಷೆ ಬೆಳೆಯುವುದು ಕೇವಲ ಸಾಹಿತಿಗಳಿಂದಲ್ಲ. ಸಾಮಾನ್ಯ ಜನರೇ ಅದನ್ನು ಎತ್ತಿ ಹಿಡಿದು ಬೆಳೆಸಬೇಕು. ಸದ್ಯಕ್ಕಿರುವ ವಾಸ್ತವ ಪರಿಸ್ಥಿತಿಯನ್ನು ನೋಡಿದರೆ, ಕರ್ನಾಟಕದಲ್ಲಿ ಕನ್ನಡ ಭಾಷೆ ಎಲ್ಲ ಕಡೆಗಳಲ್ಲೂ ರಾರಾಜಿಸಲು ಇನ್ನೂ ೫೦ ವರ್ಷಗಳ ಅವಧಿ ಅಗತ್ಯವೆಂದು ತೋರುತ್ತದೆ.* [೨೫]

ಇಂತಹ ಅನೇಕಾನೇಕ ಹೇಳಿಕೆ, ಅನಿಸಿಕೆ, ಟೀಕೆಗಳು ಭಾಷಾಭಿವೃದ್ಧಿಯ ಮಾರ್ಗದಲ್ಲಿ ಹೇರಳವಾಗಿ ಸಿಕ್ಕುತ್ತವೆ. ಅಂದ ಮಾತ್ರಕ್ಕೆ ಕನ್ನಡಿಗರು ಅಭಿಮಾನಶೂನ್ಯರು ಎಂದು ಭಾವಿಸದೆ, ಅವರು ಇನ್ನೂ ಹೆಚ್ಚಿನ ಅಭಿಮಾನ ತೋರುವಂತಹವರಾಗಬೇಕೆಂದು ಪರಿಗಣಿಸಬೇಕು. ಏಕೆಂದರೆ ಕನ್ನಡ ಈಗ ಇರುವ ಹಂತದವರೆಗೆ ಬೆಳೆದು ಬರಲು ಕನ್ನಡಿಗರೇ ಕಾರಣವೇ ಹೊರತು ಅನ್ಯಭಾಷಿಕರಲ್ಲ.

> *Speak English if you are a British citizen, a crown court judge ordered Mohamed sarwar (9.5.1988, Hindu) ಎಂಬ ಮಾತನ್ನು ತುಸು ಬದಲಾಯಿಸಿ, ಕರ್ನಾಟಕದಲ್ಲಿ ಇರಬೇಕಾದರೆ ಕನ್ನಡ ಕಲಿಯಿರಿ ಎಂದು ಅನ್ಯಭಾಷೀಯರಿಗೆ ನಮ್ರತೆಯಿಂದ ಹೇಳಬೇಕಾಗಿದೆ.* [೨೬]

ಎಂದು ದೇ.ಜ.ಗೌ. ಒತ್ತಾಯಪೂರ್ವಕವಾಗಿ ಹೇಳಿದ್ದಾರೆ.

ಕನ್ನಡ ಪರ ಹೋರಾಟಗಳೂ ಚಳವಳಿಗಳೂ ನಡೆದಿರುವುದು ನಾಡಿನ ಚರಿತ್ರೆಯಲ್ಲಿದೆ. ಮೂಲಭೂತವಾಗಿ ಭಾವುಕ ನೆಲೆಯದಾದ ಭಾಷಾ ಚಳವಳಿಗಳೂ ಕನ್ನಡ ಭಾಷೆ ಬಳಕೆಗೆ ಪ್ರಚೋದನೆ, ಪ್ರೋತ್ಸಾಹ ನೀಡಿವೆ. ಕನ್ನಡ ಭಾಷೆಗೆ ಪ್ರಾಶಸ್ತ್ಯ ದೊರೆಯದ ಸಂದರ್ಭಗಳಲ್ಲಿ ತೀವ್ರ ಪ್ರತಿಭಟನೆಗಳಾಗಿವೆ. ಈ ಮೂಲಕ ಎಷ್ಟೋ ಸಮಸ್ಯೆಗಳಿಗೆ ಪರಿಹಾರಗಳೂ ದೊರಕಿವೆ. ಕನ್ನಡಿಗರಲ್ಲಿ ಸ್ವಭಾಷಾ ಪ್ರೇಮ ಇರದಿದ್ದರೆ ಇಂತಹ ಭಾಷಾ ಚಳವಳಿಗಳು ನಡೆಯುತ್ತಿರಲಿಲ್ಲ.

ಇಷ್ಟಾದರೂ ಭಾಷೆ ಎಲ್ಲ ರಂಗಗಳಲ್ಲೂ ಸಂಪೂರ್ಣವಾಗಿ ಬಳಕೆಯಾಗದಿರುವುದನ್ನು ಗಮನಿಸಿದರೆ ಮತ್ತೆ ಜನರೇ ಅದನ್ನು ಬಳಸುತ್ತಿಲ್ಲವೇ ಎಂಬ ಅನುಮಾನವೂ ಸ್ವಾಭಾವಿಕ. ಇದು ಸತ್ಯವೂ ಆಗಬಹುದು. ವಲಸೆ ಬರುವವರ ಕಾರಣದಿಂದ, ಮನೆಮಾತು ಬೇರೆಯಾಗಿದ್ದು ಹೊರಗೆ ಕನ್ನಡ ಬಳಸಬೇಕಾದ ಅನಿವಾರ್ಯತೆಯ ಕಾರಣದಿಂದ, ಭಾಷಿಕ ಅಲ್ಪಸಂಖ್ಯಾತರ ಧೋರಣೆಯ ಕಾರಣದಿಂದ ಕನ್ನಡ ಸಂಪೂರ್ಣವಾಗಿ ಬಳಕೆಗೆ ಬರದೆಯೂ ಇರಬಹುದು.

ಏನೇ ಆದರೂ ಜನ ಭಾಷೆಯನ್ನು ಬಳಸದೆ ಅದು ಬೆಳೆಯಲಾರದು ಎನ್ನುವ ಅಂಶ ನಿಜವಾಗಿರುವುದರಿಂದಲೇ ಜನ ಕನ್ನಡವನ್ನು ಹೆಚ್ಚಾಗಿ ಬಳಸಲಿ, ಅಭಿಮಾನದಿಂದ ಬಳಸಲಿ ಎಂಬ ಹಾರೈಕೆ ಎಲ್ಲೆಡೆಯಿಂದಲೂ ಕೇಳಿ ಬರುತ್ತಿದೆ. ಕನ್ನಡ ಬಳಸಿ, ಕನ್ನಡ ಬೆಳೆಸಿ ಎನ್ನುವ ಅಭಿಮಾನದ ಬೀಜವನ್ನು ಕನ್ನಡಿಗರ ಎದೆಯಲ್ಲಿ ಬಿತ್ತಬೇಕಾಗಿದೆ.

**ಅಡಿಟಿಪ್ಪಣಿ**

೧. ಇ.ಹೆಚ್. ಸ್ಟೂರ್ಟ್‌ವೆಂಟ್
ಉಲ್ಲೇಖ : ಸಂಕ್ಷಿಪ್ತ ಕನ್ನಡ ಭಾಷೆಯ ಚರಿತ್ರೆ, ಪ್ರೊ. ಎಂ.ಎಚ್. ಕೃಷ್ಣಯ್ಯ, ೧೯೯೯, ಪು - ೪
೨) ಜೆ.ಬಿ. ಕರೋಲ್
ಉಲ್ಲೇಖ : ಸಂಕ್ಷಿಪ್ತ ಕನ್ನಡ ಭಾಷೆಯ ಚರಿತ್ರೆ, ಪ್ರೊ. ಎಂ.ಎಚ್. ಕೃಷ್ಣಯ್ಯ, ೧೯೯೯, ಪು - ೪
೩) ಡಾ. ಡಿ.ಎನ್. ಶಂಕರಭಟ್ಟ : ಭಾಷೆಯ ಬಗೆಗೆ ನೀವೇನು ಬಲ್ಲಿರಿ?, ೧೯೭೦, ಪು - ೬
೪) ಪ್ರೊ. ಎಂ.ಎಚ್. ಕೃಷ್ಣಯ್ಯ : ಸಂಕ್ಷಿಪ್ತ ಕನ್ನಡ ಭಾಷೆಯ ಚರಿತ್ರೆ, ೧೯೯೯, ಪು - ೩
೫) ಡಾ. ಎಂ.ಎಂ. ಕಲಬುರ್ಗಿ : ಕನ್ನಡ ಭಾಷಾಭಿವೃದ್ಧಿ ಸಾಧನೆ - ಮುನ್ನೋಟ, ೧೯೯೯, ಪು - ೧
೬) ಡಾ. ಸೋಮಶೇಖರ ಗೌಡ : ಭಾಷೆ ರಚನೆ ಬಳಕೆ, ೨೦೦೦, ಪು - ೧೦೪-೧೦೫
೭) ಡಾ. ಸಂಗಮೇಶ ಸವದತ್ತಿಮಠ : ದ್ರಾವಿಡ ಭಾಷಾ ವ್ಯಾಸಂಗ, ೧೯೯೦, ಪು - ೨೪
೮) ಪ್ರೊ. ಎಂ.ಎಚ್. ಕೃಷ್ಣಯ್ಯ : ಸಂಕ್ಷಿಪ್ತ ಕನ್ನಡ ಭಾಷೆಯ ಚರಿತ್ರೆ, ೧೯೯೯, ಪು - ೨೨
೯) ಎನ್.ಬಿ. ಪರಿಮಳಾಬಾಯಿ : ಕನ್ನಡ ಭಾಷೆಯ ಸಂಕ್ಷಿಪ್ತ ಚರಿತ್ರೆ, ಸಂ : ಕನ್ನಡದ ಅಳಿವು - ಉಳಿವು, ೧೯೮೫, ಪು - ೬
೧೦) ಪ್ರೊ. ಎಂ.ಎಚ್. ಕೃಷ್ಣಯ್ಯ : ಸಂಕ್ಷಿಪ್ತ ಕನ್ನಡ ಭಾಷೆಯ ಚರಿತ್ರೆ, ೧೯೯೯, ಪು - ೩೧
೧೧) ಪ್ರೊ. ಆರ್.ಸಿ. ಹಿರೇಮಠ
ಉಲ್ಲೇಖ : ಭಾಷೆ ರಚನೆ ಬಳಕೆ, ಡಾ. ಸೋಮಶೇಖರಗೌಡ, ೨೦೦೦, ಪು - ೧೧೨
೧೨) ಪ್ರೊ. ಎಲ್.ಎಸ್. ಶೇಷಗಿರಿರಾವ್ : ಕನ್ನಡದ ಅಳಿವು ಉಳಿವು, ಮುನ್ನುಡಿ, ೧೯೮೫
೧೩) ಡಾ. ಕೆ.ವಿ. ನಾರಾಯಣ : ಕನ್ನಡ ಭಾಷಾಭಿವೃದ್ಧಿ ಸಾಧನೆ - ಮುನ್ನೋಟ, ಪ್ರಸ್ತಾವನೆ, ೧೯೯೯
೧೪) ಡಾ. ಕೆ.ವಿ.ನಾರಾಯಣ : ಭಾಷೆಯ ಸುತ್ತಮುತ್ತ, ೧೯೯೮, ಪು - ೯-೧೦
೧೫) ಪ್ರೊ. ಜಿ. ವೆಂಕಟಸುಬ್ಬಯ್ಯ : ಇಗೋ ಕನ್ನಡ - ೧, ೧೯೯೬, ಪುಟ - ೯
೧೬) ಡಾ. ಮಧುವೆಂಕಾರೆಡ್ಡಿ : ಕನ್ನಡದ ಅಭಿವೃದ್ಧಿ : ಆತಂಕಗಳು ಸಲಹೆಗಳು, ಸಂ : ಹೊಯ್ಸಳ ಸಂಪದ, ೧೯೯೬, ಪು - ೬೫೫
೧೭) ಡಾ. ಸಿ.ಪಿ. ಕೃಷ್ಣಕುಮಾರ್ : ನಿತ್ಯ ಜೀವನದಲ್ಲಿ ಕನ್ನಡ, ಸಂ : ಕನ್ನಡದ ಅಳಿವು ಉಳಿವು, ೧೯೮೫, ಪು - ೩೩೩
೧೮) ಡಾ. ಗೊರೂರು ರಾಮಸ್ವಾಮಿ ಐಯ್ಯಂಗಾರ್ : ಕನ್ನಡದ ಅಭಿವೃದ್ಧಿ : ನನ್ನ ದೃಷ್ಟಿಯಲ್ಲಿ, ಸಂ : ಕನ್ನಡದ ಅಳಿವು ಉಳಿವು : ೧೯೮೫, ಪು - ೩೮೩
೧೯) ಕುವೆಂಪು : ಕನ್ನಡ ಚಳವಳಿಗಳು ಜೀವಂತವಾಗಿರಲಿ, ಸಂ : ಕನ್ನಡದ ಅಳಿವು ಉಳಿವು, ೧೯೮೫, ಪು. ೪೪೭
೨೦) ಪೀಟರ್ ಟ್ರುಡ್ಗಿಲ್
ಉಲ್ಲೇಖ : ಭಾಷೆ ರಚನೆ ಬಳಕೆ : ಡಾ. ಸೋಮಶೇಖರಗೌಡ, ೨೦೦೦, ಪು - ೨೨
೨೧) ಡಾ. ಹಾ.ಮಾ. ನಾಯಕ
ಉಲ್ಲೇಖ : ಭಾಷೆ ರಚನೆ ಬಳಕೆ : ಡಾ. ಸೋಮಶೇಖರಗೌಡ, ೨೦೦೦, ಪು - ೨೨
೨೨) ಮಹದೇವ ಬಣಕಾರ : ಆಡಳಿತ ಭಾಷೆಯಾಗಿ ಕನ್ನಡ-ಏಕೀಕರಣ ಪೂರ್ವದಲ್ಲಿ, ಸಂ : ಆಡಳಿತದಲ್ಲಿ ಕನ್ನಡ - ೨ : ೧೯೮೫, ಪು - ೬
೨೩) ಡಾ. ಸೂರ್ಯನಾಥ ಕಾಮತ್ : ಆಡಳಿತ ಭಾಷೆಯಾಗಿ ಕನ್ನಡ - ಏಕೀಕರಣದ ನಂತರ, ಸಂ : ಆಡಳಿತದಲ್ಲಿ ಕನ್ನಡ - ೨ : ೧೯೮೫, ಪು - ೨೨
೨೪) ಡಾ. ಹೇಮಲತಾ ಮಹಿಷಿ : ಕರ್ನಾಟಕದ ಭಾಷಾನೀತಿ, ಸಂ : ಕನ್ನಡ ಭಾಷಾಭಿವೃದ್ಧಿ ಸಾಧನೆ - ಮುನ್ನೋಟ, ೧೯೯೯, ಪು - ೧೨
೨೫) ಬಸವರಾಜ ಕಟ್ಟೀಮನಿ : ಕನ್ನಡದ ಅಭಿವೃದ್ಧಿ - ನನ್ನ ದೃಷ್ಟಿಯಲ್ಲಿ, ಸಂ : ಕನ್ನಡದ ಅಳಿವು ಉಳಿವು, ೧೯೮೫, ಪು - ೪೦೧
೨೬) ಡಾ. ದೇ.ಜವರೇಗೌಡ, ಕನ್ನಡ ಅಭಿವೃದ್ಧಿ ಪ್ರಾಧಿಕಾರದ ವರದಿ, ಪುಸ್ತಕ ಪ್ರಪಂಚ, ಏಪ್ರಿಲ್ ೨೦೦೦, ಪುಟ - ೧೦

ಅಧ್ಯಾಯ : ಒಂಭತ್ತು

# ಸಂವಹನ ಮಾಧ್ಯಮಗಳು ಮತ್ತು ಕನ್ನಡದ ಅಭಿವೃದ್ಧಿ

೧. ಸಂವಹನ ಮಾಧ್ಯಮಗಳ ಮೂಲಕ ಕನ್ನಡದ ಅಭಿವೃದ್ಧಿ

೨. ಆಧುನೀಕರಣ

೨.೧. ಟಂಕೀಕರಣ

೨.೨. ಭಾಷಾಂತರೀಕರಣ

೨.೩. ಅನ್ಯಭಾಷಾ ಸ್ವೀಕರಣ

೨.೪. ಭಾಷಾ ಮಿಶ್ರಣ / ನುಡಿಬೆರಕೆ

೩. ಪ್ರಮಾಣೀಕರಣ

ಕನ್ನಡ ಭಾಷೆಯ ಬೆಳವಣಿಗೆಯ ಹಾದಿಯಲ್ಲಿ ಈಗಾಗಲೇ ಇಟ್ಟಿರುವ ಹೆಜ್ಜೆಗಳನ್ನು ಗುರುತಿಸಿ ಮುಂದೆ ಇಡಬೇಕಾದ ಹೆಜ್ಜೆಗಳು ಹೇಗಿರಬೇಕು ಎನ್ನುವುದನ್ನು ಯೋಜಿಸಲಾಗಿದೆ. ಮುಂದೆ ಇಡಬೇಕಾಗಿರುವ ಹೆಜ್ಜೆಗಳ ಯಾದಿಯಲ್ಲಿ ಆಧುನಿಕ ಸಂವಹನ ಮಾಧ್ಯಮಗಳ ಪಾತ್ರ ಗುರುತರವಾದದ್ದು ಎಂದೂ ಮನಗಾಣಲಾಗಿದೆ. ಈ ಮಹಾಪ್ರಬಂಧದಲ್ಲಿ ಪ್ರತಿಪಾದಿಸಿರುವ ಮಾಧ್ಯಮಗಳ ಧ್ಯೇಯೋದ್ದೇಶ, ಗುರಿ, ಸಮಾಜಮುಖತೆ, ಪಾರಸ್ಪರಿಕ ಗ್ರಾಹಕತೆ, ವೈವಿಧ್ಯತೆ ಇವೆಲ್ಲಾ ಮಾಧ್ಯಮದ ಹೊಣೆಗಾರಿಕೆಯನ್ನು ಸಾಕ್ಷೀಕರಿಸುತ್ತವೆ. ಸಂವಹನ ಮಾಧ್ಯಮಗಳು ಅದರಲ್ಲೂ ಸಿನಿಮಾ, ದೂರದರ್ಶನ, ಆಕಾಶವಾಣಿ ಹಾಗೂ ಪತ್ರಿಕೆಗಳು ಜನರ ಮೇಲೆ ತೀವ್ರತರ ಪರಿಣಾಮ ಉಂಟುಮಾಡುತ್ತಿರುವುದನ್ನು ಅಧ್ಯಯನದ ಸಂದರ್ಭದಲ್ಲಿ ಗಮನಿಸಲಾಗಿದೆ. ಇಂತಹುದೇ ಪರಿಣಾಮವನ್ನು ಮಾಧ್ಯಮಗಳು ಭಾಷೆಯ ವಿಷಯದಲ್ಲೂ, ಭಾಷಾ ಬೆಳವಣಿಗೆಯ ವಿಷಯದಲ್ಲೂ ಮಾಡುತ್ತವೆಂದು ಪ್ರತಿಪಾದಿಸಬಹುದಾಗಿದೆ.

> *ಯಾವುದೇ ಭಾಷೆ ಆಧುನಿಕ ಜಗತ್ತಿನ ಸವಾಲುಗಳಿಗೆ ಪ್ರತಿಸ್ಪಂದಿಸಲು*
> *ಮುಖ್ಯವಾಗಿ ಆಡಳಿತ, ಶಿಕ್ಷಣ ಹಾಗೂ ಸಮೂಹ ಮಾಧ್ಯಮಗಳ*
> *ವಲಯದಲ್ಲಿ ಬಳಕೆಯಾಗತೊಡಗಬೇಕು.*[೧]

ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಇದರಲ್ಲೂ ಸಮೂಹ ಸಂವಹನ ಮಾಧ್ಯಮಗಳು ಸಾರಾಸಗಟಾಗಿ ಇಡೀ ಜನಮುದಾಯವನ್ನು ತಲುಪುವುದರಿಂದ ಇದು ಹೆಚ್ಚು ಪರಿಣಾಮಕಾರಿ ಎಂದು ಭಾವಿಸಬಹುದಾಗಿದೆ.

ಆಧುನಿಕ ಸಂವಹನ ಮಾಧ್ಯಮಗಳು ಭಾಷೆಯನ್ನು ಬೆಳೆಸಬಲ್ಲುವು ಎಂದು ಪ್ರತಿಪಾದಿಸುವುದಕ್ಕೆ ಮೂರು ಮುಖ್ಯ ಕಾರಣಗಳನ್ನು ಗುರುತಿಸಬಹುದು.

- ರಚನಶೀಲತೆ
- ಬಳಕೆ
- ಪ್ರಚಾರ

**ರಚನಶೀಲತೆ :** ಭಾಷೆ ಬೆಳೆಯುವುದು ಎಂದರೆ ಮುಖ್ಯವಾಗಿ ಹೊಸ ಹೊಸ ಪದಗಳು ಸೇರುತ್ತಿರಬೇಕು. ಅವು ಅನ್ಯಭಾಷಾ ಶಬ್ದಗಳೂ ಆಗಿರಬಹುದು, ಕನ್ನಡದ್ದೇ ಆದ ಹೊಸ ಸೃಷ್ಟಿಯೂ ಆಗಿರಬಹುದು, ಹಾಗೆ ಹಳೆಪದವೇ ವ್ಯತ್ಯಾಸಗೊಂಡು ಹೊಸರೂಪ ಧರಿಸಿಯೂ ಇರಬಹುದು. ಒಟ್ಟಿನಲ್ಲಿ ಕನ್ನಡದ ಶಬ್ದ ಭಂಡಾರಕ್ಕೆ ಹೊಸ ಶಬ್ದ ಸೇರಬೇಕು. ಅಂದರೆ ಕನ್ನಡದ ಪಾಲಿಗೊಂದು ಹೊಸಪದ ರಚನೆಗೊಳ್ಳಬೇಕು, ಕನ್ನಡದ ಮುಖ್ಯವಾಹಿನಿಯನ್ನು ಸೇರಿ ರೂಢಿಗತವಾಗಬೇಕು. ಇದು ಭಾಷಾ ಬೆಳವಣಿಗೆಯ ಒಂದು ಪ್ರಮುಖ ಮೆಟ್ಟಿಲು.

ನಿರಂತರವಾಗಿ ಭಾಷೆಯನ್ನು ಬಳಸಬೇಕಾದ ಅವಶ್ಯಕತೆ ಹಾಗೂ ಅನಿವಾರ್ಯತೆ ಸಂವಹನ ಮಾಧ್ಯಮಗಳಿಗೆ ಇರುವುದರಿಂದಲೇ ಅವು ಭಾಷೆಯನ್ನು ಹೆಚ್ಚಾಗಿಯೂ, ಸಮರ್ಪಕವಾಗಿಯೂ ದುಡಿಸಿಕೊಳ್ಳಬೇಕಾಗುತ್ತದೆ. ಬದಲಾಗುವ ಪರಿಸರದ ಸಂದರ್ಭಕ್ಕೆ ತಕ್ಕಂತೆ ಜನರಿಗೆ ಅರ್ಥವಾಗುವ ರೀತಿಯಲ್ಲಿ ಭಾಷೆಯನ್ನು ಬಳಸಬೇಕಾಗುತ್ತದೆ. ಉದಾಹರಣೆಗೆ ವಿಜ್ಞಾನಯುಗದ ಆವಿಷ್ಕಾರವಾಗಿ 'ಏರೋಪ್ಲೇನ್' ಸೃಷ್ಟಿಯಾಯಿತು. 'ವಿಮಾನ' ಎನ್ನುವ ಪದವನ್ನು ಅದಕ್ಕೆ ಪರ್ಯಾಯವಾಗಿ ಕನ್ನಡದಲ್ಲಿ ಅಳವಡಿಸಿಕೊಳ್ಳಲಾಯಿತು. ಅದರಲ್ಲಿ ಪರಿಚಾರಿಕೆಯಾಗಿ ಶ್ರಮಿಸುವ 'Air hostess'ಗೆ ಕನ್ನಡದಲ್ಲಿ ಅತ್ಯಂತ ಆಕರ್ಷಕ ಶಬ್ದವನ್ನು ರಚಿಸಿದ್ದು ವರ್ತಮಾನ ಪತ್ರಿಕೆಗಳ ಹೆಗ್ಗಳಿಕೆ. 'ಗಗನಸಖಿ' ಎನ್ನುವ ಹೊಸ ಪದವನ್ನು ಪತ್ರಿಕೆಗಳು ಸೃಷ್ಟಿಸಿದವು. ಇಂತಹ ರಚನಾಶಕ್ತಿ ಇರುವುದರಿಂದಲೇ ಮಾಧ್ಯಮಗಳು ಕನ್ನಡ ಭಾಷಾ ಬೆಳವಣಿಗೆಯ ನಿಟ್ಟಿನಲ್ಲಿ ಹಿರಿಯ ಪಾತ್ರವಹಿಸಬಲ್ಲವು ಎಂದು ಹೇಳಬಹುದು. ಮಾಧ್ಯಮಗಳು ಸೃಷ್ಟಿಸಿರುವ ಇನ್ನೂ ಕೆಲವು ಉದಾಹರಣೆಗಳು ಹೀಗಿವೆ:

| | | |
|---|---|---|
| Black Market | : | ಕಳ್ಳಸಂತೆ, ಕಾಳಸಂತೆ, ಕಳ್ಳವ್ಯಾಪಾರ |
| Chamber of Commerce | : | ವಾಣಿಜ್ಯ ಮಂಡಳಿ |
| Demonstration | : | ಪ್ರದರ್ಶನ, ಪ್ರಾತ್ಯಕ್ಷಿಕೆ |
| Electricity | : | ವಿದ್ಯುಚ್ಛಕ್ತಿ |
| Fuel | : | ಇಂಧನ |
| Hunger Strike | ; | ಉಪವಾಸ ಮುಷ್ಕರ |
| Illicit Liquor | : | ಕಳ್ಳಭಟ್ಟಿ |
| Radio | : | ಆಕಾಶವಾಣಿ |
| Smuggler | : | ಕಳ್ಳ ಸಾಗಣೆದಾರ |
| Terrorist | : | ಭಯೋತ್ಪಾದಕ |

ಜಿ. ವೆಂಕಟಸುಬ್ಬಯ್ಯನವರು ತಮ್ಮ *ಇಗೋ ಕನ್ನಡ*-ದಲ್ಲಿ ಸೂಚಿಸಿರುವಂತೆ ಹೊಸ ಶಬ್ದಗಳನ್ನು ನಿರ್ಮಿಸುವಾಗ ಕೆಲವು ನಿರ್ದಿಷ್ಟ ಕ್ರಮಗಳನ್ನು ಅನುಸರಿಸಬೇಕಾಗುತ್ತದೆ.[2] ಅವೆಂದರೆ,

- ಮೊದಲಿದ್ದ ಕನ್ನಡ ಶಬ್ದಕ್ಕೆ ಇಂಗ್ಲಿಷ್ ಶಬ್ದದ ಹೊಸ ಅರ್ಥವನ್ನು ಹೊಂದಿಸುವುದು. ಉದಾ : ಬಿಡುಗಡೆ.
- ಹೊಸ ಶಬ್ದವನ್ನೇ ಸೃಷ್ಟಿಸುವುದು : ಉದಾ: ಕಪ್ಪುಸಂತೆ, ಕಳ್ಳಭಟ್ಟಿ.
- ಸಂಸ್ಕೃತ ಶಬ್ದಗಳಿಗೆ ಇರುವ ಹಳೆಯ ಅರ್ಥದ ಜೊತೆಗೆ ಹೊಸ ಅರ್ಥವನ್ನು ಹೊಂದಿಸುವುದು. ಉದಾ : ಆಕಾಶವಾಣಿ ಭೂಗತ
- ಇಂಗ್ಲಿಷ್ ಶಬ್ದಗಳಿಗೆ ಹೊಸದಾಗಿ ಸಂಸ್ಕೃತ ಶಬ್ದಗಳ ಸಮಾನ ಅರ್ಥವನ್ನು ಹೊಂದಿಸುವುದು ಉದಾ: ಸ್ನಾನ, ವಿನಂತಿಪತ್ರ.
- ಹೊಸ ಸಮಾಸಗಳ ಸೃಷ್ಟಿ : ಉದಾ : ಕೋಳಿ ಸಾಕಣೆ, ಉಪವಾಸ ಮುಷ್ಕರ
- ಇಂಗ್ಲಿಷ್ ಶಬ್ದಗಳನ್ನೇ ಕನ್ನಡ ಪ್ರತ್ಯಯಗಳ ಜೊತೆ ಉಪಯೋಗಿಸುವುದು. ಉದಾ : ಜಡ್ಜಿಗಳು, ಅಸೆಂಬ್ಲಿ, ಅಪೀಲು.
- ಕನ್ನಡದ 'ಮಾಡು', 'ಹಾಕು' ಮುಂತಾದ ಶಬ್ದಗಳನ್ನು ಸೇರಿಸಿ ಹೊಸ ಕ್ರಿಯಾಪದವನ್ನು ಮಾಡುವುದು. ಉದಾ : ಕೇಸು ಹಾಕು, ಅಪೀಲು ಮಾಡು.
- ಇಂಗ್ಲಿಷ್ ಶಬ್ದಗಳನ್ನು ಅನುವಾದ ಮಾಡುವುದು ಉದಾ : ವಿಕೇಂದ್ರೀಕರಣ, ಸ್ಥಾಪಿಸು.

ಈ ಮಾರ್ಗಗಳನ್ನು ಸಾಮಾನ್ಯವಾಗಿ ಎಲ್ಲ ಮಾಧ್ಯಮಗಳೂ ಸಂದರ್ಭೋಚಿತವಾಗಿ ಅನುಸರಿಸುತ್ತಿವೆ. ಜೊತೆಗೆ ಇತ್ತೀಚೆಗೆ ಇನ್ನೂ ಕೆಲವು ಹೊಸದಾರಿಗಳನ್ನೂ ಅವು ನಿರ್ಮಿಸಿಕೊಂಡಿರುವುದು ಅಧ್ಯಯನದ ಸಂದರ್ಭದಲ್ಲಿ ಗಮನಕ್ಕೆ ಬಂದಿದೆ :-

✤ ಮೊದಲೇ ಬಳಕೆಯಲ್ಲಿರುವ ಕ್ರಿಯಾಪದಗಳಿಗೆ ಬದಲಾಗಿ 'ಈಕರಣ'ವನ್ನೂ ಸೇರಿಸುವುದು.

  ಉದಾ : ಅಗಲಗೊಳಿಸು = ಅಗಲೀಕರಿಸು, ಆಧುನಿಕಗೊಳಿಸು = ಆಧುನೀಕರಣ, ಅದೇ ರೀತಿ ಕನ್ನಡೀಕರಣ, ಜಾಗತೀಕರಣ, ಮುಂತಾಗಿ.

✤ 'ಇಸು' ಪ್ರತ್ಯಯದ ಬಳಕೆ. : ಉದಾ : ವ್ಯಕ್ತಿಸಿದರು, ಅಭಿಪ್ರಾಯಿಸಿದರು, ಫೋನಾಯಿಸು, ಮರಣಿಸಿದರು.

✤ ಅನ್ಯಭಾಷಾ ಪದಗಳನ್ನೇ ಕನ್ನಡದಲ್ಲಿ ಹೇಳುವುದು. : ಉದಾ : ಕಂಪ್ಯೂಟರು, ಸಾಫ್ಟ್‌ವೇರು, ಜೆರಾಕ್ಸು, ನಸೀಬು, ತಾಕತ್ತು (ಇಂತಹ ಪ್ರಯೋಗ ಕನ್ನಡಕ್ಕೆ ಹೊಸತಲ್ಲ. ಆದರೆ ಆಧುನಿಕ ಸಂದರ್ಭದಲ್ಲೂ ಇದು ಮುಂದುವರೆದಿದೆ).

ಇಂತಹ ಪ್ರಯತ್ನಗಳು ಕನ್ನಡಕ್ಕೆ ಅತ್ಯವಶ್ಯಕ. ಭಾಷಾ ರಚನೆಗೆ ಎಡೆಮಾಡಿಕೊಡುವ ಇಲ್ಲಿ ತಿಳಿಸಿರುವ ಎಲ್ಲ ಮಾರ್ಗಗಳನ್ನು ಮಾಧ್ಯಮಗಳು ಅನುಸರಿಸುತ್ತಿವೆ. ಇಲ್ಲಿ ನೀಡಿರುವ ಬಹುತೇಕ ಎಲ್ಲಾ ಉದಾಹರಣೆಗಳೂ ಮಾಧ್ಯಮಗಳ ಸೃಷ್ಟಿಯೇ. ಇಂತಹ ಸೃಜನಶಕ್ತಿ/ರಚನಾಶಕ್ತಿ ಇರುವುದರಿಂದಲೇ ಮಾಧ್ಯಮಗಳು ಭಾಷಾ ಬೆಳವಣಿಗೆಯ ಕ್ಷೇತ್ರದಲ್ಲಿ ಮಹತ್ತರ ಪಾತ್ರ ವಹಿಸಬಲ್ಲವು ಎಂದು ಖಚಿತವಾಗಿ ಪ್ರತಿಪಾದಿಸಬಹುದು.

**ಬಳಕೆ :** ಭಾಷೆಯನ್ನು ಬಳಸುವುದೇ ಅದನ್ನು ಬೆಳೆಸಿದಂತೆ ಎಂದು ಭಾವಿಸಲಾಗಿದೆ. ಸಂವಹನೆಯ ಮಾಧ್ಯಮವೇ ಭಾಷೆ ಎಂದು ಮನಗಂಡಿದ್ದೇವೆ. ಸಂವಹನ ಮಾಧ್ಯಮಗಳು ತಮ್ಮ ಅಭಿವ್ಯಕ್ತಿ ಮಾಧ್ಯಮವಾಗಿ ಭಾಷೆಯನ್ನೇ ಅವಲಂಬಿಸಬೇಕಾಗಿರುವುದು ಸ್ವಾಭಾವಿಕ. ಭಾಷೆಯನ್ನು ಬಳಸುವ ಈ ಅವಲಂಬನೆಯ ಕಾರಣದಿಂದಲೇ ಮಾಧ್ಯಮಗಳು ಭಾಷೆಯನ್ನು ಬೆಳೆಸುತ್ತವೆ ಎಂದು ನಂಬಬಹುದಾಗಿದೆ. ಈ ಶಕ್ತಿ ಎಲ್ಲ ಮಾಧ್ಯಮಗಳಿಗಿದೆಯಾದರೂ ಈ ಹಂತದಲ್ಲಿ ಒಂದಂಶವನ್ನು ಮುಖ್ಯವಾಗಿ ಗಮನಿಸಬೇಕಾಗುತ್ತದೆ. ಈವತ್ತಿನ ಮಾಧ್ಯಮಗಳ ಪೈಕಿ ದೂರದರ್ಶನದ ಎಲ್ಲಾ ವಾಹಿನಿಗಳಲ್ಲಿ ಮನರಂಜನಾ ಕಾರ್ಯಕ್ರಮಗಳಿಗೆ ಆದ್ಯತೆ ದೊರೆತಿದೆ. ಇವೂ ಬಹಳಷ್ಟು ಮಟ್ಟಿಗೆ ಚಲನಚಿತ್ರಗೀತೆಗಳನ್ನಾಧರಿಸಿಯೇ ತಯಾರಿಸಿರುವ ಕಾರ್ಯಕ್ರಮಗಳಾಗಿರುತ್ತವೆ. ಕಥಾ ಧಾರಾವಾಹಿಗಳಲ್ಲೂ ಸಂಭಾಷಣೆಯತ್ತ ವಿಶೇಷ ಗಮನ ಹರಿಸಿದಂತೆ ಕಾಣುತ್ತಿಲ್ಲ. ಪೌರಾಣಿಕ, ಐತಿಹಾಸಿಕ ಹಿನ್ನೆಲೆಯುಳ್ಳ ನಾಟಕಗಳು, ಸಾಹಿತ್ಯಕ ಮತ್ತು ವೈಚಾರಿಕ ಚರ್ಚೆಗಳು, ಮಾಹಿತಿ ಪೂರ್ಣ ಸಾಕ್ಷ್ಯಚಿತ್ರಗಳು ಪ್ರಸಾರವಾಗದೇ ಇರುವುದರಿಂದ ಉತ್ತಮಮಟ್ಟದ ಭಾಷೆ, ಶುದ್ಧ ಭಾಷೆ ಪ್ರಸ್ತುತ ಸಂದರ್ಭದಲ್ಲಿ ಬಳಕೆಯಾಗುತ್ತಿಲ್ಲ. ಈ ಅಂಶವನ್ನು ಈ ಅಧ್ಯಯನದ ಸಂದರ್ಭದಲ್ಲಿ ಸಂದರ್ಶಿಸಿದ ವಿದ್ವಾಂಸರೂ, ತಜ್ಞರೂ ಒಪ್ಪಿದ್ದಾರೆ. ಇದ್ದುದರಲ್ಲಿ ಕನ್ನಡ ದೂರದರ್ಶನ ವಾಹಿನಿಗಳಲ್ಲಿ ಪ್ರಯೋಗಾತ್ಮಕತೆ ಕಂಡು ಬರುವುದು ವಾರ್ತಾ ಪ್ರಸಾರದಲ್ಲಿಯೇ ಎಂದು ಹೇಳಬಹುದು.

> *ಶಬ್ದ ಗೌರವವನ್ನು ಕಾಯ್ದುಕೊಂಡು ಬಂದೂ ಶಬ್ದ ಪರಿಣಾಮವನ್ನು ಸಾಧಿಸುವಲ್ಲಿ ದೂರದರ್ಶನದ ಸುದ್ದಿ ವಿಭಾಗ ಮಾಂತ್ರಿಕ ಪಾತ್ರ ವಹಿಸಿದೆ - ಎಂದರೆ ಅದೇನು ಅತಿಶಯೋಕ್ತಿ ಆಗಲಾರದು! ಕನ್ನಡ ಭಾಷೆಗೆ ಮತ್ತೊಂದು ಆಯಾಮ ಕಲ್ಪಿಸಲು ದೂರದರ್ಶನ ಮಾಧ್ಯಮ ಪ್ರಯತ್ನಿಸಿ, ಅದರಲ್ಲಿ ಯಶಸ್ಸನ್ನು ಪಡೆಯುತ್ತಿದೆ, ಎಂಬುದು ನನ್ನ ಅನುಭವ.* [೨]

ಎನ್ನುತ್ತಾರೆ ವಿ.ಹೆಚ್. ದೇಸಾಯಿ.

ಆಕಾಶವಾಣಿಯ ವಾರ್ತೆಯನ್ನು ಹೊರತುಪಡಿಸಿ ಉಳಿದಂತೆ ಅದರ ಸ್ಥಿತಿ ಇದಕ್ಕಿಂತ ಸ್ವಲ್ಪ ಭಿನ್ನ. ಸಂಗೀತ ಮತ್ತು ಅದನ್ನಾಧರಿಸಿದ ಕಾರ್ಯಕ್ರಮಗಳಿಗೇ ಹೆಚ್ಚು ಪ್ರಾಶಸ್ತ್ಯ ನೀಡುತ್ತದೆಯಾದರೂ ಆಕಾಶವಾಣಿ ಮಾತು ಬಳಸುವ ವಿಷಯದಲ್ಲಿ ಹಿಂದೆ ಬಿದ್ದಿಲ್ಲ. ಕೇವಲ ಶ್ರವ್ಯ ಮಾಧ್ಯಮವಾದ ಆಕಾಶವಾಣಿಗೆ ಅದು ಅನಿವಾರ್ಯವೂ ಹೌದು. ಹಾಗಾಗಿ ನಾಟಕ, ಭಾಷಣಗಳು, ಸಂದರ್ಶನ, ನಿರೂಪಣೆ, ರೂಪಕಗಳು ವರದಿ, ವಾರ್ತೆಗಳು ಹೀಗೆ ಆಕಾಶವಾಣಿ ಮಾತನ್ನೇ ಆಡಬೇಕಾಗಿದೆ, ಆಡುತ್ತಿದೆ. ಆದರೂ ಈ ಎರಡೂ ಮಾಧ್ಯಮಗಳೂ ಹೇಳಬೇಕಾದ್ದನ್ನು ಒಮ್ಮೆ ಹೇಳಿಬಿಟ್ಟರೆ ಅಂದರೆ ಕಾರ್ಯಕ್ರಮ ಪ್ರಸಾರವಾಗಿಬಿಟ್ಟರೆ, ಗ್ರಾಹಕನ ಕಣ್ಮುಂದೆ ದಾಖಲೆಯಾಗಿ ಉಳಿಯುವಂತಹದೇನೂ ಇರುವುದಿಲ್ಲ. ಉದಾಹರಣೆಗೆ ಈ ಮಾಧ್ಯಮಗಳಲ್ಲಿ ಒಂದು ಹೊಸ ಪದವನ್ನು ಪ್ರಯೋಗಿಸಿದರೆಂದುಕೊಳ್ಳೋಣ. ಆ ಪದ ಪ್ರಸಾರವಾದ ಮರುಕ್ಷಣದಲ್ಲೇ ಮಾಯವಾಗಿ ಬಿಡುತ್ತದೆ. ಅದು ಮತ್ತೊಂದು ಸಂದರ್ಭದಲ್ಲಿ ಅಥವಾ ಮರುಪ್ರಸಾರದಲ್ಲಿ ಪುನರಾವರ್ತನೆಯಾಗದ ಹೊರತು ಗ್ರಾಹಕನಲ್ಲಿ ಅದು ನೋಂದಣಿಯಾಗುವುದು ಕಷ್ಟ.

ಈ ದೃಷ್ಟಿಯಿಂದ ಪತ್ರಿಕೆಗಳು ಭಾಷೆ ಬೆಳೆಸುವ ನಿಟ್ಟಿನಲ್ಲಿ ಉಳಿದೆರಡು ಮಾಧ್ಯಮಗಳಿಗಿಂತ ಹೆಚ್ಚು ಪರಿಣಾಮಕಾರಿ ಎನ್ನಬಹುದು. ಪತ್ರಿಕೆಗಳು ಕಿವಿಗೆ ಸಿಕ್ಕುವ ಅಥವಾ ಕಣ್ಣ ಮುಂದೆ ಸಾಗಿ ಹೋಗುವ ಮಾಧ್ಯಮವಲ್ಲ. ಇದು ಅಕ್ಷರ ರೂಪಿ. ಭಾಷೆ ದಾಖಲೆಯಾಗಿ ಉಳಿಯುವುದೇ ಲಿಪಿರೂಪದಲ್ಲಿ. ಸ್ವಲ್ಪ ಪ್ರಮಾಣದಲ್ಲಿ ಸ್ಥಿರಚಿತ್ರ ಬಿಟ್ಟರೆ ಉಳಿದಂತೆ ಈ ಮಾಧ್ಯಮ ಬಳಸಬೇಕಾಗಿರುವುದು ಭಾಷೆಯೊಂದನ್ನೇ. ಸಂಗೀತ, ನೃತ್ಯ ಮುಂತಾದ ಮನರಂಜನೆಗಳಲ್ಲ. ಇಲ್ಲಿ ಮನರಂಜನೆಯೂ ಭಾಷೆ, ಸಾಹಿತ್ಯದ ಮೂಲಕವೇ ನಡೆಯಬೇಕು. ಹಾಗಾಗಿ ಭಾಷೆ ಬೆಳವಣಿಗೆಯಲ್ಲಿ ಪತ್ರಿಕೆಗಳ ಪಾತ್ರ ಹಿರಿದಾದದ್ದು ಎನ್ನಬಹುದು.

ಒಟ್ಟಿನಲ್ಲಿ ಎಲ್ಲ ಸಂವಹನ ಮಾಧ್ಯಮಗಳು ಭಾಷೆಯನ್ನು ಅವಲಂಬಿಸಿಯೇ ಕಾರ್ಯ ನಿರ್ವಹಿಸಬೇಕಾಗಿರುವುದರಿಂದ ಅವುಗಳಿಗೆ ಭಾಷೆಯನ್ನು ಬೆಳೆಸುವ ಶಕ್ತಿ ಸಂಪೂರ್ಣವಾಗಿ ಇದೆ ಎಂದು ಒಪ್ಪಬಹುದು. ಅವು ಅದನ್ನು ಎಷ್ಟರ ಮಟ್ಟಿಗೆ ಬಳಸುತ್ತಿವೆ ಎಂದು ಬೇರೆಯೇ ಚರ್ಚಿಸಬೇಕಾಗುತ್ತದೆ.

ಪ್ರಚಾರ : ಪ್ರಸರಣವೇ ಸಂವಹನ ಮಾಧ್ಯಮಗಳ ಮೂಲ ಉದ್ದೇಶ. ವಿಚಾರ ಅಥವಾ ಮಾಹಿತಿ ಪ್ರಸಾರವೂ ಆಗಿರಬಹುದು ಅಥವಾ ಮಾಹಿತಿ ತಿಳಿಸಲು ಬಳಸುವ ಭಾಷೆಯ ಪ್ರಸಾರವೂ ಆಗಿರಬಹುದು. ತಾವು ಬಳಸುವ ಭಾಷೆಗೆ ವ್ಯಾಪಕ ಪ್ರಚಾರ ಒದಗಿಸಿಕೊಡುವುದೂ ಮಾಧ್ಯಮಗಳಿಗೆ ಸಾಧ್ಯ. ಹಾಗಾಗಿ ಅನಿವಾರ್ಯವಾಗಿ ಭಾಷೆ ಜನರನ್ನು ತಲುಪುತ್ತದೆ.

ಪ್ರಚಾರದ ದೃಷ್ಟಿಯಿಂದ ಮೌಖಿಕ ಮಾಧ್ಯಮಗಳು ಹೆಚ್ಚು ಉಪಯುಕ್ತ. ಆದರೆ ಭಾಷೆಯನ್ನು ನಿರಂತರವಾಗಿ ಬಳಸಬೇಕು ಮತ್ತು ಬಳಸಿದ ಹೊಸ ಪದಗಳು, ಪ್ರಯೋಗಗಳನ್ನು ಅವು ರೂಢಿಗತವಾಗುವವರೆಗೂ ಮೇಲಿಂದ ಮೇಲೆ ಬಳಸಬೇಕು. ಅಕ್ಷರಸ್ಥರು, ಅನಕ್ಷರಸ್ಥರು ಎಲ್ಲರೂ ತಾವು ಆಗಿಂದಾಗ್ಗೆ ಕೇಳಿಸಿಕೊಳ್ಳುವ ಭಾಷೆಯನ್ನು ತಮ್ಮ ಸಮಯ-ಸಂದರ್ಭಗಳಿಗೆ ತಕ್ಕಂತೆ ಬಳಸುವುದೂ ಸುಲಭ.

ಗ್ರಾಂಥಿಕ ಮಾಧ್ಯಮ ಅಥವಾ ಅಕ್ಷರ ಮಾಧ್ಯಮ ಭಾಷಾ ರಚನೆ ಹಾಗೂ ಬಳಕೆಗೆ ವಿಶೇಷ ಗಮನಹರಿಸುತ್ತಲೇ ಬಂದಿದೆ. ಉಳಿದೆರಡು ಮಾಧ್ಯಮಗಳಿಗಿಂತ ಹಳೆಯದೂ ಜನಪ್ರಿಯವೂ ಆದ ಪತ್ರಿಕಾ ರಂಗ ಹೊಸ ಪ್ರಯೋಗಗಳಿಗೆ ತೊಡಗಿಕೊಂಡು ಭಾಷೆಗೆ ಪ್ರಚಾರ ನೀಡುವತ್ತಲೂ ಗಮನ ಹರಿಸಿವೆ. ತಾವೇ ಬಳಸಿದ ಭಾಷೆಯನ್ನು ಜನರಿಗೆ ತಲುಪಿಸುವುದಷ್ಟೇ ಅಲ್ಲದೆ ಸೃಜನಶೀಲ ಭಾಷಾವಿಜ್ಞಾನದ ಅಂಕಣಗಳನ್ನು ಪ್ರಕಟಿಸುತ್ತಲೂ ಭಾಷಾ ಬೆಳವಣಿಗೆಗೆ ಶ್ರಮಿಸುತ್ತಿವೆ. ಪ್ರಾದೇಶಿಕ ಮಟ್ಟದ ಪತ್ರಿಕೆಗಳು, ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದ ಪತ್ರಿಕೆಗಳೂ ಸ್ಥಳೀಯ ಭಾಷೆಯನ್ನು ಬಳಸುತ್ತಾ ಅದನ್ನು ಉಳಿಸಿಕೊಂಡಿವೆ.

ಉದಾಹರಣೆಗೆ 'ಆಂದೋಲನ' ಜಿಲ್ಲಾ ಪತ್ರಿಕೆ. ಮೈಸೂರು, ಕೊಡಗು, ಮಂಡ್ಯ, ಚಾಮರಾಜನಗರ ಪ್ರದೇಶಗಳಲ್ಲಿ ಏಕಕಾಲಕ್ಕೆ ಪ್ರಕಟಗೊಳ್ಳುತ್ತ ಸ್ಥಳೀಯ ಭಾಷಾ ಶೈಲಿಯನ್ನು ರೂಢಿಸಿಕೊಂಡಿದೆ. ಕೊಡಗಿನ ಆವೃತ್ತಿಯಲ್ಲಿ ಮಂಡ್ಯದ ಪದಗಳು ಸ್ವೀಕಾರವೂ ಆಗಬಹುದು. ಕೊಡಗಿನಲ್ಲಿ ಅದು ಪ್ರಚಾರ ಪಡೆದು ಬಳಕೆಗೂ ಬರಬಹುದು. ಹೀಗೆ ತೀರಾ ಕೆಳಹಂತದಲ್ಲೂ ಮಾಧ್ಯಮಗಳು ಕನ್ನಡಕ್ಕೆ ಪ್ರಚಾರ ನೀಡುವ ಕೆಲಸ ಮಾಡುತ್ತವೆ. ಪ್ರಚಾರ ನೀಡುವ ನಿಟ್ಟಿನಲ್ಲಿ ಗ್ರಾಂಥಿಕ ಮಾಧ್ಯಮಗಳಿಗಿಂತ ಮೌಖಿಕ ಮಾಧ್ಯಮಗಳೇ ಹೆಚ್ಚು ಪರಿಣಾಮಕಾರಿ ಎನ್ನಬಹುದು. ಜನರಲ್ಲಿ ಸಾಕ್ಷರತೆಯ ಮಟ್ಟ ಹೆಚ್ಚಿದರೆ ಗ್ರಾಂಥಿಕ ಮಾಧ್ಯಮಗಳು ಇನ್ನೂ ವ್ಯಾಪಕವಾಗಿ ಪ್ರಚಾರ ನೀಡಬಹುದು. ದಾಖಲೆಯ ರೂಪದಲ್ಲಿ ಭಾಷೆಯನ್ನು ಜೀವಂತಗೊಳಿಸಬಹುದು.

ಮಾಧ್ಯಮಗಳು ಜನರಲ್ಲಿ ತಿಳುವಳಿಕೆ ಮೂಡಿಸುವ ನಿಟ್ಟಿನಲ್ಲಿ ಅಪಾರ ಕೆಲಸ ಮಾಡುತ್ತಿರುವುದನ್ನು ಗಮನಿಸಬೇಕು. ಸಮಾಜದ ವಿವಿಧ ವಿಚಾರಗಳ ಬಗ್ಗೆ ಜನಜಾಗೃತಿ ಮೂಡಿಸಬಲ್ಲ ಮಾಧ್ಯಮಗಳು ಕನ್ನಡ ಭಾಷೆ, ಬಳಕೆಯ ಬಗ್ಗೆಯೂ ಅರಿವು ಮೂಡಿಸಲು ಶ್ರಮಿಸಬಹುದಾಗಿದೆ. ಜನರಲ್ಲಿ ಭಾಷಾಭಿಮಾನ, ದೇಶಾಭಿಮಾನದ ಕಿಡಿ ಹಚ್ಚುವ ಕೆಲಸವನ್ನೂ ಅವು ಮಾಡಬಹುದಾಗಿದೆ. ಕನ್ನಡ ನಾಡು, ನುಡಿ, ಇತಿಹಾಸ, ಭಾಷೆ, ಸಾಹಿತ್ಯ ಮತ್ತು ಸಂಸ್ಕೃತಿಯ ಬಗ್ಗೆ ಹೆಚ್ಚು ಹೆಚ್ಚಾಗಿ ಕಾರ್ಯಕ್ರಮಗಳನ್ನೂ ಲೇಖನಗಳನ್ನೂ ಪ್ರಸಾರ ಹಾಗೂ ಪ್ರಚಾರ ಮಾಡಬಹುದಾಗಿದೆ.

### ಭಾಷಾ ಬೆಳವಣಿಗೆಯ ವಿಧಾನಗಳು

ಕನ್ನಡ ಭಾಷೆಯನ್ನು ಬೆಳೆಸುವ ದಿಕ್ಕಿನಲ್ಲಿ ಮಾಧ್ಯಮಗಳಿಗಿರುವ ಶಕ್ತಿ ಸಾಮರ್ಥ್ಯಗಳ ಬಗ್ಗೆ ವಿಶ್ಲೇಷಣೆ ನಡೆಸಿದ ಮೇಲೆ ಈಗ ಅವು ಭಾಷೆಯನ್ನು ಬೆಳೆಸಲು ಅಳವಡಿಸಿಕೊಳ್ಳುವ ವಿಧಾನಗಳನ್ನು ಗಮನಿಸಬಹುದು.

- ಆಧುನೀಕರಣ
  - ಅ. ಟಂಕೀಕರಣ
  - ಆ. ಭಾಷಾಂತರೀಕರಣ
  - ಇ. ಅನ್ಯಭಾಷಾ ಸ್ವೀಕರಣ
  - ಈ. ನುಡಿಬೆರಕೆ/ಭಾಷಾಮಿಶ್ರಣ
- ಪ್ರಮಾಣೀಕರಣ

### <u>ಆಧುನೀಕರಣ</u>

*ಒಂದು ಭಾಷೆ ಸಂವಹನ ಮಾಧ್ಯಮವಾಗಿ ಇತರ ಆಧುನಿಕ*
*ಅಭಿವೃದ್ಧಿಗೊಂಡ ಭಾಷೆಗಳೊಡನೆ ಅಂತರ್ ಭಾಷಾಂತರ ಸಾಧ್ಯತೆ*
*ಪಡೆದುಕೊಳ್ಳುವ ಪ್ರಕ್ರಿಯೆಯೇ ಭಾಷಾ ಆಧುನೀಕರಣ*[1]

ಎಂದು ಭಾಷಾ ವಿಜ್ಞಾನಿ ಚಾರ್ಲ್ಸ್ ಫರ್ಗುಸನ್ ಕರೆದಿದ್ದಾರೆ. ಕೆಲವು ಕಾಲಘಟ್ಟದಲ್ಲಿ ಸಮಾಜದ ವೈಚಾರಿಕ, ಸಾಮಾಜಿಕ, ತಾಂತ್ರಿಕ ವಿಕಾಸವಾದಂತೆಲ್ಲ ಭಾಷೆಯೂ ಅಷ್ಟೇ ವೇಗವಾಗಿ ಬದಲಾಗಬೇಕಾಗುತ್ತದೆ. ಅದೇ ಭಾಷೆಯ ಆಧುನೀಕರಣವೆನ್ನಲೂಬಹುದು.

ಈಗ ನಾವಿರುವುದೇ ಆಧುನಿಕ ಯುಗದಲ್ಲಿ. ವಿಜ್ಞಾನ - ತಂತ್ರಜ್ಞಾನ, ಕೃಷಿ, ಶಿಕ್ಷಣ, ಸಾಮಾಜಿಕಾರ್ಥಿಕ ವಲಯಗಳು ಹೀಗೆ ವಿಶ್ವವೇ ಆಧುನಿಕತೆಯ ಮನ್ವಂತರದಲ್ಲಿದೆ. ಭಾರತೀಯ ಸಮಾಜವೂ ಇದಕ್ಕೆ ಹೊರತಾಗಿಲ್ಲ. ಭಾರತೀಯ ಪ್ರಾದೇಶಿಕ

ಭಾಷೆಗಳಂತೂ ಆಧುನಿಕ ಸಂದರ್ಭಕ್ಕೆ ಹೊಂದಿಕೊಳ್ಳುವುದಕ್ಕೆ ಪ್ರಯತ್ನಿಸುತ್ತ ಅನೇಕ ಸವಾಲುಗಳನ್ನು ಎದುರಿಸುತ್ತಿವೆ. ಆಧುನಿಕ ಸಮಾಜದಲ್ಲಿ ಬಳಕೆಯಾಗುತ್ತಿರುವ ಕನ್ನಡ ಭಾಷೆಯನ್ನು ಆಧುನಿಕ ಕನ್ನಡವೆಂದೇ ಕರೆಯಬಹುದೆನ್ನುವ ಅಭಿಪ್ರಾಯವನ್ನೂ ವಿದ್ವಾಂಸರು ವ್ಯಕ್ತಪಡಿಸುತ್ತಿದ್ದಾರೆ.

> *ಕಳೆದ ಶತಮಾನದಲ್ಲಿ ಆಗಿರುವ ಅತಿ ವ್ಯಾಪಕವಾದ ಕನ್ನಡದ ಅಭಿವೃದ್ಧಿಯನ್ನು ಗಮನಿಸಿದರೆ ೨೦ನೆಯ ಶತಮಾನದಿಂದ ಈಚಿನ ಕಾಲವನ್ನು 'ಆಧುನಿಕ ಕನ್ನಡ' ಎಂದು ಹೊಸ ಯುಗವಾಗಿ ಪರಿಗಣಿಸಬೇಕಾಗುತ್ತದೆ*[೫]

ಎಂದು ಜಿ. ವೆಂಕಟಸುಬ್ಬಯ್ಯ ಹೇಳಿದ್ದಾರೆ.

> *Modernization has been a dominant feature of the present day Indian society and the regional languages have met with the challenge of rising to the occassion*[೬]

ಎಂದಿದ್ದಾರೆ ಎಂ. ಚಿದಾನಂದಮೂರ್ತಿ. ಕೆ.ವಿ. ನಾರಾಯಣ ಅವರ ಪ್ರಕಾರ

> *ಆಧುನೀಕರಣವೆಂದರೆ, ಸರಳವಾಗಿ ಹೇಳುವುದಾದರೆ, ಆಧುನಿಕ ಜಗತ್ತಿನ ಅವಶ್ಯಕತೆಗಳನ್ನು ಪೂರೈಸಲು ಯಾವುದೇ ಬಗೆಯ, ಯಾವುದೇ ವಲಯದ ಬಳಕೆಗಾದರೂ ಭಾಷೆ ಸನ್ನದ್ಧವಾಗುವುದು.*[೭]

ಕನ್ನಡ ಎಲ್ಲ ಸಂದರ್ಭಗಳಲ್ಲೂ ಬಳಕೆಯಾಗಲು ಸನ್ನದ್ಧವಾಗಿದೆ, ನಿರಂತರವಾಗಿ ಆಗುತ್ತಿದೆ. ಮುಖ್ಯವಾಗಿ ಆಧುನೀಕರಣದ ಈ ಕ್ರಿಯೆ ಮಾಧ್ಯಮಗಳ ಮೂಲಕ ನಡೆಯುತ್ತಿದೆ ಎನ್ನುವುದು ಗಮನಾರ್ಹ. ಅದಕ್ಕೆ ಕಾರಣವೂ ಸ್ಪಷ್ಟವಾಗಿದೆ. ಜಗತ್ತಿನ ಯಾವುದೇ ಹೊಸ ವಿಚಾರ, ಮಾಹಿತಿ, ಆವಿಷ್ಕಾರ ಮುಂತಾದವನ್ನು ಮೊದಲು ಸ್ವೀಕರಿಸುವುದೇ ಮಾಧ್ಯಮ.

ಪ್ರಚಲಿತ ವಿದ್ಯಮಾನಗಳ ಕಡೆ ಹೆಚ್ಚಿನ ಗಮನ ಹರಿಸುವುದರಿಂದಲೇ ಮಾಧ್ಯಮಗಳು ಜಗತ್ತಿನ ಯಾವ ಭಾಷೆಯಲ್ಲಿ ಅದು ಹೊರಬಂದರೂ ಮೊದಲು ಅದನ್ನು ತಮ್ಮ ಭಾಷೆಗೆ ಸ್ವೀಕರಿಸುತ್ತವೆ. ಈ ಹಂತದಲ್ಲೇ ಸವಾಲುಗಳು ಮೊಳೆಯುವುದು. ಉದಾಹರಣೆಗೆ ತಂತ್ರಜ್ಞಾನದ ಹೊಸ ತಯಾರಿಕೆಯಾಗಿ 'ಟ್ರ್ಯಾಕ್ಟರ್' ಪದ ಹುಟ್ಟಿರುತ್ತದೆ. ಇದನ್ನೇ ಕನ್ನಡ ಮಾಧ್ಯಮಗಳು ಮೊದಲ ಬಾರಿಗೆ ಬಳಸಬೇಕಾದಾಗ ಅದಕ್ಕೆ ತತ್ಸಮಾನವಾದ ಕನ್ನಡ ಪದವನ್ನು ಹುಡುಕಿ ಅಥವಾ ಸೃಷ್ಟಿಸಿ ಬಳಸುವಷ್ಟು ಕಾಲಾವಕಾಶವೂ ಇಲ್ಲದೆ 'ಟ್ರ್ಯಾಕ್ಟರ್' ಎನ್ನುವ ಪದವನ್ನೇ ಹಾಗೆಂದರೇನು ಎನ್ನುವ ವಿವರಣೆಯೊಂದಿಗೆ ಬಳಸಬೇಕಾಗುತ್ತದೆ. ಈ ಪದವೇ ಮೇಲಿಂದ ಮೇಲೆ ಬಳಕೆಯಾಗುತ್ತ ಕನ್ನಡದ ಪದವಾಗಿಯೇ ಉಳಿಯುತ್ತದೆ. ವ್ಯಕ್ತಿಗತ/ಪ್ರಾದೇಶಿಕ ಉಚ್ಚಾರಣೆಗೆ ತಕ್ಕಂತೆ ಅಲ್ಪಸ್ವಲ್ಪ ಬದಲಾವಣೆಯೂ ಆಗಬಹುದು. ತ್ರಾಕ್ಟರು, ಟ್ರಾಕ್ಟು ಇತ್ಯಾದಿ.

ಅನ್ಯಭಾಷಾ ಸ್ವೀಕಾರದಂತೆಯೇ ಆದರೂ ಇಲ್ಲಿ ಆಧುನಿಕವಾದ ಹಾಗೂ ಅಭಿವೃದ್ಧಿಗೊಂಡ ಭಾಷೆಯೊಂದರಿಂದ ಈ ಸ್ವೀಕೃತಿ ನಡೆದಿರುವುದು ಗಮನಾರ್ಹ. 19ನೇ ಶತಮಾನದ ಕೊನೆಯ ಭಾಗದಲ್ಲಿ ಕನ್ನಡದ ಬೌದ್ಧಿಕವರ್ಗ ಆಧುನೀಕರಣವನ್ನು ಕುರಿತಂತೆ ಅವಲೋಕನ ಹಾಗೂ ಆಲೋಚನೆಗೆ ತೊಡಗಿದಾಗ ಕನ್ನಡ ಮಾನವಿಕ ಕ್ಷೇತ್ರಗಳಲ್ಲಿ ಮಾತ್ರ ಬೆಳವಣಿಗೆ ಕಂಡಿದ್ದನ್ನು ಗುರುತಿಸಲಾಯಿತು. ಅದನ್ನು ಇತರ ಆಧುನಿಕ ಕ್ಷೇತ್ರಗಳಲ್ಲೂ ಬೆಳೆಸುವ ಪ್ರಯತ್ನವಾಗಿ ಕನ್ನಡ ಭಾಷೆಯ ಆಧುನೀಕರಣ

ಚಳವಳಿಯೇ ಆರಂಭವಾಗಿರುವುದು ಉಲ್ಲೇಖಾರ್ಹ. ಮೈಸೂರು ಮಹಾರಾಜರಾದ ಚಾಮರಾಜ ಒಡೆಯರ್ ಅವರ ನೇತೃತ್ವದಲ್ಲಿ 1886 ರಲ್ಲಿ 'ಭಾಷೋಜ್ಜೀವಿನಿ ಸಭಾ' ಆರಂಭವಾದುದನ್ನು ಗುರುತಿಸಬಹುದು. ಅದಕ್ಕೂ ಮೊದಲೇ 1883ರಲ್ಲಿ, ಕನ್ನಡದ ಮೊದಲ ವೃತ್ತಪತ್ರಿಕೆ ಆರಂಭವಾದಂದಿನಿಂದಲೇ ಆಧುನೀಕರಣದ ಮೊದಲ ಹೆಜ್ಜೆಗಳನ್ನಿಟ್ಟಿರುವುದು ಗಮನಾರ್ಹ ಹಾಗೂ ಈ ಅಧ್ಯಯನಕ್ಕೆ ಹೆಚ್ಚು ಪೂರಕ. ಕನ್ನಡ ಭಾಷಾ ಆಧುನೀಕರಣದ ಪ್ರಕ್ರಿಯೆಯನ್ನು ಮೊದಲು ಆರಂಭಿಸಿದ ಹೆಗ್ಗಳಿಕೆ ಮಾಧ್ಯಮಗಳ ಪಾಲಿಗಿದೆ ಎಂದು ಇದರಿಂದ ಘಂಟಾಘೋಷವಾಗಿ ಹೇಳಲು ಸಾಧ್ಯವಾಗಿದೆ.

ಕನ್ನಡ ಆಧುನೀಕರಣಗೊಂಡಿದೆ ಎಂದು ಹೇಳುವುದಕ್ಕೆ ಈ ಕಾರಣಗಳನ್ನು ಗಮನಿಸಬಹುದು.

- ಶಬ್ದಕೋಶ ವಿಸ್ತರಣೆ
- ದೇಸಿಯಲ್ಲದ ರಚನಾಕ್ರಮ
- ವ್ಯಾಪಕವಾಗಿ ಆದರೆ ಸಾಕಷ್ಟು ಸೂಕ್ಷ್ಮವಾಗಿ ಇಂಗ್ಲಿಷ್‌ನ ರಚನಾಕ್ರಮದ ಮಾದರಿಯನ್ನು ಕನ್ನಡದ ಶಬ್ದಕೋಶ ಮತ್ತು ರಚನಾಕ್ರಮದಲ್ಲಿ ಅಳವಡಿಸಿಕೊಂಡಿದ್ದು.
- ವ್ಯಾಕರಣ ನಿಯಮಗಳ ಸಡಿಲಿಕೆ.
- ಆಡುಮಾತಿನ ಕನ್ನಡಕ್ಕೆ ಬರಹದ ರೂಪ.
- ಏಕಕಾಲಕ್ಕೆ ಪರ್ಯಾಯ ಶಬ್ದಕೋಶದಿಂದಾಗಿ ಹೆಚ್ಚಿನ ಶೈಲಿಯ ಆಯ್ಕೆ ಸಾಧ್ಯವಾಗಿದ್ದು.
- ಮಿಶ್ರ ಭಾಷಾ ಬಳಕೆ
- ಪರಂಪರಾಗತವಾದ ದ್ವಿಸ್ತರ (diglossic) ರೂಢಿಗಳ ಉಲ್ಲಂಘನೆ.

ಕನ್ನಡ ಭಾಷೆಯನ್ನು ಆಧುನಿಕಗೊಳಿಸುವ ನಿಟ್ಟಿನಲ್ಲಿ ವರ್ತಮಾನ ಪತ್ರಿಕೆಗಳು, ದೂರದರ್ಶನ, ಆಕಾಶವಾಣಿ ಮಾಧ್ಯಮಗಳು ಅಸಾಧಾರಣವಾದ ಕೆಲಸ ಮಾಡಿವೆ ಎಂದೇ ಹೇಳಬಹುದು. ಕನ್ನಡದ ಪತ್ರಿಕೆಗಳು 19ನೇ ಶತಮಾನದ ಆರಂಭದಿಂದಲೂ ಭಾಷಾ ಆಧುನೀಕರಣಕ್ಕಾಗಿ ಶ್ರಮಿಸಿವೆ. ಹೊಸಭಾಷಾ ಶೈಲಿಯನ್ನು ರೂಪಿಸಿಕೊಂಡಿವೆ. ಅನೇಕ ಹೊಸ ಶಬ್ದಗಳನ್ನು ಸೃಷ್ಟಿಸಿವೆ. ಅದಕ್ಕೆ ಕಾರಣವೂ ಇಲ್ಲದಿಲ್ಲ. ಆಗಿನ ಪತ್ರಿಕೆಗಳಿಗೆ ಸಾಹಿತಿಗಳು, ವಿಶ್ವವಿದ್ಯಾನಿಲಯಗಳಲ್ಲಿ ಕಲಿತವರು, ವಿದ್ಯಾ ಇಲಾಖೆಯಲ್ಲಿ ಕೆಲಸ ಮಾಡುತ್ತಿದ್ದವರೂ ಬರಹಗಳನ್ನು ಕಳಿಸುತ್ತಿದ್ದರು. ಭಾಷೆಯ ಬಗ್ಗೆ ಅವರಿಗೆ ಸಹಜವಾದ ಕಾಳಜಿ ಇತ್ತು. ಮುದ್ರಣ ಮಾಧ್ಯಮವಾಗಿದ್ದುದರಿಂದ ಪತ್ರಿಕೆಯ ಭಾಷೆ ಇತ್ತ ಗ್ರಾಂಥಿಕವೂ ಆಗಿರಬೇಕಾಗಿತ್ತು, ಸಾಮಾನ್ಯ ಜನರಿಗೆ ತಲುಪುತ್ತಿದ್ದುದರಿಂದ ಅತ್ತ ಆಡುಮಾತಿಗೆ ಹತ್ತಿರವೂ ಆಗಿರಬೇಕಿತ್ತು. ಹಾಗಾಗಿ ಮಾಧ್ಯಮದ್ದೇ ಒಂದು ಹೊಸ ಭಾಷೆ ಸೃಷ್ಟಿಯಾಯಿತು. ತಾಯಿನಾಡು, ವೀರಕೇಸರಿ, ವಿಶ್ವ ಕರ್ನಾಟಕ ಪತ್ರಿಕೆಗಳು ಈ ನಿಟ್ಟಿನಲ್ಲಿ ಹೆಚ್ಚಿನ ಶ್ರಮ ಹರಿಸಿವೆ. ವಿಶ್ವ ಕರ್ನಾಟಕದ ಸಂಪಾದಕರಾಗಿದ್ದ ತಿರುಮಲೆ ತಾತಾಚಾರ್ಯ ಶರ್ಮ ಹೊಸ ಪದಗಳ ಸೃಷ್ಟಿಗೇ ಹೆಸರುವಾಸಿಯಾಗಿದ್ದರು. ಆಧುನಿಕ ಯುಗದ ಹೊಸ ಪಾರಿಭಾಷಿಕ ಪದಗಳು ಸೃಷ್ಟಿಯಾಗಿ ಕನ್ನಡ ಭಾಷೆಯ ಮುಖ್ಯ ವಾಹಿನಿಯಲ್ಲಿ ಸೇರಿಹೋದವು.

ಆಕಾಶವಾಣಿ, ದೂರದರ್ಶನದಂತಹ ವಿದ್ಯುನ್ಮಾನ ಮಾಧ್ಯಮಗಳೂ ಸಹ ಇಂತಹ ಪ್ರಯತ್ನಗಳನ್ನು ಯಶಸ್ವಿಯಾಗಿ ಮಾಡಿವೆ. ಇವು ಮುಖ್ಯವಾಗಿ ಮೌಖಿಕ ಮಾಧ್ಯಮ. ಪತ್ರಿಕೆಗಳಂತೆ ಒಂದು ಮಾಧ್ಯಮ ಭಾಷೆಯನ್ನೇ ಇವೂ ಬಳಸುತ್ತವೆಯಾದರೂ ಆಡುಮಾತಿನ ಪರ ನಿಲ್ಲುತ್ತವೆ. ದೂರದರ್ಶನಕ್ಕಿಂತಲೂ ಹಳೆಯ ಇತಿಹಾಸವಿರುವ ಆಕಾಶವಾಣಿ ಭಾಷಾ ಆಧುನೀಕರಣ ಅಥವಾ ಇತರ ಸೂತ್ರಗಳನ್ನು ಅಳವಡಿಸಿಕೊಳ್ಳುವುದಕ್ಕೆ ಕನ್ನಡದ ಅನೇಕ ಸಾಹಿತಿಗಳೂ, ಭಾಷಾಕೋವಿದರೂ ಈ

ಮಾಧ್ಯಮದೊಂದಿಗೆ ನಿಕಟ ಸಂಪರ್ಕ ಹೊಂದಿದ್ದುದೂ ಮುಖ್ಯ ಕಾರಣವೆನ್ನಬಹುದು. ಅದೇ ಕಾರಣದಿಂದಲೇ ಆಕಾಶವಾಣಿಯ ಕಾರ್ಯಕ್ರಮಗಳಿಗೆ ಸಾಹಿತ್ಯಕ ಮೌಲ್ಯ ಒದಗಿದೆಯೆಂದೂ ಹೇಳಬಹುದು.

ಭಾಷಾ ಆಧುನೀಕರಣಕ್ಕೆ ಸಂಬಂಧಿಸಿದಂತೆ ದೂರದರ್ಶನ ಸಹ ಉತ್ತಮ ಸೇವೆ ಮಾಡುವ ಸಾಧ್ಯತೆಗಳಿವೆ. ಈಗಂತೂ ಅನೇಕ ವಾಹಿನಿಗಳು ಕೆಲಸ ಮಾಡುತ್ತಿದ್ದು ಭಾಷಾ ಬೆಳವಣಿಗೆಯ ಕೈಂಕರ್ಯವನ್ನು ಮಾಡುವ ವಿಪುಲ ಅವಕಾಶಗಳಿವೆ. ಇನ್ನೂ ಹೊಸ ಮಾಧ್ಯಮವಾಗಿರುವುದರಿಂದ ಈ ಅವಕಾಶಗಳನ್ನು ಮುಂದೆ ಸದುಪಯೋಗ ಮಾಡಿಕೊಳ್ಳುತ್ತವೆ ಎಂದು ಭಾವಿಸಬಹುದಾಗಿದೆ. ಆದರೂ ಈ ಮಾಧ್ಯಮ ಭಾಷಾತಜ್ಞರ, ಸಾಹಿತಿಗಳ, ವಿದ್ವಾಂಸರ, ಚಿಂತಕರ ಮಾರ್ಗದರ್ಶನ, ಸಲಹೆ ಸೂಚನೆಗಳನ್ನು ಪಡೆಯುವುದು ಇನ್ನೂ ಹೆಚ್ಚು ಉಪಯುಕ್ತ.

ಕನ್ನಡದ ಆಧುನೀಕರಣದ ಕೆಲಸವನ್ನು ಮಾಧ್ಯಮಗಳು ಸಮರ್ಥವಾಗಿ ಮಾಡುತ್ತಿವೆ ಎನ್ನುವುದನ್ನು ಅವು ರೂಢಿಗೆ ತಂದಿರುವ ಈ ಪದಗಳ ಪಟ್ಟಿಯ ಮೂಲಕ ಸಮರ್ಥಿಸಿಕೊಳ್ಳಬಹುದು.

| | | |
|---|---|---|
| Ammendment | - | ತಿದ್ದುಪಡಿ |
| Atmosphere | - | ವಾತಾವರಣ |
| Black Money | - | ಕಪ್ಪು ಹಣ |
| Box Office | - | ಗಲ್ಲಾ ಪೆಟ್ಟಿಗೆ |
| Call | - | ಕರೆ |
| Call attention | - | ಗಮನ ಸೆಳೆಯುವ ಸೂಚನೆ |
| Channel | - | ವಾಹಿನಿ |
| Charge | - | ಆರೋಪ |
| Charge Sheet | - | ಆರೋಪ ಪಟ್ಟಿ |
| Clarification | - | ಸ್ಪಷ್ಟೀಕರಣ |
| Column | - | ಅಂಕಣ |
| Constituency | - | ಮತಕ್ಷೇತ್ರ, ಚುನಾವಣಾ ವಿಭಾಗ |
| Custody | - | ವಶ, ಹತೋಟಿ |
| Cut | - | ಕಡಿತ, ಕತ್ತರಿಸು |
| Dark Chapter | - | ಕಪ್ಪು ಅಧ್ಯಾಯ |
| Defection | - | ಪಕ್ಷಾಂತರ, ಪಕ್ಷತ್ಯಾಗ |
| Demand | - | ಬೇಡಿಕೆ, ಕೋರಿಕೆ |
| Exit Poll | - | ಚುನಾವಣಾ ಪೂರ್ವ ಸಮೀಕ್ಷೆ |
| Democracy | - | ಪ್ರಜಾಪ್ರಭುತ್ವ |
| Deteriorate | - | ಕ್ಷೀಣಿಸು, ಹದಗೆಡು |
| Editorial | - | ಅಗ್ರಲೇಖನ |

| | |
|---|---|
| Fixed Deposit - | ಇಡುಗಂಟು, ನಿಶ್ಚಿತ ಠೇವಣಿ |
| Home Industry - | ಗೃಹ ಕೈಗಾರಿಕೆ |
| Illicit Liquor - | ಕಳ್ಳಭಟ್ಟಿ, ಕಳ್ಳಸಾರಾಯಿ |
| Inflation - | ಹಣದುಬ್ಬರ |
| Lower House - | ಕೆಳಮನೆ |
| Media - | ಮಾಧ್ಯಮ |
| Manifesto - | ಪ್ರಣಾಳಿಕೆ |
| Monopoly - | ಏಕಸ್ವಾಮ್ಯ, ಸರ್ವಸ್ವಾಮ್ಯ |
| Motion, Proposal - | ಮಂಡನೆ |
| Nepotism - | ಸ್ವಜನ ಪಕ್ಷಪಾತ |
| Non-Aligned Nation - | ಅಲಿಪ್ತ ರಾಷ್ಟ್ರ |
| Ordinance - | ಸುಗ್ರೀವಾಜ್ಞೆ |
| Poultry - | ಕೋಳಿ ಸಾಕಣೆ |
| Parliament - | ಸಂಸತ್ತು |
| Pin - | ಗುಂಡುಸೂಜಿ |
| Preventive - | ಪ್ರತಿಬಂಧಕ |
| Radical - | ಉಗ್ರಗಾಮಿ |
| Release - | ಬಿಡುಗಡೆ |
| Secretariat - | ಸಚಿವಾಲಯ |
| Smuggled Goods - | ಕಳ್ಳ ಸರಕು |
| Split - | ಬಿರುಕು |
| Stalemate - | ಯಥಾಸ್ಥಿತಿ |
| Television - | ದೂರದರ್ಶನ |
| Under World - | ಭೂಗತ ಲೋಕ |
| Upper House - | ಮೇಲ್ಮನೆ |
| Zero Hour - | ಶೂನ್ಯವೇಳೆ |

ಆಧುನಿಕ ಜಗತ್ತಿನ ಇಂಗ್ಲಿಷ್ ಪದಗಳಿಗೆ ಕನ್ನಡದ ಪದಗಳನ್ನು ಮಾಧ್ಯಮಗಳು ಸೃಜಿಸಿದ್ದೇ ಅಲ್ಲದೆ, ಪದಪುಂಜಗಳಿಗೂ ನುಡಿಗಟ್ಟುಗಳಿಗೂ, ಕನ್ನಡ ಪದಪುಂಜಗಳನ್ನೂ ಪದಗಳನ್ನೂ ಸೃಷ್ಟಿಸಿ ಬಳಕೆಗೆ ತಂದಿವೆ.

ಚಹಾ ಬಟ್ಟಲಿನಲ್ಲಿ ಹೊಸ ಅಲೆ

ಚೆಂಡು ನಿಮ್ಮ ಅಂಗಳದಲ್ಲಿದೆ

ವಿಕೇಂದ್ರೀಕರಣ

ಅಸಾಂಪ್ರದಾಯಿಕ ಇಂಧನ

| | |
|---|---|
| ಮೌಲ್ಯಧಾರಿತ ರಾಜಕಾರಣ | ಪರಿಸರ ಮಾಲಿನ್ಯ |
| ಸಾಧನಾ ಸಮಾವೇಶ | ಜೈವಿಕ ತಂತ್ರಜ್ಞಾನ |
| ಫಲಾನುಭವಿ | ಸ್ಪರ್ಧಾತ್ಮಕ |
| ಸಾಲಮೇಳ | ಪುನಾರಚನೆ |
| ಸಂಕ್ಷಿಪ್ತ ಜಾಹೀರಾತು | ನಿಯಂತ್ರಿತ ಮಾರುಕಟ್ಟೆ |
| ಪತ್ರಿಕಾಗೋಷ್ಠಿ | ನ್ಯಾಯಾಂಗ ಕಸ್ಟಡಿ |
| ಮೌಲ್ಯಮಾಪನ | ಸಭಾತ್ಯಾಗ |
| ಶೀತಲ ಸಮರ | ದೂರಮುದ್ರಣ |

ಭಾಷೆ ಆಧುನೀಕರಣಗೊಳ್ಳುವ ಸಂದರ್ಭದಲ್ಲಿ ನಿಲ್ಲಲಾರದ ಅನೇಕ ಪದಗಳೂ ಸೃಷ್ಟಿಯಾಗುತ್ತವೆ. Xerox ಎನ್ನುವುದಕ್ಕೆ ನೆರಳಚ್ಚು ಎಂಬ ಕನ್ನಡ ಪದ ಹುಟ್ಟಿತಾದರೂ ರೂಢಿಯಲ್ಲಿ ನಿಲ್ಲದೇ ಹೋಯಿತು. ಗಣಕಯಂತ್ರ ಎನ್ನುವುದಕ್ಕಿಂತ ಕಂಪ್ಯೂಟರ್ ಎನ್ನುವುದೇ ವ್ಯಾಪಕವಾಗಿ ಬಳಕೆಯಲ್ಲಿದೆ. Neck tieಗೆ ಕಂಠ ಕೌಪೀನ, ಮುಂತಾದ ಪದಗಳೂ ಹುಟ್ಟಿ ಸತ್ತಿವೆ.

ಭಾಷೆ ಆಧುನೀಕರಣಗೊಳ್ಳುವಾಗ ಹೊಸ ಪದದ ಸೃಷ್ಟಿಯಾಗುತ್ತದೆ ಎನ್ನುವುದು ಸ್ವಾಭಾವಿಕವೇ ಆದರೂ ಅದು ಆಗುವ ರೀತಿಯೂ ವಿಚಾರಯೋಗ್ಯ. ಟಂಕೀಕರಣ, ಭಾಷಾಂತರೀಕರಣ, ಅನ್ಯಭಾಷಾ ಸ್ವೀಕರಣ, ಭಾಷಾ ಮಿಶ್ರಣ ಅಥವಾ ನುಡಿಬೆರಕೆಯ ಮೂಲಕವೂ ಭಾಷೆ ಆಧುನಿಕಗೊಳ್ಳುತ್ತದೆ.

### ಅ. ಟಂಕೀಕರಣ

ಅನ್ಯಭಾಷೆಯ ಒಂದು ಪದದ ಅರ್ಥವನ್ನಾಧರಿಸಿ ಕನ್ನಡದ ಜಾಯಮಾನಕ್ಕೆ ಹೊಂದುವ ಒಂದು ಹೊಸ ಕನ್ನಡ ಪದವನ್ನೇ ಸೃಷ್ಟಿಸುವುದನ್ನು ಟಂಕೀಕರಣ ಎನ್ನಬಹುದು. ಹಲವು ಸಂದರ್ಭದಲ್ಲಿ ಟಂಕಿಸಿದ ಹೊಸ ಕನ್ನಡ ಶಬ್ದಕ್ಕೂ ಮೂಲದ ಅನ್ಯಭಾಷಾ ಶಬ್ದಕ್ಕೂ ಅರ್ಥಾತ್ ಸಂಬಂಧವೇ ಇರದೆಯೂ ಇರಬಹುದು. ಉದಾಹರಣೆಗೆ Phone tapping - ಕದ್ದಾಲಿಕೆ, Glamour - ರತಿ ವರ್ಚಸ್ಸು.

> *Such blind translations could introduce into kannada*
> *different or unconnected meanings.*[೮]

ಎಂದು ಹೇಳುವ ಚಿದಾನಂದಮೂರ್ತಿ 'ಸಂಪುಟ' ಅಥವಾ 'ಸಚಿವ ಸಂಪುಟ'ಪದವನ್ನು ಉದಾಹರಣೆಯಾಗಿ ನೀಡಿದ್ದಾರೆ. ಅದೇ ರೀತಿ ಮರುವಸತಿ ಅಥವಾ ಪುನರ್ವಸತಿ ಎನ್ನುವುದೂ ಕನ್ನಡದಲೇ ಟಂಕಿಸಲಾದ ಪದ.

| | | |
|---|---|---|
| Aquarium | - | ಮತ್ಸ್ಯಾಲಯ |
| Chancellor | - | ಕುಲಾಧಿಪತಿ |
| Circulation | - | ಆವರ್ತನ |
| Confiscate | - | ಮುಟ್ಟುಗೋಲು |
| Floor Jumping | - | ಪಕ್ಷಾಂತರ |

| | | |
|---|---|---|
| Grower | - | ಬೆಳೆಗಾರ |
| Library | - | ಗ್ರಂಥಾಲಯ |
| Lock out | - | ಬೀಗಮುದ್ರೆ |
| Polling Booth | - | ಮತಗಟ್ಟೆ |
| Registrar | - | ಕುಲಸಚಿವ |
| Slum | - | ಕೊಳಚೆ ಪ್ರದೇಶ, ಕೊಳಗೇರಿ |
| Short hand | - | ಶೀಘ್ರಲಿಪಿ |
| type write | - | ಬೆರಳಚ್ಚು |
| Vice- Chancellor | - | ಕುಲಪತಿ |
| Voting | - | ಮತದಾನ |
| Voter | - | ಮತದಾರ |
| Zoo | - | ಮೃಗಾಲಯ |

ಮೊದಲಾದ ಅನೇಕ ಪದಗಳು ಕನ್ನಡಕ್ಕೆ ಮಾಧ್ಯಮಗಳು ಟಂಕಿಸಿಕೊಟ್ಟ ಕೊಡುಗೆಯಾಗಿವೆ. ಇತ್ತೀಚೆಗೆ ಚಾಲ್ತಿಯಲ್ಲಿರುವ ವಿಶ್ವಸುಂದರಿ, ಪ್ರಣಾಳ ಶಿಶು, ಸಮ್ಮಿಶ್ರ ಸರ್ಕಾರ, ಮುಂತಾದವು ಕನ್ನಡವನ್ನು ಇನ್ನಷ್ಟು ಆಧುನಿಕಗೊಳಿಸಿರುವ ಟಂಕಿತ ಪದಗಳು. ಇವೆಲ್ಲ ಕನ್ನಡಕ್ಕೆ ಅಂತಃಸೃಷ್ಟಿಶೀಲತೆ (Internal Creativity) ಇರುವುದನ್ನು ಸೂಚಿಸುತ್ತವೆ.

### ಆ. ಭಾಷಾಂತರೀಕರಣ

ಭಾಷೆಯನ್ನು ಆಧುನಿಕಗೊಳಿಸುವ ಇನ್ನೊಂದು ಸೂತ್ರ ಭಾಷಾಂತರ. ಅನ್ಯದೇಶೀಯ ಅದರಲ್ಲೂ ಮುಖ್ಯವಾಗಿ ಇಂಗ್ಲಿಷ್ ಪದಗಳನ್ನು ಭಾಷಾಂತರಿಸುವಾಗ ಸಾಮಾನ್ಯವಾಗಿ ಕನ್ನಡದ ಅವಿಭಾಜಕ ಭಾಗದಂತಿರುವ ಸಂಸ್ಕೃತ, ಪರ್ಶೋ-ಅರೇಬಿಕ್ ಮತ್ತು ಇಂಡೋ-ಆರ್ಯನ್ ಭಾಷಾ ಪದಗಳಿಗೆ ತತ್ಸಮಾನವಾದ ಅಥವಾ ಆ ಭಾಷಾ ಪದಗಳನ್ನೇ ಬಳಸಿ ರಚಿಸಿದ ಕನ್ನಡ ಪದಗಳು ಮೂರ್ತಗೊಳ್ಳುತ್ತವೆ. ಸಾಧಾರಣವಾಗಿ ಮೂಲಪದಕ್ಕೆ ಕನ್ನಡದಲ್ಲಿ ಪದವೊಂದನ್ನು ಟಂಕಿಸುವ ಮುನ್ನ ಕನ್ನಡಕ್ಕೆ ಅದನ್ನು ಭಾಷಾಂತರಿಸಬಹುದೇ ಎಂದು ಮಾಧ್ಯಮಗಳು ಯೋಚಿಸುತ್ತವೆ. ಮಾಧ್ಯಮಗಳು ಕನ್ನಡಕ್ಕೆ ಭಾಷಾಂತರಿಸಿರುವ ಕೆಲವು ಪದಗಳ ಪಟ್ಟಿಯನ್ನು ಇಲ್ಲಿ ನೀಡಲಾಗಿದೆ.

| | | |
|---|---|---|
| All electric Home | - | ಸರ್ವ ವಿದ್ಯುತ್ ಗೃಹ |
| Anticipatory Bail | - | ನಿರೀಕ್ಷಣಾ ಜಾಮೀನು |
| Black Money | - | ಕಪ್ಪುಹಣ |
| Enquiry Committee | - | ತನಿಖಾ ಸಮಿತಿ |
| Freedom of Press | - | ಪತ್ರಿಕಾ ಸ್ವಾತಂತ್ರ್ಯ |
| House arrest | - | ಗೃಹಬಂಧನ |
| Non - teaching Staff | - | ಬೋಧಕೇತರ ಸಿಬ್ಬಂದಿ |

| | | |
|---|---|---|
| Nuclear Test | - | ಅಣ್ವಸ್ತ್ರ ಪರೀಕ್ಷೆ |
| Polarisation | - | ಧ್ರುವೀಕರಣ |
| Political colour | - | ರಾಜಕೀಯ ಬಣ್ಣ |
| Prohibitary order | - | ನಿಷೇಧಾಜ್ಞೆ |
| Public interest | - | ಸಾರ್ವಜನಿಕ ಹಿತಾಸಕ್ತಿ |
| Re-broadcast | - | ಮರು ಪ್ರಸಾರ |
| Rolling plan | - | ಆವರ್ತ ಯೋಜನೆ |
| Test tube baby | - | ಪ್ರನಾಳ ಶಿಶು |
| Unbeaten Century | - | ಅಜೇಯ ಶತಕ |

ಇವೆಲ್ಲ ತಮ್ಮಷ್ಟಕ್ಕೆ ತಾವೇ ಅನುವಾದಗೊಂಡ ಅಥವಾ ಭಾಷಾಂತರಗೊಂಡ ಪದಪುಂಜಗಳು. ಇಲ್ಲಿ ಪದಪದವೂ ಅನುವಾದಗೊಂಡಿದೆ. ಟಂಕೀಕರಣದ ಸಂದರ್ಭದಲ್ಲಿ ಆದಂತೆ ಹೊಚ್ಚ ಹೊಸ ಕನ್ನಡ ಪದ ಇಲ್ಲಿ ಮೊಳೆತಿಲ್ಲ. ಇರುವ ಪದಗಳನ್ನೇ ಕೂಡಿಸಿ ಮೂಲಪದದ ಯಥ್ವತ್ ಅನುವಾದ ಮಾಡಲಾಗಿದೆ. ಮಾಧ್ಯಮಗಳ ಸಂದರ್ಭದಲ್ಲಿ ಅವು ಕಾಲದ ಜೊತೆ ಪೈಪೋಟಿ ನಡೆಸುವುದರಿಂದ ಭಾಷಾಂತರೀಕರಣ ಟಂಕೀಕರಣಕ್ಕಿಂತ ಸುಲಭೋಪಾಯ. ಆದರೆ ಅತೀವ ಎಚ್ಚರ ಅಗತ್ಯ.

## ೩. ಅನ್ಯಭಾಷಾ ಸ್ವೀಕರಣ

ಅನ್ಯಭಾಷೆಗಳಿಂದ ಪದಗಳನ್ನು ಸ್ವೀಕರಿಸುವುದು ಕನ್ನಡಕ್ಕೆ ಹೊಸದೇನಲ್ಲ. ಮೂಲತಃ ದ್ರಾವಿಡ ಭಾಷಾವರ್ಗಕ್ಕೆ ಸೇರಿದ ಕನ್ನಡ ತನ್ನ ಮೂಲ ಶಬ್ದ ಭಂಡಾರಕ್ಕೆ ಕಾಲಕ್ರಮೇಣ ಸಂಸ್ಕೃತ, ಪ್ರಾಕೃತ, ಪೋರ್ಚುಗೀಸ್, ಅರೇಬಿಕ್, ಪಾರಸಿ, ಹಿಂದುಸ್ತಾನಿ, ಹಿಂದಿ, ಇಂಗ್ಲಿಷ್, ಮರಾಠಿ, ತೆಲುಗು ಮೊದಲಾದ ಭಾಷೆಗಳಿಂದ ಅನೇಕ ಶಬ್ದಗಳನ್ನು ಸ್ವೀಕರಿಸಿದೆ. ರಾಜಕೀಯ, ಸಾಂಸ್ಕೃತಿಕ, ವಾಣಿಜ್ಯಕ, ಪ್ರವಾಸ ಸಂಬಂಧಿ ಸಂಪರ್ಕ ಮತ್ತು ಒಂದಕ್ಕಿಂತ ಹೆಚ್ಚು ಭಾಷಾ ವಲಯದಲ್ಲಿ ಆಗುವ ಪ್ರಭಾವದಿಂದ ಅನ್ಯಭಾಷಾ ಸ್ವೀಕರಣೆ ಅನಿವಾರ್ಯವೂ, ಅಧಿಕವೂ ಆಗುತ್ತದೆ. ಉದಾಹರಣೆಗೆ, ಇಸ್ತ್ರಿ, ಪಟಾಲಂ, ಲಂಗೋಟಿ, ಅನ್ನ, ನೇಸರು, ಅಮಲು, ಕುಶಾಲು, ನಾಷ್ಟ, ಬ್ಯಾಂಡೇಜು, ಬ್ಲೌಜು ಮುಂತಾದ ಪದಗಳು ಈಗ ಕನ್ನಡ ಪದಗಳೇ ಆಗಿಬಿಟ್ಟಿವೆ.

ಅನ್ಯಭಾಷೆಯ ಶಬ್ದಗಳನ್ನು ಒಂದು ಭಾಷೆ ಪಡೆದು ಬಳಸುವುದಕ್ಕೆ ಎರವಲು ಶಬ್ದಗಳು, ಸ್ವೀಕರಣ ಅಥವಾ ಸ್ವೀಕೃತ ಶಬ್ದಗಳು (Loan Words) ಎನ್ನಲಾಗುತ್ತದೆ. ಭಾಷಾವಿಜ್ಞಾನದ ದೃಷ್ಟಿಯಿಂದ ಇವನ್ನು ಮೂರು ವಿಧವಾಗಿ ವಿಂಗಡಿಸಲಾಗಿದೆ.

- ಸ್ವೀಕೃತ ಪದಗಳು : ಅನ್ಯಭಾಷೆಯ ಪದವನ್ನು ಹೆಚ್ಚು ಕಡಿಮೆ ಮೂಲಧ್ವನಿ ಹಾಗೂ ಆಕೃತಿ ಅಥವಾ ರೂಪದಲ್ಲಿ ಪಡೆದರೆ ಸ್ವೀಕೃತ ಪದ ಎನಿಸಿಕೊಳ್ಳುತ್ತದೆ. ಉದಾ: ಸರಂಜಾಮು, ನಾಜೂಕ್, ಸರಹದ್ದು, ಸವಲತ್ತು.
- ಶಬ್ದಾರ್ಥ ಸ್ವೀಕರಣ : ಒಂದು ಭಾಷೆಯ ಒಂದು ಶಬ್ದರೂಪವನ್ನು ಅಥವಾ ಶಬ್ದಗುಚ್ಛವನ್ನು ಅನ್ಯಭಾಷಾ ಶಬ್ದದ ಅರ್ಥಕ್ಕೆ ಅನುಗುಣವಾಗಿ ಕೊಂಚ ಮಾರ್ಪಾಡು ಮಾಡಿಯೋ, ಇಲ್ಲವೆ ಹಾಗೆಯೋ ಬಳಸಿದಾಗ ಶಬ್ದಾರ್ಥ ಸ್ವೀಕರಣ (Loan Shift) ಎನ್ನಲಾಗುತ್ತದೆ. ಉದಾ: ಅಮಲು, ಇನಾಮು, ಐಬು.
- ಸಂಯೋಜಿತ ಸ್ವೀಕರಣ : ಸ್ವೀಕರಿಸಿದ ಶಬ್ದದ ಭಾಗವನ್ನು ಸ್ಥಳೀಯ ಭಾಷೆಯ ಶಬ್ದರೂಪಕ್ಕೆ ಹೊಂದುವಂತೆ ಮಾರ್ಪಡಿಸಿಕೊಂಡು ಸಂಯೋಜಿಸಿ ಬಳಸುವುದು. ಉದಾ: ರಿಜಲ್ಟು, ಫಂಡು, ಆಫೀಸರು, ಅಂಕಲ್ಲು.

ಇದಕ್ಕಿಂತ ಭಿನ್ನವಾಗಿ ಸಾಂಸ್ಕೃತಿಕ ಸ್ವೀಕರಣ (Cultural borrowing) , ಏಕ ಪಕ್ಷೀಯ ಸ್ವೀಕರಣ (intimate borrowing) ಮತ್ತು ಉಪಭಾಷಾ ಸ್ವೀಕರಣ (Dialect borrowing) ಎಂತಲೂ ವಿಂಗಡಿಸಲಾಗುತ್ತದೆ.

ಇತರ ಅಭಿವೃದ್ಧಿಗೊಂಡ ಭಾಷೆಗಳಿಂದ ಎರವಲು ಪಡೆಯದೆ ಕನ್ನಡಭಾಷೆ ಬೆಳೆಯಲು, ಆಧುನೀಕರಣಗೊಳ್ಳಲು ಸಾಧ್ಯವೇ ಇಲ್ಲ. ಮಾಧ್ಯಮಗಳಲ್ಲಿ ಬಳಕೆಯ ದೃಷ್ಟಿಯಿಂದಲೂ ರಚನೆಯ ದೃಷ್ಟಿಯಿಂದಲೂ ಇದು ಟಂಕೀಕರಣ ಮತ್ತು ಭಾಷಾಂತರೀಕರಣಕ್ಕಿಂತ ತೀರಾ ಸುಲಭ, ಸರಳ ಹಾಗೂ ನೇರ ವಿಧಾನ. ಅನ್ಯಭಾಷಾ ಪದವನ್ನು ಬಹುತೇಕ ಮಟ್ಟಿಗೆ ಅದರ ಮೂಲ ಸ್ವರೂಪದಲ್ಲೇ ಬಳಸಬಹುದಾದದ್ದರಿಂದ ಮಾಧ್ಯಮಗಳು ಈ ವಿಧಾನದ ಕಡೆ ಓಲುತ್ತವೆ. ಸಾಧಾರಣವಾಗಿ ಮಾಧ್ಯಮಗಳು ಬಳಸುವ ಅನ್ಯಭಾಷೆಯಿಂದ ಸ್ವೀಕರಿಸಿದ ಕೆಲವು ಪದಗಳನ್ನು ಗಮನಿಸಬಹುದಾಗಿದೆ :

| | |
|---|---|
| ಖಜಾಂಚಿ | ಅತ್ತರು |
| ಇನಾಮು | ಅರ್ಜಿಫಾರಮ್ಮು |
| ಖರ್ಚು | ನಾಜೂಕು |
| ಬ್ಯಾಂಡು | ಅಂದಾಜು |
| ಸರಹದ್ದು | ಕಂಪ್ಯೂಟರು |
| ಸಾಫ್ಟ್‌ವೇರು | ಬಸ್‌ಸ್ಟಾಂಡು |
| ಚೆಕ್ಕು | ಟೆಂಪರ್‌ವರಿ |
| ಗುಂಡ್‌ಪಿನ್ನು | ಸಿಗ್ನಲ್ಲು |
| ಚಾಂಪಿಯನ್‌ಷಿಪ್ | ಟೂರ್ನಮೆಂಟು |
| ಸಿಂಗಲ್ಸ್ ಪ್ರಶಸ್ತಿ | ಸಬ್ಸಿಡಿ |
| ಅಫಿಡವಿಟ್ | ಅಕಾಡೆಮಿ |
| ಫೈಲು | ಫಿರ್ಯಾದು |
| ಅಹವಾಲು | ಪಿಂಚಣಿ |
| ಟೈಪ್‌ರೈಟರ್ರು | ರೈಲು |

ಅನ್ಯಭಾಷಾ ಸ್ವೀಕರಣ ಮಾಧ್ಯಮಗಳಲ್ಲಿ ಮಾತ್ರವಲ್ಲ ಸಮಾಜದ ಎಲ್ಲ ವ್ಯವಹಾರಗಳಲ್ಲೂ ಆಗುತ್ತಿರುವುದು ಗಮನಾರ್ಹ. ಹೀಗೆ ಸಮಾಜದಾದ್ಯಂತ ಜನರಿಗೆ ಅರ್ಥವಾಗುವಂತಹ ಸ್ವೀಕೃತ ಪದಗಳ ಬಳಕೆ ಇರುವುದರಿಂದಲೇ ಮಾಧ್ಯಮಗಳೂ ಅವನ್ನು ಬಳಸಬೇಕಾದ ಅಗತ್ಯ ಕಂಡು ಬರುತ್ತದೆ. ಉದಾಹರಣೆಗೆ Xerox ಎನ್ನುವುದಕ್ಕೆ ನೆರಳಚ್ಚು ಎಂಬ ಪದ ಸೃಷ್ಟಿಸಲಾಯಿತಾದರೂ ಕನ್ನಡಲ್ಲಿ ಉಳಿದದ್ದು Xerox ಪದವೇ. ಸಾಫ್ಟ್‌ವೇರ್, ಕ್ಯಾನ್ಸರ್, ಹಾರ್ಟ್ ಅಟ್ಯಾಕ್, ಬ್ರೇಕ್ ಫೇಲ್ ಈ ಪದಗಳೆಲ್ಲ ಇದೇ ರೂಪದಲ್ಲಿ ಕನ್ನಡದಲ್ಲಿ ಬಳಕೆಯಾಗುತ್ತಿರುವುದಕ್ಕೆ ಜನ ಅವನ್ನು ಹಾಗೆಯೇ ಬಳಸುತ್ತಿರುವುದೇ ಕಾರಣ. ಇಂತಹ ಕನ್ನಡ ಪದಗಳ ಶುದ್ಧತೆಯ ಬಗ್ಗೆಯೂ ಚರ್ಚೆಗಳು ನಡೆದದ್ದು ಉಂಟು. ಹೀಗಾಗಿ ಅನ್ಯಭಾಷಾ ಪದಗಳ ಸ್ವೀಕಾರ ಮಾಧ್ಯಮಗಳಿಗೆ ಬೇಕು. ಮಾಧ್ಯಮಗಳು ಅವನ್ನು ಸ್ವೀಕರಿಸಿ, ನಿರಂತರ ಬಳಸಿ, ಅವುಗಳಿಗೆ ಪ್ರಚಾರ ನೀಡುವುದು ಭಾಷೆಯನ್ನು ಬೆಳೆಸುವುದಕ್ಕೂ ಬೇಕು.

### ಈ. ಭಾಷಾ ಮಿಶ್ರಣ / ನುಡಿ ಬೆರಕೆ

ಭಾಷಾ ಸಂಪರ್ಕ ಹೆಚ್ಚಿದಂತೆಲ್ಲ ಭಾಷಾ ಮಿಶ್ರಣವಾಗುವುದು ಸಹಜ. ಒಂದಕ್ಕಿಂತ ಹೆಚ್ಚು ಭಾಷೆಯ ಸಂಪರ್ಕದಲ್ಲಿರುವ ವ್ಯಕ್ತಿ ಈ ರೀತಿ ಭಾಷೆಗಳನ್ನು ಮಿಶ್ರಗೊಳಿಸುವುದು ಅವನಿಗೂ ಸಹಜವೇ. ಏನನ್ನೋ ಒತ್ತಿ ಹೇಳಬೇಕೆಂದು ಹೊರಟಾಗ ಅನ್ಯಭಾಷೆ ಹೆಚ್ಚು ಪರಿಣಾಮ ಬೀರುತ್ತದೆ ಎಂದವನು ಭಾವಿಸುವುದೂ ಅಥವಾ ತಾನು ನೆಲೆಸಿರುವ ಭಾಷಾ ಸಂದರ್ಭದಲ್ಲಿ ತನ್ನ ಮೂಲ ಭಾಷೆಗಿಂತ ಆ ಭಾಷೆಯೇ ಸುಗಮ ಹಾಗೂ ಸರಾಗ ಎಂದುಕೊಳ್ಳುವುದೂ ಅಥವಾ ತನ್ನ ಮೂಲಭಾಷೆಗಿಂತ ಅನ್ಯಭಾಷೆಯೇ ಕೇಳುವವನಿಗೆ ಹೆಚ್ಚು ಅರ್ಥವಾಗುತ್ತದೆಂದು ತಿಳಿಯುವುದೂ ಅಥವಾ ಅನ್ಯಭಾಷಾ ವ್ಯಾಮೋಹ ಹಾಗೂ ಕನ್ನಡ ಬಳಸುವುದರಲ್ಲಿ ಇರುವ ವೈಯಕ್ತಿಕ ಸಂಕೀರ್ಣ ಧೋರಣೆಯೂ ಈ ರೀತಿಯ ಭಾಷಾ ಮಿಶ್ರಣಕ್ಕೆ ಕಾರಣವಾಗಬಹುದು. ಬಹುಭಾಷಿಕ ಸಂದರ್ಭವೂ ಅವನ ಅರಿವಿಲ್ಲದೆಯೇ ಅವನು ನುಡಿ ಬೆರಸುವಂತೆ ಮಾಡುತ್ತದೆ.

ಭಾಷಾ ಮಿಶ್ರಣ ಮೇಲು ನೋಟಕ್ಕೆ ಅನ್ಯಭಾಷಾ ಸ್ವೀಕರಣದ ಒಂದು ಪ್ರಭೇದದಂತೆ ಕಾಣುತ್ತದೆ. ಆದರೆ ಅವರೆಡಕ್ಕೂ ಮಾರ್ಮಿಕವಾದ ವ್ಯತ್ಯಾಸಗಳುಂಟು. ಸ್ವೀಕರಣದ ಸಂದರ್ಭದಲ್ಲಿ ಕನ್ನಡದಲ್ಲಿ ತತ್ಸಮಾನ ಪದವಿಲ್ಲದೆ ಅನಿವಾರ್ಯವಾಗಿ ಅನ್ಯಭಾಷೆಯಿಂದ ಪದವನ್ನು ಸ್ವೀಕರಿಸಲಾಗುತ್ತದೆಯಾದರೆ ನುಡಿ ಬೆರಕೆಯ ಸಂದರ್ಭದಲ್ಲಿ ಕನ್ನಡದಲ್ಲೇ ಸೂಕ್ತ ಪದವಿದ್ದೂ ಅನ್ಯಭಾಷಾ ಪದವನ್ನು ಬಳಸುವ ಮೋಹವಿರುತ್ತದೆ. ಭಾಷಾ ಮಿಶ್ರಣದಿಂದ ಬಳಕೆಯಾಗುವ ಅನ್ಯಭಾಷಾ ಪದಗಳು ಕನ್ನಡದ ಪಾಲಿಗೆ ಸ್ವೀಕೃತ ಪದಗಳಲ್ಲ. ಅವು ತಾತ್ಕಾಲಿಕವಾಗಿ ಬೆರಕೆಯಾದ ಪದಗಳು ಮಾತ್ರ.

ಗ್ರಾಂಥಿಕ ಮಾಧ್ಯಮಗಳಿಗಿಂತಲೂ ಮೌಖಿಕ ಮಾಧ್ಯಮಗಳಿಗೆ ನುಡಿಬೆರಕೆಯ ಅಗತ್ಯ ಕಾಣಬರುತ್ತದೆ. ಏಕೆಂದರೆ ಇಲ್ಲಿ ಹೇಳುವುದಕ್ಕೆ ಹೆಚ್ಚು ಒತ್ತುನೀಡಿ ಹೇಳಬೇಕಾಗುತ್ತದೆ. ಮೌಖಿಕ ಮಾಧ್ಯಮಗಳು ನುಡಿಬೆರಕೆಯ ಕಾರಣದಿಂದ ಹೆಚ್ಚು ಸಂವಹನಶೀಲವೂ ಆಗುತ್ತವೆ. ಉದಾಹರಣೆಗೆ ಡಿಡಿ-೧ರಲ್ಲಿ ಕನ್ನಡಕ್ಕೆ ಹೊರತಾಗಿ, ಬೇರೆ ಯಾವ ಭಾಷಾಪದವನ್ನು ಮಿಶ್ರ ಮಾಡಿ ಕನ್ನಡವನ್ನು ಬಳಸುವ ಸಂಪ್ರದಾಯವಿಲ್ಲ. ಕೆಲವು ಸಂದರ್ಶನಕಾರರು ಅದರಲ್ಲೂ ಆರೋಗ್ಯ, ಕ್ರೀಡೆ ಮುಂತಾದ ವಿಷಯಗಳ ಪಾರಿಭಾಷಿಕ ಪದಗಳೇ ಕನ್ನಡದಲ್ಲಿ ದೊರಕದೆ, ಅವುಗಳಿಗಾಗಿ ಹುಡುಕುತ್ತಾ ಪರದಾಡುವುದನ್ನು ಕಂಡಿದ್ದೇವೆ. ಸರ್ಕಾರಿ ಸ್ವಾಮ್ಯದಲ್ಲಿದ್ದ ಈ ವಾಹಿನಿಯಲ್ಲಿ ಕನ್ನಡವನ್ನು ಬಿಟ್ಟು ಬೇರೆ ಭಾಷೆಯನ್ನು ಬಳಸಬಾರದು ಎಂಬ ನಿಯಮವಿದೆ ಎಂದು ಇಲ್ಲಿನ ಅಧಿಕಾರಿಗಳು ಹೇಳುತ್ತಾರೆ. ಆದರೆ ಖಾಸಗಿ ವಾಹಿನಿಗಳಿಗೆ ಅಂತಹ ನಿಯಮಗಳಿಲ್ಲ. ಅವರು ಕನ್ನಡಕ್ಕೆ ಹಿಂದಿ, ಇಂಗ್ಲಿಷ್ ಭಾಷೆಗಳನ್ನು ಲೀಲಾಜಾಲವಾಗಿ ಬೆರಸಬಲ್ಲರು. ಟಾಕ್ ಶೋಗಳಲ್ಲಿ, ಸಂದರ್ಶನಗಳಲ್ಲಿ ಈ ರೀತಿ ಭಾಷೆ ಬೆರಸಿ ನಿರರ್ಗಳವಾಗಿ ಮಾತನಾಡುತ್ತಿರುತ್ತಾರೆ. ಉದಾಹರಣೆಗೆ ; 'ನೀವೆಲ್ಲ Vote ಕೊಟ್ಟು elect ಮಾಡಿ ಕಳಿಸಿದ್ದೀರಲ್ಲ ಅವರೆಲ್ಲ assemblyಯಲ್ಲಿ ಹೀಗೆ behave ಮಾಡಬಹುದಾ?'

'You are exactly right'

'ಒಬ್ಬ freedom fighter ಆಗಿ ನೀವು underground ಪತ್ರಿಕೆಗಳನ್ನ edit ಮಾಡಿದ್ದೀರಲ್ಲ, ಅವನ್ನೆಲ್ಲ Publish ಮಾಡಿದ್ದೀರಾ?'

ಈ ಉದಾಹರಣೆಗಳಲ್ಲಿ ಸೂಚಿಸಿರುವ ಎಲ್ಲ ಇಂಗ್ಲಿಷ್ ಪದಗಳಿಗೂ ಸಮಾನಾರ್ಥಕವಾದ ಕನ್ನಡ ಪದಗಳಿವೆ. ಆದರೂ ಇಂತಹ ನುಡಿಬೆರಕೆ ಸಂವಹನಶೀಲತೆಯನ್ನೂ, ಸಂವಾಹಕನಿಗೆ ನಿರರ್ಗಳತೆಯನ್ನು ತಂದುಕೊಡುವಂತೆ ತೋರುತ್ತವೆ. ಒಮ್ಮೊಮ್ಮೆ 'You are exactly right', ಎಂತಲೋ 'What do you mean by that' ಎಂತಲೋ ಇಡೀ ವಾಕ್ಯವನ್ನೇ ಬಳಸಿಬಿಡುವುದು

ಸಾಮಾನ್ಯವಾಗಿಬಿಟ್ಟಿದೆ. ತೀರಾ ಅನೌಪಚಾರಿಕ ಸಂದರ್ಭವನ್ನು ತೋರಿಸುವುದಕ್ಕಾಗಿಯೂ ಈ ರೀತಿಯ ನಾಟಕೀಯತೆಯನ್ನು ಪ್ರದರ್ಶಿಸುವುದುಂಟು.

ಸ್ವಲ್ಪ ಪ್ರಮಾಣದಲ್ಲಿ ನುಡಿಬೆರಕೆಯಾಗುವುದನ್ನು ಅದರ ಸಂವಹನ ಸಾಮರ್ಥ್ಯದ ಕಾರಣದಿಂದ ಸಹಿಸಿಕೊಳ್ಳಬಹುದೇ ಹೊರತು ಇಡೀ ವಾಕ್ಯವೇ ಕನ್ನಡದ ಚೌಕಟ್ಟಿನಿಂದ ಹೊರಗೆ ಉಳಿಯುವುದಾದರೆ ಕನ್ನಡದ ಬೆಳವಣಿಗೆಗೆ ಇದು ಹೇಗೆ ಸಹಕಾರಿಯಾಗುತ್ತದೆ? ಎಂಬ ಪ್ರಶ್ನೆಯೂ ನಮ್ಮ ಮುಂದಿದೆ.

ಒಂದು ಭಾಷೆಯು ಇನ್ನೊಂದು ಭಾಷೆಯ ಪ್ರಭಾವಕ್ಕೆ ಒಳಪಟ್ಟು ತನ್ನ ಸ್ವಭಾವವನ್ನು ಬದಲಾಯಿಸಿಕೊಳ್ಳುವ ಪ್ರಕ್ರಿಯೆಯಲ್ಲಿ ನುಡಿಬೆರಕೆ ಪ್ರಮುಖ ಪಾತ್ರ ವಹಿಸುತ್ತದೆ. ದ್ವಿಭಾಷಿಗರು ಸಲೀಸಾಗಿ ಉಪಯೋಗಿಸುವ ನುಡಿಬೆರಕೆಯಿಂದಾಗಿ ಅವರ ಭಾಷೆಗಳ ರಚನಾತ್ಮಕ ಎಲ್ಲೆಗಳು ಸಡಿಲಗೊಳ್ಳುತ್ತವೆ. ಒಂದು ಭಾಷೆಯ ವಾಕ್ಯಾತ್ಮಕ ಲಕ್ಷಣಗಳು ಇನ್ನೊಂದು ಭಾಷೆಗೆ ವರ್ಗಾಯಿಸಲ್ಪಡುತ್ತದೆ.

> *ಭಾಷಾ ಮಿಶ್ರಣ ಭಾಷೆಯ ಅಜ್ಞಾನದ ಪರಿಣಾಮವಲ್ಲ. ಇದು ಏಕಭಾಷಿಕ ಭಾಷಾ ಜ್ಞಾನಕ್ಕೂ ಮಿಗಿಲಾದ ಸೂಕ್ಷ್ಮ, ಸೃಷ್ಟಿಶೀಲ, ಸಂಕೀರ್ಣ ನಿಯಮಬದ್ಧ ವ್ಯಾಪಾರ'*

ಎಂದು ಎಸ್.ಎನ್. ಶ್ರೀಧರ್ ಹೇಳುತ್ತಾರೆ.

ಹೆಸರೇ ಹೇಳುವಂತೆ ನುಡಿಬೆರಕೆ ಹೆಚ್ಚಾಗಿ ನಡೆಯುವುದು 'ನುಡಿ'ಯುವ ಮಾಧ್ಯಮದಲ್ಲಿ, ಬರೆಯುವ ಮಾಧ್ಯಮದಲ್ಲ. ವರ್ತಮಾನ ಪತ್ರಿಕೆಗಳಲ್ಲಿ ನುಡಿಬೆರಕೆ/ಭಾಷಾ ಮಿಶ್ರಣಕ್ಕೆ ಅವಕಾಶಗಳು ಕಡಿಮೆ ಇದ್ದರೂ ಅಥವಾ ಇಲ್ಲದೇ ಇದ್ದರೂ ಸೃಜನಶೀಲ ಸಾಹಿತ್ಯ ಸಂದರ್ಭದಲ್ಲಿ ಇದು ಇಲ್ಲದೆ ಇಲ್ಲ.

ಕನ್ನಡ ಭಾಷೆಯನ್ನು ಆಧುನಿಕಗೊಳಿಸುವ ಸಂದರ್ಭದಲ್ಲಿ ಮಾಧ್ಯಮಗಳು ಪದಗಳನ್ನು ಸೃಷ್ಟಿಸುವ, ಭಾಷಾಂತರಿಸುವ, ಅನ್ಯಭಾಷಾ ಪದಗಳನ್ನು ಸ್ವೀಕರಿಸುವ ಕೆಲಸವನ್ನಷ್ಟೇ ಮಾಡುತ್ತವೆಂದು ಹೇಳಲಾಗದು. ಇಂತಹ ಪದಗಳ ಬಳಕೆಯ ಸಂದರ್ಭದಲ್ಲೂ ಅಥವಾ ಇತರ ಅನೇಕ ಇತಿಮಿತಿಗಳ ಕಾರಣದಿಂದಾಗಿಯೂ ಕನ್ನಡ ವ್ಯಾಕರಣಾಂಶಗಳಲ್ಲೇ ಮಾರ್ಪಾಡುಗಳಾಗುತ್ತಿರುವುದೂ ಗಮನಾರ್ಹ. ವಾಕ್ಯರಚನೆ, ವಾಕ್ಯ ಪ್ರಯೋಗಗಳು ಹೊಸಬಗೆಯಿಂದ ಕೂಡಿರುತ್ತಿವೆ. ತೀರಾ ಹಳೆ ವಿಧಾನಗಳ ಮರುಬಳಕೆಯೂ ಆಗುತ್ತಿದೆ. ವಿಭಕ್ತಿ, ಅವ್ಯಯ, ಕರ್ಮಣಿ ಪ್ರಯೋಗಗಳಲ್ಲೂ ವಚನ, ಗೌರವ ಸೂಚಕ, ಕ್ರಿಯಾ ಪದಗಳ ಬಳಕೆಯಲ್ಲೂ, ಸಂಧಿ-ಸಮಾಸಗಳ ರಚನೆಯಲ್ಲೂ ಬದಲಾವಣೆಯಾಗಿರುವುದಲ್ಲದೆ, ವಾಕ್ಯ ಬಳಕೆಯ ಶೈಲಿ, ಶಿಷ್ಟತೆ, ಕೌಶಲ್ಯ, ಅಲಂಕರಣದಲ್ಲೂ ವೈವಿಧ್ಯತೆ ಮೈದೋರಿದೆ.

ಮಾಧ್ಯಮಗಳ ಕಾಲಮಿತಿ, ಸ್ಥಳಮಿತಿ, ಸ್ಪರ್ಧಾತ್ಮಕತೆ ಮತ್ತಿತರ ಇತಿಮಿತಿಗಳ ಒತ್ತಡದಿಂದಲೇ ಕನ್ನಡ ಅನೇಕ ಪ್ರಯೋಗಗಳಿಗೆ ಒಳಗಾಗುತ್ತಿದೆ. ಉದಾಹರಣೆಗೆ ಶೀರ್ಷಿಕೆ ಅಥವಾ ತಲೆಬರಹಗಳನ್ನು ಬರೆಯುವಾಗ ವಾಕ್ಯಕ್ಕೆ ಸಂಕ್ಷಿಪ್ತತೆಯನ್ನು, ಚುರುಕನ್ನು ತರುವ ದೃಷ್ಟಿಯಿಂದ ಕ್ರಿಯಾಪದಗಳನ್ನು ಮೊಟಕು ಮಾಡುವುದು ಸಾಮಾನ್ಯವಾಗಿದೆ. ಓದುವಾಗ ಇವು ಆಕರ್ಷಕವಾಗಿಯೂ ಇರುತ್ತವೆ. ಚುಟುಕಾಗಿ ಕಂಡರೂ ಇಡೀ ಮಾಹಿತಿ / ಸುದ್ದಿಯ ಕೇಂದ್ರವನ್ನೇ ತಿಳಿಸುವ ಸಾಹಸವನ್ನೂ ಮಾಡುತ್ತವೆ. ಇದರಿಂದ ವಾಕ್ಯ ಎಷ್ಟರಮಟ್ಟಿಗೆ ಸಂಕ್ಷಿಪ್ತಗೊಳ್ಳುತ್ತದೆಂದರೆ ಕೇವಲ ಎರಡೇ ಪದಗಳ ಗುಚ್ಛವೂ ಆದಾಗಬಹುದು. ಉದಾಹರಣೆಗೆ 'ಜಯಲಲಿತಾ ದಿಗ್ವಿಜಯ', 'ಪ್ರಧಾನಿ ವಿದೇಶಕ್ಕೆ', 'ದಳ ಐಕ್ಯತೆಗೆ ದೇವೇಗೌಡರ ಅಸ್ತು', 'ಡಬ್ಲ್ಯೂಟಿಒ

ಒಪ್ಪಂದ - ಪ್ರಧಾನಿ ನಾಮಾಂಕಿತ', 'ನೇಪಾಳ ರಾಜಮನೆತನ ಸರ್ವನಾಶ' ಇನ್ನೂ ಮುಂತಾದವು. ಈ ರೀತಿಯ ಶೀರ್ಷಿಕೆಗಳೆಲ್ಲ ವಸ್ತು ಹಾಗೂ ಅಭಿವ್ಯಕ್ತಿ ಗುಣದಲ್ಲಿ ಅಪೂರ್ಣವೆನಿಸದೆ ಹೋಗುವುದರಿಂದ ಅಥವಾ ಹೇಳಬೇಕಾದ್ದನ್ನು ಕಡಿಮೆ ಪದಗಳಲ್ಲಿ ಹೇಳಿ ಬಿಡುವುದರಿಂದ ವಾಕ್ಯರಚನೆಯಲ್ಲಿ ಇವೂ ಸರಿ ಎನಿಸಿಕೊಳ್ಳುತ್ತವೆ. ಅಂದರೆ ಇವೂ ಭಾಷೆ ಬದಲಾಗುವುದರ ನಿದರ್ಶನಗಳೇ.

> *ವೃತ್ತಪತ್ರಿಕೆಗಳಲ್ಲಿ ಬರುವ ಸಾಹಿತ್ಯವನ್ನು ಅವಸರದ ಸಾಹಿತ್ಯ ಎನ್ನಲಾಗುತ್ತದೆ. ವೃತ್ತ ಪತ್ರಿಕಾ ಬರಹಗಳನ್ನು ಸೃಜನಶೀಲ ಸಾಹಿತ್ಯ ಎಂದು ಒಪ್ಪಿಕೊಳ್ಳಲು ಈಗಲೂ ಒಂದು ವಿಮರ್ಶಕ ವರ್ಗ ನಿರಾಕರಿಸುತ್ತಿದೆ. ಆದರೆ, ಅವಸರದಲ್ಲೇ ಹುಟ್ಟುವ ಪತ್ರಿಕಾ ಸಮೂಹದ ಅಕ್ಷರರಾಶಿಗಳ ನಡುವೆ, ಆ ಕಾಲಕ್ಕೆ ತಕ್ಕಂತೆ, ಆ ಸಮಯಕ್ಕೆ ತಕ್ಕಂತೆ, ಸಂದರ್ಭಾನುಸಾರವಾಗಿ ಕೆಲವು ಪದಪುಂಜಗಳು ಹುಟ್ಟಿಕೊಳ್ಳುತ್ತವೆ. 'ಡಬ್ಬಲ್ ಕಾಲಂ'ನಂತಹ ಮಿತಿಯೊಳಗೆ ಹತ್ತೇ ಅಕ್ಷರಗಳನ್ನು ಕೂರಿಸಬೇಕಾದ, ಆದರೆ ಅದರಲ್ಲೇ ಇಡೀ ಸುದ್ದಿಯ ಮಹತ್ವವನ್ನು ಹೇಳಬೇಕಾದ ಆಕರ್ಷಕ ನುಡಿಗಟ್ಟು, ಅದಾಗಿರಬೇಕಾಗುತ್ತದೆ. ಹೀಗಾಗಿ ಪತ್ರಿಕಾ ಮಾಧ್ಯಮ ನಿತ್ಯ ಹೊಸ ಹೊಸ ಪದಗಳನ್ನು ಸೃಷ್ಟಿಸುತ್ತಲೇ ಇರಬೇಕು. ಇಲ್ಲವೇ ಹಳೆಯ ಪದಗಳನ್ನೇ ಮರುಬಳಕೆ ಮಾಡಬೇಕಾಗುತ್ತದೆ. ಇದರ ಜಂಜಡದಲ್ಲಿ, ಅವಸರದಲ್ಲಿ ಈ ಎಲ್ಲ ಗೊಂದಲಗಳ ನಡುವೆ ಎದ್ದು ಬರುವುದೇ ಹೊಸಪದ ಸೃಷ್ಟಿ. ಈ ರೀತಿ ಸೃಷ್ಟಿಯಾಗುವ ಪದಪ್ರಯೋಗಗಳು ಎಷ್ಟರಮಟ್ಟಿಗೆ ನಿಖರ ಹಾಗೂ ವ್ಯಾಕರಣ ಶುದ್ಧವಾಗಿರುತ್ತವೆ ಎಂಬುದನ್ನು ಗಮನಿಸಬೇಕು. ರೇಡಿಯೋ ಕಾರ್ಯಕ್ರಮಗಳಿಗೆ 'ಆಕಾಶವಾಣಿ', 'ಬಾನುಲಿ' ಎಂಬ ಪದ ಬಳಕೆ ಎಷ್ಟೊಂದು ಮಧುರ ಎಂಬುದನ್ನು ಗಮನಿಸಬೇಕು.* [೧೦]

ಎಂದು ಪ್ರಜಾವಾಣಿ ಪತ್ರಿಕೆಯ ಮುಖ್ಯ ಉಪಸಂಪಾದಕ ಗಂಗಾಧರ ಮೊದಲಿಯಾರ್ ಅಭಿಪ್ರಾಯ ಪಡುತ್ತಾರೆ.

ಗೌರವ ಸೂಚಕಗಳ ಬಳಕೆಯೂ ಮಾಧ್ಯಮಗಳ ನೆಲೆಯಲ್ಲಿ ಬದಲಾಗುವುದನ್ನು ಕಾಣಬಹುದು. ಬಹಳ ಇತ್ತೀಚಿನವರೆಗೂ 'ಮುಖ್ಯಮಂತ್ರಿಯವರು', 'ಪ್ರಧಾನಮಂತ್ರಿಯವರು', 'ರಾಷ್ಟ್ರಪತಿಯವರು' ಎಂದು ಬಳಕೆಯಾಗುತ್ತಿದ್ದ ರೀತಿ ಏಕಾಏಕಿ ಬಹುವಚನವನ್ನು ಗೌರವ ಸೂಚಕವಾಗಿ ಬಳಸುವ ಮಾರ್ಪಾಡು ಪಡೆಯಿತು. 'ಮುಖ್ಯಮಂತ್ರಿಗಳು ಹೇಳಿದ್ದಾರೆ', 'ರಾಷ್ಟ್ರಪತಿಗಳು ಸಭೆಯಲ್ಲಿ ಪಾಲ್ಗೊಂಡಿದ್ದಾರೆ' ಹೀಗೆ. 'ಯವರು'ವಿಗೆ ಬದಲಾಗಿ 'ಗಳು' ಈಗ ಪ್ರಯೋಗದಲ್ಲಿದೆ. ಒಬ್ಬರಿಗಿಂತ ಹೆಚ್ಚು ಮಂದಿ ರಾಷ್ಟ್ರಪತಿಗಳು ಒಂದು ದೇಶಕ್ಕಿರುವುದಿಲ್ಲವಾದ್ದರಿಂದ 'ಗಳು' ಪ್ರಯೋಗ ಸರಿಯೇ ಅಲ್ಲವೇ ಎಂದೂ ಚಿಂತನೆಗಳು ನಡೆದಿವೆ. ಆದರೆ ಇಂತಹ ಪ್ರಯೋಗ ಕನ್ನಡಕ್ಕೆ ಹೊಸತೂ ಅಲ್ಲ. ೧೨ನೇ ಶತಮಾನದ ಶರಣ ಸಾಹಿತ್ಯ ಸಂದರ್ಭದಲ್ಲಿ ಗೌರವ ಸೂಚಕವಾಗಿಯೇ 'ಗಳು' ಅನ್ನು ಬಳಸಿರುವುದು ಗಮನಾರ್ಹ. ಆಯ್ದಕ್ಕಿ ಮಾರಯ್ಯಗಳು, ಡೋಹರ ಕಕ್ಕಯ್ಯಗಳ ವಚನ...... ಮುಂತಾಗಿ. ಹಾಗಾಗಿ 'ಗಳು' ಗೌರವಸೂಚಕವಾಗಿ ಮಾಧ್ಯಮಗಳ ಮೂಲಕ ಮರುಬಳಕೆಗೆ ಬಂದಿದೆ ಎನ್ನಬಹುದು. ಈ ರೀತಿ ಮರುಬಳಕೆಯ ಮೂಲಕವೂ ಭಾಷೆ ಬೆಳೆಯುವುದನ್ನು ನಾವು ಗಮನಿಸಬಹುದು.

ಸಂಧಿಕಾರ್ಯ ನಡೆಯುವ ಸಂದರ್ಭಗಳಲ್ಲೂ ಅನೇಕ ಹೊಸಬಗೆಯ ವಾಕ್ಯ ಪ್ರಯೋಗಗಳಾಗುತ್ತವೆ. ಕನ್ನಡೇತರ ಭಾಷೆಗಳಿಂದ ಸ್ವೀಕರಿಸಿದ ಪದಗಳನ್ನು ಕನ್ನಡದ ಜಾಯಮಾನಕ್ಕೆ ಒಗ್ಗಿಸಿಕೊಳ್ಳುವ ಕಾರಣಕ್ಕೂ ಇದಾಗಬಹುದು.

ಉದಾಹರಣೆಗೆ : 'ಬಸ್‌ನಲ್ಲಿ ಟಿಕೆಟ್ ಇಲ್ಲದೆ ಯಾತ್ರಿಸುವವರಿಗೆ ೫೦ ರೂಪಾಯಿ ದಂಡಿಸುವ ಕ್ರಮ ಬರುವ ಆಗಸ್ಟ್‌ನಿಂದ ಜಾರಿಗೆ.'

ಬಸ್, ಟಿಕೆಟ್, ಆಗಸ್ಟ್ - ಇಂಗ್ಲಿಷ್ ಪದಗಳು ಸಂಧಿ ಕ್ರಿಯೆಯ ಮೂಲಕ ಕನ್ನಡಕ್ಕೆ ಹೊಂದಿಕೊಳ್ಳುತ್ತವೆ. ಬಸ್ಸಿನಲ್ಲಿ, ಟಿಕೆಟ್ಟಿಲ್ಲದೆ ಆಗಸ್ಟಿನಿಂದ ಹೀಗೆ. ಇಲ್ಲಿ ಗಮನಿಸಬಹುದಾದ ಮತ್ತೊಂದು ಪ್ರಯೋಗ 'ಇಸು' ಪ್ರತ್ಯಯದ ಬಳಕೆ. 'ಯಾತ್ರೆ ಮಾಡು', 'ದಂಡ ವಿಧಿಸು', ಎನ್ನುವುದು 'ಯಾತ್ರಿಸು', 'ದಂಡಿಸು' ಎಂದಾಗಿದೆ. ವ್ಯಕ್ತ + ಇಸು = ವ್ಯಕ್ತೈಸು, ಅರ್ಥ + ಇಸು = ಅರ್ಥೈಸು, ಫೋನ್ + ಇಸು = ಪೋನ್ಯಾಸು ಇಂತಹ ಪ್ರಯೋಗಗಳನ್ನೂ ಗಮನಿಸಬಹುದು.

'ಬಗ್ಗೆ', 'ಕುರಿತು', 'ಮೇಲೆ' ಶಬ್ದಗಳ ಬಳಕೆಯಲ್ಲಿಯೂ ಮಾಧ್ಯಮಗಳು ಹೊಸ ಮಾದರಿ ಪ್ರಯೋಗಗಳನ್ನು ಮಾಡುತ್ತಿವೆ. ಸಾದುರೂಪಗಳ ಬಳಕೆಯಲ್ಲಂತೂ ಅನೇಕ ವೇಳೆ ಸರಿತಪ್ಪುಗಳ ಪರಿಗಣನೆಯೂ ಇಲ್ಲದೆ ವ್ಯಾಪಕ ಬದಲಾವಣೆಯಾಗಿರುವುದೂ ಆ ಬದಲಾವಣೆಗಳು ಅಷ್ಟೇ ವ್ಯಾಪಕವಾಗಿ ರೂಢಿಗತವಾಗಿರುವುದೂ ಕಾಣಬರುತ್ತದೆ. ಕರ್ಮಣಿ ಪ್ರಯೋಗಗಳಲ್ಲೂ ಈಗ ಬದಲಾವಣೆಗಳಾಗುತ್ತಿವೆ. 'ಅಲ್ಪಡು'ವಿಗೆ ಬದಲಾಗಿ 'ಆಗಿದೆ' ಬಳಕೆಗೆ ಬಂದಿದೆ. ಇಂತಹ ಸಂದರ್ಭಗಳಲ್ಲಿ ವಿಭಕ್ತಿಗಳೂ ವ್ಯತ್ಯಾಸಗೊಳ್ಳುತ್ತವೆ.

ಉದಾ : ಈ ಆನೆಯು ವೀರಪ್ಪನ್‌ನಿಂದ ಕೊಲ್ಲಲ್ಪಟ್ಟಿದೆ.

ಈ ಆನೆಯನ್ನು ವೀರಪ್ಪನ್ ಕೊಂದಿದ್ದಾನೆ.

ಒಂದೇ ವಾಕ್ಯದಲ್ಲಿ ಒಂದೇ ಅರ್ಥ ಕೊಡುವ ಎರಡು ಪದಗಳನ್ನು ಅಗತ್ಯವಿಲ್ಲದೆಯೂ ಬಳಸುವುದನ್ನು ಮಾಧ್ಯಮಗಳಲ್ಲಿ ಕಂಡಿದ್ದೇವೆ.

ಉದಾ : ಭಾರತ - ಇಂಗ್ಲೆಂಡ್ ಕ್ರಿಕೆಟ್ : ಡ್ರಾನಲ್ಲಿ ಅಂತ್ಯ.

ರೌಡಿಯು ಕಾಂಪೌಂಡ್ ಗೋಡೆ ಜಿಗಿದು ಪರಾರಿಯಾದನು.

ಮೊದಲ ಸಂದರ್ಭದಲ್ಲಿ 'ಭಾರತ - ಇಂಗ್ಲೆಂಡ್ ಕ್ರಿಕೆಟ್ ಪಂದ್ಯ ಡ್ರಾ' ಅಥವಾ 'ಕ್ರಿಕೆಟ್ : ಭಾರತ - ಇಂಗ್ಲೆಂಡ್ ಪಂದ್ಯ ಡ್ರಾ' ಎಂದು ಹೇಳಿದರೆ ಸಾಕು. 'ಡ್ರಾ' ಎನ್ನುವುದೇ ಅಂತ್ಯಸೂಚಕವಾದ್ದರಿಂದ 'ಡ್ರಾನಲ್ಲಿ ಅಂತ್ಯ' ಎಂದು ಹೇಳಬೇಕಾದ ಪ್ರಮೇಯವಿಲ್ಲ. ಅದೇ ರೀತಿ 'ಕಾಂಪೌಂಡ್ ಗೋಡೆ'. 'ಕಾಂಪೌಂಡ್' ಜಿಗಿದು, ಇಲ್ಲವೆ 'ಗೋಡೆ' ಜಿಗಿದು ಎಂದು ಹೇಳಿದರೆ ಸಾಕು. ಆದರೆ ಇಂತಹ ಪ್ರಯೋಗಗಳು ಬಳಕೆಗೆ ಬಂದಿವೆ. ಅದೇ ರೀತಿ '.............. ದಿನಾಚರಣೆ ಆಚರಿಸಲಾಯಿತು' ಎನ್ನುವುದು.

<u>ಪ್ರಮಾಣೀಕರಣ</u>

ಕನ್ನಡ ಭಾಷೆ ಒಂದೇ ಆದರೂ ರಾಜ್ಯದಲ್ಲಿ ಭೌಗೋಳಿಕ, ಆರ್ಥಿಕ, ಮತೀಯ, ಜಾತೀಯ ಕಾರಣಗಳಿಗಾಗಿ ಭಾಷಾ ವೈವಿಧ್ಯ ಇರುವುದನ್ನು ಗುರುತಿಸಲಾಗಿದೆ. ಕನ್ನಡ ಭಾಷೆಯ ಪ್ರಾದೇಶಿಕ ವೈವಿಧ್ಯ, ಉಪಭಾಷೆಗಳು ಇರುವ ಬಗ್ಗೆ ಈ ಅಧ್ಯಾಯದ ಮೊದಲ ಭಾಗದಲ್ಲಿ ವಿವರಿಸಲಾಗಿದೆ. ಮೈಸೂರು ಕನ್ನಡ, ಮಂಗಳೂರು ಕನ್ನಡ, ಧಾರವಾಡ ಕನ್ನಡ ಮುಂತಾಗಿ ಭೌಗೋಳಿಕ

ವಿಂಗಡಣೆಯ ಆಧಾರದ ಮೇಲೆ ಗುರುತಿಸಿದರೂ ಅವುಗಳಲ್ಲೂ ನಗರ ಹಾಗೂ ಗ್ರಾಮೀಣ ಪ್ರದೇಶಗಳ ನಡುವೆಯೂ ಭಾಷಾ ಭಿನ್ನತೆಯಿರುತ್ತದೆ ಎಂದೂ ತಿಳಿದಿದೆ.

ಭೌಗೋಳಿಕವಾಗಿ ಇಷ್ಟೆಲ್ಲಾ ಭಿನ್ನತೆಗಳನ್ನು ಗಮನಿಸಿದ ಮೇಲೆ ಸಾಮಾಜಿಕವಾಗಿಯೂ ಹಲವು ಕ್ಷೇತ್ರಗಳ ನಡುವೆ ಭಾಷಾ ವೈವಿಧ್ಯ ಇರುವುದನ್ನು ನೋಡಬಹುದು. ಆಡಳಿತ, ಶಿಕ್ಷಣ, ನ್ಯಾಯಾಂಗ, ವೈದ್ಯಕೀಯ, ತಾಂತ್ರಿಕ, ಸಾಹಿತ್ಯಕ, ವಾಣಿಜ್ಯಕ, ವೈಜ್ಞಾನಿಕ, ಕ್ರೀಡೆ ಎಲ್ಲ ವ್ಯಾವಹಾರಿಕ ಸಂದರ್ಭಗಳಲ್ಲೂ ಕನ್ನಡ ಭಿನ್ನವೇ ಆಗಿದೆ. ಇವೆಲ್ಲವನ್ನೂ ಒಳಗೊಂಡು, ಎಲ್ಲ ಕ್ಷೇತ್ರದ ಜನರಿಗೂ ಅರ್ಥವಾಗುವ, ಎಲ್ಲರಿಗೂ ಅನ್ವಯಿಸುವ ಒಂದು ಸರ್ವಸಮಾನವಾದ ಏಕರೂಪದ ಭಾಷೆಯನ್ನೇ ಒಂದು ಪ್ರಾಮಾಣಿತ ಭಾಷೆ, ಶಿಷ್ಟ ಭಾಷೆ (Standard Language) ಎಂದು ಕರೆಯಲಾಗುತ್ತದೆ.

ಪ್ರಮಾಣೀಕರಣ ಭಾಷೆಯ ವಿವಿಧ ಬಳಕೆಗಳಲ್ಲಿ ಅಧಿಕೃತತೆಯನ್ನು ತಂದುಕೊಡಲು ನಡೆಯುವ ಕ್ರಿಯೆ. ಸಾಧಾರಣವಾಗಿ ಶಿಷ್ಟ ಭಾಷೆಯ ರೂಪದಲ್ಲಿರುತ್ತದೆ. ಇದನ್ನು ಸೋಮಶೇಖರಗೌಡ ಹೀಗೆ ಹೇಳಿದ್ದಾರೆ.

> *ಯಾವ ಭಾಷೆಯ ಒಂದು ರೂಪ, ವರ್ಗ ವಲಯಗಳನ್ನು ದಾಟಿ ಸಾಮಾಜಿಕ, ಪ್ರಾದೇಶಿಕ ಪ್ರತಿಬಂಧಕಗಳನ್ನು ಮೀರಿ ಆ ಭಾಷೆಯನ್ನಾಡುವ ಎಲ್ಲರಿಗೂ ಅರ್ಥವಾಗುತ್ತದೆಯೋ ಅದೇ ಶಿಷ್ಟ ಭಾಷೆ. ಚಾಮರಾಜನಗರ, ಕೊಳ್ಳೇಗಾಲ, ಮಂಡ್ಯ, ಮದ್ದೂರುಗಳಲ್ಲಿ ಮಾತನಾಡುವಂತಹ ಕನ್ನಡ ಕರ್ನಾಟಕದ ಎಲ್ಲ ಭಾಗಗಳಲ್ಲಿರುವ ಕನ್ನಡಿಗರಿಗೆ ಸಂಪೂರ್ಣವಾಗಿ ಅರ್ಥವಾಗದೇ ಹೋಗಬಹುದು. ಹಾಗೆಯೇ ಧಾರವಾಡ, ಹುಬ್ಬಳ್ಳಿ, ಗುಲ್ಬರ್ಗಾಗಳಲ್ಲಿ ಮಾತನಾಡುವ ಕನ್ನಡ ಕೂಡ. ಆದರೆ ಆಡಳಿತ, ಕಾನೂನು, ಶಿಕ್ಷಣ ಮಾಧ್ಯಮಗಳಲ್ಲಿ ಬಳಸುವ ಕನ್ನಡ ಕರ್ನಾಟಕದ ಎಲ್ಲ ಭಾಗಗಳ ಕನ್ನಡಿಗರಿಗೂ ತಿಳಿಯುತ್ತದೆ. ಆದುದರಿಂದಲೇ ಇದನ್ನು ದಿನ ಪತ್ರಿಕೆಗಳು, ರೇಡಿಯೊ, ದೂರದರ್ಶನದಂತಹ ಸಮೂಹ ಮಾಧ್ಯಮಗಳು ಅವಲಂಬಿಸಿರುವುದು.* [೧೧]

ಮಾಧ್ಯಮಗಳಿಗೆ ಗ್ರಾಹಕನೇ ಏಕೈಕ ಗುರಿಯಾಗಿರುವುದರಿಂದ ಅವು ಅವನಿಗೆ ಕೊಂಡೊಯ್ಯುವ ಸರಕು ಅವನಿಗೆ ಸ್ಪಷ್ಟವಾಗಿ ಅರ್ಥವಾಗುವಂತಿರಬೇಕು. ಇದೇ ಕಾರಣಕ್ಕಾಗಿ ಅವು ತೀರಾ ಗಂಭೀರವೂ ಕ್ಲಿಷ್ಟವೂ ಗ್ರಂಥಸ್ಥವೂ ಅಲ್ಲದ ಅಥವಾ ತೀರಾ ಹಗುರವೂ ಲಘುವೂ ಆಡುಮಾತಿನಷ್ಟು ಸರಳವೂ ಅಲ್ಲದ ಒಂದು ಮಧ್ಯಮ ಸ್ತರದ ಭಾಷೆಯನ್ನು ಬಳಸುತ್ತಿರುವುದು ಗಮನಾರ್ಹ. ಇದನ್ನೇ ನಾವು ಮಾಧ್ಯಮಗಳ ಪ್ರಮಾಣೀಕೃತ ಭಾಷೆ ಎಂದು ಕರೆಯಬಹುದಾಗಿದೆ. ಹಾಗೆ ನೋಡಿದರೆ ಇಂತಹ ಒಂದು ಭಾಷೆ ತನ್ನಷ್ಟಕ್ಕೆ ತಾನೇ ಸೃಷ್ಟಿಯಾಗಿದೆಯೇ ಹೊರತು ಇದಕ್ಕಾಗಿ ಒಂದು ಕ್ರಮಬದ್ಧ ಸಿದ್ಧಾಂತ ಅಥವಾ ಸೂತ್ರ ಇದ್ದಂತಿಲ್ಲ. ಈ ನಿಟ್ಟಿನಲ್ಲಿ ಯಾವ ಮಾಧ್ಯಮಗಳೂ ಈವರೆಗೂ ಯೋಚಿಸಿದಂತೆಯೂ ಇಲ್ಲ. ಆದರೂ ಒಂದು ಪ್ರಮಾಣಿತ ಎನ್ನಬಹುದಾದ ಭಾಷೆ ಸೃಷ್ಟಿಯಾಗಿದೆ. ಒಂದು ನಿರ್ದಿಷ್ಟ ಸೂತ್ರ ಇಲ್ಲದೇ ಇರುವ ಕಾರಣ ಪತ್ರಿಕೆಗಳು, ಆಕಾಶವಾಣಿ ಮತ್ತು ದೂರದರ್ಶನದ ವಿವಿಧ ವಾಹಿನಿಗಳ ಮಧ್ಯೆಯೂ ಏಕರೂಪದ ಕನ್ನಡ ಬಳಕೆಯಾಗದೇ ಇರುವುದನ್ನು ಯಾರೂ ಗಮನಿಸಬಹುದಾಗಿದೆ.

ಇದನ್ನೇ ದೃಷ್ಟಿಯಲ್ಲಿಟ್ಟುಕೊಂಡು ಕನ್ನಡದ ಮಾಧ್ಯಮಗಳಿಗೆ ಒಂದು ಪ್ರಮಾಣೀಕೃತ ಭಾಷೆ ಏಕೆ ಬೇಕಿದೆ? ಎನ್ನುವುದನ್ನು ವಿಶ್ಲೇಷಿಸಬಹುದಾಗಿದೆ. ಇದಕ್ಕೆ ಉತ್ತರವನ್ನು ಒದಗಿಸುವ ಇನ್ನೊಂದು ಪ್ರಶ್ನೆಯಿದೆ. ಇಷ್ಟೆಲ್ಲಾ ಭಾಷಾ ವೈವಿಧ್ಯವನ್ನು

ಹೊಂದಿರುವ ಕನ್ನಡದ ಯಾವ ಪ್ರಾದೇಶಿಕ ಅಥವಾ ಉಪಭಾಷೆಯನ್ನು ಮಾಧ್ಯಮಗಳು ಬಳಸಬೇಕು. ಈ ಪ್ರಶ್ನೆಗೆ ಸಿಗುವ ಉತ್ತರ ಮೊದಲನೆಯ ಪ್ರಶ್ನೆಗೆ ಸ್ಪಷ್ಟನೆ ನೀಡುತ್ತದೆ.

ಅಂದರೆ ಏಕೀಕೃತ ಕರ್ನಾಟಕದ ಯಾವೊಂದು ನಿರ್ದಿಷ್ಟ ಪ್ರದೇಶದ ಭಾಷೆಯನ್ನೂ ಮಾಧ್ಯಮದ ಪ್ರಮಾಣಿತ ಭಾಷೆ ಎಂದು ಬಳಸುವುದಾದರೆ ಅದು ಇನ್ನೊಂದು ನಿರ್ದಿಷ್ಟ ಪ್ರದೇಶದ ಜನರಿಗೆ ಅರ್ಥವಾಗುವುದು ಸುಲಭವಲ್ಲ. ಉದಾಹರಣೆಗೆ ಉರ್ದು ಮಿಶ್ರಿತ ಗುಲ್ಬರ್ಗಾದ ಕನ್ನಡ, ತೆಲುಗು ಮಿಶ್ರಿತ ಕನ್ನಡ ಬಳಸುವ ಕೋಲಾರದ ಜನರಿಗೆ ಅರ್ಥವಾಗದೇ ಹೋಗಬಹುದು. ಅದೇ ರೀತಿ ಮಲೆಯಾಳಂ ಮಿಶ್ರಿತ ಕಾಸರಗೋಡಿನ ಕನ್ನಡ ಬಿಜಾಪುರದ ಜನರಿಗೆ ಅರ್ಥವಾಗುವುದಿಲ್ಲ. ಬೆಳಗಾವಿಯ ಕನ್ನಡ ಚಾಮರಾಜನಗರದ ಜನರಿಗೆ ಕಷ್ಟವೆನಿಸಬಹುದು. ಉಪಭಾಷೆ ಪ್ರಧಾನವಾಗಿರುವ ಅಥವಾ ದ್ವಿಭಾಷಾ ನೆಲೆಯ ವಲಯದ ಕನ್ನಡವನ್ನು ಮಾಧ್ಯಮಗಳ ಪ್ರಮಾಣಿತ ಭಾಷೆ ಎಂದು ಬಳಸುವುದು ಸೂಕ್ತವಾಗುವುದಿಲ್ಲ. ಇಷ್ಟರ ಮಟ್ಟಿಗೆ ಕನ್ನಡ ವೈವಿಧ್ಯಮಯವಾಗಿರುವುದರಿಂದಲೇ ಮಾಧ್ಯಮಗಳಿಗೆ ಒಂದು ಪ್ರಮಾಣಿತ ಕನ್ನಡದ ಅಗತ್ಯ ಇರುವುದು ಎದ್ದು ಕಾಣುತ್ತದೆ.

> *ಭಾಷಾಬಳಕೆ ಪತ್ರಿಕೆಗಳಲ್ಲಿ ಪ್ರಾಂತ್ಯದಿಂದ ಪ್ರಾಂತ್ಯಕ್ಕೆ ಬೇರಾಗುತ್ತದೆ. ಹುಬ್ಬಳ್ಳಿ, ಮುದ್ರಣದ ಪತ್ರಿಕೆಗಳಲ್ಲಿ ಆ ಭಾಗದ ಆಡುಮಾತಿನ ಛಾಯೆಯನ್ನು ಕಾಣುತ್ತೇವೆ. ಮಂಗಳೂರಿನಿಂದ ಬರುವ ಪತ್ರಿಕೆಗಳು ಅಲ್ಲಿನ ವಿಚಿತ್ರ ಪದ ಪ್ರಯೋಗವನ್ನು ಬಳಸುತ್ತವೆ. ಕಲ್ಬುರ್ಗಿ, ಹೈದರಾಬಾದ್ ಪ್ರದೇಶಗಳಲ್ಲಿ ಮುದ್ರಣಗೊಳ್ಳುವ ಪತ್ರಿಕೆಗಳಲ್ಲಿ ಆ ಭಾಗದ ಛಾಪು ಮೂಡಿರುತ್ತದೆ. ಇದು ಅಖಂಡ ಕರ್ನಾಟಕದ ಕಲ್ಪನೆಗೆ ಸಾಕಾರವಾಗುವುದಿಲ್ಲ. ಜತೆಗೆ ಭಾಷಾ ಬೆಳವಣಿಗೆಗೂ ಸಹಕಾರಿಯಾಗುವುದಿಲ್ಲ ಎನಿಸುತ್ತದೆ. ಇದರ ಒಟ್ಟಾರೆ ಸ್ವರೂಪವೇ ಏಕಮುಖ ಸಮಗ್ರ ಕನ್ನಡ ಅಭಿವೃದ್ಧಿಯ ಪರವಾಗಿಲ್ಲ. ಭಾಷಾ ಬಳಕೆಯಲ್ಲಿ ಏಕ ನೀತಿ, ಏಕ ರೂಪ ಸಾಧನೆಯಾದಾಗ ಮಾತ್ರ ಕನ್ನಡ ಪತ್ರಿಕೆಗಳಿಂದ ಕನ್ನಡಾಭಿವೃದ್ಧಿ ಸಾಧನೆಯಾಗುತ್ತದೆ. ಕೆಲವು ಪತ್ರಿಕೆಗಳು ಚರಣಸಿಂಗ್ ಅವರನ್ನು 'ಚರಣಸಿಂಹ' ಎಂದು ಕರೆಯುತ್ತವೆ. 'ಜೇಲ್‌ಸಿಂಹ' ಎನ್ನಲಾಗುತ್ತದೆ. ಮಂಗಳೂರು ಪತ್ರಿಕೆಗಳು ಲಾರಿಯನ್ನು 'ಲೋರಿ' ಎಂದು ಬರೆಯುತ್ತವೆ. ಉತ್ತರ ಕರ್ನಾಟಕದ ಕಡೆಯ ಊರು, ವ್ಯಕ್ತಿಗಳ ಹೆಸರುಗಳು ದಕ್ಷಿಣ ಕರ್ನಾಟಕದ ಕಡೆ ವ್ಯಂಜನಾಕ್ಷರಗಳಾಗಿ ಬದಲಾಗುತ್ತವೆ. ಗುಲ್ಬರ್ಗ, ಕಲ್ಬುರ್ಗಿಗಳು ಇನ್ನೂ ಒಂದಾಗಿಲ್ಲ. ಬಿಜಾಪುರ, ವಿಜಾಪುರಗಳು ಬೇರೆ ಬೇರೆಯೇ ಆಗಿವೆ. ಇದರಲ್ಲಿನ್ನೂ ಏಕರೂಪತೆ ಬಂದಿಲ್ಲ.*[೨]

ಪ್ರಮಾಣಿತ ಕನ್ನಡ ಹೇಗಿರಬೇಕು ಎನ್ನುವುದನ್ನು ಈಗ ವಿವೇಚಿಸಬೇಕಾಗಿದೆ. ಈ ಕನ್ನಡ ಯಾವುದೇ ಒಂದು ಪ್ರಾದೇಶಿಕ ಭಾಷೆಯ ನೆಲೆಯಲ್ಲಿರಬೇಕಾಗಿಲ್ಲ. ಗ್ರಾಂಥಿಕ ಭಾಷೆಯಾಗಿ ಬೆಳೆದು ಬಂದಿರುವ ಕನ್ನಡವೇ ಸ್ವಲ್ಪ ಸರಳವಾಗಿಯೂ, ತಿಳಿಯಾಗಿಯೂ, ಕಡಿಮೆ ಅಲಂಕಾರದೊಂದಿಗೆ ನೇರವಾಗಿಯೂ, ಹೇಳುವವನಿಗೂ ಕೇಳುವವನಿಗೂ, ಪತ್ರಿಕೆಯ ಸಂದರ್ಭದಲ್ಲಿ ಬರೆಯುವವನಿಗೂ ಓದುವವನಿಗೂ ಸುಲಭವಾಗಿ ಅರ್ಥವಾಗುವಂತಿರಬೇಕು ಎನ್ನುವುದೇ ಮುಖ್ಯ ಅಂಶ. ಅಂದ ಮಾತ್ರಕ್ಕೆ ತೀರಾ ಲಘುವಾದ, ಹಗುರವಾದ, ಅಥವಾ ಪಾಶವೀ ಸಂಸ್ಕೃತಿಯ ಮಟ್ಟದ ಭಾಷೆಯೂ ಆಗಿರಬಾರದು. ಪಂಡಿತರ ಭಾಷೆಯಾದರೂ ಸಂವಹನೆಗೆ ತೊಡಕೇ. ಪಂಡಿತರೂ ಒಪ್ಪುವ ಪಾಮರರೂ ಅರ್ಥ ಮಾಡಿಕೊಳ್ಳುವ ಮಧ್ಯಮಸ್ತರದ ಕನ್ನಡ ಮಾಧ್ಯಮಗಳಿಗೆ ಬೇಕು.

*ಹಳೆ ಪದಗಳನ್ನು ಬಿಟ್ಟು, ಗ್ರಾಮ್ಯರೂಪಗಳನ್ನು ಬಿಟ್ಟು, ದಿನನಿತ್ಯದ ಭಾಷೆಗೆ ಹತ್ತಿರವಾದ ಭಾಷೆಯ ಬಳಕೆ ಸಾಧ್ಯ. ಆಗ ಆಡುನುಡಿಯ ನಮ್ಯತೆ, ಬನಿ, ಲವಲವಿಕೆ ಬರುತ್ತದೆ. ಭಾಷೆ ಜಡವಾಗುವುದಿಲ್ಲ. ಪ್ರಾಂತೀಯ ಭೇದ, ವೈಲಕ್ಷಣ್ಯಗಳನ್ನೂ ಸೂಕ್ಷ್ಮವಾಗಿ ತೋರಲು ಸಾಧ್ಯ. ನಗ್ನ ವಾಸ್ತವತೆ ಗ್ರಂಥಭಾಷೆಗೆ ಸಲ್ಲದು. ಬದಲಾವಣೆಯನ್ನು ತಡೆಯದಿದ್ದರೂ ಗ್ರಂಥಭಾಷೆ ಒಂದು ಭಾಷೆಗೆ ಏಕರೂಪತೆಯನ್ನೂ ಸ್ಥಿರತೆಯನ್ನೂ ತರುತ್ತದೆ*[೧೨]

ಎಂದು ಎಂ.ಹೆಚ್. ಕೃಷ್ಣಯ್ಯ ಗ್ರಂಥಭಾಷೆಗೆ ಸಂಬಂಧಿಸಿದಂತೆ ಹೇಳಿರುವ ಮಾತುಗಳನ್ನು ಮಾಧ್ಯಮಗಳಿಗೊಂದು ಪ್ರಮಾಣಿತ ಭಾಷೆ ರೂಪಿಸುವಾಗ ಗಮನಿಸುವುದು ಸಮರ್ಪಕ ಹಾಗೂ ಸಮಂಜಸ.

ಮುದ್ರಣ ಮಾಧ್ಯಮವೇ ಅಗಿರುವ ಹಾಗೂ ದೀರ್ಘಕಾಲದಿಂದ ಕನ್ನಡವನ್ನು ಬಳಸುತ್ತಾ ಬಂದಿರುವ ಪತ್ರಿಕೆಗಳಿಗೆ ಇಂತಹ ಒಂದು ಶಿಷ್ಟೀಕೃತ ಭಾಷೆ ಸಿದ್ಧಿಸಿದೆ. ಅದೇ ರೀತಿ ಆಕಾಶವಾಣಿಯೂ ತನ್ನದೇ ಆದ ಶೈಲಿಯಲ್ಲಿ ಭಾಷೆಯನ್ನು ಅಳವಡಿಸಿಕೊಂಡಿದೆ. ಇದಕ್ಕೆ ಈ ಎರಡೂ ಮಾಧ್ಯಮಗಳು ತಮ್ಮ ಉಗಮ ಕಾಲದಿಂದಲೂ ಕನ್ನಡದ ಸಾಹಿತಿ-ಬರಹಗಾರರೊಂದಿಗೆ, ಕನ್ನಡ ಚಿಂತಕರು - ಹೋರಾಟಗಾರರೊಂದಿಗೆ ನಿಕಟ ಸಂಪರ್ಕ ಹೊಂದಿದ್ದು, ಮಾಧ್ಯಮದ ಕೆಲಸಗಳಲ್ಲಿ ಅವರನ್ನು ತೊಡಗಿಸಿಕೊಂಡು ಅವರ ಮಾರ್ಗದರ್ಶನದಲ್ಲಿ ಕಾರ್ಯ ನಿರ್ವಹಿಸಿರುವುದೂ ಇವಕ್ಕೊಂದು ಶಿಷ್ಟ ಹಾಗೂ ಶುದ್ಧ ಭಾಷೆ ರೂಪುಗೊಳ್ಳುವುದಕ್ಕೆ ಕಾರಣವಾಗಿರಬಹುದು. ಅದರ ಜೊತೆಗೆ ಪ್ರಯೋಗಾತ್ಮಕವಾಗಿ ಪದ, ಪದಪುಂಜ, ವಾಕ್ಯ ಪ್ರಯೋಗಗಳನ್ನು ಮಾಡಿ ನಂತರ ಸರಿ ಎನಿಸದಿದ್ದರೆ ತಿದ್ದಿಕೊಳ್ಳುತ್ತಲೂ ಈ ಮಾಧ್ಯಮಗಳು ಭಾಷೆಯನ್ನು ಬೆಳೆಸಿವೆ. ಪ್ರಮಾಣೀಕರಿಸಿವೆ.

ಪ್ರಮಾಣಿತ ಭಾಷೆಯ ಸಮಸ್ಯೆ ಹೆಚ್ಚಾಗಿ ಕಾಡುತ್ತಿರುವುದು ದೂರದರ್ಶನವನ್ನೇ ಎನ್ನಬಹುದು. ನವೀನ ಮಾಧ್ಯಮ ಎನಿಸಿಕೊಳ್ಳುವ ದೂರದರ್ಶನ ಭಾಷಾ ವಿದ್ವಾಂಸರು, ತಜ್ಞರಿಂದ, ಸಾಹಿತಿ, ಚಿಂತಕರಿಂದ ದೂರವೇ ಉಳಿದಿರುವಂತಿದೆ. ಈ ಮಾಧ್ಯಮಕ್ಕೆ ಅಳವಡಿಸಿಕೊಳ್ಳಬೇಕಾದ ಭಾಷೆ ಹೇಗಿರಬೇಕು ಎಂಬ ಬಗ್ಗೆ ಈವರೆಗೂ ಮುಕ್ತ ಚರ್ಚೆ, ಚಿಂತನೆ, ಮಂಥನಗಳು ನಡೆದಂತಿಲ್ಲ. ಕನ್ನಡವನ್ನು ಮನಸ್ಸಿಗೆ ಬಂದಂತೆ ಬಳಸುವುದು ಸರ್ಕಾರಿ ಒಡೆತನದಲ್ಲಿದ್ದ ಡಿಡಿ-೧ಕ್ಕೆ ಆಗುವುದಿಲ್ಲ. ಹಾಗಾಗಿ ಪ್ರಯೋಗಗಳನ್ನು ಮಾಡುವುದಿಲ್ಲ. ಆದರೆ ಖಾಸಗಿ ವಾಹಿನಿಗಳು ಪ್ರಸಾರ ಮಾಡಬೇಕಾದ ವಸ್ತು, ವಿಷಯ, ದೃಶ್ಯ ಅಥವಾ ಭಾಷೆ ಯಾವುದರ ಮೇಲೂ ಯಾವುದೇ ಬಗೆಯ ನಿಯಂತ್ರಣ ಇಲ್ಲದಿರುವುದು, ಕಳಪೆ ಹಾಗೂ ಅಶುದ್ಧ ಭಾಷಾ ಬಳಕೆಗೆ ದಾರಿ ಮಾಡಿಕೊಟ್ಟಿರುವಂತಿದೆ. ಒಮ್ಮೊಮ್ಮೆ ಯಶಸ್ವಿಯೂ ಆಗಬಹುದು. ಮನರಂಜನೆಯೇ ಮುಖ್ಯವಾಗಿರುವುದರಿಂದ ಈ ಮಾಧ್ಯಮ ಜನರನ್ನು ಸುಲಭವಾಗಿ ತಲುಪುತ್ತಿದೆ. ಆದರೂ ಉಚ್ಚ ಸಂಸ್ಕೃತಿಯ ಜನ ಈ ಮಾಧ್ಯಮವನ್ನು ಅದರಲ್ಲೂ ಖಾಸಗಿ ಮಾಧ್ಯಮಗಳನ್ನು (ಸುದ್ದಿಗಳಿಗೆ ಹೊರತುಪಡಿಸಿ) ಅವಲಂಬಿಸಿಲ್ಲ ಎನ್ನುವುದು ಅಧ್ಯಯನದ ಸಂದರ್ಭದಲ್ಲಿ ತಿಳಿದುಬಂದಿದೆ. ಹಾಗಾಗಿ ಮಾಧ್ಯಮಗಳು ಬಳಸುವ ಭಾಷೆ ಪ್ರಮಾಣಿತ ಭಾಷೆಯಾಗಬೇಕಾದರೆ ಅದು ಗುಣಮಟ್ಟ ನಿಯಂತ್ರಣಕ್ಕೆ ಒಳಪಟ್ಟಿರಬೇಕಾದ ಅಗತ್ಯ ಎದ್ದು ತೋರುತ್ತಿದೆ. ಈ ಹಿನ್ನೆಲೆಯಲ್ಲಿ ಎಲ್ಲ ಮಾಧ್ಯಮಗಳಿಗೂ ಅನ್ವಯಿಸುವಂತಹ ಒಂದು ತಜ್ಞರ ಸಮಿತಿಯನ್ನು ರಚಿಸಬೇಕಾದ ಅಗತ್ಯವೂ ಇದೆ.

ಈಗಾಗಲೇ ಮಾಧ್ಯಮಗಳು ಬಳಸುತ್ತಿರುವ ಕನ್ನಡ ಭಾಷೆ ರಾಜ್ಯಾದ್ಯಂತ ಜನರಿಗೆ ಪರಿಚಿತವಾಗಿರುವುದರಿಂದ ಇದನ್ನೇ ಇನ್ನಷ್ಟು ಅಭಿವೃದ್ಧಿಪಡಿಸಬೇಕೇ ಹೊರತು ಮಾಧ್ಯಮಗಳಿಗಾಗಿಯೇ ಮತ್ತೊಂದು ಭಾಷೆಯನ್ನು ಪ್ರಮಾಣಿತ ಭಾಷೆ ಎಂದು ರೂಪಿಸಬೇಕಾಗಿಲ್ಲ. ಎಲ್ಲ ಪ್ರಾದೇಶಿಕ ಭಾಷೆಯ ಸೊಗಡನ್ನು ಒಳಗೊಂಡಿದ್ದರೆ ಉತ್ತಮ. ಆದರೆ ಮೌಖಿಕ ಮಾಧ್ಯಮದ

ಸಂದರ್ಭದಲ್ಲಿ ಒಂದು ನಿರ್ದಿಷ್ಟ ಪ್ರದೇಶದ ಕಾಕು, ಕೊಂಕು, ಏರಿಳಿತಗಳನ್ನು ಬಳಸದಂತೆ ಎಚ್ಚರವಹಿಸಬೇಕು. ಒಂದು ಗ್ರಾಮದ ಭಾಷಾ ಶೈಲಿ, ಪದೋಚ್ಚಾರ, ವಾಕ್ಯರಚನೆ ಆಗಬಾರದು.

ಉದಾಹರಣೆಗೆ ಬರಹದ ಕನ್ನಡದಲ್ಲಿ 'ಇರುವೆ' ಎನ್ನುವುದನ್ನು ಹವ್ಯಕ ಕನ್ನಡದಲ್ಲಿ 'ಎರುಗು' ಎನ್ನಲಾಗುತ್ತದೆ. ಕಿವಿ = ಕೆಮಿ, ಬಿಸಿಲು = ಬೆಶಿಲು, ಕುದಿ = ಕೊದಿ, ತುಳಿತ = ತೊಳಿತ ಇಂತಹ ವ್ಯತ್ಯಾಸಗಳಿರುವುದರಿಂದ ಹವ್ಯಕ ಕನ್ನಡ ಸಾರ್ವತ್ರಿಕಗೊಳ್ಳುವುದಿಲ್ಲ. ಆದ್ದರಿಂದ ಏಕೀಕೃತ ಕರ್ನಾಟಕದ ಬಹುಪಾಲು ಜನರಿಗೆ ಅರ್ಥವಾಗುತ್ತಿರುವ ಭಾಷೆಯನ್ನೇ ಬಳಸುವಂತೆ ಮಾಧ್ಯಮಗಳಿಗೆ ಸೂಚಿಸಬೇಕಾಗುತ್ತದೆ.

'ಕರಿಯರ ನಾಯಕ' ಎನ್ನುವುದನ್ನು ಮಾಧ್ಯಮವೊಂದು 'ಅಶ್ವೇತ ನಾಯಕ' ಎಂದು ಬಳಸಿದ ಹಿನ್ನೆಲೆಯಲ್ಲಿ ಭಾಷಾ ತಜ್ಞರಿಂದ ಆಕ್ಷೇಪ ಮೂಡಿ ಬಂದಿತ್ತು. 'ಅಶ್ವೇತ' ಎನ್ನುವುದು 'ಬಿಳಿಯಲ್ಲ' ಎಂದಾಗುತ್ತದೆಯೇ ಹೊರತು 'ಕರಿ' ಎಂದಾಗುವುದಿಲ್ಲ, ಅಲ್ಲದೆ ರೂಢಿಗತವಾಗಿರುವ 'ಕರಿಯರು' ಎನ್ನುವ ಪದವನ್ನು ಅನಗತ್ಯವಾಗಿ ಬದಲಿಸುವ ಅಗತ್ಯವೂ ಇರಲಿಲ್ಲ ಎಂಬ ಅಭಿಪ್ರಾಯ ವ್ಯಕ್ತವಾಗಿತ್ತು. Flora ಮತ್ತು Fauna ಎನ್ನುವುದನ್ನು ಪುಷ್ಪ ಮತ್ತು ಪಕ್ಷಿ ಸಂಕುಲ ಎಂದು ಮಾಧ್ಯಮ ಬಳಸಿದ್ದು ವ್ಯಾಪಕ ಮೆಚ್ಚುಗೆಯನ್ನೂ ಪಡೆಯಿತು. ಜನರಿಗೆ ಅರ್ಥವಾಗುವ, ಸ್ವತಃ ಅರ್ಥ ಆಭಾಸವಾಗದ, ಲಾಲಿತ್ಯಪೂರ್ಣ, ಕಿವಿಗೆ ಇಂಪಾಗುವಂತಹ ಭಾಷೆಯೂ ಮಾಧ್ಯಮಕ್ಕೆ ಬೇಕು.

ಮಾಧ್ಯಮಗಳು ಸುದ್ದಿಯನ್ನು ಬಿತ್ತರಿಸಲು ಬಳಸುವ ಕನ್ನಡಕ್ಕೆ ಒಂದು ಪ್ರಮಾಣಿತ ಭಾಷೆ ಅತ್ಯಂತ ಅಗತ್ಯವಾಗುತ್ತದೆಯೇ ವಿನಃ ಮನರಂಜನೀಯ ಕಾರ್ಯಕ್ರಮಗಳಿಗಲ್ಲ. ಆ ಕಾರ್ಯಕ್ರಮಗಳು ಸೃಜನಶೀಲ ಸಾಹಿತ್ಯವಿದ್ದಂತೆ. ಪ್ರಾದೇಶಿಕ ಭಾಷೆಗಳನ್ನೇ ಬಳಸಿ ಕಾರ್ಯಕ್ರಮಗಳನ್ನು ತಯಾರಿಸಬಹುದು. ಉದಾಹರಣೆಗೆ ಆಕಾಶವಾಣಿಯ ಅನೇಕ ನಾಟಕ - ರೂಪಕಗಳು ಧಾರವಾಡ ಕನ್ನಡದಲ್ಲೂ ತಯಾರಾಗಿವೆ. ದೂರದರ್ಶನದ ಡಿಡಿ-೧ರಲ್ಲಿ ಶೋಕಾಂತಿಕ, ಕಾಲ ಬರತಾವ ಕಾಲ ಮುಂತಾದ ನಾಟಕಗಳು ಧಾರವಾಡ ಕನ್ನಡದಲ್ಲಿ ನಿರ್ಮಾಣಗೊಂಡಿವೆ. ಕಾರ್ಯಕ್ರಮಗಳ ಮಟ್ಟಿಗೆ ಇಂತಹ ಸಡಿಲಿಕೆ ಸಾಧ್ಯವಾಗುತ್ತದೆ. ಅಗತ್ಯವೂ ಆಗುತ್ತದೆ.

ಭಾಷೆ ಆಧುನಿಕಗೊಳ್ಳುತ್ತಿರುವುದೂ ಭಾಷೆಯನ್ನು ಪ್ರಮಾಣೀಕರಣಗೊಳಿಸುವುದಕ್ಕೆ ಸಹಕಾರಿ ಎಂದೇ ಹೇಳಬಹುದು. ಆಧುನೀಕರಣ ಭಾಷೆಯನ್ನು ವೈವಿಧ್ಯಮಯಗೊಳಿಸುತ್ತದೆ ಪ್ರಮಾಣೀಕರಣ ಅದನ್ನು ಏಕತ್ರಗೊಳಿಸುತ್ತದೆ ಎನ್ನುವ ವೈರುಧ್ಯವಿರುವುದು ನಿಜವಾದರೂ ಮಾಧ್ಯಮಗಳ ಪ್ರಮಾಣಿತ ಭಾಷೆ ರೂಪುಗೊಳ್ಳುವ ಸಂದರ್ಭದಲ್ಲಿ, ಭಾಷಾ ಪ್ರಯೋಗಕ್ಕೆ ತಕ್ಕಂತೆ ಬೇಕಾದ ಪರಿಕರವನ್ನು ಆಧುನೀಕರಣ ಒದಗಿಸುತ್ತದೆ. ಮತ್ತೊಂದು ಅನುಕೂಲವೇನೆಂದರೆ ಮಾಧ್ಯಮಗಳು ಆಧುನಿಕ ಪದವೊಂದನ್ನು ಅದು ಹೊಸದಾಗಿರುವಾಗಲೇ ಏಕಕಾಲಕ್ಕೆ ರಾಜ್ಯಾದ್ಯಂತ ಪ್ರಸಾರ ಮಾಡಿಬಿಡುವುದರಿಂದ ಅದು ಎಲ್ಲೆಡೆಯೂ ಒಮ್ಮೆಗೇ ಪರಿಚಯಗೊಂಡು ರೂಢಿಗೆ ಬಂದುಬಿಡುತ್ತದೆ. ಇಂತಹ ಪ್ರಯೋಗಗಳು ಭಾಷಾ ಆಧುನೀಕರಣವನ್ನು ಪ್ರಸಾರಕ್ಕೂ ಪ್ರಮಾಣಕ್ಕೂ ಒಳಪಡಿಸುತ್ತವೆ.

ಮಾಧ್ಯಮಗಳು ಏಕರೂಪದ ಅಥವಾ ಪ್ರಮಾಣಿತ ಭಾಷೆಯನ್ನು ಬಳಸುತ್ತಿರುವುದರಿಂದ ಪ್ರಾದೇಶಿಕ ಭಾಷೆಗಳು ರೂಢಿ ತಪ್ಪುತ್ತವೆ ಎಂಬ ಆರೋಪಗಳೂ ಇವೆ.

*ಪತ್ರಿಕೆ, ಸಿನಿಮಾ, ರೇಡಿಯೊ, ಟಿ.ವಿ. ಮೊದಲಾದ ಭಾಷಾ ಸಂವಹನ*
*ಮಾಧ್ಯಮಗಳ ಮುಖಾಂತರ ಬೆಂಗಳೂರು, ಮೈಸೂರು ಭಾಷೆಯನ್ನು*

> *ಕರ್ನಾಟಕದ ಇನ್ನುಳಿದ ಪ್ರದೇಶಗಳ ಮೇಲೆ ಹೇರುತ್ತಿರುವುದನ್ನು ಎಷ್ಟು ಜನ ಗಮನಿಸಿದ್ದಾರೋ ! ಇದರಿಂದಾಗಿ ಇನ್ನುಳಿದ ಪ್ರದೇಶಗಳ ವಿಶಿಷ್ಟ ಶಬ್ದಗಳು ಕಳೆದುಹೋಗುವುದನ್ನು ತಪ್ಪಿಸಬೇಕಾದ ಹೊಣೆ ಆ ಭಾಗದ ಅಧಿಕಾರಿ, ಅಧ್ಯಾಪಕ ಮತ್ತು ಬರಹಗಾರರ ಮೇಲಿದೆ.*[೧೪]

ಎಂಬ ಕೂಗೂ ಇದೆ.

> *ಪತ್ರಿಕೆ, ಆಕಾಶವಾಣಿ, ದೂರದರ್ಶನಗಳಲ್ಲಿ ಕನ್ನಡ ವ್ಯಾಪಕವಾಗಿ ಬಳಕೆಯಾಗುವುದನ್ನು ಯಾರೂ ಗುರುತಿಸಬಹುದು. ಆದರೆ ಈ ಬೆಳವಣಿಗೆಯ ವಿಪರ್ಯಾಸವನ್ನು ಗಮನಿಸಬೇಕು. ದಿನಪತ್ರಿಕೆಗಳು ಸುದ್ದಿಗಾಗಿ ಈಗಲೂ ಇಂಗ್ಲಿಷ್ ಆಕರಗಳನ್ನು ಹೊಂದಿವೆ. ಸುದ್ದಿ ವಿಶ್ಲೇಷಣೆಯ ಮಾದರಿಗಳನ್ನು ರಾಷ್ಟ್ರಮಟ್ಟದ ಇಂಗ್ಲಿಷ್ ಪತ್ರಿಕೆಗಳು ರೂಪಿಸುತ್ತಿವೆ. ಜಾಹೀರಾತುಗಳು ಇಂಗ್ಲಿಷ್‌ನಲ್ಲಿ ಸಿದ್ಧಗೊಂಡು ಅನಂತರ ಕನ್ನಡ ಆವೃತ್ತಿಗಳು ಬರುತ್ತವೆ. ರಾಜ್ಯದ ವರದಿಗಳು, ಸ್ಥಳೀಯ ವಿದ್ಯಮಾನಗಳು ಕನ್ನಡದಲ್ಲಿ ಮಾತ್ರ ಪ್ರಕಟವಾಗುತ್ತವೆ. ಇದನ್ನು ಹೊರತುಪಡಿಸಿದರೆ ವಾರಪತ್ರಿಕೆಗಳ ಮಟ್ಟಿಗೆ ಕನ್ನಡ ಬಳಕೆ ಮತ್ತೊಂದು ದಿಕ್ಕಿನಲ್ಲಿ ಸಾಗಿದೆ. ವರದಿಗಳು, ಸುದ್ದಿಗಳು ಮುಖ್ಯವಾಗದೇ ಹೋಗುವ ಇಂಥ ಪತ್ರಿಕೆಗಳು ಒಟ್ಟು ಓದುಗ ಸಮುದಾಯದ ಒಳ ವಿರೋಧಗಳಿಗೆ ತಕ್ಕಂತೆ ಪಾತ್ರವಹಿಸುತ್ತವೆ. ......... ಕನ್ನಡದ ಬಳಕೆಯಿದ್ದರೂ ಕನ್ನಡದ ಸಾಧ್ಯತೆಗಳು ಈ ಮೂಲಕ ಶೋಧಿತವಾಗುತ್ತಿಲ್ಲ*[೧೫]

ಎನ್ನುತ್ತಾರೆ ಕೆ.ವಿ. ನಾರಾಯಣ.

ಮೂಲತಃ ತನ್ನ ಭಾಷೆಯೊಂದಿಗೆ ಮನುಷ್ಯ ಭಾವನಾತ್ಮಕ ಸಂಬಂಧವನ್ನು ಹೊಂದಿರುತ್ತಾನೆ. ಎಂತಹುದೇ ಶಿಷ್ಟ ಭಾಷೆಯನ್ನು ಕಲಿತವರು, ತೀರಾ ಔಪಚಾರಿಕ ಪರಿಸರದಲ್ಲಿ ನೆಲೆಸಿದ್ದರೂ ತಾನು, ತನ್ನದು, ತನ್ನವರು ಎನ್ನುವ ಸಂದರ್ಭದಲ್ಲಿ ತನ್ನ ಭಾಷೆಯನ್ನೇ ಪ್ರಯೋಗಿಸುವುದು ಆತನಿಗೆ ಸಹಜ, ಸ್ವಾಭಾವಿಕ. ಹಾಗಾಗಿ ಆತ ತನ್ನ ಭಾಷೆಯನ್ನು ಮರೆಯಲಾರ. ಎಷ್ಟೋ ಸಂದರ್ಭಗಳಲ್ಲಿ ಅವನಿಗೆ ರೂಢಿಗತವಾದ ತನ್ನ ಮಾತೃಭಾಷೆಗೆ ಒಗ್ಗುವ ಕಾಕು, ನಿಲುಗಡೆ, ರಾಗಗಳನ್ನೇ ಆತ ಹೊಸದಾಗಿ ಕಲಿತು ಬಳಸುವ ಭಾಷೆಗೂ ಅಳವಡಿಸಿಕೊಳ್ಳುವ ಸಾಧ್ಯತೆಗಳಿವೆ. ಉದಾಹರಣೆಗೆ ಶಿವಮೊಗ್ಗದಿಂದ ಬೆಂಗಳೂರಿಗೆ ಬಂದು ನೆಲೆಸಿದವರೂ 'ಚಿಕ್ಕವನಿದ್ದಾಗ' ಎನ್ನುವುದಕ್ಕೆ 'ಸಣ್ಣಕ್ಕಿದ್ದಾಗ' ಎಂದೋ, 'ತಾಳು' ಎನ್ನುವುದಕ್ಕೆ 'ನಿಲ್ಲು' ಎಂದೋ; ಮಂಗಳೂರಿನ ಕಡೆಯಿಂದ ಬಂದವರು 'ಏನು ಮಾರಾಯ್ರೇ' ಎಂತಲೋ ತಮಗೆ ತೀರಾ ಸಹಜವಾದ ಭಾಷೆಯನ್ನೇ ಬದಲಾದ ಪರಿಸರದಲ್ಲೂ ಬಳಸಿ, ಈ ಪರಿಸರಕ್ಕೆ ತಮ್ಮ ಭಾಷೆಯನ್ನು ಪರಿಚಯಿಸುತ್ತಾರೆ. ರಾಜಧಾನಿ ಬೆಂಗಳೂರಿನ ಕನ್ನಡ ಅದನ್ನೂ ಒಳಗೊಂಡು ಬೆಳೆಯುತ್ತದೆ. ಇಂತಹ ಭಾಷಾ ಒತ್ತಡ ಬೆಂಗಳೂರಿನ ಕನ್ನಡದ ಮೇಲೆ ರಾಜ್ಯದ ಎಲ್ಲ ಭಾಗದ ಭಾಷೆಗಳಿಂದಲೂ ಆಗುತ್ತದೆ ಎನ್ನುವುದನ್ನೂ ನಾವು ಗಮನಿಸಬೇಕು. ಪ್ರಾದೇಶಿಕ ಅಥವಾ ಉಪಭಾಷೆಗಳಿಂದಲೂ ಪದಗಳನ್ನು ಸ್ವೀಕರಿಸಿ ಕನ್ನಡ ಆಂತರಿಕವಾಗಿಯೇ ಬೆಳೆಯಲು ಇಂತಹ ಭಾಷಾ ಸಂಪರ್ಕದ ಅಗತ್ಯವಿದೆ. ಅದೇ ರೀತಿ ಮೈಸೂರು, ಬೆಂಗಳೂರು ಭಾಗದ ಕನ್ನಡವನ್ನು ಇನ್ನುಳಿದ ಪ್ರದೇಶಗಳ ಕನ್ನಡದೊಳಗೆ ಬೆರೆಸಿಕೊಳ್ಳುವುದೂ ಒಳ್ಳೆಯದೆ. ರಾಜಧಾನಿಯಿಂದ ರಾಜ್ಯಾದ್ಯಂತ ಪ್ರಸಾರಗೊಳ್ಳುವ ದೊಡ್ಡ ಮಾಧ್ಯಮ ಕೇಂದ್ರಗಳು ಮಾತ್ರ ಏಕರೂಪದ ಶಿಷ್ಟ ಭಾಷೆಯನ್ನು ಬಳಸಬಯಸುತ್ತಿವೆ. ಉದಾಹರಣೆಗೆ ಆಕಾಶವಾಣಿಯ ಬೆಂಗಳೂರು

ಕೇಂದ್ರ. ಇಲ್ಲಿಂದ ಪ್ರಸಾರಗೊಳ್ಳುವ ಬಹುತೇಕ ಕಾರ್ಯಕ್ರಮ ಹಾಗೂ ವಾರ್ತೆಗಳಲ್ಲಿ ಇಂತಹ ಪ್ರಮಾಣಿತ ಕನ್ನಡವನ್ನು ಬಳಸಲಾಗುತ್ತದೆ. ಸ್ಥಳೀಯ ಕಲಾವಿದರಿಗೆ, ಸಾಹಿತಿಗಳಿಗೆ ಹೆಚ್ಚಿನ ಅವಕಾಶ ನೀಡುವ ದೃಷ್ಟಿಯಿಂದ ಮೈಸೂರು, ಹಾಸನ, ಮಡಿಕೇರಿ, ಮಂಗಳೂರು, ಗುಲ್ಬರ್ಗಾ, ಬಿಜಾಪುರ, ಧಾರವಾಡ ಮೊದಲಾದ ಜಿಲ್ಲಾಕೇಂದ್ರಗಳಲ್ಲೇ ಆಕಾಶವಾಣಿ ಕೇಂದ್ರಗಳನ್ನು ಸ್ಥಾಪಿಸಿರುವುದರಿಂದ ಆ ಪ್ರದೇಶದ ಭಾಷಾ ಬಳಕೆಗೆ ಅವಕಾಶ ಕಲ್ಪಿಸಿಕೊಟ್ಟಂತಾಗಿದೆ. ಮೂಲತಃ ಧಾರವಾಡ ಕೇಂದ್ರದಿಂದಲೇ ಬಿತ್ತರಗೊಳ್ಳುವ ಪ್ರದೇಶ ಸಮಾಚಾರವೊಂದನ್ನು ಬೆಂಗಳೂರಿನ ಪ್ರಧಾನ ಕೇಂದ್ರವೂ ಸಹಪ್ರಸಾರ ಮಾಡುತ್ತಿರುವುದು ಗಮನಾರ್ಹ. ಸ್ಥಳೀಯ ವಿಷಯಗಳಿಗೆ ಪ್ರಾಶಸ್ತ್ಯ ನೀಡುವುದರಿಂದ ಇವು ಇಂಗ್ಲಿಷ್ ಆಕರಗಳ ಮೊರೆ ಹೋಗಬೇಕಾದ್ದಿಲ್ಲ.

ಅದೇ ರೀತಿ ಪತ್ರಿಕೆಗಳು. ದೊಡ್ಡ ಪತ್ರಿಕೆಗಳೂ ವಿಭಾಗೀಯ ಮಟ್ಟದಲ್ಲಿ ಆವೃತ್ತಿಗಳನ್ನು ಹೊರಡಿಸುತ್ತಿರುವುದನ್ನು ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದ ಪತ್ರಿಕೆಗಳ ಪ್ರಸಾರ ಸಂಖ್ಯೆ ಹೆಚ್ಚಿರುವುದನ್ನು ಗಮನಿಸಿದಾಗ ಅವು ಬಳಸುವ ಭಾಷೆ ಆಯಾ ಪ್ರಾದೇಶಿಕ ಅಗತ್ಯಕ್ಕೆ ತಕ್ಕಂತೆ ಇರುತ್ತದೆ ಎಂದೂ ಭಾವಿಸಬಹುದಾಗಿದೆ. ಆದರೂ ಗ್ರಾಂಥಿಕ ಸ್ವರೂಪದ ಪ್ರಾದೇಶಿಕ ಭಾಷೆಗಳಲ್ಲಿ ತೀರಾ ವ್ಯತ್ಯಾಸವನ್ನೇನೂ ಗುರುತಿಸಲಾಗುವುದಿಲ್ಲ.

ಅತ್ಯಂತ ಪ್ರಭಾವಿ ಮಾಧ್ಯಮವೆನಿಸುವ ದೂರದರ್ಶನದ ಎಲ್ಲ ವಾಹಿನಿಗಳಿಗೂ ಇಂತಹ ವಿಕೇಂದ್ರೀಕರಣದ ಸೌಲಭ್ಯ ಇಲ್ಲದಿರುವುದರಿಂದಲೇ ಆರೋಪಗಳು ಹೆಚ್ಚಾಗುತ್ತಿವೆ. ಈಗಿರುವ ವಾಹಿನಿಗಳು ರಾಜ್ಯದ ಉತ್ತರ ಭಾಗದ ಎಲ್ಲ ಜಿಲ್ಲೆಗಳ ಸುದ್ದಿ ಸಮಾಚಾರ ಹಾಗೂ ಭಾಷೆಯ ಕಡೆ ಒಲವು ತೋರಬೇಕಾದ ಅಗತ್ಯವೂ ಇದೆ. ಈಟೀವಿ ತನ್ನ 'ಕನ್ನಡನಾಡಿ' ವಾರ್ತಾಪ್ರಸಾರದಲ್ಲಿ ಜಿಲ್ಲೆಗೊಂದು ಸುದ್ದಿಯನ್ನು ಸಂಗ್ರಹಿಸಿ ಹೇಳುತ್ತಿರುವುದನ್ನು ನಾವು ಗಮನಿಸಬಹುದು. ಮಾಧ್ಯಮವೊಂದು ಹೊಸದಾಗಿ ಹುಟ್ಟಿ ವಿಕಾಸಗೊಳ್ಳುತ್ತಿರುವ ಹಂತದಲ್ಲಿ ಇಂತಹ ಟೀಕೆಗಳು ಸರ್ವೇ ಸಾಮಾನ್ಯವಾದರೂ, ಮಾಧ್ಯಮಗಳೂ ಸಹ ಆದಷ್ಟು ಬೇಗ ಜನತೆಯ ಆಶೋತ್ತರಗಳಿಗೆ ಸ್ಪಂದಿಸಬೇಕಾದ ಅಗತ್ಯವಿದೆ.

ಒಟ್ಟಾರೆ ಈ ಅಧ್ಯಯನದಿಂದ ಕಂಡುಕೊಂಡ ಅಂಶಗಳೆಂದರೆ:-

1. ಮಾಧ್ಯಮಗಳಿಗೊಂದು ಪ್ರಸಾರನೀತಿ ಬೇಕು.
2. ಮಾಧ್ಯಮಗಳಿಗೊಂದು ಭಾಷಾನೀತಿ ಬೇಕು.
3. ಮಾಧ್ಯಮಗಳ ಗುಣಮಟ್ಟ ನಿಯಂತ್ರಣವಾಗಬೇಕು.
4. ಕನ್ನಡ ಭಾಷಾ ರಚನೆ ಮತ್ತು ಬಳಕೆಯಲ್ಲಿ ಗುಣಮಟ್ಟ ಸಾಧನೆ ಆಗಬೇಕು.
5. ರಾಜ್ಯಾದ್ಯಂತ ಏಕರೂಪದ ಪ್ರಮಾಣಿತ ಭಾಷೆ ರಚನೆಗೆ ತಜ್ಞರ ಪ್ರಮಾಣೀಕರಣ ಬೇಕು.

ಇಷ್ಟಾದರೆ ಆಧುನಿಕ ಸಂವಹನ ಮಾಧ್ಯಮಗಳು ಕನ್ನಡ ಭಾಷೆಯನ್ನು ಅಭಿವೃದ್ಧಿಗೊಳಿಸುವ ನಿಟ್ಟಿನಲ್ಲಿ ದಾಪುಗಾಲು ಹಾಕಬಹುದು. ಈವರೆಗೆ ಮಾಡಿರುವ ಪ್ರಯತ್ನಗಳನ್ನು ಮಾಧ್ಯಮಗಳು ಭಾಷೆಯನ್ನು ಅಭಿವೃದ್ಧಿಗೊಳಿಸಬೇಕು ಎನ್ನುವ ಮೂಲ ಉದ್ದೇಶದಿಂದಲೇ ಮಾಡಿಲ್ಲ. ಅದು ತನ್ನಷ್ಟಕ್ಕೆ ತಾನೇ ಆಗಿದೆ. ಆದರೆ ಮಾಧ್ಯಮಗಳು ಕನ್ನಡವನ್ನು ಅಭಿವೃದ್ಧಿಗೊಳಿಸಬೇಕು ಎಂಬ ಉದ್ದೇಶದೊಂದಿಗೇ ಶ್ರಮಿಸುವುದಾದರೆ ಅದನ್ನು ಮಾಡುವ ಅಪರಿಮಿತ ಸಾಧ್ಯತೆಗಳು, ಶಕ್ತಿ ಸಾಮರ್ಥ್ಯಗಳು ಅವಕ್ಕಿದೆ ಎಂದು ಈ ಅಧ್ಯಯನ ಸ್ತುತಪಡಿಸುತ್ತದೆ.

**ಅಡಿಟಿಪ್ಪಣಿ**

೧. ಡಾ. ಕೆ.ವಿ. ನಾರಾಯಣ, ಭಾಷೆಯ ಸುತ್ತಮುತ್ತ, ೧೯೯೮, ಪು - ೧೧

೨. ಪ್ರೊ. ಜಿ. ವೆಂಕಟಸುಬ್ಬಯ್ಯ, ಇಗೋ ಕನ್ನಡ - ೧, ೧೯೯೬, ಪು - ೧೪.

೩. ವಿ.ಹೆಚ್. ದೇಸಾಯಿ, ಅಧ್ಯಯನಕ್ಕಾಗಿ ನೀಡಿದ ಸಂದರ್ಶನ, ೧೬.೧೨.೨೦೦೦

೪. ಚಾರ್ಲ್ಸ್ ಫರ್ಗುಸನ್
ಉಲ್ಲೇಖ : ಇಂದಿನ ಕನ್ನಡ : ರಚನೆ ಮತ್ತು ಬಳಕೆ, ಡಾ. ಎಸ್.ಎನ್. ಶ್ರೀಧರ, ೧೯೯೫, ಪು - ೫೧

೫. ಪ್ರೊ. ಜಿ. ವೆಂಕಟಸುಬ್ಬಯ್ಯ, ಇಗೋ ಕನ್ನಡ - ೨, ೨೦೦೧, ಪು - ೮

೬. ಡಾ. ಎಂ. ಚಿದಾನಂದಮೂರ್ತಿ, Modernization of kannada in News Media, Ed : Modernization of Indian Languages in News Media, ೧೯೮೪, ಪು - ೫೫

೭. ಡಾ. ಕೆ.ವಿ. ನಾರಾಯಣ, ಭಾಷೆಯ ಸುತ್ತಮುತ್ತ, ೧೯೯೮, ಪುಟ - ೨೦.

೮. ಡಾ. ಎಂ. ಚಿದಾನಂದಮೂರ್ತಿ, Modernization of kannada in News Media, Ed : Modernization of Indian Languages in News Media, ೧೯೮೪, ಪು - ೫೮

೯. ಡಾ. ಎಸ್.ಎನ್. ಶ್ರೀಧರ್, ಇಂದಿನ ಕನ್ನಡ : ರಚನೆ ಮತ್ತು ಬಳಕೆ, ೧೯೯೫, ಪು - ೭

೧೦. ಗಂಗಾಧರ ಮೊದಲಿಯಾರ್, ಅಧ್ಯಯನಕ್ಕಾಗಿ ನೀಡಿದ ಸಂದರ್ಶನ, ೬.೬.೨೦೦೧.

೧೧. ಡಾ. ಸೋಮಶೇಖರ ಗೌಡ, ಭಾಷೆ ರಚನೆ ಬಳಕೆ, ೨೦೦೦, ಪುಟ - ೩೩

೧೨. ಗಂಗಾಧರ ಮೊದಲಿಯಾರ್, ಅಧ್ಯಯನಕ್ಕಾಗಿ ನೀಡಿದ ಸಂದರ್ಶನ, ೬.೬.೨೦೦೧

೧೩. ಪ್ರೊ. ಎಂ.ಎಚ್. ಕೃಷ್ಣಯ್ಯ, ಸಂಕ್ಷಿಪ್ತ ಕನ್ನಡ ಭಾಷೆಯ ಚರಿತ್ರೆ, ೧೯೯೯, ಪು - ೧೩೦

೧೪. ಮ.ಗು. ಬಿರಾದಾರ : ಸಮೂಹ ಮಾಧ್ಯಮಗಳು ಮತ್ತು ಭಾಷಾ ಪ್ರಾದೇಶಿಕತೆ, ಸಂ : ಸಾಹಿತ್ಯ ಮತ್ತು ಸಮೂಹ ಮಾಧ್ಯಮ, ೧೯೯೭, ಪು - ೧೧೪

೧೫. ಡಾ. ಕೆ.ವಿ. ನಾರಾಯಣ, ಭಾಷೆಯ ಸುತ್ತಮುತ್ತ, ೧೯೯೮, ಪುಟ - ೧೩

ಸಂದರ್ಶನ - ೧

೨೧.೫.೨೦೦೧

## ಪ್ರೊ. ಜಿ. ವೆಂಕಟಸುಬ್ಬಯ್ಯ

(ಭಾಷಾ ವಿದ್ವಾಂಸರು)

● **ಕನ್ನಡದ ಅಭಿವೃದ್ಧಿ ಎಂದರೇನು?**

○ ಕನ್ನಡ ನಾಡಿನ ಎಲ್ಲ ವ್ಯವಹಾರಗಳು ಕನ್ನಡದಲ್ಲಿ ನೆರವೇರಬೇಕು. ಅದೇ ಕನ್ನಡದ ಅಭಿವೃದ್ಧಿ. ಸಂವಹನೆಗೆ ಅವಕಾಶವಿರುವಲ್ಲೆಲ್ಲ ಕನ್ನಡವೇ ಬಳಕೆಯಾಗಬೇಕು. ಹಾಗಾದಾಗ ಮಾತ್ರ ಕನ್ನಡ ಅಭಿವೃದ್ಧಿಯಾದಂತೆ.

● **ಕನ್ನಡದ ಅಭಿವೃದ್ಧಿಯ ಮಾರ್ಗಗಳಾವುವು?**

○ ಅದಕ್ಕಿರುವುದು ಒಂದೇ ಮಾರ್ಗ. ಕನ್ನಡ ನಾಡಿನ ಸುಸಂಸ್ಕೃತರು, ವಿದ್ಯಾವಂತರು ಎಲ್ಲ ಆತ್ಮೀಯ ಮಾತುಕತೆಯನ್ನು ಕನ್ನಡದಲ್ಲೇ ಮಾಡಬೇಕು. ಕನ್ನಡ ಬರಹದಲ್ಲೇ ತಿಳಿಸಬೇಕು. ಇದರರ್ಥ ಇಂಗ್ಲಿಷ್ ಮತ್ತಿತರ ಭಾಷೆಗಳು ಬೇಡವೆಂದಲ್ಲ. ಆದರೆ ಅಂತರಂಗದ ವಿಚಾರಗಳನ್ನು ತಿಳಿಸುವಾಗ ಕನ್ನಡವೇ ಬಳಕೆಯಾಗಬೇಕು. ಜೊತೆಗೆ ಆಲೋಚನೆಯನ್ನೂ ಕನ್ನಡದಲ್ಲೇ ಮಾಡಿದಾಗ ಕನ್ನಡವನ್ನು ಸರಾಗವಾಗಿ ಬಳಸಬಹುದು.

● **ಕನ್ನಡ ಭಾಷೆಯ ಅಭಿವೃದ್ಧಿಯ ಮಾರ್ಗದಲ್ಲಿರುವ ಆತಂಕಗಳೇನು?**

○ ಕನ್ನಡ ಭಾಷೆಯ ಅಭಿವೃದ್ಧಿಯಾಗುವುದಕ್ಕೆ ಇರುವ ಆತಂಕಗಳನ್ನು ಅನೇಕ ವಲಯಗಳಲ್ಲಿ ಗುರುತಿಸಬಹುದು. ಅವುಗಳಲ್ಲಿ ಅತ್ಯಂತ ಮುಖ್ಯವಾದದ್ದು ಕರ್ನಾಟಕಕ್ಕೆ ಆಮದಾದ ಇತರ ಭಾಷಾ ಅಧಿಕಾರಿಗಳು. ಐ.ಎ.ಎಸ್. ಅಧಿಕಾರಿಗಳಂತೂ ಕನ್ನಡ ಕಲಿಯುವುದಿಲ್ಲ. ಕನ್ನಡ ಬಳಸುವುದಿಲ್ಲ. ಹಾಗೆ ಆಡಳಿತದಲ್ಲಿ ಪಾರಿಭಾಷಿಕ ಪದಗಳನ್ನು ಬಳಸದಿರುವುದೂ ಕನ್ನಡದ ಬೆಳವಣಿಗೆಗೆ ಅಡ್ಡಿ ಮಾಡುತ್ತದೆ. ಪಾರಿಭಾಷಿಕ ಪದಕೋಶ ಈಗಾಗಲೇ ಲಭ್ಯವಿದ್ದರೂ ಕಛೇರಿಗಳಿಗೆ ಅದು ಸರಿಯಾಗಿ ಪೂರೈಕೆಯಾಗುತ್ತಿಲ್ಲ. ಅದನ್ನು ಬಳಸುತ್ತಿಲ್ಲ. ಶಿಕ್ಷಣ ಕ್ಷೇತ್ರದಲ್ಲೂ ಮೂಲಭೂತ ಅಡಚಣೆಗಳಿವೆ.

● **ಅವುಗಳಿಗೆ ಪರಿಹಾರ ಹೇಗೆ?**

○ ನಾನು ಮೊದಲೇ ಹೇಳಿದ ಮುಖ್ಯವಾದ ಆತಂಕ ಅಂದರೆ ಐ.ಎ.ಎಸ್. ಅಧಿಕಾರಿಗಳು ಕನ್ನಡ ಬಳಸದಿರುವುದರ ಬಗ್ಗೆ ಸರ್ಕಾರ ತೀವ್ರ ನಿಗಾ ವಹಿಸಬೇಕು. 'ಇಂಗ್ಲೀಷಿನ ಟಿಪ್ಪಣಿಗಳುಳ್ಳ ಆಡಳಿತ ಪತ್ರಗಳನ್ನು ನಿರಾಕರಿಸಬೇಕು' ಎನ್ನುವ ಒಂದೇ ಒಂದು ವಾಕ್ಯದ ಕಟ್ಟಾಜ್ಞೆಯನ್ನು ಸರ್ಕಾರ ಮಾಡಬೇಕು. ಆಡಳಿತ ಪದಕೋಶಗಳನ್ನು ಕಛೇರಿಗಳಿಗೆ ಪೂರೈಸಬೇಕು. ಅದನ್ನು ಸಹಜವಾಗಿ ರೂಢಿಗೆ ಬರುವವರೆಗೂ ಬಳಸಬೇಕು. ಇದೇ ರೀತಿ ಶಿಕ್ಷಣ ಕ್ಷೇತ್ರದ ತೊಂದರೆಗಳನ್ನೂ ಆದಷ್ಟು ಶೀಘ್ರ ಬಗೆಹರಿಸುವ ಯತ್ನ ನಡೆಸಬೇಕು.

- **ಕನ್ನಡವನ್ನು ಅಭಿವೃದ್ಧಿಗೊಳಿಸುವ ದಿಕ್ಕಿನಲ್ಲಿ ಈವರೆಗೂ ಆಗಿರುವ ಪ್ರಯತ್ನಗಳ ಬಗ್ಗೆ ನಿಮ್ಮ ಅಭಿಪ್ರಾಯವೇನು?**

○ ಕಳೆದ 50 ವರ್ಷಗಳಲ್ಲಿ ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿ, ಜಾಗೃತಿ ವಿಷಯದಲ್ಲಿ ಆಗಿರುವಷ್ಟು ಕಾರ್ಯ ಹಿಂದೆಂದೂ ಆಗಿರಲಿಲ್ಲ. ಭಾರತದ ಬೇರೆ ಯಾವ ದೇಶಭಾಷಾ ಪ್ರದೇಶದಲ್ಲೂ ಭಾಷೆಯ ಅಭಿವೃದ್ಧಿಗೆ ಕನ್ನಡದಲ್ಲಾದಷ್ಟು ಪ್ರಯತ್ನಗಳಾಗಿಲ್ಲ. ಅದಕ್ಕೆ ಬಹುಮುಖ್ಯ ಕಾರಣ ಅಂದರೆ ಏಕೀಕರಣ. ಏಕೀಕರಣ ಆಗದೇ ಇದ್ದಿದ್ದರೆ ಇಷ್ಟೊಂದು ಕೆಲಸವನ್ನು ಕನ್ನಡ ಭಾಷೆಯ ಅಭಿವೃದ್ಧಿ ವಿಷಯದಲ್ಲಿ ಮಾಡಲಾಗುತ್ತಿರಲಿಲ್ಲ. ತಮಿಳುನಾಡು, ಆಂಧ್ರಪ್ರದೇಶ, ಮಹಾರಾಷ್ಟ್ರ, ಕೇರಳ ರಾಜ್ಯಗಳ ಗಡಿಗಳಲ್ಲಿ ನಮ್ಮ ರಾಜ್ಯದ ವ್ಯಾಪ್ತಿ ಹೆಚ್ಚಿತು. ಅದಕ್ಕೂ ಮೊದಲು ದ್ವಿಭಾಷಾ ವಲಯದಲ್ಲಿದ್ದವರಿಗೆ ಕನ್ನಡದ ಬಗ್ಗೆ ತಾತ್ಸಾರವಿತ್ತು. ರಾಜ್ಯದ ಏಕೀಕರಣ ನಡೆದು ಅಂತಹ ಜನರಿದ್ದ ವಲಯ ಕನ್ನಡ ನಾಡಿಗೇ ಸೇರಿಕೊಂಡ ಮೇಲೆ ಅನಿವಾರ್ಯವಾಗಿ ಇಂತಹ ತಾತ್ಸಾರ ಕಡಿಮೆಯಾಯಿತು.

ಕನ್ನಡದ ನಿಘಂಟುಗಳನ್ನು ಪ್ರಕಟಿಸಿದ್ದೂ ಕೂಡ ಈ ನಿಟ್ಟಿನಲ್ಲಿ ದೊಡ್ಡ ಪ್ರಯತ್ನವೇ. ಸುಮಾರು 2 ಲಕ್ಷ ಕನ್ನಡ ಪದಗಳನ್ನು 8 ಸಂಪುಟಗಳಲ್ಲಿ ಪ್ರಕಟಿಸಿದ್ದೇವೆ. ಅಂದರೆ ಅದೇ ಕನ್ನಡ ಭಾಷೆ ವ್ಯಾಪಕವಾಗಿ ಬೆಳೆದಿದೆ ಎನ್ನುವುದರ ಸಂಕೇತ.

- **ಈ ದಿಸೆಯಲ್ಲಿ ಸರ್ಕಾರದ ಪ್ರಯತ್ನಗಳು ತೃಪ್ತಿಕರವಾಗಿದೆಯೇ?**

○ ಸರ್ಕಾರದ ಪ್ರಯತ್ನ ಆಗಿದೆ. ಆದರೆ ವಿಳಂಬವಾಗಿದೆ. ಇದಕ್ಕೆ ಆರ್ಥಿಕ ಕಾರಣಗಳು, ಭಾಷಿಕ ಅಲ್ಪ ಸಂಖ್ಯಾತರ ಭಿನ್ನಧೋರಣೆ ಮುಂತಾದವೂ ಕಾರಣವೆನ್ನಬಹುದು.

- **ಕನ್ನಡವನ್ನು ಅಭಿವೃದ್ಧಿಗೊಳಿಸುವಲ್ಲಿ ಸಂವಹನ ಮಾಧ್ಯಮಗಳ ಪಾತ್ರವೇನು?**

○ ಇದು ಬಹಳ ಮುಖ್ಯವಾದ ಪ್ರಶ್ನೆ. ಸಂವಹನ ಮಾಧ್ಯಮಗಳ ಮೂಲಕ ಕನ್ನಡದ ಎಲ್ಲ ಬಗೆಯ ಬೆಳವಣಿಗೆಯೂ ಸಾಧ್ಯ. ಹೊಸ ಪದಗಳನ್ನು ಸೃಷ್ಟಿಸುವುದಿರಬಹುದು, ಅದಕ್ಕೆ ಪ್ರಚಾರ ಕೊಡುವುದಿರಬಹುದು ಮತ್ತು ಅವನ್ನು ನಿರಂತರವಾಗಿ ಉಳಿಯುವಂತೆ ಮಾಡುವುದಿರಬಹುದು ಎಲ್ಲವೂ ಮಾಧ್ಯಮಗಳಿಗೆ ಸಾಧ್ಯ. ಮಾಧ್ಯಮಗಳು ಈ ನಿಟ್ಟಿನಲ್ಲಿ ಎಷ್ಟು ಪ್ರಭಾವಶಾಲಿಯಾಗಿರುತ್ತವೆ ಎನ್ನುವುದಕ್ಕೆ ಒಂದು ಉದಾಹರಣೆ ಹೇಳುತ್ತೇನೆ. 'ಕದ್ದಾಲಿಕೆ' ಎನ್ನುವ ಪದ. ಈ ಪದ ಮಾಧ್ಯಮಗಳ ಸೃಷ್ಟಿಯೇ. ಆದರೆ ಕನ್ನಡದಲ್ಲಿ ಇಂತಹ ಪ್ರಯೋಗ ಆಗುವುದಿಲ್ಲ. 'ಕದ್ದಾಲಿಸುವುದು' ಎಂದೇ ಆಗಬೇಕು. ಕದ್ದು = ಕಳ್ಳತನ ಮಾಡು, ಆದರೆ ಆಲಿಕೆ? ಕನ್ನಡದಲ್ಲಿ ಆಲಿಸುವುದು ಎನ್ನುವುದಕ್ಕೆ ಆಲಿಕೆ ಎನ್ನಲಾಗುವುದಿಲ್ಲ. ಆಲಿಕೆ = ಮಕ್ಕಳ ಆಟದ ಗಿಲಕಿ ಎನ್ನಬಹುದು. ಕದ್ದು + ಆಲಿಕೆ ಸರಿಯಾದ ಪ್ರಯೋಗವಲ್ಲ. ಆದರೆ ಈ ಪದವನ್ನು ಮಾಧ್ಯಮಗಳು ಸೃಷ್ಟಿಸಿದವು. ಅದಕ್ಕೆ ಅವೇ ಪ್ರಚಾರ ನೀಡಿದವು ಹಾಗೂ ಅದನ್ನು ಉಳಿಸಿಕೊಂಡವು. ತಪ್ಪು ಎನ್ನಬಹುದಾದ ಅಥವಾ ಸರಿ ಎನ್ನಲಾರದ ಇಂತಹ ಒಂದು ಪದ ರೂಢಿಗತವಾಗಿಬಿಟ್ಟಿತು. ಕನ್ನಡದ ಶಬ್ದ ಭಂಡಾರಕ್ಕೆ ಒಂದು ಹೊಸ ಪದ ಸೇರ್ಪಡೆಯಾಗಿ ಬಿಟ್ಟಿತು. ಈ ಪದಕ್ಕೆ ಸಿಕ್ಕ ಉಪಚಾರವನ್ನೇ ಗಮನಿಸಿ ಹೇಳುವುದಾದರೆ ಸಂವಹನ ಮಾಧ್ಯಮಗಳು ಇನ್ನೂ ಎಚ್ಚರಿಕೆಯಿಂದ ಭಾಷೆಯನ್ನು ಕಟ್ಟಲು ಸಾಧ್ಯವಿದೆ ಎಂದೇ ಪ್ರತಿಪಾದಿಸಬಹುದು.

- **ಈ ಕೆಲಸವನ್ನು ಸಂವಹನ ಮಾಧ್ಯಮಗಳು ಯಶಸ್ವಿಯಾಗಿ ಮಾಡುತ್ತಿವೆಯೇ?**

○ ಇಲ್ಲ ಎಂದೇ ನನ್ನ ಅಭಿಪ್ರಾಯ. ಸಂವಹನ ಮಾಧ್ಯಮಗಳು ಮಾಡಬೇಕಾದ ರೀತಿಯಲ್ಲಿ ಈ ಕೆಲಸವನ್ನು ಮಾಡುತ್ತಿಲ್ಲ. ಪತ್ರಿಕೆಗಳೇ ಇರಬಹುದು. ದೂರದರ್ಶನ, ಆಕಾಶವಾಣಿಯಂತಹ ವಿದ್ಯುನ್ಮಾನ ಮಾಧ್ಯಮಗಳೇ ಇರಬಹುದು. ಭಾಷೆಯ

ಕಡೆ ಇನ್ನೂ ಹೆಚ್ಚಿನ ಗಮನ ಹರಿಸಬೇಕು. ಕನ್ನಡ ಶಬ್ದಕೋಶಕ್ಕೆ ಒಂದು ಹೊಸ ಪದವನ್ನು ಸೇರಿಸಿಬಿಡುವುದೇ ಭಾಷೆಯನ್ನು ಬೆಳೆಸಿದಂತಲ್ಲ. ಅದನ್ನೂ ಅರ್ಥಪೂರ್ಣವಾಗಿ ಮಾಡಬೇಕು. ನೋಡಿ, ಉದಾಹರಣೆಗೆ ದೂರದರ್ಶನದವರು 'ಸಧ್ಯ' ಎಂಬ ಪದ ಬಳಸುತ್ತಾರೆ. ಕನ್ನಡದಲ್ಲಿ ಈ ಪದವೇ ಇಲ್ಲ. ದ್ವಿತೀಯಾ ವಿಭಕ್ತಿಯನ್ನು ಬಿಟ್ಟು ಬಿಡುತ್ತಿದ್ದಾರೆ. '......... ಈ ವಿಷಯ ತಿಳಿಸಿದೆ'. ಇಲ್ಲಿ 'ವಿಷಯವನ್ನು' (ಅನ್ನು ದ್ವಿತೀಯಾ ವಿಭಕ್ತಿ) ಎಂದೇ ಆಗಬೇಕು. ಕರ್ಮ ಪದದ ನಂತರ ಈ ವಿಭಕ್ತಿ ಪ್ರತ್ಯಯ ಬಂದಾಗಲೇ ಹೇಳಬೇಕಾದ ವಿಚಾರ ಹೆಚ್ಚು ಸ್ಪಷ್ಟವಾಗುತ್ತದೆ. ಕನ್ನಡದಲ್ಲಿ ಎರಡನೆ ವಿಭಕ್ತಿಗೆ ವಿಶೇಷ ಮಹತ್ವವಿದೆ ಎನ್ನುವುದನ್ನು ಗಮನಿಸಬೇಕು.

- **ಮಾಧ್ಯಮಗಳ ಕೆಲಸ ಯಶಸ್ವಿಯಾಗಿಲ್ಲ ಅಥವಾ ತೃಪ್ತಿಕರವಾಗಿಲ್ಲ ಎನ್ನುವುದಾದರೆ ಅವು ಮುಂದೆ ಇಡಬೇಕಾದ ಹೆಜ್ಜೆಗಳ ಸ್ವರೂಪವೇನು?**

- ದೂರದರ್ಶನ, ಆಕಾಶವಾಣಿ ಮತ್ತು ಪತ್ರಿಕೆಗಳಂತಹ ಮಾಧ್ಯಮಗಳಲ್ಲಿ ಕನ್ನಡವನ್ನು ಅಚ್ಚುಕಟ್ಟಾಗಿ ಬಳಸಬಲ್ಲ ಭಾಷೆಯನ್ನು ಚೆನ್ನಾಗಿ ತಿಳಿದ ವಿದ್ವಾಂಸರೊಬ್ಬರಿಂದ ಮೇಲ್ವಿಚಾರಣೆ ನಡೆಸುವಂತಿರಬೇಕು. ಇವರು ಮಾಧ್ಯಮದ ಪ್ರತಿಯೊಂದು ಕಾರ್ಯಕ್ರಮ/ಶೀರ್ಷಿಕೆಯ ಬರಹವನ್ನು ಸೂಕ್ಷ್ಮವಾಗಿ ಗಮನಿಸಿ ತಿದ್ದಿಕೊಡಬೇಕು. ಇದಲ್ಲದೆ ಟೈಪ್ ಸೆಟ್ಟಿಂಗ್‌ನಲ್ಲೂ ದೋಷಗಳಿರುತ್ತವೆ. ಆಭಾಸಕ್ಕೆಡೆ ಮಾಡಿಕೊಡದ ಹಾಗೆ ಟೈಪ್‌ಸೆಟ್ ಮಾಡುವಂತೆ, ಭಾಷೆಯ ವಿಚಾರದಲ್ಲೂ ತಪ್ಪುಗಳು ಆಗದಂತೆ ಎಚ್ಚರವಹಿಸಬೇಕು. ಹಾಗೂ ಸಿಬ್ಬಂದಿಗೆ ಸೂಕ್ತ ತರಬೇತಿ ನೀಡುವುದರ ಮೂಲಕವೂ ಕನ್ನಡವನ್ನು ಪೋಷಿಸಬಹುದು. ಮಾಧ್ಯಮಗಳಲ್ಲಿ ಕೆಲಸ ಮಾಡುವ ಎಲ್ಲ ಹಂತದ ಕೆಲಸಗಾರರಿಗೂ ಕನ್ನಡದ ಅರಿವಿರಲೇಬೇಕು.

- **ಸಂವಹನ ಮಾಧ್ಯಮಗಳಿಗೆ ಒಂದು ಶಿಷ್ಟೀಕೃತ ಭಾಷೆಯ ಅಗತ್ಯವಿದೆಯೇ?**

- ಶಿಷ್ಟೀಕೃತ ಭಾಷೆ ಅಂದರೆ Standard language ಎನ್ನುವುದನ್ನು 'ಬರೆಯುವ ಪತ್ರಕರ್ತನಿಗೂ ಅದನ್ನು ಓದುವ ಓದುಗನಿಗೂ ಸುಲಭವಾಗಿ ಅರ್ಥವಾಗುವ ಭಾಷೆ' ಎನ್ನಬಹುದು. ಆದ್ದರಿಂದಲೇ ಮಾಧ್ಯಮಗಳಿಗಾಗಿ ಒಂದು ಶಿಷ್ಟ ಅಥವಾ ಪ್ರಮಾಣೀಕೃತ ಭಾಷೆ ಆಗಬೇಕು. ನಾಡಿನ ವಿವಿಧೆಡೆಗಳಲ್ಲಿ ಭಿನ್ನ ರೀತಿಯ ಭಾಷೆ ಬಳಕೆಯಲ್ಲಿದೆ ನಿಜ. ಆದರೆ ಮಾಧ್ಯಮಗಳು ನೀಡುವ ಕನ್ನಡಕ್ಕೊಂದು ಪ್ರಮಾಣೀಕೃತ ಭಾಷೆಯಿದ್ದು ಅದನ್ನೂ ರಾಜ್ಯಾದ್ಯಂತ ಪರಿಚಯಿಸಿ, ಬಳಕೆಗೆ ಬಿಡಬಹುದು. ಇಂತಹ standard ಭಾಷೆ ರೂಪಿಸುವಾಗ ವಿವಿಧ ಉಪಭಾಷೆಗಳಿಂದಲೂ ಉತ್ತಮ ಎನಿಸುವ ಪದಗಳನ್ನು ಬಳಸಿಕೊಂಡರೆ ತಪ್ಪಲ್ಲ. ಹೇಗೆಂದರೆ ಬಿಜಾಪುರ, ಬೀದರ್, ಈ ಕಡೆ ಚಾಮರಾಜನಗರ, ಆ ಕಡೆ ಧಾರವಾಡ, ಹೀಗೆ ವಿವಿಧ ವಲಯಗಳಲ್ಲಿ ಬಳಕೆಯಲ್ಲಿರುವ ಪ್ರಾದೇಶಿಕ ಕನ್ನಡದಲ್ಲಿರುವ ವಿಶಿಷ್ಟ ಪದ, ವಾಕ್ಯಪ್ರಯೋಗಗಳನ್ನೂ ಮಾಧ್ಯಮಗಳಿಗೆ ಅಳವಡಿಸಬೇಕು. ಆಗ ಆ ಪ್ರದೇಶಗಳ ಜನರಿಗೆ ಚೆನ್ನಾಗಿ ಅರ್ಥವಾಗುವುದಲ್ಲದೆ, ಅವರಿಗೆ ಅರ್ಥವಾಗುವುದರಿಂದಲೇ ಆ ಮಾಧ್ಯಮಗಳ ಮೇಲೆ ಪ್ರೀತಿಯೂ ಬೆಳೆಯುತ್ತದೆ. ಯಾಕೆಂದರೆ ಇಲ್ಲಿ ಸಂವಹನೆ ಅಷ್ಟೇ ಮುಖ್ಯವಲ್ಲ. ಸಂವಹನೆಗೆ ಬಳಸುವ ಭಾಷೆಯಿಂದಲೂ ಪರಿಣಾಮಕಾರಿ ಸಂವಹನೆ ಸಾಧ್ಯ ಎನ್ನುವುದು ಮುಖ್ಯ.

- **ಕನ್ನಡ ಭಾಷೆಯ ಆಧುನೀಕರಣ, ಟಂಕೀಕರಣ, ಅನ್ಯಭಾಷಾ ಸ್ವೀಕರಣ, ನುಡಿ ಬೆರಕೆ ಮುಂತಾದ ವಿಷಯಗಳಲ್ಲಿ ಸಮೂಹ ಮಾಧ್ಯಮಗಳ ಕೊಡುಗೆ ಏನು?**

- ಮೊದಲೇ ಹೇಳಿದ ಹಾಗೆ ಕೆಲಸ ಆಗಿದೆ. ಆದರೆ ಆಗಬೇಕಾದ ರೀತಿಯಲ್ಲಿ ಆಗಿಲ್ಲ. ಈಗ ನೀವೇ 'ಆಧುನೀಕರಣ' ಎನ್ನುವ ಪದ ಬಳಸಿದಿರಿ. ಅದು ರೂಢಿಗೆ ಬಂದಿದೆ ನಿಜ. ಆದರೆ ಅದು ಸರಿಯಲ್ಲ. 'ಈಕರಣ' ಎನ್ನುವುದನ್ನು

ಸೇರಿಸುವಾಗಲೂ ಸರಿಯಾಗಿ ಸೇರಿಸುವ ಕೆಲಸವಾಗಬೇಕು. ಆಧುನಿಕಗೊಳಿಸುವುದು ಎನ್ನುವುದನ್ನು 'ಈಕರಣ' ಸೇರಿಸಿ ಹೇಳಬಯಸಿದರೆ ಅದನ್ನು 'ಆಧುನಿಕೀಕರಣ' ಎಂದು ಹೇಳಬೇಕು. ಉಚ್ಚಾರಣೆಗೆ ಸುಲಭವಾಗಲಿ ಎಂದು 'ಆಧುನೀಕರಣ' ಬಳಸಲಾಗುತ್ತಿದೆ. 'ಅಗಲಗೊಳಿಸು' ಎನ್ನುವುದನ್ನು 'ಅಗಲೀಕರಣ' ಎನ್ನಲಾಗುತ್ತಿದೆ. ನಾಳೆ ಉದ್ದಗೊಳಿಸು, ಎತ್ತರಗೊಳಿಸು ಎನ್ನುವುದನ್ನು ಉದ್ದೀಕರಣ, ಎತ್ತರೀಕರಣ ಎಂದೆಲ್ಲಾ ಪ್ರಯೋಗಿಸಬೇಕಾಗುತ್ತದೆ. ಸರಿ ಅಲ್ಲದಿದ್ದರೂ ಇವು ಬಳಕೆಯಲ್ಲಿ ಉಳಿದುಕೊಳ್ಳುತ್ತವೆ.

'ಇಸು' ಪ್ರತ್ಯಯವನ್ನು ಸೇರಿಸುವುದೂ ಭಾಷೆಯನ್ನು ಆಧುನೀಕರಣಗೊಳಿಸುವ ಪ್ರಯತ್ನವಾಗಿ ಪರಿಗಣಿಸಬಹುದು. ಫೋನಾಯಿಸು, ಅಭಿಪ್ರಾಯಿಸು ಮುಂತಾಗಿ. ಇಲ್ಲಿ ಕ್ರಿಯಾಪದಗಳು 'ಇಸು' ಆಗಿ ಪರಿವರ್ತಿತವಾಗುತ್ತವೆ. ಇರಲಿ ಈ ಪ್ರಯೋಗ ಆಭಾಸವೇನಲ್ಲ. ಕನ್ನಡ ಭಾಷೆಗೆ ಬೆಳೆಯುವ ಗುಣವೂ ಇದೆ. ಮಾಧ್ಯಮಗಳಿಗೆ ಬೆಳೆಸುವ ಶಕ್ತಿಯೂ ಇದೆ. ಸರಿಯಾಗಿ ಪರೀಕ್ಷಿಸಿ ಅರ್ಥಪೂರ್ಣ ಎಂದು ಸಾಬೀತಾದುದನ್ನಷ್ಟೇ ಬಳಸುವಂತಾಗಬೇಕು.

● **ಭಾಷಾ ಯೋಜನೆ, ಭಾಷಾನೀತಿ ರಚನೆಯಿಂದ ಕನ್ನಡ ಎಷ್ಟರ ಮಟ್ಟಿಗೆ ಬೆಳೆಯಬಹುದು?**

○ 'ಭಾಷೆ ಬಳಸಿ' ಎಂದು ಹೇಳಿದಾಕ್ಷಣವೇ ಅದು ನೀತಿ ಎನಿಸಿಕೊಳ್ಳುವುದಿಲ್ಲ. ಅದು ಅನುಷ್ಠಾನಕ್ಕೆ ಬರಬೇಕು, ಬರುವಂತೆ ಮಾಡಬೇಕು. ಅದಕ್ಕೆಲ್ಲ ಸೂಕ್ತ ಮಾರ್ಗಸೂಚಿ ಇಲ್ಲದೇ ಇರುವುದೇ ದೊಡ್ಡ ಕೊರತೆಯಾಗಿದೆ. ಭಾಷಾನೀತಿ, ಯೋಜನೆಗಳನ್ನು ರಚಿಸಿದ ಮಾತ್ರದಿಂದಲೇ ಕನ್ನಡ ಬೆಳೆಯುವುದು ಸಾಧ್ಯವಿಲ್ಲ.

● **ಶಿಕ್ಷಣ ಕ್ಷೇತ್ರದಲ್ಲಿ ಪಠ್ಯಕ್ರಮದ ಸುಧಾರಣೆ ಮೂಲಕ ಕನ್ನಡ ಅಭಿವೃದ್ಧಿ ಸಾಧ್ಯವೇ?**

○ ಖಂಡಿತಾ ಸಾಧ್ಯ. ಪಠ್ಯಪುಸ್ತಕಗಳನ್ನು ರಚಿಸುವಾಗಲೇ ಮಕ್ಕಳ ವ್ಯಕ್ತಿತ್ವ ವರ್ಧನೆಗೆ ಪೂರಕವಾಗುವಂತಹ ವಿಷಯಗಳನ್ನು ಅದರಲ್ಲಿ ಅಳವಡಿಸಬೇಕು. ಈಗಿನ ಪಠ್ಯಪುಸ್ತಕಗಳಲ್ಲಿ ಇಷ್ಟು ಪಾಠ, ಇಷ್ಟು ಪುಟ ಇದೆಯೇ ಎನ್ನುವುದನ್ನು ನೋಡಲಾಗುತ್ತಿದೆಯೇ ಹೊರತು ಇಂತಹ ವಸ್ತು ಇದೆಯೇ ಎಂಬ ಕಡೆ ಗಮನ ನೀಡುತ್ತಿಲ್ಲ.

ಮಹನೀಯರೊಬ್ಬರ ವ್ಯಕ್ತಿ ಚಿತ್ರಣವನ್ನೇ ವಿವಿಧ ತರಗತಿಗಳಲ್ಲೂ, ವಿವಿಧ ಭಾಷಾ ವಿಷಯಗಳಲ್ಲೂ ಕೊಟ್ಟಿರುತ್ತಾರೆ. ಕೆಲವೊಮ್ಮೆ ಅಲ್ಲಿ ನೀಡುವ ಮಾಹಿತಿಗಳಲ್ಲೂ ಅಂತರವಿರುತ್ತದೆ. ವಿದ್ಯಾರ್ಥಿಗಳು ಯಾವುದನ್ನು ಸರಿ ಎಂದು ಭಾವಿಸಬೇಕು? ಇಂತಹ ಅನಾಹುತಗಳನ್ನು ಶಿಕ್ಷಣ ತಜ್ಞರು ಆದಷ್ಟು ಬೇಗ ಸರಿಪಡಿಸಬೇಕು.

ಶಿಕ್ಷಣ ಎಂದಕೂಡಲೇ ಅದು ಪಠ್ಯಕ್ರಮ ಮಾತ್ರವಲ್ಲ. ಪಠ್ಯೇತರ ಚಟುವಟಿಕೆಗಳನ್ನು ಒಳಗೊಂಡಿದೆ ಎಂದು ತಿಳಿಯಬೇಕು. ನಾಟಕ, ಸಂಗೀತ, ಭಾಷಣ ಸ್ಪರ್ಧೆಗಳಲ್ಲೂ ಕ್ರೀಡಾ ಸಮಯದಲ್ಲೂ ಕನ್ನಡವನ್ನು ಬಳಸುವಂತೆ ಮಕ್ಕಳಿಗೆ ಪ್ರೋತ್ಸಾಹ ನೀಡಬೇಕು. ಜೊತೆಗೆ ಭಾಷಾ ಪ್ರೇಮವನ್ನು ಬೆಳೆಸುವತ್ತಲೂ ಸೂಕ್ತ ಕ್ರಮ ಕೈಗೊಳ್ಳಬೇಕು.

● **ಉದಾರೀಕರಣದ ಇಂದಿನ ಸಂದರ್ಭದಲ್ಲಿ ಇಂಗ್ಲಿಷ್ ಭಾಷೆಯ ಪ್ರಾಬಲ್ಯ ಹೆಚ್ಚಾಗುವುದರಿಂದ ಕನ್ನಡದ ನೆಲೆಯ ಮೇಲೆ ವ್ಯತಿರಿಕ್ತ ಪರಿಣಾಮ ಉಂಟಾಗಬಹುದೇ?**

○ ನಗರ ಜೀವನದಲ್ಲಿ ಇಂಗ್ಲಿಷ್ ಬಳಕೆ ಹೆಚ್ಚಾಗಿದೆ. ಅನೇಕ ಪದಗಳು ಕನ್ನಡದೊಳಕ್ಕೆ ಬಂದರೆ ನಷ್ಟವೇನಿಲ್ಲ. ಉದಾಹರಣೆಗೆ 'ಫುಡ್‌ವರ್ಲ್ಡ್' ಬರಲಿ. ಅದರಿಂದ ಕನ್ನಡಕ್ಕೇನೂ ಹಾನಿಯಿಲ್ಲ. ಆದರೆ ಮೂಲವಾಕ್ಯ ಕನ್ನಡವೇ ಆಗಿರಬೇಕು. ಕನ್ನಡವನ್ನೇ ಬಳಸುವ ಸ್ವಾಭಿಮಾನ ನಮಗಿರಬೇಕು. ಆದರೆ ಮಲೆಯಾಳಂ, ತಮಿಳು, ಹಿಂದಿ ಭಕ್ತರಿಗಿರುವಂತಹ ಭಾಷಾ ಪ್ರೇಮ ನಮಗಿಲ್ಲ ಎನ್ನುವುದೇ ಖೇದದ ಸಂಗತಿ.

ಸಂದರ್ಶನ - ೨

೩೦.೫.೨೦೦೧

## ಪ್ರೊ. ದೇ. ಜವರೇಗೌಡ

**(ಹಿರಿಯ ಸಾಹಿತಿ, ಶಿಕ್ಷಣ ತಜ್ಞರು)**

- **ಕನ್ನಡದ ಅಭಿವೃದ್ಧಿ ಎಂದರೇನು?**
- ಕನ್ನಡ ಸಂಪೂರ್ಣವಾಗಿ ಆಡಳಿತ ಮತ್ತು ಶಿಕ್ಷಣ ಮಾಧ್ಯಮವಾಗಬೇಕು. ಆಗ ಎಲ್ಲ ವಿಧದಲ್ಲೂ ಕನ್ನಡ ಬಳಕೆಯಾಗುತ್ತದೆ. ಅದೇ ಅದರ ಬೆಳವಣಿಗೆ.

- **ಕನ್ನಡದ ಅಭಿವೃದ್ಧಿಯ ಮಾರ್ಗಗಳಾವುವು?**
- ಎಂಜಿನಿಯರಿಂಗ್, ಮೆಡಿಕಲ್ ಮೊದಲ್ಗೊಂಡು ಶಿಕ್ಷಣದ ಎಲ್ಲ ಹಂತಗಳಲ್ಲಿ ಕನ್ನಡವೇ ಮಾಧ್ಯಮವಾಗಬೇಕು. ಕನ್ನಡ ಮಾಧ್ಯಮದಲ್ಲಿ ಓದಿದವರಿಗೇ ಸರ್ಕಾರಿ ನೌಕರಿಗೆ ಆದ್ಯತೆ ನೀಡುವಂತಾಗಬೇಕು. ಆಗ ಕೆಲಸಬೇಕು ಎನ್ನುವಾತ ಕನ್ನಡ ಮಾಧ್ಯಮದಲ್ಲಿ ಓದಲೇಬೇಕಾದ ಅನಿವಾರ್ಯತೆ ಹುಟ್ಟುತ್ತದೆ. ಹೀಗೆ ಕನ್ನಡದ ಅರಿವು 'ಅನಿವಾರ್ಯ' ಎನ್ನುವಂತಹ ಸಂದರ್ಭ ನಿರ್ಮಾಣವಾಗಬೇಕು.

- **ಕನ್ನಡದ ಅಭಿವೃದ್ಧಿಯ ಹಾದಿಯಲ್ಲಿರುವ ಆತಂಕಗಳೇನು?**
- ಸರ್ಕಾರದ ನಿರ್ಲಕ್ಷ್ಯ ಹಾಗೂ ಉನ್ನತಾಧಿಕಾರಿಗಳ ಅಹಂಭಾವವೇ ಭಾಷಾಭಿವೃದ್ಧಿಯ ಹಾದಿಯಲ್ಲಿರುವ ದೊಡ್ಡ ತೊಡಕು. ಅದರಲ್ಲೂ ಹೊರರಾಜ್ಯಗಳಿಂದ ಬಂದಿರುವ ಅಧಿಕಾರಿಗಳು ಕನ್ನಡದ ಬಗ್ಗೆ ತೀವ್ರ ಅಸಡ್ಡೆ ತೋರುತ್ತಾರೆ.

- **ಅವುಗಳ ಪರಿಹಾರ ಹೇಗೆ?**
- ಐ.ಎ.ಎಸ್. ಅಧಿಕಾರಿಗಳಿಗೆ ನೀಡುವ ತರಬೇತಿಯಲ್ಲಿ ಕನ್ನಡ ಭಾಷೆಯನ್ನೂ ಕಲಿಸಲಾಗುತ್ತದೆ. ಆದರೆ ಅದರ ಮಟ್ಟ ಸಾಲದು. ಅದನ್ನು ಇನ್ನೂ ಹೆಚ್ಚಿಸಬೇಕಾಗಿದೆ. ಜೊತೆಗೆ ಅವರು ಕಲಿತ ಕನ್ನಡವನ್ನು ಕಟ್ಟುನಿಟ್ಟಾಗಿ ಬಳಸುವಂತೆ ಮಾಡಬೇಕಾಗಿದೆ. ಅಧಿಕಾರಿಗಳು ಇಂಗ್ಲೀಷಿನಲ್ಲಿ ಬರೆದ ಕಡತಗಳನ್ನು ಮಂತ್ರಿಗಳು ಸ್ವೀಕರಿಸಬಾರದು. ಹಾಗೊಂದು ವೇಳೆ ಅಧಿಕಾರಿಗಳು ಕನ್ನಡ ಬಳಕೆಯ ಬಗ್ಗೆ ನಿರ್ಲಕ್ಷ್ಯ ತೋರಿದರೆ ಅಂತಹವರಿಗೆ ಬಡ್ತಿ ನಿಲ್ಲಿಸಬೇಕು. ಯಾವುದಾದರೂ ಮೂಲೆಗೆ ಒತ್ತರಿಸಬೇಕು. ತಲೆಗೆ ನೀರು ಹಾಕಿದಾಗ ದೇಹವೆಲ್ಲಾ ಒದ್ದೆಯಾಗುವ ಹಾಗೆ ಆಡಳಿತದ ಉತ್ತುಂಗವೆನಿಸುವ ಸಚಿವಾಲಯದಲ್ಲಿ ಕನ್ನಡ ಸರಿಯಾಗಿ ಬಳಕೆಯಾದರೇ ಕೆಳಹಂತದವರೆಗೂ ಅದು ಇಳಿದು ಬರುತ್ತದೆ.

● **ಕನ್ನಡದ ಅಭಿವೃದ್ಧಿಯ ದಿಕ್ಕಿನಲ್ಲಿ ಈವರೆಗೂ ಆಗಿರುವ ಪ್ರಯತ್ನಗಳ ಬಗ್ಗೆ ನಿಮ್ಮ ಅಭಿಪ್ರಾಯ?**

○ ಸಾಕಷ್ಟು ಆಗಿದೆ. ಕನ್ನಡ ಭಾಷಾಭಿವೃದ್ಧಿ ಮಾಡುವುದಕ್ಕಾಗಿ ಒಂದು ಪ್ರಾಧಿಕಾರವನ್ನೇ ರಚಿಸಲಾಗಿದೆ. ಕನ್ನಡ ಪುಸ್ತಕ ಪ್ರಕಾಶನಕ್ಕೂ ಒಂದು ಪ್ರಾಧಿಕಾರವಿದೆ. ಕನ್ನಡ ವಿಶ್ವವಿದ್ಯಾನಿಲಯವಿದೆ. ಖಂಡಿತಾ ಈ ನಿಟ್ಟಿನಲ್ಲಿ ಪ್ರಯತ್ನಗಳು ಆಗಿವೆ. ಆದರೆ ಪರಿಣಾಮಕಾರಿಯಾಗಿ ಆಗಿಲ್ಲ. ಇನ್ನೂ ಆಗಬೇಕಾದ್ದು ಬೇಕಾದಷ್ಟಿದೆ. ಈಗ ಇಷ್ಟಾಗಿದೆ ಎಂದು ಸಮಾಧಾನ ಮಾಡಿಕೊಳ್ಳುವ ಬದಲು ಇನ್ನೂ ಆಗಿರಬೇಕಾಗಿರುವುದರ ಕಡೆ ಹೆಚ್ಚಿನ ಗಮನ ನೀಡಬೇಕಾಗಿದೆ.

● **ಈ ಪ್ರಯತ್ನಗಳು ಹೆಚ್ಚು ಪರಿಣಾಮಕಾರಿಯಾಗಿರುವುದಕ್ಕೆ ಏನು ಮಾಡಬೇಕು?**

○ ಕನ್ನಡ ಬೆಳೆಸಲು ಸರ್ಕಾರ ಇಷ್ಟೆಲ್ಲ ಪ್ರಯತ್ನ ಮಾಡಿದೆಯಲ್ಲಾ ಎಲ್ಲವೂ ಅನುಷ್ಠಾನ ರೂಪದಲ್ಲಿದೆಯೇ ಎಂದು ನೋಡಬೇಕು. ಆಡಳಿತ ಕನ್ನಡದಲ್ಲೇ ನಡೆಯಬೇಕು ಎಂದು ಹೇಳಿಬಿಟ್ಟರೆ ಸಾಲದು, ನಡೆಯುತ್ತಿದೆಯೇ ಎಂದು ಪರಿವೀಕ್ಷಿಸಬೇಕು. ಮತ್ತೆ ಅದನ್ನು ಅಧಿಕಾರಿಗಳೇ ಪರಿವೀಕ್ಷಿಸುವಂತೆ ಆಗಬಾರದು. ಅದಕ್ಕೆ ಭಾಷಾತಜ್ಞರ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಮತ್ತಿತರ ಕನ್ನಡ ಸಂಘಸಂಸ್ಥೆಗಳ ನೆರವು ಪಡೆಯಬೇಕು. ಅವರ ಸಲಹೆಗಳನ್ನು ಕಾರ್ಯಗತಗೊಳಿಸಬೇಕು.

● **ಕನ್ನಡವನ್ನು ಅಭಿವೃದ್ಧಿಗೊಳಿಸುವಲ್ಲಿ ಸಂವಹನ ಮಾಧ್ಯಮಗಳ ಪಾತ್ರವೇನು?**

○ ಕನ್ನಡ ಭಾಷಾಭಿವೃದ್ಧಿಗೆ ಸಂಬಂಧಿಸಿದಂತೆ ಸಂವಹನ ಮಾಧ್ಯಮಗಳು ಬಹಳ ಮಹತ್ವದ ಪಾತ್ರ ವಹಿಸುತ್ತವೆ. ಯಾಕೆಂದರೆ ಅವು ಪ್ರಚಾರ ಮಾಧ್ಯಮಗಳಲ್ಲವೇ? ಕನ್ನಡ ಭಾಷೆಯನ್ನೂ ಪ್ರಚಾರ ಮಾಡುತ್ತವೆ. ಅವು ದಿನನಿತ್ಯ ಕನ್ನಡವನ್ನು ಬಳಸಿಯೇ ಬಳಸುತ್ತವೆ. ಭಾಷೆಯನ್ನು ಬಳಸುವುದೇ ಬೆಳೆಸಿದಂತೆ ಎಂದ ಮೇಲೆ ಮಾಧ್ಯಮಗಳ ಪಾತ್ರದ ಮಹತ್ವ ಗೊತ್ತಾಗುತ್ತದೆ.

● **ಇಂತಹ ಪಾತ್ರಗಳನ್ನು ನಿರ್ವಹಿಸುವಲ್ಲಿ ಅವು ಯಶಸ್ವಿಯಾಗಿವೆಯೇ?**

○ ಪರವಾ ಇಲ್ಲ, ಅವುಗಳ ಸಾಮರ್ಥ್ಯ ಇನ್ನೂ ಹೆಚ್ಚಬೇಕು. ಮುಖ್ಯವಾಗಿ, ಬಳಸುವ ಭಾಷೆ ಸರಿಯೇ ಅಲ್ಲವೇ, ಶುದ್ಧವೇ ಅಶುದ್ಧವೇ ಎಂಬ ಬಗ್ಗೆ ತಜ್ಞರಿಂದ ಸಲಹೆ ಪಡೆಯಬೇಕು. ತಾವು ಮಾಡಿದ್ದೇ ಸರಿ ಎಂಬ ಧೋರಣೆ, ಭಾಷೆಯಲ್ಲಿ ಅಶುದ್ಧತೆಯನ್ನು ಬೆರೆಸುವಂತೆ ಮಾಡಬಹುದು. ತಜ್ಞರ ಸಲಹೆಗಳನ್ನು ಅಳವಡಿಸಿಕೊಳ್ಳುವುದು ಉತ್ತಮ. ಮಾಧ್ಯಮಗಳಿಗೆ ಪ್ರಚಾರ ನೀಡುವ ಶಕ್ತಿ ಇರುವುದರಿಂದ ಒಳ್ಳೆಯದಿರಲಿ, ಕೆಟ್ಟದಿರಲಿ ಪ್ರಚಾರ ಗಿಟ್ಟಿಸಿಕೊಂಡು ಬಿಡುತ್ತವೆ. ಭಾಷೆಯನ್ನು ಸರಿಯಾಗಿ ಅಂದರೆ ಶುದ್ಧವಾಗಿ ಬೆಳೆಸುವಲ್ಲಿ ಸಂವಹನ ಮಾಧ್ಯಮಗಳು ಇನ್ನೂ ಪರಿಶ್ರಮ ಹಾಕಬೇಕಾಗಿದೆ.

● **ಸಂವಹನ ಮಾಧ್ಯಮಗಳಿಗೆ ಶಿಷ್ಟೀಕೃತ ಭಾಷೆಯ ಅಗತ್ಯವಿದೆಯೇ?**

○ ನನ್ನ ಅಭಿಪ್ರಾಯದಲ್ಲಿ ಇದೆ. ಮತ್ತು ಅದು ತಾನೇ ತಾನಾಗಿ ಆಗುತ್ತಿದೆ. ಮಾಧ್ಯಮಗಳೇ ತಮ್ಮ ಅಭಿವ್ಯಕ್ತಿಗೆ ಬೇಕಾದ ಹಾಗೆ ಹೊಸ ಭಾಷೆಯನ್ನೂ ಸೃಷ್ಟಿಸಿಕೊಳ್ಳುತ್ತವೆ. ಕಾಲಕ್ಕೆ ತಕ್ಕ ಹಾಗೆ ಹೊಸ ಪದಗಳನ್ನು ಟಂಕಿಸಿಕೊಳ್ಳುತ್ತದೆ. ಇದು ಮೆಚ್ಚತಕ್ಕ ಅಂಶವೇ. ಇಡೀ ಕರ್ನಾಟಕಕ್ಕೆ ಅರ್ಥವಾಗುವಂತೆ ತಿಳಿಸುವ ಅಥವಾ ಅಭಿವ್ಯಕ್ತಿಸುವ ಏಕಸ್ವರೂಪದ ಭಾಷೆ ಬೇಕು. ಅದನ್ನೇ ನೀವು ಪ್ರಮಾಣಿತ ಭಾಷೆ ಎನ್ನಬಹುದು.

- **ಕನ್ನಡ ಭಾಷೆಯ ಆಧುನೀಕರಣ ಟಂಕೀಕರಣ, ಅನ್ಯಭಾಷಾ ಸ್ವೀಕರಣ, ನುಡಿ ಬೆರಕೆ ಮುಂತಾದ ವಿಷಯಗಳಲ್ಲಿ ಸಮೂಹ ಮಾಧ್ಯಮಗಳ ಕೊಡುಗೆ ಏನು?**

○ ಇವೆಲ್ಲವೂ ಅವಶ್ಯಕವಾಗಿ ಆಗುತ್ತಿವೆ. ಭಾಷೆಯ ಬೆಳವಣಿಗೆಯ ದೃಷ್ಟಿಯಿಂದಲೂ ಇದು ಅವಶ್ಯಕವೇ. ಮೊದಲೇ ಹೇಳಿದ ಹಾಗೆ ಕಾಲ ಬದಲಾದಂತೆ, ಹೊಸ ದೃಷ್ಟಿಕೋನಗಳು, ಆಧುನಿಕತೆ ರೂಪುಗೊಂಡ ಹಾಗೆ ಕನ್ನಡದೊಳಗೆ ಬರುವ ಅನ್ಯಭಾಷಾ ಪದಗಳೂ ಕನ್ನಡದ ಜಾಯಮಾನಕ್ಕೆ ಹೊಂದಿಕೊಳ್ಳಬೇಕಾಗುತ್ತದೆ. ಓದುಗರಿಗೆ, ನೋಡುಗರಿಗೆ, ಕೇಳುಗರಿಗೆ ತಿಳಿಸಿ ಹೇಳುವುದೇ ಸಂವಹನ ಮಾಧ್ಯಮಗಳ ಕೆಲಸವಾದ್ದರಿಂದ ಅನ್ಯಭಾಷಾ ಪದಗಳನ್ನೂ ಕನ್ನಡದ ಜಾಯಮಾನಕ್ಕೆ ಹೊಂದಿಸಲೇಬೇಕಾದ ಹೊಣೆಗಾರಿಕೆಯನ್ನೂ ಅವು ಹೊರುತ್ತವೆ.

- **ಭಾಷಾ ಯೋಜನೆ, ಭಾಷಾ ನೀತಿ ರಚನೆಯಿಂದ ಕನ್ನಡ ಎಷ್ಟರ ಮಟ್ಟಿಗೆ ಬೆಳೆಯಬಹುದು?**

○ ಬರೀ ರಚನೆಯಾಗಿ ಪುಸ್ತಕ ರೂಪದಲ್ಲಿ ಅಂದರೆ ಕಾಗದದ ಮೇಲೆ ಉಳಿದುಬಿಟ್ಟರೆ ಸಾಲದು. ಟಿಕೆಟ್ಟು ತೆಗೆದುಕೊಂಡೇ ರೈಲಿನಲ್ಲಿ ಪ್ರಯಾಣಿಸಬೇಕಾದ ಹಾಗೆ ಕನ್ನಡವನ್ನು ಕಲಿತೇ ಕನ್ನಡ ನಾಡಿನಲ್ಲಿ ಬದುಕಬೇಕು ಎಂಬಂಥ ಸ್ಥಿತಿ ರೂಪಿಸಬೇಕು. ಆಗಷ್ಟೇ ಈ ನೀತಿ ನಿಯಮ ಇವಕ್ಕೆಲ್ಲ ಅರ್ಥ ಬರುತ್ತದೆ.

- **ಶಿಕ್ಷಣ ಕ್ಷೇತ್ರದಲ್ಲಿ ಪಠ್ಯಕ್ರಮದ ಸುಧಾರಣೆ ಮೂಲಕ ಕನ್ನಡದ ಅಭಿವೃದ್ಧಿ ಸಾಧ್ಯವೇ?**

○ ಹೌದು. ಶೈಕ್ಷಣಿಕ ಪಠ್ಯಕ್ರಮ ಖಂಡಿತಾ ಸುಧಾರಿಸಬೇಕು. ಬದಲಾಗುತ್ತಿರುವ ಪರಿಸರ ಹಾಗೂ ಮಕ್ಕಳ ಬೌದ್ಧಿಕ ಬೆಳವಣಿಗೆ ಇವೆರಡನ್ನೂ ಗಮನದಲ್ಲಿಟ್ಟುಕೊಂಡು ಪಠ್ಯಕ್ರಮವನ್ನು ರಚಿಸಿದರೆ ಒಳ್ಳೆಯದು. ಮಕ್ಕಳ ವ್ಯಕ್ತಿತ್ವ ವಿಕಸನಕ್ಕೆ ಅನುಕೂಲವಾಗುವಂತಹ ಪಠ್ಯಕ್ರಮ ಹಾಗೂ ಅವರಿಗೆ ಅರ್ಥವಾಗುವಂತಹ ಭಾಷೆಯಲ್ಲಿ ನೀಡಿದರೆ ಉತ್ತಮ. ಪಠ್ಯವಷ್ಟೇ ಅಲ್ಲ, ಪಠ್ಯೇತರ ವಿಷಯಗಳಲ್ಲೂ ಕನ್ನಡ ಬಳಕೆಗೆ ಪ್ರಾಶಸ್ತ್ಯ ಬೇಕು.

- **ಭಾಷೆಯ ಬೆಳವಣಿಗೆಗೆ ಸಂಬಂಧಿಸಿದಂತೆ ಇಂದಿನ ಆಧುನಿಕ ಜಗತ್ತಿನಲ್ಲಿ ಜನತೆಯ ಸಹಭಾಗಿತ್ವ ಹೇಗಿರಬೇಕು?**

○ ಜನ ಮನಸ್ಸು ಮಾಡಿದರೆ ಒಂದೇ ದಿನದಲ್ಲಿ ಕನ್ನಡ ಸರ್ವ ಮಾಧ್ಯಮವಾಗಬಲ್ಲದು.

- **ಉದಾರೀಕರಣದ ಇಂದಿನ ಸಂದರ್ಭದಲ್ಲಿ ಇಂಗ್ಲಿಷ್ ಭಾಷೆಯ ಪ್ರಾಬಲ್ಯ ಹೆಚ್ಚಾಗುವುದರಿಂದ ಕನ್ನಡದ ನೆಲೆಯ ಮೇಲೆ ಉಂಟಾಗಬಹುದಾದ ಪರಿಣಾಮವೇನು?**

○ ಉದಾರೀಕರಣವೆಂದರೆ ಇಂಗ್ಲಿಷ್ ಭಾಷೆಯ ಸ್ವೀಕರಣವಲ್ಲ. ಕನ್ನಡ ಆಡಳಿತ ಮಾಧ್ಯಮವಾಗುವುದಾದರೆ ಹೊರಗಿನಿಂದ ಬಂದವರೂ ಕನ್ನಡ ಕಲಿತುಕೊಂಡೇ ಬರುತ್ತಾರೆ ಎಂದು ಮತ್ತೊಮ್ಮೆ ಒತ್ತಿ ಹೇಳುತ್ತೇನೆ. ಕನ್ನಡಿಗರ ಸಂಕಲ್ಪ, ಸರ್ಕಾರದ ಕಣ್ಗಾವಲು, ಹೊರಗಿನಿಂದ ಬಂದವರ ಸಹಕಾರ ಸಾಧ್ಯವಾಗುವುದಾದರೆ ಕನ್ನಡದ ಬಗ್ಗೆ ಯಾವುದೇ ಆತಂಕ ಬೇಡ.

ಸಂದರ್ಶನ - ೩

೨೨.೫.೨೦೦೧

# ಪ್ರೊ. ಎಂ. ಚಿದಾನಂದಮೂರ್ತಿ

(ಸಂಶೋಧಕರು)

- **ಕನ್ನಡದ ಅಭಿವೃದ್ಧಿ ಎಂದರೇನು?**

○ ಕನ್ನಡದ ಬೆಳವಣಿಗೆ ಎಂದರೆ ಭಾಷೆಯ ಬೆಳವಣಿಗೆ. ಸಮಾಜದ ಎಲ್ಲ ಶಾಖೆಗಳಲ್ಲಿ ಕನ್ನಡ ಭಾಷೆಯನ್ನು ಬಳಸುವುದೇ ಅದರ ಬೆಳವಣಿಗೆ. ಈ ಬೆಳವಣಿಗೆ ಸಾಧಿಸುವುದಕ್ಕೆ ಕನ್ನಡದಲ್ಲಿ ಆಲೋಚಿಸುವಂತಾಗಬೇಕು. ಕನ್ನಡದಲ್ಲಿ ಚರ್ಚಿಸುವಂತಾಗಬೇಕು.

- **ಕನ್ನಡದ ಅಭಿವೃದ್ಧಿಯ ಮಾರ್ಗಗಳಾವುವು?**

○ ಕನ್ನಡದ ಅಭಿವೃದ್ಧಿ ಅನೇಕ ಮಾರ್ಗಗಳಲ್ಲಿ ಆಗಬೇಕು. ಅದರಲ್ಲೂ ಶಿಕ್ಷಣ ಕ್ಷೇತ್ರದಲ್ಲಿ ಆಗಬೇಕಾದ್ದು ಬಹಳ ಮುಖ್ಯ. ಕನಿಷ್ಠ ೧೦ನೇ ತರಗತಿಯವರೆಗಾದರೂ ಶಿಕ್ಷಣ ಕನ್ನಡ ಮಾಧ್ಯಮದಲ್ಲಿ ನಡೆಯುವಂತಾಗಬೇಕು. ಈಗಿರುವ ಅರ್ಧ ಇಂಗ್ಲಿಷ್, ಅರ್ಧ ಕನ್ನಡ ಮಾಧ್ಯಮದ ಶಾಲೆಗಳಿಂದಾಗಿ, ಕನ್ನಡ ಶಾಲೆಯ ವಿದ್ಯಾರ್ಥಿಗಳು ಕೀಳರಿಮೆಯಿಂದ ಬಳಲುವಂತಾಗಿದೆ. ಹಾಗಾಗುವುದಾದರೆ ಅಂತಹ ಕನ್ನಡ ಶಾಲೆಗಳನ್ನು ಮುಚ್ಚುವುದೇ ಮೇಲು.

ವಿಜ್ಞಾನ, ತಂತ್ರಜ್ಞಾನ, ಸಮಾಜ ವಿಜ್ಞಾನಗಳ ಕ್ಷೇತ್ರದಲ್ಲಿ ಕನ್ನಡ ಭಾಷೆ ಹೆಚ್ಚಾಗಿ ಬೆಳೆದಿಲ್ಲ. ಭಾಷೆಯನ್ನು ಅಭಿವೃದ್ಧಿ ಪಡಿಸುವುದಕ್ಕಾಗೇ ವಿಜ್ಞಾನ-ತಂತ್ರಜ್ಞಾನದ ಅಕಾಡೆಮಿ, ಸಮಾಜ ವಿಜ್ಞಾನಗಳ ಅಕಾಡೆಮಿ ರಚನೆಯಾಗಬೇಕು. ಸಾಹಿತ್ಯ ಬೆಳೆಸೋದಕ್ಕೆ ೫ ಅಕಾಡೆಮಿಗಳಿವೆ. ಭಾಷೆ ಬೆಳೆಸೋದಕ್ಕೊಂದು ಅಕಾಡೆಮಿ ಬೇಡವೇ? ವಿಜ್ಞಾನ, ತಂತ್ರಜ್ಞಾನ, ಸಮಾಜವಿಜ್ಞಾನಗಳ ಕ್ಷೇತ್ರದಲ್ಲಿ ಹೊಸ ಪಾರಿಭಾಷಿಕ ಪದಗಳ ಸೃಷ್ಟಿಯಾಗಬೇಕು. ಈ ಕ್ಷೇತ್ರಗಳಲ್ಲಿ ಭಾಷೆ ಬೆಳೆಸಲು ಸಾಕಷ್ಟು ಚರ್ಚೆಯಾಗಬೇಕು. ಹೊಸ ಹೊಸ ತಾಂತ್ರಿಕ ವಿಚಾರಗಳು ಬೇಗಬೇಗನೆ ಕನ್ನಡಕ್ಕೆ ಬರುವಂತೆ ಮಾಡಬೇಕು. ಇಷ್ಟೇ ಅಲ್ಲ ಸಮಾಜದ ಎಲ್ಲ ಶಾಖೆಗಳಲ್ಲೂ ಇಂತಹ ಪ್ರಯತ್ನಗಳಾಗಬೇಕು.

- **ಕನ್ನಡ ಭಾಷೆಯ ಅಭಿವೃದ್ಧಿಯ ಮಾರ್ಗದಲ್ಲಿರುವ ಆತಂಕಗಳೇನು?**

○ ಆತಂಕ ಒಂದೇ ಪ್ರಯತ್ನ ನಡೆದಿಲ್ಲ ಎನ್ನುವುದು.

- **ಇದಕ್ಕೆ ಪರಿಹಾರ ಏನು?**

○ ವಿದ್ವಾಂಸರ ನಡುವೆ ಚರ್ಚೆಯಾಗಬೇಕು. ಹೊಸ ಹೊಸ ಪಾರಿಭಾಷಿಕ ಶಬ್ದಗಳು ಸೃಷ್ಟಿಯಾಗಬೇಕು. ಉದಾಹರಣೆಗೆ ನೋಡಿ, ಆಕ್ಸಿಜನ್ ಅನ್ನುವುದೇ ಬಳಕೆಯಲ್ಲಿ ಉಳಿದಿದೆ. ಈ ಕಡೆ ಅದನ್ನು ಆಮ್ಲಜನಕ ಎಂತಲೂ ಉತ್ತರದ ಕಡೆ

ಪ್ರಾಣವಾಯು ಎಂತಲೂ ಕರೆಯುತ್ತೇವೆ. ಕನ್ನಡದಲ್ಲೇ ಪರ್ಯಾಯವಾಗಿ ಎರಡು ಪದಗಳಿದ್ದರೂ ಯಾಕೆ ಆಕ್ಸಿಜನ್ ಅನ್ನೋದು ವಾಡಿಕೆಯಲ್ಲಿದೆ? ಇದೇ ರೀತಿ ಕಂಪ್ಯೂಟರ್; ಗಣಕಯಂತ್ರ ಅಂತ ಕನ್ನಡದಲ್ಲಿದೆ. ಆದರೂ ಬಳಕೆಯಲ್ಲಿ ಕಂಪ್ಯೂಟರೇ ಉಳಿದುಕೊಳ್ಳೋದಕ್ಕೆ ಕಾರಣವೇನು ಅನ್ನೋದರ ಬಗ್ಗೆ ಶೋಧನೆಯಾಗಬೇಕು.

- **ಕನ್ನಡವನ್ನು ಅಭಿವೃದ್ಧಿಗೊಳಿಸುವ ದಿಕ್ಕಿನಲ್ಲಿ ಈವರೆಗೂ ಆಗಿರುವ ಪ್ರಯತ್ನಗಳ ಬಗ್ಗೆ ನಿಮ್ಮ ಅಭಿಪ್ರಾಯವೇನು?**

○ ಈ ದಿಸೆಯಲ್ಲಿ ಸರ್ಕಾರ ಪ್ರಜ್ಞಾಪೂರ್ವಕವಾದ ಪ್ರಯತ್ನ ಮಾಡಿರುವಂತೆ ನನಗನ್ನಿಸುವುದಿಲ್ಲ. ಆಡಳಿತ ಕ್ಷೇತ್ರದಲ್ಲೇ ನೋಡಿ. ಕಛೇರಿಯ ಕಡತಗಳಲ್ಲಿ ಬರೆಯುವ ಟಿಪ್ಪಣಿ ಕನ್ನಡದಲ್ಲೇ ಇರಬೇಕು ಎಂಬ ಆದೇಶ ಹೊರಡಿಸಬೇಕಾದ ಅಗತ್ಯವಿದೆ. ಭಾಷೆ ಬಳಸಿ ಎಂದು ಹೇಳುವುದು ವೈದ್ಯರು ನೀಡುವ ಔಷಧ ಚೀಟಿಯಂತಿರಬಾರದು. ಔಷಧಿಯನ್ನು ಕೊಟ್ಟು ಇದನ್ನು ತೆಗೆದುಕೊಳ್ಳಿ ಎಂದು ಹೇಳಿ, ತೆಗೆದುಕೊಂಡರೋ ಇಲ್ಲವೋ ಎಂದು ಮೇಲ್ವಿಚಾರಣೆ ಮಾಡುವಂತಿರಬೇಕು. ಅಂದರೆ ಕನ್ನಡ ಬಳಸಿ ಎನ್ನುವುದು ಕೇವಲ ಕಾಗದದ ಮೇಲೆ ಉಳಿಯದೆ ಅನುಷ್ಠಾನ ರೂಪಕ್ಕೆ ಬರಬೇಕು.

- **ಕನ್ನಡವನ್ನು ಅಭಿವೃದ್ಧಿಗೊಳಿಸುವಲ್ಲಿ ಸಂವಹನ ಮಾಧ್ಯಮಗಳ ಪಾತ್ರವೇನು?**

○ ಕನ್ನಡದ ಬೆಳವಣಿಗೆಯ ವಿಷಯದಲ್ಲಿ ಸಂವಹನ ಮಾಧ್ಯಮಗಳ ಪಾತ್ರ ನಿಜಕ್ಕೂ ಬಹಳ ಮುಖ್ಯ. ಯಾಕೆಂದರೆ ಮಾಧ್ಯಮಗಳು ನೇರವಾಗಿ ಪ್ರೇಕ್ಷಕರನ್ನು ತಲುಪುತ್ತವೆ ನೋಡಿ. ಅವು ಕೊಟ್ಟದ್ದನ್ನೆಲ್ಲ ಪ್ರೇಕ್ಷಕ ಸ್ವೀಕರಿಸಿ, ತನ್ನ ಜೀವನಕ್ಕೆ ಅಳವಡಿಸಿಕೊಳ್ಳುತ್ತಾನೆ. ಆದ್ದರಿಂದ ಮಾಧ್ಯಮಗಳು ಬರೀ ಪದ ಹುಟ್ಟಿಸೋದು ಬೆಳೆಸೋದು ಎನ್ನುವುದಕ್ಕಿಂತ ಅಭಿವ್ಯಕ್ತಿಯನ್ನು ಹೆಚ್ಚು ಸ್ಪಷ್ಟ ಹಾಗೂ ನಿಖರಗೊಳಿಸುವ ಕೆಲಸ ಮಾಡಬೇಕು. ಅಭಿವ್ಯಕ್ತಿ ಕ್ರಮದಲ್ಲಿ ಸಂಬದ್ಧತೆ ಇರಬೇಕಾದರೆ ಅವು ಬಳಸುವ ಭಾಷೆಯಲ್ಲಿ ಸ್ಪಷ್ಟತೆಯಿರಬೇಕು.

- **ಈ ಕೆಲಸವನ್ನು ಸಂವಹನ ಮಾಧ್ಯಮಗಳು ಯಶಸ್ವಿಯಾಗಿ ಮಾಡುತ್ತಿವೆಯೇ?**

○ ಕೆಲಸ ಮಾಡುತ್ತಿವೆ. ಯಶಸ್ವಿಯಾಗಿ ಎಂದು ಹೇಳಲಾರೆ.

- **ಸಂವಹನ ಮಾಧ್ಯಮಗಳಿಗೆ ಒಂದು ಶಿಷ್ಟೀಕೃತ ಭಾಷೆಯ ಅಗತ್ಯವಿದೆಯೇ?**

○ ಖಂಡಿತಾ ಇದೆ. ಈಗ ಬೆಂಗಳೂರಿನ ಭಾಷೆ levellizer. ಸ್ವಲ್ಪ ಏರಿಳಿತಗಳಿರಬಹುದು. ೩೦ ವರ್ಷದ ಹಿಂದೆ ಬೀದರ್‌ನಲ್ಲಿ ಕನ್ನಡಿಗನೊಬ್ಬನ ಜೊತೆ ಮಾತನಾಡಿದರೆ ಶೇ. ೬೦ರಷ್ಟು ಅರ್ಥವಾಗುತ್ತಿರಲಿಲ್ಲ. ಉರ್ದು, ಮರಾಠಿ ಶಬ್ದಗಳೇ ಹೆಚ್ಚಾಗಿ ಇರುತ್ತಿದ್ದವು. ಈಗ ಸ್ಥಿತಿ ಬದಲಾಗಿದೆ. ಸಮೂಹ ಮಾಧ್ಯಮಗಳು ಮತ್ತೊಂದು ಬಗೆಯ ಅಂದರೆ ಬೀದರ್ ಭಾಷೆಗಿಂತ ಭಿನ್ನವಾದ ಹಳೆ ಮೈಸೂರಿನ ಗ್ರಾಂಥಿಕ ಭಾಷೆಗೆ ಹತ್ತಿರವಾದ ಭಾಷೆಯನ್ನು ಆ ಪ್ರದೇಶಕ್ಕೂ ಪರಿಚಯಿಸಿವೆ. ಇದನ್ನೇ ಒಂದು ಪ್ರಮಾಣ ಭಾಷೆ ಅಂದುಕೊಳ್ಳಬಹುದು. ಆದರೂ ಉಪಭಾಷಾ ವೈವಿಧ್ಯವನ್ನು ತಪ್ಪಿಸುವುದು ಸಾಧ್ಯವಿಲ್ಲ. ಅದು ಭಾಷೆಗೆ ಚೆಲುವನ್ನು ತಂದುಕೊಡುತ್ತದೆ. ಆಚಾರ, ವಿಚಾರ, ಸಾಹಿತ್ಯ-ಸಂಸ್ಕೃತಿಗಳಲ್ಲಿ ವೈವಿಧ್ಯತೆ ಇರುವಂತೆ ಭಾಷೆಯಲ್ಲೂ ವೈವಿಧ್ಯತೆ ಇರಬೇಕು, ಇದೆ. ಅನುಭವವನ್ನು ಹಂಚಿಕೊಳ್ಳೋದಕ್ಕೆ ಈ ಭಿನ್ನತೆ ಬೇಕು. 'ಹತ್ತೆರಿ' ಎನ್ನುವ ಶಬ್ದವನ್ನು ಒಂದು ಪ್ರದೇಶದ ಜನ ಬಳಸುತ್ತಾರೆ. ಅದು ಅವರ ಅನುಭವ, ಭಾವನೆಗಳಿಗೆ ಸೇರಿದ್ದು. ಅದೇ ಒಂದು ವಿಚಾರವನ್ನು ವಿನಿಮಯ ಮಾಡಿಕೊಳ್ಳುವಾಗ ಎಲ್ಲರಿಗೂ ಅರ್ಥವಾಗುವ ಒಂದು ಭಾಷೆ ಬೇಕು. ಉದಾಹರಣೆಗೆ, ದಾವಣಗೆರೆ-ಶಿವಮೊಗ್ಗ ಸುತ್ತಮುತ್ತಲಲ್ಲಿ 'ಒತಂಗೈತೆ' ಎಂಬ ಶಬ್ದವಿದೆ. ಅಂದರೆ 'ಚೆನ್ನಾಗಿದೆ' ಅಂತ. ಇಲ್ಲಿ 'ಚೆನ್ನಾಗಿದೆ'

ಎನ್ನುವುದು ಜನರನ್ನು ತಲುಪುವಂತೆ 'ಒತಂಗ್ಯೆತೆ' ತಲುಪುವುದಿಲ್ಲ. ಈಗಗ 'ಚೆನ್ನಾಗಿದೆ' ಎನ್ನುವುದೇ ಎಲ್ಲೆಡೆಯೂ ರೂಢಿಗತವಾಗಿದೆ. ಇಂಥ 'ವಿದ್ಯಾವಂತರ' ಭಾಷೆಯನ್ನು ಸಂವಹನ ಮಾಧ್ಯಮಗಳು ಹರಡುತ್ತವೆ. ಜೊತೆಗೆ ಗ್ರಾಮೀಣ ಜನರಿಗೆ ದಕ್ಕುತ್ತಿರುವ ಸಾಕ್ಷರತೆಯ ಅನುಭವದಿಂದಲೂ ಭಾಷೆ ಶಿಷ್ಟ ನಡೆ ಅನುಸರಿಸುತ್ತಿರಬಹುದು. ಒಟ್ಟಿನಲ್ಲಿ ವಿಚಾರವಿನಿಮಯಕ್ಕೆ ಆಲೋಚನೆಯನ್ನು ಹರಡೋದಕ್ಕೆ ಒಂದು ಪ್ರಮಾಣೀಕೃತ ಭಾಷೆ ಅತ್ಯಗತ್ಯ.

- **ಕನ್ನಡ ಭಾಷೆಯ ಆಧುನೀಕರಣ, ಟಂಕೀಕರಣ, ಅನ್ಯಭಾಷಾ ಸ್ವೀಕರಣ, ನುಡಿಬೆರಕೆ ಮುಂತಾದ ವಿಷಯಗಳಲ್ಲಿ ಸಮೂಹ ಮಾಧ್ಯಮಗಳ ಕೊಡುಗೆ ಏನು?**

- ಕನ್ನಡ ಭಾಷೆ ನಿಜವಾಗಿಯೂ ಆಧುನೀಕೃತಗೊಳ್ಳುತ್ತಿದೆ. ಆಧುನೀಕೃತಗೊಳ್ಳಬೇಕಾದ ಪರಿಸ್ಥಿತಿ ಪರಿಸರದ ಕಾರಣದಿಂದಾಗೇ ಉಂಟಾಗುತ್ತದೆ ಎನ್ನಬಹುದು. ಇವತ್ತಿನ ವಿಜ್ಞಾನ - ತಂತ್ರಜ್ಞಾನದ ಉತ್ತುಂಗದ ದಿನಗಳಲ್ಲಿ ಹೊಸ ಹೊಸ ಆಧುನಿಕ ಪದಗಳನ್ನು ಪಾರಿಭಾಷಿಕ ಪದಗಳನ್ನು ಕನ್ನಡ ಒಳಗೊಳ್ಳಲೇಬೇಕಾದ ಅನಿವಾರ್ಯತೆ ಇರುವುದರಿಂದ ಭಾಷೆ ಆಧುನಿಕಗೊಳ್ಳಲೇಬೇಕಲ್ಲವೆ?

- **ಭಾಷಾ ಯೋಜನೆ, ಭಾಷಾ ನೀತಿ, ರಚನೆಯಿಂದ ಕನ್ನಡ ಎಷ್ಟರ ಮಟ್ಟಿಗೆ ಬೆಳೆಯಬಹುದು?**

- ನೀತಿ ರೂಪಿಸಿ, ಯೋಜನೆ ಮಾಡಿಬಿಟ್ಟರೆ ಸಾಲದು. ಅದು ಕಾರ್ಯರೂಪಕ್ಕೆ ಬರಬೇಕು. ನಮ್ಮ ಜನಪ್ರತಿನಿಧಿಗಳು, ಅಧಿಕಾರ ಸ್ಥಾನಗಳಲ್ಲಿ ಕುಳಿತ ಮಂತ್ರಿ, ಮುಖ್ಯಮಂತ್ರಿಗಳು, ಆಡಳಿತಾಧಿಕಾರಿಗಳು ಕನ್ನಡವನ್ನೇ ಬಳಸುವುದನ್ನು ಅಭ್ಯಾಸ ಮಾಡಿಕೊಳ್ಳಬೇಕು. ಭಾಷೆಯ ಬಗ್ಗೆ ಶಾಸಕಾಂಗ, ಕಾರ್ಯಾಂಗ, ನ್ಯಾಯಾಂಗದ ಧೋರಣೆ ಬದಲಾಗಬೇಕು.

- **ಶಿಕ್ಷಣ ಕ್ಷೇತ್ರದಲ್ಲಿ ಪಠ್ಯಕ್ರಮದ ಸುಧಾರಣೆ ಮೂಲಕ ಕನ್ನಡದ ಅಭಿವೃದ್ಧಿ ಸಾಧ್ಯವೇ?**

- ಇದರ ಬಗ್ಗೆ ಪ್ರತ್ಯೇಕ ಅಧ್ಯಯನವೇ ಆಗಬೇಕಾಗಿದೆ. ಶೈಕ್ಷಣಿಕ ಪಠ್ಯಕ್ರಮದಲ್ಲಿ ಬದಲಾವಣೆ ಆಗಲೇಬೇಕಾಗಿದೆ. ೧ ರಿಂದ ೧೦ನೇ ತರಗತಿ ವರೆಗಿನ ಪಠ್ಯಕ್ರಮ ಅತ್ಯಂತ ಅತೃಪ್ತಿಕರವಾಗಿದೆ. ಪ್ರಾಥಮಿಕ ಶಾಲಾ ಪಠ್ಯಕ್ರಮದಲ್ಲಿ ಬೆಡಗಿನ ವಚನಗಳನ್ನು ಹಾಕಿಬಿಟ್ಟರೆ ಅದನ್ನು ಗ್ರಹಿಸುವುದು ಆ ಮಕ್ಕಳಿಂದ ಸಾಧ್ಯವೇ? ಹಾಗೆ ಶಿಶುನಾಳ ಶರೀಫರ 'ಕೋಡಗನ ಕೋಳಿ ನುಂಗಿತ್ತಾ' ಪದ್ಯ ಮಕ್ಕಳಿಗೇನು ಅರ್ಥವಾಗುತ್ತೆ? 'ಓದಿ ಬ್ರಾಹ್ಮಣನಾಗು, ಕಾದಿ ಕ್ಷತ್ರಿಯನಾಗು' ಎನ್ನುವುದನ್ನು 'ಓದಿ ಬೋಧಕನಾಗು' ಎಂದು ತಿದ್ದಿ ಬಿಡುತ್ತಾರೆ. ಇವರನ್ನು ತಿದ್ದಿ ಎಂದು ಹೇಳಿದವರಾರು? ಈ ಮೂಲ ಕವಿತೆಗೆ ಅದರದೇ ಆದ ಒಳಅರ್ಥವಿರುತ್ತದೆ. ಅದು ಮಕ್ಕಳ ಗ್ರಹಿಕೆಗೆ ಮೀರಿದ್ದು. ಬದಲಾದ ಸಮಾಜಕ್ಕೆ ನಿಲುಕದ್ದು ಎಂದು ಅದನ್ನೇ ಬದಲಾಯಿಸಿ ಬಿಡುವುದೇ? ಕನ್ನಡ ನಾಡಿನಲ್ಲಿರುವ ಭಾಷಿಕ ಅಲ್ಪಸಂಖ್ಯಾತ ವಿದ್ಯಾರ್ಥಿಗಳು ಓದುವ ಪಠ್ಯಕ್ರಮದಲ್ಲೂ ಕರ್ನಾಟಕಕ್ಕೆ ಸಂಬಂಧಿಸಿದ ವಿಷಯವೇ ಇರಬೇಕು ಎನ್ನುವುದು ನನ್ನ ಒತ್ತಾಯ.

- **ಉದಾರೀಕರಣದ ಇಂದಿನ ಸಂದರ್ಭದಲ್ಲಿ ಇಂಗ್ಲಿಷ್ ಭಾಷೆಯ ಪ್ರಾಬಲ್ಯ ಹೆಚ್ಚಾಗುತ್ತಿರುವುದರಿಂದ ಕನ್ನಡದ ನೆಲೆಯ ಮೇಲೆ ವ್ಯತಿರಿಕ್ತ ಪರಿಣಾಮ ಉಂಟಾಗಬಹುದೇ?**

- ಕನ್ನಡವನ್ನೇ ಬಳಸಬೇಕು ಎನ್ನುವ ಭಾವನೆ ಮೂಲತಃ ಜನರಲ್ಲೇ ಇದ್ದುಬಿಟ್ಟರೆ ಯಾವ ತೊಂದರೆಯೂ ಆಗುವುದಿಲ್ಲ. ಅಂಥ ಭಾಷಾಭಿಮಾನ ಜನರಲ್ಲಿರಬೇಕು ಅಷ್ಟೇ.

ಸಂದರ್ಶನ - ೪

೨೪.೫.೨೦೦೧

## ಶ್ರೀ ಜಿ. ನಾರಾಯಣ
## (ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಮೊದಲ ಅಧ್ಯಕ್ಷರು)

● **ಕನ್ನಡದ ಅಭಿವೃದ್ಧಿ ಎಂದರೇನು?**

○ ಜನರ ಮಾತು, ಬರವಣಿಗೆ, ಓದು ಇಂಥವೆಲ್ಲ ಕನ್ನಡದಲ್ಲೇ ಆಗುತ್ತಲ್ಲ ಅದೇ ಕನ್ನಡದ ಅಭಿವೃದ್ಧಿ. ಬೇರೆ ಭಾಷೆಯ ವಿಚಾರಗಳು, ವಿಜ್ಞಾನದ ವಿಷಯಗಳು ಕನ್ನಡಕ್ಕೆ ಬರಬೇಕು. ಅವನ್ನು ಕನ್ನಡಕ್ಕೆ ತರಬೇಕು. ಎಲ್ಲ ಕಡೆ ಕನ್ನಡವನ್ನು ಉಪಯೋಗಿಸಬೇಕು. ಅದೇ ಕನ್ನಡದ ಅಭಿವೃದ್ಧಿ.

● **ಕನ್ನಡದ ಅಭಿವೃದ್ಧಿಯ ಮಾರ್ಗಗಳಾವುವು?**

○ ಬ್ರಿಟಿಷರ ಕಾಲದಲ್ಲೂ ಅದಕ್ಕೂ ಮೊದಲೂ ಕನ್ನಡವೇ ಇಲ್ಲಿನ ಆಡಳಿತ ಭಾಷೆಯಾಗಿತ್ತು. ಟಿಪ್ಪು-ಹೈದರಾಲಿಯ ಕಾಲದಲ್ಲಿ ಕನ್ನಡವೇ ಆಡಳಿತ ಭಾಷೆ, ಉರ್ದು ಎರಡನೇ ಭಾಷೆ. ೧೯೫೬ರಲ್ಲಿ ಏಕೀಕರಣವಾದ ನಂತರವೂ ಅದೇ ಮುಂದುವರೆಯಬೇಕಿತ್ತು. ಭಾಷಾವಾರು ಪ್ರಾಂತ್ಯಗಳ ರಚನೆಯಾದದ್ದೇ ಪ್ರಾಂತೀಯ ಭಾಷೆಗಳನ್ನು ಅಲ್ಲಿನ ಆಡಳಿತ ಭಾಷೆಯಾಗಿ ಬಳಸಿಕೊಳ್ಳುವುದಕ್ಕಾಗಿ. ಅಂದಮೇಲೆ ಆಡಳಿತ, ಶಿಕ್ಷಣ, ನ್ಯಾಯಾಂಗಗಳಲ್ಲಿ ಕನ್ನಡವನ್ನು ಸೂಕ್ತವಾಗಿ, ಸಂಪೂರ್ಣವಾಗಿ ಬಳಸಿದರೆ ಸಾಕು. ಕನ್ನಡ ತನ್ನ ಪಾಡಿಗೆ ತಾನು ಬೆಳೆಯುತ್ತದೆ.

● **ಕನ್ನಡ ಭಾಷೆಯ ಅಭಿವೃದ್ಧಿಯ ಮಾರ್ಗದಲ್ಲಿರುವ ಆತಂಕಗಳೇನು?**

○ ಆಡಳಿತ ನಡೆಸುವ ಜನರಿಗೆ ಕನ್ನಡದ ಅಭಿವೃದ್ಧಿ ಬಗ್ಗೆ ಕಾಳಜಿ ಇಲ್ಲದಿರುವುದೇ ಮುಖ್ಯ ಆತಂಕ. ಅವರೂ ಬಳಸುವುದಿಲ್ಲ, ಇತರರಿಗೂ ಬಳಸಿ ಎಂದು ಎಚ್ಚರಿಕೆ ನೀಡುವುದಿಲ್ಲ. ಇನ್ನೊಂದು ಕಡೆ ತ್ರಿಭಾಷಾ ಸೂತ್ರ. ಉತ್ತರದವರಿಗೆ ದಕ್ಷಿಣ ಭಾರತದ ಭಾಷೆಗಳ ಬಗ್ಗೆ ವಿಶ್ವಾಸವಿಲ್ಲ. ಹಾಗಾಗಿ ಹಿಂದಿಯನ್ನು ನಮ್ಮ ಮೇಲೆ ಹೇರುತ್ತಾರೆ.

● **ಈ ಆತಂಕಗಳಿಗೆ ಪರಿಹಾರ ಹೇಗೆ?**

○ ಬೇರೆ ರಾಜ್ಯಗಳಿಂದ ಬಂದು ಇಲ್ಲಿ ಆಡಳಿತದ ಚುಕ್ಕಾಣಿ ಹಿಡಿಯುವ ಐ.ಎ.ಎಸ್. ಅಧಿಕಾರಿಗಳು ಮೊದಲು ಕಡ್ಡಾಯವಾಗಿ ಕನ್ನಡ ಕಲಿಯಬೇಕು. ಅವರು ಅಧಿಕಾರ ಸ್ವೀಕರಿಸಿದಾಗಲೇ ಪ್ರಾಂತೀಯ ಭಾಷೆ ಕಲಿಯಬೇಕು ಮತ್ತು ಆಡಳಿತದಲ್ಲಿ ತರಬೇತಿ ಪಡೆಯಬೇಕು ಎಂಬ ನಿಯಮವಿದೆ. ೨ನೇ ದನ್ನು ಮಾಡುತ್ತಾರೆ. ಪ್ರಾಂತೀಯ ಭಾಷೆಯನ್ನು ಕಲಿಯೋದಿಲ್ಲ. ಅವರಿಗೆ ಕನಿಷ್ಠ ಪಕ್ಷ ೧೦ನೇ ತರಗತಿಯ ಮಟ್ಟದ ಕನ್ನಡವಾದರೂ ಗೊತ್ತಿರಲೇಬೇಕು. ಮಂತ್ರಿಗಳು, ಮುಖ್ಯಮಂತ್ರಿಗಳು, ಎಲ್ಲ ವರ್ಗದ ಸಿಬ್ಬಂದಿಗೆ ಈ ಬಗ್ಗೆ ಹೆಚ್ಚಿನ ಕಳಕಳಿ ಇರಬೇಕು. ಕನ್ನಡದಲ್ಲೇ ಕಡತಗಳನ್ನು ಬರೆಯುವಂತಾಗಬೇಕು.

● **ಕನ್ನಡದ ಅಭಿವೃದ್ಧಿಯ ದಿಕ್ಕಿನಲ್ಲಿ ಈವರೆಗೂ ಆಗಿರುವ ಪ್ರಯತ್ನಗಳ ಬಗ್ಗೆ ನಿಮ್ಮ ಅಭಿಪ್ರಾಯವೇನು?**

○ ಈವರೆಗೂ ಪ್ರಯತ್ನ ಆಗಿದೆ. ಇಲ್ಲ ಅನ್ನಲ್ಲ. ಆದರೂ ಜನರ ಒಲವು ಯಾಕೆ ಈ ಕಡೆ ಬಂದಿಲ್ಲ ಗೊತ್ತಾಗುತ್ತಿಲ್ಲ. ಔಷಧಿ ಕೊಟ್ಟರೂ ಕಾಯಿಲೆ ಯಾಕೆ ವಾಸಿಯಾಗಿಲ್ಲ ಅನ್ನೋದನ್ನ ನೋಡಬೇಕು. ಸರಿಯಾದ ಕಾಯಿಲೆಗೆ ಸರಿಯಾದ ಔಷಧಿ ಕೊಟ್ಟಿದೆಯಾ, ಕಾಯಿಲೆಯನ್ನೇ ಸರಿಯಾಗಿ ಗುರುತಿಸಿದೆಯಾ ಅಥವಾ ಕೊಟ್ಟ ಔಷಧಿಯನ್ನು ಬಳಸಿದೆಯಾ ನೋಡಬೇಕು.

● **ಈ ದಿಸೆಯಲ್ಲಿ ಸರ್ಕಾರದ ಪ್ರಯತ್ನಗಳು ತೃಪ್ತಿಕರವಾಗಿವೆಯೇ?**

○ ಸರ್ಕಾರಗಳು ತಮ್ಮ ಕೈಲಾದ್ದು ಮಾಡ್ತಾ ಇವೆ. ಆದರೂ ಜನರಿಗೆ, ಜನಪ್ರತಿನಿಧಿಗಳಿಗೆ ಅಭಿಮಾನ ಸಾಲದು. ಸಂಘ ಸಂಸ್ಥೆಗಳೂ ಕೂಡ ಜನರಿಗೆ ತಿಳುವಳಿಕೆ ಮೂಡಿಸುವ ಪ್ರಯತ್ನ ಮಾಡಬೇಕು.

● **ಕನ್ನಡವನ್ನು ಅಭಿವೃದ್ಧಿಗೊಳಿಸುವಲ್ಲಿ ಸಂವಹನ ಮಾಧ್ಯಮಗಳ ಪಾತ್ರವೇನು?**

○ ಮುಖ್ಯವಾದ ಪಾತ್ರವಹಿಸುತ್ತಾ ಇರೋದು ಪತ್ರಿಕೆಗಳು ಅಂತ ನನ್ನ ಅಭಿಪ್ರಾಯ. ದೂರದರ್ಶನದಿಂದ ಕನ್ನಡ ಉದ್ಧಾರವಾಗುತ್ತದೆ ಅಂದ ಹೇಳಕ್ಕಾಗಲ್ಲ. ಯಾಕಂದ್ರೆ ಅಲ್ಲಿ ಮನರಂಜನೆಗೇ ಹೆಚ್ಚು ಪ್ರಾಶಸ್ತ್ಯ ಕೊಡುತ್ತಿದ್ದಾರೆಯೇ ಹೊರತು ಭಾಷೆಗಾಗಿ ಏನೂ ಮಾಡುತ್ತಿಲ್ಲ. ಇನ್ನು ಆಕಾಶವಾಣಿ, ಮುಖ್ಯವಾಗಿ ಇಲ್ಲಿ ಕಾಲಾಂತರದಿಂದಲೂ ಸಂಗೀತಕ್ಕೇ ಪ್ರಾಶಸ್ತ್ಯ. ಜೊತೆಗೆ ಇವೆರಡೂ ವಿದ್ಯುನ್ಮಾನ ಮಾಧ್ಯಮಗಳಲ್ಲಿ ಒಮ್ಮೆ ಒಂದು ಕಾರ್ಯಕ್ರಮ ಪ್ರಸಾರವಾಗಿಬಿಟ್ಟರೆ ಅಲ್ಲಿಗೆ ಅದು ಮರೆತೇ ಹೋಗುತ್ತದೆ. ಕನ್ನಡದ ಮೇಲೆ ಸಾಕಷ್ಟು ಪ್ರಭುತ್ವ ಮತ್ತು ಕಾಳಜಿ ಇರುವ ಸಿಬ್ಬಂದಿಯೂ ಅಲ್ಲಿಲ್ಲ. ವಿಷಯಸ್ಥಿತಿ ಹೀಗಿರೋವಾಗ ಮೌಖಿಕ ಮಾಧ್ಯಮಗಳು ಭಾಷೆ ಬೆಳೆಸುತ್ತವೆ ಅಂತ ಹೇಗೆ ಹೇಳೋದು? ಆದರೆ ಪತ್ರಿಕೆಗಳು ಹಾಗಲ್ಲ. ಅಕ್ಷರ ರೂಪದಲ್ಲಿ ದಾಖಲೆಗಳಾಗಿ ಉಳಿಯುತ್ತವೆ. ಅವು ದಾಖಲೆಗಳಾಗಿ ಉಳಿಯುತ್ತವೆ ಅಂತಾನೇ ಅದರ ಸಂಪಾದಕ ವರ್ಗ ಹೆಚ್ಚಿನ ಎಚ್ಚರಿಕೆ ವಹಿಸಿ ಭಾಷೆ ಬಳಸುತ್ತದೆ. ಈಗೀಗ ಅಕ್ಷರಸ್ಥರ ಸಂಖ್ಯೆಯೂ ಹೆಚ್ಚಿದೆ. ಅವರಿಗೂ ವಿಷಯ ಸಂಗ್ರಹಣೆಯ ದಾಹ ಉಂಟಾಗಿದೆ. ಪತ್ರಿಕೆಗಳನ್ನು ಓದುತ್ತಾರೆ. ಇದಕ್ಕೆ ಉದಾಹರಣೆಯಾಗಿ ನಾವು ಪತ್ರಿಕೆಗಳ ಸಂಖ್ಯೆ ಬೆಳೆದಿರುವುದನ್ನು ಗಮನಿಸಬಹುದು. ರಾಜ್ಯ, ಜಿಲ್ಲೆ, ತಾಲ್ಲೂಕು ಮಟ್ಟದ ಪತ್ರಿಕೆಗಳ ಸಂಖ್ಯೆ ಹಾಗೂ ಅವುಗಳ ಮುದ್ರಣ/ಆವರ್ತನ ಸಂಖ್ಯೆ ಹೆಚ್ಚಿದೆ. ನಿಯತಕಾಲಿಕೆಗಳು ಹೆಚ್ಚಾಗಿವೆ. ಜನರು ಓದದೇ ಇದ್ದಿದ್ದರೆ ಇಷ್ಟೆಲ್ಲಾ ಯಾಕೆ ಮುದ್ರಿಸಬೇಕಾಗುತ್ತಿತ್ತು? ಆದ್ದರಿಂದ ಜನ ಪತ್ರಿಕೆಗಳನ್ನು ಓದುತ್ತಾರೆ, ವಿಷಯ ಗ್ರಹಿಸುತ್ತಾರೆ ಅಂತ ಹೇಳಬಹುದು. ಇಲ್ಲೇ ಪತ್ರಿಕೆಗಳು ಕನ್ನಡವನ್ನು ಬೆಳೆಸುವ ಹಾಗೂ ಬಳಸುವ ನಿಟ್ಟಿನಲ್ಲಿ ಬಹಳ ಮಹತ್ವದ ಪಾತ್ರ ವಹಿಸುವುದು ಸಾಧ್ಯ.

● **ಈ ಕೆಲಸವನ್ನು ಸಂವಹನ ಮಾಧ್ಯಮಗಳು ಯಶಸ್ವಿಯಾಗಿ ಮಾಡುತ್ತಿವೆಯೇ?**

○ ಮೊದಲೇ ಹೇಳಿರುವ ಹಾಗೆ ಪತ್ರಿಕೆಗಳು ಆ ಕೆಲಸ ಮಾಡುತ್ತಿವೆ. ದೃಶ್ಯ ಮಾಧ್ಯಮ ಹಾಡು-ನೃತ್ಯದಂತಹ ಮನರಂಜನೆಗೆ, ಶ್ರವ್ಯ ಮಾಧ್ಯಮ ಸಂಗೀತಕ್ಕೆ ಹೆಚ್ಚು ಒತ್ತು ನೀಡುತ್ತಿವೆ. ಪತ್ರಿಕೆಗಳಿಗೆ ಅವೆರಡೂ ಇಲ್ಲದಿರುವುದರಿಂದಲೂ, ಅದರ ಸ್ವರೂಪವೇ ಭಾಷೆಯದಾಗಿರುವುದರಿಂದಲೂ ಅವು ಈ ವಿಷಯದಲ್ಲಿ ಕೆಲಸ ಮಾಡಲೇಬೇಕಾದ ಅನಿವಾರ್ಯತೆ ಅವಕ್ಕೂ ಇದೆ. ಹಾಗಾಗಿ ಯಶಸ್ವಿಯಾಗುತ್ತವೆ.

- **ಇಲ್ಲ ಎನ್ನುವುದಾದರೆ ಅಥವಾ ತೃಪ್ತಿಕರವಾಗಿಲ್ಲ ಎನ್ನುವುದಾದರೆ ಅವು ಮುಂದೆ ಇಡಬೇಕಾದ ಹೆಜ್ಜೆಗಳ ಸ್ವರೂಪ ಏನು?**

- ದೂರದರ್ಶನದ ಬಗ್ಗೆ ಸಾಕಷ್ಟು ಟೀಕೆಗಳಿವೆ. ನಿಮಗೇ ಗೊತ್ತು. ಸಿನೆಮಾ ಗೀತೆಗಳ ಬದಲಿಗೆ ಸಾಹಿತ್ಯಕ ಚರ್ಚೆ, ಭಾಷಾ ವಿಷಯದಲ್ಲಿ ಕನ್ನಡ ನಾಡು-ನೆಲ-ಜಲ-ಸಂಸ್ಕೃತಿಯ ವಿಷಯದಲ್ಲಿ ಜನರಲ್ಲಿ ಜಾಗೃತಿ ಮೂಡಿಸುವ ಕೆಲಸ ಮಾಡಬೇಕು. ಆಕಾಶವಾಣಿಯಲ್ಲಿ ಬರೀ ಮಾತನಾಡುತ್ತಾ ಹೋದರೆ ಜನ ಕೇಳಲಾರರು. ಆದರೆ ದೂರದರ್ಶನದಲ್ಲಿ ನೋಡುವುದೂ ಸಾಧ್ಯವಿರುವುದರಿಂದ ಕಾರ್ಯಕ್ರಮಗಳಲ್ಲಿ ಅವುಗಳ ವಿಷಯ, ಪ್ರಸ್ತುತಪಡಿಸುವ ರೀತಿಗಳಲ್ಲಿ ಬದಲಾವಣೆ ಅತ್ಯಗತ್ಯ. ಪತ್ರಿಕೆಗಳು ಭಾಷಾ ತಜ್ಞರೊಂದಿಗೆ ವಿದ್ವಾಂಸರೊಂದಿಗೆ ಚರ್ಚೆ ನಡೆಸುವುದು ಒಳ್ಳೆಯದು.

- **ಸಂವಹನ ಮಾಧ್ಯಮಗಳಿಗೆ ಶಿಷ್ಟೀಕೃತ ಭಾಷೆಯ ಅಗತ್ಯವಿದೆಯೇ?**

- ಅದು ತನ್ನ ಪಾಡಿಗೆ ತಾನೇ ಆಗತ್ತೆ. ಪ್ರಾರಂಭದಲ್ಲಿ ಆ ಭಾಗ, ಈ ಭಾಗ, ಪ್ರಾದೇಶಿಕ ಭಾಷೆ, ಉಪಭಾಷೆ ಅಂತೆಲ್ಲಾ ಗೊಂದಲ ಇರುತ್ತೆ. ಕ್ರಮೇಣ ಒಂದು ಬಗೆಯ ಎಲ್ಲರಿಗೂ ಅರ್ಥವಾಗುವ standard ಅನ್ನಬಹುದು, ಅಂಥ ಭಾಷೆ ರೂಪುಗೊಳ್ಳುತ್ತೆ. ಏಕೀಕರಣ ಆದ ಹೊಸತರಲ್ಲಿ ಎರಡು ಭಾಷೆಗಳ ಮಧ್ಯ ಇದ್ದ ಜಿಲ್ಲೆಗಳಲ್ಲಿ ಕನ್ನಡ ಸಮ್ಮಿಶ್ರಗೊಂಡು ವಕ್ರವಕ್ರವಾಗಿ ಇರ್‍ತಾ ಇತ್ತು. ಏಕೀಕರಣ ನಂತರ ಕರ್ನಾಟಕದ ಗಡಿರೇಖೆಯೊಳಗೆ ಕನ್ನಡ ಗಟ್ಟಿಯಾಗ್ತಾ ಬಂತು. ಇನ್ನೂ ಸ್ವಲ್ಪ ದಿನ ಕಳೆದರೆ ಏಕರೀತಿಯ ಭಾಷೆಯನ್ನು ಸಂವಹನ ಮಾಧ್ಯಮಗಳು ಅಳವಡಿಸಿಕೊಳ್ಳಬಹುದು. ಆದರೂ ಜನ ತಮ್ಮ ಅನುಭವಜನ್ಯ ಮಾತಿನ/ಭಾಷಾ ಶೈಲಿಯನ್ನು ಸಂಪೂರ್ಣವಾಗಿ ಬಿಟ್ಟುಕೊಡಲಾರರು.

- **ಕನ್ನಡ ಭಾಷೆಯ ಆಧುನೀಕರಣ, ಟಂಕೀಕರಣ, ಅನ್ಯಭಾಷಾ ಸ್ವೀಕರಣ, ನುಡಿಬೆರಕೆ ಮುಂತಾದ ವಿಷಯಗಳಲ್ಲಿ ಸಮೂಹ ಮಾಧ್ಯಮಗಳ ಕೊಡುಗೆ ಏನು?**

- ಜಗತ್ತೆಲ್ಲಾ ಆಧುನಿಕಗೊಳ್ಳುತ್ತಿದೆ. ಅದಕ್ಕೆ ಪೂರಕವಾಗಿ ಭಾಷೆಯೂ ಆಧುನಿಕಗೊಳ್ಳಬೇಕು. ಇದು ಸಾಂದರ್ಭಿಕ ಬೇಡಿಕೆ. ನುಡಿಬೆರಕೆ ಅಂದಿರಲ್ಲ. ಅದೊಂದನ್ನು ಬಿಟ್ಟು ಉಳಿದವೆಲ್ಲ ಭಾಷೆ ಬೆಳವಣಿಗೆಗೆ ಪೂರಕವೇ. 'ತರಕಾರಿ' ಕನ್ನಡ ಪದವಲ್ಲ. ಆದರೂ ಕನ್ನಡದಲ್ಲಿ ಸ್ವೀಕೃತವಾಗಿದೆ. ಇಂತಹ ಸ್ವೀಕಾರ ಆಗಬೇಕು. ಆಗುತ್ತದೆ. ಆದರೆ ಅದನ್ನು ಉದ್ದೇಶಪೂರ್ವಕವಾಗಿ ಮಾಡಲು ಹೋಗಿ ಕನ್ನಡದಲ್ಲಿ ಈಗಾಗಲೇ ಇರುವ ಹಾಗೂ ಕನ್ನಡದಲ್ಲಿ ಹೇಳಲು ಸಾಧ್ಯವಿರುವ ಶಬ್ದಗಳನ್ನು ಬಳಸದೇ ಇರಬಾರದು. ನುಡಿಬೆರಕೆಯಿಂದಲೇ ಆತಂಕ ಜಾಸ್ತಿ. ಕನ್ನಡ ವಾಕ್ಯಗಳ ನಡುನಡುವೆ ಇತರ ಭಾಷೆಯ ಇಡಿ ಇಡೀ ವಾಕ್ಯಗಳನ್ನು ಏಕೆ ಬಳಸಬೇಕು? ಅಲ್ಲೊಂದು ಇಲ್ಲೊಂದು ಪದ ಕನ್ನಡಕ್ಕೆ ಬರಲಿ ಸಾಕು. ಮಾಧ್ಯಮಗಳು ಈ ಹಂತದಲ್ಲಿ ಎಚ್ಚರವಾಗಿರಬೇಕು.

- **ಭಾಷಾ ಯೋಜನೆ, ಭಾಷಾ ನೀತಿ ರಚನೆಯಿಂದ ಕನ್ನಡ ಎಷ್ಟರ ಮಟ್ಟಿಗೆ ಬೆಳೆಯಬಹುದು?**

- ಕನ್ನಡದ ಬಗ್ಗೆ ಜನರಲ್ಲಿ ತಿಳುವಳಿಕೆ ಮೂಡಿಸುವುದಾದರೆ ಈ ನೀತಿ ಯೋಜನೆಗಳೆಲ್ಲ ಫಲಪ್ರದವೆನಿಸುತ್ತವೆ. ಸರ್ಕಾರಕ್ಕೆ ಈ ಬಗ್ಗೆ ಕಳಕಳಿಯಿಲ್ಲ. ಅವರು ತಮ್ಮ ಯೋಜನೆಗಳ ಬಗ್ಗೆ ಹೇಳಬಹುದು. ಹೌದು ಅದೂ ಇರಬಹುದು. ಆದರೆ ಅವು ಜನರಿಗೆ ತಲುಪದ ಹೊರತು, ಜನರಲ್ಲಿ ಮಾರ್ಪಾಡು ಉಂಟುಮಾಡದ ಹೊರತು ಏನೂ ಪ್ರಯೋಜನವಿಲ್ಲ. ಈ ಕೆಲಸವನ್ನೂ ಸರ್ಕಾರವೇ ಮಾಡಬೇಕೆಂದೂ ಇಲ್ಲ. ಕನ್ನಡ ಸಂಘ ಸಂಸ್ಥೆಗಳೂ ಈ ಕೆಲಸ ಮಾಡಬೇಕು. ಸಾರ್ವಜನಿಕರೂ ತಿಳುವಳಿಕಸ್ಥರಾಗಬೇಕು. ಬರೀ ಟೀಕೆ ಮಾಡೋದರಿಂದ ಕನ್ನಡದ ಅಭಿವೃದ್ಧಿ ಸಾಧ್ಯವಿಲ್ಲ. ಭಾಷೆ ಬೆಳೆಸೋದಕ್ಕಾಗಿ ಬೇಕಾದಷ್ಟು ಯೋಜನೆಗಳೇನೊ ಇವೆ. ಅವನ್ನು ಕಾರ್ಯರೂಪಕ್ಕೆ ತರುವಂತಾಗಬೇಕು.

- **ಸರ್ಕಾರ ರೂಪಿಸಿರುವ ಭಾಷಾಯೋಜನೆ, ಭಾಷಾ ನೀತಿಯಿಂದ ಕನ್ನಡದ ಅಭಿವೃದ್ಧಿ ಸಾಧಿತವಾಗಿದೆಯೇ?**

○ ಸಂಪೂರ್ಣವಾಗಿ ಸಾಧಿತವಾಗಿಲ್ಲ. ಸ್ವಾತಂತ್ರ್ಯ ಬಂದ ಮೇಲೂ ಏಕೀಕರಣ ಆದ ಮೇಲೂ ಕನ್ನಡಿಗರು ಕನ್ನಡ ಬಳಸುತ್ತಿಲ್ಲ. ಯಾಕೆ ಅಂದರೆ ಭಾಷಾಪರ ಯೋಜನೆಗಳು ಜನರಿಗೆ ತಲುಪಿಲ್ಲ. ನೋಡಿ, ರಾಜ್ಯದ ರಾಜಧಾನಿಯಾದ ಬೆಂಗಳೂರು ಕಾಸ್ಮೋಪಾಲಿಟನ್ ನಗರ ಎನಿಸಿಕೊಂಡಿದೆ. ದೇಶದಲ್ಲಿ ಇನ್ನೂ ಹಲವು ಕಾಸ್ಮೋಪಾಲಿಟನ್ ನಗರಗಳಿದ್ದರೂ ಬೆಂಗಳೂರಿನ ಸಮಸ್ಯೆ ಅಲ್ಲಿಲ್ಲ. ಸುಂದರ ಹವಾಗುಣ, ನೆಮ್ಮದಿಯ ಪರಿಸರದ ಕಾರಣವೇ ಬೆಂಗಳೂರಿಗೆ ವಲಸೆ ಬರುವವರ ಸಂಖ್ಯೆ ಹೆಚ್ಚಾಗಿದೆ. ಅದೇ ಕನ್ನಡ ಭಾಷೆಗೆ ತೊಡಕೂ ಆಗಿದೆ. ಕನ್ನಡಿಗರೂ ವಲಸೆ ಬಂದ ಜನರ ಭಾಷೆಯನ್ನೇ ಬಳಸಬಯಸುತ್ತಾರೆ. ನಾಲ್ಕು ಜನ ಬಂಗಾಲಿಗಳು ಜೊತೆಯಾದರೆ ಬಂಗಾಲಿಯನ್ನೇ ಬಳಸುತ್ತಾರೆ. ನಾಲ್ಕು ಜನ ಕನ್ನಡಿಗರು ಒಗ್ಗೂಡಿದರೆ ಇಂಗ್ಲಿಷ್ ಬಳಸುತ್ತಾರೆ. ಇದೇ ವಿಪರ್ಯಾಸ. ಹೀಗೇ ಮುಂದುವರೆದರೆ ಇಡೀ ಕರ್ನಾಟಕವೇ ಕಾಸ್ಮೋಪಾಲಿಟನ್ ರಾಜ್ಯವಾಗಿ ಬಿಡಬಹುದೇ? ಇಲ್ಲಿ ಕನ್ನಡಿಗರೇ ಅಲ್ಪಸಂಖ್ಯಾತರಾಗಿಬಿಡಬಹುದೇ? ಎಂಬ ಆತಂಕಗಳು ಕಣ್ಣೆದುರಿಗಿವೆ. ಆದ್ದರಿಂದ ಭಾಷಾ ಯೋಜನೆಗಳು ತಮ್ಮ ಗುರಿ ಸಾಧಿಸುವಂತಾಗಬೇಕು.

- **ಶಿಕ್ಷಣ ಕ್ಷೇತ್ರದಲ್ಲಿ ಪಠ್ಯಕ್ರಮದ ಸುಧಾರಣೆಯ ಮೂಲಕ ಕನ್ನಡದ ಅಭಿವೃದ್ಧಿ ಸಾಧ್ಯವೇ?**

○ ಪಠ್ಯಕ್ರಮ ಅಗತ್ಯವಾಗಿ ಸುಧಾರಣೆ ಆಗಬೇಕು. ವ್ಯಕ್ತಿತ್ವ ವಿಕಾಸ ಆಗುವಂತಹ ಪಠ್ಯಕ್ರಮ ಬೇಕು. ಆ ಕಾಲದಲ್ಲಿ ನೀತಿ ಚಿಂತಾಮಣಿ, ನೀತಿ ಕಥೆಗಳು ಇರುತ್ತಿದ್ದವು. ಸಾಮೂಹಿಕವಾಗಿ ಅಕ್ಷರಜ್ಞಾನ, ಮಗ್ಗಿ ಹೇಳಿಕೊಡುವುದು ನಡೆಯುತ್ತಿತ್ತು. ಗುಂಪಿನಲ್ಲಿ ಕಲಿಯುತ್ತಿದ್ದದ್ದೂ ಭಾಷೆ ಬಳಕೆಗೆ ಸಹಕಾರಿಯಾಗುತ್ತಿತ್ತು. ದೇಶ ಪ್ರೇಮದ ಬಗ್ಗೆ ತಿಳಿಸಲಾಗುತ್ತಿತ್ತು. ಆಯಾ ವಯಸ್ಸಿಗನುಗುಣವಾದ ವಿಷಯಗಳನ್ನು ಪಠ್ಯದಲ್ಲಿರಿಸುತ್ತಿದ್ದರು. ಅವು ವಿದ್ಯಾರ್ಥಿಗಳಿಗೆ ಅರ್ಥವಾಗುವ ಹಾಗೆ ಇರುತ್ತಿದ್ದವು. ಈಗ ಹಾಗಿಲ್ಲ. ಸಮಿತಿಯ ಸದಸ್ಯರು ನೈತಿಕ ಮಟ್ಟ, ಕಲೆ-ಸಂಸ್ಕೃತಿ ಮುಂತಾದ ವಿಚಾರಗಳ ಕಡೆ ನೋಟ ಹರಿಸುತ್ತಿಲ್ಲ. ಕಡೇ ಪಕ್ಷ ಕೊಡುವವನ್ನೂ ಸರಿಯಾಗಿ ಕೊಡುತ್ತಿಲ್ಲ. ತಪ್ಪುಗಳೇ ಹೆಚ್ಚಾಗಿರುತ್ತವೆ. ಸ್ಥಿತಿ ಹೀಗಿರುವಾಗ ಭಾಷೆ ಬೆಳೆಸೋದಕ್ಕೆ ಅದನ್ನು ಅವಲಂಬಿಸಬಹುದೇ?

ಪಠ್ಯೇತರ ಕ್ರಮದಲ್ಲೂ ಸುಧಾರಣೆಯಾಗಬೇಕು. ಜಾಗತೀಕರಣ ಅಂದುಕೊಳ್ಳುತ್ತಾ ನಮ್ಮ ಸಂಸ್ಕೃತಿಯನ್ನು ನಾವೇ ಬಿಟ್ಟು ಕೊಡುತ್ತಿದ್ದೇವೋ ಏನೋ ಅನ್ನಿಸುತ್ತೆ.

- **ಉದಾರೀಕರಣದ ಇಂದಿನ ಸಂದರ್ಭದಲ್ಲಿ ಇಂಗ್ಲಿಷ್ ಭಾಷೆಯ ಪ್ರಾಬಲ್ಯ ಹೆಚ್ಚಾಗುವುದರಿಂದ ಕನ್ನಡದ ನೆಲೆಯ ಮೇಲೆ ವ್ಯತಿರಿಕ್ತ ಪರಿಣಾಮ ಉಂಟಾಗಬಹುದೇ?**

○ ಉಂಟಾಗಬಹುದು. ಮೊದಲು ಕೈಲಿ ಬರೆಯುತ್ತಾ ಇದ್ದರು. ಈಗ ಕಂಪ್ಯೂಟರ್‌ನಲ್ಲಿ ಬರೀತಾರೆ. ಕಂಪ್ಯೂಟರ್ ಏನಾದರೂ ಕೈಕೊಟ್ಟರೆ ಕೈಲಿ ಬರೆಯೋ ಸಂಸ್ಕೃತೀನೇ ಇಲ್ಲದೇ ಹೋಗುತ್ತೆ. ಯಾಕೆಂದರೆ ಕಂಪ್ಯೂಟರ್ ನಂಬಿಕೊಂಡವನು ಬರೆಯುವ ಅಭ್ಯಾಸ ಕಳೆದುಕೊಳ್ಳುತ್ತಾನೆ. ಹಾಗೆ ಬರಹ ಗೊತ್ತಿಲ್ಲದವನೂ ಕಂಪ್ಯೂಟರ್ ಬಳಸಬಲ್ಲ. ಇದರ ಬಗ್ಗೆ ಎಚ್ಚರ ವಹಿಸಿದೇ ಹೋದರೆ ಇದು ಭಾಷೆಯನ್ನೂ, ನಮ್ಮನ್ನೂ ತಿಂದು ಹಾಕುತ್ತದೆ. ದೊರೆ - ಸೇವಕ ಸಂಸ್ಕೃತಿ ಮತ್ತೆ ಅಸ್ತಿತ್ವಕ್ಕೆ ಬರುತ್ತದೆ. ಮೊದಲು ಅಕ್ಷರಸ್ಥರನ್ನು, ಜ್ಞಾನವಂತರನ್ನು ಸೃಷ್ಟಿಸಬೇಕು. ಅದೇ ಮೂಲನೆಲೆ. ಆಮೇಲೆ ಉದಾರೀಕರಣ, ಜಾಗತೀಕರಣ, ಕಂಪ್ಯೂಟರೀಕರಣ ಮುಂತಾದ ವ್ಯಾಪಾರೀ ಮನೋಭಾವದ ಪ್ರಯೋಗ, ಪ್ರಯತ್ನಗಳು.

- ವ್ಯತಿರಿಕ್ತ ಪರಿಣಾಮ ಆಗುವುದಾದರೆ, ಅದರಿಂದ ಕನ್ನಡವನ್ನು ಉಳಿಸಿಕೊಳ್ಳುವ ಬಗೆ ಹೇಗೆ?

○ ಜಾಗೃತಿಯೊಂದೇ ಶಕ್ತಿ. ಜನ ಜಾಗೃತರಾಗಬೇಕು. ಇದು ನಮ್ಮ ಭಾಷೆ ಎನ್ನುವ ಮಮತೆ ಬೆಳೆಯಬೇಕು. ಕನ್ನಡ ಕಲಿತವರ ಸಂಖ್ಯೆ ಜಾಸ್ತಿಯಾದರೆ ಅನ್ಯಭಾಷೆಗಳ ದಾಳಿಯನ್ನು ನಿಯಂತ್ರಿಸೋದು ಸಾಧ್ಯ. ಕನ್ನಡದ ಜೊತೆಗೆ ಇತರ ಭಾಷೆಗಳನ್ನು ಕಲಿಯಲಿ. ಅಡ್ಡಿಯಿಲ್ಲ. ಆದರೆ ಕನ್ನಡ ಇರಲೇಬೇಕು. ಜನ ಅಂದರೆ ಎಲ್ಲರೂ ಕನ್ನಡವನ್ನೇ ಬಳಸಬೇಕು. ಆಗಲೇ ಕನ್ನಡ ಬೆಳೆಯುವುದು.

ಸಂದರ್ಶನ : ೫

೫.೬.೨೦೦೧

## ಪ್ರೊ. ಬರಗೂರು ರಾಮಚಂದ್ರಪ್ಪ

### (ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಪ್ರಸ್ತುತ ಅಧ್ಯಕ್ಷರು)

- **ಕನ್ನಡದ ಅಭಿವೃದ್ಧಿ ಎಂದರೇನು?**

○ ಕನ್ನಡದ ಅಭಿವೃದ್ಧಿ ಎನ್ನುವುದು ಭಾಷಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ನೆಲೆಗಳ ಅಭಿವೃದ್ಧಿ. ಸಂಸ್ಕೃತಿ ಮತ್ತು ಸಮಾಜದ ಉತ್ಪನ್ನವಾಗಿರುವ ಭಾಷೆ ಅವುಗಳೊಂದಿಗೆ ಅಂತರ್‌ಸಂಬಂಧ ಹೊಂದಿದ್ದು ಒಟ್ಟು ಅಭಿವೃದ್ಧಿಯ ಜೊತೆಗೆ ತಾನೂ ಅಭಿವೃದ್ಧಿಗೊಳ್ಳುತ್ತದೆ.

ಭಾಷೆ ಎರಡು ನೆಲೆಗಳಲ್ಲಿ ಅಭಿವೃದ್ಧಿಯಾಗುತ್ತದೆ

(೧) ಜನ ಬಳಕೆಯಲ್ಲಿ

(೨) ಅಧ್ಯಯನಗಳ ಮೂಲಕ ಸ್ಪಷ್ಟತೆ, ಖಚಿತತೆಯನ್ನು ಪಡೆಯುತ್ತದೆ.

ನಿರ್ದಿಷ್ಟ ಸಾಮಾಜಿಕ ಮತ್ತು ಸಾಂಸ್ಕೃತಿಕ ಸನ್ನಿವೇಶಗಳಲ್ಲಿ ಭಾಷೆ ಬೇರೆ ಬೇರೆ ರೂಪಗಳನ್ನು ಪಡೆಯುವುದರಿಂದ ಭಾಷಾಧ್ಯಯನಕ್ಕೆ ಹೊಸ ಆಯಾಮ ಸಿಕ್ಕಂತಾಗುತ್ತದೆ.

- **ಅಭಿವೃದ್ಧಿಯ ಮಾರ್ಗಗಳಾವುವು?**

○ ಇದು ಏಕಮುಖವಾದದ್ದಲ್ಲ. ಕನ್ನಡದ ಉದ್ಧಾರ ಎಂದರೆ ಅದರ ಸರ್ವಾಂಗೀಣ ಬೆಳವಣಿಗೆ. ಇದು ಆಡಳಿತ, ಶಿಕ್ಷಣ, ನ್ಯಾಯಾಂಗ ಮಾತ್ರ ಅಲ್ಲ. ಆರ್ಥಿಕ, ಕೈಗಾರಿಕಾ ನೀತಿಗಳನ್ನು ಅವಲಂಬಿಸಿರುತ್ತದೆ. ನನ್ನ ಅಭಿಪ್ರಾಯದಲ್ಲಿ ಇದು ಶಿಕ್ಷಣ ಕ್ಷೇತ್ರದಿಂದಲೇ ಶುರುವಾಗಬೇಕು. ಸಂವಹನ ಮಾಧ್ಯಮಗಳು ಜನರನ್ನು ನೇರವಾಗಿ ತಲುಪುವುದರಿಂದ ಇದನ್ನೂ ಒಂದು ಪ್ರಮುಖ ಮಾರ್ಗವಾಗಿ ಪರಿಗಣಿಸಬಹುದು.

- **ಅಭಿವೃದ್ಧಿಯ ಹಾದಿಯಲ್ಲಿರುವ ಆತಂಕಗಳೇನು?**

○ ಕನ್ನಡ ಭಾಷೆಯ ಅಭಿವೃದ್ಧಿ ರಾಜಕೀಯ, ಆರ್ಥಿಕ, ಔದ್ಯೋಗಿಕ, ಸಾಮಾಜಿಕ ರಂಗಗಳಲ್ಲಿ ಆತಂಕಗಳನ್ನೆದುರಿಸುತ್ತಿದೆ. ಮತ್ತೊಂದು ಕಡೆ ಜಾಗತೀಕರಣ, ಉದಾರೀಕರಣ ನೀತಿಯಿಂದಾಗಿಯೂ ಕನ್ನಡ ಅಷ್ಟೇ ಯಾಕೆ ಎಲ್ಲ ಸ್ಥಳೀಯ ಭಾಷೆಗಳೂ ಆತಂಕದಲ್ಲಿವೆ. ಈ ನೀತಿಗಳಿಂದಾಗಿ ಜೀವನ ಶೈಲಿ ಬದಲಾಗುತ್ತದೆ. ಅದೇ ಸಂಸ್ಕೃತಿಗೆ, ಭಾಷೆಗೆ ಒದಗುವ ದೊಡ್ಡ ಆತಂಕ.

ಕನ್ನಡ ಭಾಷಿಕರ ಕೀಳರಿಮೆ. ಉದ್ಯೋಗಾವಕಾಶಗಳಲ್ಲಿ ಕನ್ನಡ ಭಾಷಿಕರಿಗೆ ಆದ್ಯತೆಯ ಕೊರತೆ, ಮೂಲ ಸಂಸ್ಕೃತಿಯ ಮೇಲೆ ಪರಕೀಯ ಸಾಂಸ್ಕೃತಿಕ ವಿನ್ಯಾಸಗಳ ಪ್ರಭಾವ ಇಂತಹ ಆತಂಕಗಳೂ ಇವೆ. ಇವೆಲ್ಲದರ ಮಧ್ಯೆ ಕನ್ನಡ ಉಳಿಯಬೇಕಾಗಿದೆ.

- **ಅವುಗಳಿಗೆ ಪರಿಹಾರ ಹೇಗೆ?**

○ ಕನ್ನಡ ಪರವಾದ ವಿವೇಕ ಮತ್ತು ಔಚಿತ್ಯ ಬೇಕು. ಉದಾಹರಣೆಗೆ ಕಂಪ್ಯೂಟರ್ ಜ್ಞಾನಕ್ಕೆ ಇಂಗ್ಲಿಷ್ ಬೇಕು ಅನ್ನುವ ಭಾವನೆ ಇದೆ. ಅದಕ್ಕೆ ೧೦ನೇ ತರಗತಿಯ ಇಂಗ್ಲಿಷ್ ಜ್ಞಾನವೇ ಸಾಕು. ಕಂಪ್ಯೂಟರ್ ತಂತ್ರಾಂಶಗಳ ಉತ್ಪಾದನೆಯಲ್ಲಿ ಮೇಲುಗೈ ಸಾಧಿಸಿರುವ ಜಪಾನ್ ಸಹ ಎಲ್ಲಾ ತಂತ್ರಾಂಶಗಳನ್ನು ಜಪಾನೀ ಭಾಷೆಯಲ್ಲೇ ಮಾಡುತ್ತದೆ. ರಫ್ತು ಮಾಡುವುದನ್ನು ಮಾತ್ರ ಇಂಗ್ಲಿಷಿನಲ್ಲಿ ತಯಾರಿಸುತ್ತದೆ. ಅದೇ ರೀತಿ ನಾವೇಕೆ ಆಂತರಿಕ ವ್ಯವಹಾರಗಳಿಗೆ ಕನ್ನಡ ಬಳಸಿಕೊಳ್ಳುವಷ್ಟು ವಿವೇಕವಂತರಾಗಬಾರದು?

ಕೇಂದ್ರೋದ್ಯಮ ಮತ್ತು ಕೈಗಾರಿಕೆಗಳಲ್ಲಿ ಸ್ಥಳೀಯರಿಗೆ ಉದ್ಯೋಗವಕಾಶ ಕಲ್ಪಿಸುವಂತಹ ರಾಷ್ಟ್ರೀಯ ನೀತಿ ಬೇಕು. ೧೯೬೮ರ 'ಕಮಿಶನ್ ಫಾರ್ ನ್ಯಾಷನಲ್ ಇಂಟಿಗ್ರೇಷನ್' ವರದಿಯಲ್ಲಿ ಇಂತಹ ಶಿಫಾರಸ್ಸಿದೆ. ಬಹುರಾಷ್ಟ್ರೀಯ ಕಂಪೆನಿಗಳಿಗೂ ಇದು ಅನ್ವಯಿಸಬೇಕು. ಆಗ ಭಾಷೆ ಬೆಳೆಯುವುದು ಅನಿವಾರ್ಯವಾಗುತ್ತದೆ.

- **ಕನ್ನಡದ ಅಭಿವೃದ್ಧಿಯ ದಿಕ್ಕಿನಲ್ಲಿ ಈವರೆಗೂ ಆಗಿರುವ ಪ್ರಯತ್ನಗಳ ಬಗ್ಗೆ ನಿಮ್ಮ ಅಭಿಪ್ರಾಯ?**

○ ಪ್ರಯತ್ನಗಳು ಸಾಕಷ್ಟಾಗಿವೆ. ನಿಧಾನವಾಗಿದೆ ಅಷ್ಟೆ. ಬದಲಾಗಿರುವ ಕಾಲದ ಇಂದಿನ ಸಂದರ್ಭದಲ್ಲಿ ನಿಂತು ನೋಡುವಾಗ ಭಾಷೆ ಇಂದು ಎದುರಿಸುತ್ತಿರುವ ಸವಾಲುಗಳೇ ಬೇರೆ ಎನ್ನುವುದನ್ನು ಗಮನಿಸಬೇಕು. ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ಇಲ್ಲಿ ಭಾಷಾ ಚಳವಳಿ ಹಾಗೂ ಸಮೂಹ ಚಳವಳಿ ಒಟ್ಟೊಟ್ಟಿಗೆ ನಡೆದಿಲ್ಲ. ಜನರೆಲ್ಲ ಒಟ್ಟಿಗೆ ಸೇರಿ ನಡೆಸುವ ಸಾಂಸ್ಕೃತಿಕ ಸಮೂಹ ಚಳವಳಿಯ ಜೊತೆ ಭಾಷಾ ಚಳವಳಿಯೂ ಕೂಡಿಕೊಂಡಿದ್ದರೆ ಚಳವಳಿಯಲ್ಲಿ ಪಾಲ್ಗೊಂಡ ಎಲ್ಲರಿಗೂ ಭಾಷಾ ಸಮಸ್ಯೆಯ ಅರಿವಾಗಿರುತ್ತಿತ್ತು. ಅದೇ ಸಾಕಾಗಿತ್ತು ಅವರಲ್ಲಿ ಭಾಷೆಯ ಬಗ್ಗೆ ಜಾಗೃತಿ ಮೂಡಿಸಲು. ಈ ಕೆಲಸ ಕೇರಳ, ತಮಿಳುನಾಡು, ಪಶ್ಚಿಮ ಬಂಗಾಳಗಳಲ್ಲಿ ಆಗಿದೆ. ಜನರ ಮುಖಾಂತರ ಭಾಷೆಯನ್ನು ನೋಡುವ ಪ್ರಯತ್ನಗಳಾಗಬೇಕು. ಜನ ಬದುಕಿದರೆ ಭಾಷೆ ಬದುಕುತ್ತದೆ ಎಂಬ ಎಚ್ಚರವೂ ನಮಗೆ ಬೇಕು.

- **ಈ ದಿಸೆಯಲ್ಲಿ ಸರ್ಕಾರದ ಪ್ರಯತ್ನಗಳು ತೃಪ್ತಿಕರವಾಗಿದೆಯೇ?**

○ ಸರ್ಕಾರಗಳಿಗೆ ಇಚ್ಛಾಶಕ್ತಿ ಕಡಿಮೆ. ಜನರಿಂದ ಒತ್ತಡ ಬಂದಾಗೆಲ್ಲ ಸರ್ಕಾರಗಳು ಸಹಕಾರ ನೀಡುತ್ತಾ ಬಂದಿವೆ. ಪ್ರಜಾಪ್ರಭುತ್ವದಲ್ಲಿ ಸರ್ಕಾರದ ಪಾರದರ್ಶಕತೆಗೂ ಭಾಷಾಬಳಕೆಗೂ ಸಂಬಂಧವಿರುತ್ತದೆ. ಇದನ್ನು ಸರ್ಕಾರ ಮನವರಿತಾಗ ಮಾತ್ರ ಭಾಷೆ ಬೆಳೆಯುತ್ತದೆ. ಭಾಷೆಯನ್ನು ಸರ್ಕಾರ ಅಭಿಮಾನಕ್ಕಾಗಿ ಬಳಸಲಿ ಎಂದು ನಾನು ಹೇಳುವುದಿಲ್ಲ. ಪ್ರಜಾಪ್ರಭುತ್ವದ ಮೌಲ್ಯವನ್ನು ಎತ್ತಿ ಹಿಡಿಯುವುದಕ್ಕಾಗಿ ಬಳಸಲಿ, ಮತ ನೀಡಿದವನಿಗೆ ತಾನು ಉತ್ತರದಾಯಿ ಎಂದು ಭಾವಿಸುವುದಾದರೆ ಜನರ ಭಾಷೆಯನ್ನೇ ಬಳಸಲಿ.

ಭಾಷೆ ಬೆಳವಣಿಗೆ ಬಗ್ಗೆ ಮಾತನಾಡುವಾಗೆಲ್ಲ ಆಡಳಿತ ಕ್ಷೇತ್ರ ತೀವ್ರ ಟೀಕೆಗೆ ಗುರಿಯಾಗುತ್ತಿದೆ. ಐಎಎಸ್ ಅಧಿಕಾರಿಗಳು ಕನ್ನಡ ಬಳಸುವತ್ತ ನಿರ್ಲಕ್ಷ್ಯ ತೋರುತ್ತಾರೆ ಎಂಬ ಆರೋಪವಿದೆ. ಎರಡು, ಮೂರು ದಶಕಗಳ ಹಿಂದೆ ಈ ಆರೋಪ ನಿಜವಿದ್ದಿರಬಹುದು. ಆದರೀಗ ಸನ್ನಿವೇಶ ಬದಲಾಗಿದೆ. ಐಎಎಸ್ ಅಧಿಕಾರಿಗಳಿಗೆ ಮಸ್ಸೂರಿಯಲ್ಲಿ ನೀಡುವ ಮೊದಲ

ತರಬೇತಿಯಲ್ಲೇ ಅವರು ಆಯ್ಕೆಯಾದ ಪ್ರಾಂತ್ಯದ ಅಧಿಕೃತ ಭಾಷೆ ಕಲಿಕೆಯನ್ನು ಕಡ್ಡಾಯ ಮಾಡಲಾಗಿದೆ. ತರಬೇತಿಯ ನಂತರವೂ ಸ್ವಲ್ಪ ಕಾಲ ಕಲಿಕಾವೇತನ ನೀಡಿ ಅವರಿಗೆ ಕನ್ನಡ ಕಲಿಸಲಾಗುತ್ತಿದೆ. ಈಗೀಗ ಬರುತ್ತಿರುವ ಐಎಎಸ್ ಅಧಿಕಾರಿಗಳು ಆಡಳಿತಾತ್ಮಕವಾಗಿ ಕನ್ನಡವನ್ನು ಬಳಸುತ್ತಲೇ ಇದ್ದಾರೆ. ಆದರೆ ಸಮಸ್ಯೆ ಇರುವುದೇ ಬೇರೆ ಕಡೆ.

● **ಹಾಗಾದರೆ ಸಮಸ್ಯೆ ಎಲ್ಲಿದೆ ಅಂತ ಭಾವಿಸುತ್ತೀರಿ? ಅದಕ್ಕೆ ಏನು ಪರಿಹಾರ ಸೂಚಿಸುತ್ತೀರಿ?**

○ ಆಡಳಿತಾತ್ಮಕವಾಗಿ ಬಳಸಬೇಕಾದ ಕನ್ನಡದ ಪರಿಭಾಷೆ ಹೇಗಿರಬೇಕು ಎನ್ನುವುದನ್ನು ತಿಳಿಸಿಕೊಡಬೇಕು. ಅದಕ್ಕೆ ಸಂಬಂಧಪಟ್ಟ ಪಾರಿಭಾಷಿಕ ಪದಕೋಶ, ಅರ್ಥಕೋಶ, ಪದ ವಿವರಣ ಕೋಶ, ಎಲ್ಲ ಇಲಾಖೆಗಳಿಗೂ ಸಂಬಂಧಿಸಿದ ಮೂಲಕಾಯಿದೆಗಳು (ಕನ್ನಡದಲ್ಲಿ) ಇವನ್ನೆಲ್ಲ ಎಲ್ಲ ಇಲಾಖಾ ಕಛೇರಿಗಳಿಗೂ ಪೂರೈಸಬೇಕು. ಅದೇ ರೀತಿ ಶಿಕ್ಷಣ ಕ್ಷೇತ್ರದಲ್ಲಿ ಬೋಧನಾ-ಬೋಧಕೇತರ ಮಟ್ಟದಲ್ಲಿ ಸುಧಾರಣೆಯಾಗಬೇಕು. ಕನ್ನಡದಲ್ಲಿ ಕಲಿತವರಿಗೆ ಉದ್ಯೋಗದಲ್ಲಿ ಮೀಸಲಾತಿ ನೀಡುತ್ತೇವೆ ಎಂದು ಹೇಳಿದರೆ, ಜನರಿಗೆ ಬೇಕಿರಲಿ ಬೇಡದಿರಲಿ, ಉದ್ಯೋಗಕ್ಕೋಸ್ಕರವಾದರೂ ಕನ್ನಡದಲ್ಲಿ ಕಲಿಯುತ್ತಾರೆ.

ಪರಿಹಾರ ಅನ್ನುತ್ತೀರಿ. ನೋಡಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರವೇ ಈಗ ಆಡಳಿತ ಕ್ಷೇತ್ರದ ಮೂಲ ಸಾಮಗ್ರಿಗಳನ್ನು ಸಿದ್ಧಪಡಿಸುತ್ತಿದೆ. ಉದಾಹರಣೆಗೆ ಭಾಷಾಂತರ ಇಲಾಖೆಯ ಸಹಕಾರದೊಂದಿಗೆ ಪ್ರಾಧಿಕಾರ, ಸರ್ಕಾರದ ಎಲ್ಲ ಇಲಾಖೆಗಳ ಮೂಲ ಕಾಯಿದೆಗಳನ್ನು ಕನ್ನಡಕ್ಕೆ ತರುತ್ತಿದೆ. ಆಡಳಿತ ಪದ ವಿವರಣ ಕೋಶ; ಕಂಪ್ಯೂಟರ್ ಬಗ್ಗೆ ಪದ ವಿವರಣ ಕೋಶ; ದೈನಂದಿನ ಆಡಳಿತಕ್ಕೆ ಸಂಬಂಧಿಸಿದಂತೆ, ವಿಶ್ವವಿದ್ಯಾಲಯದ ಆಡಳಿತ, ಸಮಾಜ ವಿಜ್ಞಾನಗಳ ಕ್ಷೇತ್ರ, ಸಮೂಹ ಮಾಧ್ಯಮಗಳಿಗೆ ಸಂಬಂಧಪಟ್ಟಂತೆ ನಾನಾ ಬಗೆಯ ಪದ ವಿವರಣ ಕೋಶಗಳನ್ನು ತಯಾರಿಸುತ್ತಿದ್ದೇವೆ. ಆಡಳಿತಾತ್ಮಕವಾಗಿ ಕಂಪ್ಯೂಟರ್‌ನ ಯಶಸ್ವಿ ಬಳಕೆಗಾಗಿ ವಿಶೇಷ ತಂತ್ರಾಂಶಗಳನ್ನು ಸಿದ್ಧಪಡಿಸುತ್ತಿದ್ದೇವೆ. ಸಂಪೂರ್ಣವಾಗಿ ಆಡಳಿತ ಕನ್ನಡದ ಕಂಪ್ಯೂಟರೀಕರಣ ಮಾಡುತ್ತಿದ್ದೇವೆ. ಕನ್ನಡದ ಸಾದುರೂಪಗಳನ್ನು ಕುರಿತೂ ಕೋಶವೊಂದನ್ನು ತಯಾರಿಸುತ್ತಿದ್ದೇವೆ. ಶಿಕ್ಷಣ ಕ್ಷೇತ್ರದ ಸುಧಾರಣೆಗಾಗಿ 'ನೀತಿ ನಿರೂಪಣಾ ವರದಿ' ತಯಾರಿಸಿ ಸರ್ಕಾರಕ್ಕೆ ಕೊಟ್ಟಿದ್ದೇವೆ. ಅದಕ್ಕೆ ಸರ್ಕಾರ ತಾತ್ವಿಕ ಅನುಮೋದನೆಯೂ ಸಿಕ್ಕಿದೆ. ಆಡಳಿತ ನಡೆಸುವುದಕ್ಕೆ ಬೇಕಾದ ಪೂರಕ ಪರಿಕರಗಳನ್ನೇ ಪೂರೈಸದೆ, ಬರಿದೇ ಕನ್ನಡ ಬಳಸಿ ಅಥವಾ ಬಳಸುತ್ತಿಲ್ಲ ಎಂದು ಟೀಕಿಸಿದರೆ ಹೇಗೆ? ಉದಾಹರಣೆಗೆ ಬೆರಳಚ್ಚು ಯಂತ್ರ ಕೊಟ್ಟೆವು. ಬೆರಳಚ್ಚು ಮಾಡಲು ತರಬೇತಿ ಕೊಟ್ಟೆವು. ಆದರೆ ಬೆರಳಚ್ಚು ಮಾಡಬೇಕಾದ ವಸ್ತುವಿಗೊಂದು ಭಾಷೆಯನ್ನೇ ಕೊಡದಿದ್ದರೆ ಅವರಾದರೂ ಏನನ್ನು ಬೆರಳಚ್ಚು ಮಾಡಬೇಕು?

● **ಕನ್ನಡವನ್ನು ಅಭಿವೃದ್ಧಿಗೊಳಿಸುವಲ್ಲಿ ಸಂವಹನ ಮಾಧ್ಯಮಗಳ ಪಾತ್ರವೇನು?**

○ ಆಧುನಿಕ ಸಮೂಹ ಸಂವಹನ ಮಾಧ್ಯಮಗಳು ತಮಗೆ ತಾವೇ ಕನ್ನಡವನ್ನು ಬಳಸುವುದೇ ಒಂದು ಪ್ರಮುಖ ಬೆಳವಣಿಗೆಯಾಗುತ್ತದೆ. ಈ ಮೂಲಕ ಕನ್ನಡದಂಥ ಭಾಷೆಯ ಪ್ರಸ್ತುತತೆಯನ್ನು ಸಾದರಪಡಿಸಿದಂತಾಗುತ್ತದೆ. ಆಧುನಿಕ ಸಂದರ್ಭದಲ್ಲಿ ಇಂಗ್ಲಿಷ್ ಒಂದೇ ಅನಿವಾರ್ಯವೆಂಬ ಮೌಢ್ಯವನ್ನು ಹೋಗಲಾಡಿಸಿದಂತಾಗುತ್ತದೆ. ಬಳಕೆಯಾದ ಯಾವುದೇ ಭಾಷೆಯು ಕಾಲಕ್ಕೆ ತಕ್ಕಂತೆ ಸಜ್ಜಾಗುತ್ತದೆ. ಇದನ್ನು ಆಧುನಿಕ ಸಮೂಹ ಸಂವಹನ ಮಾಧ್ಯಮಗಳು ಜನರಿಗೆ ಮನವರಿಕೆ ಮಾಡಿಕೊಡಬೇಕು. ಸ್ವತಃ ತಂತಮ್ಮ ಮಾಧ್ಯಮಗಳಲ್ಲಿ ಕನ್ನಡದ ಬಳಕೆಯನ್ನು ವೃದ್ಧಿಸಿಕೊಳ್ಳಬೇಕು. ಜರ್ಮನಿ, ರಷ್ಯಾ, ಚೈನಾ, ಜಪಾನ್ - ಮುಂತಾದ ದೇಶಗಳಲ್ಲಿ ಅಲ್ಲಿನ ಭಾಷೆ ಎಲ್ಲ ಕ್ಷೇತ್ರಕ್ಕೂ ವ್ಯಾಪಿಸುವುದಾದರೆ ಕನ್ನಡದ ಸಂದರ್ಭದಲ್ಲಿ ಯಾಕೆ ಸಾಧ್ಯವಿಲ್ಲ ಎಂಬ ಅಂಶವನ್ನು ಜನರು ಮನಗಾಣುವಂತೆ ಮಾಡಬೇಕು. ಅದರ

ಬದಲು 'ಅಮೇರಿಕವೇ ಆದರ್ಶ'ವೆಂಬ ಭಾವನೆ ಬೆಳೆಸಿದರೆ ಸ್ಥಳೀಯ ಭಾಷೆ, ಸಂಸ್ಕೃತಿಗಳಿಗೆ ಮಾಡಿದ ಅನ್ಯಾಯವಷ್ಟೇ ಆಗುವುದಿಲ್ಲ, ಭಾಷಾ ಬೆಳವಣಿಗೆಯ ಬಗೆಗಿನ ಮೌಢ್ಯದ ಬಿತ್ತರವೂ ಆಗುತ್ತದೆ. ಜನರಿಗೆ ಸೂಕ್ತ ತಿಳುವಳಿಕೆ, ಮಾಹಿತಿ ಮತ್ತು ವಸ್ತುಸ್ಥಿತಿಯ ಪರಿಚಯ ನೀಡುವಲ್ಲಿ ಈ ಮಾಧ್ಯಮಗಳ ಪಾತ್ರ ಮಹತ್ತರ.

● **ಇಂತಹ ಪಾತ್ರವನ್ನು ನಿರ್ವಹಿಸುವಲ್ಲಿ ಕನ್ನಡದ ಮಾಧ್ಯಮಗಳು ಯಶಸ್ವಿಯಾಗಿವೆಯೇ?**

○ ಮಾಧ್ಯಮಗಳು ತಾವು ಬಳಸುವ ಭಾಷೆಗೆ ಬೇಕಾದ ಒತ್ತಡಗಳನ್ನು ತಾವೇ ನಿರ್ಮಿಸಿಕೊಂಡಿರುತ್ತವೆ. ಉದಾಹರಣೆಗೆ ಪತ್ರಿಕೆಗಳಲ್ಲಿ ಸ್ಥಳಾಭಾವ. ಒಂದು ಶೀರ್ಷಿಕೆಯನ್ನು ಹೊಂದಿಸುವಾಗ ಇರುವ ಸ್ಥಳ ಮಿತಿಯಲ್ಲೇ ಭಾಷೆಯನ್ನು ಪ್ರಯೋಗಿಸುತ್ತವೆ. ಹೊಸ ಪರಿಭಾಷೆ ಹುಟ್ಟಿಕೊಳ್ಳುತ್ತದೆ. ಇದರಲ್ಲೇ ಸ್ಪರ್ಧಾತ್ಮಕತೆಯೂ ಇದೆ. ಓದುಗರನ್ನು ತಲುಪಲೂ ಭಾಷಿಕ ಕಸರತ್ತುಗಳು ನಡೆಯುತ್ತವೆ. ಮತ್ತೊಂದು ಅಂಶ ಗಮನಿಸಿ, ಓದುಗರ ಅಗತ್ಯಗಳಿಗನುಸಾರವಾಗಿ ಈಗೀಗ ಕೃಷಿ, ಕ್ರೀಡೆ, ವಾಣಿಜ್ಯ, ಸಾಹಿತ್ಯ ಮುಂತಾದ ವಿಷಯಗಳಲ್ಲಿ ಪತ್ರಿಕೆಗಳು ಪುರವಣಿಗಳನ್ನು ನೀಡುತ್ತಿವೆ. ಇದರಿಂದಾಗಿ ಆ ಕ್ಷೇತ್ರಗಳಲ್ಲಿ ಹೊಸ ಪರಿಭಾಷೆ, ಸೃಷ್ಟಿಯಾಗುತ್ತದೆ.

ಆಕಾಶವಾಣಿಯಲ್ಲೂ ಇಂತಹ ಪ್ರಯತ್ನಗಳಾಗಿವೆ. ಕೃಷಿರಂಗ, ಕ್ರೀಡಾ ವೀಕ್ಷಕ ವಿವರಣೆ, ವಾರ್ತೆ-ಸಮಾಚಾರ ಮುಂತಾದ ಕಾರ್ಯಕ್ರಮಗಳಿಗೆ ತಮ್ಮದೇ ಶೈಲಿಯ ಭಾಷೆ ಬೆಳೆಸಿಕೊಂಡಿದೆ. ಆಕಾಶವಾಣಿ ಕಾಲದ ಒತ್ತಡ ಎದುರಿಸುತ್ತದೆ. ಅದಕ್ಕೆ ತಕ್ಕಂತೆ ಭಾಷೆಯನ್ನು ರೂಪಿಸಿಕೊಳ್ಳುತ್ತದೆ.

ದೂರದರ್ಶನ ಮಾಧ್ಯಮವೇ ಈ ನಿಟ್ಟಿನಲ್ಲಿ ಇನ್ನೂ ಅಷ್ಟು ಕೆಲಸ ಮಾಡಿಲ್ಲ. ಇಲ್ಲಿ ಮನರಂಜನೆಯೇ ಮುಖ್ಯ ಆಗಿಬಿಟ್ಟಿದೆ. ಮನರಂಜನೆಯ ನಡುವೆಯೂ ಸಂಸ್ಕೃತಿ, ಭಾಷೆ ಇವುಗಳ ಪರಿಚಯವನ್ನೂ ಮಾಡಿಕೊಡುವ ಕೆಲಸ ಮಾಡಬೇಕು. ಜನರಿಗೆ ಮನರಂಜನೆಯೂ ಬೇಕು. ಅದನ್ನೇ ನಾವು ಕೊಡಬೇಕು ಎಂದು ಒಂದು ಮಾಧ್ಯಮವೇ ಯಾಕೆ ತೀರ್ಮಾನ ಮಾಡಿಕೊಂಡುಬಿಡಬೇಕು. ಜನರಲ್ಲೂ ಒಂದು ಅಭಿರುಚಿಯನ್ನು ಬೆಳೆಸುವ ಪ್ರಯತ್ನವನ್ನೇಕೆ ಮಾಡಬಾರದು? ಆ ಪ್ರಯತ್ನದ ಒಂದು ಹೆಜ್ಜೆಯಾಗಿ ಮನರಂಜನೆಗಿಂತ ಭಿನ್ನವಾದುದನ್ನು ಜನರಿಗೆ ಕೊಟ್ಟು, ಆ ಬಗ್ಗೆ ಅವರಿಗೆ ಆಸಕ್ತಿ ಬೆಳೆಯುವ ಹಾಗೆ ಮಾಡುವ ಸಾಧ್ಯತೆಗಳೂ ಈ ಪರಿಣಾಮಕಾರಿ ಮಾಧ್ಯಮಕ್ಕಿದೆ. ಆದರೆ ಆ ಕೆಲಸ ಅಷ್ಟು ಯಶಸ್ವಿಯಾಗಿ ಆಗುತ್ತಿಲ್ಲ.

● **ಹಾಗಾದರೆ ಅದು ಮುಂದೆ ಇಡಬೇಕಾದ ಹೆಜ್ಜೆಗಳ ಸ್ವರೂಪ ಏನು?**

○ ಈವತ್ತಿನ ಸಂದರ್ಭದಲ್ಲಿ ಮಾಧ್ಯಮವೇ ಉದ್ಯಮ ಆಗಿಬಿಟ್ಟಿದೆ. ಬಂಡವಾಳ ತೊಡಗಿಸಿ ವಾಹಿನಿಗಳನ್ನೂ ಖಾಸಗಿ ವಾಹಿನಿಗಳನ್ನೂ ಆರಂಭಿಸುತ್ತಿರುವಾಗ ಲಾಭದ ಆಲೋಚನೆ ಅವರಿಗಿದ್ದೇ ಇರುತ್ತದೆ. ಸಮಾಜದ ಅಭಿರುಚಿಯನ್ನಾಗಲೀ ಅಥವಾ ಒಂದು ಸಾಂಸ್ಕೃತಿಕ ಅಭಿರುಚಿಯನ್ನು, ಸದಭಿರುಚಿಯನ್ನು ನಿರ್ಮಿಸುವುದನ್ನಾಗಲೀ ಮಾಡಬೇಕೆಂದು ಯೋಚಿಸುವುದಕ್ಕಿಂತಲೂ ತಮಗ್ಯಾವುದು ಲಾಭಕರ ಎಂದು ಯೋಚಿಸುವುದೇ ಜಾಸ್ತಿಯಾಗಿದೆ. ದೂರದರ್ಶನದಂತಹ ಪ್ರಭಾವಿ ಮಾಧ್ಯಮವನ್ನು ಸಂಪೂರ್ಣವಾಗಿ ಉದ್ಯಮದಂತೆ ಮಾಡಿಕೊಳ್ಳದೆ ಸಾಂಸ್ಕೃತಿಕ ಸಂಸ್ಥೆಯಂತೆಯೂ ಭಾವಿಸಿದರೆ ಒಳ್ಳೆಯದು.

● **ಸಂವಹನ ಮಾಧ್ಯಮಗಳಿಗೆ ಶಿಷ್ಟೀಕೃತ ಭಾಷೆಯ ಅಗತ್ಯವಿದೆಯೆ?**

○ ಭಾಷಾ ಶಿಷ್ಟೀಕರಣ ಅಥವಾ ಪ್ರಮಾಣೀಕರಣ ಎನ್ನುವುದು ಯಾವ ಕ್ಷೇತ್ರಕ್ಕೆ ಅನ್ವಯಿಸಬಹುದಾದ ವಿಷಯ ಎಂಬುದಿಲ್ಲಿ ಮುಖ್ಯ. ಕರ್ನಾಟಕದಲ್ಲಿ ಒಂದೇ ರೀತಿಯ ಕನ್ನಡವಿಲ್ಲ. 'ಕನ್ನಡಗಳು' ಬಳಕೆಯಲ್ಲಿವೆ. ಕನ್ನಡವು ವಿವಿಧ ಪ್ರಾದೇಶಿಕ

ವೈಶಿಷ್ಟ್ಯಗಳಿಗೆ ಅನುಗುಣವಾಗಿ ವಿಭಿನ್ನ ಸ್ವರೂಪಗಳನ್ನು ಪಡೆದಿದೆ. ಇಂಥ ಪ್ರಾದೇಶಿಕ ವೈಶಿಷ್ಟ್ಯಗಳನ್ನು ಪ್ರಜ್ಞಾಪೂರ್ವಕವಾಗಿ ಬದಲಾಯಿಸಲಾಗದು. ಹಾಗೆ ಬದಲಾಯಿಸುವುದೂ ಸರಿಯಲ್ಲ. ಆದರೆ ವಿಭಿನ್ನ ಪ್ರದೇಶದ ಕನ್ನಡ ಜನರ ನಡುವೆ ಅಂತರ್ ಸಂಬಂಧ ಬೆಳೆಯುತ್ತಾ ಹೋದಂತೆ ಭಾಷಾ ಬಳಕೆಯಲ್ಲೂ ಕೆಲವು ಬದಲಾವಣೆಗಳು ಆಗುತ್ತ ಹೋಗುತ್ತವೆ. ಇದೊಂದು ಸ್ವಾಭಾವಿಕ ಪ್ರಕ್ರಿಯೆ.

- **ಭಾಷೆಯನ್ನು ಆಧುನಿಕಗೊಳಿಸುವ ನಿಟ್ಟಿನಲ್ಲಿ ಸಂವಹನ ಮಾಧ್ಯಮಗಳು ಕೆಲಸ ಮಾಡುತ್ತಿವೆಯೆ?**

○ ಖಂಡಿತಾ ಮಾಡುತ್ತಿವೆ. ಆಧುನಿಕ ಸಂದರ್ಭದಲ್ಲಿ ಹೊಸ ತಂತ್ರಜ್ಞಾನ, ವಿವಿಧ ರಾಜ್ಯ, ದೇಶಗಳ ಸಂಬಂಧ, ರಾಜಕೀಯ ವ್ಯವಸ್ಥೆಯ ಪರಿಣಾಮ, ಆರ್ಥಿಕ ಬೆಳವಣಿಗೆ ಇಂಥ ಕಾರಣಗಳಿಂದ ಭಾಷಾ ಆಧುನೀಕರಣ ನಡೆಯುತ್ತಲೇ ಇರುತ್ತದೆ. ಇದು ಮಾಧ್ಯಮಗಳಿಗೂ ಅಗತ್ಯ. ಹಾಗೇ ಭಾಷಾಂತರದ ಸಂದರ್ಭದಲ್ಲಿ ಹೊಸ ಪದಗಳು ರೂಪುಗೊಳ್ಳುತ್ತವೆ. ಕೆಲವು ಪದಗಳು ಜನರ ಪರೀಕ್ಷೆಯಲ್ಲಿ ತೇರ್ಗಡೆ ಹೊಂದುವುದಿಲ್ಲ. ಅಂದರೆ ಕನ್ನಡ ಭಾಷೆಯ ಜಾಯಮಾನಕ್ಕೆ ಹೊಂದುವುದಿಲ್ಲ. ಅಂಥ ಪದಗಳು ಬಳಕೆಗೆ ಬಾರದೆ ಪರಕೀಯವಾಗಿಯೇ ಉಳಿಯುತ್ತವೆ. ಉದಾ : ಆರಕ್ಷಕ, ಅಭಿಯಂತರ ಇತ್ಯಾದಿ. ಅನ್ಯಭಾಷಾ ಸ್ವೀಕರಣದ ಬಗ್ಗೆಯೂ ಇದೇ ನೆಲೆಯಲ್ಲಿ ಚಿಂತಿಸಬಹುದು. ತಹಶೀಲ್ದಾರ್, ಅಮಲ್ದಾರ್, ಪೊಲೀಸ್ ಮುಂತಾದ ಅನೇಕ ಪದಗಳು ಅನ್ಯಭಾಷೆಗಳಿಂದ ಬಂದು ಈಗ ಕನ್ನಡದ ಪದಗಳೇ ಆಗಿವೆ. ಮಾಧ್ಯಮಗಳೂ ಕೂಡ ಇಂತಹ ಕೆಲಸ ಮಾಡಬೇಕಾಗಿದೆ, ಮಾಡುತ್ತಿವೆ.

- **ಭಾಷಾ ಯೋಜನೆ, ಭಾಷಾನೀತಿ ರಚನೆಯಿಂದ ಕನ್ನಡ ಎಷ್ಟರ ಮಟ್ಟಿಗೆ ಬೆಳೆಯುತ್ತದೆ?**

○ ಯೋಜಿತ ಪ್ರಯತ್ನಗಳಿಲ್ಲದೆ ಹೋದರೆ ಕನ್ನಡ ಬೆಳೆಯೋದಾದರೂ ಹೇಗೆ? ಭಾಷಾ ಯೋಜನೆಗಳು ಸಾಕಷ್ಟು ಫಲ ನೀಡುತ್ತಿವೆ. ಭಾಷಿಕ ಅಲ್ಪಸಂಖ್ಯಾತರಿಗೆ ಕನ್ನಡ ಕಲಿಸುವ ಯೋಜನೆ ಅಂತ ಈವತ್ತು ಮಸೀದಿಗಳಲ್ಲಿ ಕನ್ನಡ ಕಲಿಸುವ ಕೆಲಸ ನಡೆಯುತ್ತಿದೆ. ನಮ್ಮ ಯೋಜನೆಗಳು ಎಷ್ಟು ಪರಿಣಾಮಕಾರಿಯಾಗಿವೆ ಎಂದರೆ ತಮಿಳುನಾಡು ಸರ್ಕಾರ ಸಹ ನಮ್ಮ ಪ್ರಾಧಿಕಾರದ ಭಾಷಾ ಯೋಜನೆಗಳ ಮಾಹಿತಿ ತರಿಸಿಕೊಂಡು ತಮಿಳು ಅಭಿವೃದ್ಧಿ ವಿಭಾಗವೊಂದನ್ನು ಪ್ರಾರಂಭಿಸಿದೆ.

- **ಹಾಗಾದರೆ ಸರ್ಕಾರ ರೂಪಿಸಿರುವ ಭಾಷಾ ಯೋಜನೆಗಳಿಂದ ಕನ್ನಡದ ಅಭಿವೃದ್ಧಿ ಸಾಧಿತವಾಗಿದೆ ಎನ್ನುವಿರಾ?**

○ ಪೂರ್ಣವಾಗಿ ಸಾಧಿತವಾಗಿದೆ ಅಂತ ಹೇಳಲಾಗುವುದಿಲ್ಲ. ಪ್ರಯತ್ನ ನಡೆಯುತ್ತಿದೆ. ನಿಧಾನ ಗತಿಯಲ್ಲಿದೆ. ಕನ್ನಡಪರ ಚಿಂತಕರೂ ಭಾಷಾಭಿವೃದ್ಧಿಯ ಕ್ರಿಯಾಯೋಜನೆಗಳನ್ನು ಸಿದ್ಧಪಡಿಸಿಕೊಟ್ಟರೆ ಸರ್ಕಾರಕ್ಕೆ ನೆರವಾಗಬಹುದು. ಭಾಷಾಭಿವೃದ್ಧಿಯ ನಿಟ್ಟಿನಲ್ಲಿ ನಿಜವಾದ ಶ್ರಮ ಹರಿಸಬಹುದು.

- **ಶಿಕ್ಷಣ ಕ್ಷೇತ್ರದಲ್ಲಿ ಪಠ್ಯಕ್ರಮದ ಸುಧಾರಣೆ ಮೂಲಕ ಕನ್ನಡದ ಅಭಿವೃದ್ಧಿ ಸಾಧ್ಯವೇ?**

○ ಯಾಕೆ ಸಾಧ್ಯವಿಲ್ಲ. ಶಿಕ್ಷಣದಿಂದಲೇ ಇದು ಶುರುವಾಗಬೇಕು. ಬರೀ ಕನ್ನಡ ಮಾಧ್ಯಮ ತಂದುಬಿಟ್ಟರೆ ಸಾಲದು. ಪಠ್ಯಕ್ರಮ, ಪಠ್ಯೇತರ ಚಟುವಟಿಕೆಗಳಲ್ಲೂ ಕನ್ನಡತನ ತುಂಬಬೇಕು. ಕನ್ನಡಮಯವಾಗಬೇಕು. ಈ ಅನಿಸಿಕೆ ಕಲಿಯುವ ಹಾಗೂ ಕಲಿಸುವ ಮನಸ್ಸುಗಳ ಭಾಗವಾಗಬೇಕು. ಕನ್ನಡದಲ್ಲಿ ಶಿಕ್ಷಣ ಪಡೆದವರಿಗೆ ಉದ್ಯೋಗ ಕೊಡುತ್ತೇವೆ ಅಂದರೆ ಎಲ್ಲರೂ ಕನ್ನಡದಲ್ಲೇ ಶಿಕ್ಷಣ ಪಡೆಯುತ್ತಾರೆ. ಈವತ್ತು ವಿದ್ಯಾಭ್ಯಾಸದ ಗುರಿ ಉದ್ಯೋಗವೇ ಆಗಿದೆ. ಕನ್ನಡ ವಿಶ್ವವಿದ್ಯಾನಿಲಯದ ಪ್ರಸಾರಾಂಗದ ಮೂಲಕ ಪಠ್ಯಕ್ರಮದ ಆಕರ ಪುಸ್ತಕಗಳು ಪ್ರಕಟವಾಗಬೇಕು. ಭಾಷೆಯ ಬಗ್ಗೆ ಇತರ ಭಾಷೆಗಳಲ್ಲಿರುವ ಚಿಂತನೆಗಳು ಕನ್ನಡಕ್ಕೆ ತರ್ಜುಮೆಯಾಗಬೇಕು. ಇವೆಲ್ಲ ಪೂರಕ ಸಾಮಗ್ರಿಗಳು. ಶಿಕ್ಷಣ

ಅಂದ ಕೂಡಲೇ ಪ್ರಾಥಮಿಕ, ಪ್ರೌಢಶಿಕ್ಷಣ ಅಂತಲೇ ಭಾವಿಸದೆ ಉನ್ನತ, ಸ್ನಾತಕ, ಸ್ನಾತಕೋತ್ತರ ಶಿಕ್ಷಣಗಳಲ್ಲೂ ಕನ್ನಡೀಕರಣ ಆಗಬೇಕು. ಕನ್ನಡೇತರ ಭಾಷೆಯನ್ನು ಒಂದು ವಿಷಯವಾಗಿ ಆಳವಡಿಸಿದಾಗಲೂ ಅದರಲ್ಲೂ ಕನ್ನಡದ ವಿಚಾರಗಳೇ ಇರುವಂತಾಗಬೇಕು.

- **ಉದಾರೀಕರಣದ ಇಂದಿನ ಸಂದರ್ಭದಲ್ಲಿ ಇಂಗ್ಲಿಷ್ ಭಾಷೆಯ ಪ್ರಾಬಲ್ಯ ಹೆಚ್ಚಾಗುವುದರಿಂದ ಕನ್ನಡದ ನೆಲೆಯ ಮೇಲೆ ಉಂಟಾಗಬಹುದಾದ ಪರಿಣಾಮವೇನು?**

- ಉದಾರೀಕರಣ ಅನ್ನುವುದು ಔದ್ಯೋಗಿಕ, ಆರ್ಥಿಕ ಉದಾರೀಕರಣವೇ ವಿನಃ ಭಾಷಿಕ ಉದಾರೀಕರಣವಾಗಬಾರದು. 'ಬಹುರಾಷ್ಟ್ರೀಯ ಕಂಪೆನಿಗಳು ಬರುತ್ತಿವೆ, ಅದಕ್ಕೆ ಸ್ಥಳೀಯ ಭಾಷೆಯನ್ನು ನಂಬಿಕೊಂಡರೆ ಭವಿಷ್ಯವಿಲ್ಲ' ಎನ್ನುವ ಭಾವನೆ ಜನರಿಗೇಕೆ ಬರಬೇಕು? ಈ ಹಿಂದೆಯೂ ಬ್ರಿಟಿಷ್ ವಸಾಹತು ಕಾಲದಲ್ಲಿ ಇಂಗ್ಲಿಷ್ ಬರಲಿಲ್ಲವೇ? ಕನ್ನಡಕ್ಕೆ ಏನಾಯಿತು? ಆಗಲೂ ರಾಷ್ಟ್ರೀಯತೆ, ಉಪರಾಷ್ಟ್ರೀಯತೆಯನ್ನು ರಕ್ಷಿಸುವ ಕೆಲಸ ನಡೆಯಿತಲ್ಲ. ಕನ್ನಡ ಭಾಷೆಯೂ ಇಂಗ್ಲಿಷನ್ನು ಅರಗಿಸಿಕೊಂಡೇ ಬೆಳೆಯಿತು. ಈವತ್ತು ಆಳಿಸಿಕೊಳ್ಳದಿದ್ದರೆ ಸರಿ.

- **ಆಳಿಸಿಕೊಳ್ಳದಂತೆ ಮಾಡುವ ಬಗೆ ಹೇಗೆ?**

- ಜನರ ಮನೋಬಲವೊಂದೇ ಇದರ ಅಸ್ತ್ರ. ಕನ್ನಡ ಭಾಷೆಯನ್ನೇ ಬಳಸುವ ಮನೋಭಾವ ನಮ್ಮದಾಗಬೇಕು. ಕನ್ನಡವನ್ನು ಬೆಳೆಸುವುದು, ಉಳಿಸುವುದು ಕೇವಲ ಸರ್ಕಾರದ ಕೆಲಸ ಎಂದು ಎಲ್ಲರೂ ಕೈಕೊಡವಿ ಕುಳಿತುಕೊಳ್ಳಬಾರದು. ಬದಲಾದ ಸಾಮಾಜಿಕಾರ್ಥಿಕ ಸಂದರ್ಭದಲ್ಲಿ ಕನ್ನಡ ಭಾಷೆ ಎದುರಿಸುತ್ತಿರುವ ಸವಾಲುಗಳನ್ನು ಸರಿಯಾಗಿ ಅರ್ಥ ಮಾಡಿಕೊಂಡರೆ ಅದಕ್ಕೆ ಪರಿಹಾರ ಹುಡುಕಿಕೊಳ್ಳುವುದು ಕಷ್ಟವಲ್ಲ.

# ಸಮಾರೋಪ

'ಆಧುನಿಕ ಸಂವಹನ ಮಾಧ್ಯಮಗಳು ಮತ್ತು ಕನ್ನಡದ ಅಭಿವೃದ್ಧಿ' ಎಂಬ ವಿಷಯವನ್ನು ಕುರಿತು ಈ ಅಧ್ಯಯನ ನಡೆಸಲಾಗಿದೆ. ಕನ್ನಡದ ಸಂದರ್ಭದಲ್ಲಿ ಆಧುನಿಕ ಸಂವಹನ ಮಾಧ್ಯಮಗಳು ಬಲಿಷ್ಠವಾಗಿ ಬೆಳೆದು ನಿಂತಿದ್ದು ಕನ್ನಡ ಭಾಷೆಯನ್ನು ಅಭಿವೃದ್ಧಿಗೊಳಿಸುವ ನಿಟ್ಟಿನಲ್ಲಿ ಮಹತ್ವದ ಪಾತ್ರ ವಹಿಸುವ ಬಗ್ಗೆ ವಿಶ್ಲೇಷಣೆ ಮಾಡಲಾಗಿದೆ. ಆಧುನಿಕ ಸಂವಹನ ಮಾಧ್ಯಮಗಳನ್ನು ಕುರಿತು ಹಲವು ಸಂದರ್ಭಗಳಲ್ಲಿ ಚರ್ಚೆ-ವಿಮರ್ಶೆ-ಟೀಕೆ ನಡೆಯುತ್ತಿದೆಯಾದರೂ ಅವು ಎದುರಿಸುತ್ತಿರುವ ಸವಾಲುಗಳು, ಅವುಗಳಿಗಿರುವ ಇತಿಮಿತಿ ಹಾಗೂ ಆದ್ಯತೆಗಳು, ಅವುಗಳ ಕಾರ್ಯ ವೈಖರಿ, ಅವುಗಳ ಸೋಲು-ಗೆಲುವುಗಳ ಬಗ್ಗೆ ಹೆಚ್ಚಿನ ಚರ್ಚೆ - ಚಿಂತನೆ ನಡೆದಿಲ್ಲ. ಜೊತೆಗೆ ಕನ್ನಡ ಭಾಷಾಭಿವೃದ್ಧಿಗೆ ಉತ್ತಮ ಕೊಡುಗೆ ನೀಡಬಹುದಾದ ಮಾಧ್ಯಮಗಳು ಅಂತಹ ಕೊಡುಗೆ ನೀಡುತ್ತಿವೆಯೇ ಎಂಬ ಬಗ್ಗೆಯೂ ಅಧ್ಯಯನ ನಡೆದಿಲ್ಲ. ಆದ್ದರಿಂದಲೇ ಈ ಮಹಾಪ್ರಬಂಧದಲ್ಲಿ ಆಧುನಿಕ ಸಂವಹನ ಮಾಧ್ಯಮಗಳನ್ನು ಕುರಿತ ಸವಿವರ ಅಧ್ಯಯನ ಹಾಗೂ ಕನ್ನಡ ಭಾಷಾಭಿವೃದ್ಧಿಯ ಸೇವೆಯಲ್ಲಿ ಅವುಗಳ ಪಾತ್ರ ಕುರಿತು ವಿಶ್ಲೇಷಣೆ ಮಾಡಲಾಗಿದೆ. ಹೀಗಾಗಿ ಈ ಅಧ್ಯಯನ ಹೊಸ ಚಿಂತನೆಗಳಿಂದ ಕೂಡಿದೆ ಎಂದು ಭಾವಿಸಲಾಗಿದೆ.

ಎರಡು ಹೊಸ ನೆಲೆಗಳಲ್ಲಿ ಅಧ್ಯಯನ ಮಾಡಿರುವುದರಿಂದ ಈ ಮಹಾಪ್ರಬಂಧ ಸಮಕಾಲೀನವೂ ಸಮಯೋಚಿತವೂ ಆಗಿದೆ ಎನ್ನಬಹುದು. ಒಂದು, ಸಂವಹನ ಕ್ಷೇತ್ರ. ತಂತ್ರಜ್ಞಾನ ಯುಗದ ಅವಿಷ್ಕಾರವಾದ ಈ ಕ್ಷೇತ್ರ ಇನ್ನೂ ಹೊಸದು ಎನ್ನುವ ಕಾರಣಕ್ಕೇ ಹೆಚ್ಚಿನ ಅಧ್ಯಯನಕ್ಕೆ ಒಳಪಟ್ಟಿಲ್ಲ. ಹಾಗೆ ನೋಡಿದರೆ ಈಗಷ್ಟೇ ಸ್ಥಿತ್ಯಂತರಗೊಂಡು ಹೊಸ ನೆಲೆಯ ಮೇಲೆ ಕಾಲೂರಿದೆ. ಮತ್ತೊಂದು, ಕನ್ನಡ ಭಾಷೆಯ ಅಭಿವೃದ್ಧಿ. ಶತಮಾನಗಳಿಂದ ಭಾಷೆ ಬೆಳೆದು ಬರುತ್ತಿದ್ದರೂ ಅಂತಹ ಬೆಳವಣಿಗೆಗೊಂದು ವೈಜ್ಞಾನಿಕ ಹಾಗೂ ಕ್ರಮಬದ್ಧ ತಳಹದಿ ಹಾಕಿಕೊಡಬೇಕೆನ್ನುವ ಚಿಂತನೆಯೂ ಇತ್ತೀಚೆಗೆ ಮೊಳೆತದ್ದು. ಹಾಗಾಗಿ ಈ ರಂಗವೂ ಅಧ್ಯಯನದ ದೃಷ್ಟಿಯಿಂದ ಹೊಸದೇ ಆಗಿದೆ. ಎಲ್ಲಕ್ಕಿಂತ ಮಿಗಿಲಾಗಿ ಕನ್ನಡ ಭಾಷೆಯನ್ನು ಬೆಳೆಸುವ ಹತ್ತಾರು ಕ್ರಮಗಳ ಜೊತೆಗೆ ಸಂವಹನ ಮಾಧ್ಯಮಗಳೂ ಕೈಗೂಡಿಸಬಹುದು ಎಂಬ ಮಹತ್ವದ ಸಂಪರ್ಕಸಾಧಕ ಅಂಶವನ್ನು ಅಧ್ಯಯನದ ವ್ಯಾಪ್ತಿಯೊಳಗೆ ಸೇರಿಸಿಕೊಂಡದ್ದು ಮಹಾಪ್ರಬಂಧಕ್ಕೂ ವಿಶೇಷ ಮಹತ್ವವನ್ನು ತಂದುಕೊಡುತ್ತದೆ ಎಂದು ನಂಬಲಾಗಿದೆ.

ಈ ಹೊಸ ಕಾಲಘಟ್ಟದಲ್ಲಿ ಜನರಲ್ಲಿ ತಿಳುವಳಿಕೆ ಮೂಡಿಸುವ, ಜನರಿಗೆ ಶೀಘ್ರವಾಗಿ ಮಾಹಿತಿ ತಲುಪಿಸುವ ನಿಟ್ಟಿನಲ್ಲಿ ಸಂವಹನ ಮಾಧ್ಯಮಗಳು ಅತೀ ಮಹತ್ವದ ಪಾತ್ರ ವಹಿಸಬಲ್ಲವು ಎಂದು ಮನಗಾಣಲಾಗಿದೆ. ಹಾಗಾಗಿ ಈ ಮಾಧ್ಯಮಗಳು ಬಳಸುವ ಭಾಷೆಗೂ ಅಷ್ಟೇ ವೇಗದ ಪ್ರಸಾರ ಹಾಗೂ ಪ್ರಚಾರ ಲಭ್ಯವಾಗುವುದೆಂದೂ ಪ್ರತಿಪಾದಿಸಲಾಗಿದೆ. ಹಾಗಾಗಿಯೇ

ಭಾಷೆ ರಚನೆ ಹಾಗೂ ಬಳಕೆಯ ನಿಟ್ಟಿನಿಂದ ಆಧುನಿಕ ಸಂವಹನ ಮಾಧ್ಯಮಗಳ ಹೊಣೆಗಾರಿಕೆ ಗುರುತರವಾದುದೆಂದೂ ವಿವೇಚಿಸಲಾಗಿದೆ. ಈ ಅಂಶವನ್ನು ಚರ್ಚಿಸುವುದಕ್ಕಾಗಿಯೇ ಪೂರ್ವಭಾವಿಯಾಗಿ ಸಂವಹನೆಯ ಪರಿಕಲ್ಪನೆ, ಸಿದ್ಧಾಂತ, ಸೂತ್ರಗಳನ್ನೂ, ಆಧುನಿಕ ಸಂವಹನ ಮಾಧ್ಯಮಗಳ ಸ್ವರೂಪ, ಕಾರ್ಯವೈಖರಿ ಅವು ಎದುರಿಸುತ್ತಿರುವ ಸವಾಲು ಹಾಗೂ ಅವುಗಳ ಶಕ್ತಿ ಸಾಮರ್ಥ್ಯವನ್ನು ಗುರುತಿಸಲಾಗಿದೆ.

ಭಾರತೀಯ ನೆಲೆಯಲ್ಲಿ ಸಂವಹನ ವಿಧಾನಗಳನ್ನು ವಿಶೇಷವಾಗಿ ವಿವರಿಸಬೇಕಾದ ಅವಕಾಶವೂ ಅಧ್ಯಯನದ ಸಂದರ್ಭದಲ್ಲಿ ಒದಗಿಬಂದಿತು. ಪಾರಂಪರಿಕ ಹಾಗೂ ಆಧುನಿಕ ಸಂವಹನ ವಿಧಾನಗಳೆರಡೂ ಕನ್ನಡ ನಾಡಿನ ಸಾಮಾಜಿಕ, ಸಾಂಸ್ಕೃತಿಕ ವಲಯದಲ್ಲಿ ಹಾಸುಹೊಕ್ಕಾಗಿರುವುದರಿಂದ ಇವುಗಳ ಬಗ್ಗೆಯೂ ವಿಶೇಷ ಗಮನಹರಿಸಲಾಗಿದೆ. ಸಂವಹನ ಮಾಧ್ಯಮಗಳನ್ನು ವರ್ಗೀಕರಿಸುವ, ಅವುಗಳ ಹುಟ್ಟು, ಬೆಳವಣಿಗೆಯ ಹೆಜ್ಜೆ ಗುರುತುಗಳನ್ನು ದಾಖಲಿಸುವ ಪ್ರಯತ್ನವೂ ಇಲ್ಲಿ ನಡೆದಿದೆ.

ಆಧುನಿಕ ಸಂವಹನ ಮಾಧ್ಯಮಗಳ ಪೈಕಿ ದೂರದರ್ಶನ, ಆಕಾಶವಾಣಿ ಹಾಗೂ ಪತ್ರಿಕೆಗಳು ಅತ್ಯಂತ ಪ್ರಭಾವಿ ಮತ್ತು ಶಕ್ತಿಶಾಲಿ ಮಾಧ್ಯಮಗಳೆಂದು ಪರಿಗಣಿತವಾಗಿದ್ದು ಈ ಮಾಧ್ಯಮಗಳು ಗ್ರಾಹಕರೊಂದಿಗೆ ನೇರ ಸಂವಹನೆ ನಡೆಸುತ್ತವೆ ಹಾಗೂ ಈ ಸಂವಹನೆ ಸಹ ಏಕಮುಖ ಸಂಚಾರವಾಗಿದೆ. ಸಂವಾಹಕ ಮತ್ತು ಸಂವಹಿತರ ನಡುವಿನ ಪರಸ್ಪರ ಗ್ರಾಹಕತೆಯ ಸೇತುಬಂಧ ಎಂದು ಪ್ರತಿಪಾದಿಸಲಾಗಿದೆ. ಹಾಗಾಗಿಯೇ ಈ ಮಹಾಪ್ರಬಂಧದಲ್ಲಿ ಗ್ರಾಹಕನೇ, ಅಂದರೆ ದೂರದರ್ಶನದ ವೀಕ್ಷಕ, ಆಕಾಶವಾಣಿಯ ಕೇಳುಗ ಮತ್ತು ಪತ್ರಿಕೆಗಳ ಓದುಗರೇ ಸಂವಹನ ಪ್ರಕ್ರಿಯೆಯ ಮುಖ್ಯ ಗುರಿ ಹಾಗೂ ಕೇಂದ್ರಬಿಂದುವೆಂದು ಗುರುತಿಸಲಾಗಿದೆ.

ಪ್ರತಿಯೊಂದು ಮಾಧ್ಯಮದಲ್ಲೂ ಒಳಗೂ ಹೊರಗೂ ತೀವ್ರತರ ಪೈಪೋಟಿ ಇರುವುದನ್ನು ಮನಗಾಣಲಾಗಿದೆ. ದೂರದರ್ಶನ ಮಾಧ್ಯಮವೊಂದನ್ನು ನಿದರ್ಶನಕ್ಕೆ ಗಮನಿಸಿದಾಗ ಈ ಅಂಶ ಬೆಳಕಿಗೆ ಬರುತ್ತದೆ. ಅಕ್ಷರ ಮಾಧ್ಯಮವಾದ ಪತ್ರಿಕೆಗಳ ಹೊಡೆತ ಒಂದು ಕಡೆಯಾದರೆ, ಶ್ರವ್ಯ ಮಾಧ್ಯಮವಾದ ರೇಡಿಯೊದ ವ್ಯಾಪಕತೆ ಇನ್ನೊಂದು ಕಡೆ. ಇವು ಹೊರಗಿನ ಒತ್ತಡಗಳಾದರೆ, ಮಾಧ್ಯಮದೊಳಗೇ ಪರಸ್ಪರ ದಿನಕ್ಕೊಂದು ಬಗೆಯ ಸವಾಲೊಡ್ಡಿಕೊಳ್ಳುವ ವಿವಿಧ ವಾಹಿನಿಗಳು ಇರುವುದನ್ನು ನೋಡಿದಾಗ ಮಾಧ್ಯಮವೊಂದು ಜನರ ಮನಗೆಲ್ಲಲು ಮಾಡಬೇಕಾದ ಕಸರತ್ತುಗಳಲ್ಲಿ ಭಾಷಾಶುದ್ಧತೆಯೂ ಮುಖ್ಯ ಎಂದು ಗುರುತಿಸಲಾಗಿದೆ. ಮಾಧ್ಯಮಗಳು ತಮ್ಮ ಉಳಿವಿನ ಕಾರಣಕ್ಕಾಗಿ ರೂಢಿಸಿಕೊಳ್ಳುವ ಭಾಷಾ ಶುದ್ಧತೆ ಭಾಷಾ ಬೆಳವಣಿಗೆಗೆ ಪೂರಕ ಎಂದು ಪ್ರತಿಪಾದಿಸಲಾಗಿದೆ.

ಅನಿವಾರ್ಯ ಕಾರಣಗಳಿಗಾಗಿ ಭಾಷೆಗೊಂದು fashion ನೀಡುವುದರಿಂದ ಮಾಧ್ಯಮಗಳ ಭಾಷೆ ತೀರಾ ಗ್ರಾಂಥಿಕವೂ ಅಲ್ಲದ ತೀರಾ ಆಡುಮಾತಿನದೂ ಅಲ್ಲದ ಮಧ್ಯಸ್ತರದ ಭಾಷೆಯಾಗಿ ಮೂಡಿ ಬರುತ್ತಿರುವುದನ್ನು ಯಾರೂ ಕಾಣಬಹುದಾಗಿದೆ. ಈ ರೀತಿ ಎಲ್ಲರಿಗೂ ಅರ್ಥವಾಗುವ, ರಾಜ್ಯದ ಎಲ್ಲ ಭಾಷಿಕ ಪ್ರದೇಶಗಳಿಗೂ ಬಿತ್ತರವಾಗುವ ಭಾಷೆ ಮಾಧ್ಯಮಗಳ ಭಾಷೆಯೆಂದೇ ಪ್ರಮಾಣೀಕೃತಗೊಳ್ಳುತ್ತಿರುವುದು ಅಧ್ಯಯನದ ಸಂದರ್ಭದಲ್ಲಿ ಹಾಗೂ ವಿದ್ವಾಂಸರು, ತಜ್ಞರೊಂದಿಗೆ ನಡೆಸಿದ ಸಂದರ್ಶನ, ಚರ್ಚೆಗಳ ಸಂದರ್ಭದಲ್ಲಿ ವೇದ್ಯವಾಗಿದೆ. ಆಧುನಿಕ ಮಾಧ್ಯಮಗಳ ಮೂಲಕವೇ ಒಂದೂವರೆ ದಶಕಗಳಿಗೂ ಹೆಚ್ಚು ಕಾಲ ಸೇವೆ ಸಲ್ಲಿಸುತ್ತಿರುವ ಅಧ್ಯಯನಾರ್ಥಿಗೆ ಸ್ವಂತ ಅನುಭವವೇ ಪ್ರಯೋಗಶೀಲತೆಯನ್ನು ತಂದುಕೊಟ್ಟಿದೆ. ಆದ್ದರಿಂದಲೇ ಈ ಮಹಾಪ್ರಬಂಧವನ್ನು ವ್ಯಾಪಕ ಅಧ್ಯಯನ, ವಿದ್ವಾಂಸರು, ತಜ್ಞರೊಂದಿಗಿನ ಚರ್ಚೆ, ಬೋಧನೆ, ಸಂದರ್ಶನ, ಮತ್ತು ಅಧ್ಯಯನಾರ್ಥಿಯ ಅನುಭವದ ಹಿನ್ನೆಲೆಯಲ್ಲಿ ರೂಪಿಸಲಾಗಿದೆ.

ಕನ್ನಡದಲ್ಲಿ ಇಂತಹ ಒಂದು ಹೊಸನೆಲೆಯ ವಿಷಯದಲ್ಲಿ ವಿಸ್ತೃತವಾದ ಅಧ್ಯಯನ ಈ ಒಂದೆ ನಡೆದಿಲ್ಲ ಎನ್ನುವುದಕ್ಕೆ ಕನ್ನಡದಲ್ಲಿ ಆಕರ ಗ್ರಂಥಗಳ ಕೊರತೆ ಇರುವುದನ್ನು ಗಮನಿಸಬಹುದಾಗಿದೆ. ಅಧ್ಯಯನದ ಸಂದರ್ಭದಲ್ಲಿ ಲಭ್ಯವಾಗದೆ ಅಥವಾ ಗಮನಕ್ಕೆ ಬಾರದೆ ಉಳಿದ ಕನ್ನಡದ ಕೃತಿಗಳಿವೆ ಎಂದುಕೊಂಡರೂ, ಕನ್ನಡೇತರ ಭಾಷೆಯಲ್ಲಿ ಪ್ರಮುಖವಾಗಿ ಇಂಗ್ಲೀಷಿನಲ್ಲಿ ಸಂವಹನ ಕ್ಷೇತ್ರವನ್ನು ಕುರಿತು ವ್ಯಾಪಕ ಚಿಂತನೆ ನಡೆದಿದೆ ಎನ್ನುವುದಂತೂ ಸಾಬೀತಾಗಿದೆ. ಆದ್ದರಿಂದಲೇ ಕನ್ನಡದ ನೆಲೆಯ ಮಾಧ್ಯಮಗಳ ಸಂದರ್ಭದಲ್ಲೂ ಚಿಂತನೆ, ಚರ್ಚೆ, ಅಧ್ಯಯನ ನಡೆಸಲು ವ್ಯಾಪಕವಾದ ಅವಕಾಶಗಳು ಕಣ್ಣ ಮುಂದಿವೆ. ಪ್ರಸ್ತುತ ಅಧ್ಯಯನ ಸಾಗರದಂತಹ ವಿಷಯದಲ್ಲಿ ಒಂದು ಸಣ್ಣ ಅಲೆ ಮಾತ್ರ ಎಂದು ಭಾವಿಸಲಾಗಿದೆ.

ಆಧುನಿಕ ಸಂವಹನ ಮಾಧ್ಯಮಗಳನ್ನು ಕುರಿತು ಕನ್ನಡದಲ್ಲಿ ಹತ್ತು ಹಲವು ನಿಟ್ಟಿನಲ್ಲಿ ಅಧ್ಯಯನ ನಡೆಸಲು ಅನೇಕ ಅವಕಾಶಗಳು ಕಾಣಬರುತ್ತಿವೆ. ಅದೇ ರೀತಿ ಕನ್ನಡದ ಅಭಿವೃದ್ಧಿಯ ಬಗ್ಗೆಯೂ ವ್ಯಾಪಕ ಅಧ್ಯಯನ ನಡೆಸಬಹುದಾದ ಸಾಧ್ಯತೆಗಳಿವೆ. '**ಆಧುನಿಕ ಸಂವಹನ ಮಾಧ್ಯಮಗಳು ಮತ್ತು ಕನ್ನಡದ ಅಭಿವೃದ್ಧಿ**' ಎನ್ನುವುದು ಒಂದು ಸೀಮಿತ ವ್ಯಾಪ್ತಿಯುಳ್ಳ ಅಧ್ಯಯನವಾಗಿದ್ದು, ಇದರಲ್ಲಿ ಸೇರಿಸಿಕೊಳ್ಳಲಾರದ ಆದರೆ ಮಹತ್ವಪೂರ್ಣ ಹಾಗೂ ಅಧ್ಯಯನಯೋಗ್ಯವೆನಿಸುವ ಅಂಶಗಳತ್ತ ಮುಂದಿನ ಅಧ್ಯಯನಕಾರರು ಗಮನಹರಿಸಬಹುದಾಗಿದೆ.

* * * * *

# ಪರಾಮರ್ಶನ ಗ್ರಂಥಗಳು


೧. *ಅವಲೋಕನ - ಕರ್ನಾಟಕ ಪರಂಪರೆಯ ಸಮೀಕ್ಷೆ*, ಸಂ. ಎಚ್ಚೆಸ್ಕೆ, ಕನ್ನಡ - ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು. ೧೯೮೫

೨. *ಆಡಳಿತ ಪದಕೋಶ*, ಕನ್ನಡ-ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೭

೩. *ಆಡಳಿತದಲ್ಲಿ ಕನ್ನಡ - ೨*, ಸಂ. ಅ.ರಾ. ಚಂದ್ರಹಾಸಗುಪ್ತ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು

೪. *ಆಡಳಿತ ಭಾಷೆ ಕನ್ನಡ*, ಟಿ.ಎಸ್. ಛಾಯಾಪತಿ, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು, ೧೯೯೬

೫. *ಆಡಳಿತ ಕನ್ನಡ ಅನುಷ್ಠಾನ - ಆದೇಶಗಳ ಸಂಕಲನ*, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ೧೯೯೩

೬. *ಆಧುನಿಕ ಭಾರತದ ಆರ್ಥಿಕಾಭಿವೃದ್ಧಿ*, ಕೆ.ಡಿ. ಬಸವ, ವಿದ್ಯಾವಾಹಿನಿ ಪಬ್ಲಿಕೇಷನ್ಸ್, ಹುಬ್ಬಳ್ಳಿ

೭. *ಆಧುನಿಕ ವರ್ಣನಾತ್ಮಕ ಭಾಷಾ ವಿಜ್ಞಾನ*, ರಾಜೇಶ್ವರಿ ಮಹೇಶ್ವರಯ್ಯ, ಸಮಾಜ ಪುಸ್ತಕಾಲಯ, ಧಾರವಾಡ

೮. *ಆಂಗ್ಲರ ಕಾಲದಲ್ಲಿ ಕನ್ನಡ*, ಮಹದೇವ ಬಣಕಾರ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು

೯. *ಆಕಾಶವಾಣಿ - ೬೦*, ಸಂ. ಎಚ್ಚೆಸ್ಕೆ, ಪ್ರಸಾರಾಂಗ, ಮೈಸೂರು, ೧೯೯೭

೧೦. *ಇಗೋ ಕನ್ನಡ - ೧*, ಜಿ. ವೆಂಕಟಸುಬ್ಬಯ್ಯ, ನವಕರ್ನಾಟಕ ಪಬ್ಲಿಕೇಷನ್ಸ್ (ಪ್ರೈ) ಲಿಮಿಟೆಡ್, ಬೆಂಗಳೂರು, ೧೯೯೬

೧೧. *ಇಗೋ ಕನ್ನಡ - ೨*, ಜಿ. ವೆಂಕಟಸುಬ್ಬಯ್ಯ, ನವಕರ್ನಾಟಕ ಪಬ್ಲಿಕೇಷನ್ಸ್ (ಪ್ರೈ) ಲಿಮಿಟೆಡ್, ಬೆಂಗಳೂರು, ೨೦೦೧

೧೨. *ಇಂದಿನ ಕನ್ನಡ - ರಚನೆ ಮತ್ತು ಬಳಕೆ*, ಎಸ್.ಎನ್. ಶ್ರೀಧರ, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ, ೧೯೯೫

೧೩. *ಎರವಲು ಪದಕೋಶ*, ಜಿ. ವೆಂಕಟಸುಬ್ಬಯ್ಯ, ನವಕರ್ನಾಟಕ ಪಬ್ಲಿಕೇಷನ್ಸ್ (ಪ್ರೈ) ಲಿಮಿಟೆಡ್, ಬೆಂಗಳೂರು, ೧೯೯೮

೧೪. *ಏನೋ ಉಳಿಯುವುದು ಮತ್ತೆ*, ಕರೀಗೌಡ ಬೀಚನಹಳ್ಳಿ, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ೧೯೯೮

೧೫. *ಕನ್ನಡ ಸಾಹಿತ್ಯ ಚರಿತ್ರೆ*, ರಂ.ಶ್ರೀ. ಮುಗಳಿ, ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೬೮

೧೬. *ಕನ್ನಡ ಸಾಹಿತ್ಯ ಚರಿತ್ರೆ*, ತ.ಸು. ಶಾಮರಾಯ, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು, ೧೯೯೩

೧೭. *ಕನ್ನಡ ಸಾಹಿತ್ಯ ಚರಿತ್ರೆ*, ಸಂ: ೧ ರಿಂದ ೫, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ.,
ಸಂ. ಹಾ.ಮಾ. ನಾಯಕ ಮತ್ತು ಟಿ.ವಿ. ವೆಂಕಟಾಚಲ ಶಾಸ್ತ್ರಿ ೧೯೭೪, ೧೯೭೫, ೧೯೭೬, ೧೯೭೭, ೧೯೮೧

೧೮. *ಕನ್ನಡ ಶೈಲಿ ಕೈಪಿಡಿ*, ಕನ್ನಡ ವಿಶ್ವವಿದ್ಯಾಲಯ ಹಂಪಿ ಮತ್ತು ಭಾರತೀಯ ಭಾಷೆಗಳ ಕೇಂದ್ರ ಸಂಸ್ಥೆ, ಮೈಸೂರು, ೧೯೯೫

೧೮. *ಕನ್ನಡ ಅಧ್ಯಯನ - ೨*, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೪

೨೦. *ಕನ್ನಡ ಭಾಷಾ ಶಾಸ್ತ್ರ*, ರಾ.ಯ. ಧಾರವಾಡಕರ್, ಗೀತಾ ಬುಕ್ ಹೌಸ್, ಮೈಸೂರು, ೧೯೯೦

೨೧. *ಕನ್ನಡ ಭಾಷೆಯ ಕಲ್ಪಿತ ಚರಿತ್ರೆ*, ಡಿ.ಎನ್. ಶಂಕರ ಭಟ್, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ, ೧೯೯೫

೨೨. *ಕನ್ನಡ ಶಬ್ದ ರಚನೆ*, ಡಿ.ಎನ್. ಶಂಕರ ಭಟ್, ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು, ೧೯೯೯

೨೩. *ಕನ್ನಡ ರತ್ನಕೋಶ*, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು, ೧೯೯೪

